ಜನಪ್ರಿಯ

# ವಾಲ್ಮೀಕಿ ರಾಮಾಯಣ

ಕುವೆಂಪು

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು

ಮೊದಲನೆಯ ಮುದ್ರಣ ೧೯೫೦
ಎರಡನೆಯ ಮುದ್ರಣ ೧೯೫೪
ಮೂರನೆಯ ಮುದ್ರಣ ೧೯೫೮
ನಾಲ್ಕನೆಯ ಮುದ್ರಣ ೧೯೬೬
ಐದನೆಯ ಮುದ್ರಣ ೧೯೭೩
ಆರನೆಯ ಮುದ್ರಣ ೧೯೭೬
ಏಳನೆಯ ಮುದ್ರಣ ೧೯೮೧
ಎಂಟನೆಯ ಮುದ್ರಣ ೧೯೮೫
ಒಂಬತ್ತನೆಯ ಮುದ್ರಣ ೧೯೯೫





ಧರ್ಮಪ್ರಕಾಶ
ಶ್ರೀ ಎಲ್. ಎಸ್. ವೆಂಕಾಜಿರಾಯರ
ಸಹಾಯ ನಿಧಿಯ ಪ್ರಕಟಣೆ



ಮುದ್ರಕರು :
ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ
೫/೧, ವಿನೋಬ ರಸ್ತೆ, ಮಾನಸಗಂಗೋತ್ರಿ ಆವರಣ
(ಪ್ರಿಮಿಯರ್ ಸ್ಟುಡಿಯೊ ಎದುರು)
ಮೈಸೂರು–೫೭೦ ೦೦೬

# ಅರಿಕೆ

## ಮೊದಲನೆಯ ಮುದ್ರಣ

ಅಕ್ಟೋಬರ್ ತಿಂಗಳ ಎರಡನೆಯ ದಿನ ಭಾರತೀಯ ಸಂಸ್ಕೃತಿಯ ಇತಿಹಾಸದಲ್ಲಿ ಎಂತಹ ಪವಿತ್ರ ದಿನ! ಭಾರತೀಯ ಸ್ವಾತಂತ್ರ್ಯಶಿಲ್ಪಿ, ಭಾರತೀ ದಿವ್ಯಜ್ಯೋತಿಯ ಪೂಜ್ಯ ಬಾಪೂಜಿ ಈ ಭೂಮಿಯಲ್ಲಿ ಅವತರಿಸಿದ ಮಂಗಳ ಮಹಾದಿನ! ಆ ದಿನವನ್ನು ಯಾವ ಭಾರತೀಯ ತಾನೆ ಮರೆತಾನು? ಭಗವತ್ಸಂಕಲ್ಪದಿಂದ ಈ ನಮ್ಮ ಸಮಿತಿಯ ಚರಿತ್ರೆಯಲ್ಲಿಯೂ ಆ ದಿನವೇ ಮಹಾದಿನವಾಗಿದೆ. ಏಕೆಂದರೆ ಅಂದೇ ಬಹು ಜನರ ಬಹು ದಿನಗಳ ಬಯಕೆ ಈಡೇರುತ್ತಿದೆ.

ಈಗ್ಗೆ ಹತ್ತು ವರ್ಷಗಳಿಂದ ಸಮಿತಿಯ ಆಶ್ರಯದಲ್ಲಿ ಅನೇಕ ವಯಸ್ಕರ ತರಗತಿಗಳು ನಡೆದಿವೆ, ನಡೆಯುತ್ತಿವೆ. ಜೊತೆಯಲ್ಲಿಯೆ ಅನೇಕ ಗ್ರಾಮ ಪುಸ್ತಕ ಭಂಡಾರಗಳು ಪ್ರಾರಂಭವಾಗಿ ಅಭಿವೃದ್ಧಿಯಾಗುತ್ತಿವೆ. ಆದರೆ ಅಕ್ಷರಸ್ಥರಾದ ವಯಸ್ಕರಿಗೆ ವಯಸ್ಕರ ಶಿಕ್ಷಣ ಮಾಲೆಯ ಪುಸ್ತಕಗಳನ್ನಾಗಲಿ ಇತರ ಪುಸ್ತಕಗಳನ್ನಾಗಲಿ ಓದಲು ಕೊಟ್ಟಾಗ ಅವರಲ್ಲಿ ಅನೇಕರು "ಸ್ವಾಮಿ, ಯಾವುಯಾವುದೊ ಪುಸ್ತಕ ಕೊಡುತ್ತಿದ್ದೀರಿ ಓದು ಬರೆಹ ಕಲಿತ ಮೇಲೆ ರಾಮಾಯಣ ಭಾರತಗಳನ್ನು ಓದದಿದ್ದರೆ ಏನು ಪ್ರಯೋಜನ?" ಎಂದು ಕುತೂಹಲದಿಂದ ಹೇಳತೊಡಗಿದರು. ಅವರು ಓದಿ ಗ್ರಹಿಸಬಲ್ಲ ಸರಳವಾದ ಕನ್ನಡದಲ್ಲಿ ವಾಲ್ಮೀಕಿ ರಾಮಾಯಣವಾಗಲಿ ವ್ಯಾಸರ ಮಹಾಭಾರತವಾಗಲಿ ಸಿಕ್ಕುತ್ತಿರಲಿಲ್ಲ. ಈ ಅರಕೆಯನ್ನು ತುಂಬಿಕೊಡುವ ಸಲುವಾಗಿ ವಾಲ್ಮೀಕಿ ರಾಮಾಯಣವನ್ನು ಮೊದಲು ಪ್ರಕಟಿಸಬೇಕೆಂದು ಸಮಿತಿ ಆಲೋಚಿಸಿತು.

ಆಲೋಚನೆಯೇನೊ ಒಳ್ಳೆಯದೆ ಸರಿ. ಆದರೆ ಹಣವಿಲ್ಲದೆ ಅದು ಕಾರ್ಯಗತವಾಗುವಂತಿರಲಿಲ್ಲ. ಹಿಂದಿನ ಕಾಲದಲ್ಲಿ ಸಾಹಿತ್ಯಾಭಿಮಾನಿಗಳಾದ ರಾಜರೂ ಶ್ರೀಮಂತರೂ ಗ್ರಂಥಗಳ ಪ್ರಕಟನೆಗೆ ಕೈಹಿಡಿಯದೆ ದುಡ್ಡು ಸುರಿಯುತ್ತಿದ್ದರು. ಹತ್ತನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ದಾನಚಿಂತಾಮಣಿಯೂ ವೈರಾಗ್ಯಲಕ್ಷ್ಮಿಯೂ ಆದ ಅತ್ತಿಮಬ್ಬೆಯೆಂಬ ಜೈನಸ್ತ್ರೀ ಕವಿಚಕ್ರವರ್ತಿ ಪೊನ್ನನ 'ಶಾಂತಿಪುರಾಣ'ದ ಸಹಸ್ರ ಪ್ರತಿಗಳನ್ನು ನಕಲುಮಾಡಿಸಿ ಜನರಿಗೆ ಹಂಚಿ ಪುಣ್ಯಗಳಿಸಿದಳಂತೆ! ಆದರೆ ಆ ಯುಗ ಬೇರೆ, ಈ ಯುಗ ಬೇರೆ. ಇಂದು ಮಾನವನ ದೃಷ್ಟಿಧ್ಯೇಯಗಳು, ನಿರಂತರ ಸಾಹಸಪ್ರಯತ್ನಗಳು, ದುಷ್ಕಾರ್ಯ ಸತ್ಕಾರ್ಯಗಳು ಸದ್ಯದ ಪ್ರತಿಫಲವನ್ನು ಅಪೇಕ್ಷಿಸುವುವಾಗಿವೆ. ಆದರೂ ಇಂತಹ ಸಮಾಜದಲ್ಲಿ ಶ್ರೀಮಾನ್ ಎಲ್. ಎಸ್. ವೆಂಕಾಜಿರಾಯರಂತಹ 'ದಾನ ಚಿಂತಾಮಣಿ'ಗಳು ಇಲ್ಲದೆ ಇಲ್ಲ. ಸಮಿತಿ ತನ್ನ ಬಯಕೆಯನ್ನು ರಾಯರಿಗೆ ತಿಳಿಸಿದ ಕೂಡಲೆ ಅವರು 'ಐದು ಸಾವಿರ ರೂಪಾಯಿ ಕೊಡುತ್ತೇನೆ. ಈ ಪುಣ್ಯ ಕಾರ್ಯವನ್ನು

ಸಮಿತಿ ಕೈಗೊಳ್ಳಲಿ' ಎಂದು ಸಂತೋಷದಿಂದ ತಿಳಿಸಿದರು. ಬಹು ಜನರ ಬಯಕೆ ಈಡೇರಲು ನೆರವು ನೀಡಿದ ರಾಯರು ನಿಜವಾಗಿಯೂ ಧರ್ಮಪ್ರಕಾಶರೆ ಸರಿ!

ಹಣ ಅಣಿಯಾಯಿತು. ಆದರೆ ಭರತಖಂಡದ ಆದಿಕವಿ ವಾಲ್ಮೀಕಿ ಮಹರ್ಷಿಯ ಸಂಸ್ಕೃತ ರಾಮಾಯಣವನ್ನು ಕನ್ನಡದಲ್ಲಿ ಕನ್ನಡಿಗರಿಗೆ ಪ್ರಿಯವಾಗುವಂತೆ ಬರೆಯುವುದು ಸುಲಭವಲ್ಲ. ವಲ್ಮೀಕ ಎಂದರೆ ಹುತ್ತ. ತಪಸ್ಸಿಗೆ ಕುಳಿತಾಗ ಮೈಮೇಲೆ ಹುತ್ತ ಬೆಳೆದು ಆಮೇಲೆ ಹೊರಗಡೆ ಬಂದುದರಿಂದ ಅವನಿಗೆ ವಾಲ್ಮೀಕಿ ಎಂಬ ಹೆಸರು ಬಂದಿತಂತೆ! ರಾಮಾಯಣ ಸೃಷ್ಟಿ ಅಂತಹ ತಪಶ್ಶಕ್ತಿಗೆ ಮಾತ್ರ ಸಾಧ್ಯ. ಶ್ರೀ ಕುವೆಂಪು ಅವರ ಹೆಸರನ್ನು ಕೇಳದವರಿಲ್ಲ. ಎಳೆಯರಿಂದ ಹಿಡಿದು ಮುದಿಯರ ತನಕ, ಪಾಮರರಿಂದ ಹಿಡಿದು ಪಂಡಿತರ ತನಕ, 'ದಾಸ'ರಿಂದ ಹಿಡಿದು ದಾರ್ಶನಿಕರ ತನಕ ಅವರ ಕೃತಿಗಳನ್ನು ಓದದವರಿಲ್ಲ, ಓದಿಸಿ ಕೇಳದವರಿಲ್ಲ; ಓದಿ, ಕೇಳಿ ಆನಂದಪರವಶರಾಗದವರಿಲ್ಲ. ಲೋಕತಂತ್ರವನ್ನೂ ಮಾನವಸ್ವಭಾವವನ್ನೂ ಸೂಕ್ಷ್ಮವಾಗಿ ಅರಿತ ಅವರು ರಸಯೋಗಿ; ಸಾಧನೆಯಿಂದ ಗುರುಕೃಪೆಗೆ ಪಾತ್ರರಾದವರು. ಮಾನವ ಸಮಾಜದ ಸಂಕುಚಿತ ಸಂಪ್ರದಾಯದ ನಿಯಮಾವಳಿಗಳಿಗೆ ವಶವಾಗದೆ, ಋತದರ್ಶನದ ಆದರ್ಶ ಲೋಕದಲ್ಲಿ ಯಾರಿಗೂ ಅಂಜದೆ, ಬಾಗದೆ, ಸ್ವೇಚ್ಛೆಯಾಗಿ ವಿಹರಿಸುತ್ತ ಸೋದರಮಾನವರ ಉದ್ಧಾರವನ್ನು ಎಡೆಬಿಡದೆ ಬಯಸುತ್ತಿರುವ ವಿಶ್ವಕವಿ, ಲೋಕಹಿತೈಷಿ ಅವರು; "ಶ್ರೀಕುವೆಂಪುವ ಸೃಜಿಸಿದೀ ಮಹಾ ಛಂದಸಿನ ಮೇರುಕೃತಿ, ಮೇಣ್ ಜಗದ್ಭವ್ಯ" ಶ್ರೀರಾಮಾಯಣ ದರ್ಶನ ಮಹಾಕಾವ್ಯವನ್ನು ರಚಿಸಿದ ಕನ್ನಡ ಸಾಹಿತ್ಯಕ್ಷೇತ್ರದ ಶಕಪುರುಷರು. ಇಂತಹ ಕವಿವರ್ಯರನ್ನು ಎರಡು ವಾಕ್ಯಗಳಲ್ಲಿ ಪರಿಚಯ ಮಾಡಿ ಕೊಡುವುದೆಂದರೆ ಪ್ರಪಂಚವನ್ನು ಬೆಳಗುವ ಸೂರ್ಯನನ್ನು ಇಬ್ಬನಿ ಪ್ರತಿಬಿಂಬಿಸಿದಂತಾಗುತ್ತದೆ. ಸಮಿತಿ ಕೈಗೊಂಡ ಈ ಮಹತ್ಕಾರ್ಯದಲ್ಲಿ ಅವರ ನೆರವು ದೊರೆತುದು ನಮ್ಮೆಲ್ಲರ ಪುಣ್ಯ.

ಜನಪ್ರಿಯ ರಾಮಾಯಣದ ಕರಡು ಪ್ರತಿ ಸಿದ್ಧವಾದ ಕೂಡಲೆ ಅದನ್ನು ಜನಸಾಮಾನ್ಯರಲ್ಲಿ ಓದಬೇಕೆಂದು ಸಮಿತಿ ಅಪೇಕ್ಷಿಸಿತು. ನಂಜನಗೂಡು ವಿದ್ಯಾಪೀಠದ ಆಶ್ರಯದಲ್ಲಿ ದಿನವೂ ಸಂಜೆ ಈ ಕಾರ್ಯಕ್ರಮವನ್ನು ನಡೆಸುವ ಏರ್ಪಾಡಾಯಿತು. ವಿದ್ಯಾಪೀಠದ ಆಚಾರ್ಯರಾಗಿದ್ದ ಶ್ರೀ ಎಸ್. ವಿ. ಶ್ರೀನಿವಾಸರಾಯರು ಈ ವಿಷಯದಲ್ಲಿ ಶ್ರೀ ಕುವೆಂಪು ಅವರಿಗೆ ಒಂದು ಕಾಗದ ಬರೆದರು. ಅವರಿಂದ ಬಂದ ಸ್ವಾರಸ್ಯವಾದ ಪ್ರತ್ಯುತ್ತರವಿದು :

"ಅಧ್ಯಾಯ ವಿಭಾಗಗಳನ್ನು ಆದಷ್ಟು ಸಣ್ಣವಾಗಿರುವಂತೆ ನೋಡಿಕೊಂಡಿದ್ದೇನೆ. ಅಲ್ಲದೆ ಅತಿ ಸರಳತೆಯ ಸೌಲಭ್ಯವೂ ಅತಿ ಪಾಂಡಿತ್ಯದ ಕ್ಲಿಷ್ಟತೆಯಂತೆಯೇ 'ಅವಜ್ಞೆ'ಗೆ ಗುರಿಯಾಗುತ್ತದೆಂದು ಎಣಿಸಿ ಅಲ್ಲಲ್ಲಿ ಮೂಲ ರಾಮಾಯಣದ ರಸವತ್ತಾದ ಪದ ಮತ್ತು ಪದಪುಂಜ ಪ್ರಯೋಗಗಳನ್ನು ಹೆಚ್ಚು ಬದಲಾಯಿಸದೆ ಹಾಗೆಯೆ ಇಟ್ಟಿದ್ದೇನೆ. ಹಳ್ಳಿಗನಿಗೂ ಮನಸ್ಸಿನ ಸಾಹಸವಿಲ್ಲದಿದ್ದರೆ ರುಚಿಸುವುದಿಲ್ಲ. ಆಲಿಸುವ ಗ್ರಾಮಸ್ಥರನ್ನು ಕೇಳಿ, ಅವರ ಅಭಿಪ್ರಾಯಗಳಲ್ಲಿ ಏನಾದರೂ ಗ್ರಾಹ್ಯವಾಗಬಹುದಾದುದು ಇದ್ದರೆ

ಅದನ್ನು ನನಗೆ ತಿಳಿಸಿ....ನೀವು ಓದಿದ ಮೇಲೆ ಅದು ಉಂಟುಮಾಡುವ ಪರಿಣಾಮ ವನ್ನು ಆಶೆಯಿಂದ ನಿರೀಕ್ಷಿಸುತ್ತೇನೆ. ಏಕೆಂದರೆ ವಯಸ್ಕರಿಗಷ್ಟೆ ಅದು; ಆ ಜನರೇ ನಿಕಷ." ಶ್ರೀ ಶ್ರೀನಿವಾಸರಾಯರು ಈ ಗ್ರಂಥವನ್ನು ಓದಿ ಹೇಳಿದರು; ವಿದ್ಯಾಪೀಠಕ್ಕೆ ಶಿಕ್ಷಣ ಪಡೆಯಲು ಬಂದಿದ್ದ ವಿದ್ಯಾರ್ಥಿಗಳೂ, ವಿದ್ಯಾಪೀಠಕ್ಕೆ ಹತ್ತಿರವಿರುವ ಪರಶುರಾಮಪುರದ ಗ್ರಾಮಸ್ಥರೂ ಕೇಳಿ ಆನಂದಿಸಿದರು.

ರಾಮಾಯಣ ಶ್ರೀರಾಮನ ಕಥೆ ಮಾತ್ರವಲ್ಲ. ಶ್ರೀರಾಮದರ್ಶನದ ಕತೆಯೂ ಅಹುದು. ಶ್ರೀರಾಮನಾಮ ಸಂಸ್ಮರಣಮಾತ್ರದಿಂದ ಅರಣ್ಯದ ಹಿಂಸ್ರ ಜಂತುವಾಗಿದ್ದ ಬೇಡ ಉದ್ಧಾಮತಪಸ್ವಿಯಾಗಿ, ಭರತಖಂಡದ ಆದಿಕವಿಯಾಗಿ ಲೋಕದ ಆರಾಧನೆಗೆ ಪಾತ್ರನಾದನು. ಶ್ರೀರಾಮನ ಖಡ್ಗಾಘಾತಕ್ಕೆ ಗುರಿಯಾದ ದೈತ್ಯರು ದೇವತೆಗಳಾದರು. ಭಗವತ್ಸಂಕಲ್ಪ ಯಾವ ಯಾವ ರೂಪದಲ್ಲಿ ಯಾವ ಯಾವ ಆಕಾರದಲ್ಲಿ ಆವಿರ್ಭವಿಸು ವುದೋ ಹೇಳಲಾಗುವುದಿಲ್ಲ. ಕೃತಿರೂಪದಲ್ಲಿಯೂ ಅವತರಿಸಬಹುದೆಂದು ಶ್ರೀ ಕುವೆಂಪು ಅವರ ಮತ. ಆದುದರಿಂದಲೇ ಗೀತಾಚಾರ್ಯ:

> ಯದ್ಯದ್ ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ।
> ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ –
>
> —ಭಗವದ್ಗೀತೆ x, ೪೧.

ಎಂದು ನುಡಿದಿದ್ದಾನೆ. "ಜಗತ್ತಿನಲ್ಲಿ ಯಾವ ಯಾವ ವಸ್ತುಗಳು ಶ್ರೇಷ್ಠವಾಗಿಯೂ, ಐಶ್ವರ್ಯಯುಕ್ತವಾಗಿಯೂ, ಬಹುಸತ್ತ್ವಯುಕ್ತವಾಗಿಯೂ ಇರುವುವೋ ಅವೆಲ್ಲವೂ ನನ್ನ ವಿಶೇಷಾಂಶಗಳೇ" ಎಂಬುದೇ ಅದರ ಭಾವ. ಶ್ರೀಮದ್ರಾಮಾಯಣವೂ ಅಂತಹದೊಂದು ಅವತಾರವೇ ಸರಿ. ಭರತಖಂಡದ ಸಂಸ್ಕೃತಿ ಬೇರೆ ಅಲ್ಲ. ಶ್ರೀಮದ್ ರಾಮಾಯಣ ಬೇರೆ ಅಲ್ಲ. ಹಿಂದಿನಿಂದ ಈ ರಾಮಾಯಣ ನಮ್ಮ ಜನತೆಯನ್ನು ಉದ್ಧರಿಸುತ್ತಾ ಬಂದಿದೆ, ಇನ್ನು ಮುಂದೆಯೂ—ಅದರಲ್ಲಿಯೂ ಈ ವಿಜ್ಞಾನಯುಗ ದಲ್ಲಿ—ಅದು ದುರಾಶೆ ಕಳವಳದಿಂದ ಬಳಲಿ ಬೆಂಡಾಗುತ್ತಿರುವ ಮಾನವನನ್ನು ಉದ್ಧರಿಸ ಬೇಕಾಗಿದೆ; ಜನ್ಮದ ಕಿಲ್ಬಿಷವನ್ನು ರಾಮನಾಮ ತೊಳೆದು ಪಾವನ ಮಾಡಬೇಕಾಗಿದೆ. ರಾಮನಾಮವೆಂಬ ಪಾವಕನಿಗೆ ಸಿಕ್ಕಿದ್ದ ಪಾಪವೆಲ್ಲವೂ ವಿನಾಶ ಹೊಂದುವುದು ನಿಜ. ನಮ್ಮ ನಾಡಿನ ಪ್ರತಿಯೊಂದು ಹಳ್ಳಿಯ ಭಜನ ಮಂದಿರದಲ್ಲಿಯೂ ಈ ರಾಮ ಸಂಕೀರ್ತನೆ ಇಂದಿಗೂ ಕೇಳಿ ಬರುತ್ತಿದೆ. ಈ ಪರಿಸ್ಥಿಯಿರುವ ತನಕ ನಮ್ಮ ಸಂಸ್ಕೃತಿಗೆ ಅಳಿವಿಲ್ಲ, ನಮ್ಮ ನಾಡಿಗೆ ಚ್ಯುತಿಯಿಲ್ಲ, ನಮ್ಮ ಜನಾಂಗ ನಿರಾಶೆಯಿಂದಿರಬೇಕಾಗಿಲ್ಲ.

ನಮ್ಮ ನಾಡಿಗೆ ರಾಮಾಯಣದ ಆವಶ್ಯಕತೆ ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಇಂತಹದೊಂದು ಕೃತಿಯನ್ನು ಬೆಳಕಿಗೆ ತರುವ ಸಾಹಸ ಹಿರಿಯದು; ಆ ಕಾರ್ಯದಲ್ಲಿ ಭಾಗವಹಿಸುವುದರಿಂದ ಬರುವ ಪುಣ್ಯ ಮಿಗಿಲಾದುದು. ಇಂತಹ ಪವಿತ್ರ ಕಾರ್ಯಕ್ಕೆ ನೆರವಾದ ಶ್ರೀ ಕುವೆಂಪು ಅವರಿಗೂ, ಧರ್ಮಪ್ರಕಾಶ ಶ್ರೀ ಎಲ್. ಎಸ್. ವೆಂಕಾಜಿ ರಾಯರಿಗೂ, ಸುಂದರವಾದ ಚಿತ್ರಗಳನ್ನು ಬರೆದುಕೊಟ್ಟ ಶ್ರೀ ಮ. ಈ. ಗುರು

ಅವರಿಗೂ ಅತ್ಯಲ್ಪ ಕಾಲದಲ್ಲಿ ಇಷ್ಟು ಅಂದವಾಗಿ ಮುದ್ರಿಸಿ ಕೊಟ್ಟಿರುವ ವೆಸ್ಲಿ ಪ್ರೆಸ್ಸಿನವರಿಗೂ ಈ ಸಮಿತಿಯ ಪರವಾಗಿ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ. ಈ ಗ್ರಂಥದ ಪ್ರಕಟನೋತ್ಸವ ಸಮಾರಂಭವನ್ನು ನೆರವೇರಿಸಿದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಕೆ. ಚಂಗಲರಾಯರೆಡ್ಡಿಯವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ಈ ಕೃತಿ ಕರ್ನಾಟಕದ ಮನೆಯನ್ನು ಬೆಳಗಿ ತೊಳಗಲಿ! ಆಂಜನೇಯ ಲಕ್ಷ್ಮಣ ಸಮೇತರಾದ ಸೀತಾರಾಮರಿಗೆ ಜಯವಾಗಲಿ!

ಗಾಂಧೀಜಯಂತಿ
೨-೧೦-೧೯೫೦

ಟಿ. ಮಾದಯ್ಯಗೌಡ
ಅಧ್ಯಕ್ಷ

## ಎರಡನೆಯ ಮುದ್ರಣದ ಅರಿಕೆ

ಜನಪ್ರಿಯ ವಾಲ್ಮೀಕಿ ರಾಮಾಯಣ ಸುಮಾರು ಮೂರೂವರೆ ವರ್ಷಗಳ ಹಿಂದೆ ಅಚ್ಚಾಯಿತು. ಅದರ ಪ್ರತಿಗಳು ಒಂದು ವರ್ಷದ ಹಿಂದೆಯೇ ಮುಗಿದುಹೋಗಿ ಕರ್ನಾಟಕದ ಎಲ್ಲ ಎಡೆಗಳಿಂದ ಅದನ್ನು ಮತ್ತೆ ಅಚ್ಚು ಹಾಕಿಸಬೇಕೆಂಬ ಒತ್ತಾಯ ಕಂಡು ಬಂದುದರಿಂದ ಎರಡನೆಯ ಮುದ್ರಣವನ್ನು ಕೈಗೊಳ್ಳಲಾಯಿತು. ಈ ಗ್ರಂಥದ ಹೆಸರು ಅಕ್ಷರಶಃ ನಿಜವೆನ್ನುವುದಕ್ಕೆ ಇದೇ ಪ್ರಬಲ ಸಾಕ್ಷಿ. ಶ್ರೀ ಕುವೆಂಪು ಅವರು ಈ ಗ್ರಂಥದ ಮೊದಲಲ್ಲಿ "ನಮ್ಮ ಜನದ ಬಾಳು ಮೇಲೆಮೇಲೆ ಎಷ್ಟು ಕೆಟ್ಟಂತೆ ಕಾಣುತ್ತಿದ್ದರೂ ಅದರ ಅಂತರಾಳದಲ್ಲಿ ಪೂರ್ವಿಕರ ಪುಣ್ಯದ ತಪಃಪ್ರಭಾವದ ನಂದಾದೀಪ ನಂದದೆ ಮಿನುಗುತ್ತಿದೆ ಎಂದು ತೋರುತ್ತದೆ. ಇಲ್ಲದಿದ್ದರೆ ಅಕ್ಷರ ಕಲಿತವರು ಕಾಸಿನ ಕಾದಂಬರಿಗಳನ್ನೂ ರೋಮಾಂಚನಕರವಾದ ನವೀನ ಚಲಚ್ಚಿತ್ರ ಶೃಂಗಾರ ಕಥಾನಕಗಳನ್ನೂ ಅಪೇಕ್ಷಿಸುವ ಬದಲು-ಅಥವಾ ಅಪೇಕ್ಷಿಸುವುದರ ಜೊತೆಗೆ ಎಂದಾದರೂ ಚಿಂತೆಯಿಲ್ಲ—ರಾಮಾಯಣ ಮಹಾಭಾರತಗಳಂತಹ ಹಳೆಯ 'ಕಗ್ಗದ ಪುರಾಣ ಕಥೆ'ಗಳನ್ನು ಬಯಸುತ್ತಿದ್ದರೇ?" ಎಂದು ಹೇಳಿರುವ ಮಾತು ಸಂಪೂರ್ಣ ಸತ್ಯವೆಂದು ಈ ಶೀಘ್ರ ಪ್ರಕಟಣೆಯಿಂದ ವ್ಯಕ್ತವಾಗುತ್ತದೆ. ಭಾರತೀಯರ ಉತ್ಥಾನಕ್ಕೂ ಉದ್ಧಾರಕ್ಕೂ ನೆರವಾಗಿ, ಭರತಖಂಡದ ಐಕ್ಯತೆಯನ್ನು ಸದಾ ಸಾಧಿಸುತ್ತಿರುವ ಇಂಥ ಪವಿತ್ರಗ್ರಂಥದ ಪ್ರಕಟಣೆಗಿಂತ ಉತ್ತಮವಾದ ಬೇರೆ ಕಾರ್ಯವನ್ನು ವ್ಯಕ್ತಿಯಾಗಲಿ ಸಂಸ್ಥೆಯಾಗಲಿ ಸಾಧಿಸಲು ಸಾಧ್ಯವೆ? ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಅಂಥ ಪವಿತ್ರ ಕಾರ್ಯವನ್ನು ನೆರವೇರಿಸುವ ಭಾಗ್ಯವನ್ನು ಪಡೆದಿರುವುದೊಂದು ಸಂತೋಷದ ಮತ್ತು ಹೆಮ್ಮೆಯ ಸಂಗತಿ. ಇಂಥ ಭಾಗ್ಯ ಸಮಿತಿಗೆ ಪದೇ ಪದೇ ಒದಗಲನುಕೂಲವಾಗುವಂತೆ ಮಹಾಜನರು ಸದಾ ಪ್ರೋತ್ಸಾಹಿಸುತ್ತಿರಲಿ!

ಮೈಸೂರು
೩೦–೫–೫೪

ಟಿ. ಮಾದಯ್ಯಗೌಡ
ಅಧ್ಯಕ್ಷ

## ಮೂರನೆಯ ಮುದ್ರಣ

ಈ 'ಜನಪ್ರಿಯ ರಾಮಾಯಣ' ನಿಜವಾಗಿಯೂ ಜನಪ್ರಿಯವಾಗಿ ಜನರ ಕೈಸೇರುತ್ತಿದೆ. ಇದು ಸಮಿತಿಗೆ ಸಂತೋಷದಾಯಕವಾದುದು. ಜನಹೃದಯ ಮಹತ್ತಿನ ಕಡೆಯೇ ಯಾವಾಗಲೂ ಒಲಿದಿರುತ್ತದೆ; ಹೃದಯಕ್ಕೆ ನಿಜವಾಗಿಯೂ ಪ್ರಿಯ ವಾದುದು, ಹಿತವಾದುದು ಸತ್ಯ; ಅದನ್ನು ತಿಳಿಯಲು ಇಂತಹ ಮಹಾಕೃತಿಗಳು ನಮಗೆ ನೆರವು ಎಂಬುದು ಇದರಿಂದ ಸ್ಪಷ್ಟಗೊಂಡಿದೆ.

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯು ಈ ಮೂಲಕ ಸಲ್ಲಿಸುತ್ತಿರುವ ಸೇವೆ ಹೀಗೆ ಸಾರ್ಥಕತೆ ಪಡೆಯುತ್ತಿರುವುದು ಉತ್ತೇಜನಕಾರಿ.

ಮೈಸೂರು
೯-೧೨-೧೯೫೮

ನ. ಭದ್ರಯ್ಯ
ಅಧ್ಯಕ್ಷ, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ

## ನಾಲ್ಕನೆಯ ಮುದ್ರಣ

"ಜನಪ್ರಿಯ ವಾಲ್ಮೀಕಿ ರಾಮಾಯಣ"ವು ನಿಜವಾಗಿಯೂ ಜನಪ್ರಿಯ ವಾಗಿದೆ. ಈಗ ಅಣುವಿಜ್ಞಾನ ಯುಗವಾಗಿದ್ದು ಇದಕ್ಕೆ ತುಂಬಾ ಪ್ರಾಮುಖ್ಯತೆ ಬಂದಿದೆ.

ಇಂತಹ ಕಾಲದಲ್ಲಿ ಜನಪ್ರಿಯ ವಾಲ್ಮೀಕಿ ರಾಮಾಯಣವು ನಾಲ್ಕನೆ ಆವರ್ತಿ ಮುದ್ರಣವಾಗಿರುವುದು ಇದರ ಜನಪ್ರಿಯತೆಯನ್ನು ವ್ಯಕ್ತಪಡಿಸುತ್ತದೆ.

ನಮ್ಮ ಜನರು ಸತ್ಯ, ಧರ್ಮ, ಭಾರತದ ಭವ್ಯಸಂಸ್ಕೃತಿ, ಅದರ ಹಿರಿಯ ಆದರ್ಶಗಳು ಇವುಗಳ ಬಗ್ಗೆ ವಿಶೇಷ ಗೌರವವನ್ನು ಇಟ್ಟುಕೊಂಡಿದ್ದಾರೆ. ಇವನ್ನು ತಮ್ಮ ಕೈಲಾದಷ್ಟು ಸಾಧಿಸಲು ಪ್ರಯತ್ನ ಮಾಡುತ್ತಿರುತ್ತಾರೆ. ಜನಪ್ರಿಯ ವಾಲ್ಮೀಕಿ ರಾಮಾಯಣದ ಪಠಣ ಜನತೆಯಲ್ಲಿ ಈ ಆದರ್ಶಗಳ ಸಾಧನೆಗೆ ಉತ್ತೇಜನ ಕೊಡುತ್ತದೆ. ಜನ ತಮ್ಮ ಜೀವನವನ್ನು ಭವ್ಯವಾಗಿ ಮಾಡಿಕೊಂಡು ಶೀಲವಂತರಾಗು ತ್ತಾರೆ. ಜನತೆಯ ಇಂತಹ ಉನ್ನತ ಧ್ಯೇಯಸಾಧನೆಗೆ ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ದುಡಿಯುತ್ತಿದೆ.

ಮೈಸೂರು
೨೨-೬-೬೬

ಎಂ. ಮಲ್ಲಿಕಾರ್ಜುನಸ್ವಾಮಿ
ಅಧ್ಯಕ್ಷ, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ

## ಐದನೆಯ ಆವೃತ್ತಿ

ಸಂಸಾರವೆಂಬ ವಿಷವೃಕ್ಷದಲ್ಲಿ ಅಮೃತೋಪಮವಾದ ಎರಡು ಹಣ್ಣುಗಳಿವೆಯಂತೆ ಅವುಗಳಲ್ಲಿ ಒಂದು ಸುಭಾಷಿತದ ರಸ ಸ್ವಾದ. ಮತ್ತೊಂದು ಸಜ್ಜನ ಸಹವಾಸ. ಭರತ ಖಂಡದ ಆದಿಕಾವ್ಯವೆನಿಸಿದ ವಾಲ್ಮೀಕಿ ರಾಮಾಯಣವು ಸಂಸಾರ ಸಂತ್ರಸ್ತರಿಗೆ ಈ ಎರಡನ್ನೂ ನೀಡುತ್ತದೆ. ಋಷಿ ಕವಿ ವಾಲ್ಮೀಕಿಯ ರಾಮಾಯಣಕ್ಕಿಂತಲೂ ಸುಂದರ ವಾದ ರಸವತ್ಕಾವ್ಯವಾವುದಿದೆ? ರಸಋಷಿಗಳಾದ ಎಷ್ಟು ಜನ ಹಿರಿಯ ಕಿರಿಯ ಕವಿಗಳು ತಮ್ಮ ರಸವತ್ಕಾವ್ಯಗಳಿಗೆ ಇದರಿಂದ ವಸ್ತುಗಳನ್ನು ಆಯ್ದುಕೊಂಡಿಲ್ಲ? ಎಷ್ಟು ಮೊಗೆದರೂ ಮುಗಿಯದ ರಸದ ಗಣಿಯದು. ಶತಶತಮಾನಗಳಿಂದಲೂ ನಮ್ಮ ಜನರ ಹೃದಯವನ್ನು ಸೂರೆಗೊಂಡಿರುವ ಸುಂದರ ಮಹಾಕಾವ್ಯವದು. ಇನ್ನು ಇದರಲ್ಲಿ ಬರುವ ಪಾತ್ರಗಳೂ, ನೀತಿಯ ನೆಲೆಗಟ್ಟಿನ ಮೇಲೆ ನಿಂತು ಉನ್ನತೋನ್ನತ ವಾಗಿರುವ ರಾಮ, ಲಕ್ಷ್ಮಣ, ಸೀತೆ, ಭರತ, ಹನುಮಂತ ಇತ್ಯಾದಿ ಮಹಾಪುರುಷರು ನಮ್ಮ ಆದರ್ಶ ಪುರುಷರಾಗಿ, ಆರಾಧ್ಯ ದೈವವಾಗಿದ್ದಾರೆ. ಇವರಿಗಿಂತಲೂ ಉತ್ತಮ ರಾದ ಸಂಗಾತಿಗಳನ್ನು ನಾವೆಲ್ಲಿ ತರೋಣ? ರಾಮಾಯಣದ ಕಥೆ, ರಾಮಾಯಣದ ಪಾತ್ರಗಳು ನಮ್ಮ ಜನರ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿ ಸೇರಿ, ಅವಿನಾಭಾವ ವನ್ನು ಪಡೆದಿವೆ. ರಾಮಾಯಣದ ದೇವಗಂಗೆಯಲ್ಲಿ ಮಿಂದವನು ಬುದ್ಧಿಗೆ ತಂಪನ್ನೂ, ಹೃದಯಕ್ಕೆ ಇಂಪನ್ನೂ ಪಡೆದು ಪರಿಶುದ್ಧಾತ್ಮನಾಗುತ್ತಾನೆ, ಉದ್ಧಾರವಾಗು ತ್ತಾನೆ—ಎಂಬ ನಂಬಿಕೆ ನಮ್ಮ ಜನರಲ್ಲಿ ರಕ್ತಗತವಾಗಿದೆ. ಕನ್ನಡ ಗದ್ಯ ರೂಪದಲ್ಲಿರುವ 'ಜನಪ್ರಿಯ ವಾಲ್ಮೀಕಿ ರಾಮಾಯಣ' ಮುದ್ರಣದ ಮೇಲೆ ಮುದ್ರಣವನ್ನು ಕಾಣುತ್ತಿರುವುದೇ ಇದಕ್ಕೆ ಹಿರಿಯ ಸಾಕ್ಷಿ. ನಾಲ್ಕನೆಯ ಮುದ್ರಣದ ಪ್ರತಿಗಳು ತೀರಿಹೋಗಿ, ಜನರ ಬೇಡಿಕೆಯನ್ನು ಪೂರೈಸುವುದಕ್ಕಾಗಿ ಇಗೋ ಈ ಐದನೆಯ ಆವೃತ್ತಿಯನ್ನು ಕನ್ನಡ ಜನತೆಗೆ ಒಪ್ಪಿಸುತ್ತಿದ್ದೇವೆ. ಈ ಕಾರ್ಯದಲ್ಲಿ ಉದಾರವಾದ ನೆರವನ್ನು ನೀಡಿರುವ ಸರ್ಕಾರಕ್ಕೆ ಮತ್ತು ರಾಷ್ಟ್ರಕವಿ ಕುವೆಂಪುರವರಿಗೆ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಪಿ. ಎನ್. ಜವರಪ್ಪಗೌಡ
ಅಧ್ಯಕ್ಷ, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

## ಆರನೆಯ ಮುದ್ರಣ

ಇಂದಿನ ವಿಜ್ಞಾನದ ಮುನ್ನಡೆಯಿಂದ ಆರ್ಥಿಕ, ಸಾಮಾಜಿಕ, ಏಳಿಗೆಯಾಗಿದ್ದರೂ, ಮಾನಸಿಕವಾಗಿ ಜನಜೀವನದಲ್ಲಿ ಏನೋ ಕೊರತೆ, ಅಶಾಂತಿ ಇದೆ ಎಂಬುದು ಪಾಶ್ಚಿಮಾತ್ಯ ಸಮಾಜದ ಜನಜೀವನವನ್ನು ಅವಲೋಕಿಸಿದಾಗ ತಿಳಿಯುತ್ತದೆ. ಮನಶ್ಶಾಂತಿಗಾಗಿ ಭಾರತದ ಆಧ್ಯಾತ್ಮಿಕ ಪರಂಪರೆಯತ್ತ ಆ ಜನರ ಗಮನ ಸ್ವಾಭಾವಿಕವಾಗಿ ಹರಿಯುತ್ತಿರುವುದೇ ಒಂದು ಸಾಕ್ಷಿಯಾಗಿದೆ.

ಅಲ್ಲದೆ ಭಾರತೀಯರಾದ ನಮಗೆ ಇದು ಎಚ್ಚರಿಕೆಯ ಮಾತಾಗಿದೆ. ಇಂದು ಭಾರತದ ಅಧ್ಯಾತ್ಮ ತತ್ವಗಳು ದಿನ ನಿತ್ಯದ ಕ್ಲಿಷ್ಟಸಮಸ್ಯೆಗಳಿಂದ ಜರ್ಜರಿತರಾಗುತ್ತಿರುವ ವಿಶ್ವದ ಜನತೆ ಆಸೆ ಆಕಾಂಕ್ಷೆಗಳ ಕೂಪಕ್ಕೆ ಬಿದ್ದು ನರಳದಂತೆ ಎಚ್ಚರಿಸುತ್ತಿವೆ.

ಆದುದರಿಂದ, ಅಧ್ಯಾತ್ಮ ತತ್ವಗಳ ಆಗರಗಳಾಗಿರುವ ರಾಮಾಯಣ, ಮಹಾಭಾರತ, ಭಗವದ್ಗೀತೆ ಕಾವ್ಯಗಳತ್ತ ಜನರ ಮನ ಒಲಿದಿರುವುದು ಸಹಜ. ಈ ದೆಸೆಯಲ್ಲಿ ಜನತೆಯ ಸೇವೆಯನ್ನು ಮಾಡುತ್ತಿರುವ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಕನ್ನಡ ನಾಡಿನ ಜನತೆಗೆ, "ಜನಪ್ರಿಯ ವಾಲ್ಮೀಕಿ ರಾಮಾಯಣ"ವನ್ನು ಒದಗಿಸಿ ಹೆಮ್ಮೆಪಡುವಂತಹ ಕಾರ್ಯವನ್ನೆಸಗಿದೆ. ಈ ಬಗ್ಗೆ ಜನತೆಯು ತೋರಿರುವ ಮಮತೆಗೂ ಸಮಿತಿಯು ಋಣಿಯಾಗಿದೆ.

ಜನಪ್ರಿಯ ವಾಲ್ಮೀಕಿ ರಾಮಾಯಣದ ಇದುವರೆಗಿನ ಐದು ಮುದ್ರಣಗಳ ಸುಮಾರು ಇಪ್ಪತ್ತೈದು ಸಾವಿರ ಪ್ರತಿಗಳು ಮುಗಿದಿದ್ದು ಈಗ ಆರನೆಯ ಮುದ್ರಣದ ಐದು ಸಾವಿರ ಪ್ರತಿಗಳು ಬಿಡುಗಡೆಯಾಗುತ್ತಿವೆ. ಈ ಕೃತಿಯ ಜನಪ್ರಿಯತೆ, ಅಲ್ಲದೆ ಓದುಗರ ಆದರದ ಸ್ವೀಕಾರದಿಂದಾಗಿ ಆದಷ್ಟು ಬೇಗ ಏಳನೆಯ ಮುದ್ರಣಕ್ಕೆ ಎಡೆಮಾಡಿಕೊಡುತ್ತದೆಂದು ನಂಬಿದ್ದೇನೆ.

ಡಿ. ಕರಿಯಪ್ಪಗೌಡ
ಅಧ್ಯಕ್ಷ
ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ

ಮೈಸೂರು
೧೯-೫-೧೯೭೭

## ಏಳನೆಯ ಮುದ್ರಣ

ಅಗಣಿತ ಜನಕೋಟಿಯ ಹೃದಯವನ್ನು ಸೂರೆಗೊಂಡಿರುವ ರಾಷ್ಟ್ರಕವಿ ಶ್ರೀ ಕುವೆಂಪುರವರ ವಿರಚಿತ 'ಜನಪ್ರಿಯ ವಾಲ್ಮೀಕಿ ರಾಮಾಯಣ' ಏಳನೆಯ ಮುದ್ರಣವನ್ನು ಕಾಣುತ್ತಿರುವುದು ಕನ್ನಡನಾಡಿನ ಜನತೆಗೆ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಕೊಡುತ್ತಿರುವ ಹೆಮ್ಮೆಯ ಕಾಣಿಕೆ.

ರಾಮಾಯಣದ ನಾಯಕ ರಾಮನ ಆದರ್ಶತೆ, ಸೀತೆಯ ಪತಿಪ್ರೇಮ, ಲಕ್ಷ್ಮಣ ಭರತರ ಅಪ್ರತಿಮ ಭ್ರಾತೃ ವಾತ್ಸಲ್ಯ, ಹನುಮನ ಸ್ವಾಮಿಭಕ್ತಿ, ಊರ್ಮಿಳೆಯ ತ್ಯಾಗ, ಭಾರತೀಯರ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಒಬ್ಬ ರಾಮನ ಮಡದಿಯ ಅಪಹರಣ, ಇಡೀ ನಾಡಿನ ನಾರಿಯರ ಸತಿತ್ವಾಪಹರಣವೆಂದು ಭಾವಿಸಿದ ವಾನರರ ರಾಷ್ಟ್ರೀಯ ಭಾವೈಕ್ಯತೆ ಭಾರತೀಯ ಸಂಸ್ಕೃತಿಯ ನೆಲೆಗಟ್ಟಾಗಿ ಇಂದಿಗೂ ಉಳಿದು ಬಂದಿದೆ. ರಾವಣನ ಭುಜಬಲ ಪರಾಕ್ರಮದ ಶಕ್ತಿಗಿಂತ, ಸೀತೆಯ ಆತ್ಮಬಲದ ಪಾತಿವ್ರತ್ಯ ಸತ್ವ ಸಹಸ್ರಪಾಲು ಮಿಗಿಲಾದುದೆಂದು ಸಾರುತ್ತಿರುವ ರಾಮಾಯಣ ಭಾರತೀಯ ಸ್ತ್ರೀಯರ ಆದರ್ಶತೆಯ ಪ್ರತಿರೂಪವಾಗಿ ಪ್ರಚಲಿತವಾಗಿದೆ.

ಈ ಆದರ್ಶ ಗ್ರಂಥ ಬಹುಬೇಗನೆ ಎಂಟನೆಯ ಮುದ್ರಣವನ್ನು ಕಾಣಲೆಂದು ಆಶಿಸುತ್ತೇನೆ.

ಡಿ. ಎ. ಚಿನ್ನಪ್ಪ

ಮೈಸೂರು — ಅಧ್ಯಕ್ಷ

೧೫–೧೦–೯೮೧ — ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

## ಎಂಟನೆಯ ಮುದ್ರಣ

ರಾಷ್ಟ್ರಕವಿ ಕುವೆಂಪು ವಿರಚಿತ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಯಿಂದ ಪ್ರಕಟಿತವಾದ "ಜನಪ್ರಿಯ ವಾಲ್ಮೀಕಿ ರಾಮಾಯಣ" ಎಂಟನೆಯ ಆವೃತ್ತಿ ಯನ್ನು ಕಂಡಿರುವುದು ಸಂತೋಷದ ವಿಷಯ. ಇದರಿಂದ ನಮ್ಮ ಜನರು ಸತ್ಯ, ಧರ್ಮ, ಸಂಸ್ಕೃತಿ ಇವುಗಳ ಬಗ್ಗೆ ಗೌರವವನ್ನು ಇಟ್ಟುಕೊಂಡಿದ್ದಾರೆಂಬುದು ವ್ಯಕ್ತ ವಾಗುತ್ತದೆ. ಇಂತಹ ಕೃತಿಗಳನ್ನು ಪ್ರಕಟಿಸುತ್ತಿರುವ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಪ್ರಶಂಸಾರ್ಹ.

ಸಿ. ಮುನಿಸ್ವಾಮಿ

ಮೈಸೂರು — ಅಧ್ಯಕ್ಷ

೨೨–೮–೧೯೮೫ — ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

## ಒಂಬತ್ತನೆಯ ಮುದ್ರಣ

'ಜನಪ್ರಿಯ ವಾಲ್ಮೀಕಿ ರಾಮಾಯಣ'ದ ಎಂಟನೆಯ ಆವೃತ್ತಿಯು 1985ರಲ್ಲಿ ಮುದ್ರಣಗೊಂಡು ಪ್ರತಿಗಳು ಮುಗಿದು ಹೋದವು. ಕೃತಿಗಾಗಿ ಬೇಡಿಕೆಯು ನಾಡಿನ ಉದ್ದಗಲಗಳಿಂದ ನಿರಂತರವಾಗಿ ಬರತೊಡಗಿತು. ಜನತೆಯ ಬೇಡಿಕೆಯನ್ನು ಶೀಘ್ರದಲ್ಲಿ ಪೂರೈಸಬೇಕೆಂಬ ಹೆಬ್ಬಯಕೆಯಿಂದ ಸಮಿತಿಯು ಒಂಬತ್ತನೆಯ ಆವೃತ್ತಿ ಪ್ರಕಟಿಸಲು ರಸಋಷಿ ಕುವೆಂಪು ಅವರ ಅನುಮತಿ ಕೋರಿತು. ಈ ಪ್ರಕಟಣೆಗೆ ಅತೀವ ಸಂತಸದಿಂದ ಅನುಮತಿ ಇತ್ತ ಕವಿವರ್ಯರು ಈ ಸಂದರ್ಭದಲ್ಲಿ "ಜನಪ್ರಿಯ ವಾಲ್ಮೀಕಿ ರಾಮಾಯಣದ ಎಂಟನೆಯ ಆವೃತ್ತಿಯ ಪ್ರತಿಗಳು ಮುಗಿದಿರುವುದೂ ಸಾರ್ವಜನಿಕರಿಂದ ಸದರಿ ಕೃತಿಗೆ ಬಹಳ ಬೇಡಿಕೆ ಬರುತ್ತಿರುವುದೂ ತಿಳಿದು ಸಂತೋಷವಾಯಿತು. ಒಂಬತ್ತನೆಯ ಮರುಮುದ್ರಣದಲ್ಲಿ ಕೃತಿಯು ಸರ್ವಾಂಗ ಸುಂದರವಾಗಿ ಹೊರಬಂದು ಶ್ರೀಸಾಮಾನ್ಯರಿಗೆ ಕೈಗೆಟಕುವ ಬೆಲೆಯಲ್ಲಿ ದೊರೆಯುವಂತಾಗಲಿ" ಎಂದು ಹಾರೈಸಿದ್ದಾರೆ. ಈ ಇಚ್ಛೆಯಂತೆ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು 'ಜನಪ್ರಿಯ ವಾಲ್ಮೀಕಿ ರಾಮಾಯಣ'ದ ಒಂಬತ್ತನೆಯ ಆವೃತ್ತಿಯನ್ನು ಮುದ್ರಿಸಿ ಅಗಲಿದ ಆ ಮಹಾನ್ ಚೇತನಕ್ಕೆ ಅರ್ಪಿಸಿದೆ.

ಬಿ. ಪಿ. ತಿಪ್ಪಯ್ಯ
ಅಧ್ಯಕ್ಷ
ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ,

ಮೈಸೂರು
ದಿನಾಂಕ: 26-4-1995

# ಶ್ರೀ ರಾಮಾಯಣ ದಿವ್ಯಶಿಲ್ಪಿ

ಶ್ರೀರಾಮಾಯಣ ಪ್ರೇಮಿಗಳಲ್ಲಿ ವಿಜ್ಞಾಪನೆ, ನಮಸ್ಕಾರ.

ನಾವೆಲ್ಲರೂ ಇಂದು ಇಲ್ಲಿ ಒಂದು ಮಹತ್ತರವಾದ ಪೂಜಾಕಾರ್ಯಕ್ಕಾಗಿ ನೆರೆದಿದ್ದೇವೆ. ಅದರ ಉತ್ಸವರೂಪ ಅದರ ಭಗವತ್ ಸ್ವರೂಪವನ್ನು ಮರೆಮಾಡುವುದಿಲ್ಲವೆಂದು ಭಾವಿಸುತ್ತೇನೆ. ಯಾರ ಬದುಕಿನ ಶ್ವಾಸೋಚ್ಛ್ವಾಸ ರಾಮನಾಮದ ಛಂದೋಗತಿಯನ್ನೇ ಅನುಸರಿಸುತ್ತಿತ್ತೋ, ಯಾರು ಜೀವನದ ಸಾರ್ಥಕತೆಯನ್ನೂ ಪರಮಸಿದ್ಧಿಯನ್ನೂ ರಾಮನಾಮದಲ್ಲಿ ಕಂಡರೊ, ಯಾರು ಇರುಳಿನಲ್ಲಿ ಕಂಡ ರಾಮರಾಜ್ಯದ ಕನಸನ್ನು ಹಗಲಿನಲ್ಲಿಯೂ ಕಂಡು ಕಟ್ಟಲು ನಿರಂತರವೂ ನೋಂತರೋ, ಯಾರು ತಮ್ಮ ವೈದ್ಯಕೀಯವಾದ ಸೇವೆಯನ್ನು ಮಾಡುವುದರಲ್ಲಿಯೂ ಕೂಡ, ಆಧುನಿಕ ವೈಜ್ಞಾನಿಕ ಮನೋಧರ್ಮದ ಡಾಕ್ಟರುಗಳು ಬೆಬ್ಬರಗಾಗುವಂತೆ, ಎಲ್ಲ ರೋಗಕ್ಕೂ ಮೊತ್ತಮೊದಲನೆಯ ಔಷಧ ರಾಮನಾಮ ಎಂದು ಸಾರಿದರೊ, ಯಾರು ಮತದ್ವೇಷ ಮತ್ತು ಭ್ರಾಂತಿ ಇವುಗಳಿಂದಾಗಿ ನವಕಾಲಿಯಲ್ಲಿ ಹರಿದ ರಕ್ತಸಮುದ್ರದಲ್ಲಿ ಒಂದು ಕ್ಷೀರಪಥವನ್ನು ರಚಿಸುತ್ತಾ ರಾಮನಾಮದ ಮಹಿಮೆಯನ್ನು ಜಗತ್ತಿಗೆ ಪ್ರದರ್ಶಿಸಿದರೊ, ಕೊನೆಯದಾಗಿ,ಯಾರ ಎದೆಗೆ ಗುಂಡು ತಗುಲಿದಾಗ 'ಹೇ ರಾಮ್ ರಾಮ್' ಎಂದು ರಾಮನಾಮವನ್ನೇ ಜಪಿಸುತ್ತಾ ಕಣ್ಮರೆಯಾದರೊ ಅಂತಹ ವಿಭೂತಿಪುರುಷನೊಬ್ಬನ ಜನ್ಮದಿನ ಇದು. ಆ ವಿಭೂತಿಪುರುಷನಿಗೂ, ರಾಮ, ರಾಮನಾಮ, ರಾಮಾಯಣಕ್ಕೂ ಅತ್ಯಂತ ನಿಕಟವಾದ ಸಂಬಂಧವಿದೆ. ಆಧುನಿಕ ನಾಗರಿಕತೆಯಲ್ಲಿ ಆಧುನಿಕ ಯಂತ್ರ ವೈಜ್ಞಾನಿಕವಾದ ಜಗತ್ತಿಗೆ ರಾಮನ ಮಹಿಮೆಯನ್ನೂ ರಾಮನಾಮದ ಮಹಿಮೆಯನ್ನೂ ಎತ್ತಿಹಿಡಿದು ಜಗತ್ತಿಗೆ ಸಾರಿ ತೋರಿಹೋದ ಮಹಾವಿಭೂತಿ ಆತನು. ಬಹುಶಃ ಆತನ ಆತ್ಮದ ವಿಕಾಸಕ್ಕೆ ರಾಮ, ರಾಮನಾಮ, ರಾಮಾಯಣ ಹೇಗೆ ಕಾರಣವಾದುವೋ ಹಾಗೆಯೆ ರಾಮ, ರಾಮನಾಮ, ರಾಮಾಯಣದ ಪ್ರಕಾಶನಕ್ಕೆ ಆತನ ಜೀವನವೂ ಪ್ರಧಾನ ಕಾರಣವಾಯಿತು. ಆದ್ದರಿಂದ ಆತನ ಜನ್ಮೋತ್ಸವವನ್ನು ಇದಕ್ಕಿಂತಲೂ ಉತ್ಕೃಷ್ಟವಾಗಿ ಹೇಗೆತಾನೆ ನೆರವೇರಿಸಿಯೇವು? ಇಂದು ವಯಸ್ಕರ ಶಿಕ್ಷಣ ಸಮಿತಿ ಕೈಗೊಂಡಿರುವ ಈ ಜನಪ್ರಿಯ ರಾಮಾಯಣದ ಪ್ರಕಟಣೆ ಮಹಾತ್ಮ ಗಾಂಧೀಜಿಗೆ ನಿಜವಾಗಿಯೂ ಪ್ರೀತಿಯಾಗುವಂತೆ ನಾವು ಸಲ್ಲಿಸುವ ಶ್ರೇಷ್ಠವಾದ ಕಾಣಿಕೆ.

ಮಹಾತ್ಮಾ ಗಾಂಧೀಜಿ ರಾಜಕೀಯ ವ್ಯಕ್ತಿಯಲ್ಲ. ಅವರು ನೂರಕ್ಕೆ ನೂರು ಭಾಗ ಆಧ್ಯಾತ್ಮಿಕ ವ್ಯಕ್ತಿ. ಆದರೆ ಅವರ ಆಧ್ಯಾತ್ಮ ಎಲ್ಲವನ್ನೂ ಒಳಗೊಂಡ ಆಧ್ಯಾತ್ಮ, ಅವರು ಕಂಡ ರಾಮರಾಜ್ಯದ ಕನಸು ಬಹುಶಃ ರಾಜಕೀಯ ಶಾಸ್ತ್ರಜ್ಞರಿಗೆ, ವೈಜ್ಞಾನಿಕ ತತ್ತ್ವವೇತ್ತರಿಗೆ ಮತ್ತು ನವನಾಗರಿಕತೆಯೆಂದು ಕರೆಯಲ್ಪಡುವ ಒಂದು ಮನೋಭ್ರಾಂತಿಯನ್ನೇ ಧರ್ಮವಾಗುಳ್ಳ ಮನಸ್ಸುಳ್ಳವರಿಗೆ ವಿಚಿತ್ರವಾಗಿ ತೋರಬಹುದು.

ಆದರೆ ರಾಮಾಯಣವನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿದವರಿಗೆ, ಸ್ವಲ್ಪಮಟ್ಟಿಗಾದರೂ ಧ್ಯಾನ ಯೋಗ ಮೊದಲಾದ ಸಾಧನೆಗಳನ್ನು ಮಾಡಿದವರ ಚರಣತಲದಲ್ಲಿ ಕುಳಿತುಕೊಳ್ಳುವ ಒಂದು ಸೌಭಾಗ್ಯವನ್ನು ಪಡೆದವರಿಗೆ ಅವರು ಕಂಡ ಕನಸು ಸದ್ಯಕ್ಕೆ ಅತೀತವಾಗಿರುವ ಒಂದು ನನಸು ಎನ್ನುವುದು ಗೋಚರಿಸದೆ ಇರದು.

ಈ ಕನಸನ್ನು ಮಾನವ ಪ್ರಾರಂಭದಿಂದಲೂ ಕಾಣುತ್ತಿದ್ದಾನೆ. ಏಕೆಂದರೆ ಅವನ ಪ್ರಾರಂಭವೂ ಆ ಮೂಲದಿಂದಲೆ ಆಗಿದೆ. ಅನೇಕ ಪುರಾಣಗಳಲ್ಲಿ, ಕಾವ್ಯಗಳಲ್ಲಿ ಈ ಕನಸು ಕಥೆಯ ರೂಪದಲ್ಲಿ, ಕಲ್ಪನೆಯ ರೂಪದಲ್ಲಿ ಪ್ರತಿಫಲಿತವಾಗುತ್ತಾ ಬರುತ್ತಿದೆ. ಗಾಂಧೀಜಿ ಕಂಡಿರುವ ಕಟ್ಟಿರುವ ಕನಸು, ಈಗಲೂ ಅವರು ಅದಕ್ಕಾಗಿ ಶ್ರಮಿಸುತ್ತಿರುವ ಅತೀತ ಲೋಕಗಳಲ್ಲಿ ಶ್ರಮಿಸುತ್ತಿರುವ ಆ ಕನಸು, ಇಂದಲ್ಲ ಮುಂದೆ ನನಸೇ ಆಗುತ್ತದೆ ಎನ್ನುವ ಅಭಿಪ್ರಾಯವನ್ನೇ ಇಂದಿನ ಪೂರ್ಣಯೋಗಿ ಮಹಾಮಹರ್ಷಿ ಶ್ರೀ ಅರವಿಂದರು ಕೂಡ ತಮ್ಮ ಆಧ್ಯಾತ್ಮಿಕವಾದ ಮತ್ತು ತತ್ತ್ವಶಾಸ್ತ್ರೀಯವಾದ ರೀತಿಯಲ್ಲಿ ಪ್ರತಿಪಾದಿಸಿ ಸಾಧಿಸಿ ಲೋಕಕ್ಕೆ ಸಾರುತ್ತಿದ್ದಾರೆ. ಅವರು 'The Descent of the Gnostic Being' 'The Emergence of the Superman' ಎಂದು ಕರೆದುಕೊಳ್ಳುವ ಅಥವಾ ನಾವು ಗೀತೆಯಲ್ಲಿ ಪ್ರಜ್ಞಾಪ್ರತಿಷ್ಠಿತಾ ಅಥವಾ ಬ್ರಾಹ್ಮೀಸ್ಥಿತಿ ಎನ್ನುವ ಮಾತಿನಲ್ಲಿ ಅಥವಾ ಕರ್ಮಯೋಗಿಯೆನ್ನುವ ರೂಪದಲ್ಲಿ ಮತ್ತು ಅದರ ಸಂಪೂರ್ಣಾರ್ಥದಲ್ಲಿ ಅದೇ ಸತ್ಯವನ್ನು ಕಾಣುತ್ತೇವೆ. ಆದರೇನು ? ಈ ರಾಮಾಯಣ ವಾಚನ, ಈ ರಾಮಾಯಣ ಪ್ರಕಟಣೆ, ಈ ರಾಮಾಯಣದ ಆರಾಧನೆ, ರಾಮಾಯಣದ ತತ್ತ್ವಶಕ್ತಿಗಳ ಉಪಾಸನೆ ಮತ್ತು ಸಾಧನೆ, ಇವು ಬರಿಯ ಆಧ್ಯಾತ್ಮಿಕ ಕ್ಷೇಮವನ್ನು ಮಾತ್ರ ತಂದುಕೊಡುತ್ತವೆ ಎಂದಲ್ಲ. ಧರ್ಮ, ಅರ್ಥ, ಕಾಮ ಎಲ್ಲವನ್ನೂ ನಮಗೆ ತಂದುಕೊಡಬಲ್ಲುವು. ಅಂದರೇನು ? ರಾಜಕೀಯವಾಗಿ ಹೊಸ ಹೊಸದಾಗಿ ಕಾನೂನು ಮೊದಲಾದುವುಗಳನ್ನು ಅಥವಾ ರಾಜ್ಯಾಂಗ ಘಟನೆಯನ್ನು ನಿರ್ಮಾಣ ಮಾಡಿದರೆ ಏನು ಕೆಲಸವಾಗುತ್ತದೆಯೋ ಅದಕ್ಕಿಂತಲೂ ಇನ್ನೂ ಅತಿಶಯವಾದ ಕಾರ್ಯ ಇಂತಹ ಮಹಾಕೃತಿಗಳಿಂದ ಆಗಬಲ್ಲುದು. ಏಕೆಂದರೆ ನಾವೇನೊ ಈಗ ರಾಜಕೀಯವಾಗಿ ಅಖಿಲ ಭರತಖಂಡವನ್ನು ಒಂದು ಮಾಡಿದ್ದೇವೆ ಎಂಬ ಅಭಿಪ್ರಾಯವನ್ನು ಇಟ್ಟುಕೊಂಡಿದ್ದೇವೆ. ಆದರೆ ಈ ರಾಜಕೀಯದ ಅಂತರಾಳದಲ್ಲಿ, ಎಂದರೆ ಅದರ ಮೂಲದಲ್ಲಿ ಒಂದು ಸಾಂಸ್ಕೃತಿಕ ಐಕ್ಯತೆಯಿಲ್ಲದಿದ್ದರೆ ಎಷ್ಟು ಸೈನ್ಯವನ್ನು ಇಟ್ಟು ಈ ರಾಜಕೀಯ ಭದ್ರತೆಯನ್ನು ರಕ್ಷಿಸಬಲ್ಲಿರಿ ? ವಾಲ್ಮೀಕಿ, ವ್ಯಾಸ, ಕಾಳಿದಾಸ, ವೇದಗಳು, ಉಪನಿಷತ್ತು ದೇಶಭಾಷೆಗಳಲ್ಲಿ ಇವುಗಳನ್ನು ಪ್ರತಿಬಿಂಬಿಸುವ ಮತ್ತು ಪುಷ್ಟಿಗೊಳಿಸುವ ಇತರ ಹಲವಾರು ಕೃತಿಗಳು—ಇವು ನಮ್ಮ ನಿತ್ಯ ಮಂತ್ರಿಮಂಡಲಗಳಾಗಿ, ನಮ್ಮ ನಿತ್ಯ ಅಧ್ಯಕ್ಷರಾಗಿ ಭರತಖಂಡದ ಐಕ್ಯತೆಯನ್ನು ಸಾಧಿಸುತ್ತಾ ಇವೆ, ರಕ್ಷಿಸುತ್ತಾ ಇವೆ. ಆ ಶಕ್ತಿಗಳ ಪ್ರತೀಕಗಳಾಗಿ ಪ್ರತಿಮೆಗಳಾಗಿ ಮಹಾತ್ಮ ಗಾಂಧೀಜಿ, ನೆಹರೂ ಮೊದಲಾದವರು ಇರಬಹುದು. ಆದರೆ ಈ ಮೂಲಶಕ್ತಿಗಳು ಇಲ್ಲದಿದ್ದರೆ ಪಾಶ್ಚಾತ್ಯ ರಾಜಕೀಯ ಭಾವನೆ

ಗಳಿಂದ ಮಾತ್ರವೇ ಇದನ್ನು ಸಂಘಟಿಸುತ್ತೇವೆ ಎನ್ನುವುದು ಬರಿಯ ಭ್ರಾಂತಿ. ಆದ್ದರಿಂದಲೆ ಮಹಾತ್ಮ ಗಾಂಧೀಜಿ ನಮಗೆ ರಾಜಕೀಯ ಸ್ವಾತಂತ್ರ್ಯವನ್ನು ತಂದುಕೊಡುವುದರಲ್ಲಿ ತಮ್ಮ ಜೀವನದಲ್ಲಿಯೇ ಈ ತತ್ತ್ವಗಳನ್ನೂ ಸಾಧಿಸಿ ಹೋಗಿದ್ದಾರೆ.

ಬಹುಶಃ ಆ ಶಕ್ತಿಯ ಅನೇಕ ಬಾಹ್ಯಪ್ರಕಾರಗಳಲ್ಲಿ ಒಂದಾಗಿ ಇಂತಹ ರಾಮಾಯಣ ಪ್ರಕಟಣೆಗಳು ನಡೆಯುತ್ತಾ ಇವೆ. ಬಹುಶಃ ಇದರ ಅರ್ಥವೇನು, ವ್ಯಾಪ್ತಿಯೇನು ಎನ್ನುವುದು ವಯಸ್ಕರ ಶಿಕ್ಷಣ ಸಮಿತಿಗಾಗಲಿ ನನಗಾಗಲಿ ಗೊತ್ತಿಲ್ಲದಿರಬಹುದು. ಆದರೆ ಅಪೂರ್ವ ಮುಹೂರ್ತಗಳಲ್ಲಿ ನಮ್ಮ ಕಲ್ಪನಾರೂಪವಾದ ಒಂದು ಮೇಧಾಶಕ್ತಿಗೆ ಆ ಶಕ್ತಿ ಅನುಸರಿಸುತ್ತಿರುವ ರೀತಿ ವ್ಯಾಪಾರಗಳು ಸ್ವಲ್ಪ ಮಟ್ಟಿಗೆ ಸ್ಫುರಿಸುತ್ತವೆ, ಗೋಚರವಾಗುತ್ತವೆ. ರಾಮಾಯಣದ ಇಂದಿನ ಪ್ರಕಟಣೆ ಬರಿಯ ಒಂದು ಗ್ರಂಥ ಪ್ರಕಟಣೆ ಎಂಬ ಭಾವ ಬೇಡ. ಇದು ಒಂದು ಶಕ್ತಿ ಸಂಸ್ಥಾಪನೆ; ಇದು ಒಂದು ವಿದ್ಯುದಾಗಾರ; ಇದು ಶಾಂತಿಯ ಪರಮಾಶ್ರಯ, ನೆಲೆ. ಯಾವ ಸೈನ್ಯವೂ ಸಾಧಿಸಲಾರದುದನ್ನು ಇದು ಸಾಧಿಸುತ್ತದೆ, ಯಾವ ರಾಜಕೀಯವೂ ಕೈಗೂಡಿಸಲಾರದುದನ್ನು ಇದು ಬಹುಶಃ ಕೈಗೂಡಿಸುತ್ತದೆ ಎಂಬ ಮನೋಭಾವನೆಯಿಂದ ಇಲ್ಲಿ ನೆರೆದಿದ್ದೇವೆ. ಆದ್ದರಿಂದಲೇ ನಾನು ಹೇಳಿದ್ದು 'ಭುವನ ವಂದನೀಯವಾದ ಪೂಜಾಕಾರ್ಯಕ್ಕಾಗಿ ನೆರೆದಿದ್ದೇವೆ' ಎಂದು.

ವಯಸ್ಕರಿಗೆ ಅಕ್ಷರ ಕಲಿಸುವುದೆಂದರೆ ಅವರು ಇದುವರೆಗೂ ಪ್ರಕೃತಿಸಹಜವಾಗಿಯೆ ಪಡೆದಿದ್ದ ಕೈಕಾಲು ಮೂಗು ಬಾಯಿ ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಜೊತೆಗೆ ಅವೆಲ್ಲವನ್ನೂ ಮೀರಿದ ಒಂದು ಅಂತರಿಂದ್ರಿಯದ ಸಂಪಾದನೆಗೆ ಅವರಿಂದ ಗುದ್ದಲಿಪೂಜೆ ಮಾಡಿಸಿದಂತೆ. ವಿದ್ಯಾದಾನದಿಂದ ಮನುಷ್ಯ ಚೇತನಕ್ಕೆ ಒಂದು ಹೊಸ ನಾಲಗೆ ಸೃಷ್ಟಿಯಾಗುತ್ತದೆ; ಅವನ ಬಾಳಿಗೊಂದು ಹೊಸ ಹಸಿವೆ ಹುಟ್ಟುತ್ತದೆ. ಆ ಹೊಸ ನಾಲಗೆಯಿಂದ ಅವನು ಅದುವರೆಗೂ ಕಾಣದಿದ್ದ, ಕಾಣಲಾರದಿದ್ದ ಒಂದು ಹೊಸ ರುಚಿಯನ್ನು ಅನುಭವಿಸಲು ಸಮರ್ಥನಾಗುತ್ತಾನೆ. ಮನಸ್ಸಿನ ಆ ಹೊಸ ಹಸಿವೆ ಒಂದು ಹೊಸ ಆಹಾರವನ್ನು ಅಪೇಕ್ಷಿಸುತ್ತದೆ. ಅನ್ನಮಯದ ಹೊಟ್ಟೆ ಅನ್ನವನ್ನು ಬಯಸುವಂತೆ ಮನಸ್ಸಿನ ಹಸಿವು ಮನೋಮಯದ ಆಹಾರವನ್ನು ಹುಡುಕುತ್ತದೆ. ಹೊಸ ರುಚಿಯನ್ನೂ ಹೊಸ ಹಸಿವನ್ನೂ ಹುಟ್ಟಿಸುವಾತನು ಅದಕ್ಕೆ ಅರ್ಹವಾದ ರಸವನ್ನೂ ಅನ್ನವನ್ನೂ ಒದಗಿಸದಿದ್ದರೆ ಲೇಸನೆಸಗಲು ಹೋಗಿ ಕೇಡು ಮಾಡಿದಂತಾಗುತ್ತದೆ. ಏಕೆಂದರೆ ಸವಿಯಬಾರದುದನ್ನು ಸವಿದು, ತಿನ್ನಬಾರದುದನ್ನು ತಿಂದು, ಹೊಸದಾಗಿ ಸಾಕ್ಷರನಾದವನ ಚೇತನ ಮೇಲಕ್ಕೇರುವ ಬದಲು ಕೆಳಕ್ಕಿಳಿದು, ನಾಶವಾಗುವುದರ ಜೊತೆಗೆ ವಿನಾಶಕರವೂ ಆಗಿ, ರಾಕ್ಷಸವಾಗುವ ಸಂಭವವುಂಟು. ಆದ್ದರಿಂದ ಅಕ್ಷರ ಪ್ರಚಾರದಷ್ಟೇ ಮುಖ್ಯವಾಗುತ್ತದೆ. ಅದಕ್ಕೆ ಆವಶ್ಯಕವೂ ಅರ್ಹವೂ ಅನ್ವಿತವೂ ಆರೋಗ್ಯಕರವೂ ಆಗಿರುವ ಸಾಹಿತ್ಯಸೃಷ್ಟಿ.

ಹೊಸದಾಗಿ ಓದು ಕಲಿತ ನಮ್ಮ ಜನ "ಸ್ವಾಮಿ, ಓದುವುದನ್ನೇನೊ ಕಲಿಸಿ ಕೊಟ್ಟಿರಿ. ಏನೇನೊ ಪುಸ್ತಕಗಳನ್ನು ಓದುವುದಕ್ಕೆ ಕೊಡುತ್ತಿದ್ದೀರಿ. ಆದರೆ ರಾಮಾಯಣ ಮಹಾಭಾರತಗಳನ್ನು ಓದದಿದ್ದ ಮೇಲೆ ಓದನ್ನೇಕೆ ಕಲಿಯಬೇಕು? ಸಂತೋಷದ ಜೊತೆಗೆ ಪುಣ್ಯವೂ ಬರುತ್ತಿತ್ತು ನಮಗೆ. ಓದು ಕಲಿತುದಕ್ಕೆ ನಮ್ಮ ಜನ್ಮ ಸಾರ್ಥಕವಾಗುತ್ತಿತ್ತು" ಎಂದು ಹೇಳಿದರೆಂದು ವಯಸ್ಕರ ಶಿಕ್ಷಣ ಸಮಿತಿಯವರಿಂದ ಕೇಳಿದಾಗ ನಾನು ತುಂಬ ಹಿಗ್ಗಿದೆ. 'ಧನ್ಯ ನಮ್ಮ ಜನ; ಸಾರ್ಥಕ ಅವರ ಬಾಳು!' ಎಂದುಕೊಂಡು, ಜನಪ್ರಿಯವಾಗುವಂತೆಯೂ ವಾಲ್ಮೀಕಿಯ ರಾಮಾಯಣದ ಕಥೆಯು ಮೈ ಒಂದಿನಿತೂ ಅತ್ತ ಇತ್ತ ಆಗಿ ಕೆಡದಂತೆಯೂ ಸಾಧ್ಯವಾದ ಮಟ್ಟಿಗೆ ಸುಲಭವಾದ ಗದ್ಯದಲ್ಲಿ ರಾಮಾಯಣವನ್ನು ಬರೆಯಲೊಪ್ಪಿದೆ. ಹಲವು ಗೆಳೆಯರ ಹಲವು ತೆರನಾದ ನೆರವಿನಿಂದಾಗಿ ಅದು 'ಜನಪ್ರಿಯ ವಾಲ್ಮೀಕಿ ರಾಮಾಯಣ'ವಾಗಿ ಈಗ ಸಿದ್ಧವಾಗಿದೆ. ಹೆಸರು ನನ್ನೊಬ್ಬನದೆ ಇದ್ದರೂ ಅವರೆಲ್ಲರ ಉಸಿರು ನನ್ನ ಉಸಿರಿಗೆ ಬೆಂಬಲವಾಗಿರುವುದನ್ನು ನಾನು ಮರೆಯಲಾರೆ. ಆ ಕೃತಜ್ಞತೆಯ ಸಂಕೇತವಾಗಿ ಇದರಿಂದೊದಗುವ ಎಲ್ಲ ಶ್ರೇಯಸ್ಸನ್ನೂ ಅವರೆಲ್ಲರ ಶ್ರೇಯಸ್ಸಿಗಾಗಿ ಸಮರ್ಪಿಸುತ್ತೇನೆ.

ನಮ್ಮ ಜನದ ಬಾಳು ಮೇಲೆ ಮೇಲೆ ಎಷ್ಟು ಕೆಟ್ಟಂತೆ ಕಾಣುತ್ತಿದ್ದರೂ ಅದರ ಅಂತರಾಳದಲ್ಲಿ ಪೂರ್ವಿಕರ ಪುಣ್ಯದ ತಪಃಪ್ರಭಾವದ ನಂದಾದೀಪ ನಂದದೆ ಮಿನುಗುತ್ತಿದೆ ಎಂದು ತೋರುತ್ತದೆ. ಇಲ್ಲದಿದ್ದರೆ ಅಕ್ಷರ ಕಲಿತವರು ಕಾಸಿನ ಕಾದಂಬರಿಗಳನ್ನೂ ರೋಮಾಂಚನಕರವಾದ ನವೀನ ಚಲಚ್ಚಿತ್ರ ಶೃಂಗಾರಕಥಾನಕಗಳನ್ನೂ ಅಪೇಕ್ಷಿಸುವ ಬದಲು—ಅಥವಾ ಅಪೇಕ್ಷಿಸುವುದರ ಜೊತೆಗೆ, ಎಂದಾದರೂ ಚಿಂತೆಯಿಲ್ಲ—ರಾಮಾಯಣ ಮಹಾಭಾರತಗಳಂತಹ ಹಳೆಯ 'ಕಗ್ಗದ ಪುರಾಣ ಕಥೆ'ಗಳನ್ನು ಬಯಸುತ್ತಿದ್ದರೇ? ಏನಾದರಾಗಲಿ, ಪಟ್ಟಣಿಗ ನಾಗರಿಕರನ್ನು ಮೆಚ್ಚಿ, ಅವರನ್ನು ಎಲ್ಲದರಲ್ಲಿಯೂ ಅನುಕರಿಸಿ ಶ್ರೇಷ್ಠತೆಗೇರಬೇಕೆಂಬ ಗೀಳು ಈ ಒಂದು ವಿಚಾರದಲ್ಲಿ ಹಳ್ಳಿಯವರಿಗಿನ್ನೂ ಸಂಪೂರ್ಣವಾಗಿ ಸೋಂಕಿಲ್ಲ ಎಂದು ಸಮಾಧಾನವಾಗುತ್ತದೆ! ಅದೂ ಸೋಂಕಾಗಿಬಿಡುವ ಮೊದಲೆ ಅವರು ಹೊಸದಾಗಿ ಪಡೆದ ಓದಿನ ರುಚಿ ಕೆಸರು ಹಾದಿಗೆ ಬೀಳದಂತೆ ನೋಡಿಕೊಳ್ಳುವುದು ನಾಡಿನ ಒಳ್ಳಿಗೆ ಅತ್ಯಂತ ಆವಶ್ಯಕ ಕರ್ತವ್ಯ.

ಅಂತಹ ಉತ್ಥಾನದ ಮತ್ತು ಉದ್ಧಾರದ ಕಾರ್ಯಕ್ಕೆ ಆಶೀರ್ವಾದವೂ ಶಕ್ತಿಯೂ ಆಗಿ ನಮಗೆ ನೆರವಾಗುವ ದಿವ್ಯ ಗ್ರಂಥಗಳಲ್ಲಿ ರಾಮಾಯಣ ಮಹಾಭಾರತಗಳಿಗಿಂತಲೂ ಉತ್ತಮವೂ ಜನಪ್ರಿಯವೂ ಆಗಿರುವ ಚಿರಕೃತಿಗಳು ಮತ್ತಾವಿವೆ!

ರಾಮಾಯಣ ಆದಿಕಾವ್ಯ; ಅದರ ಕವಿ ಆದಿಕವಿ. ಆತನು ಮಹರ್ಷಿಯೂ ಆಗಿರುವುದರಿಂದ ದ್ರಷ್ಟಾರನೂ ಅಹುದು. ಆತನ ಪೂರ್ಣದೃಷ್ಟಿ ಲೋಕಾತಿಕ್ರಾಂತ ಗೋಚರವೂ ಆಗಿರುವುದರಿಂದ ಆತನು ಕ್ರಾಂತದರ್ಶಿ ಮತ್ತು ಅವನ ಪ್ರತಿಭೆ ನಿತ್ಯಸತ್ಯ ಸಂಸ್ಪರ್ಶಿ. ಆ ಋಷಿಕವಿ ವಾಲ್ಮೀಕಿಯ ಸಮುದ್ರೋಪಮವಾದ ಮಹಾಗಾನಕ್ಕೆ ಜಗತ್ತು ಮಹಾಕಾವ್ಯದ ಪಟ್ಟ ಕಟ್ಟಿದೆ. ಏಕೆಂದರೆ ರಾಮಾಯಣವು ಪುರಾಣವಾದರೂ

ಅದೊಂದು ಬೃಹತ್ ಭಾವಗೀತೆಯಂತಿದೆ. ಅದು ಏಕಕವಿ ಕೃತಿಯೂ ಆಗಿದೆ. ಬಹು ಕಾಲದ ಸಂಸ್ಕೃತಿಯ ಬಹು ದೊಡ್ಡ ಜನಾಂಗದ ಮನಃಕೃತಿಯೂ ಆಗಿದೆ. ಮೊದಲನೆಯ ಕಾರಣಕ್ಕಾಗಿ ಅದು ಭಾವಗೀತೆಯಂತಿದ್ದರೆ ಎರಡನೆಯ ಕಾರಣಕ್ಕಾಗಿ ಪುರಾಣದಂತಿದೆ. ಆದ್ದರಿಂದಲೆ ಅದಕ್ಕೆ ಮಹಾಕಾವ್ಯವೆಂಬ ಬಿರುದು ಸರ್ವಾಂಗ ಸುಂದರವಾಗಿ ಒಪ್ಪುತ್ತದೆ. ಏಕಾಗ್ರತೆ, ಏಕಮುಖತೆ, ಐಕ್ಯತೆ, ರಾಗತೀಕ್ಷ್ಣತೆ, ಆದರ್ಶಪ್ರಿಯತೆ, ರಸಾವೇಶ ಇವುಗಳ ದೃಷ್ಟಿಯಿಂದ ಅದೊಂದು ಭಾವಗೀತೆ. ವಿಪುಲತೆ, ಬಹುಳತೆ, ವಿವಿಧತೆ, ದೇವತ್ವ, ದೈತ್ಯತ್ವ, ಮಹತ್ವ ಇವುಗಳ ದೃಷ್ಟಿಯಿಂದ ಅದೊಂದು ಪುರಾಣ. ಅದರ ಸೂತ್ರ ಭಾವಗೀತೆಯದು; ಗಾತ್ರ ಪುರಾಣದ್ದು. ಕವಿಕೋಕಿಲ ವಾಲ್ಮೀಕಿಯ ಹೈಮಾಚಲ ಸಂಗೀತದಲ್ಲಿ ಸರೋವರದ ಸೌಂದರ್ಯವಿದೆ, ಸರಿತ್ಪತಿಯ ಗಾಂಭೀರ್ಯವಿದೆ. ಚಾರುಲಾಲಿತ್ಯ ಮತ್ತು ರುಂದ್ರಭವ್ಯತೆ ಎರಡೂ ಸಮನ್ವಯಗೊಂಡಿರುವ ಆ ಮಹಾಕೃತಿ ಲೋಕಪೂಜಾಭಾಜನವಾಗಿರುವುದರಲ್ಲಿ ಏನಾಶ್ಚರ್ಯ ?

ಅಂತಹ ಕವಿಯೂ ಅಂತಹ ಕೃತಿಯೂ ನಮಗೆ ಲಭಿಸಿರುವುದು ನಮ್ಮ ಹೆಮ್ಮೆ, ನಮ್ಮ ಪುಣ್ಯ ; ಮತ್ತೆ ಭುವನದ ಭಾಗ್ಯ ! ಕವಿಯೂ ಕೃತಿಯೂ ಎಂದು ಬೇರೆ ಬೇರೆಯಾಗಿ ಹೇಳಿದರೂ ನಮ್ಮ ಪಾಲಿಗೆ ಅವೆರಡಕ್ಕೂ ಭೇದವಿಲ್ಲ. ಕವಿ ತನ್ನ ಕೃತಿಯಲ್ಲಿ ಲೀನವಾಗಿ ಹೋಗಿದ್ದಾನೆ, ಭಗವಂತನು ತನ್ನ ಸೃಷ್ಟಿಯಲ್ಲಿ ಒಂದಾಗಿರುವಂತೆ. ಲೋಕ ಸಂಗ್ರಹಕ್ಕಾಗಿ ಕವಿಯೆ ಕೃತಿಯಾಗಿ ಅವತರಿಸಿದ್ದಾನೆ. ಕವಿಯ ಜೀವನ ಕಥೆಯೂ ರಾಮಾಯಣದಲ್ಲಿ ಒಂದಂಶವಾಗಿಬಿಟ್ಟಿದೆ. ಅವನ ಜೀವಿತ ಕ್ಷೇತ್ರದಿಂದಲೆ ಅದು ಹೊಮ್ಮಿ ಬೆಳೆಯುತ್ತದೆ. ಅವನ ಬಾಳಿನ ಸರ್ವಸ್ವದ ಸಾರಸ್ವರೂಪವಾಗಿ ಅದು ಮೈವೆತ್ತು ನಿಂತಿದೆ. ನಿಷಾದನಾಗಿದ್ದ ಆತನನ್ನು ಮಹರ್ಷಿತ್ವಕ್ಕೆ ಏರಿಸಿದೆ. ವ್ಯಾಧನನ್ನು ಆದಿಕವಿಯನ್ನಾಗಿ ಪರಿವರ್ತಿಸಿದೆ. ವಾಲ್ಮೀಕಿ ರಾಮಾಯಣವನ್ನು ರಚಿಸುತ್ತಿದ್ದಾಗಲೆ ರಾಮಾಯಣವೂ ವಾಲ್ಮೀಕಿಯನ್ನು ಸೃಜಿಸುತ್ತಿತ್ತು, ಕಡೆಯುತ್ತಿತ್ತು, ಪಡೆಯುತ್ತಿತ್ತು. ಗುರುವಿನ ಅನುಗ್ರಹವೂ ಭಗವಂತನ ಕೃಪೆಯೂ ದೊರೆತರೆ ಬೇಡನಂತಹ ಸಾಮಾನ್ಯನೂ ಮಹರ್ಷಿಯಂತಹ ಮಹೋನ್ನತಿಗೆ ಏರಬಹುದು ಎಂಬುದಕ್ಕೆ ವಾಲ್ಮೀಕಿಯ ಜೀವನ ಕಥೆಯೆ ಒಂದು ಆಶಾದಾಯಕ ಅಗ್ನಿಸಾಕ್ಷಿಯಾಗಿದೆ.

ವಾಲ್ಮೀಕಿ ನಿಷಾದರ ಕುಲದಲ್ಲಿ ಹುಟ್ಟಿದನು.

ನಿಷಾದರು ಅತ್ಯಂತ ಅಜ್ಞರೆಂದಾಗಲಿ ಕ್ರೂರಿಗಳಾದ ಕಾಡುಜನರೆಂದಾಗಲಿ ಭಾವಿಸಬೇಕಾಗಿಲ್ಲ. ಶ್ರೀರಾಮನ ಪ್ರಿಯಸ್ನೇಹಿತನಾದ ಗುಹನೂ ಬೇಡರ ದೊರೆ ಎಂಬುದನ್ನು ಗಮನಿಸಿದರೆ ನಿಷಾದರಿಗೂ ಅವರ ನೆಲದ ಕುಲದ ವಿದ್ಯೆ ಸಂಸ್ಕೃತಿ ಇದ್ದುವೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ವ್ಯಾಧರ ಕುಲದಲ್ಲಿ ಹುಟ್ಟಿದ ವಾಲ್ಮೀಕಿ ವ್ಯಾಧವೃತ್ತಿಯಿಂದಲೆ ಬಾಳುತ್ತಿದ್ದನೆಂದರೆ ಅಧರ್ಮವೂ ಅಲ್ಲ, ಆಶ್ಚರ್ಯವೂ ಅಲ್ಲ. ಅರಣ್ಯಗಳಲ್ಲಿ ಬಿಲ್ಲು ಬಾಣ ಕತ್ತಿ ಈಟಿಗಳನ್ನು ಹಿಡಿದು ತನ್ನವರ ಕೂಡೆ ನಡೆದು ಹುಲಿ ಸಿಂಹ ಆನೆ ಕಡವೆ ಮಿಗ

ಮೊದಲಾದ ವನ್ಯಜಂತುಗಳನ್ನು ಬೇಟೆಯಾಡಿರಬೇಕು; ದಂತ ಚರ್ಮ ಉಗುರು ಮೊದಲಾದುವುಗಳನ್ನು ಶೇಖರಿಸಿರಬೇಕು. ಹೊಳೆ ಕೆರೆಗಳಲ್ಲಿ ಬಲೆ ಬೀಸಿಯೋ ಗಾಳಹಾಕಿಯೋ ಸಿಡಿಯೊಡ್ಡಿಯೋ ಮೀನು ಹಿಡಿದಿರಬೇಕು; ಈಸಾಡಿರಬೇಕು. ತರತರದ ಮರಗಳಲ್ಲಿ ತರತರದ ರುಚಿಯ ಹಣ್ಣು ಹಂಪಲುಗಳನ್ನು ಕಿತ್ತಿರಬೇಕು; ವಿಧವಿಧವಾದ ಗಿಡಬಳ್ಳಿಗಳನ್ನು ಹುಡುಕಿ ಗೆಡ್ಡೆ ಗೆಣಸುಗಳನ್ನು ಅಗೆದು ತನಗೂ ತನ್ನವರಿಗೂ ಆಹಾರ ಒದಗಿಸಿರಬೇಕು. ಬದುಕಿನ ಈ ಎಲ್ಲ ಅನಿವಾರ್ಯವಾದ ಲೌಕಿಕನಿಮಿತ್ತಗಳಿಂದಾಗಿ ವಾಲ್ಮೀಕಿ ಪ್ರಕೃತಿದೇವಿಯ ಸೌಂದರ್ಯದ ಸಾಮ್ರಾಜ್ಯದ ವಿವಿಧ ಸಂಪತ್ತುಗಳನ್ನು ವಿವರವಾಗಿ ಹೃದಯಂಗಮವಾಗಿ ಅನುಭವಿಸಿರಬೇಕು.

ಮೊದಲ ಕವಿಯಾಗುವ ತನ್ನ ಮೆಚ್ಚಿನ ಕಂದನನ್ನು ವ್ಯಾಧನನ್ನಾಗಿ ಹುಟ್ಟಿಸುವಂತೆ ವಾಗ್ದೇವಿ ತನ್ನ ಪತಿಯನ್ನು ಪ್ರೇರಿಸಿದಳು ಎಂದು ತೋರುತ್ತದೆ. ಇಲ್ಲದಿದ್ದರೆ ರಾಮಾಯಣ ಈಗಿರುವುದಕ್ಕಿಂತಲೂ ಸಂಪೂರ್ಣವಾಗಿ ಅನ್ಯಪ್ರಕಾರದಲ್ಲಿ ನಮಗೆ ದೊರೆಯುತ್ತಿತ್ತು ಎಂದು ಧೈರ್ಯವಾಗಿ ಊಹಿಸಬಹುದು. ವಾಲ್ಮೀಕಿಯ ಬಾಲ್ಯ ಮತ್ತು ತಾರುಣ್ಯ ಕಾಲಗಳ ಅರಣ್ಯ ಪರಿಚಯದ ಪೂರ್ಣಫಲ ಅವನ ದಿವ್ಯಕೃತಿಯಲ್ಲಿ ಪ್ರತಿಫಲಿತವಾಗಿರುವುದನ್ನು ನಾವು ಕಾಣುತ್ತೇವೆ: ಆ ಕಾಡಿನ ಒಲವು, ಆ ಮರಮರದ ಗಿಡಗಿಡದ ಬಳ್ಳಿಬಳ್ಳಿಯ ಆತ್ಮೀಯವಾದ ಪರಿಚಯ, ಹೂವು ಹಕ್ಕಿ ಹಣ್ಣು ಮೊದಲಾದುವುಗಳ ಸೌಂದರ್ಯದಲ್ಲಿರುವ ಆ ಆವೇಶಪೂರ್ಣವಾದ ಆಸಕ್ತಿ, ಅವುಗಳ ಒಂದೊಂದು ವಿವರದಲ್ಲಿಯೂ ನಿಕಟವೂ ದೀರ್ಘವೂ ಆದ ಅನುಭವದಿಂದಲೆ ಒದಗುವ ಆ ರಸರುಚಿ, ಋತುಋತುಗಳಲ್ಲಿ ವ್ಯತ್ಯಸ್ತವಾಗುವ ಪ್ರಕೃತಿಸೌಂದರ್ಯದ ಆ ವಿವರಜ್ಞಾನ,—ಇವು ವ್ಯಾಧವೃತ್ತಿಗಲ್ಲದೆ ಅಷ್ಟು ಆತ್ಮೀಯವಾಗಿ ಲಭಿಸುವುದು ಸುಲಭವಲ್ಲ. ವಾಲ್ಮೀಕಿಯ ನಾಳನಾಳಗಳಲ್ಲಿಯೂ ಬಾನು ಮುಗಿಲು ಬೆಟ್ಟ ಕಾಡು ಮಿಗ ಹಕ್ಕಿ ಮಳೆ ಬಿಸಿಲು ಚಳಿ ಮಂಜು ಬೆಳಗು ಬೈಗು ನೇಸರು ತಿಂಗಳು ಇವೆಲ್ಲವೂ ನೆತ್ತರಾಗಿ ಹರಿಯುತ್ತಿರುವುದು ಅವನು ನಿಷಾದನಾಗಿ ಸಂಭವಿಸಿದ ಪುಣ್ಯದಿಂದಲ್ಲದೆ ಬೇರೆ ಅಲ್ಲ.

ಹೀಗೆ ಹುಟ್ಟನಿಂದಲೆ ಕವಿಯಾಗಿದ್ದ ವ್ಯಾಧರ ತರುಣನಿಗೆ 'ನಾರದ'ರಂತಹ ಗುರುವಿನ ಅನುಗ್ರಹವೂ ದೊರೆಯಿತು. ನಾರದ ಎಂಬ ಮಾತಿಗೆ ಜ್ಞಾನವನ್ನು ದಯಪಾಲಿಸುವಾತನು ಎಂಬರ್ಥವಿರುವುದನ್ನು ಗಮನಿಸಿದರೆ ಯಾವ ದಿವ್ಯ ಗುರುವನ್ನಾದರೂ ಕಾವ್ಯದ ಪ್ರತಿಮಾವಿಧಾನ ಆ ಹೆಸರಿನಿಂದ ಕರೆಯುವುದರಲ್ಲಿ ಔಚಿತ್ಯವಿದೆ.

ಗುರುಕೃಪೆ ದೊರೆತ ಮೇಲೆ ಬೇಡರ ತರುಣನು ವಲ್ಮೀಕಾಶ್ರಮದಲ್ಲಿ ಪಾಠ ಪ್ರವಚನ ಅಧ್ಯಯನ ಧ್ಯಾನರೂಪವಾದ ಉಗ್ರತಪಸ್ಯೆಯಲ್ಲಿ ಹಲವು ವರ್ಷಗಳನ್ನು, ಹೆಚ್ಚಾಗಿ ಹೊರಗೆಲ್ಲಿಯೂ ಬಾರದೆ ತೋರದೆ, ಕಳೆದಿರಬೇಕು. ಅವನ ಮೇಲೆ ಹುತ್ತ ಬೆಳೆದಿತ್ತು ಎಂಬ ಪ್ರತಿಮೆಯಲ್ಲಿ ಅದು ಸೂಚಿತವಾಗುತ್ತದೆ. ಗುರು ನಾರದರ ಪ್ರಸಾದದಿಂದ ರಾಮಮಂತ್ರ ಮತ್ತು ರಾಮಾಯಣದ ಕಥೆ ಎರಡರ ಸಿದ್ಧಿಯೂ ದೊರೆತು ಕೊನೆಗೆ ವಾಕ್ಯವಿಶಾರದನಾದ ವ್ಯಾಧನು ಮಹರ್ಷಿಯಾದನು.

ಅಂತಹ ಅನರ್ಘ್ಯ ದಿವ್ಯವಾದ ಲೋಕೋತ್ತರ ರಸಭಾರದಿಂದ ಪರಿಪೂರ್ಣ ವಾಗಿದ್ದ ಅವನ ಕವಿಚೇತನ ಭುವನಭಾಗ್ಯ ಕಾರಣವಾಗಿ ಕಾವ್ಯರೂಪದಲ್ಲಿ ಅವತರಿಸುವುದಕ್ಕೆ ಒಂದು ನಿಮಿತ್ತ ಮಾತ್ರ ಘಟನೆ ಸಂಭವಿಸಿತು. ಒಮ್ಮೆ ಆತನು ತನ್ನ ಆಶ್ರಮದ ಬಳಿಯ ತಮಸಾ ನದಿಗೆ ಬೆಳಗಿನ ಹೊತ್ತು ಅಕರ್ದಮವೂ ರಮಣೀಯವೂ ಪ್ರಸನ್ನಾಂಬುವೂ ಆಗಿದ್ದ ತೀರ್ಥದಲ್ಲಿ ಮೀಯಲು ಹೋಗಿದ್ದನು. ಕ್ರೌಂಚಪಕ್ಷಿಗಳೆರಡು ಅಲ್ಲಿಯ ವಿಪುಲ ವನವಿಸ್ತೀರ್ಣದ ಮೇಲುಗಡೆ ತಿಳಿಯಾದ ವಾಯುಮಂಡಲದಲ್ಲಿ ಉಲಿದು ಹಾರಾಡುತ್ತಿದ್ದುವು, ತಮ್ಮ ದಾಂಪತ್ಯ ಮಾಧುರ್ಯವನ್ನು ಲೋಕಕ್ಕೆ ತೋರಿ ಸಾರುವಂತೆ. ವಾಲ್ಮೀಕಿ ರಸಸುಖಪುಲಕಿತನಾಗಿ ಅವುಗಳ ಆನಂದದಲ್ಲಿ ಭಾಗಿ ಯಾಗಿ ನೋಡು ನೋಡುತ್ತಿದ್ದಂತೆಯೆ ಮರಗಳ ಮರೆಯಲ್ಲಿ ಹೊಂಚಿದ್ದ ಬೇಡ ನೊಬ್ಬನು ಬಿಟ್ಟ ಬಾಣಕ್ಕೆ ಗಂಡು ಕೊಂಚೆ ಬಲಿಯಾಗಿ ರಕ್ತಮಯವಾಗಿ ಬಾಣಸಹಿತ ವಾಗಿ ಆತನ ಸಮೀಪದಲ್ಲಿಯೆ ಉರುಳಿತು. ಹೆಣ್ಣು ಹಕ್ಕಿ ಹಾರಾಡಿ ರೋದಿಸತೊಡಗಿತು. ವಾಲ್ಮೀಕಿಗೆ ಕರುಣವುಕ್ಕಿ ಸ್ವಧರ್ಮಚಾರಿಯಾದ ಆ ಶಬರನನ್ನು ಅಧರ್ಮಚಾರಿ ಯೆಂದು ಬಗೆದು ಇಂತು ಶಪಿಸಿದನು :

> " ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ
> ಯತ್ ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್ ! "

" ಹೇ ನಿಷಾದ, ಕಾಮಮೋಹಿತವಾದ ಕ್ರೌಂಚದಂಪತಿಗಳಲ್ಲಿ ಒಂದನ್ನು ಕೊಂದೆ ಯಲ್ಲಾ ; ಎಂದೆಂದಿಗೂ ನಿನಗೆ ಏಳಿಗೆಯಾಗದಿರಲಿ ! "

ಒಡನೆಯೆ ಋಷಿ ತನ್ನ ಕಠಿನವಾಕ್ಯಕ್ಕೆ ತಾನೆ ನೊಂದುಕೊಂಡು " ಹಕ್ಕಿಯ ದುಃಖಕ್ಕೆ ಮರುಗಿ ಕೋಪವಶನಾಗಿ ಏನು ಮಾಡಿಬಿಟ್ಟೆ ! " ಎಂದು ತನ್ನ ವೈರಗ್ರಹಣ ಬುದ್ಧಿಗಾಗಿ ಪಶ್ಚಾತ್ತಾಪಪಟ್ಟು ಸಮೀಪದಲ್ಲಿದ್ದ ಶಿಷ್ಯನಿಗೆ ತಾನೆಂದುದು ಶ್ಲೋಕ ಮಾತ್ರವಾಗಲಿ ಶಾಪವಾಗುವುದು ಬೇಡ ಎಂಬ ಮನಸ್ಸಿನಿಂದ ಹೀಗೆ ಹೇಳಿದನಂತೆ :

> " ಪಾದಬದ್ಧೋಽಕ್ಷರಸಮಸ್ತಂತ್ರೀಲಯಸಮನ್ವಿತಃ
> ಶೋಕಾರ್ತಸ್ಯ ಪ್ರವೃತ್ತೋ ಮೇ ಶ್ಲೋಕೋ ಭವತು ನಾನ್ಯಥಾ "

ನದೀತೀರ್ಥದಲ್ಲಿ ಯಥಾವಿಧಿಯಾಗಿ ಸ್ನಾನಮಾಡಿ ಆಶ್ರಮಕ್ಕೆ ಹಿಂತಿರುಗಿ ಆ ಮಹರ್ಷಿ ಧ್ಯಾನಕ್ಕೆ ಕುಳಿತನು. ಆಗ ಲೋಕಕರ್ತನೂ ಸ್ವಯಂಪ್ರಭುವೂ ಚತುರ್ಮುಖನೂ ಮಹಾತೇಜನೂ ಆದ ಬ್ರಹ್ಮದೇವನು ಗೋಚರನಾಗಿ ತನ್ನ ಕೋಪಕ್ಕೂ ಕೊಟ್ಟ ಶಾಪಕ್ಕೂ ಚಿಂತಾಕ್ರಾಂತನಾಗಿದ್ದ ಮಹಾಮುನಿಗೆ ಸಮಾಧಾನ ಹೇಳಿ ಇಂತು ಆದೇಶವಿತ್ತನಂತೆ :

> " ಶ್ಲೋಕ ಏವ ತ್ವಯಾ ಬದ್ಧೋ ನಾತ್ರ ಕಾರ್ಯಾ ವಿಚಾರಣಾ
> ಮಚ್ಛಂದಾದೇವ ತೇ ಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ
> ರಾಮಸ್ಯ ಚರಿತಂ ಕೃತ್ಸ್ನಂ ಕುರು ತ್ವಮೃಷಿಸತ್ತಮ
> ಧರ್ಮಾತ್ಮನೋ ಗುಣವತೋ ಲೋಕೇ ರಾಮಸ್ಯ ಧೀಮತಃ

ವೃತ್ತಂ ಕಥಯ ವೀರಸ್ಯ ಯಥಾ ತೇ ನಾರದಾಚ್ಛ್ರುತಮ್
ರಹಸ್ಯಂ ಚ ಪ್ರಕಾಶಂ ಚ ಯದ್ವೃತ್ತಂ ತಸ್ಯ ಧೀಮತಃ
ರಾಮಸ್ಯ ಸಹಸೌಮಿತ್ರೇ ರಾಕ್ಷಸಾನಾಂ ಚ ಸರ್ವಶಃ
ವೈದೇಹ್ಯಾಶ್ಚೈವ ಯದ್ ವೃತ್ತಂ ಪ್ರಕಾಶಂ ಯದಿ ವಾ ರಹಃ
ಯಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ
ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ
ಕುರು ರಾಮಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಮ್
ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ
ತಾವತ್ ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ
ಯಾವತ್ ರಾಮಾಯಣಕಥಾ ತ್ವತ್ಕೃತಾ ಪ್ರಚರಿಷ್ಯತಿ
ತಾವದೂರ್ಧ್ವಮಧಶ್ಚ ತ್ವಂ ಮಲ್ಲೋಕೇಷು ನಿವತ್ಸ್ಯಸಿ "

ನೀನು ಆ ನಿಷಾದನನ್ನು ಕುರಿತೆಂದುದರಲ್ಲಿ ಒಂದು ಶ್ಲೋಕ ರಚಿತವಾಗಿದೆ. ಅದಕ್ಕಾಗಿ ಶೋಕವೇಕೆ? ಆ ನನ್ನ ಛಂದಸ್ಸ್ವರೂಪಿಣಿ ಸರಸ್ವತಿಯೆ ನಿನ್ನಲ್ಲಿ ಅವತರಿಸಿದ್ದಾಳೆ. ಧೀಮಂತನೂ ಧರ್ಮಾತ್ಮನೂ ವೀರನೂ ಆಗಿರುವ ರಾಮನ ಚರಿತೆಯನ್ನು ನೀನು ನಾರದ ಮಹರ್ಷಿಯಿಂದ ಕೇಳಿದಂತೆ ಶ್ಲೋಕಬದ್ಧವನ್ನಾಗಿ ಮಾಡು. ಆ ಚರಿತ್ರೆಯಲ್ಲಿ ಲೋಕಕ್ಕೆ ಗೋಚರವಾಗುವಂತೆ ಪ್ರಕಾಶವಾದ ವೃತ್ತವಾಗಲಿ ಅಥವಾ ಅಗೋಚರವಾಗಿ ರಹಸ್ಯವಾಗಿರುವ ವೃತ್ತವಾಗಲಿ, ಅವಿದಿತವಾಗಿದ್ದರೂ ಸರ್ವವೂ ನಿನಗೆ ವಿದಿತವಾಗಲಿ. ಸೀತಾರಾಮಲಕ್ಷ್ಮಣರಿಗೆ ಸಂಬಂಧಪಟ್ಟಿರಲಿ ರಾಕ್ಷಸರಿಗೆ ಸಂಬಂಧಪಟ್ಟಿರಲಿ, ಯಾರ ವೃತ್ತವಾಗಲಿ ಯಾರ ಚಿತ್ತವಾಗಲಿ ಎಲ್ಲವೂ ನಿನಗೆ ಸಂಪೂರ್ಣವಾಗಿ ದರ್ಶನಪ್ರತ್ಯಕ್ಷವಾಗುತ್ತದೆ. ನಿನ್ನ ವಾಣಿಯಲ್ಲಿ ಅನೃತವೆಂಬುದು ಒಂದಿನಿತೂ ಪ್ರವೇಶಿಸುವುದಿಲ್ಲ. ಪೃಥ್ವಿಯಲ್ಲಿ ಎಲ್ಲಿಯವರೆಗೆ ಗಿರಿನದಿಗಳಿರುತ್ತವೆಯೋ ಅವರೆಗೆ ಲೋಕ ಲೋಕಗಳಲ್ಲಿ ರಾಮಾಯಣ ಕಥೆ ಪ್ರಚುರವಾಗಿರುತ್ತದೆ. ಎಲ್ಲಿಯವರೆಗೆ ನಿನ್ನ ರಾಮಾಯಣ ಕಥಾಕೃತಿ ಪ್ರಚಾರವಾಗಿರುತ್ತದೆಯೋ ಅಲ್ಲಿಯವರೆಗೆ ನೀನು ನನ್ನ ಕೃತಿಯಾಗಿರುವ ಈ ಮೇಲಣ ಮತ್ತು ಕೆಳಗಣ ಹದಿನಾಲ್ಕು ಲೋಕಗಳಲ್ಲಿಯೂ ಸರ್ವವ್ಯಾಪಿಯಾಗಿ ಸರ್ವತೋಮುಖವಾಗಿ ಸರ್ವೋದಯ ಕಾರಣನಾಗಿ ಸರ್ವರ ಸಾನಂದರೂಪನಾಗಿರುತ್ತೀಯೆ. "

ಬ್ರಹ್ಮನ ಪ್ರತ್ಯಕ್ಷದ ಮತ್ತು ಆದೇಶದ ಈ ಪ್ರತಿಮೆಯಲ್ಲಿ ಇಂಗಿತವಾಗಿರುವ ದರ್ಶನ ಧ್ವನಿಯನ್ನು ನಾವು ಹೃದಯತಃ ಅರಿಯಬೇಕು. ಬ್ರಹ್ಮನ ಇಚ್ಛೆಯೆ ವಾಲ್ಮೀಕಿಯಲ್ಲಿ ಪ್ರವಹಿಸಿತು ಎಂಬುದರ ಸಂಪೂರ್ಣಾರ್ಥವನ್ನು ಮನನ ಮಾಡಬೇಕು. ಕವಿಕೃತಿ ಬ್ರಹ್ಮಕೃತಿ ಅಲ್ಲದಿದ್ದರೂ ಬ್ರಹ್ಮನು ಸಂಪೂರ್ಣವಾಗಿ ತನ್ನದನ್ನಾಗಿ ಒಪ್ಪಿಕೊಂಡದ್ದು ಎಂಬುದನ್ನು ಗ್ರಹಿಸಬೇಕು. ಅದಕ್ಕೆ, ಎಂದರೆ ಕವಿಕೃತಿಗೆ, ಕನಿಷ್ಠವೆಂದರೆ ಬ್ರಹ್ಮಕೃತಿಗೆ ಸಮನಾದ ಗೌರವ ಸಲ್ಲುತ್ತದೆ. 'ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ತಾವತ್ ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ' ಎಂಬಲ್ಲಿ ಬ್ರಹ್ಮ

ಕೃತಿಗಳಾದ ಪರ್ವತಾರಣ್ಯನದಿಗಳಂತೆ ಕವಿಕೃತಿಯಾದ ರಾಮಾಯಣವೂ ಪ್ರಕೃತಿಯ ಸತ್ಯಾಂಶವಾಗಿರುತ್ತದೆ ಎಂಬ ಆಶ್ವಾಸನೆಯಿದೆ. ಅದಕ್ಕಿಂತಲೂ ಅತಿಶಯವಾಗಿ, ಈ ಪೃಥ್ವಿಯ ಪರ್ವತಾರಣ್ಯಗಳ ಸತ್ಯ ಈ ಒಂದು ಲೋಕದಲ್ಲಿ ಮಾತ್ರ ಪ್ರಚುರವಾಗಿರುವು ದಾದರೆ ಋಷಿಕವಿ ಕೃತಿಯ ಸತ್ಯ ಅನೇಕ ಲೋಕಚರವಾಗುತ್ತದೆ ಎಂಬ ಅತೀಂದ್ರಿಯವೂ ಯೌಗಿಕವೂ ಆಗಿರುವ ಸತ್ಯಸ್ಯ ಸತ್ಯವೂ ಪ್ರತಿಬೋಧಿತವಾಗಿರುವಂತೆ ಭಾಸವಾಗುತ್ತದೆ, 'ಮಹೀತಲೇ' 'ಲೋಕೇಷು' ಎಂಬ ಪದಗಳಲ್ಲಿ. ಮುಂದಿನ ಎರಡು ಪಂಕ್ತಿಗಳಲ್ಲಿ ಬ್ರಹ್ಮನಂತೆ ವಾಲ್ಮೀಕಿಯೂ ಲೋಕಲೋಕಾಂತರ ವ್ಯಾಪ್ತನಾಗಿರುತ್ತಾನೆ ಎಂಬ ಧ್ವನಿ ಯಿದೆ. ರಾಮಾಯಣ ಬರಿಯ ಲೌಕಿಕವಾದ ಚರಿತ್ರೆಯಂತಲ್ಲ ಎಂಬುದು 'ರಹಸ್ಯಂ ಚ ಪ್ರಕಾಶಂ ಚ' ಎಂಬಲ್ಲಿಯೂ 'ಯಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ' ಎಂಬಲ್ಲಿಯೂ ಸ್ಪಷ್ಟವಾಗುತ್ತದೆ. ಅಲ್ಲದೆ ಅದು ಸತ್ಯಾಧಾರವಿಲ್ಲದ ಬರಿಯ ಬಾಲಕಲ್ಪನಾ ವಿನೋದದ ಕಟ್ಟುಕಥೆಯಂತೆ ಅನೃತ ಸೃಷ್ಟಿಯಲ್ಲ ; ಅದೂ ಒಂದು ಋತಚಿದ್ವಿನ್ಯಾಸ. ವಾಲ್ಮೀಕಿಯ ಕೃತಿಯಲ್ಲಿ ಎಲ್ಲಿಯೂ ಸುಳ್ಳು ಹೊಳ್ಳು ಹುಸಿ ಹೋಗುವುದಿಲ್ಲ. ಮಾತ್ರ ವಲ್ಲ, ಋಷಿಯ ವಾಕ್ಶಕ್ತಿ ಬ್ರಹ್ಮನ ವಾಕ್ಶಕ್ತಿಯಿಂದ ಸಮನ್ವಿತವಾಗಿರುವುದರಿಂದ ಅದು ಏನನ್ನು ವಚಿಸಿದರೂ ಅದು ರಚಿತವಾಗಿಯೇ ಸತ್ಯವಾಗುತ್ತದೆ. 'ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ' 'ಕಾವ್ಯವಾಗುವ ನಿನ್ನ ವಾಕ್ಕಿನಲ್ಲಿ ಅಪ್ಪಿತಪ್ಪಿಯೂ ಅನೃತವುಂಟಾಗುವುದಿಲ್ಲ' ಎಂಬ ಬ್ರಹ್ಮವಾಣಿಯಲ್ಲಿ ಸುಸ್ಪಷ್ಟವಾಗಿದೆ, ಕವಿಕೃತಿಯ ಮೇಲೆ ಸಂಸ್ಥಾಪಿತವಾಗಿರುವ ಸಾಕ್ಷಾತ್ ಬ್ರಹ್ಮಮುದ್ರೆ.

ವಾಲ್ಮೀಕಿಯ ಕೃತಿ ಅದು ಹುಟ್ಟಿದಂದು 'ಕವಿಕೃತಿ' ಯಾಗಿತ್ತು. ಇಂದು 'ಪ್ರಕೃತಿ' ಯಾಗಿದೆ. ಭಾರತೀಯರ ಬಾಳುವೆಯ ಲೋಕದಲ್ಲಿ ಪರ್ವತ ಅರಣ್ಯ ಸಮುದ್ರ ಆಕಾಶಗಳಿರುವಂತೆ ರಾಮಾಯಣವೂ 'ಇದೆ' ; ಬಹುಶಃ ಅವುಗಳಿಗಿಂತಲೂ ಸುಸ್ಥಿರವಾಗಿ ಸಮಧಿಕವಾಗಿ ಸತ್ಯತರವಾಗಿ ಬಾಹ್ಯಾಭ್ಯಂತರಗಳನ್ನೂ ಲೋಕಲೋಕ ಗಳನ್ನೂ ಆಕ್ರಮಿಸಿ, ವ್ಯಾಪಿಸಿ, ಸೃಷ್ಟಿಯ ವಿಕಾಸರೂಪವಾದ ಪರಿಣಾಮಪಥದಲ್ಲಿ ಒಂದು ಪರಿವರ್ತನಾ ಸಮರ್ಥವಾದ ಸಾರಥಿಶಕ್ತಿಯಾಗಿದೆ. ಪ್ರಕೃತಿಯ ಪರ್ವತಾರಣ್ಯ ಗಳನ್ನು ಯಥಾಶಕ್ತಿಯಾಗಿ ಉಪಯೋಗಿಸಿಕೊಳ್ಳುವಂತೆ ರಾಮಾಯಣವನ್ನೂ ಉಪ ಯೋಗಿಸಿಕೊಳ್ಳಬಹುದು. ಆ ಪರ್ವತದ ಬಂಡೆಗಳಲ್ಲಿ ಸಾಮರ್ಥ್ಯವಿರುವವರು ಯಾರು ಬೇಕಾದರೂ ತಂತಮ್ಮ ಪ್ರತಿಭೆಯ ಕಲ್ಪನಾ ಕೃತಿಗಳನ್ನು ಕಾಣಬಹುದು ; ಶಿಲ್ಪಕೃತಿ ಗಳನ್ನು ಕಡೆಯಬಹುದು. ಆ ಅರಣ್ಯದ ಅಂಶದಿಂದ ತಂತಮ್ಮ ದರ್ಶನಕ್ಕೆ ಅನುರೂಪ ವಾಗಿ ಎಂತಹ ನಂದನೋದ್ಯಾನಗಳನ್ನು ಬೇಕಾದರೂ ರಚಿಸಿಕೊಳ್ಳಬಹುದು. ವಾಲ್ಮೀಕಿಯ ದಿವ್ಯಕೃತಿ ಪ್ರಕೃತಿಯ ಮೂಲಭೂತವಸ್ತುಗಳಂತೆ ಶಕ್ತಿಗಳಂತೆ ಅಪೌರುಷೇಯವಾಗಿ ಹೋಗಿದೆ. ಆದ್ದರಿಂದಲೆ ಅದು ವೇದಪಟ್ಟಕ್ಕೂ ಏರಿದೆ.

ಕವಿಮಹರ್ಷಿ ಅಂದು ಹಾಡಿದ ರಾಮಾಯಣ ಇಂದು ಮತ್ತೊಮ್ಮೆ ನಮ್ಮಲ್ಲಿ ಮೂಡಿದ ಹೊರತು ಸಾರ್ಥಕವಾಗುವುದಿಲ್ಲ. ಏಕೆಂದರೆ ಕೃತಿಯ ರಸಾಸ್ವಾದನೆಯೂ

ಕೃತಿರಚನೆಯಂತೆಯೆ ಒಂದು ಸೃಷ್ಟಿಕಾರ್ಯ. ಓದುವ ಅಥವಾ ಆಲಿಸುವ ನಮ್ಮ ಒಬ್ಬೊಬ್ಬರ ಹೃದಯದಲ್ಲಿಯೂ ರಾಮಾಯಣದ ಪುನಃಸೃಷ್ಟಿಯಾಗಬೇಕು. ಹಾಗೆ ಒಂದೊಂದು ಚೇತನದಲ್ಲಿಯೂ ರಾಮಾಯಣಾವತಾರವಾಗುವುದರಲ್ಲಿಯೆ ವಾಲ್ಮೀಕಿಯ ಕೃತಿ ಸಾರ್ಥಕತೆ ಪಡೆಯುತ್ತದೆ; ನಮ್ಮ ಬಾಳುವೆಗೂ ಪುರುಷಾರ್ಥ ಸಿದ್ಧಿಯಾಗುತ್ತದೆ.

ಅಂತಹ ರಸಸಾಧನೆಗೆ ನಮಗೆ ಬೇಕಾದುದು ಲೌಕಿಕವಾದ ಪ್ರತಿಕೃತಿ ದೃಷ್ಟಿಯಲ್ಲ, ಸರ್ವಗ್ರಾಹಿಯಾದ ಪ್ರತಿಮಾದೃಷ್ಟಿ.[1] ಏಕೆಂದರೆ ರಾಮಾಯಣವು ಬರಿಯ ಲೌಕಿಕ ಚರಿತ್ರೆಯಲ್ಲ; ಲೀಲಾಸತ್ಯಗಳ ಹಿಂದಿರುವ ನಿತ್ಯಸತ್ಯಗಳನ್ನು ಪ್ರತಿಬಿಂಬಿಸುವ ಅದು ಒಂದು ದರ್ಶನಕೃತಿ.[2]

ಒಮ್ಮೆ ಆಗಿಹೋದ ಚರಿತ್ರೆ ಮತ್ತೆ ನಡೆಯಲಾರದು. ಆದರೆ ವಾಲ್ಮೀಕಿಯ ಮಹಾಕೃತಿ ಚರಿತ್ರೆಯಲ್ಲ, ಕಾವ್ಯ; ಆ ಚರಿತ್ರೆ ವಾಲ್ಮೀಕಿಯ ಚಿದ್ರಂಗದಲ್ಲಿ ನಡೆದದ್ದು. ಕಾಲದೇಶಾತೀತವಾಗಿರುವುದರಿಂದ ನಿರಂತರವಾಗಿ ನಡೆಯುತ್ತಿರುವ ಆ ಶಾಶ್ವತಘಟನಾ ಪರಂಪರೆ ಮತ್ತೆ ಇನ್ನಾವ ಸಹೃದಯನ ಚಿದ್ರಂಗದಲ್ಲಿಯೂ ಮತ್ತೆ ಮತ್ತೆ ನಡೆಯಬಹುದು.

ಅಕ್ಬರನ ಅಳ್ವಿಕೆಯೊಡನೆ ಆಂಜನೇಯನ ಸಮುದ್ರಲಂಘನವನ್ನು ಚಾರಿತ್ರಿಕವಾಗಿ ಹೋಲಿಸಿದರೆ ಎಂತಹ ಅವಿವೇಕವಾಗುತ್ತದೆ! ಒಂದು ಚರಿತ್ರೆ, ಮತ್ತೊಂದು ಕಾವ್ಯ. ಚರಿತ್ರೆ ಒಂದುವೇಳೆ ಕವಿಯ ಅನುಭವವಾಗಿ ಕಾವ್ಯವಾಗಬಹುದು. ಆದರೆ ಕಾವ್ಯ ನಡೆದ ಚರಿತ್ರೆಯಾಗಲಾರದು. ಅದನ್ನು ಚರಿತ್ರೆ ಓದುವ ದೃಷ್ಟಿಯಿಂದ ಓದಬಾರದು. ಹಾಗೆ ಮಾಡಿದರೆ ಚರಿತ್ರೆಯ ಅಧ್ಯಯನದಿಂದ ಒದಗಬಹುದಾದ ಅಭ್ಯುದಯದಿಂದಲೂ ದೂರವಾಗಿ, ಕಾವ್ಯಪಾರಾಯಣದಿಂದ ಲಭಿಸುವ ನಿಃಶ್ರೇಯಸದಿಂದಲೂ ವಂಚಿತರಾಗುವ ಉಭಯನಷ್ಟಕ್ಕೆ ಪಕ್ಕಾಗುತ್ತೇವೆ.

ವಾಲ್ಮೀಕಿಯ ರಾಮಾಯಣದಲ್ಲಿ ಲೋಕಚರಿತ್ರೆಯನ್ನು ಅರಸಿ ಕಾಣಲೆಳಸುವ ಸಂಶೋಧನೆಯ ವಿದ್ವತ್ತು, ಕಬ್ಬಿನಲ್ಲಿ ದೊಣ್ಣೆಯನ್ನು ಮಾತ್ರ ಕಾಣುವ ಗಾಂಪನಂತೆ, ಮುಖ್ಯಪ್ರಯೋಜನದಿಂದ ಸಂಪೂರ್ಣವಾಗಿ ವಂಚಿತವಾಗಿ, ತಾನೂ ದಾರಿತಪ್ಪಿ ದಿಕ್ಕುಗೆಡುವುದಲ್ಲದೆ ಇತರರನ್ನೂ ಕಂಗೆಡಿಸಿ ಹಾನಿಗೀಡುಮಾಡುತ್ತದೆ. ಕಬ್ಬಿನ ಕೋಲಿನಲ್ಲಿ ದೊಣ್ಣೆಯತನ ಇಲ್ಲ ಎಂದಲ್ಲ. ಅದನ್ನು ಎಮ್ಮೆ ಹೊಡೆಯುವುದಕ್ಕೆ ಉಪಯೋಗಿಸಲು ಸಾಧ್ಯವಿಲ್ಲ ಎಂದೂ ಅಲ್ಲ. ಆದರೆ ಕಬ್ಬಿನ ಪ್ರಧಾನೋದ್ದೇಶ ರಸಮಾಧುರ್ಯ. ಅದರ ಮುಖ್ಯ ಸತ್ಯವೂ ಅದರ ಸಿಹಿಯಲ್ಲಿಯೆ ನಿಹಿತ. ಬೆಲ್ಲವೆ ಅದರ ಸತ್ಯಸ್ಯ ಸತ್ಯ.

---

[1] ಕುವೆಂಪು ಅವರ 'ತಪೋನಂದನ' ಗ್ರಂಥದಲ್ಲಿ 'ಪ್ರತಿಮಾ ಮತ್ತು ಪ್ರತಿಕೃತಿ' ಎಂಬ ಪ್ರಬಂಧವನ್ನು ನೋಡಿ.

[2] ಕುವೆಂಪು ಅವರ 'ತಪೋನಂದನ' ಗ್ರಂಥದಲ್ಲಿಯ 'ಋಷಿ ವಾಲ್ಮೀಕಿಯ ಕಾವ್ಯಜಾಹ್ನವಿ' ಎಂಬ ಪ್ರಬಂಧವನ್ನು ನೋಡಿ.

ಉಳಿದುದೆಲ್ಲ ಮುಖ್ಯೋದ್ದೇಶ ಮತ್ತುಪರಮ ಪ್ರಯೋಜನದ ದೃಷ್ಟಿಯಿಂದ ಅಪ್ರಕೃತ; ಹೊರಗೆಸೆಯಬೇಕಾದ ಹಿಪ್ಪೆ; ನೀರು ಕಾಯಿಸಲು ಬಚ್ಚಲೊಲೆಗೆ ಹಾಕಬಹುದಾದ ಅಳ್ಳಟ್ಟಿ. ಕಬ್ಬಿನಲ್ಲಿ ಅಳ್ಳಟ್ಟಿ ಇಲ್ಲವೆಂದಲ್ಲ; ಆ ಅಳ್ಳಟ್ಟಿ ಉಪಯೋಗಕ್ಕೆ ಬಾರದು ಎಂದೂ ಅಲ್ಲ. ಅದನ್ನೂ ಶೇಖರಿಸಿ ಕಟ್ಟಗೆ ಮಾಡಿ ಮಾರುವವರು ಮಾರಲಿ. ಅದಕ್ಕೂ ಬೆಲೆ ಇದೆ. ಆದರೆ ಅಂತಹರು ತಮ್ಮ ಅಳ್ಳಟ್ಟಿಯ ಸತ್ಯದಿಂದ ಬೆಲ್ಲವನ್ನು ಮಿಥ್ಯಗೊಳಿಸುವ ಆತ್ಮಹಾನಿಕರವಾದ ನಷ್ಟಕಾರ್ಯಕ್ಕೆ ಕೈ ಹಾಕಬಾರದು. ರಾಮಾಯಣದಲ್ಲಿ ಉತ್ತರ ದಕ್ಷಿಣ ಸಂಸ್ಕೃತಿಗಳ ಸಂಘಟ್ಟಣೆಯನ್ನಾಗಲಿ, ಆರ್ಯ ದ್ರಾವಿಡ ನಾಗರಿಕತೆಗಳಿಗೆ ಒದಗಿದ ಹೋರಾಟವನ್ನಾಗಲಿ ಕೆದಕುವುದು ವಾಲ್ಮೀಕಿಯ ಕಾವ್ಯೋದ್ದೇಶಕ್ಕೆ ಅನ್ಯ. ಕೈಕೆಯಂತಹರ ವರ್ತನೆಯನ್ನು ನಿರ್ಲಕ್ಷಿಸಿ ಅಯೋಧ್ಯೆಯ ಆರ್ಯರ ಸಾಮಾಜಿಕ ಸಂಸ್ಕೃತಿಯನ್ನು ರಾಮನ ಚಾರಿತ್ರ್ಯದಿಂದ ಮಾತ್ರವೆ ಅಳೆಯುವುದೂ, ಅಂಜನೇಯನಂತಹರ ಮಹದ್ವ್ಯಕ್ತಿತ್ವವನ್ನು ಗಮನಿಸದೆ ಕಿಷ್ಕಿಂಧೆಯ ವಾನರರ ಸಾಮಾಜಿಕ ಸಂಸ್ಕೃತಿಯನ್ನು ವಾಲಿ ತಾರೆಯರ ಚಾರಿತ್ರದಿಂದ ಮಾತ್ರವೆ ನಿರ್ಧರಿಸಲೆಳಸುವುದೂ, ವಿಭೀಷಣನಂತಹ ಸಾತ್ತ್ವಿಕಶ್ರೀಯನ್ನು ಚೆನ್ಮರೆಗೆ ತಳ್ಳಿ ಲಂಕೆಯ ಸಂಸ್ಕೃತಿಯನ್ನು ರಾವಣನ ನಡತೆಯಿಂದ ಮಾತ್ರವೆ ನಿರ್ಣಯಿಸುವುದೂ ಲೌಕಿಕವಾದ ಐತಿಹಾಸಿಕ ಸಂಶೋಧನೆಗೂ ಮಾನ ತರುವ ರೀತಿಯಲ್ಲ!

ಒಮ್ಮೆ ದಕ್ಷಿಣೇಶ್ವರದ ಭವತಾರಿಣಿಯ ವಿಗ್ರಹವನ್ನು ಕುರಿತು ಮಾತನಾಡುತ್ತಾ ಅದರ ಅಂದ ಚಂದ ಕಲೆಗಳನ್ನು ಪ್ರಶಂಸಿಸುತ್ತಾ ನೆರೆದಿದ್ದ ಭಕ್ತರಲ್ಲೊಬ್ಬರು ಅವನ್ನು ಇಂತಹ ಶಿಲ್ಪಿ ಮಾಡಿದನೆಂದೂ ಆ ಕಲ್ಲು ಇಂತಹ ಕಡೆಯಲ್ಲಿ ದೊರೆಯಿತೆಂದೂ ಅದು ಇಂತಹ ಜಾತಿಗೆ ಸೇರಿದ ಶಿಲೆಯೆಂದೂ ಆ ವಿಗ್ರಹದ ಚರಿತ್ರೆಯನ್ನು ವಿವರಿಸಿದರಂತೆ. ಆಲಿಸುತ್ತಾ ಕುಳಿತಿದ್ದ ಪರಮಹಂಸರು "ನನಗದೊಂದೂ ಗೊತ್ತಿಲ್ಲ. ನನಗವಳು ತಾಯಿ, ಜಗನ್ಮಾತೆ, ಚಿನ್ಮಯಿ ಭಗವತಿ!" ಎಂದು ಭಾವದಿಂದ ಕುಳಿತಲ್ಲಿಂದಲೆ ನಮಿಸಿದರಂತೆ. ಪರಮಹಂಸರಿಗೆ ಆ ವಿಗ್ರಹದ ಚಿನ್ಮಯತೆ ಪ್ರತ್ಯಕ್ಷಾನುಭೂತಿ. ಆದರೆ ಇತರರ ಭಾಗಕ್ಕೆ ಅದು ಅತಿಕ್ರಾಂತಗೋಚರ; ಅವರಿಗೆ ಅದು ಮೃಣ್ಮಯ; ಇತರ ವಸ್ತುಗಳಂತೆ ಅದೂ ಒಂದು ಮೃದ್ವಸ್ತು. ಅದಕ್ಕೊಂದು ಲೋಕಚರಿತ್ರೆಯಿದೆ. ಅದನ್ನೆ ಆ ಭಕ್ತರು ವಿವರಿಸಿದ್ದು. ಆ ವಿವರಣೆ ಅಸತ್ಯವಲ್ಲ. ಆ ಸ್ಥಾನದಲ್ಲಿ, ದೇವಸ್ಥಾನದಲ್ಲಿ ಅಪ್ರಕೃತ, ಅಷ್ಟೆ. ಆ ವಿಗ್ರಹ ಮ್ಯೂಸಿಯಂ ರೀತಿಯ ವಸ್ತುಸಂಗ್ರಹ ಶಾಲೆಯಲ್ಲಾಗಲಿ ಅಥವಾ ಕಲಾಪ್ರದರ್ಶನ ಮಂದಿರದಲ್ಲಾಗಲಿ ಇದ್ದಿದ್ದರೆ ಆ ವಿವರಣೆ ಪರಮ ಸತ್ಯವೂ ಆಗಬಹುದಿತ್ತು. ಏಕೆಂದರೆ ಅಲ್ಲಿ ವಿಗ್ರಹದ ಉದ್ದೇಶ ಮತ್ತು ಪ್ರಯೋಜನ ಅಷ್ಟರಲ್ಲಿಯೆ ಪರ್ಯವಸಾನವಾಗಿ, ಅಷ್ಟರಿಂದಲೆ ಪರಿಸಮಾಪ್ತಿಗೊಳ್ಳುತ್ತಿತ್ತು. ಆದರೆ ಇಲ್ಲಿ ಹಾಗಲ್ಲ. ಆ ವಿಗ್ರಹ ದೇವಸ್ಥಾನದಲ್ಲಿ ಪ್ರತಿಷ್ಠಿತವಾದಂದಿನಿಂದ ಅದರ ಉದ್ದೇಶ ಬೇರೆ, ಪ್ರಯೋಜನ ಬೇರೆ, ಅದು ಅಲ್ಲ, ಆಕೆ ಚಿನ್ಮಯಿ ಭಗವತಿ. ಪೂಜೆ ಸಲ್ಲುವುದೂ ಕಲ್ಲಿನ ವಿಗ್ರಹಕ್ಕಲ್ಲ; ಚಿನ್ಮಯಿ ಭಗವತಿಗೆ. ಭಕ್ತನು ಕಾಣಬೇಕಾದುದೂ ಕಲ್ಲಿನ ಪ್ರತಿಮೆ

ಯನ್ನಲ್ಲ; ಚಿನ್ಮಯಿೀ ಮಾತೆಯನ್ನು. ಎಲ್ಲರಿಗೂ ಹಾಗೆ ಕಾಣಿಸದಿರಬಹುದು. ಕಾಣಿಸದಿದ್ದ ಮಾತ್ರಕ್ಕೆ ಅವರು ಕಂಡದ್ದೆ, ಎಂದರೆ ಇಲ್ಲಿ ಕಲ್ಲಿನ ಪ್ರತಿಮೆಯೆ, ಪರಮ ಸತ್ಯವಾಗುವುದಿಲ್ಲ. ಚಿನ್ಮಯೀ ಭಗವತಿಯನ್ನು ಕಾಣುವವರೆಗೂ ಬೆಳೆಯಬೇಕಾದ್ದು ಭಕ್ತನ ಕರ್ತವ್ಯ. ಕಲ್ಲಿನಲ್ಲಿ ಚಿನ್ಮಯೀ ಭಗವತಿಯನ್ನು ಕಾಣುವುದು ಎಂಬರ್ಥದಲ್ಲಿ ಅಲ್ಲ; ಕಲ್ಲು ಕಾಣಲೆ ಬಾರದು. ಕಲ್ಲು ಕಾಣಿಸುವುದೇ ಇಲ್ಲ. ಚಿನ್ಮಯೀ ಭಗವತಿಯ ಹೊರತು ಇನ್ನೇನೂ ಇರುವುದೂ ಇಲ್ಲ, ಕಾಣಿಸುವುದೂ ಇಲ್ಲ. ಆ ಅನುಭೂತಿಯ ಸಿದ್ಧಿಯೆ ದೇವಸ್ಥಾನದಲ್ಲಿ ಭಗವತಿಯ ವಿಗ್ರಹವನ್ನು ಪ್ರತಿಷ್ಠಿಸಿದುದರ ಮುಖ್ಯೋದ್ದೇಶ; ಅದೇ ಪರಮ ಪ್ರಯೋಜನ. ಉಳಿದುದೆಲ್ಲ ಅನ್ಯ, ಅಪ್ರಕೃತ, ಅನರ್ಥ, ವ್ಯರ್ಥ.

ರಾಮಾಯಣದ ಮೂಲವಸ್ತುವಿನಲ್ಲಿ ಲೌಕಿಕವಾದ ಚರಿತ್ರೆ, ಭೂಗೋಳಗಳೇನಾದರೂ ಇರಲಿ, ಭವತಾರಿಣಿಯ ವಿಗ್ರಹದ ಕಲ್ಲು ಅದಾವುದೊ ಬೆಟ್ಟದಲ್ಲಿ ಅದಾವುದೊ ಕೆರೆಯ ಪಕ್ಕದಲ್ಲಿ ಅದಾವುದೊ ಮರದ ಬುಡದಲ್ಲಿ ಸಿಕ್ಕಿದಂತೆ. ಆದರೆ ಸಹೃದಯರಾದ ನಮಗೆ ಅದೆಲ್ಲ ಸಂಪೂರ್ಣವಾಗಿ ಅಪ್ರಕೃತ, ಅನಾವಶ್ಯಕ; ರಸಾಸ್ವಾದನೆಯ ದೃಷ್ಟಿಯಿಂದಂತೂ ಅತ್ಯಂತ ತಿರಸ್ಕೃತ. ಮಾತ್ರವಲ್ಲ, ಶ್ರದ್ಧೆಯ ಏಕಾಗ್ರತೆಗೆ ಭಂಗ ತರುವುದರಿಂದ ಹಾನಿಕರ. ಏಕೆಂದರೆ ಲೋಕಧರ್ಮಿಯಾದ ಚರಿತ್ರೆಯ ಒರೆಗಲ್ಲಿಗೆ ಹಚ್ಚಿದರೆ ರಾಮಾಯಣದ ಮುಕ್ಕಾಲುಪಾಲು ಕಥೆ ಮಕ್ಕಳ ಮನರಂಜನೆಯ ಕಟ್ಟುಕಥೆಯಾಗುತ್ತದೆ. ಮಾಡಲು ಕೆಲಸವಿರುವ ಬೆಳೆದ ಮನಸ್ಸಿನ ಗೌರವಕ್ಕೂ ಆಸಕ್ತಿಗೂ ಪಾತ್ರವಾಗಲು ಅನರ್ಹವಾಗಲೂಬಹುದು. ಪುತ್ರಕಾಮೇಷ್ಟಿಯಲ್ಲಿ ಅಗ್ನಿಪುರುಷನು ಮೈದೋರಿದುದಾಗಲಿ, ದಿವ್ಯಪಾಯಸ ಸೇವನೆಯಿಂದ ಕೌಸಲ್ಯಾದಿ ಸತಿಯರು ಗರ್ಭಧಾರಣೆ ಮಾಡಿದುದಾಗಲಿ, ಸೀತೆ ಅಯೋನಿಜೆಯಾದ ಭೂಮಿಸಂಭವೆ ಎಂಬುದಾಗಲಿ, ವಿರಾಧಾದಿ ರಾಕ್ಷಸರ ಚಿತ್ರವಾಗಲಿ, ಕಪಿಗಳೂ ಹದ್ದುಗಳೂ ಕರಡಿಗಳೂ ಮಾತನಾಡಿ ಮನುಷ್ಯರಂತೆ ವ್ಯವಹರಿಸಿದುವು ಎಂಬುದಾಗಲಿ, ಕೋತಿಯೊಂದು ಆಕಾಶಕ್ಕೆ ಬೆಳೆದು ಸಮುದ್ರವನ್ನು ನೆಗೆಯಿತು ಎಂಬುದಾಗಲಿ, ಹತ್ತುತಲೆಯ ರಕ್ಕಸನಿದ್ದನೆಂಬುದಾಗಲಿ, ಒಂದಲ್ಲ ಎರಡಲ್ಲ ಇಂತಹ ನೂರಾರು ಸಂಗತಿಗಳು ಬರಿಯ ಕಲ್ಪನಾ ವಿನೋದದ ಸ್ವಾರಸ್ಯಸೃಷ್ಟಿಗಳಾಗುತ್ತವೆಯೆ ಹೊರತು ನಮ್ಮ ಗಂಭೀರ ಪ್ರಜ್ಞೆಗೆ ಧ್ಯಾನವಿಷಯಗಳಾಗುವಷ್ಟು ಗೌರವಾಸ್ಪದವಾಗಲಾರವು; ನಮ್ಮ ಹೃತ್ಪೂರ್ವಕವಾದ ಪೂಜೆಗಂತೂ ಬಹುದೂರವಾಗಿಯೆ ಉಳಿಯುತ್ತವೆ. ಆದ್ದರಿಂದ ನಾವು ವಾಲ್ಮೀಕಿಯ ಶ್ರೀಮದ್ರಾಮಾಯಣವನ್ನು ಲೌಕಿಕವಾದ ಪ್ರತಿಕೃತಿದೃಷ್ಟಿಯಿಂದ ನೋಡುವ ವಿಚಿಕಿತ್ಸೆಗೆ ಹೋಗದೆ ದರ್ಶನಧ್ವನಿಯ ಪ್ರತಿಮಾದೃಷ್ಟಿಯಿಂದ ಮಾತ್ರ ನೋಡಬೇಕಾಗುತ್ತದೆ.[1]

ನಮ್ಮ ದೇಶಕ್ಕೆ ರಾಜಕೀಯರೂಪವಾದ ಸ್ವಾತಂತ್ರ್ಯಸಿದ್ಧಿಯಾದ ಈ ಸಂಧಿ ಸಮಯದಲ್ಲಿ, ಎಲ್ಲ ವಲಯಗಳಲ್ಲಿಯೂ ಜನದ ಸತ್ಯಸೌಜನ್ಯನಿಷ್ಠಾಭಕ್ತಿಗಳು ಶಿಥಿಲ

---

[1] 'ತಪೋನಂದನ'ದಲ್ಲಿರುವ ಹಿಂದೆ ಹೇಳಿದ ಎರಡು ಪ್ರಬಂಧಗಳ ಜೊತೆಗೆ 'ಕಾವ್ಯ ವಿಮರ್ಶೆಯಲ್ಲಿ ಪೂರ್ಣದೃಷ್ಟಿ' ಎಂಬ ಪ್ರಬಂಧವನ್ನೂ ನೋಡಿ.

ವಾಗುತ್ತಿವೆ ಎಂಬ ಶಂಕೆಗೆ ಆಸ್ಪದವಾಗುತ್ತಿರುವಲ್ಲಿ, ದೇವರು ಸತ್ಯ ಧರ್ಮ ಆತ್ಮ ಕರ್ಮ ಜನ್ಮಾಂತರ ಪುಣ್ಯ ಮೊದಲಾದ ತತ್ತ್ವ ಮತ್ತು ಪುರುಷಾರ್ಥಗಳಲ್ಲಿ ನಂಬುಗೆಯೂ ಭರವಸೆಯೂ ಕುಗ್ಗುತ್ತಿರುವ ಈ ದುರಂತ ಸನ್ನಿವೇಶದಲ್ಲಿ, ಸ್ವಪ್ರತಿಷ್ಠೆ ಸ್ವಾರ್ಥಗಳೆ ತಮ್ಮ ಸರ್ವಸ್ವವೊ ಎಂಬಂತೆ ಮುಂದಾಳುಗಳಾಗಿರುವ ಶ್ರೇಷ್ಠರೆಂಬುವರು ಕೂಡ ವರ್ತಿಸುತ್ತಿರುವ ಈ ದುರ್ಮುಹೂರ್ತದಲ್ಲಿ ರಾಮಾಯಣದ ದಿವ್ಯಹಸ್ತ ನಮ್ಮನ್ನು ನಿಜವಾಗಿಯೂ ಮೇಲೆತ್ತಬಲ್ಲುದು ; ಅದರ ಅಮರ ಸಂಗೀತ ನಮ್ಮ ಶುಷ್ಕಜೀವನದಲ್ಲಿ ಅಮೃತ ರಸ ಸಂಚಾರವಾಗುವಂತೆ ಮಾಡಬಲ್ಲುದು; ಶಾಪಗ್ರಸ್ತವಾದ ನಮ್ಮ ಹೃದಯದ ಅಹಲ್ಯೆಯನ್ನು ಪಾವನ ಪಾದಸ್ಪರ್ಶನದಿಂದ ಉದ್ಧಾರಮಾಡಬಲ್ಲುದು ; ನಮ್ಮ ಸ್ವಾರ್ಥದ ದುಷ್ಟ ವಿರಾಧನನ್ನು ಸಂಹರಿಸಿ ಅವನಿಂದಲೆ ನಮಗೆ ದಾರಿತೋರುವ ಪರಾರ್ಥತೆಯ ಬೃಂದಾರಕನನ್ನೂ ಮೂಡಿಸಬಲ್ಲುದು ; ನಮ್ಮಲ್ಲಿ ಹುದುಗಿರುವ ಆಂಜನೇಯ ಶಕ್ತಿಯನ್ನು ಎಚ್ಚರಿಸಿ, ಉಬ್ಬಿಸಿ, ಸಾಗರೋಲ್ಲಂಘನದ ಸಾಹಸಕ್ಕೆ ಅದನ್ನು ಪ್ರಚೋದಿಸಿ, ಹತ್ತಲ್ಲ ಸಾವಿರ ತಲೆಯ ನಮ್ಮ ಅವಿದ್ಯಾಹಂಕಾರ ರಾವಣನನ್ನು ಕತ್ತರಿಸಿ, ಸೆರೆಸಿಕ್ಕಿ ತತ್ತರಿಸುತ್ತಿರುವ ನಮ್ಮ ಜೀವನದೇವತಾ ಸೀತೆ ತನ್ನ ಶ್ರೀರಾಮನನ್ನು ಮತ್ತೆ ಸೇರುವಂತೆ ಬದುಕನ್ನು ಆಸುರೀಶಕ್ತಿಗಳಿಂದ ಬಿಡಿಸಿ ದೈವೀಶಕ್ತಿಗಳ ಕಡೆಗೆ ಕೊಂಡೊಯ್ಯಬಲ್ಲುದು. ಕೊನೆಯದಾಗಿ ವ್ಯಕ್ತಿವ್ಯಕ್ತಿಯಲ್ಲಿಯೂ ಶ್ರೀರಾಮ ಪಟ್ಟಾಭಿಷೇಕವಾಗುವಂತೆ ಮಾಡಿ, ಸದ್ಯಕ್ಕೆ ನಿತ್ಯಸ್ಥಿತಿಯಲ್ಲಿ ಅತೀತವಾಗಿರುವ ರಾಮರಾಜ್ಯವು ಕ್ರಮಕ್ರಮೇಣ ಈ ಲೀಲಾಲೋಕಕ್ಕೂ ಅವತರಿಸಿ, ಇಲ್ಲಿಯ ಉಪಾಧಿಗಳಲ್ಲಿಯೆ ಆ ಋತಶಕ್ತಿ ನಿರುಪಾಧಿಕವಾಗಿ ಆವಿರ್ಭವಿಸಿ, ಮರ್ತ್ಯವನ್ನೆ ಅಮರ್ತ್ಯವನ್ನಾಗಿಯೂ ಭೂಮಿಯನ್ನೆ ವೈಕುಂಠವನ್ನಾಗಿಯೂ ಪರಿವರ್ತಿಸುವ ದೇವತಾ ಕಾರ್ಯದಲ್ಲಿ ದಿವ್ಯಶಿಲ್ಪಿಯಾಗಬಲ್ಲುದು.[1]

ಹಿಂದೆ ಊಹೆಗೆ ಮೀರಿ ವಿಸ್ತಾರವಾದಂತಿದ್ದ ಭೂಮಂಡಲವು ವೈಜ್ಞಾನಿಕವಾದ ಪ್ರಗತಿಯಿಂದ ಇಂದು ಮುದುರಿ ಕುಗ್ಗಿ ಕಿರಿದಾಗಿದೆ. ಪ್ರಪಂಚ ನಿಜವಾಗಿಯೂ ಒಂದು ಎಂಬುದು ಹೆಚ್ಚು ಹೆಚ್ಚು ಅನುಭವಕ್ಕೆ ಬರುತ್ತಿದೆ. ವಿಮಾನ ರೇಡಿಯೊ ಪತ್ರಿಕೆ ಸಿನಿಮಾ ಮೊದಲಾದ ವೇಗಯಂತ್ರಗಳೂ ಸಲಕರಣೆಗಳೂ ಲೋಕದ ಸುದ್ದಿಯನ್ನೆಲ್ಲ ದಿನಬೆಳಗಾದರೆ ನಮ್ಮ ಮನೆಯ ಬಾಗಿಲಿಗೆ ತಂದು ಹಾಕುತ್ತಿವೆ. ಜಗತ್ತಿನ ತಾಪತ್ರಯವೆಲ್ಲ ನಮ್ಮ ಸ್ವಂತ ತಾಪತ್ರಯವಾಗತೊಡಗಿದೆ. ಹಿಂದೆ ಒಂದು ಮನೆಯಲ್ಲಿಯೊ ಒಂದು ಹಳ್ಳಿಯಲ್ಲಿಯೊ ಒಂದು ಹೋಬಳಿಯಲ್ಲಿಯೊ ಹೆಚ್ಚು ಎಂದರೆ ಒಂದು ಸಂಸ್ಥಾನದಲ್ಲಿಯೊ ಸುಳಿದು ಸುತ್ತಿ ತೃಪ್ತಿಪಟ್ಟುಕೊಳ್ಳುತ್ತಿದ್ದ ನಮ್ಮ ಕುತೂಹಲ ಇಂದು

---

[1] ಅದೆಂತಹ ಸೈನ್ಯವಾಗಲಿ ಅದೆಂತಹ ರಾಜಕಾರಣನೈಪುಣ್ಯವಾಗಲಿ ಹಿಂದೆಂದೂ ಸಾಧಿಸಿ ರಕ್ಷಿಸಲಾರದಿದ್ದ ಭಾರತವರ್ಷದ ಅಖಂಡತೆಯನ್ನೂ ಐಕ್ಯತೆಯನ್ನೂ ಶತಶತಮಾನಗಳಿಂದಲೂ ಸಾಧಿಸಿ ರಕ್ಷಿಸಿಕೊಂಡು ಬಂದಿರುವಂತೆಯೆ ಸಾಧಿಸಿ ರಕ್ಷಿಸಿಕೊಂಡು ಬರುವುದರಲ್ಲಿ ಸಂದೇಹವಿಲ್ಲ, ಅಲೋಕಸಾಮಾನ್ಯವಾದ ಈ ಶ್ರೀರಾಮಾಯಣ ದಿವ್ಯಶಿಲ್ಪಿ!

ದೇಶವಿದೇಶಗಳಲ್ಲಿ ಖಂಡಖಂಡಗಳಲ್ಲಿ ಕಡಲಾಚೆಯ ಬಹುದೂರದ ಭೂಭಾಗಗಳಲ್ಲಿ ಬಹು ಸುಲಭವಾಗಿ ನಿರಪಾಯವಾಗಿ ಸುಳಿದು ಸುತ್ತಿದರೂ ಸಂತೃಪ್ತಿ ಹೊಂದಲಾರದಷ್ಟು ಕೆರಳಿ ನಿಂತಿದೆ. ಹಿಂದೆ ನಮ್ಮ ಮನಃಶಕ್ತಿ ಒಂದೊ ಎರಡೊ ಮೂರೊ ವಿಷಯಗಳಲ್ಲಿ ನಿಂತು ಅವುಗಳಲ್ಲಿಯೆ ಆಳವಾಗಿ ಪ್ರವೇಶಿಸುತ್ತಿತ್ತು. ಈಗಲಾದರೊ ತಿಳಿಯಬೇಕಾದ ವಿಷಯಗಳ ಸಂಖ್ಯೆಗೆ ಪರಿಮಿತಿಯೆ ಇಲ್ಲ ಎಂಬಂತೆ ತೋರುತ್ತಿದೆ. ಪರಿಣಾಮವಾಗಿ ಯಾವ ವಿಷಯದಲ್ಲಿಯೂ ಆಳವಾಗಿ ಪ್ರವೇಶಿಸಲು ಸಮಯವಾಗಲಿ ಶಕ್ತಿಯಾಗಲಿ ಆಸಕ್ತಿಯಾಗಲಿ ಬಹುಜನರ ಪಾಲಿಗೆ ಇಲ್ಲದಂತಾಗಿದೆ, ನಶಿಸಿಹೋಗಿದೆ. ನಮ್ಮ ಆಸಕ್ತಿ ಶಾಖೋಪಶಾಖೆಗಳಾಗಿ ಕವಲೊಡೆದು ಬರಲುಬರಲಾಗಿ ನಿಂತಿದೆ. ಯಾವ ಕೊಂಬೆಗೂ ಬಲ್ಪಿಲ್ಲ. ತೊಲೆಯಾಗುವ ತೋರವಿಲ್ಲ; ಕಂಭವಾಗುವ ಭಾರವಿಲ್ಲ; ಹೊರೆಹೊರುವ ಚೈತನ್ಯವಿಲ್ಲ. ಇನ್ನು ಪೊರಕೆಯಾಗಲು ಮಾತ್ರ ಅರ್ಹವಾಗಿರುವ ಆ ಬರಲು ಕಡ್ಡಿಗಳಿಂದ ಬದುಕಿಗೆ ಉಪಯೋಗವಾಗುವಂತೆ ನಾಲ್ಕಾರು ಕಾಲ ಬಾಳುವ ಮನೆಯನ್ನಾಗಲಿ ಗುಡಿಯನ್ನಾಗಲಿ ಕಟ್ಟುವುದೆಂತು? ಆ ಬಡಕಲು ಆಸಕ್ತಿಗೂ ತನ್ನ ಸುತ್ತಮುತ್ತಣದರಲ್ಲಿ ತಾತ್ಸಾರ, ತಿರಸ್ಕಾರ. ವೇಗಸೌಕರ್ಯ ದೊರಕಿರುವುದರಿಂದ ಅದು ಅರ್ಜೆಂಟೈನಾ ಭೂಕಂಪದ ವಿಚಾರದಲ್ಲಿ ಅನುಕಂಪ ತಾಳುವ ಹೊರೆಹೊಣೆಯಿಲ್ಲದ ಕರುಣರಸಾನುಭವದ ಸೊಗಸಿಗೆ ಶರಣಾಗಲು ಇಷ್ಟಪಡುತ್ತದೆಯೆ ಹೊರತು ಪತ್ರಿಕೆಗಳಿಗೆ ವಿಷಯವಾಗದ ಅನಾಮಧೇಯರಾದ ನೆರೆಹೊರೆಯವರ ಹತ್ತಿರದವರ ಕಷ್ಟ ಸಂಕಟಗಳನ್ನು ಅಲಕ್ಷಿಸುತ್ತದೆ. ಮನೆಯ ಹಿಂಭಾಗದ ಗಿರಿನೆತ್ತಿಯಿಂದ ಸೂರ್ಯೋದಯವನ್ನು ಈಕ್ಷಿಸಲಾರದ ಅದು ಯಾವುದೊ ನೂರಾರು ಮೈಲಿ ದೂರವಿರುವ ಬೆಟ್ಟದ ಮೇಲಿಂದ ಸೂರ್ಯಾಸ್ತ ನೋಡಲು ಕೃತಕ ರಸಾವೇಶದಿಂದ ಧಾವಿಸುತ್ತದೆ: ಕಾರಣ—ಮೋಟಾರು ಕಾರಿದೆ, ಪೆಟ್ರೋಲಿದೆ! ಸಾಮಾನ್ಯದಲ್ಲಿ ಸಮೀಪದಲ್ಲಿ ಪರಿಚಿತವಾದುದರಲ್ಲಿ ದೈನಂದಿನ ಜೀವನದ ದೃಶ್ಯ ಘಟನೆ ವ್ಯಕ್ತಿ ವ್ಯಾಪಾರಗಳಲ್ಲಿ ನಮ್ಮ ಆಸಕ್ತಿಗೆ ಅರುಚಿಯಾಗಿದೆ. ಇದನ್ನೆಲ್ಲ ಗಮನಿಸಿದರೆ ನಮಗೇನೊ ಒಂದು ಅತೃಪ್ತಿಯ ಅಸ್ವಸ್ಥತೆಯ ಅಶಾಂತಿಯ ಸಾಂಕ್ರಾಮಿಕ ರುಜೆ ತಗುಲಿರುವಂತೆ ಭಾಸವಾಗುತ್ತದೆ.

ಭ್ರಮಾಶೀಲವಾಗಿ ಪರಿಭ್ರಮಿಸುತ್ತಿರುವ ಇಂತಹ ನಮ್ಮ ಚಿತ್ತಕ್ಕೆ ಒಂದು ಸ್ಥೈರ್ಯ, ಒಂದು ಶಮ, ಒಂದು ತುಷ್ಟಿ, ಒಂದು ಪ್ರಸನ್ನತೆ, ಮತಿಗೌರವ, ಆತ್ಮಪ್ರತ್ಯಯ ಇವುಗಳನ್ನು ಸಂಪಾದಿಸಬೇಕಾದರೆ ರಾಮಾಯಣದಂತಹ ಋಷಿಕೃತಿಗಳನ್ನೆ ನಾವು ಆಶ್ರಯಿಸಬೇಕಾಗುತ್ತದೆ. ಋಷಿದರ್ಶನ ನಮ್ಮ ಚೈತನ್ಯವನ್ನು ದೀಪ್ತಗೊಳಿಸುತ್ತದೆ; ಬರಿಯ ದೂರವಾದುದಕ್ಕೆ ಬೆಪ್ಪುಬೆಪ್ಪಾಗಿ ಮಾರುಹೋಗಿ ಬೆರಗಾಗುವ ಲಘುಚೇತನಕ್ಕೆ ತನ್ನ ದಿವ್ಯ ಗುರುತ್ವವನ್ನು ಅನುಗ್ರಹಿಸುತ್ತದೆ. ಬರಿಯ ರಾಜಕೀಯವಾದ ಪ್ರಖ್ಯಾತಿಗಾಗಲಿ ವೈಭವಕ್ಕಾಗಲಿ ದೀನವೃತ್ತಿಯಿಂದ ಸಾಷ್ಟಾಂಗನಮಸ್ಕಾರ ಮಾಡುವ ಗ್ರಾಮೀಣತೆಯಿಂದ ನಮ್ಮನ್ನು ಪಾರುಮಾಡುತ್ತದೆ. ನಮ್ಮ ಆಸಕ್ತಿಯನ್ನು ಸರ್ವತೋಮುಖವನ್ನಾಗಿಯೂ ವಿಶ್ವವ್ಯಾಪಕವನ್ನಾಗಿಯೂ ಮಾಡಿದರೂ ಅಸ್ಥಿರತೆಗೂ

ಅನಾವಶ್ಯಕವಾದ ಅಲಸ ಕುತೂಹಲಕ್ಕೂ ಅವಕಾಶವೀಯುವುದಿಲ್ಲ. ಅದನ್ನು ಔಚಿತ್ಯದ ಅಂಕೆಯಲ್ಲಿಟ್ಟು, ಆತ್ಮೋದ್ಧಾರಕ್ಕೆ ಆತ್ಮವಿಕಾಸಕ್ಕೆ ಆತ್ಮಸಾಕ್ಷಾತ್ಕಾರಕ್ಕೆ ಆತಂಕ ಒದಗದ ರೀತಿಯಲ್ಲಿ ನಮ್ಮನ್ನು ಮುನ್ನಡಸುತ್ತದೆ. ನಿಃಶ್ರೇಯಸಕರವಾದ ಆತ್ಮಶ್ರೀಗೆ ಮೊದಲನೆಯ ಸ್ಥಾನವನ್ನೂ, ರಸಪೂರ್ಣವಾದ ಸಂಸ್ಕೃತಿಗೆ ಎರಡನೆಯ ಸ್ಥಾನವನ್ನೂ, ಅಭ್ಯುದಯಕರವಾದ ಸಾಮಾಜಿಕ ನಾಗರಿಕತೆಗೆ ಮೂರನೆಯ ಸ್ಥಾನವನ್ನೂ, ಇವು ಮೂರಕ್ಕೂ ಆಧಾರವೂ ನಿವಾಸವೂ ಆಗಿ ಅತ್ಯಂತ ಆವಶ್ಯಕವಾದರೂ ಭಿತ್ತಿಸದೃಶ ಮತ್ತು ಸಾಧನರೂಪಮಾತ್ರವಾಗಿರುವ ರಾಜಕೀಯಕ್ಕೆ ಕೊನೆಯ ನಾಲ್ಕನೆಯ ಸ್ಥಾನ ವನ್ನೂ ನಿರ್ಣಯಿಸುವ ಪೂರ್ಣದೃಷ್ಟಿಯನ್ನು ಅನುಗ್ರಹಿಸಿ, ನಮ್ಮನ್ನು ಪೂರ್ಣ ಸಿದ್ಧಿಯ ಕಡೆಗೆ ತಪ್ಪದೆ ಕರೆದೊಯ್ಯುತ್ತದೆ.[1]

ಮೇಲೆ ವರ್ಣಿಸಿದ ಧ್ಯೇಯಸಾಧನೆಯೆ ಎಲ್ಲ ವಿದ್ಯೆಯ ಚರಮೋದ್ದೇಶ. ಅಕ್ಷರ ಪ್ರಚಾರ ಮತ್ತು ವಯಸ್ಕರ ಶಿಕ್ಷಣಗಳೂ ಅದಕ್ಕಾಗಿಯೆ ಸರ್ವಾದರಣೀಯ. ಉಳಿದ ಉಪಯೋಗಗಳೆಲ್ಲ ಅವು ಎಷ್ಟೆ ಅವಶ್ಯವಾಗಲಿ, ಎಷ್ಟೆ ಅನಿವಾರ್ಯವಾಗಲಿ—ಗೌಣ, ಎರಡನೆಯ ಸ್ಥಾನಕ್ಕೆ ಸೇರುತ್ತವೆ. ಬಂದ ನೋಟೀಸನ್ನು ಓದುವುದಾಗಲಿ, ಪತ್ರಿಕೆ ನೋಡುವುದಾಗಲಿ, ಅರ್ಜಿ ಬರೆಯುವುದಾಗಲಿ ಅಥವಾ ಇನ್ನಾವ ವ್ಯಾವಹಾರಿಕವಾದ ಉಪಯೋಗವಾಗಲಿ ಮೊದಮೊದಲ ಪ್ರಯೋಜನವಾಗಬಹುದೆ ಹೊರತು ಮುಖ್ಯ ಪ್ರಯೋಜನವಾಗಲಾರದು. ಮುಖ್ಯ ಪ್ರಯೋಜನ ಹೃದಯ ವಿಕಾಸಕ್ಕೆ ಸಂಬಂಧ ಪಟ್ಟುದು, ಅಂತಃಸಂಸ್ಕೃತಿಗೆ ಸೇರಿದುದು : ವಿನಯಕ್ಕೆ ಸೌಜನ್ಯಕ್ಕೆ ಶುಚಿಗೆ ಕರುಣೆಗೆ ಭಕ್ತಿಗೆ ನಿಷ್ಠೆಗೆ ಸತ್ಯಕ್ಕೆ ಧರ್ಮಕ್ಕೆ ಆತ್ಮಕಲ್ಯಾಣಕ್ಕೆ. ಅಂತಹ ಪ್ರಜ್ಞೆಯ ಪರಿಪಕ್ವತೆಗೆ, ಅಂತಹ ಕೃತಕೃತ್ಯತೆಯ ದಿವ್ಯಸ್ಥಿತಿಗೆ, ಅಂತಹ ಸಂಪೂರ್ಣ ವ್ಯಕ್ತಿತ್ವದ ಪೂರ್ಣ ಸರ್ವೋದಯಕ್ಕೆ ನಮ್ಮೆಲ್ಲರನ್ನೂ ಏರಿಸಲಿ, ಈ ಜನಪ್ರಿಯ ವಾಲ್ಮೀಕಿ ರಾಮಾಯಣ. ಎಲ್ಲ ಕನ್ನಡಿಗರೂ ಅಕ್ಷರಜ್ಞರಾಗಿ ಸುಶಿಕ್ಷಿತರಾಗಿ, ಕರ್ಣಾಟಕದ ಮೊದಲ ಚಕ್ರವರ್ತಿ ಸಾಹಿತಿ ನೃಪತುಂಗನು ಸಾವಿರ ವರ್ಷಗಳ ಹಿಂದೆ ಅಂದಿನವರನ್ನು ಕುರಿತು ಹಾಡಿದುದು ಇಂದಿನವರಿಗೂ ಅನ್ವಯಿಸುವಂತಾಗಲಿ.

"ಪದನ್ ಅಱಿದು ನುಡಿಯಲುಂ, ನುಡಿದುದನ್ ಅಱಿದು ಆರಯಲುಂ ಆರ್ಪರ್ ಆ ನಾಡವರ್ಗಳ್. ಚದುರರ್ ನಿಜದಿಂ. ಕುಱಿತೋದದೆಯುಂ ಕಾವ್ಯ ಪ್ರಯೋಗಪರಿಣತಮತಿಗಳ್. ಕುಱಿತವಱಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿ ಯೊಳ್ ಎಲ್ಲರ್ ಜಾಣರ್. ಕಿಱುವಕ್ಕಳುಂ ಆ ಮೂಗರುಂ ಅಱಿಪಲ್ಕಱಿವರ್ ವಿವೇಕಮುಂ ಮಾತುಗಳಂ."

ಆ ಕನ್ನಡನಾಡಿನವರು ಪದವನ್ನು ಅರಿತು 'ಹದವರಿತು' ನುಡಿಯಲೂ, ನುಡಿ ದುದನ್ನು ಅರಿತು ವಿಚಾರಮಾಡಲೂ ಸಮರ್ಥರು. ಹುಟ್ಟಿನಿಂದಲೆ ಬುದ್ಧಿವಂತರು.

---

[1] ಆ 'ದರ್ಶನ'ವನ್ನು ಕಂಡುಕಂಡು ಬೆಳೆಯಬೇಕೆಂಬಾಶೆ ಬಲಿತವರು 'ಮಹಾ ಛಂದಸ್ಸಿನ ಶ್ರೀರಾಮಾಯಣದರ್ಶನಂ' ಎಂಬ ಮಹಾಕಾವ್ಯವನ್ನು ಓದಲಿ.

ಶಾಸ್ತ್ರೀಯವಾಗಿ ಪಂಡಿತಪ್ರವೀಣರಂತೆ ಸಾಹಿತ್ಯಾಭ್ಯಾಸ ಮಾಡದಿದ್ದರೂ ಅವರ ಹೃದಯ ಉತ್ತಮವಾದ ಕಾವ್ಯಗಳನ್ನು ಓದಿ ರಸಾಸ್ವಾದನೆ ಮಾಡಬಲ್ಲುದಾಗಿತ್ತು. ಶಾಸ್ತ್ರಜ್ಞರಾದ ವಿದ್ವಾಂಸರ ಮಾತಂತಿರಲಿ, ಉಳಿದ ಸಾಮಾನ್ಯರನ್ನು ಪರಿಗಣಿಸಿದರೂ ಸ್ವಭಾಷಾ ಜ್ಞಾನದಲ್ಲಿ ಜಾಣರಲ್ಲದವರು ಯಾರೊಬ್ಬರೂ ಇಲ್ಲ. ಕಿರಿಮಕ್ಕಳೂ, ಕಡೆಗೆ ಮೂಗರೂ ಕೂಡ, ವಿವೇಕದ ಮಾತುಗಳನ್ನು ಬೋಧಿಸಬಲ್ಲವರು—ಅಃ! ನೃಪತುಂಗನ ಈ ವರ್ಣನೆಗೆ ಕನ್ನಡಮ್ಮನ ಮಕ್ಕಳು ಮತ್ತೊಮ್ಮೆ ಪಾತ್ರರಾಗುವ ಪುಣ್ಯಸಮಯ ಬಹುಬೇಗನೆ ಸಮೀಪಿಸಲಿ! ಕನ್ನಡ ನುಡಿ ನಮ್ಮೆದೆಯ ನುಡಿಯಾಗಿ, ನಮ್ಮ ರಸುಮುಡಿ ಯಾಗಿ, ನಮ್ಮ ಬಾಳ್ಗುಡಿಯಾಗಿ, ಕನ್ನಡಿಗರ ಹೃದಯ ಭಿನ್ನಭಾವನೆಗಳನ್ನು ತೊರೆದು ಒಂದುಗೂಡಿ, ಕನ್ನಡನಾಡು ಒಂದಾಗಿ, ಕರ್ಣಾಟಕಮಾತೆ ಭರತಮಾತೆಗೆ ಸಂತೋಷ ದಿಂದ ಹೆಮ್ಮೆಯಿಂದ ಸೇವೆ ಸಲ್ಲಿಸುವ ಭಾಗ್ಯದ ಕಾಲ ಬೇಗನೆ ಬರುವಂತಾಗಲಿ :

"ಜೈ ಭಾರತ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ !"

ಮೈಸೂರು
೨-೧೦-೧೯೫೦

ಕುವೆಂಪು

---

# ವಿಷಯಾನುಕ್ರಮಣಿಕೆ

## ಬಾಲಕಾಂಡ



## ಅಯೋಧ್ಯಾಕಾಂಡ



## ಅರಣ್ಯಕಾಂಡ

## ಕಿಷ್ಕಿಂಧಾಕಾಂಡ



## ಸುಂದರಕಾಂಡ

## ಯುದ್ಧಕಾಂಡ

---

# ಚಿತ್ರಗಳು



**

ಓಂ ತತ್ ಸತ್

ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿ ಕೋಕಿಲಂ ॥

# ಬಾಲಕಾಂಡ

---

## ೧

## ಶ್ರೀರಾಮ ಜನನ

ಸತ್ಯ ಧರ್ಮ ನೀತಿಗಳಿಗೆ ಹೆಸರಾದ ಭರತಖಂಡದ ಉತ್ತರದಲ್ಲಿ ಕೋಸಲದೇಶವೆಂಬುದು ಯಾವಾಗಲೂ ಸಂತೋಷದಿಂದಿರುವ ಪ್ರಜೆಗಳಿಂದಲೂ ಧನಧಾನ್ಯಗಳಿಂದ ತುಂಬಿರುವ ಭೂಮಿಯಿಂದಲೂ ಮೆರೆಯುತ್ತಿತ್ತು. ಸರಯೂ ನದಿಯ ತೀರದಲ್ಲಿದ್ದ ಅಯೋಧ್ಯೆ ಅದರ ರಾಜಧಾನಿ. ಮನುಚಕ್ರವರ್ತಿ ತನ್ನ ಮನಸ್ಸಿನಿಂದ ಅದನ್ನು ನಿರ್ಮಿಸಿದನಂತೆ! ಅದರ ಉದ್ದ ಹನ್ನೆರಡು ಯೋಜನ, ಅಗಲ ಮೂರು ಯೋಜನ. ವಿಸ್ತಾರವಾದ ರಾಜಬೀದಿಗಳು, ಅವುಗಳ ಇಕ್ಕೆಲಗಳಲ್ಲಿಯೂ ಸಾಲುಮರಗಳು, ಅಲ್ಲಲ್ಲಿ ಪುಷ್ಪಸಮೃದ್ಧವಾದ ಉಪವನಗಳು, ಕಾರಂಜಿಗಳು—ಇವೇ ಮೊದಲಾದ ಸೌಂದರ್ಯಗಳಿಂದ ಅಮರಾವತಿಯಂತೆ ವೈಭವಯುಕ್ತವಾದ ಆ ಪಟ್ಟಣದಲ್ಲಿ ದೇವೇಂದ್ರನಂತೆ ಭೋಗಭಾಗ್ಯಶಾಲಿಯಾದ ದಶರಥ ಮಹಾರಾಜನು ಧರ್ಮಶೀಲನಾಗಿ ರಾಜ್ಯಭಾರ ಮಾಡುತ್ತಿದ್ದನು. ನೀತಿಶಾಸ್ತ್ರ ಚತುರನಾದ ಸುಮಂತ್ರನೆಂಬುವನು ಆತನ ಎಂಟು ಜನ ಪ್ರಧಾನರಲ್ಲಿ ಮೊದಲಿಗನಾಗಿದ್ದನು. ವೇದವೇದಾಂತಗಳಲ್ಲಿ ಪಾರಂಗತನಾದ ವಸಿಷ್ಠ ಮಹರ್ಷಿ ಆ ರಾಜನ ಪುರೋಹಿತನಾಗಿ, ಆತನ ಹಿತಸಾಧನೆಯಲ್ಲಿ ತತ್ಪರನಾಗಿದ್ದನು. ಈ ಮಂತ್ರಿ ಪುರೋಹಿತರ ದಕ್ಷತೆಯಿಂದ ರಾಜ್ಯ ಸುಭಿಕ್ಷವಾಗಿತ್ತು, ನಿಷ್ಕಂಟಕವಾಗಿತ್ತು; ರಾಜನು ಜಗದ್ವಿಖ್ಯಾತನಾಗಿದ್ದನು; ಪ್ರಜೆಗಳು ಸುಖ ಶಾಂತಿಗಳಿಂದ ಕೂಡಿ ಸ್ವಧರ್ಮನಿರತರಾಗಿದ್ದರು.

ದಶರಥನ ರಾಣಿವಾಸ ಕೌಸಲ್ಯೆ, ಸುಮಿತ್ರೆ, ಕೈಕೆಯರೆಂಬ ಮೂವರು ಮಹಾರಾಣಿಯರಿಂದ ಕೂಡಿ ಧನ್ಯವಾದುದಾಗಿತ್ತು. ಪ್ರೇಯಸ್ಸಿಗೆ ಮಾತ್ರವಲ್ಲದೆ ಶ್ರೇಯಸ್ಸಿಗೂ ಸಾಧಕರಾದ ಈ ರಾಣಿಯರಲ್ಲಿ ರಾಜನು ಸಂಸಾರ ಸೌಖ್ಯದ ಸಾರವನ್ನು ಸವಿಯುತ್ತಾ ಬಹುಕಾಲ ಕಳೆದನು. ವಯಸ್ಸು ಇಳಿಮುಖವಾಯಿತು. ಆದರೂ ವಂಶಲತೆಯನ್ನು ಹಬ್ಬಿಸಬಲ್ಲ ಮಕ್ಕಳು ಮಾತ್ರ ಉದಯಿಸಲಿಲ್ಲ. ಯೌವನ ಕಳೆದಂತೆಲ್ಲ ಮಕ್ಕಳ ಚಿಂತೆ

ಬಲವಾಯಿತು ಆತನಿಗೆ. ದೇವರಿಗೆ ಹರಕೆ ಹೊತ್ತಾಯಿತು; ಸೇವೆ ಸಲ್ಲಿಸಿದುದಾಯಿತು. ಆದರೂ ಕೋರಿಕೆ ಈಡೇರಲಿಲ್ಲ. ಕಡೆಗೆ ಪುತ್ರಜನನಕ್ಕಾಗಿ ಅಶ್ವಮೇಧ ಯಾಗವನ್ನು ಕೈಗೊಳ್ಳಬೇಕೆಂದು ಆತನಿಗೆ ಸ್ವಯಂಪ್ರೇರಣೆಯಾಯಿತು. ಮಂತ್ರಿ ಪುರೋಹಿತರಲ್ಲಿ ಆ ವಿಚಾರವನ್ನು ಪ್ರಸ್ತಾಪಮಾಡಿ, ಅವರ ಅಭಿಪ್ರಾಯದಂತೆ ಆತನು ಯಜ್ಞದ ಪೌರೋಹಿತ್ಯವನ್ನು ವಹಿಸಲು ಋಷ್ಯಶೃಂಗ ಮಹರ್ಷಿಯನ್ನು ಕರೆಸಿದನು. ಆತನ ಮೇಲ್ವಿಚಾರಣೆಯಲ್ಲಿ ಯಜ್ಞ ಕಾರ್ಯಗಳು ಸಾಂಗವಾಗಿ ವಿಜೃಂಭಣೆಯಿಂದ ನೆರವೇರಿದುವು. ದಾನ ಧರ್ಮಗಳೂ ಸಂತರ್ಪಣೆ ಸಮಾರಾಧನೆಗಳೂ ಯಥೇಚ್ಛವಾಗಿ ನಡೆದುವು. ಜಗತ್ತಿನ ಜನರೆಲ್ಲರೂ ದಶರಥನ ಔದಾರ್ಯದಿಂದ ತಣಿದು ತೃಪ್ತಿಗೊಂಡರು.

ಅಶ್ವಮೇಧಾನಂತರ ಮಹಾಮತಿವಂತನಾದ ಋಷ್ಯಶೃಂಗಮುನಿ ಪುತ್ರಪ್ರದವಾದ ಪುತ್ರಕಾಮೇಷ್ಟಿಯೆಂಬ ಯಾಗವನ್ನು ದಶರಥನಿಂದ ಮಾಡಿಸಿದನು. ಆ ಯಜ್ಞಾಂತ್ಯದಲ್ಲಿ ದಿವ್ಯಾಲಂಕಾರಗಳಿಂದ ಭೂಷಿತನಾಗಿ, ಪ್ರಜ್ವಲಿಸುವ ಅಗ್ನಿ ಜ್ವಾಲೆಯಂತೆ ಕಾಂತಿಯುಕ್ತನಾಗಿರುವ ಮಹಾಪುರುಷನೊಬ್ಬನು ಯಜ್ಞಕುಂಡದಿಂದ ಮೇಲೆದ್ದು ಕಾಣಿಸಿಕೊಂಡನು. ಆತನ ಕೈಯಲ್ಲಿ ಪಾಯಸಪೂರ್ಣವಾದ ಒಂದು ಪಾತ್ರೆಯಿತ್ತು. ಆ ಅಗ್ನಿದೇವನು ದಶರಥನನ್ನು ಕುರಿತು "ಎಲೈ ರಾಜನೆ, ಬ್ರಹ್ಮನಿಂದ ಪ್ರೇರಿತರಾದ ದೇವತೆಗಳು ನಿನಗಾಗಿ ಈ ದೇವನಿರ್ಮಿತವಾದ ಪಾಯಸವನ್ನು ಕಳುಹಿಸಿದ್ದಾರೆ. ಇದು ಸಂತಾನದಾಯಕವಾದುದು. ಇದನ್ನು ನಿನ್ನ ಪತ್ನಿಯರು ಸೇವಿಸಲಿ. ಇದರಿಂದ ನಿನ್ನ ಇಷ್ಟಾರ್ಥಸಿದ್ಧಿಯಾಗುತ್ತದೆ."



ಮಹಾಪುರುಷನೊಬ್ಬನು ಯಜ್ಞಕುಂಡದಿಂದ ಮೇಲೆದ್ದು ಕಾಣಿಸಿಕೊಂಡನು.
ಆತನ ಕೈಯಲ್ಲಿ ಪಾಯಸಪೂರ್ಣವಾದ ಒಂದು ಪಾತ್ರೆಯಿತ್ತು.

ಎಂದು ಹೇಳಿದನು. ನಿರ್ಧನನಿಗೆ ವಿತ್ತಪ್ರಾಪ್ತಿಯಾದಷ್ಟು ಆನಂದವಾಯಿತು ದಶರಥನಿಗೆ. ಅತ್ಯಂತ ಹರ್ಷದಿಂದ ಆ ಪಾಯಸಪಾತ್ರೆಯನ್ನು ತೆಗೆದುಕೊಂಡು, ಆ ಪುರುಷನಿಗೆ ಭಕ್ತಿಯಿಂದ ನಮಸ್ಕರಿಸಿದನು. ಅಷ್ಟರಲ್ಲಿ ಆ ದೈವಶಕ್ತಿ ಅಂತರ್ಧಾನವಾಯಿತು.

ದಶರಥನು ಪಾಯಸಪಾತ್ರೆಯೊಡನೆ ಅರಮನೆಯನ್ನು ಪ್ರವೇಶಿಸಿದನು. ಶರತ್ಕಾಲದ ಚಂದ್ರಕಿರಣಗಳಿಂದ ಅಂತರಿಕ್ಷ ಉಲ್ಲಾಸಗೊಳ್ಳುವಂತೆ ಸಂತೋಷದ ಸುದ್ದಿಯಿಂದ ಅಂತಃಪುರ ಸಂತಸಗೊಂಡಿತು. ದಶರಥನು ಪಾತ್ರೆಯಲ್ಲಿದ್ದ ಪಾಯಸದಲ್ಲಿ ಅರ್ಧವನ್ನು ಪಟ್ಟದ ರಾಣಿಯಾದ ಕೌಸಲ್ಯೆಗೆ ಕೊಟ್ಟನು. ಉಳಿದುದರಲ್ಲಿ ಅರ್ಧವನ್ನು ಸುಮಿತ್ರೆಗೆ ಕೊಟ್ಟು, ಮಿಕ್ಕುದರಲ್ಲಿ ಅರ್ಧವನ್ನು ಕೈಕೆಗೂ ಉಳಿದುದನ್ನು ಪುನಃ ಸುಮಿತ್ರೆಗೂ ಕೊಟ್ಟನು. ಪಾಲಿಗೆ ಬಂದ ಪಾಯಸವನ್ನು ಸೇವಿಸುತ್ತಲೆ ಆ ರಾಣಿಯರು ಸೂರ್ಯನಂತೆಯೂ ಅಗ್ನಿಯಂತೆಯೂ ತೇಜೋವಿಶಿಷ್ಟರಾದರು. ಕೆಲವು ದಿನಗಳಲ್ಲಿ ಆ ಮೂವರು ಮಹಾರಾಣಿಯರೂ ಗರ್ಭವನ್ನು ಧರಿಸಿ ದಶರಥನ ಕಣ್ಣುಗಳಿಗೂ ಮನಸ್ಸಿಗೂ ಮಹದಾನಂದವನ್ನು ಒದಗಿಸಿದರು. ಆತನು ಪುತ್ರ ಜನನವನ್ನೇ ನಿರೀಕ್ಷಿಸುತ್ತಾ ಇರಲು ಪುತ್ರಕಾಮೇಷ್ಟಿಯಾಗಿ ಒಂದು ವರುಷ ಉರುಳಿತು. ಚೈತ್ರ ಶುಕ್ಲ ನವಮಿಯ ಶುಭದಿನದಲ್ಲಿ ಗ್ರಹಗಳೆಲ್ಲವೂ ಉಚ್ಚಸ್ಥಾನದಲ್ಲಿರುವಾಗ ಕೌಸಲ್ಯೆ ಸುಕುಮಾರನನ್ನು ಹೆತ್ತಳು.

ದಶರಥನ ಭಾಗ್ಯ ಕಣ್ತೆರೆಯಿತು. ಆನಂದದ ಮೇಲೆ ಆನಂದ. ಕೌಸಲ್ಯೆ ಹೆತ್ತ ಮರುಕ್ಷಣದಲ್ಲಿಯೆ ಕೈಕೆ ಭರತನನ್ನು ಹೆತ್ತಳು. ಅದಾದ ಸ್ವಲ್ಪ ಹೊತ್ತಿನಲ್ಲಿಯೆ ಸುಮಿತ್ರೆಗೆ ಲಕ್ಷ್ಮಣ ಶತ್ರುಘ್ನರೆಂಬ ಅವಳಿ ಮಕ್ಕಳು ಉದಿಸಿದರು. ಅರಮನೆ ಆನಂದದ ಆಗರವಾಯಿತು. ಅಯೋಧ್ಯೆಯಲ್ಲಾದ ಉತ್ಸವಗಳಿಗೆ ಇತಿಮಿತಿಯಿಲ್ಲ. ದಶರಥನ ರಾಜ್ಯವೆಲ್ಲವೂ ಆನಂದ ಸಾಮ್ರಾಜ್ಯವಾಯಿತು. ರಾಜನು ಧನ್ಯನಾದನು, ಪ್ರಜೆಗಳು ಧನ್ಯರಾದರು, ಜಗತ್ತೂ ಧನ್ಯವಾಯಿತು.

---

೨

## ತಾಟಕಾ ಸಂಹರಣ

ಕೌಸಲ್ಯಾ ಕುಮಾರನಾದ ಶ್ರೀರಾಮನೂ ಭರತ ಲಕ್ಷ್ಮಣ ಶತ್ರುಘ್ನರೂ ತಂದೆ ತಾಯಿಯರ ಕಣ್ಮನಗಳಿಗೆ ಹಬ್ಬವನ್ನುಂಟು ಮಾಡುತ್ತಾ ಕೌಮಾರ್ಯವನ್ನು ಕಳೆದು ಬಾಲ್ಯದಲ್ಲಿ ಕಾಲಿಟ್ಟರು. ವಿದ್ಯೆ ಧನುರ್ವಿದ್ಯೆಗಳು ಅವರಿಗೆ ಕರತಲಾಮಲಕವಾದುವು. ಅದರಲ್ಲಿಯೂ ಹಿರಿಯನಾದ ಶ್ರೀರಾಮನಂತೂ ವಂಶಾಭಿವೃದ್ಧಿಯನ್ನು ಸೂಚಿಸುವ ಧ್ವಜದಂತೆ ಕಂಗೊಳಿಸುತ್ತಾ ಜನಮನಗಳಿಗೆ ಅತ್ಯಂತ ಪ್ರಿಯಕರನಾಗಿದ್ದನು. ಮಕ್ಕಳೆಲ್ಲರೂ ಪರಸ್ಪರ ಪ್ರೀತಿ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದರಾದರೂ ರಾಮ ಲಕ್ಷ್ಮಣರಿಗೆ ಬಲು ಹೊಂದಿಕೆ. ಪ್ರಾಣವೊಂದು ದೇಹವೆರಡು ಎಂಬಂತೆ ಅವರ ನಡವಳಿಕೆ. ರಾಮನು ಬೇಟೆಗೆ ಹೊರಟನೆಂದರೆ ಧನುರ್ಧಾರಿಯಾದ ಲಕ್ಷ್ಮಣ ಅವನ ಹಿಂದೆ ಸಿದ್ಧ. ಊಟ ನಿದ್ದೆಗಳಲ್ಲಿಯೂ ಅವರು ಜೊತೆಯಾಗಿಯೆ ಇರಬೇಕು. ಇದೇ ಬಗೆಯಾದ ಮೈತ್ರಿಯಿತ್ತು ಭರತ ಶತ್ರುಘ್ನರಿಗೂ. ತೇಜಃಪುಂಜರಾದ ನಾಲ್ಕು ಮಕ್ಕಳೂ ಯೌವನಕ್ಕೆ ಹೆಜ್ಜೆ ಇಡುತ್ತಿರುವುದನ್ನು ಕಂಡು ಅವರಿಗೆ ಬೇಗ ಮದುವೆಯ ಮಂಗಳ ವನ್ನು ನೆರವೇರಿಸಬೇಕೆಂದು ದಶರಥನು ಚಿಂತಿಸುತ್ತಿದ್ದನು.

ವಸಿಷ್ಠರೊಡನೆಯೂ ಬಂಧುಜನರೊಡನೆಯೂ ಕಲೆತು ಮಕ್ಕಳ ಮದುವೆಯ ವಿಚಾರವನ್ನು ಪ್ರಸ್ತಾಪ ಮಾಡುತ್ತಾ ದಶರಥ ಮಹಾರಾಜನು ಅರಮನೆಯಲ್ಲಿ ಕುಳಿತಿದ್ದಾನೆ. ಇದ್ದಕ್ಕಿದ್ದಂತೆ ವಿಶ್ವಾಮಿತ್ರ ಮಹರ್ಷಿಗಳು ಆತನ ಬಳಿಗೆ ಬಂದರು. ರಾಜನು ಅವರನ್ನು ಸತ್ಕರಿಸಿದನು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ಆತನು ಅವರನ್ನು ಕುರಿತು "ತಾವು ದಯಮಾಡಿಸಿದುದು ಸಂತಾನವಿಲ್ಲದವರಿಗೆ ಸುಪುತ್ರ ಪ್ರಾಪ್ತಿಯಾದಷ್ಟು ಆನಂದವನ್ನುಂಟುಮಾಡಿದೆ. ಇಂದು ನನ್ನ ಜನ್ಮ ಸಫಲವಾಯಿತು ; ಬದುಕೆಲ್ಲವೂ ಸಾರ್ಥಕವಾಯಿತು. ತಮ್ಮ ಆಗಮನ ಕಾರಣಗಳನ್ನು ತಿಳುಹಿ ನನ್ನನ್ನು ಅನುಗ್ರಹಿಸಬೇಕು" ಎಂದು ಹೇಳಿದನು. ಆತನ ಮಾತಿಗೆ ಪ್ರತ್ಯುತ್ತರವಾಗಿ ವಿಶ್ವಾಮಿತ್ರನು "ಅಯ್ಯಾ ರಾಜಸಿಂಹನೆ, ನಿನ್ನ ಘನತೆಗೆ ತಕ್ಕಂತೆ ನೀನು ಮಾತನಾಡಿದೆ. ನಾನು ದೊಡ್ಡ ಸಿದ್ಧಿಯೊಂದನ್ನು ಪಡೆಯುವುದಕ್ಕಾಗಿ ಯಜ್ಞವನ್ನು ಆರಂಭಿಸ ಬೇಕಾಗಿದೆ. ಆ ಸತ್ಕಾರ್ಯಕ್ಕೆ ಮಾರೀಚ ಸುಬಾಹುಗಳೆಂಬ ಇಬ್ಬರು ಘೋರ ರಾಕ್ಷಸರು ವಿಘ್ನಕಾರಿಗಳಾಗಿದ್ದಾರೆ. ಯಜ್ಞವನ್ನು ಆರಂಭಿಸುತ್ತಲೆ ಆ ದುರುಳರಿಬ್ಬರೂ ಮಜ್ಜೆ ಮಾಂಸಗಳನ್ನು ತಂದು ಯಜ್ಞವೇದಿಕೆಯಲ್ಲಿ ವರ್ಷಿಸುತ್ತಾರೆ. ಅವರನ್ನು ಶಪಿಸಿ ನಾಶ ಮಾಡಬಹುದಾದರೂ ಯಜ್ಞದೀಕ್ಷೆಯನ್ನು ವಹಿಸಿದ ಬಳಿಕ, ಕೋಪಗೊಳ್ಳುವುದು ಉಚಿತವಲ್ಲವೆಂದು ಸುಮ್ಮನಿರಬೇಕಾಗಿದೆ. ಅವರನ್ನು ಸಂಹರಿಸಲು ನಿನ್ನ ಹಿರಿಯ

ಮಗನಾದ ಶ್ರೀರಾಮನೊಬ್ಬನೆ ಸಮರ್ಥನು. ಆದುದರಿಂದ ಆತನನ್ನು ನನ್ನೊಡನೆ ಕಳುಹಿಸಿಕೊಡು. ಇದರಿಂದ ನಿನಗೆ ಇಹದಲ್ಲಿ ಯಶಸ್ಸೂ, ಪರದಲ್ಲಿ ಉತ್ತಮ ಪದವಿಯೂ ದೊರೆಯುತ್ತವೆ" ಎಂದನು.

ವಿಶ್ವಾಮಿತ್ರನ ಮಾತನ್ನು ಕೇಳಿ ದಶರಥನು ಭಯದಿಂದ ನಡುಗಿ ಹೋದನು. "ಇನ್ನೂ ಹನ್ನೆರಡು ವರುಷದ ಹಾಲುಹಸುಳೆಯಾದ ಶ್ರೀರಾಮನನ್ನು ರಾಕ್ಷಸರೊಡನೆ



'ಮಾರೀಚ ಸುಬಾಹುಗಳನ್ನು ಸಂಹರಿಸಲು ನಿನ್ನ ಹಿರಿಯ ಮಗನಾದ ಶ್ರೀರಾಮನೊಬ್ಬನೆ ಸಮರ್ಥನು. ಆದುದರಿಂದ ಆತನನ್ನು ನನ್ನೊಡನೆ ಕಳುಹಿಸಿಕೊಡು."

ಯುದ್ಧಕ್ಕೆ ಕಳುಹಿಸುವುದೆಂದರೆ ಏನು ? ನಾನೇ ಬಂದು ಆ ರಾಕ್ಷಸರೊಡನೆ ಕಾದಾಡುತ್ತೇನೆ. ಬಹುಕಾಲದ ಮೇಲೆ ಈ ಮುಪ್ಪಿನ ಕಾಲದಲ್ಲಿ ಪಡೆದ ಸುಕುಮಾರನನ್ನು ಅಗಲಿ ನಾನು ಒಂದು ಕ್ಷಣವೂ ನಿಲ್ಲಲಾರೆ" ಎಂದು ಆತನು ಪಡಿನುಡಿದನು. ಆತನ ಉತ್ತರವನ್ನು ಕೇಳಿ ವಿಶ್ವಾಮಿತ್ರನು ಆಜ್ಯಾಹುತಿಯಿಂದ ಪ್ರಜ್ವಲಿಸುವ ಅಗ್ನಿಜ್ವಾಲೆಯಂತೆ ವಿಜೃಂಭಿಸುತ್ತಾ "ಅಯ್ಯಾ ರಾಜನೆ, ಇಂತಹ ಮಾತು ರಘುಕುಲದ ರಾಜರಿಗೆ ತಕ್ಕುದಲ್ಲ. ನಾನು ಹೇಳಿದುದು ನಿನಗೆ ಸರಿದೋರದಿದ್ದ ಮೇಲೆ ನಾನು ಬಂದ ಹಾದಿಯನ್ನು ಹಿಡಿದು ಹಿಂದಿರುಗುತ್ತೇನೆ. ನೀನು ಮಿಥ್ಯಾಪ್ರತಿಜ್ಞನಾಗಿ ಬಾಂಧವಸಹಿತ ಸುಖವಾಗಿರು" ಎಂದು ಹೇಳಿ ಕುಳಿತಲ್ಲಿಂದ ಮೇಲಕ್ಕೆದ್ದನು. ಅದನ್ನು ಕಂಡು ಕುಲಪುರೋಹಿತನಾದ ವಸಿಷ್ಠನು ಆತನನ್ನು ಸಾಂತ್ವವಚನಗಳಿಂದ ಸಮಾಧಾನಮಾಡಿ ಕುಳ್ಳಿರಿಸಿ, ದಶರಥನಿಗೆ ಸಮಯೋಚಿತವಾದ ಬುದ್ಧಿವಾದ ಹೇಳಿದನು. "ಮಹಾರಾಜಾ, ನೀನು ಧರ್ಮವನ್ನು ಬಿಡಬೇಡ. ಶ್ರೀರಾಮನನ್ನು ವಿಶ್ವಾಮಿತ್ರ ಮಹರ್ಷಿಯ ಜೊತೆಯಲ್ಲಿ ಕಳುಹಿಸಿಕೊಡು. ಆತನ ಜೊತೆಯಲ್ಲಿರುವ ಶ್ರೀರಾಮನು ಅಗ್ನಿಚಕ್ರದ ಮಧ್ಯದಲ್ಲಿರುವ ಅಮೃತದಂತೆ

ಸುಕ್ಷೇಮದಿಂದಿರುವನು. ಈ ಕೌಶಿಕನನ್ನು ನೀನು ಏನೆಂದು ತಿಳಿದಿರುವೆ? ಆತನು ಸಕಲಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿಯೂ ಅತ್ಯಂತ ಕುಶಲನು. ಅಲ್ಲದೆ ಸಕಲ ಧರ್ಮಕ್ಕೂ ಸ್ಥಾನಭೂತನಾದವನು. ಈತನ ಜೊತೆಯಲ್ಲಿ ನಿನ್ನ ಮಗನನ್ನು ಕಳುಹಿಸುವುದರಿಂದ ಅವನಿಗೆ ಪರಮ ಶ್ರೇಯಸ್ಸು ಉಂಟಾಗುತ್ತದೆ."

ವಸಿಷ್ಠನ ಮಾತುಗಳಿಂದ ದಶರಥನಿಗೆ ಸಮಾಧಾನವಾದಂತಾಯಿತು. ಆಶೀರ್ವಾದ ಶತಗಳಿಂದ ಮಗನನ್ನು ಹರಸಿ, ವಿಶ್ವಾಮಿತ್ರನ ಜೊತೆಯಲ್ಲಿ ಆತನನ್ನು ಕಳುಹಿಸಿದನು. ಶ್ರೀರಾಮನನ್ನು ಎಡೆಬಿಡದೆ ಅನುಸರಿಸಿಕೊಂಡಿದ್ದ ಲಕ್ಷ್ಮಣನೂ ಅಣ್ಣನ ಜೊತೆಯಲ್ಲಿ ಪ್ರಯಾಣ ಮಾಡಿದನು. ಬ್ರಹ್ಮನನ್ನು ಅನುಸರಿಸುವ ಅಶ್ವಿನಿದೇವತೆಗಳಂತೆ ತನ್ನನ್ನು ಅನುಸರಿಸಿ ಬರುತ್ತಿದ್ದ ಆ ರಾಜಕುಮಾರರೊಡನೆ ವಿಶ್ವಾಮಿತ್ರನು ಒಂದೂವರೆ ಗಾವುದ ದಷ್ಟು ಪ್ರಯಾಣಮಾಡಿ ಸರಯೂ ನದಿಯ ತೀರವನ್ನು ಸೇರಿದನು. ಅಲ್ಲಿ ಶ್ರೀರಾಮನು ಗುರುವಿನ ಅಪ್ಪಣೆಯಂತೆ ಆಚಮನ ಮಾಡಿ ಬಲ ಮತ್ತು ಅತಿಬಲ ಎಂಬ ಎರಡು ಮಂತ್ರಗಳ ಉಪದೇಶವನ್ನು ಪಡೆದನು. ಅದರ ಮಹಿಮೆಯಿಂದ ಹಸಿವು ನೀರಡಿಕೆ ಗಳಾಗಲಿ, ನಿದ್ರೆ ಬಳಲಿಕೆಗಳಾಗಲಿ ಆತನನ್ನು ಬಾಧಿಸುವಂತಿರಲಿಲ್ಲ. ಈ ಮಂತ್ರದ ಮಹಿಮೆಯಿಂದ ಬೆಳಗುತ್ತಿದ್ದ ರಘುರಾಮನು ತಮ್ಮನೊಡನೆ ಗುರುಶುಶ್ರೂಷೆ ಮಾಡುತ್ತಾ ಆ ರಾತ್ರಿಯನ್ನು ನದಿಯ ತೀರದಲ್ಲಿಯೆ ಕಳೆದನು.

ಮರುದಿನ ಗಂಗಾ ಸರಯೂ ನದಿಗಳ ಸಂಗಮದವರೆಗೆ ಪ್ರಯಾಣ ಮುಂದು ವರಿಯಿತು. ಆ ಸಂಗಮ ಸಮೀಪದಲ್ಲಿಯೆ ಒಂದು ಋಷ್ಯಾಶ್ರಮವಿತ್ತು. ಅದು ಹಿಂದೆ ಪರಶಿವನು ತಪಸ್ಸು ಮಾಡುತ್ತಾ ತನ್ನ ತಪಸ್ಸಿಗೆ ವಿಘ್ನವನ್ನು ತಂದೊಡ್ಡಿದ್ದ ಮನ್ಮಥನನ್ನು ಸುಟ್ಟುರುಹಿದ ಪವಿತ್ರವಾದ ಆಶ್ರಮ. ಅಲ್ಲಿ ವಾಸವಾಗಿದ್ದ ಋಷಿಗಳು ತಮ್ಮ ಆಶ್ರಮಕ್ಕೆ ಬಂದ ಶ್ರೀರಾಮ ಲಕ್ಷ್ಮಣರನ್ನೂ ವಿಶ್ವಾಮಿತ್ರನನ್ನೂ ಅತ್ಯಾದರದಿಂದ ಉಪಚರಿಸಿದರು. ಮೂವರೂ ಆ ದಿನ ಅಲ್ಲಿಯೆ ತಂಗಿದ್ದು ವಿಶ್ರಾಂತಿಗೊಂಡರು. ಮರುದಿನ ಬೆಳಿಗ್ಗೆ ಅವರು ಗಂಗಾನದಿಯನ್ನು ದೋಣಿಯಲ್ಲಿ ದಾಟಿ ಮುಂದಕ್ಕೆ ಪ್ರಯಾಣ ಬೆಳೆಸಿದರು. ರಾಜ ಕುಮಾರರಿಗೆ ಆಯಾಸವಾಗದಂತೆ ವಿಶ್ವಾಮಿತ್ರ ಋಷಿ ಸುತ್ತಮುತ್ತಿನ ಸುಂದರ ದೃಶ್ಯ ಗಳನ್ನು ಅವರಿಗೆ ತೋರಿಸುತ್ತಾ ಅವುಗಳ ವಿಚಾರವಾಗಿ ಅನೇಕ ಕಥೆಗಳನ್ನು ಹೇಳಿ ಮನಸ್ಸನ್ನು ವಿನೋದಗೊಳಿಸುತ್ತಾ ಹೋಗುತ್ತಿದ್ದನು. ಬರುಬರುತ್ತಾ ಕಾಡು ದಟ್ಟ ವಾಗುತ್ತಾ ಬಂತು. ಸುತ್ತಮುತ್ತ ಎಲ್ಲಿಯೂ ಋಷಿಗಳ ಆಶ್ರಮವಾಗಲಿ ಮಾನವ ಸಂಚಾರದ ಕುರುಹುಗಳಾಗಲಿ ಕಂಡುಬರಲಿಲ್ಲ. ವಿಶ್ವಾಮಿತ್ರನು ಆ ದಟ್ಟಡವಿಯ ವಿಚಾರವನ್ನು ಕುರಿತು ಹೇಳುತ್ತಾ "ಇದು ಸಾವಿರ ಆನೆಗಳ ಬಲವುಳ್ಳ ತಾಟಕಿಯೆಂಬ ರಾಕ್ಷಸಿಗೆ ಸೇರಿದ ವನ. ಅವಳಿಗೆ ಮಾರೀಚನೆಂಬ ಮಗನಿದ್ದಾನೆ. ಆ ತಾಯಿ ಮಕ್ಕಳು ತಪಸ್ವಿಗಳಿಗೆ ಯಮಸ್ವರೂಪರಾಗಿದ್ದಾರೆ. ಅವರನ್ನು ಸಂಹರಿಸಲು ನೀನೇ ಶಕ್ತ. ಸ್ತ್ರೀವಧೆ ಮಾಡುವುದು ಹೇಗೆಂದು ಹಿಂದೆ ಮುಂದೆ ನೋಡಬೇಡ. ಧರ್ಮರಕ್ಷಣೆಗಾಗಿ ಆ ಕಾರ್ಯ ನಡಸುವುದು ಅತ್ಯಗತ್ಯ" ಎಂದು ತಿಳಿಸಿದನು.

ಋಷಿಯ ಮಾತಿನಂತೆ ಶ್ರೀರಾಮನು ಆ ರಾಕ್ಷಸಿಯನ್ನು ಕಂಡೊಡನೆಯೆ ಸಂಹಾರ ಮಾಡಬೇಕೆಂದು ನಿಶ್ಚಯಿಸಿದನು. ತನ್ನ ಮನಸ್ಸಿನ ನಿಶ್ಚಯವನ್ನು ಹೊರದೋರುವುದ ಕ್ಕಾಗಿ ಆತನು ಧನುಸ್ಸನ್ನು ಹೆದೆಯೇರಿಸಿ ಒಮ್ಮೆ ಬಿಲ್ಲಿನ ಹಗ್ಗವನ್ನು ಮಿಡಿದನು. ಆ ಠಂಕಾರದಿಂದ ಅಡವಿಯೆಲ್ಲವೂ ಪ್ರತಿಧ್ವನಿತವಾದಂತಾಯಿತು. ಮರುನಿಮಿಷದಲ್ಲಿಯೆ ನೋಡುವವರು ಎದೆಯೊಡೆಯುವಂತಹ ಭಯಂಕರವಾದ ರಾಕ್ಷಸಿ ಎರಡು ಭುಜಗಳನ್ನೂ ಮೇಲೆತ್ತಿಕೊಂಡು 'ಹೋ' ಎಂದು ಕೂಗುತ್ತಾ ಅವರಿಗೆ ಇದಿರಾದಳು. ವಿಶ್ವಾಮಿತ್ರನು ಹುಂಕಾರದಿಂದ ಅವಳನ್ನು ಹಿಮ್ಮೆಟ್ಟಿಸಲು ಯತ್ನಿಸುತ್ತಿರಲು, ಅವಳು ರಾಜಕುಮಾರರ ಮೇಲೆ ಶಿಲಾವರ್ಷವನ್ನು ಕರೆಯಲು ಮೊದಲು ಮಾಡಿದಳು. ಆಗ ಶ್ರೀರಾಮನು ನಿಶಿತ ವಾದ ಬಾಣವೊಂದನ್ನು ಪ್ರಯೋಗಿಸಿ ಅವಳ ಕೈಗಳನ್ನು ಕತ್ತರಿಸಿ ಹಾಕಿದನು. ಲಕ್ಷ್ಮ ಣನೂ ಬಾಣಗಳನ್ನು ಬಿಟ್ಟು ಆ ರಕ್ಕಸಿಯ ಕಿವಿ ಮೂಗುಗಳನ್ನು ಕತ್ತರಿಸಿದನು. ಅಷ್ಟ ರಲ್ಲಿ ಆ ರಾಕ್ಷಸಿ ಮಾಯವಾಗಿ ಹೋದಳು. ಅವಳು ಕರೆಯುತ್ತಿದ್ದ ಕಲ್ಮಳೆ ಮಾತ್ರ ಅವಿರಳವಾಗಿ ಮುಂದುವರಿಯಿತು. ಇದನ್ನು ಕಂಡು ಶ್ರೀರಾಮನು ವಿಶ್ವಾಮಿತ್ರರ ಸೂಚನೆಯಂತೆ ಅವಳನ್ನು ಸಂಹರಿಸುವುದಕ್ಕಾಗಿ ದಿವ್ಯ ಬಾಣವೊಂದನ್ನು ತೊಟ್ಟನು. ಆತನು ಪ್ರಯೋಗಿಸಿದ ಬಾಣದಿಂದ ಆ ರಾಕ್ಷಸಿಯ ಮಾಯೆಯೆಲ್ಲವೂ ಹರಿದು ಹೋಯಿತು. ಅವಳು ಅರ್ಭಟಿಸುತ್ತಾ ರಾಮಲಕ್ಷ್ಮಣರ ಕಡೆ ಓಡಿಬರುತ್ತಿದ್ದಳು. ಶ್ರೀರಾಮನು ಮತ್ತೊಂದು ಬಾಣವನ್ನು ಅವಳ ಎದೆಗೆ ಗುರಿಯಿಟ್ಟು ಹೊಡೆದನು. ಆ ರಾಕ್ಷಸಿ ಥೊಪ್ಪನೆ ಕೆಳಗೆ ಬಿದ್ದು ಸತ್ತುಹೋದಳು. ಆ ವೇಳೆಗೆ ಹೊತ್ತು ಮುಳುಗಿ ಕತ್ತಲಾದುದರಿಂದ ಅವರೆಲ್ಲರೂ ತಾಟಕಾವನದಲ್ಲಿಯೆ ವಿಶ್ರಾಂತಿಗೊಂಡರು.

ರಾತ್ರಿ ಕಳೆದು ಬೆಳಗಾಗುತ್ತಲೆ ವಿಶ್ವಾಮಿತ್ರನು ಶ್ರೀರಾಮನನ್ನು ಕುರಿತು ಮುಗು ಳ್ನಗೆಯೊಡನೆ, "ಮಹಾಶಯನಾದ ರಾಮಚಂದ್ರ, ತಾಟಕಾವಧೆಯಿಂದ ನಾನು ಪರಮ ಸಂತುಷ್ಟನಾಗಿದ್ದೇನೆ. ನಿನಗೆ ಶುಭವಾಗಲಿ, ನನಗೆ ಗೊತ್ತಿರುವ ಸಮಸ್ತ ಮಂತ್ರಾಸ್ತ್ರ ಗಳನ್ನೂ ಈಗಲೆ ನಿನಗೆ ಧಾರೆಯೆರೆದು ಕೊಡುತ್ತೇನೆ" ಎಂದು ಹೇಳಿ, ಸ್ನಾನದಿಂದ ಪರಿ ಶುದ್ಧನಾಗಿ ಪೂರ್ವಾಭಿಮುಖವಾಗಿ ನಿಂತು, ದೇವತೆಗಳಿಂದಲೂ ಹೊಂದಲಶಕ್ಯವಾದ ಆ ಮಂತ್ರಾಸ್ತ್ರಗಳನ್ನು ಆತನಿಗೆ ಉಪದೇಶಿಸಿದನು. ಆಗ ಆ ಮಂತ್ರಾಧಿದೇವತೆಗಳು ಪ್ರತ್ಯಕ್ಷವಾಗಿ ರಾಮನ ಬಳಿಗೈದಿ "ರಾಘವ, ನಾವೆಲ್ಲ ನಿನಗೆ ಕಿಂಕರರಾಗಿರುತ್ತೇವೆ. ನಮ್ಮನ್ನು ಪರಿಗ್ರಹಿಸು" ಎಂದು ಕೇಳಿಕೊಂಡುವು. ಆಗ ಶ್ರೀರಾಮನು ಅವುಗಳನ್ನು ಹಸ್ತದಿಂದ ಪರಿಗ್ರಹಿಸಿ "ನೀವೆಲ್ಲರೂ ನನ್ನ ಮನೋಗತರಾಗಿರಿ" ಎಂದು ಅಪ್ಪಣೆ ಮಾಡಿದನು. ಇಷ್ಟಾದ ಮೇಲೆ ಶ್ರೀರಾಮನು ತಮ್ಮನೊಡನೆ ಗುರುಗಳನ್ನು ಅನುಸರಿಸಿ ಪ್ರಯಾಣ ಮುಂದುವರಿಸಿದನು. ದಾರಿಯಲ್ಲಿ ವಿಶ್ವಾಮಿತ್ರನು ಆತನಿಗೆ ಅಸ್ತ್ರಗಳ ಉಪ ಸಂಹಾರವನ್ನೂ ಉಪದೇಶಿಸಿ, ಆ ಮಂತ್ರಗಳನ್ನೆಲ್ಲ ಲಕ್ಷ್ಮಣನಿಗೂ ತಿಳಿಸುವಂತೆ ಹೇಳಿದನು. ಶ್ರೀರಾಮನು ಅವರ ಅಪ್ಪಣೆಯನ್ನು ಸಂತೋಷದಿಂದ ನೆರವೇರಿಸಿದನು. ಅಷ್ಟು ಹೊತ್ತಿಗೆ ವಿಶ್ವಾಮಿತ್ರಾಶ್ರಮ ಸಮೀಪಗತವಾಯಿತು.

೩

## ಯಜ್ಞ ರಕ್ಷಣೆ

ವಿಶ್ವಾಮಿತ್ರಮಹರ್ಷಿ ಸಮೀಪದಲ್ಲಿಯೆ ಕಾಣುತ್ತಿದ್ದ ತನ್ನ ಆಶ್ರಮವನ್ನು ಶ್ರೀರಾಮನಿಗೆ ತೋರಿಸಿ ಅದರ ಪೂರ್ವಕಥೆಯನ್ನೆಲ್ಲ ವಿಸ್ತಾರವಾಗಿ ಅರುಹಿದನು. "ಹಿಂದೆ ಮಹಾವಿಷ್ಣು ವಾಮನಾವತಾರಕಾಲದಲ್ಲಿ ಈ ವನದಲ್ಲಿಯೆ ತಪಸ್ಸು ಮಾಡುತ್ತಿದ್ದನು. ಇಲ್ಲಿ ತಪಸ್ಸು ಮಾಡುವವನು ಸಿದ್ಧ ಪುರುಷನಾಗುವುದರಿಂದ ಇದಕ್ಕೆ ಸಿದ್ಧಾಶ್ರಮ ಎಂದು ಹೆಸರು" ಎಂದು ಹೇಳಿ, ವಾಮನನಾಗಿದ್ದಾಗ ವಿಷ್ಣು ತ್ರಿವಿಕ್ರಮಾವತಾರವನ್ನು ತಾಳಿ ಬಲಿ ಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದ ಕಥೆಯನ್ನು ವಿಸ್ತಾರವಾಗಿ ತಿಳಿಸಿದನು. ಕಥೆ ಮುಗಿಯುವ ಹೊತ್ತಿಗೆ ಅವರು ಆಶ್ರಮಕ್ಕೆ ಬಂದಿದ್ದರು. ಆಶ್ರಮವಾಸಿಗಳೆಲ್ಲರೂ ವಿಶ್ವಾಮಿತ್ರ ಮಹರ್ಷಿಯನ್ನೂ ರಾಜಪುತ್ರರನ್ನೂ ಕಂಡು ಆನಂದಭರಿತರಾದರು. ಅವರ ಆದರಾತಿಥ್ಯಗಳಿಂದ ಸಂತುಷ್ಟರಾದ ರಾಮಲಕ್ಷ್ಮಣರೂ ಸ್ವಲ್ಪಕಾಲ ವಿಶ್ರಮಿಸಿ ಕೊಂಡಮೇಲೆ ಆ ಕ್ಷಣವೇ ಯಜ್ಞದೀಕ್ಷೆಯನ್ನು ವಹಿಸುವಂತೆ ವಿಶ್ವಾಮಿತ್ರನನ್ನು ಪ್ರಾರ್ಥಿಸಿದರು. ಅವರ ಇಷ್ಟದಂತೆ ಮಹರ್ಷಿಯೂ ಒಡನೆಯೆ ದೀಕ್ಷಾಬದ್ಧನಾದನು.

ವಿಶ್ವಾಮಿತ್ರ ಋಷಿಯ ಯಜ್ಞಕಾಲದಲ್ಲಿ ರಾಮಲಕ್ಷ್ಮಣರು ಮೈಯೆಲ್ಲಾ ಕಣ್ಣಾಗಿ ಹಗಲೂ ರಾತ್ರಿಯೂ ಒಂದೇ ಸಮನಾಗಿ ಕಾವಲು ನಿಂತಿದ್ದರು. ಅವರ ಎಚ್ಚರವನ್ನು ಕಂಡು ಆಶ್ರಮದಲ್ಲಿದ್ದ ತಪಸ್ವಿಗಳೆಲ್ಲರೂ ಅವರನ್ನು ಬಾಯ್ತುಂಬ ಹೊಗಳಿದರು. ಮೊದಲ ಆರು ದಿನಗಳು ಯಾವ ತೊಂದರೆಯೂ ಇಲ್ಲದೆ ಕಳೆದುಹೋದುವು. ಏಳನೆಯ ದಿನವೆ ಯಜ್ಞ ಸಮಾಪ್ತಿಯಾಗುವ ದಿನ. ಶ್ರೀರಾಮನು ತಮ್ಮನನ್ನು ಕುರಿತು, "ಲಕ್ಷ್ಮಣಾ, ಈ ದಿನ ಬಹಳ ಎಚ್ಚರಿಕೆಯಿಂದಿರಬೇಕು" ಎಂದು ಹೇಳಿ ಬಿಲ್ಲಿಗೆ ಬಾಣ ಹೂಡಿಕೊಂಡೆ ಸಿದ್ಧವಾಗಿ ಕಾದು ನಿಂತಿದ್ದನು. ಯಜ್ಞವೇದಿಕೆಯಲ್ಲಿದ್ದ ಅಗ್ನಿಪುರುಷನು ಉಜ್ವಲವಾಗಿ ಪ್ರಜ್ವಲಿಸುತ್ತಿದ್ದನು. ಋತ್ವಿಕ್ಕುಗಳು ಮಂತ್ರಗಳನ್ನು ಪಠಿಸುತ್ತಾ ಇದ್ದರು. ಇದ್ದಕ್ಕಿದ್ದಂತೆ ಆಕಾಶದಿಂದ ಘೋರವಾದ ಶಬ್ದವೊಂದು ಕೇಳಿಬಂತು. ಗಗನಮಂಡಲವೆಲ್ಲವೂ ಮೋಡ ಮುಸುಕಿದಂತಾಯಿತು. ಮಾರೀಚ ಸುಬಾಹುಗಳೂ ಅವರ ಅನುಚರರೂ ಆಶ್ರಮದ ಮೇಲೆಲ್ಲ ನೆತ್ತರುಮಳೆ ಸುರಿಸಲು ಮೊದಲು ಮಾಡಿದರು. ಶ್ರೀರಾಮನು ತನ್ನ ಕಣ್ಣೆದುರಿಗೆ ನಡೆಯುತ್ತಿರುವ ಅತ್ಯಾಚಾರವನ್ನು ಕಂಡು ಕೆಂಗಣ್ಣಿನಿಂದ ರಕ್ಕಸರ ಕಡೆನೋಡುತ್ತಾ, ಮಾರೀಚನಿಗೆ ಗುರಿಯಿಟ್ಟು ಮಾನಸಾಸ್ತ್ರವನ್ನು ಪ್ರಯೋಗಿಸಿದನು ಅದು ಅವನನ್ನು ಬಿರುಗಾಳಿಯಲ್ಲಿನ ತರಗೆಲೆಯಂತೆ ಎತ್ತಿಕೊಂಡು ಹೋಗಿ ಸಾಗರದಲ್ಲಿ ಕೆಡಹಿತು. ಅನಂತರ ಶ್ರೀರಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ಸುಬಾಹುವನ್ನು ಸಂಹರಿಸಿ ನೆಲಕ್ಕೆ ಕೆಡವಿದನು. ಉಳಿದ ನೀಚರೆಲ್ಲರೂ ಶ್ರೀರಾಮನ ವಾಯವ್ಯಾಸ್ತ್ರಕ್ಕೆ

ತುತ್ತಾಗಿ ಹಾರಿಹೋದರು. ಆಮೇಲೆ ಯಾವುದೊಂದು ತೊಂದರೆಯೂ ಇಲ್ಲದೆ ಯಜ್ಞ ಮುಂದುವರಿದು ಸಾಂಗವಾಗಿ ನೆರವೇರಿತು.



ಇದ್ದಕ್ಕಿದ್ದಂತೆ ಆಕಾಶದಿಂದ ಘೋರವಾದ ಶಬ್ದವೊಂದು ಕೇಳಿಬಂತು. ಗಗನಮಂಡಲವೆಲ್ಲವೂ ಮೋಡ ಮುಸುಕಿದಂತಾಯಿತು.

ಯಜ್ಞಾಂತ್ಯದಲ್ಲಿ ಮಹರ್ಷಿಯಾದ ವಿಶ್ವಾಮಿತ್ರನು ರಾಮಚಂದ್ರನನ್ನು ಬರಸೆಳೆದು ಬಿಗಿಯಾಗಿ ಅಪ್ಪಿಕೊಂಡು "ಮಹಾಭುಜಶಾಲಿಯಾದ ರಘುನಂದನ, ನಿನ್ನಿಂದ ನಾನು ಕೃತಾರ್ಥನಾದೆ. ನಿನ್ನ ತಂದೆಯ ಆಜ್ಞೆಯನ್ನು ನೆರವೇರಿಸಿದ ನೀನೂ ಯಶೋವಂತನಾದೆ. ಇದೀಗ ಈ ಆಶ್ರಮದ ಹೆಸರು ಸಾರ್ಥಕವಾಯಿತು" ಎಂದು ಹೇಳಿದನು. ಋಷಿಗಳೆಲ್ಲರೂ ಆ ರಾಜಪುತ್ರರನ್ನು ಪರಿಪರಿಯಾದ ಉಪಚಾರೋಕ್ತಿಗಳಿಂದ ಗೌರವಿಸಿದರು. ಮಂಗಳದಲ್ಲಿ ಮುಕ್ತಾಯವಾದ ಯಜ್ಞವನ್ನು ಕಂಡು ಎಲ್ಲರೂ ಸಂತೋಷಭರಿತರಾದರು.

---

೪

# ಅಹಲ್ಯೆಯ ಉದ್ಧರಣ

ಮರುದಿನ ಬೆಳಿಗ್ಗೆ ಪ್ರಾತಃಕೃತ್ಯಗಳನ್ನೆಲ್ಲ ಪೂರೈಸಿ ರಾಮಲಕ್ಷ್ಮಣರು ಅಗ್ನಿ ಪುರುಷನಂತೆ ಬೆಳಗುತ್ತಿದ್ದ ವಿಶ್ವಾಮಿತ್ರನ ಬಳಿಗೆ ಹೋಗಿ "ಮುಂದೆ ನಮಗೇನು ಅಪ್ಪಣೆ?" ಎಂದು ಕೇಳಿದರು. ಅಂದು, ಸಿದ್ಧಾಶ್ರಮದ ಋಷಿಗಳೆಲ್ಲರೂ ಮಿಥಿಲಾ ಪಟ್ಟಣಕ್ಕೆ ಹೊರಟಿದ್ದರು. ಅಲ್ಲಿ ದೊರೆಯಾದ ಜನಕ ಮಹಾರಾಜನು ದೊಡ್ಡ ಯಾಗ ವೊಂದನ್ನು ಕೈಕೊಂಡಿದ್ದನು. ಋಷಿಗಳು ರಾಮಲಕ್ಷ್ಮಣರನ್ನು ತಮ್ಮೊಡನೆ ಬರುವಂತೆ ಬೇಡಿಕೊಂಡರು. "ಮಿಥಿಲಾ ಪಟ್ಟಣದಲ್ಲಿ ಒಂದು ಅದ್ಭುತವಾದ ಧನಸ್ಸು ಇದೆ. ದೈವದತ್ತವಾದ ಅದು ವಂಶಪರಂಪರೆಯಾಗಿ ಜನಕ ರಾಜನಿಗೆ ಬಂದುದು. ಅದನ್ನು ಹೆದೆಯೇರಿಸುವುದು ದೇವದಾನವ ಮಾನವರಲ್ಲಿ ಯಾರಿಗೂ ಸಾಧ್ಯವಿಲ್ಲ. ನೀವು ಅದನ್ನು ಒಮ್ಮೆ ನೋಡಬಹುದು" ಎಂದು ಹೇಳಿ ಅವರು ಆ ರಾಜಕುಮಾರರ ಕುತೂಹಲವನ್ನು ಕೆರಳಿಸಿದರು. ಹೊರಡಲು ಸಿದ್ಧರಾದ ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರ ಋಷಿ ಗುಂಪಿಗೆ ಮುಂದಾಳಾಗಿ ಹೊರಟನು.

ದಾರಿ ನಡೆಯುತ್ತಿರುವಾಗ ರಾಜಕುಮಾರರಿಗೆ ಬಳಲಿಕೆ ಕಾಣದಂತೆ ಮಾಡಲು ವಿಶ್ವಾಮಿತ್ರನು ಅನೇಕ ರಮ್ಯವಾದ ಕಥೆಗಳನ್ನು ಹೇಳುತ್ತಾ ಹೋದನು-ಕಾಂಪಿಲ್ಯನಗರಿ ಯ ಬ್ರಹ್ಮದತ್ತನು ಕುಶನಾಭನ ನೂರುಮಂದಿ ಕುವರಿಯರನ್ನು ಮದುವೆಯಾದ ಕಥೆ; ಗಂಗೆ ಗೌರಿಯರ ವೃತ್ತಾಂತ; ಕುಮಾರಸ್ವಾಮಿಯ ಜನನ ಪ್ರಸಂಗ; ಸಗರ ಕುಮಾರರು ಕಪಿಲಋಷಿ ಶಾಪದಿಂದ ದಗ್ಧರಾಗಿ,ಭಗೀರಥನಿಂದ ಮುಕ್ತಿಯನ್ನು ಪಡೆದುದು;ದೇವದಾನ ವರ ಸಮುದ್ರ ಮಂಥನ—ಮೊದಲಾದ ಮನೋಹರವಾದ ಕಥೆಗಳನ್ನು ತಲ್ಲೀನರಾಗಿ ಕೇಳುತ್ತಾ ಎಲ್ಲರೂ ಹೋಗುತ್ತಿರಲು,ಸಮೀಪದಲ್ಲಿಯೆ ಒಂದುಋಷ್ಯಾಶ್ರಮ ಕಾಣಿಸಿತು. ಶ್ರೀರಾಮನು ಕುತೂಹಲದಿಂದ ಅದರ ಕಥೆಯನ್ನು ಕೇಳಿದನು. ವಿಶ್ವಾಮಿತ್ರಋಷಿ ಹೇಳಿದನು—"ಇದು ಮಹಾಮನಸ್ವಿಯಾದ ಗೌತಮಋಷಿಯ ಆಶ್ರಮ. ಆತನು ತನ್ನ ಮಡದಿಯಾದ ಅಹಲ್ಯೆಯೊಡನೆ ಇಲ್ಲಿ ಬಹುಕಾಲ ತಪಸ್ಸು ಮಾಡುತ್ತಿದ್ದನು. ಆ ಮಹರ್ಷಿ ಇಲ್ಲದಿರುವ ಸಮಯವನ್ನು ಸಾಧಿಸಿ, ದೇವೇಂದ್ರನು ಋಷಿಯ ವೇಷದಿಂದ ಆಕೆಯ ಬಳಿಗೆ ಬಂದು "ಸುಂದರಿ, ನಿನ್ನೊಡನೆ ಸಮಾಗಮ ಸುಖವನ್ನು ಬಯಸುತ್ತೇನೆ" ಎಂದು ಹೇಳಿದನು. ಅಹಲ್ಯೆಗೆ ಆತನು ಇಂದ್ರನೆಂದು ತಿಳಿದರೂ ದೇವರಾಜನಾದ ಆತನಲ್ಲಿ ಕುತೂಹಲಿಯಾಗಿ ರತಿಕ್ರೀಡೆಯಲ್ಲಿ ನಿರತಳಾದಳು. ತನ್ನ ಮನೋರಥ ಸಿದ್ಧಿಯಾದ ಮೇಲೆ ಆಕೆ ದೇವೇಂದ್ರನನ್ನು ಕುರಿತು "ಎಲೈ ಸುರಶ್ರೇಷ್ಠನೆ, ನಾನು ಕೃತಾರ್ಥಳಾದೆ. ಇನ್ನು ಬೇಗ ತೆರಳು. ನಮ್ಮಿಬ್ಬರ ಮಾನವನ್ನು ಕಾಪಾಡುವ ಭಾರ ನಿನ್ನದು" ಎಂದು

ಹೇಳಿದಳು. ಇಂದ್ರನೂ "ಎಲೈ ಸುಶ್ರೋಣಿಯೆ, ನಾನು ಸಂತುಷ್ಟನಾದೆ; ಹೋಗಿ ಬರುತ್ತೇನೆ" ಎಂದು ಹೇಳಿ ಹೊರಡುವಷ್ಟರಲ್ಲಿ ಗೌತಮನು ಅಲ್ಲಿಗೆ ಬಂದನು. ದಿವ್ಯ ದೃಷ್ಟಿಯಿಂದ ಎಲ್ಲವನ್ನೂ ಅರಿತ ಆತನು ಆ ಪಾಪಿಗಳಿಬ್ಬರನ್ನೂ ಶಪಿಸಿ, ತಾನು ಕೈಲಾಸ ಪರ್ವತಕ್ಕೆ ಹೊರಟುಹೋದನು. ಆತನ ಶಾಪದಿಂದ ಅಹಲ್ಯೆ ಬೂದಿಯಲ್ಲಿ ಬಿದ್ದು ಹೊರಳುತ್ತಾ, ಯಾರ ಕಣ್ಣಿಗೂ ಬೀಳದೆ, ಈ ತಪೋವನದಲ್ಲಿ ಬಿದ್ದಿರುತ್ತಾಳೆ. ನಿನ್ನ ದರ್ಶನದಿಂದ ಆಕೆಯ ಶಾಪವಿಮೋಚನೆಯಾಗುವುದು. ಆದ್ದರಿಂದ ಈ ವನವನ್ನು ಪ್ರವೇಶಿಸು."



ಒಡನೆಯೆ ಅಹಲ್ಯೆ ಆತನ ಕಣ್ಣಿಗೆ ಕಾಣಿಸಿದಳು.

ಗುರುವಿನ ಅಪ್ಪಣೆಯಂತೆ ಶ್ರೀರಾಮನು ಎಲ್ಲರೊಡನೆ ಆ ಆಶ್ರಮವನ್ನು ಪ್ರವೇಶಿಸಿದನು. ಒಡನೆಯೆ ಅಹಲ್ಯೆ ಆತನ ಕಣ್ಣಿಗೆ ಕಾಣಿಸಿದಳು. ಬ್ರಹ್ಮನು ಪ್ರಯತ್ನ ಪೂರ್ವಕವಾಗಿ ಸೃಷ್ಟಿಸಿದ ಮಾಯೆಯಂತೆಯೂ, ಮೋಡ ಮುಚ್ಚಿದ ಚಂದ್ರಲೇಖೆ ಯಂತೆಯೂ, ಜಲಮಧ್ಯದಲ್ಲಿ ಜ್ವಲಿಸುವ ಸೂರ್ಯಬಿಂಬದಂತೆಯೂ ಬೆಳಗುತ್ತಿದ್ದ ಆಕೆಗೆ ರಾಮಲಕ್ಷ್ಮಣರು ಕಾಲುಮುಟ್ಟಿ ನಮಸ್ಕರಿಸಿದರು. ಆಕೆಯೂ ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದಳು. ಆ ವೇಳೆಗೆ ಗೌತಮಋಷಿ ಅಲ್ಲಿ ಪ್ರತ್ಯಕ್ಷನಾಗಿ, ತಪಸ್ಸಿನಿಂದ ಪರಿಶುದ್ಧಳಾದ ತನ್ನ ಪತ್ನಿಯನ್ನು ಪುನಃ ಸ್ವೀಕರಿಸಿ, ಶ್ರೀರಾಮನನ್ನು ಸತ್ಕಾರದಿಂದ ಸಂತೋಷಪಡಿಸಿದನು.

---

೫

# ಶಿವಧನುರ್ಭಂಗ

ಗೌತಮಋಷಿಯ ಆಶ್ರಮದಲ್ಲಿ ಸ್ವಲ್ಪ ಕಾಲ ವಿಶ್ರಾಂತಿ ಪಡೆದು, ಎಲ್ಲರೂ ಈಶಾನ್ಯಾಭಿಮುಖವಾಗಿ ಪ್ರಯಾಣ ಬೆಳೆಸಿ, ಜನಕ ಮಹಾರಾಜನ ಯಜ್ಞ ಶಾಲೆಯನ್ನು ಸೇರಿದರು. ಅಲ್ಲಿ ವಿಶ್ವಾಮಿತ್ರಋಷಿ ಜನಕ ಮಹಾರಾಜನಿಗೆ ರಾಮಲಕ್ಷ್ಮಣರ ಪರಿಚಯ ಮಾಡಿಕೊಟ್ಟು, ಅವರಿಂದ ಮಾರೀಚ ಸುಬಾಹುಗಳು ಭಂಗಪಟ್ಟುದನ್ನೂ ಅಹಲ್ಯೆಯ ಶಾಪವಿಮೋಚನೆಯಾದುದನ್ನೂ ವಿಸ್ತಾರವಾಗಿ ವಿವರಿಸಿ ಹೇಳಿದನು. ತಾಯಿಯ ಶಾಪವಿಮೋಚನೆಯಾದುದನ್ನು ಕೇಳಿ ಅಲ್ಲಿ ಋಷಿಗಳೊಡನಿದ್ದ ಗೌತಮನ ಹಿರಿಯ ಮಗನಾದ ಶತಾನಂದನಿಗೆ ಅತ್ಯಂತ ಸಂತೋಷವಾಯಿತು. ಕ್ಷತ್ರಿಯನಾಗಿದ್ದ ವಿಶ್ವಾಮಿತ್ರನು ಬ್ರಹ್ಮಋಷಿಯಾದ ಕಥೆಯನ್ನು ಆತನು ವಿಸ್ತಾರವಾಗಿ ರಾಮ ಲಕ್ಷ್ಮಣರಿಗೆ ಅರುಹಿದನು.

"ಗಾಧಿಪುತ್ರನಾದ ವಿಶ್ವಾಮಿತ್ರ ರಾಜ್ಯಭಾರಮಾಡುತ್ತಾ ಇರುವಾಗ ಒಂದು ದಿನ ಸಪರಿವಾರನಾಗಿ ವಸಿಷ್ಠರ ಆಶ್ರಮಕ್ಕೆ ಹೋದ. ಅವರು ಕಾಮಧೇನುವಿನ ಸಹಾಯದಿಂದ ಆತನನ್ನೂ ಆತನ ಪರಿವಾರವನ್ನೂ ಪರಿಪರಿಯಾಗಿ ಸತ್ಕರಿಸಿ ಸಂತುಷ್ಟಿಗೊಳಿಸಿದರು. ಅಸಂಖ್ಯಾತ ಜನರಿಗೆ ಷಡ್ರಸೋಪೇತವಾದ ಆಹಾರವನ್ನು ಒದಗಿಸಿದ ಆ ಧೇನುವಿನಲ್ಲಿ ರಾಜನಿಗೆ ಮನಸ್ಸಾಯಿತು. ಅದನ್ನು ತನಗೆ ಕೊಟ್ಟುಬಿಡುವಂತೆ ವಸಿಷ್ಠರನ್ನು ಪ್ರಾರ್ಥಿಸಿದ. ಆದರೆ ನಿತ್ಯಾನುಷ್ಠಾನಗಳಿಗೆ ಮುಖ್ಯ ಅಧಿಕಾರಿಗಳಾಗಿದ್ದು ಆ ಧೇನುವನ್ನು ಬಿಟ್ಟುಕಳುಹಲು ಅವರು ಒಪ್ಪಲಿಲ್ಲ. ಆದ್ದರಿಂದ ವಿಶ್ವಾಮಿತ್ರ ಅದನ್ನು ಬಲಾತ್ಕಾರವಾಗಿ ಸೆಳೆದ. ಆಗ ಧೇನು ವಸಿಷ್ಠರ ಅಪ್ಪಣೆ ಪಡೆದು ಅಸಂಖ್ಯಾತವಾದ ಸೈನ್ಯವನ್ನು ಸೃಷ್ಟಿಸಿ ವಿಶ್ವಾಮಿತ್ರನ ಸೇನೆಯೆಲ್ಲವನ್ನೂ ಧ್ವಂಸಮಾಡಿತು. ವಿಶ್ವಾಮಿತ್ರನ ನೂರ್ವರು ಮಕ್ಕಳೂ ವಸಿಷ್ಠರ ಹೂಂಕಾರ ಮಾತ್ರದಿಂದಲೆ ಭಸ್ಮವಾಗಿ ಹೋದರು. ಹೀಗೆ ಭಂಗಿತನಾದ ಆ ರಾಜನು ಉಳಿದೊಬ್ಬ ಮಗನಿಗೆ ರಾಜ್ಯವನ್ನು ವಹಿಸಿ, ತಾನು ಹಿಮವತ್ಪರ್ವತದ ಮೇಲೆ ಪರಶಿವನನ್ನು ಕುರಿತು ತಪಸ್ಸು ಮಾಡುತ್ತಾ ಕುಳಿತನು. ಆತನ ತಪಸ್ಸಿಗೆ ಮೆಚ್ಚಿ ಪರಮೇಶ್ವರನು ಸಕಲ ದಿವ್ಯಾಸ್ತ್ರಗಳನ್ನೂ ಆತನಿಗೆ ಕರುಣಿಸಿದನು. ಆಗ ವಿಶ್ವಾಮಿತ್ರನು ಮತ್ತೊಮ್ಮೆ ವಸಿಷ್ಠಾಶ್ರಮವನ್ನು ಸೇರಿ, ಆ ಆಶ್ರಮವನ್ನೆಲ್ಲ ಧ್ವಂಸಮಾಡತೊಡಗಿದನು. ಇದನ್ನು ಕಂಡು ಕುಪಿತರಾದ ವಸಿಷ್ಠರು ತಮ್ಮ ಬ್ರಹ್ಮದಂಡವನ್ನು ಪ್ರಯೋಗಿಸಲು, ಅದು ಆ ರಾಜನ ಶಸ್ತ್ರಾಸ್ತ್ರಗಳನ್ನೆಲ್ಲ ನುಂಗಿಹಾಕಿತು. ಬ್ರಹ್ಮಾಸ್ತ್ರ ಪ್ರಯೋಗವು ಕೂಡ ವಸಿಷ್ಠಋಷಿಯ ಮುಂದೆ ವ್ಯರ್ಥವಾಗಿ ಹೋಯಿತು. ಆಗ ಕ್ಷತ್ರಿಯ ಪುಂಗವನು "ಧಿಕ್ ಬಲಂ ಕ್ಷತ್ರಿಯ ಬಲಂ, ಬ್ರಹ್ಮತೇಜೋ ಬಲಂ ಬಲಂ!" (ಕ್ಷತ್ರಿಯ ಬಲಕ್ಕೆ

ಧಿಕ್ಕಾರ; ಬಲವೆಂದರೆ ಬಲ ಬ್ರಹ್ಮತೇಜಸ್ಸು) ಎಂದುಕೊಂಡು ಬ್ರಹ್ಮಋಷಿಯಾಗುವುದಕ್ಕಾಗಿ ಮತ್ತೊಮ್ಮೆ ಭಯಂಕರವಾದ ತಪಸ್ಸನ್ನು ಕೈಗೊಂಡನು. ಅದರಿಂದ ಆತನಿಗೆ ಅಸಾಧಾರಣವಾದ ಶಕ್ತಿ ಸಾಮರ್ಥ್ಯಗಳು ಸಿದ್ಧಿಸಿದುವು. ತ್ರಿಶಂಕು ಮಹಾರಾಜನಿಗಾಗಿ ಒಂದು ಪ್ರತ್ಯೇಕ ಸ್ವರ್ಗವನ್ನೆ ನಿರ್ಮಿಸಿಕೊಟ್ಟನು. ಆದರೂ ಆತನು ಬ್ರಹ್ಮಋಷಿಯ ಪದವಿಯನ್ನು ಮಾತ್ರ ಪಡೆಯಲಿಲ್ಲ. ಅದಕ್ಕಾಗಿ ಮತ್ತೆ ಮತ್ತೆ ತಪವನ್ನಾಚರಿಸಿದನು. ಆತನಿಗೆ ಬಂದ ವಿಘ್ನಗಳು ಒಂದಲ್ಲ, ಎರಡಲ್ಲ. ಅವುಗಳನ್ನೆಲ್ಲ ನಿಗ್ರಹಿಸಿಕೊಂಡು ಆತನು ಸಿದ್ಧಿ ಪಡೆದನು. ಕಡೆಗೆ ವಸಿಷ್ಠರ ಬಾಯಿಂದಲೆ "ನೀನು ಬ್ರಹ್ಮಋಷಿಯಾದೆ, ಎಂದು ಹೊಗಳಿಸಿಕೊಂಡನು."

ರಾಗದ್ವೇಷಗಳಿಂದ ತುಂಬಿ ತುಳುಕುತ್ತಿದ್ದ ಆ ರಾಜನು ಶಮದಮಾದಿಗಳಿಂದ ಕೂಡಿ ಮಹರ್ಷಿಯಾದ ಕಥೆಯನ್ನು ಕೇಳಿ ರಾಮಲಕ್ಷ್ಮಣರು ಅತ್ಯಂತ ಸಂತೋಷಗೊಂಡವರಾಗಿ ವಿಶ್ವಾಮಿತ್ರನೊಡನೆ ತಮ್ಮ ಬಿಡಾರಕ್ಕೆ ತೆರಳಿ ವಿಶ್ರಾಂತಿಗೊಂಡರು.



ಶಿವಧನಸ್ಸು ಮಧ್ಯಕ್ಕೆ ಸರಿಯಾಗಿ ಮುರಿದುಹೋಯಿತು

ಮರುದಿನ ಬೆಳಿಗ್ಗೆ ವಿಶ್ವಾಮಿತ್ರನು ತನ್ನ ಬಳಿಗೆ ಬಂದ ಜನಕ ಮಹಾರಾಜನನ್ನು ಕುರಿತು ಧನುರ್ವಿದ್ಯಾವಿಶಾರದರಾದ ರಾಮಲಕ್ಷ್ಮಣರಿಗೆ ಆತನ ಬಳಿ ಇರುವ ದಿವ್ಯ ಧನುಸ್ಸನ್ನು ತೋರಿಸುವಂತೆ ಕೇಳಿಕೊಂಡನು. ಜನಕ ಮಹಾರಾಜನು ಆ ಧನುಸ್ಸಿನ ಕಥೆಯನ್ನು ಹೇಳುತ್ತಾ "ಇದು ಪರಮೇಶ್ವರನ ಧನುಸ್ಸು. ದಕ್ಷಯಜ್ಞವನ್ನು ಧ್ವಂಸ ಮಾಡುವ ಕಾಲದಲ್ಲಿ ಸ್ವತಃ ಪರಶಿವನೇ ಅನುಸಂಧಾನಮಾಡಿದ್ದನು. ಆಗ ದೇವತೆಗಳೆಲ್ಲರೂ ಆತನನ್ನು ಪರಿಪರಿಯಾಗಿ ಸ್ತುತಿಸಿ ಪ್ರಾರ್ಥಿಸಲು ಸುಪ್ರೀತನಾದ ಶಂಕರನು ಅದನ್ನು

ದೇವತೆಗಳಿಗೆ ಕೊಟ್ಟನು. ನಮ್ಮ ವಂಶದಲ್ಲಿ ಆರನೆಯವನಾದ ದೇವರಾತನು ಮಾಡಿದ ಯಜ್ಞದಿಂದ ಸುಪ್ರೀತರಾದ ದೇವತೆಗಳು ಆ ಧನುಸ್ಸನ್ನು ಆತನಿಗೆ ಕೊಟ್ಟರು. ಅಂದಿನಿಂದಲೂ ಇದು ನಮ್ಮ ವಂಶದ ಒಂದು ಹಿರಿಯ ಆಸ್ತಿಯಾಗಿ ಉಳಿದುಕೊಂಡು ಬಂದಿದೆ. ನಾನು ಯಜ್ಞಕ್ಕಾಗಿ ಭೂಶೋಧನೆ ಮಾಡುತ್ತಿದ್ದಾಗ ಅನುಪಮಸುಂದರಿಯಾದ ಕನ್ಯೆಯೊಬ್ಬಳು ನೇಗಿಲಿಗೆ ಸಿಕ್ಕಿದಳು. ಆಕೆಗೆ ಸೀತೆಯೆಂದು ಹೆಸರಿಟ್ಟು ಅತ್ಯಂತ ಮೋಹದಿಂದ ಬೆಳೆಸಿರುತ್ತೇನೆ. ನನ್ನಲ್ಲಿರುವ ಧನುಸ್ಸನ್ನು ಬಗ್ಗಿಸಬಲ್ಲವರಿಗೆ ಅಯೋನಿಜೆಯಾದ ಆ ನನ್ನ ಸಾಕುಮಗಳನ್ನು ವಿವಾಹಮಾಡಿಕೊಡಬೇಕೆಂದಿದ್ದೇನೆ. ಇದುವರೆಗೆ ಹಲವಾರು ರಾಜಪುತ್ರರು ಆ ಬಿಲ್ಲನ್ನು ಬಗ್ಗಿಸಹೊರಟು ವಿಫಲ ಮನೋರಥರಾಗಿದ್ದಾರೆ. ಈ ರಾಜಕುಮಾರರಿಗೂ ಆ ಧನುಸ್ಸನ್ನು ತೋರಿಸುತ್ತೇನೆ.ಒಂದುವೇಳೆ ಶ್ರೀರಾಮನು ಆ ಬಿಲ್ಲನ್ನು ಬಾಗಿಸಿ ಸೀತೆಯನ್ನು ಪಾಣಿಗ್ರಹಣ ಮಾಡುವಂತಾದರೆ ಬಹಳ ಸಂತೋಷ.

ಅನಂತರ ಜನಕ ಮಹಾರಾಜನು ಆ ಧನುಸ್ಸನ್ನು ಅಲ್ಲಿಗೆ ತರಿಸುವಂತೆ ಮಂತ್ರಿಗಳಿಗೆ ಆಜ್ಞಾಪಿಸಿದನು. ಆ ಬಿಲ್ಲನ್ನು ಎಂಟು ಚಕ್ರಗಳುಳ್ಳ ರಥದಲ್ಲಿಟ್ಟುಕೊಂಡು ಐದುಸಹಸ್ರ ಜನ ಯೋಧರು ಅದನ್ನು ನೂಕಿಕೊಂಡು ಬಂದರು. ಆಗ ವಿಶ್ವಾಮಿತ್ರನು ರಾಮನನ್ನು ಕುರಿತು "ವತ್ಸ ರಾಮ, ಆ ಧನುಸ್ಸನ್ನು ನೋಡು" ಎಂದನು. ಶ್ರೀರಾಮನು ಆ ಬಿಲ್ಲನ್ನು ನೋಡಿ ವಿಶ್ವಾಮಿತ್ರನನ್ನು ಕುರಿತು "ಗುರುದೇವ ಇದು ಬಹುದೊಡ್ಡ ಬಿಲ್ಲೇ ಸರಿ. ನಾನು ಇದನ್ನು ಮುಟ್ಟಿ ನೋಡಲೆ? ಸಾಧ್ಯವಾದರೆ ಹೆದೆಯೇರಿಸುವುದಕ್ಕೂ ಪ್ರಯತ್ನಿಸುತ್ತೇನೆ" ಎಂದನು. ಜನಕ ಮಹಾರಾಜನು "ಆಗಬಹುದು" ಎಂದನು. ಶ್ರೀರಾಮನು ಒಡನೆಯೆ ಆ ಧನುಸ್ಸಿನ ಮಧ್ಯವನ್ನು ಹಿಡಿದು ಲೀಲಾಜಾಲವಾಗಿ ಮೇಲಕ್ಕೆತ್ತಿ ಹೆದೆಯೇರಿಸಿದನು. ಅನಂತರ ಅದನ್ನು ಬಿಗಿ ಮಾಡುವುದಕ್ಕಾಗಿ ಬಿಲ್ಲನ್ನು ಮತ್ತಷ್ಟು ಬಗ್ಗಿಸಿದನು. ಅದು ಮಧ್ಯಕ್ಕೆ ಸರಿಯಾಗಿ ಮುರಿದುಹೋಯಿತು. ಆಗ ಉಂಟಾದ ಶಬ್ದದಿಂದ ಭೂಮಿ ನಡುಗಿಹೋಯಿತು; ಅಲ್ಲಿದ್ದ ಜನರೆಲ್ಲರೂ ಸ್ತಬ್ಧರಾಗಿ ಮೈಮರೆತು ಭೂಮಿಯಮೇಲೆ ಬಿದ್ದರು.

ಸ್ವಲ್ಪ ಹೊತ್ತಾದಮೇಲೆ ಮೂರ್ಛೆಗೊಂಡಿದ್ದವರೆಲ್ಲರೂ ಮೇಲಕ್ಕೆದ್ದರು. ಶ್ರೀರಾಮನ ಪರಾಕ್ರಮವನ್ನು ಕಂಡು ಜನರೆಲ್ಲರೂ ವಿಸ್ಮಿತರಾದರು. ಜನಕ ಮಹಾರಾಜನ ಸಂತೋಷಕ್ಕೆ ಪಾರವೇ ಇರಲಿಲ್ಲ. "ಈ ಎಳೆಯ ಬಾಲಕನ ಬಾಹುಗಳಲ್ಲಿ ಅದೆಷ್ಟು ಶಕ್ತಿ ತುಂಬಿದೆ! ಇಂತಹ ಗಂಡನನ್ನು ಪಡೆದ ನನ್ನ ಮಗಳು ಧನ್ಯಳೇ ಸರಿ. ನನ್ನ ಪ್ರಾಣಕ್ಕಿಂತಲೂ ಅಧಿಕಳಾದ ಸೀತೆಯನ್ನು ವರಿಸಲು ರಾಮನೇ ಅರ್ಹ" ಎಂದು ವಿಶ್ವಾಮಿತ್ರನಿಗೆ ತಿಳಿಸಿ, ಒಡನೆಯೆ ದಶರಥನನ್ನು ಕರೆತರುವಂತೆ ಹೇಳಿ ಮಂತ್ರಿಗಳನ್ನು ಅಯೋಧ್ಯೆಗೆ ಅಟ್ಟಿದನು.

---

೬

# ಸೀತಾ ಕಲ್ಯಾಣ

ಜನಕ ಮಹಾರಾಜನು ಹೇಳಿ ಕಳುಹಿಸಿದ್ದ ಒಸಗೆನುಡಿಗಳನ್ನು ಕೇಳಿ ದಶರಥ ಮಹಾರಾಜನಿಗೆ ಆದ ಆನಂದವನ್ನು ಅದಾರು ವರ್ಣಿಸಬಲ್ಲರು? ಆತನು ಮಂತ್ರಿ ಪುರೋಹಿತರ ಮುಂದೆ "ನಮ್ಮ ಕೌಸಲ್ಯಾನಂದನ ಶಿವಧನುಸ್ಸನ್ನು ಮುರಿದನಂತೆ! ಜನಕಮಹಾರಾಜನು ಆತನ ಪರಾಕ್ರಮಕ್ಕೆ ಮೆಚ್ಚಿ ತನ್ನ ಮಗಳನ್ನು ವಿವಾಹಮಾಡಿ ಕೊಡಲು ಬಯಸಿರುವನಂತೆ! ನಿಮಗೆಲ್ಲಾ ಇದು ಒಪ್ಪಿಗೆಯಷ್ಟೆ? ಈ ಸಂಬಂಧ ನಿಮಗೆ ರುಚಿಸುವಂತಿದ್ದರೆ ಒಡನೆಯೆ ವಿದೇಹಕ್ಕೆ ಹೊರಡೋಣ" ಎಂದು ಹೇಳಿದನು. ಮಂತ್ರಿ ಪುರೋಹಿತರು ಈ ಸಂಬಂಧವನ್ನು ಬಹುವಾಗಿ ಪ್ರಶಂಸಿಸಿ ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಮದುವೆಯ ದಿಬ್ಬಣ ಅತ್ಯಂತ ಸಂಭ್ರಮದಿಂದ ಅಯೋಧ್ಯೆಯನ್ನು ಬಿಟ್ಟು ಮಿಥಿಲೆಯನ್ನು ಸೇರಿತು. ಆ ಸಂತೋಷ ಸಮಾಚಾರವನ್ನು ಕೇಳಿ ಜನಕ ಮಹಾರಾಜನು ಅಮೂಲ್ಯವಾದ ಕಾಣಿಕೆಗಳೊಡನೆ ರಾಮನ ತಂದೆಯನ್ನು ಇದಿರುಗೊಂಡು, "ದೇವತೆಗಳೊಡಗೂಡಿ ದೇವೇಂದ್ರನೇ ನನ್ನ ಮನೆಗೆ ಬಂದಂತಾಯಿತು" ಎಂಬ ಉಪಚಾರೋಕ್ತಿಗಳೊಡನೆ ಆತನನ್ನು ಸಂಭಾವಿಸಿದನು. ದಶರಥ ಮಹಾರಾಜನ ಸಂಬಂಧ ದೊರೆತುದು ತನ್ನ ಪೂರ್ವಪುಣ್ಯವೆಂದೂ ಈ ಸಂಬಂಧದಿಂದ ತನ್ನ ವಂಶ ಪಾವನವಾಯಿತೆಂದೂ ಹೇಳಿ ಆತನನ್ನು ಸಂತೋಷಪಡಿಸಿದನು. ದಶರಥನೂ ಉಚಿತವಾಗಿ ಪ್ರತ್ಯುತ್ತರ ಕೊಡುತ್ತಾ, "ನಿನಗೆ ತಿಳಿಯದ ಧರ್ಮ ಯಾವುದಿದೆ? ನಿನ್ನ ಇಷ್ಟದಂತೆ ನಡೆದುಕೊಳ್ಳಲು ನಾನು ಸಿದ್ಧನಾಗಿದ್ದೇನೆ" ಎಂದು ಹೇಳಿದನು. ಪರಸ್ಪರ ಸೌಜನ್ಯದಿಂದ ಇಬ್ಬರೂ ಸಂತೋಷಗೊಂಡರು. ಅಷ್ಟರಲ್ಲಿ ರಾಮಲಕ್ಷ್ಮಣರು ಅಲ್ಲಿಗೆ ಬಂದರು. ದಶರಥನು ವರ್ಧಿಷ್ಣುಗಳಾದ ಮಕ್ಕಳನ್ನು ಕಣ್ಣಾರೆ ಕಂಡು ಮನವಾರೆ ನಲಿದನು.

ಶ್ರೀರಾಮನ ಮದುವೆಯ ಜೊತೆಯಲ್ಲಿಯೆ ಲಕ್ಷ್ಮಣ, ಭರತ, ಶತ್ರುಘ್ನರ ಮದುವೆಗಳೂ ನಡೆಯಲೆಂದು ವಸಿಷ್ಠರೂ ವಿಶ್ವಾಮಿತ್ರರೂ ಸೂಚಿಸಿದರು. ಆ ಮಾತನ್ನು ದಶರಥ ಜನಕರಿಬ್ಬರೂ ಸಂತೋಷದಿಂದ ಒಪ್ಪಿದರು. ಜನಕರಾಜನ ಔರಸ ಪುತ್ರಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ಜನಕಮಹಾರಾಜನ ಸೋದರನಾದ ಕುಶಧ್ವಜನ ಪುತ್ರಿಯಾದ ಮಾಂಡವಿ ಶ್ರುತಕೀರ್ತಿಯರನ್ನು ಭರತ ಶತ್ರುಘ್ನರಿಗೂ ವಿವಾಹ ಮಾಡಿಕೊಡುವುದೆಂದು ನಿಶ್ಚಯವಾಯಿತು. ಬೀಗರಿಬ್ಬರೂ ತಮ್ಮ ವಂಶ ಪ್ರವರಗಳನ್ನು ಹೇಳಿ ಗುರುಹಿರಿಯರ ಇದಿರಿನಲ್ಲಿ ಕೊಳುಕೊಡೆಯನ್ನು ನಿಶ್ಚಯಿಸಿದರು. ಮರು ದಿನ ಮದುವೆ ಎಂದಿರುವಾಗ ದಶರಥನು ದೇವತಾಪೂಜೆ ನಾಂದೀ ಕಾರ್ಯಗಳನ್ನು ನಡಸಿ ಯಥೇಚ್ಛವಾಗಿ ದಾನಧರ್ಮ ಮಾಡಿದನು. ಆ ದಿನವೆ ಕೈಕೆಯ

ಅಣ್ಣನಾದ ಯುಧಾಜಿತ್ತು ಅಲ್ಲಿಗೆ ಬಂದನು. ಆತನ ತಂದೆಯಾದ ಕೇಕಯ ರಾಜನು ತನ್ನ ಮೊಮ್ಮಗನಾದ ಭರತನನ್ನು ನೋಡಬೇಕೆಂದು ಅಪೇಕ್ಷಿಸಿದುದರಿಂದ ಆತನನ್ನು ಕರೆದುಕೊಂಡು ಹೋಗಬೇಕೆಂದು ಆತನು ಅಯೋಧ್ಯೆಗೆ ಹೋಗಿ ಅಲ್ಲಿಂದ ಎಲ್ಲರೂ ಮಿಥಿಲಾ ನಗರಿಗೆ ಹೋಗಿರುವ ಸುದ್ದಿಯನ್ನು ಕೇಳಿ ಬಂದಿದ್ದನು. ಈ ಪ್ರಿಯ ಬಂಧುವಿನ ಆಗಮನದಿಂದ ದಶರಥ ರಾಜನ ಸಂತೋಷ ಇಮ್ಮಡಿಸಿತು.

ಮರು ದಿನ ವಿವಾಹ ಅತ್ಯಂತ ವೈಭವದಿಂದ ನಡೆಯಿತು. ಬಂಧು ಬಾಂಧವರೂ ಇಷ್ಟಮಿತ್ರರೂ ಋಷಿಗಳೂ ಬ್ರಾಹ್ಮಣಾದಿ ಪ್ರಜಾವರ್ಗದವರೂ ಅಸಂಖ್ಯಾತರಾಗಿ ನೆರೆದಿದ್ದಾರೆ. ವಿವಾಹ ಮಂಟಪದಲ್ಲಿ ಶಾಸ್ತ್ರೋಕ್ತವಾಗಿ ಮಾಡಿದ ವೇದಿಕೆಯ ಮೇಲಿನ ಅಗ್ನಿಯಲ್ಲಿ ವಸಿಷ್ಠ ಋಷಿಗಳು ಹೋಮಕಾರ್ಯವನ್ನು ನೆರವೇರಿಸಿದರು. ಅನಂತರ ಜನಕ ಮಹಾರಾಜನು ಸರ್ವಾಲಂಕಾರಭೂಷಿತೆಯಾದ ತ್ರಿಭುವನ ದೇವತೆಯಂತೆ ಕಂಗೊಳಿಸುತ್ತಿದ್ದ ಸೀತಾದೇವಿಯನ್ನು ಕೈಹಿಡಿದು ಕರೆತಂದು, ಶ್ರೀರಾಮನಿಗೆ ಇದಿರಾಗಿ ವೇದಿಕೆಯ ಮುಂದೆ ನಿಲ್ಲಿಸಿ, "ಕುಮಾರ, ಇಗೋ ಈ ಕನ್ಯಾಮಣಿ ಸೀತೆ ನನ್ನ ಮಗಳು; ಇಂದಿನಿಂದ ಇವಳು ನಿನ್ನ ಧರ್ಮಪತ್ನಿ ; ಮಹಾಪತಿವ್ರತೆಯಾಗಿ ನಿನ್ನ ನೆಳಲಿನಂತೆ ನಿನ್ನನ್ನು ಅನುವರ್ತಿಸುವಳು; ಇವಳನ್ನು ಕೈಹಿಡಿ" ಎಂದು ಹೇಳಿದನು. ಧಾರಾಪೂರ್ವಕವಾಗಿ ಆಕೆಯನ್ನು ಶ್ರೀರಾಮನಿಗೆ ಒಪ್ಪಿಸುತ್ತಿರಲು ನೆರದಿದ್ದವರೆಲ್ಲರೂ ಸಂತೋಷದಿಂದ ಆನಂದಬಾಷ್ಪಗಳನ್ನು ಸುರಿಸುತ್ತಾ ನೂತನ ದಂಪತಿಗಳನ್ನು ಮನಸ್ಸು ತುಂಬಿ ಬಾಯ್ತುಂಬ ಹರಸಿದರು. ಆಕಾಶದಲ್ಲಿ ದೇವದುಂದುಭಿ ಮೊಳಗಿದುವು ; ಪುಷ್ಪವೃಷ್ಟಿಯಾಯಿತು. ಅನಂತರ ಜನಕ ಮಹಾರಾಜನು ಊರ್ಮಿಳೆಯನ್ನು ಲಕ್ಷ್ಮಣನಿಗೂ, ತನ್ನ ತಮ್ಮನ ಪುತ್ರಿಯರನ್ನು ಭರತ ಶತ್ರುಘ್ನರಿಗೂ ಧಾರೆಯೆರೆದು ಕೊಟ್ಟನು. ರಾಜಪುತ್ರರು ನಾಲ್ವರೂ ತಮ್ಮ ತಮ್ಮ ಮಡದಿಯರ ಕೈಹಿಡಿದು ಕೊಂಡು ಯಜ್ಞೇಶ್ವರನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ. ಹಿರಿಯರ ಆಶೀರ್ವಾದಗಳೊಡನೆ ತಮ್ಮ ಬಿಡಾರಕ್ಕೆ ತೆರಳಿದರು.

---

# ಅಯೋಧ್ಯಾಕಾಂಡ

---

## ೧

## ಪಟ್ಟಾಭಿಷೇಕ ಪ್ರಯತ್ನ

ಭರತ ಶತ್ರುಘ್ನರು ಮಾವನ ಮನೆಯಿಂದ ಇನ್ನೂ ಹಿಂದಿರುಗಿರಲಿಲ್ಲ. ಸೋದರ ಮಾವ ಯುಧಾಜಿತ್ತು ಅವರನ್ನು ತನ್ನ ಹೊಟ್ಟೆಯ ಮಕ್ಕಳಂತೆ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದನು. ಆದರೂ ವೃದ್ಧನಾದ ತಂದೆಯಿಂದ ಬಹುಕಾಲ ಅಗಲಿರುವುದು ಅವರಿಗೆ ಅನುಚಿತವೆನಿಸುತ್ತಿತ್ತು. ಇತ್ತ ದಶರಥನು ಆಗಾಗ ಆ ಮಕ್ಕಳನ್ನೂ ನೆನೆದು ಕೊಂಡು ಹಂಬಲಿಸುತ್ತಿದ್ದನು. ಮುಪ್ಪಿನಲ್ಲಿ ಮಕ್ಕಳನ್ನು ಪಡೆದ ಆತನಿಗೆ ಇದು ಕೇವಲ ಸ್ವಾಭಾವಿಕವಾಗಿತ್ತು.

ದಶರಥನಿಗೆ ನಾಲ್ವರು ಮಕ್ಕಳಲ್ಲಿಯೂ ಅತಿಶಯವಾದ ಪ್ರೀತಿ. ಅದರಲ್ಲಿಯೂ ಶ್ರೀರಾಮನೆಂದರೆ ಆತನ ಅಂತಃಕರಣ ಕರಗಿಹೋಗುತ್ತಿತ್ತು. ಇದಕ್ಕೆ ಕಾರಣವಿಲ್ಲದೆ ಇರಲಿಲ್ಲ. ಶ್ರೀರಾಮನೆಂದರೆ ಶಾಂತಮೂರ್ತಿ; ಆತನ ಮಾತು ಮೃದು, ಮಧುರ. ಪರೋಪಕಾರ ಆತನ ಹುಟ್ಟುಗುಣ; ಕಷ್ಟದಲ್ಲಿರುವವರನ್ನು ಕಂಡರೆ ಕರಗಿಹೋಗುವನು. ಅವರಿಗೆ ಸಹಾಯಮಾಡಲು ಸದಾ ಕಾತರನಾಗಿರುವನು. ಗುರುಹಿರಿಯರಲ್ಲಿ ಭಕ್ತಿ, ಗೌರವ, ನಮ್ರತೆ. ಆತನ ಬುದ್ಧಿ ಬಹು ಸೂಕ್ಷ್ಮ. ಜ್ಞಾನಿಗಳಲ್ಲಿ ಚರ್ಚಿಸಿ ಚರ್ಚಿಸಿ ಆ ಸೂಕ್ಷ್ಮಬುದ್ಧಿಗೆ ಸಾಣೆ ಹಿಡಿದಂತಾಗಿತ್ತು. ಧರ್ಮ ಸೂಕ್ಷ್ಮಗಳೆಲ್ಲವೂ ಆತನಿಗೆ ಕರತಲಾಮಲಕವಾಗಿದ್ದುವು. ಸತ್ಯ ಧರ್ಮಗಳಿಗೆ ಆತನೊಂದು ಊರೆಗೋಲಿನಂತಿದ್ದನು. ಈ ಜ್ಞಾನದ ಜೊತೆಗೆ ಕ್ಷತ್ರಿಯೋಚಿತವಾದ ಧನುರ್ವಿದ್ಯೆಯೂ ಆತನಿಗೆ ಕರಗತವಾಗಿತ್ತು. ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿ ಆತನಿಗೆ ಸಮಾನರಾದವರು ತ್ರಿಭುವನದಲ್ಲಿಯೂ ದೊರೆಯರು. ಪ್ರಿಯವಾದಿಯಾದ ಆತನಲ್ಲಿ ಹಿರಿಯರಾದವರಿಗೆ ವಾತ್ಸಲ್ಯ; ಕಿರಿಯ ರಾದವರಿಗೆ ಭಕ್ತಿ. ಹೀಗೆ ಪ್ರಜಾರಂಜಕನಾಗಿ ಯೌವನದಲ್ಲಿ ಕಾಲಿಡುತ್ತಿದ್ದ ಆ ಹಿರಿಯ ಮಗನನ್ನು ಕಂಡು ವೃದ್ಧನಾದ ದಶರಥನಿಗೆ ಒಂದು ಆಲೋಚನೆ ಹುಟ್ಟಿತು —"ಸಕಲ ಗುಣ ಸಂಪನ್ನನಾದ ಶ್ರೀರಾಮನಿಗೆ ಯುವರಾಜ್ಯಾಭಿಷೇಕವನ್ನು ಏಕೆ ಮಾಡಬಾರದು? ಆತನು ಯುವರಾಜನಾದುದನ್ನು ಕಣ್ಣಾರೆ ಕಂಡರೆ ನಾನಲ್ಲಿಗೆ ಧನ್ಯನಾದಂತಾಯಿತು."

2

ದಶರಥನಿಗೆ ತನ್ನ ಮನಸ್ಸಿನಲ್ಲಿ ಹುಟ್ಟಿದ ಆಲೋಚನೆಯನ್ನು ಮಂತ್ರಿಗಳಲ್ಲಿ ವಿವೇಚಿಸಿದನು. ಅಯೋಧ್ಯೆಯ ನಾಗರಿಕರನ್ನೂ ದೇಶದ ಪ್ರಮುಖ ಪ್ರಜೆಗಳನ್ನೂ ಸಾಮಂತರನ್ನೂ ಕರೆಸಿ ಅವರಿಗೆ ತನ್ನ ಅಭಿಪ್ರಾಯವನ್ನು ತಿಳಿಸಿ, ಅವರ ಸಲಹೆಯನ್ನು ಕೇಳಿದನು—"ನಾನು ಮುದುಕನಾದೆ, ರಾಜ್ಯಭಾರದ ಕ್ಲೇಶಗಳನ್ನು ಸಹಿಸಲಾರೆ. ನನಗಿನ್ನು ವಿಶ್ರಾಂತಿ ಅಗತ್ಯ. ನನ್ನ ಹಿರಿಯ ಮಗನಾದ ಶ್ರೀರಾಮನನ್ನು ಯುವರಾಜನನ್ನಾಗಿ ಮಾಡಬೇಕೆಂಬುದು ನನ್ನ ಇಷ್ಟ. ತಮಗೆ ಇದು ಉಚಿತವೆಂದು ತೋರಿದರೆ ತಮ್ಮ ಅನುಮತಿ ನೀಡಬೇಕು."

ಅಮೃತವರ್ಷದಂತಿದ್ದ ದಶರಥನ ಮಾತುಗಳನ್ನು ಕೇಳಿ ನೆರೆದಿದ್ದವರೆಲ್ಲರೂ ನವಿಲುಗಳಂತೆ ಕುಕಿಲ್ವಿರಿದು ಹರ್ಷಧ್ವನಿ ಮಾಡಿದರು. "ಮಹಾರಾಜ ನಿನ್ನ ಯೋಚನೆ ಬಹು ಶ್ಲಾಘ್ಯವಾದುದು. ಶ್ರೀರಾಮನ ಯುವರಾಜ ವೈಭವವನ್ನು ಕಾಣಲು ನಮ್ಮ ಕಣ್ಣುಗಳೂ ತವಕಿಸುತ್ತಿವೆ" ಎಂದು ಎಲ್ಲರೂ ಒಮ್ಮತದಿಂದ ನುಡಿದರು. ಪ್ರಜಾಭಿಪ್ರಾಯವು ತನ್ನ ಇಷ್ಟಕ್ಕನುಸಾರವಾಗಿಯೆ ಇರುವುದನ್ನು ಕಂಡು ದಶರಥನು ಸಂತೋಷದಿಂದ ಉಬ್ಬಿಹೋದನು. ಆತನು ಆ ಮಂಗಳ ಕಾರ್ಯಕ್ಕೆ ಅಗತ್ಯವಾದ ಸಾಮಗ್ರಿಗಳನ್ನೆಲ್ಲಾ ಸಿದ್ಧಗೊಳಿಸುವಂತೆ ವಸಿಷ್ಠ ವಾಮದೇವರಿಗೆ ನೇಮಿಸಿದನು. ಅನಂತರ ಶ್ರೀರಾಮನನ್ನು ತನ್ನ ಬಳಿಗೆ ಕರೆಸಿಕೊಂಡನು. ತನ್ನ ಎಳೆತನದ ಪ್ರತಿಬಿಂಬದಂತಿದ್ದ ಆ ಮಗನನ್ನು ಕಂಡು ಆತನ ಆನಂದಕ್ಕೆ ಪಾರವಿಲ್ಲ. ತನ್ನ ಬಳಿಗೆ ಬಂದ ಮಗನನ್ನು ಆಲಿಂಗಿಸಿಕೊಂಡು ಅನರ್ಘ್ಯವಾದ ಆಸನದಲ್ಲಿ ಕುಳ್ಳಿರಿಸಿದನು. ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತಾ ಅವನನ್ನು ಕುರಿತು "ಮಗು ರಾಮಚಂದ್ರ, ನಿನ್ನ ಸದ್ಗುಣಗಳಿಂದ ಮುಗ್ಧರಾದ ಪ್ರಜೆಗಳು ನಿನ್ನನ್ನು ಯುವರಾಜನನ್ನಾಗಿ ಮಾಡಬೇಕೆಂದು ಕೋರುತ್ತಾರೆ. ನಾಳೆ ಪುಷ್ಯನಕ್ಷತ್ರದಲ್ಲಿ ಆ ಮಂಗಳಕಾರ್ಯವು ನೆರವೇರಬೇಕಾಗಿದೆ. ಸುಪುತ್ರನಾದ ನೀನು ಯುವರಾಜ ಪದವಿಯನ್ನು ಸ್ವೀಕರಿಸಿ ನನ್ನ ಮನಸ್ಸನ್ನು ಸಂತೋಷಪಡಿಸು....ಪ್ರಜಾವತ್ಸಲನಾಗಿ ಬಾಳು !" ಎಂದನು.

ಶ್ರೀರಾಮನು ತಂದೆಯ ಮಾತಿಗೆ ಪ್ರತಿ ಏನನ್ನೂ ಹೇಳಲಿಲ್ಲ. ಕೇವಲ ಮೌನದಿಂದಲೆ ತನ್ನ ಸಮ್ಮತಿಯನ್ನು ಸೂಚಿಸಿ, ತನ್ನ ಅರಮನೆಗೆ ಹಿಂದಿರುಗಿದನು. ಅಷ್ಟರಲ್ಲಿ ಆತನ ಗೆಳೆಯರು ಈ ಸಂತೋಷವಾರ್ತೆಯನ್ನು ಕೊಂಡೊಯ್ದು ಕೌಸಲ್ಯೆಗೆ ಅರುಹಿದರು. ಅದನ್ನು ಕೇಳಿದ ಆಕೆಯ ಸಂತೋಷಕ್ಕೆ ಪಾರವಿಲ್ಲ. ಸುದ್ದಿಯನ್ನು ತಂದವರಿಗೆ ಅಮೂಲ್ಯವಾದ ರತ್ನಾಭರಣಗಳನ್ನು ಬಹುಮಾನವಾಗಿ ಕೊಟ್ಟಳು. ಆಕೆ ಈ ಸಡಗರದಲ್ಲಿ ತೊಡಗಿರುವಾಗ ತಂದೆಯ ಅಪ್ಪಣೆಯಂತೆ ಮತ್ತೊಮ್ಮೆ ಆತನನ್ನು ಸಂದರ್ಶಿಸಿ ಅನೇಕ ಬುದ್ಧಿವಾದಗಳನ್ನು ಪಡೆದು ತಾಯಿಯನ್ನು ಕಾಣಲು ಆಕೆಯ ಬಳಿಗೆ ಬಂದನು. ಆತನು ಬಂದಾಗ ಕೌಶಲ್ಯೆ ಮಗನ ಶ್ರೇಯಸ್ಸಿಗಾಗಿ ಇಷ್ಟದೇವತಾ ಪ್ರಾರ್ಥನೆಯಲ್ಲಿ ತೊಡಗಿದ್ದಳು. ಶ್ರೀರಾಮನು ಆಕೆಗೆ ನಮಸ್ಕರಿಸಿ, "ಅಮ್ಮಾ, ನಾಳೆಯೆ ನಾನು ಯುವರಾಜ ಪಟ್ಟವನ್ನು ವಹಿಸುವಂತೆ ತಂದೆಯ ಅಪ್ಪಣೆಯಾಗಿರುವುದು. ಈ ದಿನ

ರಾತ್ರಿ ನಾನು ಸೀತೆಯೊಡನೆ ಉಪವಾಸವನ್ನು ಆಚರಿಸಬೇಕು” ಎಂದು ಹೇಳಿದನು. ತಾಯಿ ಮಗನನ್ನು ಬಾಯಿತುಂಬ ಹರಸಿ “ಮಗು, ನನ್ನ ವ್ರತ ಉಪವಾಸಾದಿ ಸತ್ಕರ್ಮಗಳು ಇಂದು ಸಫಲವಾದುವು. ನಾನಿಂದು ಧನ್ಯೆ!” ಎಂದಳು.

ತಾಯಿಯ ಆಶೀರ್ವಾದವನ್ನು ಸ್ವೀಕರಿಸಿದ ಶ್ರೀರಾಮನು ಸಮೀಪದಲ್ಲಿಯೆ ನಿಂತಿದ್ದ ಲಕ್ಷ್ಮಣನನ್ನು ಕುರಿತು “ಮಗು, ಲಕ್ಷ್ಮಣಾ, ನೀನು ನನ್ನ ಬಹಿಃಪ್ರಾಣದಂತಿರುವೆ, ನಿನ್ನ ಸುಖವೇ ನನ್ನ ಸುಖ. ನಾನು ಯುವರಾಜನಾದರೆ ನೀನೂ ಯುವರಾಜನಾದಂತೆಯೆ. ನಿನಗೆ ಬೇಕಾದ ಸುಖ ಸೌಖ್ಯಗಳನ್ನು ಯಥೇಷ್ಟವಾಗಿ ಅನುಭವಿಸು” ಎಂದು ಹೇಳಿದನು. ಅನಂತರ ಆತನು ತಾಯಿಯ ಬಳಿ ನಿಂತಿದ್ದ ಜಾನಕಿಯನ್ನು ನೋಡಿದನು. ಅಂತಃಕರಣದ ಆನಂದವೆಲ್ಲ ಹೊರಸೂಸುತ್ತಿತ್ತು ಆಕೆಯ ಕುಡಿನೋಟದಲ್ಲಿ. ತುಟಿಗಳ ಮೇಲೆ ನರ್ತಿಸುತ್ತಿತ್ತು ನಲ್ಮೆಯ ಮುಗುಳ್ನಗೆ. ಶ್ರೀರಾಮನು ತನ್ನ ಕಾಂತೆಯನ್ನು ತನ್ನೊಡನೆ ಕರೆದೊಯ್ಯಲು ತಾಯಿಯಿಂದ ಅನುಜ್ಞೆ ಪಡೆದು, ಆಕೆಗೂ ಆಕೆಯ ಜೊತೆಯಲ್ಲಿದ್ದ ಸುಮಿತ್ರೆಗೂ ನಮಸ್ಕರಿಸಿ ತನ್ನ ಅರಮನೆಗೆ ಜಾನಕಿಯೊಡನೆ ಹಿಂದಿರುಗಿದನು.

ಮರುದಿನ ಪಟ್ಟಾಭಿಷೇಕ; ಪುರಜನರ ಸಡಗರಕ್ಕೆ ಕೊನೆಮೊದಲಿಲ್ಲ. ಮನೆಮನೆಗಳ ಮೇಲೂ ಬಾವುಟಗಳು ಹಾರಾಡುತ್ತಿದ್ದುವು. ಬೀದಿಗಳೆಲ್ಲವೂ ಸ್ವಚ್ಛವಾಗಿ ಸಿಂಗರಗೊಂಡುವು. ಬಾಗಿಲುಗಳ ಮುಂದೆ ಚಿತ್ರವಿಚಿತ್ರವಾದ ರಂಗವಲ್ಲಿ ರಂಜಿಸಿದುವು. ಸ್ತ್ರೀಪುರುಷರು ನೂತನ ವಸ್ತ್ರಾಲಂಕಾರಗಳಿಂದ ಪರಿಶೋಭಿತರಾದರು. ಮನೆಮನೆಯಲ್ಲಿಯೂ ದೊಡ್ಡ ಹಬ್ಬ. ತಳಿರುತೋರಣಗಳು ಎಲ್ಲೆಲ್ಲಿಯೂ ಕಂಗೊಳಿಸುತ್ತಿವೆ. ಯಾರ ಬಾಯಲ್ಲಿಯೆ ನೋಡಲಿ “ಆಹಾ! ದಶರಥ ಎಂತಹ ಪುಣ್ಯಾತ್ಮ. ಶ್ರೀರಾಮನು ನಮ್ಮ ರಾಜನಾಗಲು ನಾವೇನು ಪುಣ್ಯಮಾಡಿದ್ದೆವೊ!” ಎಂಬ ಮಾತು. ಚಿಕ್ಕಮಕ್ಕಳು ಕೂಡ ತಾವು ಮಾತನಾಡುತ್ತಿರುವುದು ತಮಗೆ ಅರ್ಥವಾಗದಿದ್ದರೂ “ಶ್ರೀರಾಮನು ಯುವರಾಜನಾಗುತ್ತಾನೆ; ನಮ್ಮ ಪುಣ್ಯ!” ಎಂದು ತೊದಲುತ್ತಿದ್ದುವು. ಈ ಮಂಗಳ ಮಹೋತ್ಸವಕ್ಕಾಗಿ ದಿಕ್ಕುದಿಕ್ಕುಗಳಿಂದಲೂ ಬಂದಿದ್ದ ಜನರು ಕಿಕ್ಕಿರಿದು ತುಂಬಿದ್ದರು. ಅವರ ಕೋಲಾಹಲಧ್ವನಿ ಸಮುದ್ರಘೋಷದಂತೆ ದಶದಿಕ್ಕುಗಳನ್ನೂ ತುಂಬಿತು.

---

೨

## ಮಂಥರೆಯ ಕುತಂತ್ರ ಮತ್ತು ದುರ್ಬೋಧನೆ

ದಶರಥನ ಪತ್ನಿಯರಲ್ಲಿ ಕಿರಿಯವಳಾದ ಕೈಕೆ ಪರಮಸುಂದರಿ. ಆಕೆ ಎಷ್ಟು ಸುಂದರಿಯೊ ಆಕೆಯ ದಾಸಿ ಮಂಥರೆ ಅಷ್ಟೂ ಕುರೂಪಿಣಿ. ದೇವಿ ಕೈಕೆ ತೌರುಮನೆಯಿಂದ ಬಂದಾಗ ಇವಳು ಆಕೆಯ ಜೊತೆಯಲ್ಲಿ ಬಂದಳು. ಅಂದಿನಿಂದಲೂ ಅವಳು ತನ್ನ ಒಡತಿಯನ್ನು ಎಡೆಬಿಡದೆ ಸೇವಿಸುತ್ತಿದ್ದಳು. ಈ ಒಂದು ವಿನಾ ಅವಳಲ್ಲಿ ಮತ್ತಾವ ಸದ್ಗುಣವನ್ನೂ ಕಾಣುವಂತಿರಲಿಲ್ಲ. ಅವಳ ಆಕಾರ ಹೇಗೆ ಕುರೂಪವೊ ಬುದ್ಧಿಯೂ ಹಾಗೆಯೆ ವಿಕಾರ. ಆ ಗೂನುಬೆನ್ನಿನ ವಿಕಾರಿಯನ್ನು ಕಂಡರೆ ಯಾರಿಗೂ ಆಗದು. ಆದರೂ ಮಹಾರಾಜನ ಮೋಹದ ಮಡದಿಯ ಆತ್ಮೀಯಳೆಂದು ಭಾವಿಸಿ ಅವಳನ್ನು ಕಂಡು ಎಲ್ಲರೂ ಹೆದರುತ್ತಿದ್ದರು. ಪಟ್ಟಾಭಿಷೇಕದ ಹಿಂದಿನ ದಿನ ಈ ಪಾಪಿಷ್ಠೆ ಬೆಳಗು ಮುಂಜಾವಿಗೆ ಎದ್ದು ಅರಮನೆಯ ಉಪ್ಪರಿಗೆಯನ್ನು ಏರಿದಳು. ಸುತ್ತಲೂ ಅಯೋಧ್ಯಾಪಟ್ಟಣದಲ್ಲಿ ಗೋಚರವಾಗುತ್ತಿದ್ದ ಸಡಗರ ಸಂಭ್ರಮಗಳನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ಮನೆಮನೆಯೂ ಸುಣ್ಣಬಣ್ಣಗಳನ್ನು ತಳೆದು ಕಂಗೊಳಿಸುತ್ತಿವೆ. ಜನರೆಲ್ಲರೂ ವಸ್ತ್ರಾಲಂಕಾರಭೂಷಿತರಾಗಿ ಸಡಗರದಿಂದ ಓಡಾಡುತ್ತಿದ್ದಾರೆ. ಅಲ್ಲಲ್ಲಿ ಮಂಗಳವಾದ್ಯಗಳಾಗುತ್ತಿವೆ. ಇದಕ್ಕೆ ಕಾರಣವೇನೆಂದು ಆ ಕುಬ್ಜೆ ಚಡಪಡಿಸುತ್ತಿರುವಾಗ ಶುಭ್ರವಸ್ತ್ರಧಾರಿಣಿಯಾಗಿ ತುಟಿಗಳಿಂದ ಮುಗುಳ್ನಗೆಯ ಮುಗುಳುಗಳನ್ನು ಚೆಲ್ಲುತ್ತಾ ಹೋಗುತ್ತಿದ್ದ ಶ್ರೀರಾಮದೂತಿಯೊಬ್ಬಳು ಕಣ್ಣಿಗೆ ಬಿದ್ದಳು. ಮಂಥರೆ ಅವಳ ಸಮೀಪಕ್ಕೆ ಸಾರಿ "ಇದೇನಮ್ಮಾ ಈ ಸಡಗರ?" ಎಂದು ಕೇಳಿದಳು. ಶ್ರೀರಾಮನ ಅಭ್ಯುದಯದಲ್ಲಿ ಉಬ್ಬಿಹೋಗಿದ್ದ ಆ ದೂತಿಗೆ ಹಿಂದುಮುಂದಿನ ವಿವೇಚನೆಯೊಂದೂ ಇರಲಿಲ್ಲ. ಮಂಥರೆ ಮಹಾ ಅಸೂಯಾಪರಳೆಂದು ಗೊತ್ತಿದ್ದರೂ ಮೈಮರೆತು "ಇದೇನು ಮಂಥರೆ! ಹೀಗೆ ಕೇಳುತ್ತೀಯೆ? ನಾಳೆ ಶ್ರೀರಾಮಚಂದ್ರನಿಗೆ ಯುವರಾಜ ಪಟ್ಟವಲ್ಲವೆ?" ಎಂದಳು.

ದಾಸಿಯ ಮಾತುಗಳನ್ನು ಕೇಳಿದ ಮಂಥರೆಗೆ ಹೊಟ್ಟೆಯಲ್ಲಿ ಬಹು ಕಸಿವಿಸಿಯಾಯಿತು. ಬೀಳುವುದೇಳುವುದನ್ನೂ ಲೆಕ್ಕಿಸದೆ ಉಪ್ಪರಿಗೆಯಿಂದ ಕೆಳಗಿಳಿದು ದೇವಿ ಕೈಕೆಯ ಶಯನಗೃಹವನ್ನು ಪ್ರವೇಶಿಸಿದಳು. ಯಾವ ಪಾಪವನ್ನೂ ಅರಿಯದೆ ಕೈಕೆ ಇನ್ನೂ ನಿದ್ದೆಯಲ್ಲಿದ್ದಳು. ಮಂಥರೆ ಕೊಠಡಿಯನ್ನು ಪ್ರವೇಶಿಸಿದವಳೆ ಅವಳನ್ನು ಅಲುಗಿಸಿ ಎಬ್ಬಿಸುತ್ತಾ "ದೇವಿ, ನಿನಗೆ ಮಹಾ ವಿಪತ್ತು ಸಂಭವಿಸಿದೆ. ಏಳು, ಬೇಗ ಮೇಲೇಳು" ಎಂದು ಕಿರುಚಿಕೊಂಡಳು. ಕೈಕೆ ಗಾಬರಿಯಿಂದ ಮೇಲಕ್ಕೆದ್ದು ಪ್ರಶ್ನಾರ್ಥಕ

ದೃಷ್ಟಿಯಿಂದ ಆ ಕುಬ್ಜೆಯ ಕಡೆ ನೋಡಿದಳು. ಒಡನೆಯೆ ಆ ಡೊಂಕಿ "ಮಹಾರಾಣಿ ಸರ್ವನಾಶ! ಸರ್ವನಾಶ! ಮಹಾರಾಜನಿಗೆ ನಿನ್ನಲ್ಲಿ ಅತಿಶಯ ಪ್ರೇಮವೆಂದು ಹೇಳಿ ಕೊಂಡು ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದೆಯಲ್ಲಾ! ಈಗ ಆಗಿರುವುದನ್ನು ನೋಡು. ಮಹಾರಾಜನು ನಾಳೆ ಶ್ರೀರಾಮನಿಗೆ ಪಟ್ಟ ಗಟ್ಟುತ್ತಾನಂತೆ! ಈ ಕರ್ಣಕಠೋರವಾದ ವಾರ್ತೆಯನ್ನು ಕೇಳಿ ನನ್ನ ಹೊಟ್ಟೆಯಲ್ಲಿ ಒಂದು ಮೊರ ಬೆಂಕಿಯನ್ನು ಹೊಯ್ದಂತಾಗಿದೆ. ನಿನ್ನ ಗಂಡ ಎಂತಹ ಕಪಟಿಯೇ ತಾಯಿ!" ಎಂದು ಹಲುಬಿದಳು.

ಮಂಥರೆಯ ಮಾತುಗಳನ್ನು ಕೇಳಿ ರಾಣಿ ಕೈಕೆ ಗಹಗಹಿಸಿ ನಕ್ಕಳು. "ಅಯ್ಯೋ, ಬೆಪ್ಪೆ! ಏನೋ ಮಹತ್ತ್ರಳಯವಾದಂತೆ ನನ್ನನ್ನು ಎಷ್ಟು ಹೆದರಿಸಿದೆ! ಎಂತಹ ಸಂತೋಷ ಸಮಾಚಾರವನ್ನು ಎಷ್ಟು ಭಯಂಕರವಾದುದೆಂಬಂತೆ ಹೇಳಿದೆಯಲ್ಲಾ! ಈ ಸಂತೋಷವಾರ್ತೆಯನ್ನು ತಂದ ನಿನಗೆ ಏನನ್ನು ಕೊಟ್ಟರೂ ಅಲ್ಪವೆ ಸರಿ. ಇದೋ ಈ ಪಾರಿತೋಷಕವನ್ನು ತೆಗೆದುಕೊ" ಎಂದು ಹೇಳಿ ತಾನು ಧರಿಸಿದ್ದ ದಿವ್ಯಾಭರಣವನ್ನು ತೆಗೆದು ಆ ಕುಬ್ಜೆಗೆ ಕೊಟ್ಟಳು.

ಒಡತಿಯ ಚರ್ಯೆಯನ್ನು ಕಂಡು ಮಂಥರೆಯ ಕೋಪ ಕೆಂಡವಾಯಿತು. ಆಕೆ ಕೊಟ್ಟ ಆಭರಣವನ್ನು ನೆಲಕ್ಕೆಸೆದು "ಸಂಕಟಸಮಯದಲ್ಲಿ ಸಂತೋಷಪಡುತ್ತಿರುವ ಹುಚ್ಚಿ! ಶ್ರೀರಾಮಪಟ್ಟಾಭಿಷೇಕ ನಿನಗೆ ಸಂತೋಷವಾರ್ತೆಯೆ? ಪಟ್ಟಾಭಿಷೇಕಕ್ಕಿಂತಲೂ ನಿನ್ನ ಬೆಪ್ಪಿಗಾಗಿ ಹೆಚ್ಚು ವ್ಯಸನಪಡಬೇಕಾಗಿದೆ. ಸವತಿಯ ಮಗನ ಶ್ರೇಯಸ್ಸು ನಿನಗೆ ಸಂತೋಷಕರವಾದರೆ ವ್ಯಸನಕರವಾದುದಿನ್ನಾವುದು? ರಾಮನಿಗೆ ರಾಜ್ಯಭಾರ ದೊರೆತರೆ ಭರತನ ಗತಿಯೇನು? ತಂತ್ರಿಯಾದ ರಾಮನು ರಾಜನಾದ ಮೇಲೆ ಋಜುಬುದ್ಧಿಯಾದ ಭರತನ ಗತಿ ಏನಾಗುವುದೊ! ಯಾವ ಅಪಾಯ ಆತನಿಗೆ ಸಂಭವಿಸುವುದೊ! ಅದೂ ಹಾಗಿರಲಿ. ನಿನ್ನ ಸವತಿಯಾದ ಕೌಸಲ್ಯೆ ರಾಜಮಾತೆಯಾದ ಮೇಲೆ ನಿನ್ನ ಗತಿ ಏನು! ಸ್ವಲ್ಪ ಯೋಚಿಸಿ ನೋಡು. ನೀನು ಆಕೆಯ ದಾಸಿಯಾಗಿ ಬಿದ್ದಿರಬೇಕಾಗುತ್ತದೆ. ನಿನ್ನ ಮಗ ಶ್ರೀರಾಮನಿಗೆ ದಾಸ; ನೀನು ಕೌಸಲ್ಯೆಗೆ ದಾಸಿ. ಆ ನಿನ್ನ ಸವತಿಯ ಸೊಸೆ ಪಟ್ಟದ ರಾಣಿಯಾಗಿ ಮೆರೆಯಬೇಕು. ನಿನ್ನ ಸೊಸೆ ಮ್ಲಾನವದನದಿಂದ ಕೊರಗುತ್ತಾ ಬಿದ್ದಿರಬೇಕು" ಎಂದಳು.

ಮಂಥರೆ ಏನು ಹೇಳಿದರೂ ಕೈಕೆಗೆ ರಾಮನಲ್ಲಿ ವಿರಸ ಹುಟ್ಟಲಿಲ್ಲ. ಆತನ ಶುಭ್ರಧವಳವಾದ ಧರ್ಮಬುದ್ಧಿಯಲ್ಲಿ ಆಕೆಗೆ ಸಂದೇಹ ಹುಟ್ಟದು. ಉಳಿದವರು ಎಂತಹವ ರಾದರೂ ಶ್ರೀರಾಮನು ಮಾತ್ರ ಅಧರ್ಮಕ್ಕೆ ಎಂದಿಗೂ ಆಸ್ಪದ ಕೊಡುವವನಲ್ಲವೆಂದು ಆಕೆಯ ದೃಢ ನಂಬಿಕೆ. ಇದನ್ನು ಕಂಡು ಮಂಥರೆಗೆ ಅಸಹ್ಯವಾದ ವ್ಯಥೆಯುಂಟಾಯಿತು. ಕಣ್ಣೀರು ಸುರಿಸುತ್ತಾ ಹೇಳಿದಳು...."ಅಯ್ಯೋ ಕೈಕೆ! ಸ್ವಸ್ವರೂಪವಾದ ಜ್ಞಾನವನ್ನು ನಿನಗೆ ಹೇಗೆ ಮಾಡಿಕೊಡಲಿ? ಜನರ ಮರೆ ಮೋಸಗಳು ಅಕುಟಿಲಳಾದ ನಿನಗೆ ಗೋಚರ ವಾಗುವುದು ತಾನೆ ಹೇಗೆ? ಆಯ್ತು, ನಿನ್ನ ಹಣೆಯಲ್ಲೇನೊ ಸವತಿಗೆ ದಾಸಿಯಾಗುವ

ಪ್ರಾಪ್ತಿ ಬರೆದಿದೆ. ಹಿಂದೆ ನೀನು ಅವಳನ್ನು ಅನೇಕ ವೇಳೆ ಬಹು ತಿರಸ್ಕಾರದಿಂದ ನೋಡಿದ್ದೀಯೆ. ಬಳ್ಳಕ್ಕೆ ಕಂಡುಗವಾಗಿ ಅವಳು ಅದರ ಮುಯ್ಯನ್ನು ತೀರಿಸುತ್ತಾಳೆ. ನೀನು ದಾಸಿಯಾಗಿ ನಿನ್ನ ಬಾಳನ್ನು ಸವೆಸು. ಆದರೆ ನಿನ್ನ ಮಗನನ್ನು ಎಲ್ಲಿಯಾದರೂ ದೇಶಾಂತರಕ್ಕೆ ಕಳುಹಿಸಿಬಿಡು. ಪಾಪ ಎಲ್ಲಿಯಾದರೂ ಸುಖವಾಗಿ ಬದುಕಿಕೊಂಡಿರಲಿ. ಮೋಸಗಾರನಾದ ಈ ಮಹಾರಾಜನು ಭರತನಿಗೆ ಸುದ್ದಿಯನ್ನು ಕೂಡ ಕೊಡದೆ ಈ ಪಟ್ಟಾಭಿಷೇಕಕ್ಕಾಗಿ ಯತ್ನಿಸುತ್ತಿರುವನಲ್ಲ! ಇದೆಲ್ಲ ನಿನಗೆಲ್ಲಿ ಅರ್ಥವಾದೀತು!" ಹೀಗೆ ಕೈಕೆಗೆ ಬುದ್ಧಿ ಕಲಿಸುವುದರಲ್ಲಿಯೆ ಆ ದಿನ ಕಳೆದುಹೋಯಿತು.

ಕಡೆಗೂ ಮಂಥರೆಯ ಮೊನಚಾದ ಮಾತುಗಳು ಹೃದಯದಲ್ಲಿ ಆಳವಾಗಿ ನಾಟಿದುವು. ಸವತಿಗೆ ತಾನು ದಾಸಿಯಾಗಬೇಕಾಗುವುದೋ ಎಂಬ ಒಂದು ಭಾವನೆಯೆ ಸಾಕಾಗಿತ್ತು ಆಕೆಯನ್ನು ಕೆರಳಿಸಲು. ರೋಷಗೊಂಡ ನಾಗಿಣಿಯಂತೆ ಆಕೆ ಬುಸುಗುಟ್ಟುತ್ತಾ "ಪ್ರಿಯ ಮಂಥರಾ, ನಿನ್ನ ಮಾತು ನಿಜ; ಏನಾದರೂ ಮಾಡಿ ಈ ಪಟ್ಟಾಭಿಷೇಕ ಕಾರ್ಯವನ್ನು ನಿಲ್ಲಿಸಬೇಕು. ನನ್ನ ಮಗನಿಗೆ ರಾಜ್ಯಾಭಿಷೇಕವಾಗುವಂತೆ ಮಾಡಬೇಕು. ಕುಶಲಳಾದ ನೀನು ಇದಕ್ಕೊಂದು ಉಪಾಯ ಸೂಚಿಸು" ಎಂದಳು. ಮಂಥರೆ ಉಪಾಯಕ್ಕಾಗಿ ಬೆದಕಬೇಕಾಗಿರಲಿಲ್ಲ. ಅದನ್ನಾಗಲೆ ಅವಳು ಆಲೋಚಿಸಿ ಸಿದ್ಧವಾಗಿಟ್ಟುಕೊಂಡಿದ್ದಳು. ಹಿಂದೆ ದೇವಾಸುರ ಯುದ್ಧವಾದಾಗ ದಶರಥನು ದೇವತೆಗಳ ಸಹಾಯಕ್ಕಾಗಿ ಹೋಗಿದ್ದನು. ತನ್ನ ಮೋಹದ ಮಡದಿಯನ್ನೂ ಜೊತೆಯಲ್ಲಿ ಕೊಂಡೊಯ್ದಿದ್ದನು. ಯುದ್ಧದಲ್ಲಿ ದಶರಥನ ಜೀವಕ್ಕೆ ಅಪಾಯವೊದಗಿದ್ದಾಗ ಎರಡುಬಾರಿ ಕೈಕೆಯ ಕೌಶಲ್ಯದಿಂದ ಆತನ ಪ್ರಾಣ ಉಳಿಯಿತು. ರಥಚೋದನೆಯಲ್ಲಿ ಜಾಣ್ಮೆಯನ್ನು ಮೆರೆದು ಆಕೆ ಆತನನ್ನು ಅಪಾಯದಿಂದ ಪಾರುಮಾಡಿದ್ದಳು. ಅದಕ್ಕಾಗಿ ದಶರಥನು ಆಕೆಗೆ ಎರಡು ವರಗಳನ್ನು ದಯಪಾಲಿಸಿದ್ದನು. ಆಕೆ ಆ ವರಗಳನ್ನು ಸ್ವೀಕರಿಸಿರಲಿಲ್ಲ. ಬೇಕಾದಾಗ ಕೇಳುವೆನೆಂದು ಹೇಳಿ ಆತನನ್ನು ಒಪ್ಪಿಸಿದ್ದಳು. ಮಂಥರೆ ಅದನ್ನು ಈಗ ನೆನಪಿಗೆ ತಂದಳು, "ಮಹಾರಾಣಿ, ಒಂದು ವರದಿಂದ ನಿನ್ನ ಮಗ ರಾಜನಾಗಲಿ; ಇನ್ನೊಂದು ವರ ರಾಮನನ್ನು ವನವಾಸಕ್ಕೆ ಅಟ್ಟಲಿ?" ಎಂದಳು.

ದಾಸಿಯ ಸಮಯಸ್ಫೂರ್ತಿಯನ್ನು ಕಂಡು ಮೆಚ್ಚಿದ ರಾಣಿ ಅವಳನ್ನು ಬಹುವಾಗಿ ಹೊಗಳಿ ಸನ್ಮಾನಿಸಿದಳು. ಇದರಿಂದ ಸಂತುಷ್ಟಳಾಗಿ ಹುರಿಗೊಂಡ ಆ ನೀಚದಾಸಿ ವೃದ್ಧ ರಾಜನಿಂದ ವರಗಳನ್ನು ಪಡೆಯುವುದು ಹೇಗೆಂಬುದನ್ನು ವಿವರಿಸಿದಳು— "ನೀನೀಗಲೆ ಕೋಪಗೃಹವನ್ನು ಪ್ರವೇಶಿಸಿ, ಮಲಿನವಸ್ತ್ರಗಳನ್ನು ಧರಿಸಿ, ಕೂದಲನ್ನು ಬಿರಿಹೊಯ್ದುಕೊಂಡು ನೆಲದಮೇಲೆ ಹೊರಳಾಡುತ್ತಿರಬೇಕು. ಇದನ್ನು ಕೇಳಿ ರಾಜನು ನಿನ್ನ ಬಳಿಗೆ ಬರುವನು. ಆತನು ನಿನ್ನ ಬಳಿಗೆ ಬರುತ್ತಲೇ ನೀನು ಗಟ್ಟಿಯಾಗಿ ರೋದಿಸಲು ಆರಂಭಿಸಬೇಕು. ಆತನು ಎಷ್ಟು ಸಮಾಧಾನ ಮಾಡಿದರೂ ನೀನು ರೋದನವನ್ನು ನಿಲ್ಲಿಸಕೂಡದು. ಆತನಿಗೆ ನಿನ್ನಲ್ಲಿ ತನ್ನ ಪ್ರಾಣಕ್ಕಿಂತಲೂ ಹೆಚ್ಚು ಮಮತೆ. ಮಹದೈಶ್ವರ್ಯಗಳ ಪ್ರಲೋಭನೆಯನ್ನು ಒಡ್ಡಿ ನಿನ್ನನ್ನು



ದಾಸಿಯ ಸಮಯಸ್ಫೂರ್ತಿಯನ್ನು ಕಂಡು ಮೆಚ್ಚಿದ ರಾಣಿ ಅವಳನ್ನು ಬಹುವಾಗಿ ಸನ್ಮಾನಿಸಿದಳು.

ಸಮಾಧಾನಪಡಿಸಲು ಆತನು ಯತ್ನಿಸಬಹುದು. ನೀನು ಅವಕ್ಕೆಲ್ಲಾ ಬಲಿಬೀಳ ಕೂಡದು. ನಿನಗೆ ಕೊಡಬೇಕಾಗಿರುವ ವರಗಳನ್ನು ಕೊಡುವಂತೆ ಆತನನ್ನು ಬೇಡು. ಅದನ್ನು ಸಲ್ಲಿಸುವೆನೆಂಮ ಪ್ರಮಾಣ ಮಾಡುವವರೆಗೂ ನೀನು ಮೇಲಕ್ಕೇಳಬೇಡ. ಇಷ್ಟಾದ ಮೇಲೆ ನಿನ್ನ ಬೇಡಿಕೆಗಳನ್ನು ಆತನ ಮುಂದಿಡು."

ವಿವೇಕವನ್ನು ಸೂರೆಗೊಟ್ಟಿದ್ದ ಕೈಕೆ ದಾಸಿಯ ಮಾತಿಗೆ 'ಅಸ್ತು' ಎಂದಳು.

---

೩

# ಗೋಕರ್ಣಲ್ಲಮೇಲೆ ಕರೆದ ಮಳೆ

ಪುಣ್ಯ ಕ್ಷೀಣಿಸಿ ಸ್ವರ್ಗಚ್ಯುತಳಾದ ಕಿನ್ನರಿಯಂತೆ ಕೈಕೆ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದಳು. ಆ ಕೋಣೆಯ ಕತ್ತಲಲ್ಲಿ ಅವಳು ಕಿತ್ತೆಸೆದಿದ್ದ ಪುಷ್ಪಮಾಲಿಕೆಗಳೂ ದಿವ್ಯಾಭರಣಗಳೂ ಅಂಬರದಲ್ಲಿ ಚೆಲ್ಲಿದ ನಕ್ಷತ್ರಗಳಂತೆ ಕಾಣಿಸುತ್ತಿದ್ದುವು. ಆ ವೇಳೆಯಲ್ಲಿ ದಶರಥನು ಅಲ್ಲಿಗೆ ಪ್ರವೇಶ ಮಾಡಿದನು. ಶ್ರೀರಾಮ ಪಟ್ಟಾಭಿಷೇಕದ ಪ್ರಿಯ ವಾರ್ತೆಯನ್ನು ತನ್ನ ಮೋಹದ ಮಡದಿಗೆ ತಿಳಿಸಿ ಆಕೆಯನ್ನು ಸಂತೋಷಸಾಗರದಲ್ಲಿ ತೇಲಿಸುವೆನೆಂದುಕೊಂಡು ಆತನು ಕೈಕೆಯ ಅಂತಃಪುರವನ್ನು ಪ್ರವೇಶಿಸಿದನು. ಶಯನಾಗಾರವನ್ನು ಪ್ರವೇಶಿಸುತ್ತಲೆ ಸುತ್ತಲಿನ ಸನ್ನಿವೇಶದಿಂದ ಆತನ ಮನಸ್ಸು ಕಾಮವಿಕಾರಕ್ಕೊಳಗಾಯಿತು. ಆದರೆ ಅಲ್ಲೇನಿದೆ? ಕೈಕೆಯ ಹಾಸಿಗೆ ಬರಿದಾಗಿ ಬಿಕೋ ಎನ್ನುತ್ತಿದೆ. ತನ್ನ ಕಾಂತೆ ಅಲ್ಲಿ ಕಾಣಬರದಿರಲು ದಶರಥನು ಚಡಪಡಿಸಿದನು. ಬಾಗಿಲಲ್ಲಿ ನಿಂತಿದ್ದ ದ್ವಾರರಕ್ಷಕಳನ್ನು ಕುರಿತು "ರಾಣಿ ಎಲ್ಲಿ?" ಎಂದನು. ಆ ದೂತಿ ಅಂಜುತ್ತಂಜುತ್ತಾ ಕೋಪಗೃಹದ ಕಡೆ ಕೈತೋರಿಸಿದಳು. ರಾಜನ ಹೃದಯದಲ್ಲಿ ಮೂಡಿದ್ದ ಹೊಂಗನಸು ಹಾಗೆಯೆ ಸಿಡಿದೊಡೆಯಿತು. ಮನಸ್ಸು ಕಳವಳಗೊಂಡಿತು. ಆತಂಕಪಡುತ್ತಾ ಕೋಪಗೃಹವನ್ನು ಪ್ರವೇಶಿಸಿದನು ಆ ವೃದ್ಧರಾಜ. ಅಬ್ಬ! ಅಲ್ಲಿ ಕಂಡುದೇನು? ಮುರಿದು ಬಿಸುಟ ಎಳವಳ್ಳಿಯಂತೆ ಮ್ಲಾನಮುಖಿಳಾಗಿ ಬಿದ್ದಿದ್ದ ಕೈಕೆಯನ್ನು ಕಂಡು ದಶರಥನು ಕಂಪಿಸಿಹೋದನು. ಮೆಲ್ಲನೆ ಅವಳ ಬಳಿಸಾರಿ ಬಳಿಯಲ್ಲಿ ಕುಳಿತನು. ಮೃದುವಾಗಿ ಅವಳ ಮೈಯನ್ನೆಲ್ಲಾ ಸವರುತ್ತಾ ಹೇಳತೊಡಗಿದನು "ಕೈಕೆ! ನನ್ನ ಮುದ್ದು ಕೈಕೆ! ನಿನಗೇಕೆ ಕೋಪ? ಯಾರು ಏನೆಂದರು? ನಿನಗೇನು ಬೇಕು? ಏನು ಮಾಡಿದರೆ ನಿನ್ನ ಅಸಮಾಧಾನಕ್ಕೆ ತೃಪ್ತಿಯೊದಗುತ್ತದೆ? ನಿನ್ನ ಪ್ರೇಮಪಾಶದಲ್ಲಿ ಬದ್ಧನಾದ ನಾನು ನಿನ್ನ ದಾಸನಂತಿರುವೆನಲ್ಲವೆ? ನನ್ನ ಪ್ರಾಣಕ್ಕಿಂತಲೂ ಮಿಗಿಲಾದ ನಿನಗೆ ಯಾವುದಕ್ಕೆ ಕೊರತೆ? ಮೇಲಕ್ಕೇಳು, ನಿನ್ನ ಇಷ್ಟಾರ್ಥವೇನಿದ್ದರೂ ಸಲ್ಲಿಸುತ್ತೇನೆ."

ರಾಜನು ತನ್ನ ಬಲೆಗೆ ಬಿದ್ದುದನ್ನು ಕಂಡು ಕೈಕೆ ಆತನನ್ನು ತನ್ನ ಕ್ರೂರವಾದ ವಾಗ್ಬಾಣಗಳಿಂದ ಚುಚ್ಚಿ ತನ್ನ ಅಧೀನ ಮಾಡಿಕೊಳ್ಳಲು ಆರಂಭಿಸಿದಳು. ಆತನನ್ನು ಕುರಿತು "ಸಾಕು ಈ ನಯ ವಿನಯ! ನನ್ನ ಇಷ್ಟಾರ್ಥವನ್ನು ನೀನು ನಿಜವಾಗಿಯೂ ನಡೆಸುವವನಾದರೆ ಈಗಲೆ ಹಾಗೆಂದು ಪ್ರಮಾಣ ಮಾಡು" ಎಂದಳು. ಆ ಮಾತನ್ನು ಕೇಳಿ ದಶರಥನು ಮುಗುಳ್ನಗೆ ನಗುತ್ತಾ "ಎಲೆ ಗರ್ವಿಷ್ಠೆ, ನನ್ನಲ್ಲಿ ಅಷ್ಟು ನಂಬಿಕೆ ಇಲ್ಲವೆ? ಆಯ್ತು. ಇಗೋ ಪ್ರಮಾಣಮಾಡಿ ಹೇಳುತ್ತೇನೆ, ಕೇಳು—"ನನ್ನ ಪ್ರಾಣಕ್ಕಿಂತಲೂ ಪ್ರಿಯತಮನಾದ ಶ್ರೀರಾಮನ ಆಣೆಯಾಗಿ ನಿನ್ನ ಅಭೀಷ್ಟವನ್ನು ಈಡೇರಿಸು

ವೇನು, ಹೇಳು" ಎಂದನು. ಗಿಳಿ ಹೇಳಿಕೊಟ್ಟ ಮಾತುಗಳನ್ನು ಒಪ್ಪಿಸುವಂತೆ ಕೈಕೆ ದಾಸಿ ಕಲಿಸಿಕೊಟ್ಟ ಮಾತುಗಳನ್ನು ಒಪ್ಪಿಸಿದಳು. "ಪ್ರಾಣನಾಥಾ, ದೇವಾಸುರರ ಯುದ್ಧ ಕಾಲದಲ್ಲಿ ನೀನು ನನಗೆ ಎರಡು ವರಗಳನ್ನು ಕೊಟ್ಟದ್ದಿಯಷ್ಟೆ. ಸತ್ಯಸಂಧನಾದ ನೀನು ಆ ವರಗಳನ್ನು ಈಗ ನನಗೆ ಕರುಣಿಸುವವನಾಗು. ಆ ಎರಡು ವರಗಳಲ್ಲಿ ಒಂದರಿಂದ ಭರತನ ಪಟ್ಟಾಭಿಷೇಕವನ್ನು ಯಾಚಿಸುತ್ತೇನೆ. ಈಗ ಹೇಗಿದ್ದರೂ ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ಸಮಸ್ತ ಸಾಮಗ್ರಿಗಳೂ ಸಿದ್ಧವಾಗಿವೆ; ಅವು ಗಳಿಂದಲೆ ಭರತನ ಪಟ್ಟಾಭಿಷೇಕವಾಗಲಿ. ಇನ್ನು ಎರಡನೆಯ ವರವೆಂದರೆ—ಭರತನ ರಾಜ್ಯ ನಿಷ್ಕಂಟಕವಾಗುವುದಕ್ಕಾಗಿ ಶ್ರೀರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಕಳುಹಿಸು."

ಕೈಕೆಯ ಮಾತುಗಳು ಕಿವಿಗೆ ಬೀಳುತ್ತಿದ್ದಂತೆಯೆ ದಶರಥನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದನು. ಕ್ಷಣಕಾಲವಾದ ಮೇಲೆ ಆತನಿಗೆ ಹಾಗೆಯೆ ಪ್ರಜ್ಞೆ ತಿಳಿಯಿತು. ತಾನು ಎಚ್ಚರದಿಂದಿರುವೆನೊ ಸ್ವಪ್ನಗತನಾಗಿರುವೆನೊ ತಿಳಿಯದಂತಾಗಿತ್ತು ಆತನಿಗೆ. ಶ್ರೀರಾಮನಲ್ಲಿ ಅಪಾರವಾದ ವಾತ್ಸಲ್ಯವಿದ್ದ ಕೈಕೆ ನಿಜವಾಗಿಯೂ ಆತನ ವನವಾಸವನ್ನು ಅಪೇಕ್ಷಿಸಿರಬಹುದೆ? ಅಥವಾ ತನಗೆ ಚಿತ್ತವಿಕಾರವಾಗಿ ಏನೇನೊ ತೋರುತ್ತಿರಬಹುದೆ? ಕೈಕೆ ಹೇಳಿದ ಮಾತುಗಳನ್ನೆಲ್ಲ ಜ್ಞಾಪಿಸಿಕೊಂಡಂತೆಲ್ಲಾ ಆತನಿಗೆ ಮೈಮೇಲಿನ ಪ್ರಜ್ಞೆಯೆ ತಪ್ಪಿಹೋಗುವುದು? ಪುನಃ ಹೇಗೊ ಚೇತರಿಸಿಕೊಳ್ಳುವನು. ಹೀಗೆಯೆ ಬಹುಕಾಲ ಕಳೆದುಹೋಯಿತು. ಪರಮಸುಂದರಿಯಾಗಿ ತನ್ನ ಕಣ್ಣಿಗೆ ಸದಾ ಸೊಗಸಿಕಾಣುತ್ತಿದ್ದ ಕೈಕೆ ಇಂದು ಘೋರ ವಿಷಸರ್ಪದಂತೆ ಕಾಣಿಸಿದಳು. ಕಿಡಿ ಕಾರುತ್ತಿರುವ ತನ್ನ ಕಣ್ಣು ಗಳಿಂದ ಅವಳನ್ನು ಸುಟ್ಟುಹಾಕುವವನಂತೆ ದುರುಗುಟ್ಟಿಕೊಂಡು ನೋಡುತ್ತಾ "ಎಲೆ ನೀಚೆ, ನಿನಗೇಕೆ ಈ ವಿಪರೀತ ಬುದ್ಧಿ ಹುಟ್ಟಿತು? ರಾಮಚಂದ್ರನು ನಿನಗೇನು ಅಪರಾಧ ಎಸಗಿದನು? ಯಾವ ಅಪರಾಧಕ್ಕಾಗಿ ಆ ವಂಶವರ್ಧನನನ್ನು ಅಡವಿಗಟ್ಟಲಿ? ಲೋಕಾ ನಂದಕರನಾದ ಆತನು ನಿನ್ನ ಅಮಂಗಳ ಶಾಸನಕ್ಕೆ ಹೇಗೆ ಪಾತ್ರನು? ಆತನನ್ನು ಅಗಲುವು ದೆಂದರೆ ನನ್ನ ಪ್ರಾಣಗಳನ್ನು ಅಗಲುವುದೆಂದೇ. ಸೂರ್ಯನಿಲ್ಲದೆ ಜೀವಲೋಕ ಬದುಕಿ ದರೂ ಬದುಕಬಹುದು; ಮಳೆಯಿಲ್ಲದೆ ಸಸ್ಯಜಗತ್ತು ಜೀವಿಸಿದರೂ ಜೀವಿಸಬಹುದು; ಆದರೆ ಶ್ರೀರಾಮನಿಲ್ಲದೆ ದಶರಥನು ಮಾತ್ರ ಕ್ಷಣಮಾತ್ರವಾದರೂ ಬದುಕುವುದು ಅಸಂಭವ. ಕೈಕೆ, ನಿನಗೇಕೆ ಹುಟ್ಟಿತು ಈ ದುರ್ಬುದ್ಧಿ? ಈ ವಿಷಬೀಜವನ್ನು ನಿನ್ನ ಹೃದಯದಲ್ಲಿ ಬಿತ್ತಿದವರಾರು? ಸುಕುಮಾರನಾದ ಶ್ರೀರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ಅಟ್ಟುವಷ್ಟು ಕಠಿನ ಹೃದಯ ನಿನ್ನಲ್ಲಿ ಹೇಗೆ ಉದಯಿಸಿತು? ಶ್ರೀರಾಮ ನನ್ನು ಅಗಲಿ ಸುಕೋಮಲೆಯಾದ ಸೀತೆ ಉಳಿಯುತ್ತಾಳೆಯೆ? ಮಗನ ಪಟ್ಟಾಭಿಷೇಕ ತಪ್ಪಿ ವನವಾಸ ಪ್ರಾಪ್ತವಾದರೆ ಕೌಸಲ್ಯೆಯ ಮಾತೃಹೃದಯ ಒಡೆದು ಚೂರಾಗದೆ? ಕೈಕೆ, ನಿನ್ನ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ, ನನ್ನಲ್ಲಿ ಪ್ರಸನ್ನಳಾಗು. ಸಕಲ ಗುಣಸಂಪನ್ನನಾದ ಶ್ರೀರಾಮನನ್ನು ಅಡವಿಗಟ್ಟುವಷ್ಟು ಕಠಿನಳಾಗಬೇಡ. ನಿನಗೆ

ಬೇಕಾದರೆ ರಾಜ್ಯಕೋಶಾಧಿಗಳನ್ನೆಲ್ಲಾ ತೆಗೆದುಕೊ! ನನ್ನನ್ನು ದುಃಖಸಾಗರದಿಂದ ಉದ್ಧಾರ ಮಾಡು" ಎಂದು ಹಲುಬಿ ಹಂಬಲಿಸಿದನು.

ಮಹಾರಾಜನ ಕಠಿನ ನುಡಿಗಳಾಗಲಿ ಆತನ ದೀನ ಪ್ರಾರ್ಥನೆಯಾಗಲಿ ಕೈಕೆಯ ಮನಸ್ಸನ್ನು ತಿರುಗಿಸುವಂತಿರಲಿಲ್ಲ. ರಾಜನನ್ನು ಕುರಿತು "ಎಲೈ ರಾಜನೆ, ಕೊಟ್ಟ ಮಾತನ್ನು ನಡೆಸಲು ಇಷ್ಟು ಸಂಕಟ ಪಡುವುದು ಯಾವ ನ್ಯಾಯ? ಕ್ಷತ್ರಿಯನಾದ ನಿನಗೆ ಇದು ಉಚಿತವೆ? ಶ್ರೀರಾಮನಿಗೆ ಪಟ್ಟಗಟ್ಟಿ ಕೌಸಲ್ಯೆಯೊಡನೆ ಸುಖಭೋಗದಲ್ಲಿ ತಲ್ಲೀನನಾಗಬೇಕೆಂದಿರುವ ನಿನಗೆ ಸತ್ಯವು ಅಷ್ಟೇನೂ ದೊಡ್ಡದಾಗಿ ಕಾಣಿಸುವುದಿಲ್ಲ ವೇನು? ಹೆಚ್ಚು ಮಾತಿನಿಂದೇನು? ಶ್ರೀರಾಮನಿಗೆ ಪಟ್ಟಾಭಿಷೇಕವಾಗುವ ನಿಮಿಷ ದಲ್ಲಿಯೆ ನಾನು ಘೋರ ವಿಷಪಾನದಿಂದ ಪ್ರಾಣತ್ಯಾಗ ಮಾಡುತ್ತೇನೆ. ಭರತನ ಆಣೆ ಯಾಗಿಯೂ ಇದು ನಿಶ್ಚಯ" ಎಂದು ಕರ್ಣಕಠೋರವಾಗಿ ನುಡಿದಳು. ಇದನ್ನು ಕೇಳಿ ದಶರಥನು ಮುಂಗಾಣದಂತಾದನು. ದೀರ್ಘವಾಗಿ ನಿಟ್ಟುಸಿರುಬಿಡುತ್ತಾ "ಹಾ! ರಾಮಚಂದ್ರ!" ಎಂದು ಚೀರಿಕೊಂಡು ಬುಡಕಡಿದ ಮರದಂತೆ ನೆಲದಮೇಲೆ ಬಿದ್ದನು. ಬಹುಕಾಲದ ಮೇಲೆ ಮೂರ್ಛೆ ತಿಳಿದವನಾಗಿ ಕೈಕೆಯನ್ನು ಪರಿಪರಿಯಾಗಿ ಪ್ರಾರ್ಥಿಸಿ ದಾರಿಗೆ ತರಲು ಪ್ರಯತ್ನಿಸಿದನು; ಅವಳನ್ನು ಮತ್ತೊಮ್ಮೆ ಕಠಿನವಾಕ್ಯ ಗಳಿಂದ ನಿಂದಿಸಿ ನೋಡಿದನು; ತನ್ನನ್ನು ಪರಿಪರಿಯಾಗಿ ಹಳಿದುಕೊಂಡನು. ಕೊನೆಗೆ ಶ್ರೀರಾಮನು ಅರಣ್ಯಕ್ಕೆ ಹೋದರೆ ತಾನು ಸತ್ತುಹೋಗುವುದಾಗಿಯೂ ಕೈಕೆ ವಿಧವೆಯಾಗುವುದಾಗಿಯೂ ಹೇಳಿ ನೋಡಿದನು. ಅವಳು ಮಾಡುತ್ತಿರುವ ಕಾರ್ಯ ದಿಂದ ಮಹಾ ಪ್ರಳಯವುಂಟಾಗುವುದೆಂದು ಹೆದರಿಸಿದನು. ಕೌಸಲ್ಯಾ ಸುಮಿತ್ರೆಯರೂ ಅಯೋಧ್ಯೆಯ ಬಹು ಜನರೂ ಶ್ರೀರಾಮನ ವನಪ್ರಯಾಣದಿಂದ ಅಸುದೊರೆವರೆಂದೂ ಹೆದರಿಸಿದನು. "ನೋಡು, ನಿನ್ನ ಮಗನಾದ ಭರತನಿಗೆ ಕೂಡ ನೀನು ಮಾಡುವ ಕಾರ್ಯ ಪ್ರಿಯವಾಗುವುದಿಲ್ಲ" ಎಂದು ಹೇಳಿದನು. ಆದರೆ ಎಲ್ಲವೂ ಗೋರ್ಕಲ್ಲ ಮೇಲೆ ಮಳೆಗರೆದಂತಾಯಿತು. ಕೈಕೆ ಹಿಡಿದ ಹಟವನ್ನು ಬಿಡಲಿಲ್ಲ.

ಮಾತು ಆಡಿದರೆ ಹೋಯಿತು; ಮುತ್ತು ಒಡೆದರೆ ಹೋಯಿತು. ದಶರಥನೂ ಕೈಕೆಯ ಇಷ್ಟಾರ್ಥವನ್ನು ಸಲ್ಲಿಸುವುದಾಗಿ ಪ್ರಮಾಣಪೂರ್ವಕವಾಗಿ ಮಾತುಕೊಟ್ಟು ಮುಂಗಾಣದಂತಾದನು. ಕೊಟ್ಟಮಾತನ್ನು ತಪ್ಪುವುದಕ್ಕಿಲ್ಲ; ಅದನ್ನು ನಡೆಸ ಹೊರಟು ಪ್ರಾಣಕ್ಕಿಂತಲೂ ಪ್ರಿಯನಾದ ಶ್ರೀರಾಮನನ್ನು ಅಗಲುವುದಕ್ಕೂ ಇಲ್ಲ. ಇಕ್ಕುಳದಲ್ಲಿ ಸಿಕ್ಕ ಹುಳದಂತೆ ಆತನು ಪರಿತಪಿಸುತ್ತಿರಲು ಕೈಕೆ ಕೇವಲ ನಿರ್ದಯಳಾಗಿ "ಎಲೈ ಮಹಾರಾಜನೆ, ಸತ್ಯದೂರನಾಗಿ ಮಹಾಪಾತಕಕ್ಕೊಳಗಾಗಬೇಡ.ಅಳುತ್ತಾ ನೆಲದಮೇಲೆ ಹೊರಳಾಡಿದರೆ ಏನಾದಂತಾಯಿತು? ಶಿಬಿಚಕ್ರವರ್ತಿ ಆಡಿದ ಮಾತನ್ನು ಉಳಿಸಿಕೊಳ್ಳು ವುದಕ್ಕಾಗಿ ತನ್ನ ದೇಹವನ್ನೆ ಗಿಡುಗನಿಗೆ ಆಹಾರವಾಗಿ ಕೊಡಲಿಲ್ಲವೆ? ಅಲರ್ಕನು ತನ್ನ ಕಣ್ಣುಗಳನ್ನೇ ಕಿತ್ತುಕೊಡಲಿಲ್ಲವೆ? ಈ ದೇಹಕ್ಕಿಂತಲೂ ಕೀರ್ತಿ ಮುಖ್ಯ ವಾದುದು. ಆ ಕೀರ್ತಿಯನ್ನು ಗಾಳಿಗೆ ತೂರಬಹುದೆ?" ಎಂದಳು. ಅವಳ ಮಾತು

ಗಳಿಂದ ದಶರಥನಿಗೆ ಅವಳನ್ನು ದಾರಿಗೆ ತರುವ ಆಸೆ ಹಾರಿಹೋಯಿತು. ಆ ವೇಳೆಗೆ ರಾತ್ರಿ ಕಳೆದು ಮೂಡಲಲ್ಲಿ ಕೆಂಪುಹರಿಯುತ್ತಿತ್ತು. ಇನ್ನು ಶ್ರೀರಾಮನ ಪಟ್ಟಾಭಿಷೇಕ ಕ್ಕಾಗಿ ಜನರು ಬಂದು ತನ್ನನ್ನು ತ್ವರೆಪಡಿಸುವರೆಂದುಕೊಂಡು ಆ ವೃದ್ಧರಾಜನು ಅಸಹ್ಯವೇದನೆಯನ್ನು ಅನುಭವಿಸುತ್ತಾ, ಕೈಕೆಯನ್ನು ಕುರಿತು "ಎಲೆ ನೀಚೆ, ಧರ್ಮಪಾಶಕ್ಕೆ ಕಟ್ಟುಬಿದ್ದ ನಾನು ನಿನ್ನ ಇಷ್ಟವನ್ನೇನೊ ನಡೆಸುತ್ತೇನೆ. ಆದರೆ ಇನ್ನು ನೀನು ನನ್ನ ಹೆಂಡತಿಯಲ್ಲ. ನಿನ್ನ ಮಗನು ನನ್ನ ಮಗನೂ ಅಲ್ಲ. ಹೇಗಿದ್ದರೂ ಈ ವ್ಯಥೆಯಿಂದ ನಾನು ಸಾಯುವುದು ನಿಶ್ಚಯ. ನಾನು ಸತ್ತ ಮೇಲೆ ನೀನಾಗಲಿ ನಿನ್ನ ಮಗನಾಗಲಿ ನನಗೆ ತರ್ಪಣವನ್ನೂ ಸಹ ಕೊಡಬೇಕಾದುದಿಲ್ಲ" ಎಂದು ಹೇಳಿ ನಿರ್ವಿಣ್ಣನಾಗಿ ಹಾಸಗೆಯ ಮೇಲೆ ದೊಪ್ಪನೆ ಕೆಡೆದನು.

---

೪

# ಹಾ ರಾಮ ! ಹಾ ರಾಮ !

ಬೆಳ್ಳಗೆ ಬೆಳಗಾಯಿತು. ಅಯೋಧ್ಯೆಯೆಲ್ಲವೂ ಶ್ರೀರಾಮಪಟ್ಟಾಭಿಷೇಕದ ಸಂಭ್ರಮದಲ್ಲಿ ತುಂಬಿಹೋಗಿದೆ. ಬೀದಿಗಳಿಗೆಲ್ಲಾ ಪನ್ನೀರು ಚೆಲ್ಲಿ, ಪುಷ್ಪಗಳನ್ನು ಹರಡಿದ್ದಾರೆ. ಮನೆಮನೆಯ ಬಾಗಿಲುಗಳೂ ಹೂವಿನ ಹಾರಗಳಿಂದ ಅಲಂಕೃತ ವಾಗಿವೆ. ಅಲ್ಲಲ್ಲಿ ಬಾವುಟಗಳನ್ನು ಎತ್ತಿಕಟ್ಟಿದ್ದಾರೆ. ಜನರು ವಸ್ತ್ರಾಭರಣಗಳಿಂದ ಅಲಂಕೃತರಾಗಿ ಸಡಗರದಿಂದ ಬೀದಿಗಳಲ್ಲಿ ಓಡಾಡುತ್ತಿದ್ದಾರೆ. ಊರಲ್ಲಿ ಎಲ್ಲಿ ನೋಡಿ ದರೂ ಮಂಗಳವಾದ್ಯಗಳು ಭೋರ್ಗರೆಯುತ್ತಿವೆ. ವಸಿಷ್ಠಮಹರ್ಷಿಗಳು ತಮ್ಮ ಶಿಷ್ಯರೊಡಗೂಡಿ ಪಟ್ಟಾಭಿಷೇಕ ಸಾಮಗ್ರಿಗಳನ್ನು ತೆಗೆಸಿಕೊಂಡು ಅರಮನೆಯನ್ನು ಪ್ರವೇಶಿಸುತ್ತಾ ಅಲ್ಲಿದ್ದ ಸುಮಂತ್ರನನ್ನು ಕುರಿತು "ಅಯ್ಯಾ, ಸಮಸ್ತವೂ ಸಿದ್ಧ ವಾಗಿದೆಯೆಂದು ಹೇಳಿ ಮಹಾರಾಜನನ್ನು ತ್ವರೆಗೊಳಿಸು" ಎಂದು ಹೇಳಿದರು. ಸುಮಂತ್ರನು ಒಡನೆಯೆ ರಾಜನ ಅಂತಃಪುರವನ್ನು ಪ್ರವೇಶಿಸಿ, ಆತನನ್ನು ಎಚ್ಚರ ಗೊಳಿಸುವುದಕ್ಕಾಗಿ ಎಂದಿನಂತೆ ಪ್ರಾತಃಕಾಲದ ಮಂಗಳಶಾಸನವನ್ನು ಘೋಷಿಸಲು ಆರಂಭಿಸಿದನು. ಅದನ್ನು ಕೇಳಿ ದಶರಥನಿಗೆ ಗಾಯದ ಮೇಲೆ ಬರೆ ಎಳೆದಂತಾಯಿತು. ಅತ್ತು ಅತ್ತು ಕೆಂಪಾಗಿದ್ದ ಕಣ್ಣುಗಳಿಂದ ಅವನನ್ನು ಕೆಕ್ಕರಿಸಿ ನೋಡುತ್ತಾ "ಅಯ್ಯಾ, ಸುಮಂತ್ರ ಸಂಕಟದಿಂದ ಪರಿತಪಿಸುತ್ತಿರುವ ನನಗೆ ನಿನ್ನ ಮೂದಲೆ ಬೇರೆ ಸಾಲದಾಗಿತ್ತೆ ?" ಎಂದನು. ಆ ಮಾತನ್ನು ಕೇಳಿ ಸುಮಂತ್ರನಿಗೆ ಜಂಘಾಬಲವೆ ಉಡುಗಿ ಹೋದಂತಾಯಿತು. ಮರುಮಾತನಾಡದೆ ಅಲ್ಲಿಂದ ಹಿಂದಿರುಗಿದನು. ಆದರೆ ಕೈಕೆ ಅವನನ್ನು ಹಿಂದಕ್ಕೆ ಕರೆದು, "ಎಲೈ ಸುಮಂತ್ರನೆ, ಮಹಾರಾಜನಿಗೆ ರಾಮ ಪಟ್ಟಾಭಿಷೇಕ ಸಂಭ್ರಮದಿಂದ ರಾತ್ರಿಯೆಲ್ಲಾ ನಿದ್ರೆಯೆ ಇಲ್ಲ. ಈಗ ಸ್ವಲ್ಪ ಜೊಂಪು ಹತ್ತುವಂತಿದೆ. ನೀನು ಆತನನ್ನು ಎಚ್ಚರಗೊಳಿಸುವ ಗೋಜಿಗೆ ಹೋಗಬೇಡ. ಶ್ರೀರಾಮನನ್ನು ಇಲ್ಲಿಗೆ ಕರೆದು ತಾ" ಎಂದಳು. ಈ ಮಾತುಗಳಿಂದ ಸುಮಂತ್ರನಿಗೆ ಎಷ್ಟೋ ಸಮಾಧಾನವಾದಂತಾಯಿತು. ಶ್ರೀರಾಮನನ್ನು ಕರೆತರಲು ಆತನು ಧಾವಿಸಿ ದನು. ಅನೇಕ ಸಾಮಂತರೂ ಪುರನಿವಾಸಿಗಳೂ ಕಪ್ಪಕಾಣಿಕೆಗಳೊಡನೆ ಕಿಕ್ಕಿರಿದು ಅರಮನೆಯ ಬಾಗಿಲಲ್ಲಿ ನೆರೆದಿದ್ದರು. ಸುಮಂತ್ರನು ಅವರ ಮಧ್ಯದಲ್ಲಿ ನುಸುಳಿ ಕೊಂಡು ವೇಗವಾಗಿ ಶ್ರೀರಾಮನ ಬಳಿ ಸೇರಿದನು.

ಸುಮಂತ್ರನು ಅಂತಃಪುರವನ್ನು ಪ್ರವೇಶಿಸಿದಾಗ ಶ್ರೀರಾಮನು ಸಕಲಾಭರಣ ಭೂಷಿತನಾಗಿ ಮನೋಹರವಾದ ಪರ್ಯಂಕದಲ್ಲಿ ಕುಳಿತಿದ್ದನು. ಸೀತಾದೇವಿ ಆತನ ಪಕ್ಕದಲ್ಲಿ ನಿಂತು ಚಾಮರ ಬೀಸುತ್ತಿದ್ದಳು. ಹೀಗೆ ಚಿತ್ತಾನಕ್ಷತ್ರದೊಡಗೂಡಿದ ಚಂದ್ರ

ನಂತೆ ರಾರಾಜಿಸುತ್ತಿರುವ ಶ್ರೀರಾಮನನ್ನು ಕುರಿತು ಸುಮಂತ್ರನು "ಕೌಸಲ್ಯಾ ಸುಪುತ್ರ, ದೇವಿ ಕೈಕೆಯೊಡನೆ ಅಂತಃಪುರದಲ್ಲಿರುವ ದಶರಥ ಮಹಾರಾಜನು ಒಡನೆಯೆ ನಿನ್ನನ್ನು ಕಾಣಲು ಬಯಸುತ್ತಿದ್ದಾನೆ" ಎಂದು ಹೇಳಿದನು. ಆ ಮಾತುಗಳಿಂದ ಸಂತೋಷಗೊಂಡ ಶ್ರೀರಾಮನು ತನ್ನ ಮಡದಿಯನ್ನು ಕುರಿತು "ಎಲೈ ಮದಿರಾಕ್ಷಿ, ಸೀತೆ, ಮಾತೆಯಾದ ಕೈಕೆ ನನ್ನ ಪಟ್ಟಾಭಿಷೇಕ ಸಮಾಚಾರವನ್ನು ಕೇಳಿ ಅತ್ಯಂತ ಸಂತೋಷದಿಂದ ನನಗೆ ಹೇಳಿ ಕಳುಹಿಸಿರಬೇಕೆಂದು ತೋರುತ್ತದೆ. ನಾನು ಶೀಘ್ರದಲ್ಲಿಯೆ ಅಲ್ಲಿಗೆ ಹೋಗಿ ಬರುತ್ತೇನೆ. ನೀನು ಸಖಿಯರೊಡನೆ ಸ್ವಲ್ಪ ಕಾಲ ವಿನೋದದಿಂದಿರು" ಎಂದು ಹೇಳಿ ಸುಮಂತ್ರನೊಡನೆ ರಥದಲ್ಲಿ ಕುಳಿತು ಕೈಕೆಯ ಅಂತಃಪುರಕ್ಕೆ ಹೊರಟನು. ದಾರಿಯಲ್ಲಿ ಕಿಕ್ಕಿರಿದು ನೆರೆದಿದ್ದ ಜನಸಂದಣಿ ಶ್ರೀರಾಮನನ್ನು ಕಾಣುತ್ತಲೆ ಜಯಕಾರ ಮಾಡಿತು. ಹಿರಿಯರೆಲ್ಲರೂ ಆನಂದ ಬಾಷ್ಪಗಳನ್ನು ಸುರಿಸುತ್ತಾ "ಅಖಂಡ ಭೂಮಂಡಲಕ್ಕೆ ಪ್ರಭುವಾಗಿ ಚಿರಕಾಲ ಬಾಳು!" ಎಂದು ಆಶೀರ್ವದಿಸಿದರು. ಮುತ್ತೈದೆಯರು ಉಪ್ಪರಿಗೆಯ ಮೇಲಿನಿಂದ ಆತನ ಮೇಲೆ ಹೂವೆರಚಿದರು. ಶ್ರೀರಾಮನು ಎಲ್ಲರಿಗೂ ಕೈಮುಗಿಯುತ್ತಾ ಹೊರಟು ಕೈಕೆಯ ಅಂತಃಪುರವನ್ನು ಸೇರಿದನು.

ಅಂತಃಪುರವನ್ನು ಪ್ರವೇಶಿಸುತ್ತಲೇ ಶ್ರೀರಾಮನು ಸಿಂಹಾಸನದಲ್ಲಿ ಕುಳಿತಿದ್ದ ತಂದೆಗೂ ಬಳಿಯಲ್ಲಿ ನಿಂತಿದ್ದ ಬಲತಾಯಿಗೂ ಭಕ್ತಿಯಿಂದ ನಮಸ್ಕರಿಸಿದನು. ಆತನನ್ನು ಕಾಣುತ್ತಲೆ ದಶರಥನು ಒಮ್ಮೆ "ರಾಮ!" ಎಂದು ಕೂಗಿ, ಕಣ್ತುಂಬ ನೀರು ತುಂಬಿದನು. ಆತನ ಬಾಯಿಂದ ಮುಂದೆ ಮಾತು ಹೊರಡಲಿಲ್ಲ. ಆತನ ಈ ಶೋಚನೀಯ ಸ್ಥಿತಿಯನ್ನು ಕಂಡು ಶ್ರೀರಾಮನು ಅಕಸ್ಮಾತ್ತಾಗಿ ಹಾವನ್ನು ಮೆಟ್ಟಿದವನಂತೆ ಚಕಿತನಾಗಿ ಕೈಕೆಯನ್ನು ಕುರಿತು "ಅಮ್ಮ, ತಂದೆ ಅದೇಕೆ ಹೀಗಿದ್ದಾನೆ! ಆತನಿಗೆ ನನ್ನ ಮೇಲೆ ಕೋಪವೇನಾದರೂ ಬಂದಿರುವುದೆ? ನಾನೇನು ತಪ್ಪು ಮಾಡಿದೆ? ಅಥವಾ ಆತನಿಗೆ ದೇಹದಲ್ಲಿ ಆಲಸ್ಯವಾಗಿರುವುದೆ? ಇಲ್ಲವೆ ಮತ್ತಾವ ಕಾರಣದಿಂದಲಾದರೂ ಆತನ ಮನಸ್ಸಿಗೆ ವ್ಯಥೆಯುಂಟಾಗಿರುವುದೊ? ಭರತ ಶತ್ರುಘ್ನರ ವಿಚಾರದಲ್ಲಿ ಕೆಟ್ಟ ಸುದ್ದಿಯೇನೂ ಬಂದಿಲ್ಲವಷ್ಟೆ? ತಂದೆಯ ಪರಮಪ್ರಿಯಳಾದ ನೀನೇನಾದರೂ ಕ್ರೂರವಾಕ್ಯಗಳಿಂದ ತಂದೆಯನ್ನು ನೋಯಿಸಿದೆಯೊ? ಮಹಾರಾಜನು ಎಂದೂ ಹೀಗೆ ಇದ್ದವನಲ್ಲ. ಇಂದೇಕೆ ಕಳವಳಕ್ಕೆ ಆಸ್ಪದವಾಯಿತು? ಆತನ ಮನೋವ್ಯಥೆಯನ್ನು ಹೋಗಲಾಡಿಸದ ಮೇಲೆ ನಾನಿದ್ದು ತಾನೆ ಏನು ಸಾರ್ಥಕ? ಇರುವ ವಿಚಾರವನ್ನು ಮರೆಮಾಚದೆ ನನಗೆ ತಿಳಿಸು" ಎಂದು ಕೇಳಿದನು.

ನಿಷ್ಠುರಳಾದ ಕೈಕೆ ಸ್ವಲ್ಪವೂ ನಾಚಿಕೆಯಿಲ್ಲದೆ ಶ್ರೀರಾಮನಿಗೆ ಉತ್ತರವಿತ್ತಳು—"ಎಲೈ ಶ್ರೀರಾಮನೆ, ನಿಮ್ಮ ತಂದೆಗೆ ಕೋಪವೂ ಇಲ್ಲ, ವ್ಯಥೆಯೂ ಇಲ್ಲ. ಆತನ ಮನಸ್ಸಿನಲ್ಲಿ ಯಾವುದೊ ಒಂದು ಅಭಿಪ್ರಾಯವಿದೆ. ಅದು ನಿನಗೆ ಅಪ್ರಿಯವಾದುದು. ಪ್ರಿಯಪುತ್ರನಾದ ನಿನಗೆ ಆ ಅಪ್ರಿಯವಾದ ಮಾತುಗಳನ್ನು ಹೇಳಲು ಆತನ

ನಾಲಿಗೆ ಏಳುತ್ತಿಲ್ಲ. ಆತನ ಮಾತನ್ನು ನಡೆಸುತ್ತೇನೆಂದು ನೀನು ಅಭಿವಚನ ಕೊಡು ವಂತಿದ್ದರೆ ನಾನು ಎಲ್ಲವನ್ನೂ ನಿನಗೆ ವಿವರಿಸಿ ಹೇಳುತ್ತೇನೆ" ಎಂದಳು. ಆಕೆಯ ಮಾತುಗಳನ್ನು ಕೇಳಿ ಶ್ರೀರಾಮನ ಮನಸ್ಸಿಗೆ ಬಹು ನೋವಾಯಿತು. ತಂದೆಯ ಮಾತನ್ನು ತಾನು ನಡೆಸುವ ವಿಚಾರದಲ್ಲಿ ಸಂದೇಹವೆ ? "ಅಮ್ಮಾ, ತಂದೆಯ ಅಪ್ಪಣೆ ಯಾಗುವುದಾದರೆ ಬೆಂಕಿಯಲ್ಲಿ ಧುಮ್ಮಿಕ್ಕುವೆನು ; ವಿಷಪಾನ ಮಾಡುವುದಕ್ಕೂ ಹಿಂದುಮುಂದು ನೋಡುವುದಿಲ್ಲ. ನಿನಗೆ ಸ್ವಲ್ಪವೂ ಸಂಶಯ ಬೇಡ. ತಂದೆಯ ಅಪ್ಪಣೆ ಏನೆಂಬುದನ್ನು ಹೇಳು. ಆತನ ಮಾತನ್ನು ನಡೆಸುವೆನೆಂದು ಪ್ರಮಾಣ ಮಾಡಿ ಹೇಳುತ್ತೇನೆ. ರಾಮನು ಎರಡು ಮಾತನ್ನಾಡುವವನಲ್ಲ" ಎಂದನು.

ಸತ್ಯನಿಷ್ಠನಾದ ಶ್ರೀರಾಮನ ಪ್ರಮಾಣವಚನದಿಂದ ಕೈಕೆಗೆ ತನ್ನ ಅಭೀಷ್ಟ ಸಿದ್ಧಿಯಾಯಿತೆಂದು ಸಮಾಧಾನವಾಯಿತು. ಕಠೋರವಾದ ತನ್ನ ದುರಭಿಸಂಧಿಯನ್ನು ಆತನಿಗೆ ತಿಳಿಸಿದಳು. "ಎಲೈ ರಾಘವ, ಪೂರ್ವದಲ್ಲಿ ದೇವಾಸುರ ಯುದ್ಧಕಾಲ ದಲ್ಲಿ ನಿನ್ನ ತಂದೆ ಅಪಾಯಕ್ಕೊಳಗಾಗಿದ್ದಾಗ ನಾನು ಆತನನ್ನು ಉಪಚರಿಸಿ ಆತನ ಪ್ರಾಣರಕ್ಷಣೆ ಮಾಡಿದೆ. ಸಂತುಷ್ಟನಾದ ಈತನು ನನಗೆ ಎರಡು ವರಗಳನ್ನು ಕೊಟ್ಟನು. ನಾನು ಅಂದು ಅವುಗಳನ್ನು ಬಳಸಿಕೊಳ್ಳಲಿಲ್ಲ. ಇಂದು ಆ ವರ ಗಳನ್ನು ಆತನಲ್ಲಿ ಯಾಚಿಸುತ್ತಿದ್ದೇನೆ. ಒಂದು ವರದಿಂದ ಭರತನ ಪಟ್ಟಾಭಿಷೇಕ ವನ್ನೂ ಮತ್ತೊಂದರಿಂದ ನಿನ್ನ ವನವಾಸವನ್ನೂ ಬೇಡುತ್ತಿದ್ದೇನೆ. ನಿನ್ನ ಪಟ್ಟಾಭಿ ಷೇಕಕ್ಕಾಗಿ ಸಿದ್ಧವಾಗಿರುವ ಸಂಭಾರಗಳಿಂದಲೆ ಭರತನಿಗೆ ಪಟ್ಟಾಭಿಷೇಕವಾಗಲಿ ; ನೀನು ಜಟಾಜಿನಗಳನ್ನು ಧರಿಸಿ ಹದಿನಾಲ್ಕು ವರ್ಷ ವನವಾಸ ಕೈಗೊಳ್ಳುವವನಾಗು. ನಿನ್ನ ತಂದೆಯ ಮಾತನ್ನು ನೀನು ನಡಸುವುದೆ ನಿಜವಾದರೆ ಈ ಕಾರ್ಯಗಳನ್ನು ತ್ವರಿತ ವಾಗಿ ನಡಸು. ನಿನ್ನ ತಂದೆಯ ಸತ್ಯಕ್ಕೆ ಲೋಪ ಬಾರದಂತೆ ಆಚರಿಸು."

ಕೈಕೆಯ ನುಡಿಗಳನ್ನು ಕೇಳಿ ಶ್ರೀರಾಮನು ಬೆಚ್ಚಲಿಲ್ಲ, ಬೆದರಲಿಲ್ಲ. ಪ್ರಸನ್ನ ವಾದ ಆತನ ಮುಖಮುದ್ರೆಯಲ್ಲಿ ವಿಕಾರದ ಒಂದು ಸೂಚನೆ ಕೂಡ ಸುಳಿಯಲಿಲ್ಲ. ಪ್ರಶಾಂತನಾಗಿ ಆತನು ಪ್ರತ್ಯುತ್ತರ ಕೊಟ್ಟನು. "ಅಮ್ಮಾ, ಇದಾವ ಮಹಾಕಾರ್ಯ ? ತಂದೆಯ ಪ್ರತಿಜ್ಞೆ ನೆರವೇರಲಿ. ನಿನ್ನ ಅಪೇಕ್ಷೆಯಂತೆ ನಾನು ವನವಾಸ ಕೈಗೊಳ್ಳುತ್ತೇನೆ. ಭರತನಿಗೆ ರಾಜ್ಯಾಭಿಷೇಕವಾಗುವುದಕ್ಕಿಂತಲೂ ಹೆಚ್ಚಿನ ಸಂತೋಷವಾವುದು ? ಆತನಿ ಗಾಗಿ ನಾನು ರಾಜ್ಯವನ್ನು ಮಾತ್ರವೇ ಅಲ್ಲ, ನನ್ನ ಪ್ರಾಣಕ್ಕಿಂತಲೂ ಪ್ರಿಯತಮಳಾದ ಸೀತೆಯನ್ನು ಕೂಡ ತ್ಯಾಗಮಾಡಲು ಸಿದ್ಧನಿದ್ದೇನೆ. ಕಂಬನಿ ಸುರಿಸುತ್ತಿರುವ ತಂದೆ ಯನ್ನು ಮೊದಲು ಸಮಾಧಾನ ಮಾಡು" ಎಂದನು. ಶ್ರೀರಾಮನ ನುಡಿಗಳನ್ನು ಕೇಳಿ ಕೈಕೆಯ ಪಾಷಾಣಹೃದಯ ಸ್ವಲ್ಪವೂ ಕರಗಲಿಲ್ಲ. ಅದಕ್ಕೆ ಬದಲಾಗಿ ಆಕೆ ಶ್ರೀರಾಮ ನನ್ನು ವನಪ್ರಯಾಣಕ್ಕೆ ತ್ವರೆಗೊಳಿಸುವುದಕ್ಕಾಗಿ ಆತನನ್ನು ಕುರಿತು "ಎಲೈ ರಾಮಚಂದ್ರ, ನಿನ್ನ ಇಷ್ಟದಂತೆ ಆಗಲಿ ಇಗೋ ಭರತನನ್ನು ಕರೆದು ತರಲು ಈ ಕ್ಷಣ ದಲ್ಲಿಯೆ ದೂತರನ್ನು ಅಟ್ಟುತ್ತೇನೆ. ನಿನ್ನ ವನಪ್ರಯಾಣ ತ್ವರಿತಗೊಳ್ಳಲಿ. ನೀನು

ಪ್ರಯಾಣ ಮಾಡುವವರೆಗೂ ಮಹಾರಾಜನು ಸ್ನಾನಭೋಜನಾದಿಗಳನ್ನು ಕೂಡ ನೆರವೇರಿಸುವುದಿಲ್ಲ" ಎಂದಳು.

ಕೈಕೆಯ ಮಾತುಗಳನ್ನು ಕೇಳುತ್ತಿದ್ದ ದಶರಥನಿಗೆ ಇನ್ನು ತಡೆಯಲಾಗಲಿಲ್ಲ. ಆತನು "ಹಾ ಕಷ್ಟ!" ಎಂದು ಚೀರಿ ಪ್ರಜ್ಞೆ ತಪ್ಪಿದವನಾಗಿ ಮಂಚದ ಮೇಲೆ ಬಿದ್ದನು. ಅವನನ್ನು ಕಂಡು ಕಶಾಪ್ರಹಾರಿತವಾದ ಕುದುರೆಯಂತೆ ಶ್ರೀರಾಮನು ಚಕಿತನಾದನು. ಒಡನೆಯೆ ವನಪ್ರಯಾಣಕ್ಕೆ ಉದ್ಯುಕ್ತನಾಗಿ ಕೈಕೆಯನ್ನು ಕುರಿತು, "ಅಮ್ಮಾ, ನನ್ನ ತಾಯಿಯಾದ ಕೌಸಲ್ಯೆಯಿಂದ ಅಪ್ಪಣೆ ಪಡೆದು ಜಾನಕಿಯನ್ನು ಸಮಾಧಾನಗೊಳಿಸುವಷ್ಟು ವ್ಯವಧಾನವನ್ನು ಅನುಗ್ರಹಿಸು. ಇಂದೇ ನಾನು ದಂಡಕಾರಣ್ಯವನ್ನು ಕುರಿತು ಪ್ರಯಾಣ ಮಾಡುತ್ತೇನೆ" ಎಂದು ಹೇಳಿ ಆಕೆಗೂ, ಮೂರ್ಛಿತನಾಗಿ ಬಿದ್ದಿದ್ದ ತಂದೆಗೂ ನಮಸ್ಕರಿಸಿ, ತಾಯಿ ಕೌಸಲ್ಯೆಯ ಅಂತಃಪುರಕ್ಕಾಗಿ ಹೊರಟು ಬಂದನು. ದಶರಥನ ಬಾಯಲ್ಲಿ "ಹಾ ರಾಮ! ಹಾ ರಾಮ!" ಎಂಬ ಉದ್ಗಾರ ಅಪ್ರಯತ್ನವಾಗಿಯೆ ಹೊರಡುತ್ತಿತ್ತು.

---

೫

## ತಾಯ್ತನದ ಹರಕೆ

ಕೈಕೆಯ ಅಂತಃಪುರದ ಬಾಗಿಲಿನ ಬಳಿಯಲ್ಲಿಯೆ ಲಕ್ಷ್ಮಣನು ನಿಂತಿದ್ದನು. ಶ್ರೀರಾಮನು ಮುಗುಳ್ನಗೆಯಿಂದ ಆತನನ್ನು ಆದರಿಸುತ್ತಾ ಕೌಸಲ್ಯೆಯ ಅಂತಃಪುರಕ್ಕೆ ಆತನೊಡನೆ ಬಂದನು. ಅವರು ಅಂತಃಪುರವನ್ನು ಪ್ರವೇಶಿಸಿದಾಗ ಕೌಸಲ್ಯಾದೇವಿ ಮಗನ ಶ್ರೇಯಸ್ಸನ್ನು ಕೋರುತ್ತಾ ದೇವತಾ ಪ್ರಾರ್ಥನೆಯಲ್ಲಿ ತೊಡಗಿದ್ದಳು. ಮಗನನ್ನು ಕಾಣುತ್ತಲೆ ಆಕೆ ಹೆಣ್ಣು ಕುದುರೆ ಮರಿಯ ಬಳಿಗೆ ಧಾವಿಸುವಂತೆ ಶೀಘ್ರವಾಗಿ ಆತನ ಬಳಿಸಾರಿ ಆತನನ್ನು ಆಲಿಂಗಿಸಿಕೊಂಡಳು; ನೆತ್ತಿ ಮೂಸಿದಳು. ಮತ್ತೆ ಆತನನ್ನು ಕುರಿತು "ರಘುವಂಶದ ರಾಜರ್ಷಿಗಳಂತೆ ನೀನು ಕೀರ್ತಿಶಾಲಿಯಾಗಿ ಚಿರಾಯುವಾಗು. ಸತ್ಯಪ್ರತಿಜ್ಞನಾದ ಮಹಾರಾಜನು ಇಂದು ನಿನ್ನನ್ನು ಯುವರಾಜ ಪಟ್ಟದಲ್ಲಿ ಕುಳ್ಳಿರಿಸುವನು" ಎಂದು ಹೇಳಿ ಆತನನ್ನು ರತ್ನಖಚಿತವಾದ ಆಸನದಲ್ಲಿ ಕುಳ್ಳಿರಿಸಿ ಭೋಜನಕ್ಕೆ ಸಿದ್ಧಪಡಿಸಿದಳು. ತಾಯಿಯ ಸಂಭ್ರಮವನ್ನು ಕಂಡ ಶ್ರೀರಾಮನು ನಾಚಿಕೆಯಿಂದ ತಲೆತಗ್ಗಿಸಿದವನಾಗಿ, ಆಕೆಯನ್ನು ಕುರಿತು "ಅಮ್ಮಾ, ಈಗ ಪ್ರಾಪ್ತವಾಗಿರುವ ಮಹಾ ಭಯವನ್ನು ನೀನರಿಯೆ; ಮಾತೆಯಾದ ನಿನಗೂ ಪ್ರಿಯೆಯಾದ ಸೀತೆಗೂ ಅಣುಗುದಮ್ಮನಾದ ಲಕ್ಷ್ಮಣನಿಗೂ ಬಹು ವ್ಯಸನವನ್ನುಂಟು ಮಾಡುವಂತಹ ಸುದ್ದಿಯೊಂದನ್ನು ನಾನು ಹೇಳಬೇಕಾಗಿದೆ. ಕೇಳು, ನಾನು ಈ ದಿನವೇ ದಂಡಕಾರಣ್ಯಕ್ಕೆ ತೆರಳಬೇಕಾಗಿದೆ. ಅಂತಹ ನನಗೆ ಈ ರತ್ನಖಚಿತವಾದ ಪೀಠವೇತಕ್ಕೆ? ನನಗೆ ಇನ್ನು ಮೇಲೆ ದರ್ಭಾಸನವೆ ಆಸನ. ಈ ಷಡ್ರಸೋಪೇತವಾದ ಆಹಾರವೇತಕ್ಕೆ? ನನಗೇನಿದ್ದರೂ ಕಂದ ಮೂಲ ಫಲಗಳೆ ಆಹಾರ. ನಾನು ಹದಿನಾಲ್ಕು ವರ್ಷಗಳ ಕಾಲ ವನವಾಸವನ್ನು ಕೈಗೊಳ್ಳಬೇಕೆಂದೂ ನನ್ನ ತಮ್ಮನಾದ ಭರತನು ಪಟ್ಟಾಭಿಷಿಕ್ತನಾಗಬೇಕೆಂದೂ ತಂದೆ ವಿಧಿಸಿರುವನು" ಎಂದು ಹೇಳಿದನು. ಮಗನ ಮಾತುಗಳನ್ನು ಕೇಳಿ ಕೌಸಲ್ಯಾದೇವಿ ಬುಡಕಡಿದ ಬಾಳೆಯ ಮರದಂತೆ ಮೂರ್ಛಿತಳಾಗಿ ನೆಲಕ್ಕೆ ಬಿದ್ದಳು. ಶ್ರೀರಾಮನು ಆಕೆಯನ್ನು ಉಪಚರಿಸಿ ಮೇಲಕ್ಕೆಬ್ಬಿಸಿದನು.

ಮೂರ್ಛೆಯಿಂದ ಎಚ್ಚೆತ್ತ ಕೌಸಲ್ಯೆ ತನ್ನ ಮಗನ ದುರ್ದೆಶೆಗಾಗಿ ಹಲುಬಿ ಹಂಬಲಿಸಿ ಗೋಳಿಟ್ಟಳು. "ಮಗೂ, ನೀನು ನನ್ನ ಹೊಟ್ಟೆಯಲ್ಲೇಕೆ ಹುಟ್ಟಿದೆ? ನಾನು ಬಂಜೆಯಾಗಿದ್ದರೆ ಈ ದಾರುಣ ದುಃಖವಾದರೂ ತಪ್ಪುತ್ತಿತ್ತು. ನಾನು ನಿನ್ನನ್ನು ಹೆತ್ತುದು ಈ ದುಃಖವನ್ನು ನೋಡುವುದಕ್ಕಾಗಿಯೆ ಏನು? ನನ್ನ ಬಾಳೆಲ್ಲವೂ ಬರಿಯ ದುಃಖವೆ ಆದಂತಾಯಿತು. ಪತಿಪ್ರೇಮದಿಂದ ವಂಚಿತಳಾಗಿದ್ದ ನಾನು ಮಗನ ದೆಸೆಯಿಂದಲಾದರೂ

ಸುಖವನ್ನು ಕಂಡೇನೆಂದುಕೊಂಡಿದ್ದೆ. ಹೆಸರಿಗೆ ನಾನೊಬ್ಬ ಪಟ್ಟದ ರಾಣಿ. ಆದರೆ ನನಗೆ ದೊರೆಯುತ್ತಿರುವುದು ಬರಿಯ ತಿರಸ್ಕಾರವೊಂದೇ. ಸರ್ವಲೋಕಪ್ರಿಯನಾದ ನೀನು ನನ್ನ ಸಮೀಪದಲ್ಲಿರುವಾಗಲೆ ನನ್ನ ಸ್ಥಿತಿ ಹೀಗಿರುವಾಗ ನೀನು ಅರಣ್ಯಕ್ಕೆ ತೆರಳಿದ ಮೇಲೆ ನನ್ನ ಗತಿಯೇನು? ಬಹುಶಃ ಕೈಕೇಯಿ ದಾಸಿಯರಿಗಿಂತಲೂ ನಾನು ಕೀಳಾಗಿ ಹೋಗು ತ್ತೇನೆಂದು ತೋರುತ್ತದೆ. ಮೊದಲೆ ಕಾಲಕಸದಂತಿದ್ದ ನಾನು ಕೈಕೆಯ ಮಗನು ಪಟ್ಟಕ್ಕೆ ಬಂದಮೇಲೆ ಇನ್ನೆಂತಹ ಅಪವಾದಕ್ಕೆ ಗುರಿಯಾಗಬೇಕೊ! ಹೀಗೆ ನಿರ್ಭಾಗ್ಯಳಾಗಿ ಬಾಳುವುದಕ್ಕಿಂತ ಮರಣ ಎಷ್ಟೋ ಮೇಲು. ಹಾಳು ಆ ಯಮನಿಗೂ ನಾನು ಬೇಡದವ ಳಾಗಿರುವೆನೇನೊ! ನನಗೆ ಯಮಸದನದಲ್ಲಿ ಎಡೆಯೇ ಇಲ್ಲವೊ! ನಾನು ನಡೆಸಿದ ದಾನಧರ್ಮಗಳೂ ಮಾಡಿದ ಪೂಜೆಪುರಸ್ಕಾರಗಳೂ ಊಷರಕ್ಷೇತ್ರದಲ್ಲಿ ಬಿತ್ತಿದ ಬೀಜ ದಂತೆ ವ್ಯರ್ಥವಾದುವೆಂದು ತೋರುತ್ತದೆ. ಸಾವು ಸ್ವೇಚ್ಛೆಯಿಂದ ಬರುವಂತಿದ್ದರೆ ನಾನೀಗಲೆ ಸಂತೋಷದಿಂದ ಅದನ್ನು ಆಲಿಂಗಿಸುತ್ತಿದ್ದೆ. ನನಗೀಗ ಉಳಿದಿರುವುದು ಒಂದೇ ಮಾರ್ಗ. ಕರುವಿನ ಮೇಲಿನ ವಾತ್ಸಲ್ಯದಿಂದ ಹಸು ಅದನ್ನನುಸರಿಸುವಂತೆ ನಾನು ನಿನ್ನನ್ನು ಅನುಸರಿಸಿ ಅರಣ್ಯಕ್ಕೆ ಹೊರಟು ಬರುತ್ತೇನೆ. ನನ್ನನ್ನೂ ನಿನ್ನ ಜೊತೆಯಲ್ಲಿ ಕರೆದುಕೊಂಡು ಹೋಗು" ಎಂದು ಕಂಬನಿಗರೆಯುತ್ತಾ ಹಂಬಲಿಸಿದಳು.

ಕೌಸಲ್ಯಾದೇವಿಯ ರೋದನವನ್ನು ಆಲಿಸುತ್ತ ನಿಂತಿದ್ದ ಲಕ್ಷ್ಮಣನಿಗೆ ಕೋಪದುರಿ ಕೆರಳಿತು. ಆತನು ಆಕೆಯನ್ನು ಕುರಿತು "ಅಮ್ಮಾ, ಹೆಂಗಸಿನ ಮಾತಿಗೆ ಒಳಗಾಗಿ ಅಣ್ಣನು ರಾಜ್ಯತ್ಯಾಗ ಮಾಡುತ್ತಿರುವುದು ನನಗೆ ಸರ್ವಥಾ ಸಮ್ಮತವಿಲ್ಲ. ವೃದ್ಧನಾದ ತಂದೆ ಕಾಮುಕನಾಗಿ ಅಕಾರ್ಯಕ್ಕೆ ಕೈಹಾಕಿದ್ದಾನೆ. ಆತನು ಹೇಳುವ ಮಾತಿಗೆ ಬೆಲೆ ಯುಂಟೆ?" ಎಂದು ಹೇಳಿದನು. ಅನಂತರ ಅವನು ಶ್ರೀರಾಮನ ಕಡೆ ತಿರುಗಿ "ಅಣ್ಣಾ ಕಾಮುಕನಾದ ತಂದೆ ಅಧರ್ಮಕ್ಕೆ ಕೈಹಾಕಿರುವುದರಿಂದ ಆತನನ್ನು ಕೊಂದುಹಾಕಿ ಬಿಡುತ್ತೇನೆ. ದೇವತಾಸದೃಶನಾದ ನಿನ್ನನ್ನು ತ್ಯಜಿಸುತ್ತಿರುವ ತಂದೆಗೆ ಬುದ್ಧಿ ಸ್ವಾಧೀನ ದಲ್ಲಿದೆಯೆ? ರಾಜನೀತಿಯನ್ನು ತಿಳಿದ ನೀನು ಈ ಅವಿವೇಕಕ್ಕೆ ಅಸ್ಪದ ಕೊಡಬೇಡ. ಇಗೋ, ಈಗಲೆ ರಾಜ್ಯವನ್ನು ನಿನ್ನ ಸ್ವಾಧೀನಕ್ಕೆ ತೆಗೆದುಕೊ. ಧನುರ್ಧಾರಿಯಾದ ನಾನು ನಿನ್ನ ಪಾರ್ಶ್ವದಲ್ಲಿ ನಿಂತು ಎದುರಾದವರನ್ನು ಯಮಾಲಯಕ್ಕೆ ಕಳುಹುತ್ತೇನೆ. ಭರತನ ಪಕ್ಷವನ್ನು ವಹಿಸುವವರೆಲ್ಲರೂ ಇಂದು ಪತನವಾಗಿಹೋಗಲಿ. ಕಾರ್ಯಾಕಾರ್ಯ ಗಳನ್ನು ಅರಿಯದ ದಶರಥ ಮಹಾರಾಜನು ದಂಡನಾರ್ಹನಾಗಿದ್ದಾನೆ. ನನ್ನನ್ನೂ ನಿನ್ನನ್ನೂ ಎದುರಿಸಿ ಕೈಕೆಗೆ ಆತನು ಹೇಗೆ ರಾಜ್ಯವನ್ನು ಒಪ್ಪಿಸಿಕೊಡುವನೊ ನೋಡಿಯೇ ಬಿಡುತ್ತೇನೆ" ಎಂದು ಗರ್ಜಿಸಿದನು.

ಕೌಸಲ್ಯಾದೇವಿಗೆ ಲಕ್ಷ್ಮಣನ ಮಾತುಗಳು ಬಹು ಹಿತಕರವಾಗಿ ತೋರಿದುವು. ಆಕೆ ಲಕ್ಷ್ಮಣನ ವಾಗ್ಧೋರಣೆಯನ್ನೆ ಅನುಸರಿಸಿ "ವತ್ಸಾ, ರಾಮಚಂದ್ರ, ಲಕ್ಷ್ಮಣನ ಮಾತುಗಳನ್ನು ಕೇಳಿದೆಯಷ್ಟೆ? ನೀನೀಗ ಏನು ಹೇಳುವೆ? ನಿನಗೆ ಮಹಾರಾಜನ ಮಾತು ಹೇಗೆ ಸೇವ್ಯವೋ ಹಾಗೆಯೆ ನನ್ನ ನುಡಿಗಳೂ ಮಾನ್ಯವಾದುವೇ. ನಾನೀಗ

ನಿನಗೆ ಹೇಳುತ್ತಿದ್ದೇನೆ—ನೀನು ನನ್ನನ್ನು ತೊರೆದು ಹೋದರೆ ನಾನು ಪ್ರಾಯೋಪವೇಶ ವನ್ನಾದರೂ ಮಾಡಿ ಪ್ರಾಣತ್ಯಾಗ ಮಾಡುತ್ತೇನೆ. ನೀನು ಮಾತೃಹತ್ಯಾದೋಷಕ್ಕೆ ಗುರಿಯಾಗುವೆ" ಎಂದು ಹೇಳಿದಳು.

ಯಾರು ಏನು ಹೇಳಿದರೂ ಮಂದರಧೀರನಾದ ಶ್ರೀರಾಮನ ದೃಢಮನಸ್ಸು ಕದಲಲಿಲ್ಲ. ಆತನ ನಿಶ್ಚಯ ನಿಶ್ಚಲವಾದುದು. ಅಮೃತವರ್ಷದಂತಿರುವ ಮಾತುಗಳಿಂದ ತಾಯಿಗೆ ಸಮಾಧಾನ ಹೇಳಿದನು: "ಅಮ್ಮಾ, ಪಿತೃವಾಕ್ಯ ಪರಿಪಾಲನೆ ಬಹು ದೊಡ್ಡ ಧರ್ಮ. ಆ ಧರ್ಮದಿಂದ ಅತ್ಯಲ್ಪವಾದ ಚ್ಯುತಿಯೂ ಅಶ್ರೇಯಸ್ಕರ. ಆದುದರಿಂದ ತಂದೆಯ ಆಣತಿಯಂತೆ ನಾನು ಅರಣ್ಯಕ್ಕೆ ಹೊರಡುವುದೇ ಸರಿ. ನೀನು ಬಾಯ್ತುಂಬ ಹರಸಿ ನನ್ನನ್ನು ಅರಣ್ಯಕ್ಕೆ ಕಳುಹುವವಳಾಗು. ಸ್ವರ್ಗಚ್ಯುತನಾದ ಯಯಾತಿ ಪುನಃ ಸ್ವರ್ಗವನ್ನು ಸೇರಿದಂತೆ ನಾನು ಪುನಃ ಅಯೋಧ್ಯೆಗೆ ಹಿಂದಿರುಗುತ್ತೇನೆ. ನಾನಾಗಲಿ ನೀನಾಗಲಿ ಹಿರಿಯನಾದ ತಂದೆಯ ಆಜ್ಞೆಯಂತೆ ನಡೆದುಕೊಳ್ಳಬೇಕು. ನ್ಯಾಯವೊ ಅನ್ಯಾಯವೊ, ತಂದೆಯ ಆಜ್ಞೆ ವಿಧೇಯವಾದುದು. ಅದನ್ನು ನಡೆಸದವನು ಘಾತುಕ ನಾಗುತ್ತಾನೆ. ನನ್ನಂತೆಯೆ ಲಕ್ಷ್ಮಣನಾದರೂ ತಂದೆಯ ಆಜ್ಞೆಯನ್ನು ಮನ್ನಿಸಬೇಕೆ ಹೊರತು ವಿರೋಧಿಸಬಾರದು. ನಮ್ಮೆಲ್ಲರಿಗೂ ಆತನೇ ಗತಿ, ಮತಿ. ತಂದೆ ಜೀವಂತ ನಾಗಿರುವಾಗ ನೀನು ಪತಿವಿಹೀನೆಯಂತೆ ನನ್ನೊಡನೆ ಹೊರಡಲು ಯತ್ನಿಸುವುದು ಸ್ವಲ್ಪವೂ ಯುಕ್ತವಲ್ಲ. ಪತಿಯನ್ನು ನೆರಳಿನಂತೆ ಅನುಸರಿಸುವುದೆ ಸತಿಯಾದವಳ ಕರ್ತವ್ಯ. ನಾನು ವನವಾಸಿಯಾಗಿ, ನೀನು ಆತನನ್ನು ಅಗಲಿದರೆ ಕೇಕಯ ದೇವಿಯಿಂದ ವಂಚಿತನಾದ ತಂದೆ ಜೀವಿಸಬಲ್ಲನೆ? ಗಂಡನಿಂದ ಅಗಲುವ ನೀಚಕಾರ್ಯವನ್ನು ನೀನೆಂದಿಗೂ ಕೈಗೊಳ್ಳಬೇಡ. ಆತನು ಜೀವಂತವಾಗಿರುವವರೆಗೂ ಆತನ ಶುಶ್ರೂಷೆ ಯಲ್ಲಿ ತೊಡಗಿರುವುದೇ ನಿನಗೆ ಪರಮಧರ್ಮ.

ಅನಂತರ ಶ್ರೀರಾಮನು ಲಕ್ಷ್ಮಣನ ಕಡೆಗೆ ತಿರುಗಿದನು. ಆತನು ಮಾನವ ಪ್ರಯತ್ನವನ್ನು ಪುರಸ್ಕರಿಸತಕ್ಕವನು. ಧರ್ಮವೆಂಬುದು ದುರ್ಬಲರ ಅಸ್ತ್ರವೆಂದು ಆತನ ಭಾವನೆ. ಹೆಡೆ ಮೆಟ್ಟಿದ ಸರ್ಪದಂತೆ ಆತನು ಬುಸುಗುಟ್ಟುತ್ತಾ ಶ್ರೀರಾಮನನ್ನು ಧರ್ಮ ಮೋಹಿತನೆಂದು ನಿಂದಿಸಿದನು. ಕ್ಷತ್ರಿಯ ಧರ್ಮವನ್ನು ಗಾಳಿಗೆ ತೂರಬೇಡವೆಂದು ಆತನಿಗೆ ಬುದ್ಧಿ ಹೇಳಿದನು. ಆತನ ಮಾತುಗಳನ್ನು ಕೇಳಿ ಶ್ರೀರಾಮನ ಕಣ್ಣು ಕಂಬನಿ ದುಂಬಿದುವು. "ವತ್ಸ, ಲಕ್ಷ್ಮಣ, ಈಗ ನಡೆದಿರುವ ಕಾರ್ಯ ದೈವಿಕವಲ್ಲದೆ ಮತ್ತೇನು? ನಾವು ಯೋಚಿಸಿದ್ದೇನು? ಅದು ಆದದ್ದೇನು? ಅದೃಷ್ಟವನ್ನು ನಾವು ನಿಶ್ಚಯಿಸಲಾಗದ ಮೇಲೆ ನಮ್ಮ ಪುರುಷ ಪ್ರಯತ್ನದಿಂದ ಏನು ಪ್ರಯೋಜನ? ನಾನು ಹೇಳುವುದೊಂದೆ ....ನಾನು ಜನಕನಾಜ್ಞೆಗೆ ಒಳಗಾಗಿದ್ದೇನೆ. ಹೀಗಿರುವುದೆ ಧರ್ಮ" ಎಂದನು.

ಶ್ರೀರಾಮನ ವಚನಾಮೃತದಿಂದ ಕೌಸಲ್ಯಾದೇವಿಗೆ ಎಷ್ಟೋ ಸಮಾಧಾನ ವಾದಂತಾಯಿತು. ಆಕೆ ಮಗನ ವನಪ್ರಯಾಣಕ್ಕೆ ಸಮ್ಮತಿಸಿ ಆತನನ್ನು ಬಾಯ್ತುಂಬ ಹರಸಿದಳು: "ಮಗು ರಾಮಚಂದ್ರ, ಪ್ರಯಾಣೋನ್ಮುಖನಾಗಿರುವ ನಿನ್ನನ್ನು ತಡೆಯ

ಬಾರದು. ವನಕ್ಕೆ ಹೋಗಿ ಬೇಗ ಹಿಂದಿರುಗುವವನಾಗು. ನೀನು ಆಚರಿಸುತ್ತಿರುವ ನಿನ್ನ ಧರ್ಮವೆ ನಿನ್ನನ್ನು ಕಾಪಾಡಲಿ. ಬ್ರಹ್ಮಾಂಡದಲ್ಲಿರುವ ಚರಾಚರಾತ್ಮಕವಾದ ಸಮಸ್ತ ಸೃಷ್ಟಿಯೂ ನಿನಗೆ ಸನ್ಮಂಗಳವನ್ನುಂಟುಮಾಡಲಿ. ದೇವತೆಗಳೂ ಗ್ರಹತಾರೆಗಳೂ ಮಹರ್ಷಿಗಳೂ ನಿನಗೆ ಸನ್ಮಂಗಳವನ್ನುಂಟುಮಾಡಲಿ. ವೃತ್ರಾಸುರನ ಸಂಹಾರ ಕಾಲದಲ್ಲಿ ದೇವವಂದಿತನಾದ ಸಹಸ್ರಾಕ್ಷನಿಗೆ ಯಾವ ಮಂಗಳವುಂಟಾಯಿತೊ ಆ ಮಂಗಳ ನಿನಗೆ ಲಭಿಸಲಿ. ಅಮೃತವನ್ನು ಅಪೇಕ್ಷಿಸಿದ ಗರುಡನಿಗೆ ಆತನ ತಾಯಿಯಾದ ವಿನತೆ ಯಾವ ಮಂಗಳವನ್ನು ಕೋರಿದಳೊ ಆ ಮಂಗಳ ನಿನಗುಂಟಾಗಲಿ. ಅಮೃತಾಸ್ವಾದದ ಸಮಯದಲ್ಲಿ ರಾಕ್ಷಸರನ್ನೆಲ್ಲಾ ಸಂಹರಿಸಿದ ದೇವೇಂದ್ರನಿಗೆ ಆತನ ತಾಯಿಯಾದ ಅದಿತಿ ಯಾವ ಮಂಗಳವನ್ನು ಕೋರಿದಳೊ ಆ ಮಂಗಳ ನಿನಗೆ ಸಂಭವಿಸಲಿ. ಅರಣ್ಯವಾಸದಲ್ಲಿರುವಾಗ ಯಾವುದೊಂದು ಈತಿ ಬಾಧೆಯೂ ಇಲ್ಲದಂತೆ ಸುಕ್ಷೇಮವಾಗಿದ್ದು ಹಿಂದಿರುಗು. ಹಿಂದಿರುಗಿ ಬಂದ ನಿನ್ನನ್ನು ನೂತನವಾಗಿ ಉದಿಸಿದ ಚಂದ್ರನನ್ನು ಕಾಣುವಂತೆ ಆನಂದದಿಂದ ಕಾಣುತ್ತೇನೆ." ಇಂತು ಹರಸಿ ಮಗನಿಗೆ ಮಂಗಳವುಂಟಾಗಲೆಂದು ಆಕೆ ಮತ್ತೆ ದೇವತೆಗಳಿಗೆ ಭಕ್ತಿಯಿಂದ ನಮಸ್ಕರಿಸಿದಳು.

ತಾಯಿಯಿಂದ ಆಶೀರ್ವಾದ ಪಡೆದ ಶ್ರೀರಾಮನು ಆಕೆಗೆ ದೀರ್ಘದಂಡ ನಮಸ್ಕಾರ ಮಾಡಿ ಅಲ್ಲಿಂದ ತೆರಳಿದನು, ಸೀತೆಯ ಅಂತಃಪುರಕ್ಕಾಗಿ.

---

೬

# 'ನಾನೂ ಬರುತ್ತೇನೆ!'

ತನ್ನ ಜೀವಿತೇಶ್ವರನ ಉತ್ಕರ್ಷದಿಂದ ಸೀತೆ ಪರಮಾನಂದಭರಿತಳಾಗಿದ್ದಳು. ಆಕೆ ದೇವತೆಗೆ ಪೂಜೆ ಸಲ್ಲಿಸಿ, ಗಂಡನ ಬರುವನ್ನೆ ಇದಿರುನೋಡುತ್ತಿದ್ದಳು. ಪಟ್ಟದ ರಾಣಿಯಾಗುವ ತಾನು ಅಭಿಷಿಕ್ತನಾಗಿ ಬರುವ ತನ್ನ ಸ್ವಾಮಿಗೆ ಪಾದಾರ್ಚನಾದಿ ವಿಧಿಗಳನ್ನು ನಡೆಸಬೇಕಾಗುವುದೆಂದು ಅದಕ್ಕೆ ಅಗತ್ಯವಾದ ಸಂಭಾರಗಳನ್ನೆಲ್ಲ ಸಿದ್ಧಗೊಳಿಸಿಕೊಂಡು ಸಡಗರದಿಂದ ಶ್ರೀರಾಮಚಂದ್ರನು ಬರುವ ಹಾದಿಯ ಕಡೆ ಕಾಯುವ ಕಣ್ಣಾಗಿದ್ದಳು. ನಿರೀಕ್ಷಿಸಿದುದಕ್ಕಿಂತಲೂ ಮುಂಚೆಯೆ ಶ್ರೀರಾಮನು ಅಲ್ಲಿಗೆ ಬಂದನು. ಆದರೆ, ಇದೇನು? ಆತನ ಮುಖವೇಕೆ ಹೀಗೆ ಕಂದಿಹೋಗಿದೆ? ಸ್ವಭಾವ ಧೀರನಾದ ಆತನ ಮೊಗದಾವರೆ ಹೀಗೆ ವಿಕಾರವಾಗಿದ್ದುದನ್ನು ಆ ಬಾಲೆ ಎಂದೂ ಕಂಡಿರಲಿಲ್ಲ. ಆದ್ದರಿಂದಲೆ ಅದನ್ನು ಕಂಡ ಆಕೆಯ ಹೃದಯ ತಲ್ಲಣಿಸಿತು. ಆತನನ್ನು ಕುರಿತು "ಪ್ರಭೂ, ಈ ಸಂತೋಷ ಸಮಯದಲ್ಲಿ ಈ ಚಿಂತೆಯೇಕೆ? ಪುಷ್ಯ ನಕ್ಷತ್ರ ಆಗಲೆ ಪ್ರಾಪ್ತವಾಗಿದೆ; ಪಟ್ಟಾಭಿಷೇಕ ಆಗಲೆ ನೆರವೇರಿರಬೇಕಲ್ಲವೆ? ಈ ಶುಭ ಮುಹೂರ್ತದಲ್ಲಿ ನೀನೇಕೆ ಹೀಗೆ ಉತ್ಸಾಹಹೀನನಾಗಿರುವೆ? ಈ ವೇಳೆಗೆ ನಿನ್ನ ತಲೆಯ ಮೇಲೆ ಶ್ವೇತಛತ್ರವೂ ಎಡಬಲಗಳಲ್ಲಿ ಚಾಮರಗಳೂ ಬೆಳಗಬೇಕಾಗಿತ್ತಲ್ಲವೆ? ಅವುಗಳೇಕೆ ಕಾಣುತ್ತಿಲ್ಲ? ಹೊಗಳುಭಟ್ಟರೇಕೆ ನಿನ್ನನ್ನು ಸ್ತುತಿಸುತ್ತಿಲ್ಲ? ವೇದಪಾರಂಗತರಾದ ಬ್ರಾಹ್ಮಣರು ಪಟ್ಟಾಭಿಷಿಕ್ತನಾಗಿ ನಿನ್ನ ಮಂಡೆಯಲ್ಲಿ ಮಂಗಳ ದ್ರವ್ಯಗಳನ್ನೇಕೆ ಇನ್ನೂ ಪೂಸಿಲ್ಲ? ನಾಲ್ಕು ಕುದುರೆಗಳನ್ನು ಕಟ್ಟಿದ ರಾಜರಥವು ನಿನ್ನ ಆಗಮನಸೂಚಕವಾಗಿ ಮುಂದೇಕೆ ಬರಲಿಲ್ಲ? ಪಟ್ಟಾಭಿಷಿಕ್ತನಾಗಿ ನೀನು ಬರುವಾಗ ಜನರ ಕೋಲಾಹಲ ಸ್ವಲ್ಪವೂ ಕೇಳಿಬರಲಿಲ್ಲವಲ್ಲ, ಇದರ ಅರ್ಥವೇನು? ನನಗೇಕೊ ಭಯವಾಗುತ್ತಿದೆ" ಎಂದು ನುಡಿದಳು. ಮಾತನಾಡುತ್ತಿದ್ದಂತೆಯೆ ಆಕೆಯ ಕಣ್ಣುಗಳಲ್ಲಿ ನೀರು ತುಂಬಿ ನೋಟ ಮಂಜಾಯಿತು.

ಪ್ರಿಯ ಪತ್ನಿಯ ಎದೆಕುದಿಹವನ್ನು ಕಂಡು ಶ್ರೀರಾಮನಿಗೆ ಸಂಕಟವಾಯಿತು. ಕುಸುಮಕೋಮಲೆಯಾದ ಆಕೆಗೆ ಎಂತಹ ಭಯಂಕರವಾದ ವಿಪತ್ತು ಕಾದಿದೆ! ಕಠೋರವಾದ ವಾರ್ತೆಯನ್ನು ಆಕೆಗೆ ಹೇಳುವುದು ಹೇಗೆ? ಆ ಕಾರಣವೆ ಶ್ರೀರಾಮನು ಅಷ್ಟೊಂದು ಅಧೀರನಾಗಿದ್ದುದು. ಆದರೆ ಗತ್ಯಂತರವಿಲ್ಲ; ಆಕೆಗೆ ಸುದ್ದಿಯನ್ನು ತಿಳಿಸಲೇಬೇಕು. ಆದ್ದರಿಂದ ತಂದೆ ಕೈಕೆಗೆ ಕೊಟ್ಟಿದ್ದ ವರಗಳನ್ನೂ, ಕೈಕೆ ಆ ವರಗಳಿಂದ ಸಾಧಿಸಿದ್ದ ದುಷ್ಟ ಪ್ರಯೋಜನಗಳನ್ನೂ ವಿವರವಾಗಿ ತಿಳಿಸಿ ಹೇಳಿದನು. ಅನಂತರ ಆಕೆಯನ್ನು ಕುರಿತು ಹೀಗೆಂದನು: "ಮನೋಹರಿ, ನಾನಿಂದೇ ಅರಣ್ಯಕ್ಕೆ ತೆರಳಬೇಕಾ

ಗಿದೆ. ನಾನು ಹಿಂತಿರುಗಿ ಬರುವವರೆಗೂ ನೀನು ನಿಶ್ಚಲಚಿತ್ತಳಾಗಿ ದೇವರ ಧ್ಯಾನದಲ್ಲಿಯೂ ಗುರುಹಿರಿಯರ ಶುಶ್ರೂಷೆಯಲ್ಲಿಯೂ ಕಾಲ ಕಳೆಯುತ್ತಿರು. ಭರತನಿಗೆ ಕನಸಿನಲ್ಲಿಯೂ ಕೆಟ್ಟದ್ದನ್ನು ಎಣಿಸಬೇಡ. ಆತನು ನನಗೆ ಪರಮ ಪ್ರಿಯನೆಂಬುದನ್ನೂ ದೇಶಕ್ಕೆ ರಾಜನೆಂಬುದನ್ನೂ ಮರೆತೀಯೆ. ಸಕಲ ಸದ್ಗುಣಸಂಪನ್ನಳಾದ ನಿನಗೆ ಹೇಳಬೇಕಾದುದೇನು? ಇಹಪರಗಳೆರಡಕ್ಕೂ ಸಾಧಕವಾದ ಧರ್ಮವನ್ನು ಮರೆಯಬೇಡ ; ಅಷ್ಟೆ."

ಶ್ರೀರಾಮನ ನುಡಿಗಳನ್ನು ಕೇಳಿ ಸೀತೆ ಅಳಲಿಲ್ಲ ; ಹಲುಬಿ ಹಂಬಲಿಸಲಿಲ್ಲ. ಆ ರಾಜಕುಮಾರಿಗೆ ಗಂಡನು ದಂಡಕಾರಣ್ಯಕ್ಕೆ ಹೋಗುವನೆಂದು ದುಃಖವುಂಟಾಗಲಿಲ್ಲ ; ಆತನ ಮಾತುಗಳನ್ನು ಕೇಳಿ ಸ್ವಲ್ಪ ಕೋಪ ಬಂದಿತು. ಶ್ರೀರಾಮನನ್ನು ಕುರಿತು ಹೇಳಿದಳು—"ಕ್ಷತ್ರಿಯ ಕುಮಾರ, ಹೆಂಗಸಾದ ನಾನು ನಗುವಂತಹ ಮಾತುಗಳನ್ನು ರಾಜಪುತ್ರನಾದ ನೀನು ಹೇಳುತ್ತಿರುವೆಯಲ್ಲ! ಪತ್ನಿ ಪತಿಯ ಅರ್ಧಾಂಗಿ. ನಿನಗೆ ವನವಾಸವನ್ನು ವಿಧಿಸಿದ್ದರೆ ಅದನ್ನು ನನಗೂ ವಿಧಿಸಿದಂತೆ ಆಗಲಿಲ್ಲವೆ? ಇಹಪರಗಳಲ್ಲಿ ನೀನೇ ನನಗೆ ಗತಿಮತಿಯಲ್ಲವೆ? ನೀನು ಘೋರವಾದ ಅರಣ್ಯವನ್ನು ಪ್ರವೇಶಿಸುವುದಾದರೆ ನಿನ್ನ ಧರ್ಮಪತ್ನಿಯಾದ ನಾನು ನಿನ್ನ ದಾರಿಗೆ ಅಡ್ಡವಾಗಿರುವ ಮುಳ್ಳುಗಳನ್ನು ಆಯ್ದು ಎತ್ತಿ ಹಾಕುತ್ತಾ ನಿನ್ನ ಮುಂದೆಯೆ ಪ್ರಯಾಣ ಮಾಡುತ್ತೇನೆ. ನಿನ್ನನ್ನುಳಿದು ಉಪ್ಪರಿಗೆಯಲ್ಲಿ ವಾಸಿಸುವುದಕ್ಕಿಂತಲೂ ನಿನ್ನೊಡನೆ ಅರಣ್ಯವಾಸದಲ್ಲಿರುವುದು ನನಗೆ ಅತ್ಯಂತ ಪ್ರಿಯಕರ. ನಿನ್ನ ಜೊತೆಯಲ್ಲಿರುವಾಗ ಅರಣ್ಯ ನನಗೆ ತೌರುಮನೆಯಂತೆ ಆನಂದದಾಯಕವಾಗಿರುವುದು. ನಿನ್ನ ಸೇವೆಯೆ ನನ್ನ ಪರಮಸಂತೋಷ. ಜಗತ್ತನ್ನೆ ರಕ್ಷಿಸಲು ಸಮರ್ಥನಾದ ನೀನು ನಿನ್ನ ಪ್ರಿಯಪತ್ನಿಯನ್ನು ಸಂತರಿಸಲಾರೆಯಾ? ನಾನು ನಿನ್ನೊಡನೆ ಬರುವುದೇ ಸರಿ. ನಿನ್ನನ್ನು ಅಗಲುವುದಾದರೆ ನನಗೆ ಸ್ವರ್ಗವೂ ತ್ಯಾಜ್ಯ ; ನಿನ್ನನ್ನು ಅಗಲಿ ನಾನು ಕ್ಷಣಕಾಲವೂ ಜೀವಿಸಲಾರೆ."

ಮಡದಿಯ ಮಾತುಗಳನ್ನು ಕೇಳಿ ಶ್ರೀರಾಮನಿಗೆ ದುಃಖ ಉಕ್ಕಿಬಂತು. ಆ ಪುಟ್ಟ ಗಾತ್ರದಲ್ಲಿ ಅದೆಷ್ಟು ಪ್ರೇಮ! ಈ ಸುಕುಮಾರಿಗೆ ಅರಣ್ಯವಾಸದ ಕಡುಕಷ್ಟವನ್ನು ತಂದೊಡ್ಡುವುದೆ? ಶ್ರೀರಾಮನು ನೊಂದು ನುಡಿದನು—"ಜಾನಕಿ, ಅರಣ್ಯವೆಂದರೆ ಎಂತಹ ಭಯಂಕರ ಪ್ರದೇಶವೆಂದು ನಿನಗೇನು ಗೊತ್ತು! ಬರಿಯ ಪುಷ್ಪಗಳಿಂದಲೂ ಗಿಡಮರಗಳಿಂದಲೂ ಇಂಪಾದ ಧ್ವನಿಯಿಂದ ಕಲಕಲರವವನ್ನು ಮಾಡುತ್ತಿರುವ ಹಕ್ಕಿಗಳಿಂದಲೂ ತುಂಬಿ ಕಣ್ಮನಗಳಿಗೆ ಇಂಪನ್ನೀಯುವ ತಾಣವೆಂದು ಭಾವಿಸಿದೆಯೇನು? ಸೀತಾ, ಅರಣ್ಯವು ಕ್ರೂರಮೃಗಗಳಿಂದಲೂ ಭಯಂಕರವಾದ ಸರ್ಪಗಳಿಂದಲೂ ತುಂಬಿ ಅಪಾಯಕೋಟಿಗಳಿಗೆ ಆವಾಸಸ್ಥಾನವಾದುದು. ಹುಲ್ಲೆ ಅಲ್ಲಿ ಹಾಸಿಗೆ; ಮರಗಿಡಗಳೆ ಮಾಳಿಗೆ. ಕಲ್ಲುಮುಳ್ಳುಗಳಿಂದ ತುಂಬಿದ ಕಾಡುದಾರಿಯಲ್ಲಿ ಪ್ರಯಾಣ ಮಾಡಬೇಕಾಗುವುದು. ಗೆಡ್ಡೆಗೆಣಸುಗಳೊ ಕಾಡುಹಣ್ಣುಗಳೊ ಆಹಾರ. ಬಿರುಗಾಳಿ ಮಳೆಗಳಿಂದ ರಕ್ಷಣೆ ದೊರೆಯುವುದೇ ಕಷ್ಟ. ಕುಡಿಯಲು ನೀರಿಲ್ಲದೆಯೆ ಅನೇಕ ದಿನಗಳನ್ನು ಕಳೆಯಬೇಕಾಗುವುದು. ಹೀಗಿರುವುದರಿಂದ ಅರಣ್ಯವಾಸ ನಿನಗೆ ಯೋಗ್ಯವಾದುದಲ್ಲ."

ಶ್ರೀರಾಮನು ಏನು ಹೇಳಿದರೂ ಸೀತಾದೇವಿ ಹಿಡಿದ ಪಟ್ಟನ್ನು ಬಿಡಲಿಲ್ಲ. ತನ್ನ ಹೃದಯೇಶ್ವರನಂತಹ ವಿಕ್ರಮಶಾಲಿ ಸಮೀಪದಲ್ಲಿರುವಾಗ ತನಗೆ ಭಯವೆಂದರೇನು? ದೇವೇಂದ್ರನು ಕೂಡ ಆಕೆಯನ್ನು ಹೆದರಿಸಲಾರ. ಅಲ್ಲದೆ ಆಕೆಯ ಬಾಲ್ಯದಲ್ಲಿಯೆ ಒಬ್ಬ ಭಿಕ್ಷುಣಿ ಆಕೆಗೆ ವನವಾಸಯೋಗವುಂಟೆಂದು ಭವಿಷ್ಯ ನುಡಿದಿದ್ದಳು. ಅದು ಈಗ ಪ್ರಾಪ್ತವಾಗಿದೆ. ಆದ್ದರಿಂದ ತಾನು ಆತನೊಡನೆ ಹೊರಡುವುದೆ ಸರಿ. ಆಕೆ ಹೇಳಿದ ನುಡಿಗಳೆಲ್ಲವೂ ನಿಜವಾಗಿದ್ದರೂ ಶ್ರೀರಾಮನಿಗೆ ಆಕೆಯನ್ನು ಕರೆದುಕೊಂಡು ಹೋಗಲು ಇಷ್ಟವಾಗಲಿಲ್ಲ. ಅದನ್ನು ಕಂಡು ಸೀತೆಗೆ ಮುನಿಸು ಉರಿಯಿತು. ಗಂಡನನ್ನು ಕುರಿತು "ಏನು ಅನ್ಯಾಯವಿದು? ನೀನು ಆಕಾರದಲ್ಲಿ ಮಾತ್ರ ಪುರುಷನೇನು? ಇಂತಹ ಪುರುಷರೂಪದ ಸ್ತ್ರೀಯೆಂದು ಅರಿಯದೆ ನಮ್ಮ ತಂದೆ ನನ್ನನ್ನು ನಿನಗೆ ವಿವಾಹ ಮಾಡಿಕೊಟ್ಟನೆಂದು ಕಾಣುತ್ತದೆ. ಅಯೋನಿಜೆಯಾದ ನನ್ನನ್ನು, ನಾರಾಯಣಾಂಶನೆಂದು ಭಾವಿಸಿ ನಿನಗೆ ಧಾರೆಯೆರೆದು ಕೊಟ್ಟನಲ್ಲ! ನಿನ್ನಲ್ಲಿರುವುದು ಬರಿಯ ದೇಹ ಸೌಂದರ್ಯವೆ ಹೊರತು ಪೌರುಷವೇನೂ ಇಲ್ಲವೆಂದು ತೋರುತ್ತದೆ. ಧರ್ಮಪತ್ನಿಯಾದ ನನ್ನನ್ನು ಜಾಯಾಜೀವಿಯಂತೆ ಪರರ ಪಾಲು ಮಾಡಿ ಹೋಗಬೇಡ. ಇದು ನಿನಗೆ ತಕ್ಕುದಲ್ಲ. ನೀನು ಕಾಡಿನಲ್ಲಿ ಕಷ್ಟ ಪಡುವುದಾದರೆ ನಾನೂ ಸಂತೋಷದಿಂದ ಆ ಕಷ್ಟಗಳನ್ನು ಸಹಿಸುತ್ತೇನೆ. ಪತಿವ್ರತೆಯಾದ ನನಗೆ ನಿನ್ನೊಡನಿರುವುದೆ ಸ್ವರ್ಗ; ನಿನ್ನಿಂದ ಅಗಲುವುದೆ ನರಕ. ದೃಢಮನಸ್ಕಳಾದ ನನ್ನ ಪ್ರಾರ್ಥನೆಯನ್ನು ನೀನು ನಿರಾಕರಿಸುವುದಾದರೆ ನಾನು ವಿಷಪ್ರಾಶನದಿಂದಲೊ, ನೀರಿನಲ್ಲಿ ಮುಳುಗುವುದರಿಂದಲೊ ಪ್ರಾಣತ್ಯಾಗ ಮಾಡುತ್ತೇನೆ" ಎಂದು ಕಡ್ಡಿತುಂಡಾಗಿ ನುಡಿದುಬಿಟ್ಟಳು. ಆಕೆಯ ಮಾತುಗಳಿಂದ ಶ್ರೀರಾಮನ ನಿಶ್ಚಯ ಕದಲಿಹೋಯಿತು. ಆಕೆಯನ್ನು ತನ್ನೊಡನೆ ಕರೆದೊಯ್ಯಲು ಒಪ್ಪಿಕೊಂಡನು.

ಸೀತೆಯ ಅರಣ್ಯಗಮನಕ್ಕೆ ಅಣ್ಣನು ಅನುಮತಿಯಿತ್ತುದನ್ನು ಕಂಡು ಲಕ್ಷ್ಮಣನು ಅನುಮತಿ ಬೇಡಿದನು. "ಅಣ್ಣಾ, ನೀನೆಲ್ಲಿಯೊ ನಾನಲ್ಲಿ. ಸುಖದಲ್ಲಿ ಪಾಲುಗಾರನಾದ ನಾನು ಕಷ್ಟದಲ್ಲಿ ಬೇಡವೆ? ನೀನು ಸೀತಾ ಮಾತೆಯೊಡನೆ ಅರಣ್ಯ ಸಂಚಾರಕ್ಕೆ ಹೊರಟಾಗ ನಾನು ಪೊದೆಗಳನ್ನು ಸವರಿ ನಿಮಗೆ ದಾರಿಮಾಡಿಕೊಡುತ್ತೇನೆ; ತಂಗಲು ತಾಣಗಳನ್ನು ಸಿದ್ಧ ಮಾಡಿಕೊಡುತ್ತೇನೆ; ಕಂದಮೂಲ ಫಲಗಳನ್ನು ತಂದುಕೊಡುತ್ತೇನೆ. ನೀವು ಮಲಗಿ ನಿದ್ರಿಸುತ್ತಿರುವಾಗ ಜಾಗರೂಕತೆಯಿಂದ ಕಾವಲು ಕಾಯುತ್ತೇನೆ; ಹೆಂಡತಿಯೊಡನೆ ಹೊರಡುವ ನಿನಗೆ ನನ್ನ ಸೇವೆ ಅಗತ್ಯವಾಗಿಯೂ ಬೇಕು" ಎಂದು ಹೇಳಿದನು. ಶ್ರೀರಾಮನು ಅವನ ಮಾತಿಗೆ ಒಡನೆಯೆ ಒಪ್ಪದಿದ್ದರೂ ಮತ್ತೆಮತ್ತೆ ಆ ಮಾತುಗಳನ್ನು ಹೇಳಲು ಒಪ್ಪಿಕೊಂಡನು. "ವತ್ಸಾ, ಲಕ್ಷ್ಮಣ, ಒಡನೆಯೆ ಹೋಗಿ ಪ್ರಿಯ ಜನರೆಲ್ಲರಿಗೂ ಈ ವಿಚಾರವನ್ನು ತಿಳಿಸಿ ಬಾ. ಕುಲಗುರುಗಳಾದ ವಸಿಷ್ಠರ ಮನೆಯಲ್ಲಿರುವ ನಮ್ಮ ದಿವ್ಯಧನಸ್ಸುಗಳನ್ನೂ ಅಭೇದ್ಯ ಕವಚಗಳನ್ನೂ ಅಕ್ಷಯನಿಷಂಗವನ್ನೂ ಕೊಂಡು ಬಾ" ಎಂದು ಹೇಳಿದನು. ಆ ಕ್ಷಣದಲ್ಲಿಯೆ ಲಕ್ಷ್ಮಣನು ಅಣ್ಣನ ಆಣತಿಯ ಎಲ್ಲ ಕಾರ್ಯವನ್ನೂ ನೆರವೇರಿಸಿ ಅವನೊಡನೆ ಅರಣ್ಯಕ್ಕೆ ಹೊರಡಲು ಸಿದ್ಧವಾದನು.

## ೭

# ವನ ಪ್ರಯಾಣ

ಅನಂತರ ಸೀತಾ ರಾಮ ಲಕ್ಷ್ಮಣರು ತಮ್ಮ ಐಶ್ವರ್ಯವನ್ನೆಲ್ಲ ಬ್ರಾಹ್ಮಣರಿಗೂ ದೀನದರಿದ್ರರಿಗೂ ಹಂಚಿ, ಮಹಾರಾಜನಿಂದ ಅಪ್ಪಣೆ ಪಡೆದು ಬರುವುದಕ್ಕಾಗಿ ಆತನ ಬಳಿಗೆ ಹೊರಟು ಬಂದರು. ಅರಮನೆಯ ಬಾಗಿಲಿನಲ್ಲಿಯೆ ಸುಮಂತ್ರ ಮಂತ್ರಿ ನಿಂತಿದ್ದನು. ಆತನಾಗಲೆ ಶ್ರೀರಾಮನ ವನಪ್ರಯಾಣದ ಸುದ್ದಿಯನ್ನು ಕೇಳಿದ್ದನು. ಆದ್ದರಿಂದ ಆತನು ಅತ್ಯಂತ ವ್ಯಥಿತಾಂತಃಕರಣನಾಗಿದ್ದನು. ಶ್ರೀರಾಮನು ಆತನನ್ನು ಕುರಿತು "ನಾನು ಬಂದಿರುವೆನೆಂದು ತಂದೆಯವರಿಗೆ ನಿವೇದಿಸು" ಎಂದು ಹೇಳಿದನು. ಸುಮಂತ್ರನು ಅದೇ ರೀತಿ ಮಾಡಲಾಗಿ ದಶರಥನು ತನ್ನ ರಾಣಿಯರನ್ನೆಲ್ಲ ಮೊದಲು ಅಲ್ಲಿಗೆ ಕರೆಸಿ, ಅನಂತರ ಶ್ರೀರಾಮನನ್ನು ಅಲ್ಲಿಗೆ ಬರಿಸಿದನು. ಆತನು ಪ್ರವೇಶಿಸುತ್ತಿರುವಂತೆಯೆ ದಶರಥ ಮಹಾರಾಜನು ಆಸನದಿಂದ ಮೇಲಕ್ಕೆದ್ದು ಆರ್ತೆಯರಾದ ಮಹಾರಾಣಿಯರೊಡನೆ ಆತನನ್ನು ಇದಿರುಗೊಳ್ಳಲು ಹೊರಟವನು ದುಃಖಾತಿಶಯದಿಂದ ನಿಂತಲ್ಲಿಯೆ ಮೂರ್ಛಿತನಾಗಿ ನೆಲಕ್ಕುರುಳಿದನು. ಶ್ರೀರಾಮನು ಒಡನೆಯೆ ಲಕ್ಷ್ಮಣನೊಡನೆ ಬಳಿಸಾರಿ ಶೈತ್ಯೋಪಚಾರಗಳಿಂದ ಆತನನ್ನು ಸಂತೈಸಿದನು. ರಾಜನು ಮೂರ್ಛೆ ತಿಳಿದೊಡನೆಯೆ ಆತನು ಅವನನ್ನು ಕುರಿತು "ತಂದೆಯೆ, ನಿನ್ನ ಅಪ್ಪಣೆಯಂತೆ ದಂಡಕಾರಣ್ಯಕ್ಕೆ ಹೊರಡಲು ಇದೋ ಸಿದ್ಧನಾಗಿದ್ದೇನೆ. ಲಕ್ಷ್ಮಣನೂ ಜಾನಕಿಯೂ ಹಿಂಬಾಲಿಸುತ್ತೇವೆ ಎಂದು ಹಟ ಹಿಡಿದು ಕುಳಿತಿದ್ದಾರೆ. ಬೇಡವೆಂದು ನಾನು ಎಷ್ಟು ಹೇಳಿದರೂ ಅವರು ನನ್ನ ಮಾತನ್ನು ಕೇಳುವಂತಿಲ್ಲ. ಅವರನ್ನು ಕರೆದುಕೊಂಡು ಹೋಗಲು ತಾವು ಅನುಮತಿಸಬೇಕೆಂದು ಬೇಡುತ್ತೇನೆ" ಎಂದು ಹೇಳಿದನು.

ಶ್ರೀರಾಮನ ನುಡಿಗಳಿಗೆ ಉತ್ತರವಾಗಿ ದಶರಥನು "ಮಗೂ, ರಾಮಚಂದ್ರ, ಕೈಕೆಯ ಮಾತಿಗೆ ಮರುಳಾಗಿ ಹಿಂದುಮುಂದರಿಯದೆ ವರಗಳನ್ನು ಕೊಟ್ಟೆ. ಮತಿಗೆಟ್ಟ ನನ್ನನ್ನು ನೀನು ನಿಗ್ರಹಿಸಿ ಈ ರಾಜ್ಯಾಧಿಪತ್ಯವನ್ನು ಸ್ವೀಕರಿಸು" ಎಂದು ಹೇಳಿದನು. ಶ್ರೀರಾಮನು ಭಕ್ತಿಯಿಂದ ಕೈಜೋಡಿಸಿಕೊಂಡು ಆತನಿಗೆ ಹೇಳಿದನು : "ಅಪ್ಪಾ, ನೀನು ಇದುವರೆಗೂ ಧರ್ಮಿಷ್ಠನಾಗಿ ರಾಜ್ಯಭಾರ ಮಾಡಿರುವೆ. ನನ್ನ ದೆಸೆಯಿಂದ ನೀನೀಗ ಅಸತ್ಯವಂತನಾಗಬೇಕೆ? ಅದಾಗದು. ಹದಿನಾಲ್ಕು ವರ್ಷಗಳ ವನವಾಸವನ್ನು ಲೀಲಾಜಾಲವಾಗಿ ಕಳೆದು, ಆಮೇಲೆ ಅಯೋಧ್ಯೆಗೆ ಹಿಂದಿರುಗಿ ಬಂದು ನಿನ್ನ ಪಾದ ಸೇವೆಯನ್ನು ಕೈಕೊಳ್ಳುತ್ತೇನೆ. ನನ್ನನ್ನು ಆಶೀರ್ವದಿಸಿ ಕಳುಹು".

ದಶರಥನು ಕಣ್ಣೀರಿನ ಕೋಡಿಯನ್ನು ಹರಿಸುತ್ತಾ, "ಮಗು, ಸತ್ಯಸಂಕಲ್ಪನಾದ ನಿನ್ನನ್ನು ನಾನು ನಿಲ್ಲಿಸಲಾರೆ. ವನವಾಸಕಾಲ ನಿನಗೆ ಮಂಗಳಕರವಾಗಿರಲಿ;

ಹೋಗಿ ಬಾ. ಆದರೆ ಈ ದಿನ ರಾತ್ರಿ ಇಲ್ಲಿದ್ದು ನಾಳೆ ನಿನ್ನ ಪ್ರಯಾಣವನ್ನು ಬೆಳಸು. ಇನ್ನು ಸ್ವಲ್ಪಕಾಲ ನನಗೂ ನಿನ್ನ ತಾಯಿಯರಿಗೂ ನಿನ್ನನ್ನು ಕಾಣುವ ಭಾಗ್ಯವನ್ನು ಕರುಣಿಸು. ನಿನ್ನ ವನವಾಸ ಜೀವನ ನಾಳೆಯಿಂದ ಪ್ರಾರಂಭವಾಗಲಿ" ಎಂದನು.

ಆದರೆ ಶ್ರೀರಾಮನು ಆ ಮಾತನ್ನು ಒಪ್ಪಲಿಲ್ಲ. "ಅಪ್ಪಾ, ಪಿತೃವಾಕ್ಯಪರಿಪಾಲನೆಯನ್ನು ನೆರವೇರಿಸಬೇಕೆಂಬ ಸದ್ಬುದ್ಧಿ ನಾಳಿನವರೆಗೆ ಇರುವುದೊ ಇಲ್ಲವೊ ಕಂಡವರಾರು? ಆದುದರಿಂದ ಇಂದೇ ನಾನು ಪ್ರಯಾಣಮಾಡುತ್ತೇನೆ. ಮಾತೆಯಾದ ಕೈಕೆಗೆ ನೀನು ಕೊಟ್ಟಿರುವ ವರಗಳಲ್ಲಿ ಸ್ವಲ್ಪವೂ ಲೋಪವಾಗುವುದು ಬೇಡ. ಈಗಲೆ ಹೊರಡಬೇಕೆಂದು ನಾನು ಮಾಡಿರುವ ಸಂಕಲ್ಪವನ್ನು ನಡೆಸಿಕೊಡು" ಎಂದು ಆತನು ತಂದೆಯನ್ನು ಬೇಡಿಕೊಂಡನು. ಆತನ ಮಾತನ್ನು ಕೇಳಿದ ದಶರಥನು ಪುನಃ ಮೂರ್ಛೆಗೊಂಡನು. ಅದನ್ನು ಕಂಡು ಕೈಕೆಯ ಹೊರತು ಅಲ್ಲಿದ್ದ ರಾಣಿವಾಸದವರೆಲ್ಲರೂ 'ಗೊಳೋ' ಎಂದು ಅತ್ತರು. ಇದನ್ನು ನೋಡುತ್ತಾ ನಿಂತ ಸುಮಂತ್ರನಿಗೆ ಕೈಕೆಯ ಮೇಲೆ ತಡೆಯದಷ್ಟು ಕೋಪವುಕ್ಕಿತು. ರೋಷದಿಂದ ಬುಸುಗುಟ್ಟುತ್ತಾ ಕಟಕಟ ಹಲ್ಲುಕಡಿದು ಆಕೆಯನ್ನು ನಿಂದಿಸಿದನು. "ಎಲೌ ಕೇಕಯದೇವಿ, ನಿನ್ನ ಪತಿಯನ್ನು ನಿಂದಿಸಿ ಆತನನ್ನು ಸಂಕಟಪಡಿಸುತ್ತಿರುವ ನೀನು ನಿಜವಾಗಿಯೂ ಕುಲಘಾತಿನಿ. ಇಕ್ಷ್ವಾಕುವಂಶದಲ್ಲಿ ರಾಜನು ತನ್ನ ಮುಪ್ಪಿನಲ್ಲಿ ಹಿರಿಯ ಮಗನಿಗೆ ಪಟ್ಟಕಟ್ಟಿ ತಾನು ವಾನಪ್ರಸ್ಥಾಶ್ರಮವನ್ನು ಕೈಕೊಳ್ಳುವುದು ಸಂಪ್ರದಾಯ. ಈ ಸತ್ಸಂಪ್ರದಾಯವನ್ನು ಮುರಿಯುವಂತೆ ಮಹಾರಾಜನನ್ನು ಬಲಾತ್ಕರಿಸಿರುವೆಯಲ್ಲಾ ! ನಿನ್ನನ್ನು ಲೋಕದ ಜನರೆಲ್ಲರೂ ಛೀ ! ಛೀ ! ಎಂದು ನಿಂದಿಸುವುದಿಲ್ಲವೆ ? ಇದು ನಿನಗೆ ಶ್ರೇಯಸ್ಕರವೆ ? ನೀನೇನು ಮಾಡುವೆ ? ನಿನ್ನ ವಂಶವೆ ಕೆಟ್ಟವಂಶ. ನಿನ್ನ ತಾಯಿ ಪರಮ ನೀಚೆ. ನೀನು ಆಕೆಯ ಮಗಳು. ಬೇವಿನ ಮರಕ್ಕೆ ಹಾಲು ಹೊಯ್ದರೆ ಅದರ ಕಹಿ ನಾಶವಾದೀತೆ ? ಹಾಗೆಯೆ ನಿನ್ನನ್ನು ಪುರಸ್ಕರಿಸಿದ ಮಾತ್ರಕ್ಕೆ ನಿನ್ನ ನೀಚಗುಣ ಎಲ್ಲಿ ಹೋದೀತು ? ಜಗತ್ತಿನಲ್ಲಿ ಯಾರೂ ಮಾಡದ ದುಷ್ಕರ್ಮವನ್ನು ನೀನು ಮಾಡುತ್ತಿರುವೆ. ಆಯಿತು. ನಿನ್ನ ಹಟವೇ ನೆರವೇರಲಿ. ನಿನ್ನ ಮಗನೇ ಈ ರಾಜ್ಯದಲ್ಲಿ ಬಾಳಲಿ. ನಾವೆಲ್ಲರೂ ಶ್ರೀರಾಮನನ್ನು ಅನುಸರಿಸಿ ಹೊರಟುಹೋಗುತ್ತೇವೆ." ಕಠೋರವಾಕ್ಯಗಳನ್ನಾಡಿ ಅದರಿಂದ ಆಕೆಯ ಕಾಠಿಣ್ಯ ಕರಗಿರಬಹುದೆಂದು ಭಾವಿಸಿ ಆಕೆಯನ್ನು ಕುರಿತು "ಮಹಾರಾಣಿ, ಪುನಃ ನಿನಗೆ ನಮಸ್ಕರಿಸಿ ಬೇಡುತ್ತೇನೆ. ನಿನ್ನ ಹಟವನ್ನು ಬಿಡು. ಶ್ರೀರಾಮನ ಪಟ್ಟಾಭಿಷೇಕಕ್ಕೆ ಸಮ್ಮತಿಸಿ ನಿನ್ನ ಮತ್ತು ಲೋಕದ ಶ್ರೇಯಸ್ಸನ್ನು ಸಾಧಿಸು" ಎಂದು ಬೇಡಿಕೊಂಡನು.

ಯಾರು ಏನು ಹೇಳಿದರೂ ಕೈಕೆಯ ಪಾಷಾಣಹೃದಯದಲ್ಲಿ ಕರುಣೆ ಒಸರುವಂತಿರಲಿಲ್ಲ. ಇದನ್ನು ಕಂಡ ದಶರಥನು ಸುಮಂತ್ರನನ್ನು ಕುರಿತು "ಎಲೈ ಮಂತ್ರಿಯೆ, ಅವಳನ್ನು ವ್ಯರ್ಥವಾಗಿ ಏಕೆ ಬೇಡುವೆ ? ಶ್ರೀರಾಮನು ಅರಣ್ಯಕ್ಕೆ ಹೊರಡಲಿ. ಆತನ

ಜೊತೆಯಲ್ಲಿಯೆ ನನ್ನ ಚತುರಂಗ ಸೇನೆಯೂ ಸಮಸ್ತ ಪರಿವಾರವೂ ಹೊರಡಲಿ. ನನ್ನ ಮುದ್ದು ಮಗನಾದ ಶ್ರೀರಾಮನಿಗೆ ಅರಣ್ಯದಲ್ಲಿದ್ದರೂ ಯಾವುದೊಂದೂ ಕೊರತೆ ಆಗದಂತೆ ಏರ್ಪಡಿಸು. ಆತನು ಅರಣ್ಯದಲ್ಲಿ ಬೇಟೆಯಾಡುತ್ತಾ ಸುಖವಾಗಿ ಕಾಲ ಕಳೆಯುವುದಕ್ಕೆ ಅನುಕೂಲವಾಗುವಂತೆ ವ್ಯಾಧರನ್ನು ಆತನ ಜೊತೆಯಲ್ಲಿ ಕಳುಹಿಸು. ನನ್ನ ಭಂಡಾರದಲ್ಲಿರುವ ಧನಧಾನ್ಯವೆಲ್ಲವೂ ಆತನೊಡನೆ ಸಾಗಲಿ. ಪುಣ್ಯ ಕ್ಷೇತ್ರಗಳಲ್ಲಿ ಯಜ್ಞ ಯಾಗಾದಿಗಳನ್ನು ಮಾಡುತ್ತಾ ಋಷಿಗಳೊಡನೆ ಸುಖವಾಗಿ ವಾಸಿಸುತ್ತಿರಲಿ" ಎಂದು ಹೇಳಿದನು.

ಈ ಮಾತುಗಳನ್ನು ಕೇಳುತ್ತಲೆ ಕೈಕೆಯ ಮುಖ ಬಾಡಿತು. ಮಹಾರಾಜನ ಎದುರಿಗೆ ಬಂದು ನಿಂತು ಆತನನ್ನು ಕುರಿತು "ಮಹಾರಾಜ, ಇದಾವ ನ್ಯಾಯ? ಜನ ಧನಗಳಿಲ್ಲದ ಈ ಪಟ್ಟಣವನ್ನು ನನ್ನ ಮಗನು ಆಳಿ ತಾನೆ ಏನು ಪ್ರಯೋಜನ?" ಎಂದಳು. ಆಕೆಯ ಮಾತನ್ನು ಕೇಳಿ ದಶರಥನಿಗೆ ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು. ಆಕೆಯನ್ನು ಕುರಿತು "ಎಲೆ ಅನಾರ್ಯೆ, ಶ್ರೀರಾಮನ ಅಗಲಿಕೆ ಯಿಂದ ಮೊದಲೆ ದುಃಖಿತನಾಗಿರುವ ನನ್ನನ್ನು ನಿನ್ನ ವಾಗ್ಬಾಣಗಳಿಂದ ಮತ್ತೇಕೆ ಸಂಕಟಪಡಿಸುತ್ತಿರುವೆ?" ಎಂದು ಕೋಪಿಸಿದನು. ಕೈಕೆ ಆತನಿಗಿಂತಲೂ ಹೆಚ್ಚಾಗಿ ಉರಿದೆದ್ದಳು. ಆಗ ಶ್ರೀರಾಮನೆ ಮಧ್ಯೆ ಪ್ರವೇಶಿಸಿ ಅವರ ವಾಗ್ವಾದವನ್ನು ಅಲ್ಲಿಗೇ ನಿಲ್ಲಿಸಿದನು. ದಶರಥನನ್ನು ಕುರಿತು "ಪೂಜ್ಯನಾದ ತಂದೆಯೆ, ಸಕಲ ಭೋಗಗಳನ್ನೂ ತೊರೆದು ಋಷಿಜೀವನವನ್ನು ಕೈಕೊಂಡಿರುವ ನನಗೆ ಈ ಚತುರಂಗಬಲದಿಂದ ಏನು ಪ್ರಯೋಜನ? ಆನೆಯನ್ನು ದಾನ ಕೊಟ್ಟವನು ಅದನ್ನು ಕಟ್ಟುವ ಸರಪಳಿಗಾಗಿ ಮೋಹಗೊಳ್ಳುವುದೆ? ರಾಜ್ಯವನ್ನೇ ತ್ಯಾಗಮಾಡಿ ಹೋಗುವ ನಾನು ಧನಕನಕಾದಿ ಗಳನ್ನು ಆಶಿಸಲೆ? ಬೇಡ ಬೇಡ. ಇವೆಲ್ಲವೂ ಭರತನ ಸ್ವತ್ತು. ಹದಿನಾಲ್ಕು ವರ್ಷ ವನವಾಸವನ್ನು ಕೈಕೊಂಡಿರುವ ನನಗೆ ಈಗ ಅಗತ್ಯವಾಗಿರುವುದು ವಲ್ಕಲ. ದಯವಿಟ್ಟು ಅವನ್ನು ತರಿಸಿಕೊಡು. ಆ ವಲ್ಕಲ ವಸ್ತ್ರಗಳನ್ನು ಧರಿಸಿ ರಾಜಯೋಗ್ಯವಾದ ವಸ್ತ್ರಗಳನ್ನೆಲ್ಲಾ ಇಲ್ಲಿಯೆ ತ್ಯಜಿಸಿಹೋಗುತ್ತೇನೆ" ಎಂದು ಹೇಳಿದನು.

ಶ್ರೀರಾಮನ ಬಾಯಿಂದ ಈ ಮಾತುಗಳು ಹೊರಡುತ್ತಿದ್ದಂತೆಯೆ ಕೈಕೆ ನಾರುಬಟ್ಟೆಗಳನ್ನು ತರಿಸಿ ಅವುಗಳನ್ನು ಆತನಿಗೆ ಕೊಟ್ಟಳು. "ಮಹಾ ಪ್ರಸಾದ"ವೆಂದು ಅವುಗಳನ್ನು ಸ್ವೀಕರಿಸಿದ ಶ್ರೀರಾಮನು ತಾನುಟ್ಟಿದ್ದ ನವುರು ಬಟ್ಟೆಗಳನ್ನು ತೆಗೆದೊಗೆದು ವಲ್ಕಲಗಳನ್ನು ಧರಿಸಿದನು. ಲಕ್ಷ್ಮಣನೂ ಅಂತೆಯೆ ಮಾಡಿದನು. ಆದರೆ ಸೀತೆ ಮಾತ್ರ ಅವುಗಳನ್ನು ಕಂಡು ಬಲೆ ಕಂಡ ಹುಲ್ಲೆಯಂತೆ ಬೆದರಿದಳು. ಕೈಕೆಯ ಕೈಲಿದ್ದ ವಲ್ಕಲಗಳನ್ನು ತೆಗೆದುಕೊಂಡಳಾದರೂ ಅವುಗಳನ್ನು ಹೇಗೆ ಉಪಯೋಗಿಸ ಬೇಕೆಂಬುದು ಆಕೆಗೆ ಗೊತ್ತಾಗಲಿಲ್ಲ. ಆದ್ದರಿಂದ ತನ್ನ ಗಂಡನನ್ನು ಕುರಿತು "ಸ್ವಾಮಿ, ಋಷಿಪತ್ನಿಯರು ನಾರುಸೀರೆಗಳನ್ನು ಉಡುವ ರೀತಿಯೆಂತು?" ಎಂದು ಕೇಳಿದಳು. ಜನರ ಮಧ್ಯದಲ್ಲಿ ಇಷ್ಟು ಕೇಳುವುದಕ್ಕೆ ಆಕೆಗೆ ಎಷ್ಟೋ ಸಂಕೋಚವಾದಂತಾಯಿತು.

ಆ ವಲ್ಕಲಗಳನ್ನು ಕಂಠಕ್ಕೆ ಸುತ್ತಿಕೊಂಡು ಲಜ್ಜೆಯಿಂದ ತಲೆಬಾಗಿ ನಿಂತಳು. ಆಗ ಶ್ರೀರಾಮನು ಮುಂದೆ ಬಂದು ಆಕೆಯುಟ್ಟಿದ್ದ ಪಟ್ಟೆಯ ಸೀರೆಯ ಮೇಲೆಯೆ ನಾರುಮಡಿಯನ್ನು ಉಡಿಸುತ್ತಿದ್ದನು. ಅದನ್ನು ಕಂಡ ಸ್ತ್ರೀವೃಂದವೆಲ್ಲವೂ ಕಣ್ಣೀರಿನಲ್ಲಿ ಕೈತೊಳೆಯುತ್ತ "ರಾಮಚಂದ್ರ, ಸೀತಾದೇವಿಯ ಅರಣ್ಯಗಮನಕ್ಕೆ ಮಹಾರಾಜನು ಅನುಮತಿಯನ್ನಿತ್ತಿಲ್ಲ. ನೀನು ಅರಣ್ಯವಾಸವನ್ನು ಮುಗಿಸಿ ಬರುವ ವರೆಗೆ ಆಕೆ ಇಲ್ಲಿಯೆ ಇರುವಳು. ಮಂಗಳಕರಳಾದ ಆಕೆ ಅರಣ್ಯವಾಸಕ್ಕೆ ಸರ್ವಥಾ ಪಾತ್ರಳಲ್ಲ. ನಿನ್ನ ಸಹಾಯಕ್ಕೆ ಲಕ್ಷ್ಮಣ ಬರುತ್ತಾನೆ. ಆತನೊಡನೆ ನೀನು ಅರಣ್ಯ ವಾಸವನ್ನು ಮುಗಿಸಿ ಬಾ" ಎಂದರು. ಆದರೆ ಶ್ರೀರಾಮನು ಅವರ ಮಾತಿಗೆ ಲಕ್ಷ್ಯಕೊಡದೆ ತನ್ನ ಕಾರ್ಯವನ್ನು ಮಾಡಿ ಮುಗಿಸಿದನು.



ಆಗ ಶ್ರೀರಾಮನು ಮುಂದೆ ಬಂದು ಆಕೆಯುಟ್ಟಿದ್ದ ಪಟ್ಟೆಯ ಸೀರೆಯ ಮೇಲೆಯೇ ನಾರುಮಡಿಯನ್ನು ಉಡಿಸುತ್ತಿದ್ದನು.

ಸೀತಾದೇವಿ ವಲ್ಕಲ ಉಟ್ಟುದನ್ನು ಕಂಡು ಕುಲಗುರುವಾದ ವಸಿಷ್ಠರಿಗೆ ತುಂಬಾ ಸಂಕಟವಾಯಿತು. ಆಕೆಗೆ ನಾರುಬಟ್ಟೆಯನ್ನು ತಂದುಕೊಟ್ಟ ಕೈಕೆಯನ್ನು ಕೋಪದಿಂದ ದುರುಗುಟ್ಟಿಕೊಂಡು ನೋಡುತ್ತಾ "ಎಲೆ ಮರ್ಯಾದಾರಹಿತಳಾದ ದುಷ್ಟಳೆ, ಗಂಡನನ್ನು ವಂಚಿಸಿದುದಲ್ಲದೆ ಸಮುಚಿತ ಆಚಾರವನ್ನು ಮೀರಿ ನಡೆಯುತ್ತಿರುವೆಯಲ್ಲಾ .ಅಯ್ಯೋ ಕುಲನಾಶಕಳೆ! ನಿನ್ನ ದುಷ್ಟತನಕ್ಕೆ ಎಲ್ಲೆಯೇ ಇಲ್ಲವೆ? ಸೀತಾದೇವಿಗೆ ನಾರುಮಡಿಯನ್ನು ಕೊಡಲು ನಿನ್ನ ಕೈಗಳಾದರೂ ಹೇಗೆ ಎದ್ದುವು ? ಆಕೆ ಅರಣ್ಯಕ್ಕೇಕೆ ತೆರಳಬೇಕು ? ಆಕೆ ಅಯೋಧ್ಯೆಯಲ್ಲಿಯೆ ಇದ್ದು, ಮಹಾರಾಜನು ಶ್ರೀರಾಮಚಂದ್ರನಿಗೆ ಕೊಟ್ಟ ರಾಜ್ಯವನ್ನು

ಆತನ ಪರವಾಗಿ ಆಳುತ್ತಾ ಇರಲಿ. ಒಂದು ವೇಳೆ ಆಕೆಯು ಶ್ರೀರಾಮಚಂದ್ರನೊಡನೆ ತೆರಳುವುದಾದರೆ ನಾವೊಬ್ಬರೂ ಈ ಪಟ್ಟಣದಲ್ಲಿರುವುದಿಲ್ಲ. ಸದ್ಗುಣಸಂಪನ್ನನಾದ ಭರತನು ಈ ವಿಚಾರವನ್ನು ಕೇಳಿದರೆ ಆತನೂ ನಾರುಡೆ ಧರಿಸಿ ವನವಾಸ ಕೈಕೊಳ್ಳುತ್ತಾನೆ. ಎಂದೆಂದಿಗೂ ಆತನು ನಿನ್ನನ್ನು ಅನುಸರಿಸುವುದಿಲ್ಲ. ನಿನ್ನ ಚರ್ಯೆಯಿಂದ ನೀನು ಆತನಿಗೆ ಅನಿಷ್ಟವನ್ನು ಕೋರುತ್ತಿರುವೆಯೆ ಹೊರತು ಮತ್ತೇನೂ ಅಲ್ಲ. ಶ್ರೀರಾಮನನ್ನು ಅನುಸರಿಸದ ಮಾನವನೇ ಈ ಜಗತ್ತಿನಲ್ಲಿಲ್ಲ. ಈಗಲೆ ನಿನಗೆ ಅದರ ಅನುಭವವಾದೀತು. ಮೊದಲು ಸೀತಾದೇವಿಗೆ ಉಡಿಸಿರುವ ಆ ವಲ್ಕಲವನ್ನು ತೆಗೆದು ಹಾಕು. ನೀನು ವನವಾಸವನ್ನು ಬೇಡಿದುದು ಶ್ರೀರಾಮನಿಗೊಬ್ಬನಿಗೇ ಹೊರತು ಸೀತಾದೇವಿಗಲ್ಲ. ಆಕೆ ಪತಿಗತಪ್ರಾಣಳಾಗಿ ಆತನನ್ನು ಅನುಸರಿಸಿದರೂ ದಿವ್ಯಾಲಂಕಾರ ಭೂಷಿತೆಯಾಗಿಯೆ ಅನುಸರಿಸಲಿ" ಎಂದು ಹೇಳಿದನು.

ವಸಿಷ್ಠರ ಮಾತು ಮುಗಿಯುವಷ್ಟರಲ್ಲಿ ಸುತ್ತಲಿದ್ದ ಹೆಂಗಸರು ಸೀತೆಯ ದುರವಸ್ಥೆಯನ್ನು ನೋಡಲಾರದೆ ದಶರಥನನ್ನು ಕಟುವಾಗಿ ನಿಂದಿಸತೊಡಗಿದರು. ಅದನ್ನು ಕೇಳಿದ ದಶರಥನು ಮನಸ್ಸಿನಲ್ಲಿ ಅಸಹ್ಯ ವೇದನೆಯನ್ನು ಅನುಭವಿಸುತ್ತಾ ಕೈಕೆಯನ್ನು ಕುರಿತು "ಎಲೆ ಕುಲನಾಶಕಿ, ಸುಕುಮಾರಿಯಾದ ಸೀತೆ ಇನ್ನೂ ಎಳೆಯ ಹರಯದವಳು. ಇಷ್ಟು ಜನರ ಮುಂದೆ ಅವಳಿಗೆ ನಾರುಸೀರೆ ಉಡಿಸುವಷ್ಟು ಕಠಿಣ ಹೃದಯಳಾದೆಯಲ್ಲ! ಆಕೆ ನಿನಗೆಸಗಿದ ಅಪರಾಧವೇನು? ವಸಿಷ್ಠರು ಹೇಳಿದಂತೆ ಆಕೆ ಸರ್ವಾಲಂಕಾರ ಭೂಷಿತೆಯಾಗಿಯೆ ವನಕ್ಕೆ ತೆರಳಲಿ" ಎಂದು ಹೇಳಿದನು.

ವನಪ್ರಯಾಣಕ್ಕೆ ಸಿದ್ಧನಾದ ಶ್ರೀರಾಮನು ತಂದೆಯನ್ನು ಬೀಳ್ಕೊಳ್ಳುವ ಮುನ್ನ ಆತನನ್ನು ಕುರಿತು "ಅಪ್ಪಾ, ಪುತ್ರವಿಯೋಗವನ್ನು ಎಂದೂ ಕಾಣದ ನನ್ನ ಮಾತೆಯನ್ನು ಸಂತವಿಡುವ ಭಾರ ನಿನ್ನದು. ನಾನು ಹೋಗಿ ಬರುತ್ತೇನೆ" ಎಂದು ಹೇಳಿ ನಮಸ್ಕರಿಸಿದನು. ಋಷಿವೇಷದಲ್ಲಿದ್ದ ಮಗನನ್ನು ಕಂಡು ದಶರಥ ಮಹಾರಾಜನ ಗಂಟಲು ಕಟ್ಟಿ ಮಾತುಗಳೆ ಹೊರಡದಂತಾಯಿತು. "ರಾಮ! ರಾಮ!" ಎಂದು ಹೇಳಿ ಆತನು ಕಣ್ಣೀರುಗರೆದನು; ಕೈಕೆಯನ್ನು ಮನಸಾರ ಶಪಿಸಿದನು. ಅನಂತರ ಸುಮಂತ್ರನನ್ನು ಕುರಿತು "ಅಯ್ಯಾ ಉತ್ತಮಾಶ್ವಗಳನ್ನು ಕಟ್ಟಿದ ರಥದಲ್ಲಿ ಇವರನ್ನು ಕುಳ್ಳಿರಿಸಿಕೊಂಡು ಹೋಗಿ ನಮ್ಮ ರಾಜ್ಯದ ಎಲ್ಲೆಯವರೆಗೂ ಬಿಟ್ಟುಬರುವವನಾಗು" ಎಂದು ಆಜ್ಞಾಪಿಸಿದನು. ಆತನ ಅಪ್ಪಣೆಯಂತೆ ರಥ ಸಿದ್ಧವಾಗಿ ಅರಮನೆಯ ಬಾಗಿಲಲ್ಲಿ ಬಂದು ನಿಂತಿತು. ಅನಂತರ ರಾಜನ ಅಪ್ಪಣೆಯಂತೆ ಸೀತಾದೇವಿಗಾಗಿ ಹದಿನಾಲ್ಕು ವರ್ಷಗಳವರೆಗೆ ಬೇಕಾಗುವಷ್ಟು ವಸ್ತ್ರಾಭರಣಗಳನ್ನು ರಥದಲ್ಲಿ ಅಡಕಿದರು. ವಸ್ತ್ರಾಭರಣಗಳಿಂದ ಅಲಂಕೃತಳಾಗಿ ಪ್ರಭಾತದ ಸೂರ್ಯನಂತೆ ಆಸ್ಥಾನವನ್ನೆಲ್ಲಾ ಬೆಳಗುತ್ತಿದ್ದ ಸೀತೆ, ಹೊರಡಲು ಸಿದ್ಧಳಾಗಿ ಅತ್ತೆಗೆ ನಮಸ್ಕರಿಸಿದಳು. ಕೌಸಲ್ಯೆ ಆಕೆಯನ್ನು ಹಿಡಿದೆತ್ತಿ ಆಲಿಂಗಿಸಿಕೊಂಡು, ಕಣ್ತುಂಬ ನೀರು ತುಂಬಿರಲು, ಆಕೆಯನ್ನು ಕುರಿತು "ಮಗು, ಜಾನಕಿ, ನೀನೇನೂ ನಾಡಾಡಿ ಹೆಣ್ಣಲ್ಲ. ನಿನಗೆ ಬುದ್ಧಿವಾದ ಹೇಳಬೇಕಾದ ಅಗತ್ಯವೂ

ಇಲ್ಲ. ಕುಲಸ್ತ್ರೀಯರಿಗೆ ಪತಿಯೇ ಪರದೈವವಲ್ಲವೆ? ನಿನ್ನ ಪರದೈವದಂತಿರುವ ಶ್ರೀರಾಮನ ಕಷ್ಟ ಸುಖಗಳೆರಡರಲ್ಲಿಯೂ ಸಮವಾಗಿ ನೆರಳಿನಂತೆ ಅನುಸರಿಸು. ಎಂತಹ ಸಂದರ್ಭ ದಲ್ಲಿಯೂ ಆತನಿಗೆ ಅವಮನ್ನಣೆ ಮಾಡಬೇಡ" ಎಂದಳು. ಸೀತೆ ಅತ್ತೆಯ ಮಾತಿಗೆ "ಮಹಾಪ್ರಸಾದ"ವೆಂದು ಹೇಳಿ, ಅತ್ತೆಗೆ ಹೀಗೆಂದು ಭರವಸೆಯಿತ್ತಳು: "ಪ್ರಭೆ ಚಂದ್ರನನ್ನು ಅನುಸರಿಸುವಂತೆ ನಾನು ಪತಿಯನ್ನು ಅನುಸರಿಸುತ್ತೇನೆ".

ಅನಂತರ ಶ್ರೀರಾಮನು ತಾಯಿಯ ಪಾದಗಳನ್ನು ಹಿಡಿದು ನಮಸ್ಕರಿಸಿ "ಅಮ್ಮಾ, ನಿನ್ನ ದುಃಖದ ಆಳವನ್ನು ಅರಿಯಬಲ್ಲೆ. ಆದರೆ ತಂದೆಯನ್ನು ಸಂತವಿಸುವ ಭಾರ ನಿನ್ನದು. ಹದಿನಾಲ್ಕು ವರ್ಷಗಳು ಒಂದು ರಾತ್ರಿಯಂತೆ ಕಳೆದುಹೋಗುತ್ತದೆ. ನೀನು ಚಿಂತಿಸಬೇಡ. ಅವಧಿ ಮುಗಿದೊಡನೆಯೆ ಕೃತಕೃತ್ಯನಾದ ನಾನು ನಿನ್ನ ಪಾದ ಸನ್ನಿಧಿಯಲ್ಲಿ ಸಿದ್ಧನಾಗುತ್ತೇನೆ" ಎಂದು ಹೇಳಿದನು. ದಶರಥನ ಉಳಿದ ಮುನ್ನೂರ ಐವತ್ತು ಮಂದಿ ಭಾರ್ಯೆಯರೂ ಅಲ್ಲಿಯೆ ಇದ್ದರು. ಅವರೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕ ವಾಗಿ ನಮಸ್ಕರಿಸಿ "ತಾಯಿಯರಿರ, ಅಜ್ಞಾನದಿಂದಾಗಲಿ ಅತಿ ಸಲಿಗೆಯಿಂದಾಗಲಿ ನಿಮ್ಮಲ್ಲಿ ನಾನು ಏನು ಅಪರಾಧ ಮಾಡಿದ್ದರೂ ಅದನ್ನು ಕ್ಷಮಿಸಿ" ಎಂದು ಕೈಜೋಡಿಸಿ ಬೇಡಿಕೊಂಡನು. ಆತನ ಮಾತುಗಳನ್ನು ಕೇಳಿದ ರಾಣಿಯರೆಲ್ಲರೂ—ಕೈಕೆಯ ಹೊರತು—ಕಣ್ಣೀರುಗರೆದು ಗೋಳಿಟ್ಟರು. ಅವೊತ್ತು ಬೆಳಗಾದಂದು ಮಂಗಳವಾದ್ಯ ಗಳು ಭೋರ್ಗರೆಯುತ್ತಿದ್ದ ಅರಮನೆಯಲ್ಲಿ ಈಗ ರೋದನಧ್ವನಿ ತುಂಬಿಹೋಯಿತು.

ತರುವಾಯ ಲಕ್ಷ್ಮಣನ ಸರದಿ. ಆತನು ಮೊದಲು ಕೌಸಲ್ಯೆಗೆ ನಮಸ್ಕರಿಸಿ ಅನಂತರ ತನ್ನ ತಾಯಿಗೆ ಅಡ್ಡಬಿದ್ದನು. ಆಕೆ ಆತನನ್ನು ಮೇಲಕ್ಕೆತ್ತಿ ಆಲಿಂಗಿಸಿ ಕೊಂಡು, "ಮಗೂ! ಕಿರಿಯನು ಹಿರಿಯಣ್ಣನನ್ನು ಅನುಸರಿಸುವುದು ಈ ಇಕ್ಷ್ವಾಕು ವಂಶದ ಧರ್ಮ. ನಿನ್ನ ಅಣ್ಣನನ್ನೂ ಅತ್ತಿಗೆಯನ್ನೂ ಅಡವಿಯಲ್ಲಿ ಭಕ್ತಿಯಿಂದ ಸೇವಿಸು. ಶ್ರೀರಾಮಚಂದ್ರನೇ ನಿನಗೆ ತಂದೆಯೆಂದು ಭಾವಿಸು. ಸೀತಾದೇವಿಯನ್ನು ನಾನೆಂದೇ ಪರಿಗಣಿಸು. ನೀನು ಪ್ರವೇಶಿಸಿದ ಅರಣ್ಯವೇ ನಿನಗೆ ಅಯೋಧ್ಯೆಯಾಗಲಿ. ಸಂತೋಷದಿಂದ ಹೋಗಿ ಬಾ" ಎಂದು ಹರಸಿದಳು.

ಸೀತಾರಾಮಲಕ್ಷ್ಮಣರು ಹಿರಿಯರಿಂದ ಬೀಳ್ಕೊಳ್ಳುವ ಹೊತ್ತಿಗೆ ಸುಮಂತ್ರನು ಪ್ರವೇಶಿಸಿ, ರಥ ಸಿದ್ಧವಾಗಿರುವುದಾಗಿ ನಿವೇದಿಸಿದನು. ಮೊದಲು ಸೀತಾದೇವಿಯನ್ನು ರಥದಲ್ಲಿ ಕುಳ್ಳಿರಿಸಿ, ಅನಂತರ ರಾಮಲಕ್ಷ್ಮಣರು ರಥವನ್ನೇರಿದರು. ಅವರ ಕವಚಗಳನ್ನೂ ದಿವ್ಯಾಯುಧಗಳನ್ನೂ ಸುಮಂತ್ರನೆ ರಥದಲ್ಲಿ ತಂದಿರಿಸಿದನು. ದಶರಥ ಮಹಾರಾಜನೂ ಆತನ ಮಡದಿಯರೂ ಪರಿವಾರದವರೂ ಕಣ್ಣೀರಿಡುತ್ತಿರಲು ರಥ ಹೊರಟಿತು. ಆದರೆ ರಾಜಬೀದಿಯನ್ನು ಪ್ರವೇಶಿಸಿದೊಡನೆಯೆ ಅದರ ಪ್ರಯಾಣವೆ ಸಾಗದಂತೆ ಆಬಾಲವೃದ್ಧ ರಾದ ಪುರಜನರು ದಟ್ಟವಾಗಿ ಮುತ್ತಿಕೊಂಡರು. ಅವರೆಲ್ಲರೂ ಗಳಗಳನೆ ಕಣ್ಣೀರು ಸುರಿ ಸುತ್ತಾ "ಅಪ್ಪಾ, ಸುಮಂತ್ರ, ರಥವನ್ನು ಮೆಲ್ಲಗೆ ನಡಸು. ಕಣ್ತುಂಬ ಒಮ್ಮೆ ಶ್ರೀರಾಮ ಚಂದ್ರನನ್ನು ದರ್ಶನ ಮಾಡುತ್ತೇವೆ; ಇನ್ನು ನಮಗೆ ಆತನ ದರ್ಶನ ದೊರೆಯುವುದೆಲ್ಲಿ?

ಆಹಾ ! ಶ್ರೀರಾಮಚಂದ್ರ, ದೇವಸದೃಶನಾದ ನಿನ್ನನ್ನು ತೊರೆದು ಕೌಸಲ್ಯಾದೇವಿ ಹೇಗೆ ಬದುಕಿರಬಹುದು ! ಅಮ್ಮಾ ಸೀತಾದೇವಿ, ನೆಳಲಿನಂತೆ ಪತಿಯನ್ನು ಅನುಸರಿಸಿ ಕಾಡಿಗೆ ಹೋಗುತ್ತಿರುವ ನೀನೆಂತಹ ಮಾನ್ಯೆ ! ಲಕ್ಷ್ಮಣಸ್ವಾಮಿ ನೀನೇ ಧನ್ಯ ! ಶ್ರೀರಾಮನ ಸೇವೆ ನಿನಗೆ ಯಥೇಚ್ಛವಾಗಿ ದೊರಕಿತು !" ಎಂದು ಕೊರಳೆತ್ತಿ ಕೂಗುತ್ತಾ ರಥವನ್ನು ಹಿಂಬಾಲಿಸಿದರು. ಅತ್ತ ಅಳುತ್ತಾ ನಿಂತಿದ್ದ ತಂದೆಯನ್ನೂ ಇತ್ತ ಚೀರುತ್ತಾ ಬರುವ ಜನಸಮೂಹವನ್ನೂ ಕಂಡು ಶ್ರೀರಾಮನು ಈ ದುಃಖಸನ್ನಿವೇಶದಿಂದ ಆದಷ್ಟು ಬೇಗ ಹೊರಟು ಹೋಗಬೇಕೆಂದು ರಥವನ್ನು ಅತಿವೇಗವಾಗಿ ನಡೆಯಿಸುವಂತೆ ಸುಮಂತ್ರನಿಗೆ ಅಪ್ಪಣೆಮಾಡಿದನು. ಆದರೆ ಸುತ್ತಲಿದ್ದ ಜನ ಅದಕ್ಕೆ ಆಸ್ಪದ ಕೊಡುವಂತಿರಲಿಲ್ಲ. ಅಷ್ಟರಲ್ಲಿ ಅರಮನೆಯ ಬಾಗಿಲಿನ ಬಳಿ ರಥದ ಕಡೆನೋಡುತ್ತಾ ನಿಂತಿದ್ದ ಮಹಾರಾಜನು ದುಃಖವನ್ನು ತಡೆಯಲಾರದೆ ಮೂರ್ಛಿತನಾದನು. ರಾಣಿಯರೆಲ್ಲರೂ 'ಹೋ' ಎಂದು ಗೋಳಿಟ್ಟರು. ರಥದ ಹಿಂದೆ ಬರುತ್ತಿದ್ದ ಜನ "ಹಾ ! ಶ್ರೀರಾಮಚಂದ್ರ !" ಎಂದೂ "ದೇವಿ ಕೌಸಲ್ಯೆ !" ಎಂದೂ ಕೂಗಿಕೊಂಡರು. ಅಷ್ಟರಲ್ಲಿ ಕೌಸಲ್ಯಾದೇವಿ, "ಹಾ ! ಹಾ ರಾಮ ! ಹಾ ಜಾನಕಿ ! ಹಾ ಲಕ್ಷ್ಮಣ ! ಮಕ್ಕಳಿರ, ಸ್ವಲ್ಪ ನಿಲ್ಲಿ" ಎಂದು ಕೂಗುತ್ತಾ ಪ್ರಯಾಣಮಾಡುತ್ತಿದ್ದ ರಥದ ಹಿಂದೆ ಓಡಿ ಬಂದಳು. ದಶರಥನು ರಥವನ್ನು ನಿಲ್ಲಿಸುವಂತೆ ಸುಮಂತ್ರನಿಗೆ ಕೂಗಿ ಅಪ್ಪಣೆಮಾಡಿದನು. ಆದರೆ ಅದನ್ನು ಗಮನಿಸ ಕೂಡದೆಂದೂ ರಥವನ್ನು ವೇಗವಾಗಿ ನಡೆಯಿಸಬೇಕೆಂದೂ ಶ್ರೀರಾಮನು ಸುಮಂತ್ರನಿಗೆ ಬೆಸಸಿದನು. ಅರೆಚಣದಲ್ಲಿಯೆ ತೇರು ಅರಮನೆಗೆ ಕಣ್ಮರೆಯಾಯಿತು.

---

## ೮

# ಕೌಸಲ್ಯಾ ವಿಲಾಪ

ಶ್ರೀರಾಮನ ರಥದ ಧೂಳಿ ಕಣ್ಣಿಗೆ ಕಾಣುವವರೆಗೂ ದಶರಥ ಮಹಾರಾಜನು ಅದರಲ್ಲಿಯೆ ನಟ್ಟ ದಿಟ್ಟಿಯಾಗಿ ನಿಂತಿದ್ದನು. ಅದು ಕಣ್ಮರೆಯಾದೊಡನೆಯೆ ಆತನು ಮೂರ್ಛಿತನಾಗಿ ಬುಡಕಡಿದ ಮರದಂತೆ ನೆಲಕ್ಕುರುಳಿದನು. ಬಳಿಯೆ ನಿಂತಿದ್ದ ಕೌಸಲ್ಯಾ ದೇವಿ ಆತನನ್ನು ಉಪಚರಿಸಿ ಎಚ್ಚರಿಸಿದಳು. ಅನಂತರ ಆತನ ಬಲತೋಳನ್ನು ಹಿಡಿದು ಕೊಂಡು ಅರಮನೆಯೊಳಕ್ಕೆ ಕರೆದುಕೊಂಡು ಹೊರಟಳು. ಕೈಕೆಯೂ ಸಹಾಯಕ್ಕೆ ಬಂದು ಆತನ ಎಡದೋಳನ್ನು ಹಿಡಿದುಕೊಳ್ಳಹೋದಳು. ಆದರೆ ದಶರಥನು ಆಕೆಯನ್ನು ನಿವಾರಿಸುತ್ತಾ, "ನೀನು ನನ್ನನ್ನು ಮುಟ್ಟಬೇಡ. ನೀನು ನನ್ನ ಹೆಂಡತಿಯಲ್ಲ. ನಿನ್ನನ್ನು ನಾನು ತ್ಯಜಿಸಿದ್ದೇನೆ. ನಿನ್ನ ಮುಖಾವಲೋಕನ ಕೂಡ ನನಗೆ ಸಹಿಸದು. ನೀನು ಮಾತ್ರವೇ ಅಲ್ಲ; ನಿನ್ನವರೆಲ್ಲರೂ ನನ್ನಿಂದ ಬಹಿಷ್ಕೃತರು. ಜ್ಯೇಷ್ಠನಿಗೆ ಸಲ್ಲಬೇಕಾದ ಈ ರಾಜ್ಯವನ್ನು ನಿನ್ನ ಮಗನು ಸ್ವೀಕರಿಸುವುದಾದರೆ ಆತನೂ ತ್ಯಾಜ್ಯನೆ. ನಾನು ಸತ್ತ ಮೇಲೆ ನನಗೆ ಆತನು ಕೊಡುವ ಜಲಾಂಜಲಿ ಕೂಡ ನನ್ನನ್ನು ಸೇರದಿರಲಿ" ಎಂದು ಹೇಳಿ ಕೌಸಲ್ಯೆಯ ಸಹಾಯದಿಂದ ಆಕೆಯ ಅಂತಃಪುರವನ್ನು ಕುರಿತು ಹೊರಟನು. ಅರಣ್ಯದಲ್ಲಿ



ಶ್ರೀರಾಮನ ರಥದ ಧೂಳಿ ಕಣ್ಣಿಗೆ ಕಾಣುವವರೆಗೂ ದಶರಥ ಮಹಾರಾಜನು ಅದರಲ್ಲಿಯೇ ನಟ್ಟ ದಿಟ್ಟಿಯಾಗಿ ನಿಂತಿದ್ದನು.

ತನ್ನ ಮಗನು ಪಡಬಹುದಾದ ಕಷ್ಟಗಳನ್ನು ನೆನೆನೆನೆದು ಆತನು ತಲ್ಲಣಿಸುತ್ತಿದ್ದನು. ಪಾಪ! ಜನಕಮಹಾರಾಜನ ಮೋಹದ ಕುವರಿಯಾದ ಸೀತೆಗೆ ಅದೆಂತಹ ಕಷ್ಟಪ್ರಾಪ್ತಿ! ಲಕ್ಷ್ಮಣನೆಂತಹ ಸದ್ಗುಣವಂತ! ದಶರಥನ ತಲೆಯು ತುಂಬ ಇವೇ ಭಾವನೆ. ಹಂಸತೂಲಿಕಾತಲ್ಪದ ಮೇಲೆ ಹೊರಳುತ್ತಾ ಆತನು ಉನ್ಮಾದಗ್ರಸ್ತನಂತೆ ಅರಚಿ ಕೊಳ್ಳುತ್ತಿದ್ದನು—"ಹಾ ರಾಘವ, ನನ್ನನ್ನು ಬಿಟ್ಟುಹೋದೆಯಾ!" "ಹಾ, ರಾಮ! ನೀನು ಹಿಂದಿರುಗುವುದನ್ನು ಕಾಣುವ ಭಾಗ್ಯ ನನಗಿಲ್ಲ. ಪುಣ್ಯಾತ್ಮರಿಗೆ ಮಾತ್ರ ಅದು ಲಭ್ಯ." "ಕೌಸಲ್ಯಾ, ನನ್ನ ದೃಷ್ಟಿ ಶ್ರೀರಾಮನ ಹಿಂದೆಯೆ ಹೊರಟು ಹೋಯಿತು. ನೀನು ನನ್ನ ಕಣ್ಣಿಗೆ ಕಾಣುತ್ತಲೇ ಇಲ್ಲ. ಎಲ್ಲಿ! ಒಮ್ಮೆ ನಿನ್ನ ಕೈಯಿಂದ ನನ್ನನ್ನು ಮುಟ್ಟು."

ದಶರಥನ ವಿಲಾಪವನ್ನು ಕಂಡು ಕೌಸಲ್ಯೆ ಆತನ ಬಳಿ ಬಂದು ಕುಳಿತಳು. ಮಗನ ಅಗಲಿಕೆಯೆಂಬುದು ಆಕೆಯ ಕರುಳಲ್ಲಿ ಕತ್ತರಿಯಾಡಿಸಿದಂತಾಗಿತ್ತು. ಹೊಟ್ಟೆ ಯಲ್ಲಿದ್ದ ಕಸಿವಿಸಿಯನ್ನು ಮಾತಿನಲ್ಲಿ ಹೊರಸೂಸಿದಳು. "ಪ್ರಭು, ಕೈಕೆ ತನ್ನ ಕುಟಿಲತೆಯಿಂದ ಶ್ರೀರಾಮನನ್ನು ಅಡವಿಗಟ್ಟಿ ಪೊರೆಬಿಟ್ಟ ಹಾವಿನಂತೆ ಆನಂದದಿಂದಿ ದ್ದಾಳೆ. ಆಕೆ ತನ್ನ ಮಗನಾದ ಭರತನಿಗೆ ಪಟ್ಟಗಟ್ಟುವಷ್ಟರಿಂದಲೆ ಸಂತೃಪ್ತಳಾಗಿದ್ದರೆ ನನ್ನ ಮಗನು ಅಯೋಧ್ಯೆಯಲ್ಲಿ ಭಿಕ್ಷವೃತ್ತಿಯಾದರೂ ಬಾಳು ಮಾಡುತ್ತಿದ್ದ. ಅದಕ್ಕೂ ಅವಕಾಶವಿಲ್ಲದಂತೆ ಮಾಡಿಬಿಟ್ಟಳು. ದೇವತೆಗಳ ಹವಿರ್ಭಾಗವನ್ನು ರಾಕ್ಷಸರಿಗೆ ಎತ್ತಿ ಕೊಡುವಂತೆ ಶ್ರೀರಾಮನಿಗೆ ಸಲ್ಲಬೇಕಾದ ಸಾಮ್ರಾಜ್ಯವನ್ನು ನೀನು ಕೈಕೆಗೆ ಎತ್ತಿ ಕೊಟ್ಟೆ. ನಿನ್ನ ಭಾಷೆಯನ್ನು ಸಲ್ಲಿಸುವುದಕ್ಕಾಗಿ ಸೀತಾರಾಮಲಕ್ಷ್ಮಣರು ಕಾಡು ಪಾಲಾದರು. ಅಡವಿಯಲ್ಲಿ ಅವರು ಎಷ್ಟು ಕಷ್ಟಗಳಿಗೆ ಒಳಗಾಗುವರೊ, ಎಂದು ಸುಕ್ಷೇಮವಾಗಿ ಹಿಂದಿರುಗುವರೊ, ಭಗವಂತನೆ ಬಲ್ಲ. ಅಯ್ಯೋ ನಾನು ಪೂರ್ವ ಜನ್ಮದಲ್ಲಿ ಎಷ್ಟು ಪಾಪಗಳನ್ನು ಮಾಡಿದ್ದೆನೊ! ಎಷ್ಟು ಜನ ತಾಯಿಯರಿಂದ ಮಕ್ಕಳನ್ನು ಅಗಲಿಸಿದ್ದೆನೊ! ಮಹಾರಾಜ, ಪುತ್ರಶೋಕದಿಂದ ನನ್ನ ಹೊಟ್ಟೆ ಉರಿದು ಹೋಗುತ್ತಿದೆ!" ಆಗ ಸಮೀಪದಲ್ಲಿಯೆ ಇದ್ದ ಸುಮಿತ್ರೆ ಆಕೆಯನ್ನು ಸಮಾಧಾನ ಪಡಿಸುತ್ತಾ "ಅಕ್ಕ, ಪುರುಷೋತ್ತಮನಾದ ಶ್ರೀರಾಮಚಂದ್ರನಿಗೆ ಎಲ್ಲಿದ್ದರೆ ತಾನೆ ಏನು ಭಯ? ತಂದೆಯ ಸತ್ಯಪ್ರತಿಜ್ಞೆಯನ್ನು ನೆರವೇರಿಸುವುದಕ್ಕಾಗಿ ಆನಂದದಿಂದ ಅರಣ್ಯವಾಸವನ್ನು ಕೈಕೊಂಡಿರುವ ಆತನಿಗಾಗಿ ನೀನು ಹೆಮ್ಮೆಪಡಬೇಕೆ ಹೊರತು ವ್ಯಥೆಪಡಬಾರದು. ಆತನ ಸೇವೆಗೆ ಲಕ್ಷ್ಮಣನಿದ್ದಾನೆ. ಆತನ ಮನಸ್ಸನ್ನು ರಮಿಸಲು ಸೀತೆಯಿರುತ್ತಾಳೆ. ಇವರಿಬ್ಬರ ಜೊತೆಯಲ್ಲಿ ಆತನು ಆನಂದದಿಂದ ಕಾಲ ಕಳೆಯು ತ್ತಾನೆ. ಅಲ್ಲದೆ ಧರ್ಮಮೂರ್ತಿಯಾದ ನಿನ್ನ ಮಗನಲ್ಲಿ ಸೂರ್ಯನು ತನ್ನ ಕಿರಣಗಳ ಉಗ್ರತೆಯನ್ನು ಪ್ರಶಾಂತಗೊಳಿಸುತ್ತಾನೆ; ವಾಯು ಹಿತಕರನಾಗಿ ಬೀಸುತ್ತಾನೆ; ಅಡವಿ ಋತುವಿಗನುಗುಣವಾದ ಫಲಗಳನ್ನು ಒದಗಿಸುತ್ತದೆ; ಚಂದ್ರನು ತನ್ನ ಶೀತಳ ವಾದ ಕಿರಣಗಳಿಂದ ಆತನನ್ನು ಸಂತೋಷಪಡಿಸುತ್ತಾನೆ. ಆದ್ದರಿಂದ ಶ್ರೀರಾಮನು

ಅಡವಿಯಲ್ಲಿಯೂ ಅರಮನೆಯಲ್ಲಿರುವಂತೆಯೆ ನಿರ್ಭಯನಾಗಿ ಸುಖವಾಗಿರುತ್ತಾನೆ. ಆತನನ್ನು ಇದಿರಿಸುವವರು ಈ ಜಗತ್ತಿನಲ್ಲಿಯೆ ಯಾರೂ ಇಲ್ಲ. ವನವಾಸವನ್ನು ಸುಖವಾಗಿ ಮುಗಿಸಿ ಹಿಂದಿರುಗಿದ ಕುಮಾರನನ್ನು ಕಂಡು ನೀನು, ಮೇಘವು ಪರ್ವತದ ಮೇಲೆ ಮಳೆಗರೆಯುವಂತೆ, ಆನಂದಬಾಷ್ಪಗಳನ್ನು ಸುರಿಸುತ್ತೀಯೆ" ಎಂದಳು. ತಂಗಿ ಸುಮಿತ್ರೆಯ ಸಂತೈಕೆಯ ಮಾತುಗಳಿಂದ ಕೌಸಲ್ಯೆಯ ಹೃದಯದಲ್ಲಿ ಒಂದಿನಿತು ಧೈರ್ಯಸಂಚಾರವಾದಂತಾಯಿತು.

---

೬

# ವನವಾಸದ ಪ್ರಥಮ ರಾತ್ರಿ

ಅತ್ತ ರಾಮಚಂದ್ರನು ಅರಣ್ಯಕ್ಕೆ ಪ್ರಯಾಣ ಮಾಡುತ್ತಿರಲು ಪುರಜನರೆಲ್ಲರೂ ಆತನನ್ನು ಹಿಂಬಾಲಿಸಿದರು. ಆತನ ಗೆಳೆಯರು ಎಷ್ಟು ತಡೆದರೂ ಅವರು ಬೇರೆ ನಿಲ್ಲ ಲಿಲ್ಲ. ಸ್ವತಃ ರಾಮಚಂದ್ರನೇ ಅವರನ್ನು ಸಮಾಧಾನ ಮಾಡುತ್ತಾ "ರಾಜನಾಗಲಿರುವ ಭರತನು ಸದ್ಗುಣ ಸಂಪನ್ನನು. ಆತನು ನಿಮ್ಮ ಹಿತವನ್ನು ಸಾಧಿಸುವುದರಲ್ಲಿ ಸದಾ ತತ್ಪರನಾಗಿರುತ್ತಾನೆ. ನೀವು ನನ್ನಲ್ಲಿ ತೋರುತ್ತಿರುವ ಅವ್ಯಾಜ ಪ್ರೇಮವನ್ನು ಆತನಲ್ಲಿ ತೋರಬೇಕಾದುದು ನಿಮ್ಮ ಕರ್ತವ್ಯ. ನಾನು ನನ್ನ ತಂದೆಯ ಮಾತನ್ನು ನಡೆಸುವುದ ಕ್ಕಾಗಿ ಅರಣ್ಯಕ್ಕೆ ತೆರಳುತ್ತಿದ್ದೇನೆ. ಪೂಜ್ಯವಾದ ಆತನ ಮಾತು ನನಗೆ ಹೇಗೆ ವಿಧೇಯವೋ ಹಾಗೆಯೆ ನಿಮಗೂ ವಿಧೇಯವಾದುದು" ಎಂದು ಹೇಳಿದನು. ಆದರೆ ಶ್ರೀರಾಮಪ್ರೇಮ ದಲ್ಲಿ ಮುಳುಗಿಹೋಗಿದ್ದ ಅವರಿಗೆ ಶ್ರೀರಾಮನ ಮಾತುಗಳು ಕೇಳಿಬರಲೇ ಇಲ್ಲ. ವೃದ್ಧ ರಾದ ಬ್ರಾಹ್ಮಣರು ರಥದ ಹಿಂದೆ ಓಡಿ ಬರುತ್ತಾ "ಎಲೈ ರಥಾಶ್ವಗಳೆ, ಮುಂದಕ್ಕೆ ಒಂದು ಹೆಜ್ಜೆಯನ್ನೂ ಇಡಬೇಡಿ. ಲೋಕಪೂಜ್ಯನಾದ ಶ್ರೀರಾಮನನ್ನು ಅರಣ್ಯಕ್ಕೆ ಕೊಂಡೊಯ್ಯಬೇಡಿ" ಎಂದು ಕೂಗಿಕೊಂಡರು. ಇದನ್ನು ಕಂಡು ಶ್ರೀರಾಮನು ರಥ ವನ್ನು ನಿಲ್ಲಿಸಿ ಸೀತಾಲಕ್ಷ್ಮಣರೊಡನೆ ತಾನೂ ಪಾದಚಾರಿಯಾಗಿಯೆ ಪ್ರಯಾಣ ಬೆಳೆಸಿ ದನು. ಆ ಮುದಿ ಹಾರುವರನ್ನು ಹಿಂದಿರುಗಿಸಲು ಅವನಿಂದಾಗಲಿಲ್ಲ. ಶ್ರೀರಾಮನು ಸ್ವಧರ್ಮವನ್ನು ಮಾತ್ರ ಲಕ್ಷಿಸಿ ಉಳಿದ ಧರ್ಮಗಳನ್ನು ಗಾಳಿಗೆ ತೂರುವುದಾದರೆ ತಾವೂ ತಮ್ಮ ಧರ್ಮಗಳನ್ನು ಬಿಟ್ಟು ಬಿಡುವುದಾಗಿ ಹೇಳಿದರು. ಅವರು ಹೀಗೆ ವಾಗ್ವಾದ ಮಾಡುತ್ತಾ ಪ್ರಯಾಣ ಮಾಡುತ್ತಿರಲು ಶ್ರೀರಾಮಮೂರ್ತಿಯನ್ನು ಹಿಂದಿರುಗೆಂದು ಬೇಡಿ ಅಡ್ಡಬಿದ್ದಿರುವುದೊ ಎಂಬಂತೆ ದಾರಿಗೆ ಅಡ್ಡವಾಗಿ ಹರಿಯುತ್ತಿದ್ದ ತಮಸಾನದಿ ಕಾಣಿಸಿತು. ಆ ನದಿಯ ಸಮೀಪದಲ್ಲಿ ಸುಮಂತ್ರನು ರಥವನ್ನು ನಿಲ್ಲಿಸಿ, ಪ್ರಯಾಣ ದಿಂದ ಬಳಲಿದ್ದ ಕುದುರೆಗಳನ್ನು ರಥದಿಂದ ಬಿಚ್ಚಿ, ಅವುಗಳಿಗೆ ನೀರು ಕುಡಿಸಿ, ವಿಶ್ರಾಂತಿಗೊಳಿಸಿದನು.

ತಮಸಾನದಿಯ ತೀರವನ್ನು ಸೇರಿದಾಗಲೆ ಬೈಗಾಗಿತ್ತು. ಶ್ರೀರಾಮನು ಆ ಇರುಳು ಅಲ್ಲಿಯೆ ತಂಗಿದನು. ಅದು ವನವಾಸದ ಪ್ರಥಮ ರಾತ್ರಿ. ಶ್ರೀರಾಮನು ಆ ರಾತ್ರಿ ಆಹಾರವೇನನ್ನೂ ತೆಗೆದುಕೊಳ್ಳಲಿಲ್ಲ. ಸ್ವಲ್ಪ ನೀರನ್ನು ಮಾತ್ರ ಕುಡಿದು ತೃಪ್ತನಾದನು. ಸುಮಂತ್ರನು ಮರದ ಚಿಗುರುಗಳನ್ನು ಹಾಸಿ ಶ್ರೀರಾಮನಿಗೊಂದು ಹಾಸಿಗೆಯನ್ನು ಸಜ್ಜುಗೊಳಿಸಿಟ್ಟನು. ಸೀತಾ ಸಮೇತನಾದ ಶ್ರೀರಾಮನು ಆ ಹಾಸಿಗೆ ಯಲ್ಲಿ ಪವಡಿಸಿದನು. ತಂದೆತಾಯಿಯರು ತನಗಾಗಿ ಎಷ್ಟು ಮರುಗುತ್ತಿರುವರೊ ಎಂಬ

ವ್ಯಥೆಯಿಂದಲೂ ಒರಟು ಹಾಸಿಗೆಯ ಅಭ್ಯಾಸವಿಲ್ಲದುದರಿಂದಲೂ ಆತನಿಗೆ ಆ ರಾತ್ರಿ ನಿದ್ರೆ ಬರಲಿಲ್ಲ. ಲಕ್ಷ್ಮಣನೂ ನಿದ್ರೆಯಿಲ್ಲದೆ ತನ್ನ ಅಣ್ಣನ ಸದ್ಗುಣಗಳನ್ನು ಸುಮಂತ್ರನೊಡನೆ ವಿವರಿಸುತ್ತಲೆ ರಾತ್ರಿಯನ್ನು ಕಳೆಯುತ್ತಿದ್ದನು. ಸೀತಾರಾಮರನ್ನು ಹಿಂಬಾಲಿಸಿ ಬಂದಿದ್ದ ಪೌರರೆಲ್ಲರೂ ಸುತ್ತುಮುತ್ತಿನ ಮರಗಿಡಗಳ ಕೆಳಗೆ ತಂಗಿದ್ದರು. ಶ್ರೀರಾಮನು ಬೆಳಗಿನ ಮುಂಜಾವಕ್ಕೆ ಮೇಲಕ್ಕೆದ್ದನು. ಸುತ್ತಲೂ ಮರದ ಕೆಳಗೆ ಮಲಗಿದ್ದ ಜನರನ್ನು ಕಂಡು ಆತನಿಗೆ ಬಹು ಮರುಕವುಂಟಾಯಿತು. ಆತನು ಲಕ್ಷ್ಮಣನನ್ನು ಕರೆದು "ತಮ್ಮಾ, ಈ ಜನರ ಮೈತ್ರಿಯನ್ನು ನೋಡಿದೆಯಾ! ಇವರು ಪ್ರಾಣಗಳನ್ನಾದರೂ ತೊರೆಯುವರೆ ಹೊರತು ನಮ್ಮನ್ನು ತೊರೆಯುವಂತೆ ಕಾಣುವುದಿಲ್ಲ. ನನಗಾಗಿ ಇವರು ಇಷ್ಟು ಕಷ್ಟಕ್ಕೆ ಈಡಾಗುವುದನ್ನು ನಾನು ಸಹಿಸಲಾರೆ. ಅವರಿಗೆ ಈ ಕಷ್ಟವನ್ನು ತಪ್ಪಿಸಲು ಈಗ ಇರುವುದು ಒಂದೇ ದಾರಿ. ಸುಮಂತ್ರನನ್ನೆಬ್ಬಿಸು. ಈ ಕ್ಷಣದಲ್ಲಿಯೆ ನಾವು ಇಲ್ಲಿಂದ ಹೊರಟು ಹೋಗೋಣ. ಬೆಳಗಾದ ಮೇಲೆ ಈ ಪೌರರು ನಮ್ಮನ್ನು ಕಾಣದೆ ಹಂಬಲಿಸುತ್ತಾ ಅಯೋಧ್ಯೆಗೆ ಹಿಂತಿರುಗುವರು"ಎಂದು ಹೇಳಿದನು.

ಶ್ರೀರಾಮನ ಅಪ್ಪಣೆಯಂತೆ ತೇರು ಸಿದ್ಧವಾಯಿತು. ಸೀತಾ ರಾಮ ಲಕ್ಷ್ಮಣರು ರಥವನ್ನೇರಿದರು. ಸುಮಂತ್ರನು ರಥವನ್ನು ನಡೆಸಿದನು. ಕ್ಷಣಮಾತ್ರದಲ್ಲಿ ತಮಸಾ ನದಿಯನ್ನು ದಾಟಿ ಇದಿರು ದಡವನ್ನು ಸೇರಿದುದಾಯಿತು. ಒಡನೆಯೆ ರಥದಲ್ಲಿದ್ದವರು ಕೆಳಕ್ಕಿಳಿದರು. ಶ್ರೀರಾಮನು ಸುಮಂತ್ರನನ್ನು ಕುರಿತು "ಎಲೈ ಸುಮಂತ್ರನೆ, ನೀನೊಬ್ಬನೆ ರಥದಲ್ಲಿ ಕುಳಿತು ಅಯೋಧ್ಯೆಯ ಕಡೆಗೆ ಅದನ್ನು ಸ್ವಲ್ಪ ದೂರ ನಡೆಸಿಕೊಂಡು ಹೋಗಿ ಪುನಃ ಹಿಂತಿರುಗಿ ಬರುವವನಾಗು. ಪೌರರು ನಾನು ಅಯೋಧ್ಯೆಗೆ ಹೋಗಿರುವೆನೆಂಬ ಭ್ರಾಂತಿಯಿಂದ ಹಿಂದಿರುಗಿ ಊರಿಗೆ ಹೋಗುವೆರು. ಅವರು ವೃಥಾ ನನ್ನನ್ನು ಹಿಂಬಾಲಿಸಿ ಇಲ್ಲಿ ಸಂಕಟಪಡುವುದು ಬೇಡ" ಎಂದನು. ಸುಮಂತ್ರನು ಆತನ ಅಪ್ಪಣೆಯನ್ನು ಪರಿಪಾಲಿಸಿ ರಥವನ್ನು ತಂದು ನಿಲ್ಲಿಸಲು, ಶ್ರೀರಾಮಾದಿಗಳು ಪುನಃ ರಥವೇರಿದರು. ತೇರು ವೇಗದಿಂದ ತಪೋವನಾಭಿಮುಖವಾಗಿ ಧಾವಿಸಿತು.

ರಾತ್ರಿ ಪೂರೈಸಿ ಬೆಳಗಾಯಿತು. ತಮಸಾನದಿ ತೀರದಲ್ಲಿದ್ದ ಪೌರರೆಲ್ಲರೂ ಎಚ್ಚತ್ತು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಸೀತಾರಾಮರು ಇಳಿದುಕೊಂಡಿದ್ದ ಎಡೆಯನ್ನು ನೋಡಿದರು. ಅದು ಬರಿದಾಗಿತ್ತು. ಮೆಟ್ಟಿಬಿದ್ದು ಕಣ್ಣರಳಿಸಿದರು. ಸೀತಾರಾಮಲಕ್ಷ್ಮಣರೂ ಅವರು ಏರಿ ಬಂದಿದ್ದ ರಥವೂ ಕಣ್ಮರೆಯಾಗಿದ್ದವು. ಜನರು ತಮ್ಮ ನಿದ್ದೆಯನ್ನು ನಿಂದಿಸುತ್ತಾ ಕೊಡವಿಕೊಂಡು ಮೇಲಕ್ಕೆದ್ದರು. ತೇರಿನ ಗಾಲಿಗಳು ಹರಿದುಹೋಗಿದ್ದ ಜಾಡನ್ನು ಅನುಸರಿಸಿ ಶ್ರೀರಾಮನನ್ನು ಹಿಂಬಾಲಿಸಲು ಅವರು ಪ್ರಯತ್ನ ಮಾಡಿದರು. ಆದರೆ ರಥಮಾರ್ಗ ಉತ್ತರ ದಿಕ್ಕನ್ನು ಸೂಚಿಸುತ್ತಿತ್ತು. ಸ್ವಲ್ಪ ದೂರ ಹೋದ ಮೇಲೆ ಅದೂ ಕಣ್ಣಿಗೆ ಬೀಳಲಿಲ್ಲ. ಊರಿಗೆ ಹಿಂತಿರುಗುವುದೆಂದರೆ ಅವರಿಗೆ ಹೇಗೆ ಹೇಗೋ ಆಗುತ್ತಿತ್ತು. ಊರಿನಲ್ಲಿ ಕೇಳಿದವರಿಗೆಲ್ಲ ಏನೆಂದು ಉತ್ತರವೀಯುವುದು?

ಶ್ರೀರಾಮನು ಪಯಣ ಬೆಳೆಸಿದಾಗ ತಾವು ಸುಖವಾಗಿ ನಿದ್ರೆಹೋಗುತ್ತಿದ್ದೆವೆನ್ನುವುದೆ? ಏನು ಮಾಡಬೇಕೆಂಬುದೆ ತೋಚದಷ್ಟು ಮೂಢರಾಗಿ ಅವರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ಶ್ರೀರಾಮನ ವನವಾಸದಲ್ಲಿ ಮೊದಲರಾತ್ರಿಯನ್ನು ಅವನೊಡನೆ ತಾವು ಕಳೆದೆವೆಂಬ ಸಮಾಧಾನವೆಷ್ಟೋ ಅಷ್ಟೇ ಅವರಿಗೆ ದೊರೆ ತಂತಾಯಿತು.

---

೧೦

# ಗುಹನ ಕೆಳೆ

ಪುರಜನರ ಕಣ್ಮರೆಸಿ ಪಯಣ ಬೆಳಸಿದ ಶ್ರೀರಾಮಾದಿಗಳು ಬೆಳಕು ಹರಿಯುವ ವೇಳೆಗೆ ಕೋಸಲದೇಶದ ಎಲ್ಲೆಯನ್ನು ಸಮೀಪಿಸಿದರು. ಶ್ರೀರಾಮನು ಹೊಲಗಳಲ್ಲಿದ್ದ ಬೆಳೆಗಳನ್ನೂ ಪುಷ್ಪಿತಗಳಾದ ತೋಟಗಳನ್ನೂ ಸೀತೆಗೆ ತೋರುತ್ತಾ, ಸುಮಂತ್ರನೊಡನೆ ಮೃಗಯಾವಿನೋದವನ್ನು ವರ್ಣಿಸುತ್ತಾ ತನ್ನ ರಾಜ್ಯದ ಎಲ್ಲೆಯನ್ನು ದಾಟಿದನು. ಒಡನೆಯೆ ಆತನು ರಥದಿಂದ ಕೆಳಕ್ಕಿಳಿದು ಮುಗಿದ ಕೈಗಳಿಂದ ಅಯೋಧ್ಯಾ ಪಟ್ಟಣಕ್ಕೆ ಅಭಿಮುಖನಾಗಿ ನಿಂತು "ಎಲೈ ಪುರಶ್ರೇಷ್ಠನೆ, ವನವಾಸಕ್ಕೆ ಹೋಗಲು ದಯವಿಟ್ಟು ಅನುಮತಿಯನ್ನು ನೀಡು. ಹದಿನಾಲ್ಕು ವರ್ಷಗಳ ವನವಾಸದಿಂದ ನನ್ನ ತಂದೆಯನ್ನು ಋಣವಿಮುಕ್ತನನ್ನಾಗಿ ಮಾಡಿದೊಡನೆಯೆ ಹಿಂದಿರುಗಿ ಬಂದು ನಿನ್ನನ್ನೂ ನನ್ನ ತಾಯಿ ತಂದೆಗಳನ್ನೂ ನೋಡುತ್ತೇನೆ" ಎಂದು ಪ್ರಾರ್ಥಿಸಿದನು. ಅಷ್ಟರಲ್ಲಿ ಸಮೀಪದ ಹಳ್ಳಿಯಿಂದ ಬಂದು ದೀನವದನದಿಂದ ನೋಡುತ್ತಾ ನಿಂತಿದ್ದ ಜನರನ್ನು ಬೀಳ್ಕೊಂಡು ಪ್ರಯಾಣ ವನ್ನು ಮುಂದುವರಿಸಿದನು. ದೇಶದ ಎಲ್ಲೆಗೆ ಸ್ವಲ್ಪ ದೂರದಲ್ಲಿಯೆ ಪಾವನವಾದ ದೇವ ಗಂಗಾನದಿ ಹರಿಯುತ್ತಿತ್ತು. ಶುಭ್ರಧವಳಕಾಂತಿಯಿಂದ ಹೊಳೆಯುತ್ತಿದ್ದ ಆ ನದಿಯನ್ನು ದೂರದಿಂದ ಕಾಣುತ್ತಿದ್ದಂತೆಯೆ ಶ್ರೀರಾಮನು ಭಕ್ತಿಯಿಂದ ಅದಕ್ಕೆ ವಂದನೆ ಸಲ್ಲಿಸಿದನು. ಆ ನದಿಯ ಇಕ್ಕೆಲಗಳಲ್ಲಿಯೂ ದಟ್ಟವಾಗಿ ಬೆಳೆದಿರುವ ವೃಕ್ಷಗಳಲ್ಲಿನ ಪುಷ್ಪಗಳು, ಬಗೆಬಗೆ ಯಾದ ಹಕ್ಕಿಗಳ ಇಂಪಾದಗಾನ, ನದಿಯ ಪಾತ್ರದಲ್ಲಿ ಅಲ್ಲಲ್ಲಿ ಕಾಣುತ್ತಿರುವ ಮರಳು ದಿಣ್ಣೆಗಳು, ಕುಣಿಕುಣಿದು ಹರಿಯುತ್ತಿರುವ ಪ್ರವಾಹ, ನಾನಾ ಜಲಚರಗಳು— ಇವುಗಳಿಂದ ಮನೋಹರವಾಗಿದ್ದ ಆ ನದೀತೀರದಲ್ಲಿಯೆ ಅಂದು ತಂಗಬೇಕೆನ್ನಿಸಿತು, ಆತನಿಗೆ. ಸುಮಂತ್ರನನ್ನು ಕುರಿತು, "ಎಲೈ ಸಾರಥಿಯೆ, ಮೊಗ್ಗೊಡೆದು, ಹೂ ಮೊಳೆತು ಫಲಭರಿತವಾಗಿರುವ ಈ ಇಂಗುದೀ ವೃಕ್ಷದ ಕೆಳಗಡೆಯಲ್ಲಿಯೆ ಇಳಿದುಕೊಂಡು ಮುಕ್ತಿಪ್ರದವಾದ ಗಂಗಾನದಿಯನ್ನು ಸೇವೆ ಮಾಡೋಣ" ಎಂದು ಹೇಳಿದನು. ರಥವನ್ನು ಆ ಮರದ ಬುಡದಲ್ಲಿಯೆ ನಿಲ್ಲಿಸಿ ಎಲ್ಲರೂ ಅದರಡಿಯ ಕೊಡೆನೆಳಲಲ್ಲಿ ಇಳಿದುಕೊಂಡರು.

ಗಂಗಾನದಿಯ ತೀರದಲ್ಲಿದ್ದ ಕಾಡಿಗೆಲ್ಲ ಗುಹನೆಂಬ ಬೇಡನು ರಾಜನಾಗಿದ್ದನು. ಆತನು ಶ್ರೀರಾಮನ ಪರಮಸ್ನೇಹಿತ. ರಾಮನು ಅಲ್ಲಿಗೆ ಬಂದಿರುವ ಸುದ್ದಿ ಆತನ ಕಿವಿಗೆ ಮುಟ್ಟಿತು. ಒಡನೆಯೆ ಆತನು ತನ್ನ ಮಂತ್ರಿಗಳಿಂದಲೂ ಬಂಧುಗಳಿಂದಲೂ ಸಹಿತನಾಗಿ ಷಡ್ರಸೋಪೇತವಾದ ಆಹಾರದೊಡನೆ ಶ್ರೀರಾಮನ ಬಳಿಗೆ ಬಂದನು. ಶ್ರೀರಾಮನ ಋಷಿ ವೇಷವನ್ನು ಕಂಡು ಆತನಿಗೆ ಬಹು ಸಂತಾಪವಾಯಿತು. ಅಯೋಧ್ಯೆಯ ವೃತ್ತಾಂತವನ್ನೆಲ್ಲ

ತಿಳಿದುಕೊಂಡವನಾಗಿ ಆತನು ಶ್ರೀರಾಮನನ್ನು ತನ್ನ ರಾಜ್ಯದಲ್ಲಿಯೆ ನಿಲ್ಲುವಂತೆ ಪ್ರಾರ್ಥಿಸಿದನು. "ಎಲೈ ಮಹಾಬಾಹು, ಈ ಭೂಮಂಡಲವೆಲ್ಲವೂ ನಿನಗೇ ಸೇರಿದುದು. ನಾವೆಲ್ಲರೂ ನಿನ್ನ ಸೇವಕರು. ಈ ರಾಜ್ಯವನ್ನು ಸ್ವೀಕರಿಸಿ, ನಮ್ಮನ್ನೆಲ್ಲಾ ಪರಿಪಾಲಿಸುತ್ತಾ ಇಲ್ಲಿಯೆ ನಿಲ್ಲು" ಎಂದು ಹೇಳಿದನು. ಗೆಳೆಯನ ನುಡಿಗಳಿಗೆ ಉತ್ತರ ವಾಗಿ ಶ್ರೀರಾಮನು ಆತನನ್ನು ಗಾಢವಾಗಿ ಆಲಿಂಗಿಸಿಕೊಂಡನು. "ಮಿತ್ರನೆ, ನಿನ್ನ ಸ್ನೇಹಪ್ರದರ್ಶನದಿಂದ ಅತ್ಯಂತ ಸಂತುಷ್ಟನಾಗಿದ್ದೇನೆ. ನಾನೀಗ ಪಿತೃವಾಕ್ಯಪರಿಪಾಲನೆ ಗಾಗಿ ಋಷಿಜೀವನವನ್ನು ಕೈಗೊಂಡಿದ್ದೇನೆ. ಫಲಮೂಲಗಳನ್ನಲ್ಲದೆ ಬೇರೊಂದನ್ನು ಭುಂಜಿಸೆನು. ಈ ಕುದುರೆಗಳಿಗೆ ಸ್ವಲ್ಪ ಮೇವನ್ನು ಕೊಟ್ಟರೆ ಸಾಕು. ಮತ್ತೇನೂ ಬೇಡ. ನಮ್ಮ ತಂದೆಗೆ ಇವುಗಳಲ್ಲಿ ಬಹು ಮಮತೆ. ಇವು ತೃಪ್ತಿಹೊಂದಿದರೆ ನಾನೂ ಸುಪ್ರೀತನಾದಂತೆಯೆ" ಎಂದು ಹೇಳಿದನು.

ಆ ರಾತ್ರಿಯೆಲ್ಲವೂ ಗುಹನು ಶ್ರೀರಾಮನ ಬಳಿಯಲ್ಲಿಯೆ ನಿಂತನು. ಆತನೂ ಲಕ್ಷ್ಮಣನೂ ಶ್ರೀರಾಮನ ಗುಣಗಳನ್ನು ಕೊಂಡಾಡುತ್ತಾ, ವಿಶ್ರಮಿಸುತ್ತಿದ್ದ ಸೀತಾರಾಮರಿಗೆ ಕಾವಲಾಗಿ ಕುಳಿತಿದ್ದರು. ಗುಹನು ತನ್ನ ಗೆಳೆಯನ ರಕ್ಷಣೆಗಾಗಿ ತಾನು ನಿಂತಿರುವಾಗ ಸುಕುಮಾರನಾದ ಲಕ್ಷ್ಮಣನು ವಿಶ್ರಾಂತಿ ಹೊಂದಬಹುದೆಂದು ಹೇಳಿ ದನು. ಆದರೆ ಅಣ್ಣ ಅತ್ತಿಗೆಯರು ಹಾಗೆ ನೆಲದ ಮೇಲೆ ಮಲಗುವಂತಹ ದುಃಸ್ಥಿತಿ ಯಿರುವಾಗ ತನಗೆ ನಿದ್ರೆ ಬರುವುದು ಅಸಾಧ್ಯವೆಂದು ಹೇಳಿ ಲಕ್ಷ್ಮಣನು ಆತನ ಜೊತೆಯಲ್ಲಿಯೆ ಕಾದು ಕುಳಿತಿದ್ದನು. ಅಯೋಧ್ಯೆಯಲ್ಲಿ ಆ ವೇಳೆಗೆ ಏನೇನು ಅನರ್ಥ ನಡೆದಿರಬಹುದೆಂದು ಊಹಿಸುತ್ತಾ ಲಕ್ಷ್ಮಣನು ಗುಹನೊಡನೆ ಅದನ್ನು ವಿವರಿಸುತ್ತಾ ಕುಳಿತಿರುವಷ್ಟರಲ್ಲಿ ಆ ರಾತ್ರಿ ಕಳೆದು ಬೆಳ್ಳಂಬೆಳಗಾಯಿತು. ಆದಷ್ಟು ಬೇಗ ಗಂಗಾ ನದಿಯನ್ನು ದಾಟಿಹೋಗಬೇಕೆಂದು ಶ್ರೀರಾಮನು ನಿಶ್ಚಯಿಸಿದನು. ಆದುದರಿಂದ ದೊಡ್ಡ ದೋಣಿಯೊಂದನ್ನು ಸಿದ್ಧಪಡಿಸುವಂತೆ ಗುಹನು ತನ್ನ ಕಡೆಯವರಿಗೆ ಆಜ್ಞಾಪಿಸಿ ದನು. ಕ್ಷಣಮಾತ್ರದಲ್ಲಿ ಬಲವಾದ ಒಂದು ದೋಣಿ ಪ್ರಯಾಣಕ್ಕೆ ಸಿದ್ಧವಾಯಿತು. ನಾವೆಯನ್ನೇರುವ ಮುನ್ನ ಶ್ರೀರಾಮನು ಸುಮಂತ್ರನನ್ನು ಕುರಿತು, "ಎಲೈ ಸಾರಥಿ, ಒಡನೆಯೆ ನೀನು ಅಯೋಧ್ಯೆಗೆ ಹಿಂದಿರುಗಿ ಮಹಾರಾಜರ ಸೇವೆಯಲ್ಲಿ ತತ್ಪರನಾಗಿರು. ಇನ್ನು ನಾನು ಕಾಲ್ನಡಿಗೆಯಿಂದಲೆ ಪ್ರಯಾಣವನ್ನು ಮುಂದುವರಿಸುತ್ತೇನೆ. ನನಗೆ ಹೋಗಿ ಬರಲು ಅನುಮತಿ ಕೊಡು" ಎಂದನು.

ಸುಮಂತ್ರನಿಗೆ ಶ್ರೀರಾಮನನ್ನು ಅಗಲುವುದೆಂದರೆ ಅತಿ ದಾರುಣವಾದ ವ್ಯಥೆ ಯಾಯಿತು. ಅದನ್ನು ಸಹಿಸಲಾರದೆ ಆತನು ಎಳೆಯ ಮಗುವಿನಂತೆ ಅತ್ತುಬಿಟ್ಟನು. ಶ್ರೀರಾಮನು ಆತನನ್ನು ಸಮಾಧಾನಪಡಿಸಿ, ತಂದೆಗೂ ತಾಯಿಯರಿಗೂ ತನ್ನ ಮತ್ತು ಸೀತಾಲಕ್ಷ್ಮಣರ ನಮಸ್ಕಾರಗಳನ್ನು ಅರುಹುವಂತೆ ಹೇಳಿದನು. ಅನಂತರ ಗುಹನಿಂದ ಆಲದ ಹಾಲನ್ನು ತರಿಸಿ, ಅದರ ಲೇಪನ ಸಹಾಯದಿಂದ ತಾನೂ ಲಕ್ಷ್ಮಣನೂ ಜಟಾಧಾರಿಗಳಾಗಿ ಸೀತೆಯೊಡನೆ ನಾವೆಯನ್ನೇರಿದರು. ನಿಷಾದರಿಗೆಲ್ಲ ಅಧಿಪತಿಯಾದ

ಗುಹನು ತನ್ನವರಿಗೆ ನಾವೆಯನ್ನು ನಡಸಲು ಆಣತಿಯಿತ್ತನು. ಮಂದಗಮನದಿಂದ ನಾವೆ ಮುಂದುವರಿಯಿತು. ನದಿಯ ಮಧ್ಯಭಾಗವನ್ನು ಸೇರಿದ ಮೇಲೆ ಸೀತಾದೇವಿ ಗಂಗೆಗೆ ಅಭಿನಂದಿಸಿ "ತಾಯಿ, ಗಂಗಾಮಾತೆ, ಧರ್ಮಶೀಲರಾದ ರಾಮ ಲಕ್ಷ್ಮಣರೊಡನೆ ನಾನು ವನವಾಸವನ್ನು ಮುಗಿಸಿ ಸುಕ್ಷೇಮದಿಂದ ಹಿಂದಿರುಗುವಂತೆ ಅನುಗ್ರಹಿಸು. ಹಾಗೆ ನಾವು ಹಿಂತಿರುಗಿ ಪುನಃ ರಾಜ್ಯಭಾರದಲ್ಲಿ ನೆಲಸಿದ ಮೇಲೆ ರಸವತ್ತಾದ ಮಾಂಸಾನ್ನವನ್ನೂ ಸುರಾಘಟಗಳನ್ನೂ ನಿನಗರ್ಪಿಸಿ, ನಿನ್ನ ಪ್ರೀತ್ಯರ್ಥವಾಗಿ ದಾನ ಧರ್ಮಗಳನ್ನೂ ಮಾಡುತ್ತೇನೆ" ಎಂದು ಹರಸಿಕೊಂಡಳು. ಆಕೆಯ ಪ್ರಾರ್ಥನೆ ಮುಗಿಯುವಷ್ಟರಲ್ಲಿ ನಾವೆ ದಡವನ್ನು ಸೇರಿತು. ಮೂವರೂ ಅದರಿಂದ ಇಳಿದು ಕಾಲ್ನಡಿಗೆಯಿಂದ ತಮ್ಮ ವನಪ್ರಯಾಣವನ್ನು ಮುಂದುವರಿಸಿದರು.

ಮತ್ತೊಂದು ದಡದಲ್ಲಿ ನಿಂತು ನಟ್ಟ ದೃಷ್ಟಿಯಿಂದ ಇವರ ಕಡೆಗೇ ನೋಡುತ್ತ ನಿಂತಿದ್ದ ಗೆಳೆಯ ಗುಹನೂ ಸಾರಥಿ ಸುಮಂತ್ರನೂ ಅವರು ಕಣ್ಮರೆಯಾಗುತ್ತಲೆ ನಿಟ್ಟುಸಿರುಬಿಟ್ಟು ಅಲ್ಲಿಂದ ಹಿಂದಿರುಗಿದರು.

---

# ಚಿತ್ರಕೂಟದಲ್ಲಿ ಪರ್ಣಶಾಲೆ

ಸೀತಾರಾಮಲಕ್ಷ್ಮಣರು ಗಂಗಾನದಿಯನ್ನು ದಾಟಿ ಘೋರಾರಣ್ಯವನ್ನು ಪ್ರವೇಶಿಸಿದರು. ಮಾರ್ಗವನ್ನು ತೋರಿಸುತ್ತಾ ಎಲ್ಲರಿಗೂ ಮುಂದೆ ಲಕ್ಷ್ಮಣ ಹೊರಟನು. ಆತನ ಹಿಂದೆ ಸೀತೆ ಪ್ರಯಾಣ ಮಾಡಿದಳು. ಅವರಿಬ್ಬರನ್ನೂ ಸಂರಕ್ಷಿಸುತ್ತಾ ಶ್ರೀರಾಮನು ಹಿಂದೆ ಬರುತ್ತಿದ್ದನು. ವನವಾಸದ ಕಷ್ಟವೇನೆಂಬುದನ್ನು ಇದುವರೆಗೂ ಅವರು ಅರಿತಿರಲಿಲ್ಲ. ಅದು ಈಗ ಸ್ವಲ್ಪಸ್ವಲ್ಪವಾಗಿ ಅನುಭವಕ್ಕೆ ಬರಲು ಮೊದಲಾಯಿತು.

ಮಧ್ಯಾಹ್ನದ ವೇಳೆಗೆ ಹಸಿವು ಬಳಲಿಕೆಗಳು ಹೆಚ್ಚಾದುವು. ಆಗ ಜಿಂಕೆಯೊಂದನ್ನು ಬೇಟೆಯಾಡಿ ಅದರ ಮಾಂಸದಿಂದ ಹಸಿವನ್ನಡಗಿಸಿಕೊಂಡರು. ಸಂಜೆಯುವರೆಗೂ ಪ್ರಯಾಣಮಾಡಿ ದೊಡ್ಡದೊಂದು ವೃಕ್ಷದ ಕೆಳಗೆ ಆ ರಾತ್ರಿ ತಂಗಿದರು. ಲಕ್ಷ್ಮಣನು ಅಣ್ಣನಿಗಾಗಿ ಚಿಗುರಿನಿಂದ ಹಾಸಗೆಯೊಂದನ್ನು ತಯಾರಿಸಿದನು. ಆತನು ಅದರ ಮೇಲೆ ಕುಳಿತು ತಮ್ಮನನ್ನು "ವತ್ಸ, ಇಂದಿನಿಂದ ನಾವು ರಾತ್ರಿಯ ಕಾಲಗಳಲ್ಲಿ ಮೈಮರೆತು ನಿದ್ರಿಸದೆ ಎಚ್ಚರಿಕೆಯಿಂದಿರಬೇಕು. ಸೀತಾಸಂರಕ್ಷಣೆಯ ಕಾರ್ಯದಲ್ಲಿ ನಾವಿಬ್ಬರೂ ಮೈಯೆಲ್ಲಾ ಕಣ್ಣಾಗಿರಬೇಕು" ಎಂದು ಎಚ್ಚರಿಸಿದನು. ಅಯೋಧ್ಯೆಯಿಂದ ಅಷ್ಟು ದೂರ ಬಂದಿದ್ದರೂ ಆತನ ಜೀವವೆಲ್ಲವೂ ಅಯೋಧ್ಯೆಯಲ್ಲಿ ಇದ್ದಂತೆ ಆಗಿತ್ತು. ಕೈಕೆಯಿಂದ ದಶರಥನಿಗೆ ಎಷ್ಟು ನೋವಾಯಿತು! ಆಕೆ ಲೋಭಿಯಾಗಿ ಎಂತಹ ಅನರ್ಥವುಂಟುಮಾಡಿದಳು! ತನ್ನ ತಾಯಿಯಾದ ಕೌಸಲ್ಯೆಗೆ ಆಕೆಯಿಂದ ಇನ್ನೂ ಏನೇನು ವಿಪತ್ತುಗಳು ಕಾದಿವೆಯೋ? ಆಲೋಚಿಸುತ್ತಾ ಇದ್ದಹಾಗೆ ಶ್ರೀರಾಮನಿಗೆ ಲಕ್ಷ್ಮಣನನ್ನು ಹಿಂದಕ್ಕೆ ಕಳುಹಿಸಿಬಿಡಬೇಕು ಎನ್ನಿಸಿತು. ಆತನು ಹಿಂದಿರುಗಿದರೆ ತನ್ನ ಮುಪ್ಪಿನ ತಾಯ್ತಂದೆಗೆ ಇನಿತಾದರೂ ಸಮಾಧಾನವಾಗುತ್ತದೆಂದು ಆತನ ಆಶಯ. ಆದರೆ ಲಕ್ಷ್ಮಣನು ಇದಕ್ಕೆ ಒಪ್ಪಿಯಾನೆ? "ನೀನಿಲ್ಲದೆ ನನಗೆ ಸ್ವರ್ಗವೂ ರುಚಿಸದು; ನಿನ್ನನ್ನು ಅಗಲಿ ನಾನು ಜೀವಿಸಲಾರೆ" ಎಂದು ಹೇಳಿದನು. ಅವರು ಹೀಗೆ ಪರಸ್ಪರ ಮಾತನಾಡುತ್ತಿರುವಂತೆಯೆ ರಾತ್ರಿ ಕಳೆದು ಮೂಡಲು ಕೆಂಪೇರಿತು. ಮೂವರೂ ಉಪ್ಪವಡಿಸಿ ಪ್ರಾತಃಕರ್ಮಗಳನ್ನು ಮುಗಿಸಿ ತಮ್ಮ ಪ್ರಯಾಣವನ್ನು ಮುಂದುವರಿಸಿದರು.

ಕಾಡುಹಾದಿಯಲ್ಲಿ ನಡೆದೂ ನಡೆದೂ ಮಧ್ಯಾಹ್ನದ ವೇಳೆಗೆ ಗಂಗಾ-ಯಮುನಾ ಸಂಗಮದೆಡೆಗೆ ಸೇರಿದರು. ದೂರದಿಂದಲೇ ಅವರಿಗೆ ಯಜ್ಞೇಶ್ವರನ ಪತಾಕೆಯಂತಿದ್ದ ಹೋಮಧೂಮ ಕಾಣಿಸಿತು. ಅದನ್ನೇ ಗುರುತಾಗಿಟ್ಟುಕೊಂಡು ಹೋಗಲು

ಭರದ್ವಾಜಾಶ್ರಮ ಗೋಚರಿಸಿತು. ಮೂವರೂ ಆಶ್ರಮವನ್ನು ಪ್ರವೇಶಿಸಿ, ಅಲ್ಲಿದ್ದ ಮಹರ್ಷಿಗೆ ಭಕ್ತಿಯಿಂದ ನಮಸ್ಕರಿಸಿದರು. ಶ್ರೀರಾಮನು ತಮ್ಮ ವೃತ್ತಾಂತವನ್ನೆಲ್ಲ ಮಹರ್ಷಿಯಲ್ಲಿ ವಿಜ್ಞಾಪಿಸಿಕೊಂಡನು. ಅದನ್ನು ಕೇಳಿ ಸುಪ್ರೀತನಾದ ಭರದ್ವಾಜ ಮಹರ್ಷಿ ಮಾನ್ಯರಾದ ಅತಿಥಿಗಳನ್ನು ಅತ್ಯಾದರದಿಂದ ಸತ್ಕರಿಸಿ, ವಾಸಯೋಗ್ಯವಾದ ಆ ಪ್ರದೇಶದಲ್ಲಿಯೇ ಅವರು ವನವಾಸದ ಅವಧಿಯನ್ನು ಕಳೆಯುವಂತೆ ತಿಳಿಸಿದನು. ಆದರೆ ಶ್ರೀರಾಮನು ಅದಕ್ಕೆ ಸಮ್ಮತಿಸಲಿಲ್ಲ. ಏಕೆಂದರೆ ಅಯೋಧ್ಯಾಪಟ್ಟಣಕ್ಕೂ ಕೋಸಲ ದೇಶಕ್ಕೂ ಸಮೀಪವಾಗಿತ್ತು ಆ ಆಶ್ರಮ. ಅದು ಗೊತ್ತಾದರೆ ಜನರು ತಮ್ಮನ್ನು ಅರಸುತ್ತಾ ಬರುವ ಸಂಭವವುಂಟು. ಆದ್ದರಿಂದ ತಾವು ಇನ್ನೂ ದೂರ ಪ್ರದೇಶಕ್ಕೆ ಹೋಗಬೇಕಾಗಿದೆ. ಆ ಪ್ರದೇಶದಲ್ಲಿ ನೀರು ನೆರಳಿಗೂ ಗೆಡ್ಡೆಗೆಣಸುಗಳಿಗೂ ಅಭಾವವಿರಕೂಡದು. ಆದರೆ ಏಕಾಂತ ಸ್ಥಳವಾಗಿರಬೇಕು. ವಾಸಯೋಗ್ಯವಾದ ಅಂತಹ ಪ್ರದೇಶವಾವುದು ? ಭರದ್ವಾಜರು ಅಂತಹ ಸ್ಥಳವನ್ನೇ ಶ್ರೀರಾಮನಿಗೆ ಸೂಚಿಸಿದರು. ಅವರ ಆಶ್ರಮದಿಂದ ಹತ್ತು ಕ್ರೋಶಗಳ ದೂರದಲ್ಲಿ ಚಿತ್ರಕೂಟವೆಂಬುದೊಂದು ಪರ್ವತವುಂಟು. ಅದು ಅನೇಕ ಸಸ್ಯಸಂಪತ್ತಿನಿಂದ ಸಮೃದ್ಧವಾದದ್ದು ; ಪಕ್ಷಿ ಸಮೂಹಗಳ ಮಧುರಗಾನದಿಂದ ಮನೋಹರವಾದದ್ದು ; ಅನೇಕ ಋಷಿಗಳು ಅದರಲ್ಲಿ ತಮ್ಮ ಆಶ್ರಮಗಳನ್ನು ಮಾಡಿಕೊಂಡಿರುವರು ; ಅಲ್ಲಿ ಶ್ರೀರಾಮನು ತನ್ನ ಮಡದಿ ಯೊಡನೆಯೂ ತಮ್ಮನೊಡನೆಯೂ ಸುಖವಾಗಿ ಸತ್ಕಾಲಕ್ಷೇಪವನ್ನು ನಡೆಸ ಬಹುದು—ಎಂದು ಭರದ್ವಾಜರು ತಿಳಿಸಿದರು. ಹೀಗೆ ಅವರು ಮಾತನಾಡುತ್ತಾ ಇರುವಷ್ಟರಲ್ಲಿ ಸಾಯಂಕಾಲವಾಗಲು ಶ್ರೀರಾಮನು ಆ ದಿನ ರಾತ್ರಿ ಅಲ್ಲಿಯೇ ತಂಗಿದನು.

ಮರುದಿನ ಬೆಳಿಗ್ಗೆ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಪ್ರಯಾಣ ಸನ್ನದ್ಧ ನಾಗಲು, ಭರದ್ವಾಜನು ಅವರಿಗೆ ಚಿತ್ರಕೂಟದ ಮಾರ್ಗವನ್ನು ವಿವರಿಸುತ್ತಾ ಸ್ವಲ್ಪ ದೂರದವರೆಗೆ ಅವರನ್ನು ಸಾಗಕಳುಹಿಸಿ, ತನ್ನ ಆಶ್ರಮಕ್ಕೆ ಹಿಂದಿರುಗಿದನು. ಚಿತ್ರ ಕೂಟಕ್ಕೆ ಹೋಗಬೇಕಾದರೆ ಯಮುನಾ ನದಿಯನ್ನು ದಾಟಬೇಕು. ಆದರೆ ಅದು ಬಹು ವೇಗವಾಗಿ ಪ್ರವಹಿಸುತ್ತಿತ್ತು. ಕಾಲ್ನಡಿಗೆಯಲ್ಲಿ ಅದನ್ನು ದಾಟುವುದು ಸಾಧ್ಯ ವಿರಲಿಲ್ಲ. ಆದ್ದರಿಂದ ರಾಮ ಲಕ್ಷ್ಮಣರು ಕಟ್ಟಿಗೆಗಳಿಂದಲೂ ಒಣಗಿದ ಬಿದಿರುಗಳಿಂದಲೂ ಒಂದು ತೆಪ್ಪವನ್ನು ಮಾಡಿ ಅದನ್ನು ಲಾವಂಚದ ಬಳ್ಳಿಯಿಂದ ಬಲವಾಗಿ ಬಿಗಿದರು. ಅದರ ಮೇಲೆ ಎಳೆಯ ರೆಂಬೆಗಳನ್ನೂ ಚಿಗುರುಗಳನ್ನೂ ಹಾಕಿ ಸೀತಾದೇವಿಗಾಗಿ ಒಂದು ಮೆತ್ತನೆಯ ಆಸನವನ್ನು ತಯಾರಿಸಿದರು. ಅನಂತರ ಶ್ರೀರಾಮನು ಲಜ್ಜೆ ಯಿಂದ ನಸುಬಾಗಿ ಮುಗುಳ್ನಗೆ ನಗುತ್ತಿದ್ದ ಸೀತಾದೇವಿಯನ್ನು ತಾನೇ ಕೈಹಿಡಿದು ಕರೆತಂದು ತೆಪ್ಪಕ್ಕೆ ಹತ್ತಿಸಿದನು. ಆಕೆಯ ವಸ್ತ್ರಾಭರಣಗಳನ್ನು ತೆಪ್ಪಕ್ಕೇರಿಸಿದ ಮೇಲೆ ರಾಮಲಕ್ಷ್ಮಣರು ಅದನ್ನೇರಿ ಮುಂಬರಿದರು. ಅವರು ನದಿಯ ಮೇಲಿದ್ದಷ್ಟು ಕಾಲವೂ ಸೀತಾದೇವಿ ಯಮುನೆಯನ್ನು ಕುರಿತು "ತಾಯೀ, ನನ್ನ ಪತಿ ವನವಾಸ ವ್ರತವನ್ನು

ಮುಗಿಸಿಕೊಂಡು ಸುಕ್ಷೇಮದಿಂದ ಹಿಂದಿರುಗುವಂತೆ ಅನುಗ್ರಹಿಸು. ಅಯೋಧ್ಯೆಯನ್ನು ಸೇರಿದ ಮೇಲೆ ನಿನ್ನ ಪ್ರೀತ್ಯರ್ಥವಾಗಿ ಸಾವಿರಾರು ಗೋದಾನಗಳನ್ನು ಮಾಡಿ, ನೂರಾರು ಘಟಗಳ ಮದ್ಯವನ್ನು ನಿನಗರ್ಪಿಸುವೆನು" ಎಂದು ಪ್ರಾರ್ಥಿಸಿದಳು.

ಯಮುನೆಯ ಆ ಕಡೆಯ ತಡಿಯನ್ನು ಸೇರಿದೊಡನೆಯೆ ಸೀತಾರಾಮಲಕ್ಷ್ಮಣರು ತೆಪ್ಪದಿಂದ ಕೆಳಗಿಳಿದು ಚಿತ್ರಕೂಟಾಭಿಮುಖವಾಗಿ ಹೊರಟರು. ಎರಡು ಗಂಡಾನೆಗಳ ಮಧ್ಯದಲ್ಲಿ ಹೋಗುವ ಹೆಣ್ಣಾನೆಯಂತೆ ರಾಮಲಕ್ಷ್ಮಣರ ನಡುವೆ ನಡೆಯುತ್ತಿದ್ದ ಸೀತೆ ತಾನೆಂದೂ ಕಾಣದ ಮರವನ್ನೋ ಬಳ್ಳಿಯನ್ನೋ ಶ್ರೀರಾಮನಿಗೆ ತೋರಿಸಿ ಅದರ ಹೆಸರನ್ನು ಕೇಳಿ ತಿಳಿದುಕೊಳ್ಳುವಳು. ಒಮ್ಮೊಮ್ಮೆ ಮನೋಹರವಾಗಿದ್ದ ಪುಷ್ಪವನ್ನೊ ಫಲವನ್ನೊ ಕಂಡು ಆಕೆ ಅದನ್ನು ಆಶಿಸುವಳು. ಒಡನೆಯೆ ಆ ಸೋದರರಲ್ಲಿ ಒಬ್ಬನು ಅದನ್ನು ಆಕೆಗೆ ತಂದುಕೊಡುವನು. ಅವುಗಳನ್ನು ಕಂಡು ಸೀತೆಯ ಮುಖ ಅರಳುವುದು. ಹೀಗೆ ಸಂತೋಷದಿಂದ ಮಾರ್ಗಕ್ರಮಣ ಮಾಡುತ್ತಾ ಎರಡು ದಿನಗಳಲ್ಲಿ ಚಿತ್ರಕೂಟ ಪರ್ವತದ ತಪ್ಪಲನ್ನು ಸೇರಿದರು. ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಕಂಡು ಸೀತಾರಾಮಲಕ್ಷ್ಮಣರ ಆನಂದಕ್ಕೆ ಪಾರವೇ ಇರದಾಯಿತು. ಶ್ರೀರಾಮನು ತನ್ನ ಮಡದಿಯನ್ನು ಕುರಿತು "ಎಲೆ ಕಮಲನೇತ್ರೆ, ಅಲ್ಲಿ ನೋಡು. ಪುಷ್ಪಸಮೃದ್ಧಿಯಿಂದ ಆ ವೃಕ್ಷಗಳು ಹೇಗೆ ಹೂದಂಡೆಗಳಿಂದ ಅಲಂಕೃತವಾದಂತೆ ಕಾಣುತ್ತಿವೆ. ಈಗತಾನೆ ಶಿಶಿರಋತು ಕಳೆದು ವಸಂತಋತು ಪ್ರಾಪ್ತವಾಗಿರುವುದರಿಂದ ಮುತ್ತುಗದ ಮರಗಳು ಪುಷ್ಪಭರಿತವಾಗಿ ಜ್ವಲಿಸುತ್ತಿರುವಂತೆ ಕಾಣುತ್ತಿವೆ. ಫಲಭರಿತವಾದ ಆ ಗೇರು ಮರಗಳನ್ನು ನೋಡು. ಇಷ್ಟು ದೂರ ಬಂದು ಹಣ್ಣು ಕೀಳುವವರೆ ಯಾರೂ ಇಲ್ಲವೆಂದು ತೋರುತ್ತದೆ. ಆದ್ದರಿಂದಲೆ ಫಲಭಾರದಿಂದ ರೆಂಬೆಗಳೆಲ್ಲವೂ ನೆಲಕ್ಕೆ ಬಾಗಿಹೋಗಿವೆ. ಜಾನಕಿ, ಈ ಕಡೆ ನೋಡು. ಜೇನು ಹಲ್ಲೆಗಳು ಹೇಗೆ ಮರ ಮರದಲ್ಲಿಯೂ ಜೋಲು ಬಿದ್ದಿವೆ! ಒಂದೊಂದರಲ್ಲಿಯೂ ಬಹುಶಃ ಒಂದು ಕೊಳಗದಷ್ಟು ಜೇನುತುಪ್ಪ ದೊರೆಯಬಹುದು. ಇಲ್ಲಿ ನೆಲವೂ ಹೆಚ್ಚು ಹಳ್ಳತಿಟ್ಟುಗಳಿಲ್ಲದೆ ವಾಸಕ್ಕೆ ಯೋಗ್ಯವಾಗಿದೆ. ನಾವು ಇಲ್ಲಿಯೆ ಎಲ್ಲಿಯಾದರೂ ಒಂದು ಆಶ್ರಮವನ್ನು ಕಟ್ಟಿಕೊಳ್ಳಬಹುದು. ಪ್ರಿಯೆ, ಕೇಕಾಧ್ವನಿ! ಅದೋ ನೋಡು. ಗರಿಗೆದರಿ ನರ್ತಿಸುತ್ತಿರುವ ಆ ನವಿಲನ್ನು ನೋಡಿದೆಯಾ! ಆಹಾ ಅದೆಷ್ಟು ರಮ್ಯ ಈ ಪ್ರದೇಶ!" ಎಂದು ಬಣ್ಣಿಸಿದನು.

ಕಂದಮೂಲ ಫಲಗಳು ಸಮೃದ್ಧವಾಗಿದ್ದ ಆ ಪ್ರದೇಶದಲ್ಲಿಯೆ ವಾಸ ಮಾಡಬೇಕೆಂದು ಸೀತಾರಾಮಲಕ್ಷ್ಮಣರು ನಿಶ್ಚಯಿಸಿದರು.

ಚಿತ್ರಕೂಟ ಪರ್ವತದಲ್ಲಿ ನೂರಾರು ಋಷ್ಯಾಶ್ರಮಗಳಿದ್ದುವು. ಅವುಗಳಲ್ಲಿ ವಾಲ್ಮೀಕಿ ಋಷಿಗಳ ಆಶ್ರಮದ ಸಮೀಪದಲ್ಲಿಯೆ ಸೀತಾರಾಮಲಕ್ಷ್ಮಣರು ತಮ್ಮ ಪರ್ಣಶಾಲೆಯನ್ನು ನಿರ್ಮಿಸಿಕೊಂಡರು. ಆ ಪರ್ಣಶಾಲೆ ನೋಡುವುದಕ್ಕೆ ಅಂದವಾಗಿದ್ದುದಲ್ಲದೆ ಗಾಳಿಮಳೆಗಳನ್ನು ತಡೆಯುವುದಕ್ಕೆ ತಕ್ಕುದಾಗಿತ್ತು. ಅದರ ಸಮೀಪದಲ್ಲಿಯೆ

ಮಾಲ್ಯವತೀ ನದಿ ಹರಿಯುತ್ತಿತ್ತು. ಪರ್ಣಶಾಲೆಯ ಸುತ್ತಲೂ ರಂಗುರಂಗಿನ ಹೂಗೊಂಚಲುಗಳಿಂದ ಕಣ್ಮನಗಳನ್ನು ತಣಿಸುವ ಗಿಡಬಳ್ಳಿಗಳು ಬೆಳೆದಿದ್ದುವು. ಸದಾ ಕಾಲವೂ ಹಕ್ಕಿಗಳ ಕಲಕಲರವದಿಂದ ಕರ್ಣಾನಂದವಾಗುತ್ತಿತ್ತು. ಇಂತಹ ರಸಮಯ ವಾದ ಸನ್ನಿವೇಶದಲ್ಲಿದ್ದ ಸೀತಾರಾಮಲಕ್ಷ್ಮಣರಿಗೆ ತಾವು ಅಯೋಧ್ಯೆಯನ್ನು ಬಿಟ್ಟು ಬಂದುದೂ ಅರಣ್ಯದಲ್ಲಿ ವಾಸವಾಗಿದ್ದುದೂ ಮರೆತುಹೋಯಿತು. ಅವರು ಅತ್ಯಂತ ಸಂತೋಷದಿಂದ ಕಾಲಯಾಪನೆ ಮಾಡುತ್ತಾ ಇದ್ದರು.

---

## ೧೨

# ದಶರಥ ನಿರ್ಯಾಣ

ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಗಂಗಾನದಿಯನ್ನು ದಾಟಿ ಕಣ್ಮರೆಯಾದೊಡನೆಯೆ ಮಂತ್ರಿ ಸುಮಂತ್ರನು ಕಣ್ಣೀರು ಸುರಿಸುತ್ತಾ, ನಿಟ್ಟುಸಿರಿಟ್ಟು, ತನ್ನನ್ನೂ ರಥಾಶ್ವಗಳನ್ನೂ ಮನಸಾರೆ ಹಳಿದುಕೊಳ್ಳುತ್ತಾ ಅಯೋಧ್ಯೆಗೆ ಹಿಂತಿರುಗಿದನು. ಬರಿಯ ರಥದೊಡನೆ ಪುರಪ್ರವೇಶ ಮಾಡಿದ ಆತನನ್ನು ಕಾಣುತ್ತಲೆ ಪುರನಿವಾಸಿಗಳೆಲ್ಲರೂ ರಥದ ಸುತ್ತಲೂ ನೆರೆದು "ಶ್ರೀರಾಮನೆಲ್ಲಿ? ಎಲ್ಲಿದ್ದಾನೆ?" ಎಂದು ಉತ್ಸುಕರಾಗಿ ಪ್ರಶ್ನಿಸಿದರು. ಆತನು ಗಂಗಾನದಿಯನ್ನು ದಾಟಿ ಕಾಲ್ನಡಿಗೆಯಿಂದ ಅರಣ್ಯ ಪ್ರವೇಶ ಮಾಡಿದುದನ್ನು ಕೇಳಿ ಅವರೆಲ್ಲರೂ ಕಣ್ಣೀರುತುಂಬಿ "ಹಾ! ರಾಮಾ! ಹಾ! ರಾಮ!" ಎಂದು ರೋದಿಸಿದರು. ಆ ಗೋಳಿನ ಹೊಳೆಯಲ್ಲಿ ಈಸಾಡುತ್ತಾ ಸುಮಂತ್ರನು ಅರಮನೆಯನ್ನು ಪ್ರವೇಶಿಸಿದನು. ಆತನನ್ನು ಕಾಣುತ್ತಲೆ ದಶರಥನು ದುಃಖದಿಂದ ಮೂರ್ಛಿತನಾದನು. ರಾಣಿವಾಸದವರೆಲ್ಲರೂ ಗೊಳೋ ಎಂದು ಗಟ್ಟಿಯಾಗಿ ಅತ್ತರು. ಒಮ್ಮೆ ಆ ಗೋಳಿನ ತೆರೆ ಏರಿಬಂದು ನೆರೆವುಕ್ಕಿ ಹೋದಮೇಲೆ ದಶರಥನು ಸುಮಂತ್ರನನ್ನು ಕುರಿತು ವನವಾಸಿಗಳಾದ ತನ್ನ ಮಕ್ಕಳ ವಿಚಾರವಾಗಿ ಪ್ರಶ್ನೆಗಳ ಸುರಿಮಳೆಯನ್ನೆ ಕರೆದನು—"ಕಷ್ಟದ ಗಂಧವನ್ನೇ ಅರಿಯದ ಶ್ರೀರಾಮನು ಯಾವ ವೃಕ್ಷವನ್ನಾಶ್ರಯಿಸಿ ವಾಸಮಾಡುತ್ತಿದ್ದಾನೆ? ಏನು ಊಟ ಮಾಡಿಕೊಂಡಿದ್ದಾನೆ? ಅವನು ಮಲಗುವುದಕ್ಕೇನು ಮಾಡುತ್ತಾನೆ? ನೆಲದ ಮೇಲೆ ಕಾಲಿಟ್ಟರಿಯದ ಅವನು ವನದಲ್ಲಿ ಹೇಗೆ ಸಂಚರಿಸುತ್ತಾನೆ? ವನಪ್ರವೇಶ ಮಾಡುವ ಮುನ್ನ ಆತನು ನಿನ್ನೊಡನೆ ಏನು ಹೇಳಿದ? ಲಕ್ಷ್ಮಣನೇನೆಂದ? ಸುಕೋಮಲೆಯಾದ ಸೀತೆ ವನವಾಸದ ಕಷ್ಟವನ್ನು ಹೇಗೆ ಸಹಿಸುತ್ತಿದ್ದಾಳೆ? ನೀನು ಹೊರಟು ಬರುವ ಮುನ್ನ ಆಕೆ ಏನು ಹೇಳಿದಳು?"

ಸುಮಂತ್ರನು ಸೀತಾರಾಮಲಕ್ಷ್ಮಣರು ಅಡವಿಯಲ್ಲಿದ್ದ ಪರಿಯನ್ನು ತಿಳಿಸಿ, ಪ್ರತ್ಯೇಕ ಪ್ರತ್ಯೇಕವಾಗಿ ಪ್ರತಿಯೊಬ್ಬರಿಗೂ ಆತನು ಕಳುಹಿಸಿದ್ದ ಸಂದೇಶಗಳನ್ನು ವಿವರಿಸಿ ಹೇಳಿದನು: "ಶ್ರೀರಾಮನು ತಂದೆಗೂ ತಾಯಿಯರಿಗೂ ತನ್ನ ನಮಸ್ಕಾರಗಳನ್ನು ತಿಳಿಸುವಂತೆ ಹೇಳಿ, ಮಾತೆಯಾದ ಕೌಸಲ್ಯಾದೇವಿ ಮಹಾರಾಜರನ್ನು ಭಕ್ತಿಯಿಂದ ಸೇವಿಸುವಂತೆಯೂ ತಮ್ಮನಾದ ಭರತನು ವೃದ್ಧನಾದ ತಂದೆಗೆ ಅತ್ಯಂತ ವಿಧೇಯನಾಗಿ ವರ್ತಿಸುವಂತೆಯೂ ತಿಳಿಸಿದನು. ತಾಯಿಯನ್ನು ನೆನೆಯುತ್ತಲೆ ಆತನು ಕಂಬನಿ ತುಂಬಿ ಆಕೆಯನ್ನು ತನ್ನ ತಾಯಿಯಂತೆಯೆ ಕಾಣಬೇಕೆಂಬುದಾಗಿ ಭರತನಿಗೆ ತಿಳಿಸುವಂತೆ ಹೇಳಿದನು. ಲಕ್ಷ್ಮಣನಾದರೋ ನಿರಪರಾಧಿಗಳಾದ ತಾವು ವನವಾಸಕ್ಕೆ

ಗುರಿಯಾದುದಕ್ಕಾಗಿ ಕೈಕೆಯನ್ನೂ ಮಹಾರಾಜನನ್ನೂ ಕಟುವಾಗಿ ನಿಂದಿಸಿ 'ನನಗೆ ಅಣ್ಣನಾದ ಶ್ರೀರಾಮನೇ ಪ್ರಭು, ಆತನೇ ಬಂಧು. ತಂದೆ ಕೂಡಾ ಆತನೇ. ಲೋಕಪ್ರಿಯನಾದ ಆತನನ್ನು ಕಾಡಿಗಟ್ಟಿದ ಮಹಾರಾಜನು ಪ್ರಜೆಗಳ ಪರಮ ಶತ್ರುವೇ ಹೌದು. ಆತನು ರಾಜಕಾರ್ಯಗಳನ್ನು ನಿರ್ವಹಿಸುವುದು ಹೇಗೋ!' ಎಂದನು. ಮಂಗಳಾಂಗಿಯಾದ ಸೀತಾದೇವಿ ಏನನ್ನೂ ಹೇಳಲಿಲ್ಲ. ಮುಖದಲ್ಲಿ ಸದಾ ನರ್ತಿಸುತ್ತಿದ್ದ ಮುಗುಳ್ನಗೆ ಮಾದುಹೋಗಿ ದುಗುಡವಾವರಿಸಿತ್ತು. ಆಕೆ ಬಾಯಿಂದ ಮಾತಾಡಲಿಲ್ಲ. ಕಣ್ಣುಗಳಿಂದ ಒಮ್ಮೆ ಪತಿಯ ಕಡೆ ನೋಡಿ ನಿಟ್ಟುಸಿರು ಬಿಟ್ಟಳಷ್ಟೆ!"

ಗಂಗಾನದಿಯನ್ನು ದಾಟಿ ಆ ಮೂವರೂ ಪ್ರಯಾಣ ಮಾಡಿದುದನ್ನು ವಿವರಿಸುತ್ತಾ "ಜಟಾಧಾರಿಗಳಾಗಿ ವಲ್ಕಲವನ್ನುಟ್ಟ ರಾಮಲಕ್ಷ್ಮಣರು ಸೀತೆಯೊಡನೆ ಪ್ರಯಾಗ ಕ್ಷೇತ್ರದ ಕಡೆ ಹೊರಟರು. ಎಲ್ಲರಿಗೂ ಮುಂದೆ ಲಕ್ಷ್ಮಣಸ್ವಾಮಿ, ಆತನ ಹಿಂದೆ ಸೀತಾಮಾತೆ, ಅವರಿಬ್ಬರ ಹಿಂದೆ ಸಂರಕ್ಷಣೆಗಾಗಿ ಶ್ರೀರಾಮಚಂದ್ರ—ಈ ಕ್ರಮದಿಂದ ಅವರು ಪ್ರಯಾಣ ಮಾಡಿದರು. ಅವರ ವನಗಮನದಿಂದ ರಥದ ಕುದುರೆಗಳೂ ಕೂಡ ಕಣ್ಣೀರಿಡುತ್ತಾ ಹಿಂದಿರುಗಿದುವು" ಎಂದನು.

ಸುಮಂತ್ರನ ಮಾತುಗಳಿಂದ ದಶರಥನ ವ್ಯಥೆ ಶತಾಧಿಕವಾಗಿ ಉಲ್ಬಣಗೊಂಡಿತು. ಸ್ತ್ರೀವ್ಯಾಮೋಹದಿಂದ ತಾನು ಮಾಡಬಾರದುದನ್ನು ಮಾಡಿದಂತಾಯಿತು ; ಇದು ತನ್ನ ವಂಶನಾಶಕ್ಕೆ ಕಾರಣವಾಗಬಹುದು—ಎಂದುಕೊಂಡನು. ತನ್ನನ್ನು ಒಡನೆಯೆ ಶ್ರೀರಾಮನ ಬಳಿಗೆ ಕರೆದೊಯ್ಯುವಂತೆ ಸುಮಂತ್ರನಲ್ಲಿ ಮೊರೆಯಿಟ್ಟನು. ತನ್ನ ಪ್ರಾಣಗಳು ಶ್ರೀರಾಮನನ್ನಗಲಿ ಬಹುಕಾಲ ನಿಲ್ಲಲಾರವಾದುದರಿಂದ ಆತನನ್ನು ಕಾಣದೆಯೆ ತಾನು ಸಾಯಬೇಕಾಗುವುದೆಂದು ಹಲುಬಿದನು. ಆತನ ಮಾತುಗಳನ್ನು ಕೇಳಿ ಕೌಸಲ್ಯೆಗೂ ಶ್ರೀರಾಮನನ್ನು ಕಾಣಬೇಕೆಂಬ ಬಯಕೆ ಬಲಿಯಿತು. "ಸುಮಂತ್ರಾ, ಸೀತಾರಾಮಲಕ್ಷ್ಮಣರನ್ನು ಕಾಣದೆ ನಾನು ಕ್ಷಣಮಾತ್ರವೂ ಜೀವಿಸಲಾರೆ. ತತ್‌ಕ್ಷಣವೆ ರಥವನ್ನು ಸಜ್ಜುಗೊಳಿಸು. ಒಡನೆಯೆ ನನ್ನನ್ನು ದಂಡಕಾರಣ್ಯಕ್ಕೆ ಕರೆದುಕೊಂಡು ಹೋಗು" ಎಂದು ಮೊರೆಯಿಟ್ಟಳು. ಆಕೆಯನ್ನು ಸಮಾಧಾನಮಾಡುವುದರೊಳಗಾಗಿ ಸುಮಂತ್ರನಿಗೆ ಸಾಕುಸಾಕಾಯಿತು. "ಅಡವಿಯಲ್ಲಿದ್ದರೂ ಸೀತಾರಾಮಲಕ್ಷ್ಮಣರು ಸಂತೋಷದಿಂದಿರುವರು. ಪಿತೃವಾಕ್ಯಪರಿಪಾಲನೆಯಿಂದ ಶಾಶ್ವತವಾದ ಕೀರ್ತಿಗೆ ಪಾತ್ರನಾಗಿರುವ ಆತನನ್ನು ಕುರಿತು ಸಂತೋಷಪಡಬೇಕೇ ಹೊರತು ದುಃಖಿಸಬಾರದು" ಇತ್ಯಾದಿಯಾಗಿ ಎಷ್ಟೋ ಸಮಾಧಾನದ ಮಾತುಗಳನ್ನು ಸುಮಂತ್ರನು ಆಡಿದನು. ಆದರೂ ಆ ತಾಯಿಗೆ ಸಮಾಧಾನವಾಗದು. ಒಮ್ಮೆ ದುರದೃಷ್ಟವನ್ನು ಹಳಿದುಕೊಳ್ಳುವಳು. ಮತ್ತೊಮ್ಮೆ ತನ್ನ ಮಗನನ್ನು ಅಡವಿಗೆ ಅಟ್ಟಿದ ದಶರಥನ ಮೇಲೆ ಸಿಟ್ಟಾಗುವಳು—"ಮಹಾರಾಜ, ನೀನು ದಯಾಶಾಲಿಯೆಂದು ಮೂರುಲೋಕಗಳಲ್ಲಿಯೂ ವಿಖ್ಯಾತನಾಗಿದ್ದೆ. ಆದರೆ ಅದೆಷ್ಟು ಬೇಗ ಆ ಕೀರ್ತಿಯೆಲ್ಲವನ್ನೂ ಹಾಳುಮಾಡಿಕೊಂಡೆ! ಪಾಪ! ಕೋಮಲ ದೇಹದ ಆ ಬಾಲೆ, ಸೀತೆ, ಬಿಸಿಲು ಚಳಿ ಮಳೆಗಳನ್ನು ಅದೆಂತು ಸಹಿಸಲಾಪಳು? ಆ

ರಾಜಕುಮಾರಿ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಅದೆಂತು ಜೀವಿಸಬಲ್ಲಳು? ಅದೆಂತು ಕಠಿನವಾದ ನೆಲದಮೇಲೆ ಮಲಗಿ ನಿದ್ರಿಸಬಲ್ಲಳು? ನನ್ನ ಮಗನಾದ ಶ್ರೀರಾಮಚಂದ್ರ ಯಾರಿಗೂ ಯಾವಾಗಲೂ ಅಪ್ರಿಯವನ್ನು ಎಣಿಸಿದವನಲ್ಲ. ಆತನು ದಿಕ್ಕಿಲ್ಲದವನಂತೆ ಅರಣ್ಯದಲ್ಲಿ ಅಲೆಯುವಂತಹ ಅಪರಾಧವನ್ನೇನು ಎಸಗಿದ್ದನು? ಸೀತಾರಾಮಲಕ್ಷ್ಮಣ ರನ್ನು ನಿಷ್ಕಾರಣವಾಗಿ ಅರಣ್ಯಕ್ಕೆ ಅಟ್ಟಿದೆಯಲ್ಲವೆ? ಜ್ಯೇಷ್ಠನೂ ಶ್ರೇಷ್ಠನೂ ಆದ ಶ್ರೀರಾಮನು ಅಡವಿಪಾಲಾದನು. ಕನಿಷ್ಠನಾದವನು ರಾಜಾಧಿಪತ್ಯವನ್ನು ಸ್ವೀಕರಿಸು ವನು. ಇದೆಂತಹ ನ್ಯಾಯ? ನಿನ್ನ ಪ್ರಿಯಪತ್ನಿಯಾದ ಕೈಕೆಗೂ ಆಕೆಯ ಮಗನಾದ ಭರತನಿಗೂ ಆನಂದವನ್ನು ಒದಗಿಸುವುದಕ್ಕಾಗಿ ಅದೆಷ್ಟು ಜನರಿಗೆ ಅಪ್ರಿಯವನ್ನುಂಟು ಮಾಡಿದೆ? ಇದರಿಂದ ನಿನಗಾದರೂ ಆನಂದವಾಯಿತೆ! ನೀನೂ ಹಾಳಾದೆ; ನನ್ನನ್ನೂ ಹಾಳುಮಾಡಿದೆ! ಕೋಸಲರಾಜ್ಯವನ್ನೇ ದುಃಖದಲ್ಲಿ ಮುಳುಗಿಸಿದೆ. ನೀನೆಂತಹ ಕ್ರೂರಕಾರ್ಯವನ್ನು ಎಸಗಿದೆ?" ಎಂದೆಲ್ಲ ಆಕೆ ದಶರಥನನ್ನು ಕಟುವಾಗಿ ನಿಂದಿಸಿದಳು.

ಕೌಸಲ್ಯೆಯ ಕಟುನುಡಿಗಳಿಂದ ಬೇಗುದಿಗೊಂಡ ದಶರಥನು ಕಣ್ಣೀರುಗರೆಯುತ್ತಾ ಆಕೆಯನ್ನು ಕುರಿತು "ದೇವಿ, ರಾಮಮಾತೆ, ಪ್ರಸನ್ನಳಾಗು! ನಾನೀಗ ಕರುಣೆಗೆ ಪಾತ್ರನೇ ಹೊರತು ಕೋಪಕ್ಕಲ್ಲ. ಕೈಮುಗಿದು ಬೇಡುತ್ತೇನೆ. ನನ್ನನ್ನು ಕ್ಷಮಿಸು. ನನ್ನ ಪೂರ್ವಾರ್ಜಿತ ಕರ್ಮ ನನಗೆ ಈ ಸಂಕಟ ತಂದೊಡ್ಡಿದೆ" ಎಂದು ಹೇಳಿ ತನಗೆ ಬಹುಕಾಲದ ಹಿಂದೆ ಪ್ರಾಪ್ತವಾಗಿದ್ದ ಋಷಿಶಾಪವೊಂದನ್ನು ಆಕೆಗೆ ವಿವರಿಸಿ ಹೇಳಿದನು:

ದೇವಿ, ನಾನಿನ್ನೂ ಮದುವೆಯಿಲ್ಲದ ಬಾಲಕನಾಗಿದ್ದಾಗ ನಡೆದ ಅಚಾತುರ್ಯ ವೊಂದನ್ನು ತಿಳಿಸುತ್ತೇನೆ ಕೇಳು. ಆಗ ನನ್ನ ತಂದೆ ಇನ್ನೂ ಜೀವಂತನಾಗಿದ್ದನು. ನಾನು ಯುವರಾಜನಾಗಿದ್ದೆ. ನನಗೆ ಆಗ ಧನುರ್ವಿದ್ಯೆಯಲ್ಲಿ ಬಹು ಗೀಳು. ಶಬ್ದವನ್ನು ಕೇಳಿ ಗುರಿಯನ್ನು ಸಾಧಿಸಬಲ್ಲ ಶಬ್ದವೇದಿಯಲ್ಲಿಯೂ ನಾನು ನಿಪುಣನಾಗಿದ್ದೆ. ಒಂದು ವರ್ಷಾಕಾಲದ ದಿನ ನಾನು ಮೃಗಯಾ ವಿಹಾರಕ್ಕಾಗಿ ಸರಯೂ ನದಿಯ ತೀರವನ್ನು ಸೇರಿದೆ. ರಾತ್ರಿಯ ವೇಳೆಯಲ್ಲಿ ಮೃಗಗಳು ನೀರು ಕುಡಿಯಲು ಬರುವ ಸಮಯವನ್ನೇ ಕಾಯುತ್ತಾ ಧನುರ್ಧಾರಿಯಾಗಿ ಹೊಂಚಿ ಕುಳಿತಿರಲು ಅರ್ಧರಾತ್ರಿಯ ವೇಳೆಯಲ್ಲಿ ನದಿಯ ತೀರದಿಂದ 'ಗುಳುಗುಳು' ಶಬ್ದ ಕೇಳಿ ಬಂದಿತು. ಯಾವುದೋ ಒಂದು ಆನೆ ನೀರು ಕುಡಿಯುತ್ತಿರಬೇಕೆಂದು ಭಾವಿಸಿದ ನಾನು ಧ್ವನಿಗೆ ಗುರಿಯಿಟ್ಟು ತೀಕ್ಷ್ಣವಾದ ಬಾಣವೊಂದನ್ನು ಪ್ರಯೋಗಿಸಿದೆ. ಮರುಕ್ಷಣದಲ್ಲಿಯೆ 'ಹಾ! ಅಯ್ಯೋ!' ಎಂಬ ಮಾನವನ ಧ್ವನಿ ಅದೇ ದಿಕ್ಕಿನಿಂದ ಕೇಳಿಸಿತು. ನಾನು ದಿಕ್ಕುತೋಚದವನಾಗಿ ಕೂಗು ಕೇಳಿಬಂದ ಕಡೆಗೆ ಧಾವಿಸಿದೆ. ಕೌಸಲ್ಯೆ, ನೆನೆದರೆ ಈಗಲೂ ಎದೆ ನಡುಗುತ್ತದೆ. ಜಟಾವಲ್ಕಲಗಳನ್ನು ಧರಿಸಿದ್ದ ಋಷಿಕುಮಾರನೊಬ್ಬನು ಕೆನ್ನೀರಿನಲ್ಲಿ ಮುಳುಗಿ ಮಲಗಿದ್ದನು. ಆತನು ನನ್ನನ್ನು ಕಾಣುತ್ತಲೇ "ಅಯ್ಯೋ! ರಾಜನೆ! ವನವಾಸಿ ಯಾದ ನಾನು ನಿನಗಾವ ಅಪರಾಧ ಮಾಡಿದ್ದೆ? ನನ್ನನ್ನು ಕೊಲ್ಲುವುದರಿಂದ ನಿನಗೇನು ಲಾಭ? ಅಯ್ಯೋ ನನ್ನ ಮುಪ್ಪಿನ ತಾಯ್ತಂದೆಗಳ ಬಾಯಾರಿಕೆಯನ್ನು ಹೋಗ

ಲಾಡಿಸುವುದಕ್ಕಾಗಿ ಈ ನದೀ ತೀರಕ್ಕೆ ಬಂದೆ. ನನ್ನ ಗತಿ ಇಲ್ಲಿ ಹೀಗಾಗಿದೆ. ಪಾಪ! ಕಂಗಾಣದ ಆ ತಾಯ್ತಂದೆಗಳ ಗತಿಯೇನೊ! ಇನ್ನು ಒಂದು ಕ್ಷಣದಲ್ಲಿ ನನ್ನ ಪ್ರಾಣಗಳು ಹಾರಿಹೋಗುತ್ತವೆ. ಆಮೇಲೆ ಅವರಿಗೆ ಯಾರು ದಿಕ್ಕು! ಅಯ್ಯಾ, ನನ್ನ ಹೃದಯದಲ್ಲಿ ನಟ್ಟಿರುವ ಈ ಬಾಣ ಮರ್ಮಸ್ಥಾನವನ್ನು ಕೊರೆಯುತ್ತಿದೆ. ನಾನಿದನ್ನು ಸಹಿಸಲಾರೆ. ಮೊದಲು ಇದನ್ನು ಕಿತ್ತುಹಾಕು. ಅನಂತರ ಇಲ್ಲಿಯೇ ಸಮೀಪದಲ್ಲಿರುವ ನನ್ನ ತಾಯ್ತಂದೆಗಳಿಗೆ ನನ್ನ ಸ್ಥಿತಿಯನ್ನು ಅರುಹು" ಎಂದು ಹೇಳಿದ. ಆತನ ದುಃಖವನ್ನು ನೋಡಲಾರದೆ ನಾನು ಬಾಣವನ್ನು ಕಿತ್ತುಹಾಕಿದೆ. ಒಡನೆಯೆ ಆತನ ಪ್ರಾಣ ಹಾರಿಹೋಯಿತು. ಸ್ವಲ್ಪ ಹೊತ್ತು ಭಯದಿಂದ ನನಗೆ ಏನೂ ತೋಚ ದಂತಾಯಿತು. ಆಮೇಲೆ ಧೈರ್ಯ ತಂದುಕೊಂಡು ಅಲ್ಲಿದ್ದ ನೀರು ತುಂಬಿದ್ದ ಕುಂಭ ದೊಡನೆ ಆ ವೃದ್ಧ ಋಷಿದಂಪತಿಗಳ ಬಳಿಗೆ ಹೋದೆ. ರೆಕ್ಕೆಯುದುರಿದ ಹಕ್ಕಿಗಳಂತೆ ಮುದುರಿ ಕುಳಿತಿದ್ದ ಅವರು ಹೆಜ್ಜೆಯ ಸಪ್ಪಳವನ್ನು ಕೇಳುತ್ತಲೆ ಮಗನೇ ಬಂದನೆಂದು ಕೊಂಡು "ವತ್ಸ, ನೀರು ತರಲು ಎಷ್ಟು ತಡಮಾಡಿದೆಯಪ್ಪ! ಇಷ್ಟು ಹೊತ್ತು ಜಲಕ್ರೀಡೆಯಾಡುತ್ತಿದ್ದಯೇನು? ನೀನು ಬಾರದುದರಿಂದ ನಿನ್ನ ತಾಯಿ ಎಷ್ಟೋ ತಳಮಳ ಪಡುತ್ತಿದ್ದಳು" ಎಂದು ಆ ವೃದ್ಧ ಋಷಿ ಶೂನ್ಯ ದೃಷ್ಟಿಯನ್ನು ಶಬ್ದ ಬಂದ ಕಡೆಗೆ ತಿರುಗಿಸಿದನು. ನಾನು ಅನಿವಾರ್ಯವಾಗಿ ನಡೆದುದನ್ನು ನಡೆದಂತೆ ತಿಳಿಸಿ, ಕೈಲಿದ್ದ ನೀರಿನ ಭಾಂಡವನ್ನು ಅವರ ಮುಂದೆ ಇರಿಸಿದೆ. ಆದರೆ ಅವರು ನೀರು ಕುಡಿಯಲಿಲ್ಲ. ಗಟ್ಟಿಯಾಗಿ ರೋಧಿಸುತ್ತಾ ಸತ್ತುಬಿದ್ದಿದ್ದ ಮಗನ ಬಳಿಗೆ ನನ್ನ ಸಹಾಯದಿಂದ ಬಂದು ಆತನ ಮೈಮೇಲೆ ಕೈಯಾಡಿಸುತ್ತಾ ಹಲುಬಿ ಹಂಬಲಿಸಿ ಕಲ್ಲು ಕರಗುವಂತೆ ಗೋಳಿಟ್ಟರು. ಆಮೇಲೆ ನನ್ನನ್ನು ಕುರಿತು 'ಅಯ್ಯಾ ರಾಜನೆ, ಈಗ ನಾನಾವ ರೀತಿಯಲ್ಲಿ ಪುತ್ರವ್ಯಸನದಿಂದುಂಟಾದ ದುಃಖವನ್ನು ಅನುಭವಿಸುತ್ತಿರುವೆನೊ ಅದೇ ರೀತಿಯಲ್ಲಿಯೆ ನೀನು ಪುತ್ರವ್ಯಸನದಿಂದ ಪೀಡಿತನಾಗಿ ಮರಣಹೊಂದು' ಎಂದು ಶಪಿಸಿ ದನು. ಹೀಗೆ ಶಾಪವನ್ನು ಕೊಟ್ಟ ಆ ವೃದ್ಧ ಮುನಿ ಸತಿಯೊಂದಿಗೆ ಚಿತಾಪ್ರವೇಶ ಮಾಡಿದನು. ದೇವಿ, ಮುನಿಶಾಪ ಈಗ ಮೈವೆತ್ತು ನಿಂತಿದೆ."

ಗಂಡನು ಹೇಳಿದ ಕಥೆಯನ್ನು ಕೇಳಿ ಕೌಸಲ್ಯಾದೇವಿ ನಡುಗಿದಳು. ಶ್ರೀರಾಮನು ಅರಣ್ಯಕ್ಕೆ ಪ್ರಯಾಣ ಮಾಡಿ ಅಂದಿಗೆ ಆರು ದಿನಗಳಾಗಿದ್ದುವು. ಆ ಆರು ದಿನಗಳಲ್ಲಿ ದಶರಥ ಮಹಾರಾಜನು ನಿದ್ರಾಹಾರಗಳಿಲ್ಲದೆ ಕೃಶನಾಗಿ ಹೋಗಿದ್ದನು. ಋಷಿಶಾಪದ ವೃತ್ತಾಂತವನ್ನು ಹೇಳಿ ಮುಗಿಸುವಷ್ಟರಲ್ಲಿ ಆತನಲ್ಲಿದ್ದ ಅಲ್ಪ ಶಕ್ತಿಯೂ ಉಡುಗಿ ಹೋಗುತ್ತಿರುವಂತೆ ಕಾಣಿಸಿತು. ಆತನು ಪುನಃ ಕೌಸಲ್ಯೆಯನ್ನು ಕುರಿತು "ಎಲೈ ಮಂಗಳಾಂಗಿ, ನನಗೀಗ ಅವಸಾನಕಾಲ ಪ್ರಾಪ್ತವಾಗಿದೆ. ಶ್ರೀರಾಮನು ಒಮ್ಮೆ ನನ್ನನ್ನು ಸ್ಪರ್ಶಿಸಿದರೆ ಮಾತ್ರ ಬದುಕಬಲ್ಲೆ. ಆದರೆ ಅದೆಲ್ಲಿ ಸಾಧ್ಯ? ಕೌಸಲ್ಯೆ, ನನ್ನ ದೃಷ್ಟಿ ಶೂನ್ಯವಾಗಿದೆ, ನನ್ನ ಕಣ್ಣಿಗೆ ನೀನು ಕಾಣುತ್ತಲೇ ಇಲ್ಲ. ನನ್ನ ಬಾಹ್ಯಪ್ರಜ್ಞೆಯೂ ತಪ್ಪುತ್ತಾ ಇದೆ. ಅದೋ! ಯಮದೂತರು ನನ್ನನ್ನು ತ್ವರೆಗೊಳಿಸುತ್ತಿದ್ದಾರೆ.

ಇಂತಹ ಸಮಯದಲ್ಲಿ ಶ್ರೀರಾಮನು ಸಮೀಪದಲ್ಲಿ ಇಲ್ಲವಲ್ಲಾ! ಅಯ್ಯೋ! ಪ್ರಪಂಚದಲ್ಲಿ ಇದಕ್ಕಿಂತ ಮಹತ್ತರವಾದ ದುಃಖ ಬೇರೊಂದುಂಟೆ? ವನವಾಸವನ್ನು ಮುಗಿಸಿ ಹಿಂದಿರುಗುವ ನನ್ನ ಶ್ರೀರಾಮನ ಮೂರ್ತಿಯನ್ನು ಕಾಣುವವರೆ ಧನ್ಯರು. ಅವರು ಮಾನವರಲ್ಲ, ದೇವತೆಗಳು! ಹಾ ಕಷ್ಟ! ಓ ರಾಮಾ! ರಾಮಚಂದ್ರಾ! ಮಹಾಬಾಹೋ! ಪಿತೃಪ್ರಿಯ! ಕುಮಾರ! ಕಂದ! ಎಲ್ಲಿ ಹೋದೆ? ಹಾ ಕೌಸಲ್ಯೆ! ಸುಮಿತ್ರೆ! ನಿಮಗಿನ್ನಾರು ಗತಿ? ಪಾಪಿ ಕೈಕೆ, ನನಗೆ ನೀನೇ ಮೃತ್ಯುಸ್ವರೂಪ ಳಾದೆಯಲ್ಲವೆ? ಹಾ ರಾಮ! ಹಾ ಲಕ್ಷ್ಮಣಾ! ಹಾ ಸೀತೆ!...."

ಕಡೆಯ ಮಾತು ಬಾಯಿಂದ ಬರುತ್ತಿದ್ದಂತೆಯೆ ದಶರಥನ ಪ್ರಾಣಪಕ್ಷಿ ದೇಹ ಪಂಜರದಿಂದ ಹಾರಿಹೋಯಿತು. ಆಗ ರಾತ್ರಿ ಅರ್ಧ ಕಳೆದಿತ್ತು. ಹೊರಗೆ ಸುತ್ತಲೂ ದಟ್ಟವಾಗಿ ಕಗ್ಗತ್ತಲು ಮುಸುಕಿತ್ತು. ಅರಮನೆಯೊಳಗೆ ಎಲ್ಲರೂ ನಿದ್ರಾವಶರಾಗಿದ್ದು ದರಿಂದ ಶ್ಮಶಾನ ಮೌನ ಎಲ್ಲೆಲ್ಲೂ ಹಬ್ಬಿ ಶವದಂತೆ ಬಿದ್ದಿತ್ತು.

---

೧೩

# ಭರತಾಗಮನ

ಮರುದಿನ ಬೆಳಕು ಹರಿಯಿತು. ಅರಮನೆಯಲ್ಲಿ ಎಂದಿನಂತೆ ಕಾರ್ಯಕಲಾಪಗಳು ಆರಂಭವಾದುವು. ಮಂಗಳವಾದ್ಯಗಳು ಮೊಳಗಿದುವು; ಸ್ತುತಿ ಪಾಠಕರು ರಾಜನ ಗುಣಸ್ತವನವನ್ನು ಹಾಡಿದರು; ಮಹಾರಾಜನು ಎದ್ದೊಡನೆಯೆ ಸಂದರ್ಶನ ಮಾಡಲೆಂದು ಕನ್ನಡಿ ಗೋವು ಮೊದಲಾದುವುಗಳನ್ನು ಅಣಿಮಾಡಿದರು; ಮಹಾರಾಜನ ದರ್ಶನಕ್ಕಾಗಿ ಪ್ರಮುಖರಾದ ರಾಜಕೀಯ ಜನರು ಬಂದು ಅರಮನೆಯ ಬಾಗಿಲಲ್ಲಿ ಕಾದು ನಿಂತರು. ಆದರೆ ಎಷ್ಟು ಹೊತ್ತಾದರೂ ಮಹಾರಾಜನು ಎಚ್ಚತ್ತಂತೆಯೆ ಕಾಣಬರಲಿಲ್ಲ. ಅಂತಃಪುರದಲ್ಲಿ ಸಂಚರಿಸಲರ್ಹವಾದ ಜನ ಇಣಿಕಿ ನೋಡಿದರು. ರಾಜನು ಹಾಸಗೆಯಮೇಲೆ ಮಲಗಿದ್ದಾನೆ; ಆದರೆ ಆತನು ನಿದ್ದೆ ಮಾಡುತ್ತಿಲ್ಲ; ಪ್ರಾಣವಿದೆಯೋ ಇಲ್ಲವೋ ಎಂಬುದೆ ಸಂಶಯವಾಗಿದೆ. ಉಸಿರಾಡುತ್ತಿರುವಂತೆ ಕಾಣುತ್ತಿಲ್ಲ. ಅಂತಃಪುರದ ಆ ಹೆಣ್ಣುಗಳು ಇನ್ನೂ ಹತ್ತಿರಕ್ಕೆ ಹೋಗಿ ನೋಡಿದರು. ಮಹಾರಾಜನು ದಿವಂಗತನಾಗಿರುವುದೆ ನಿಶ್ಚಯ. ಹತ್ತಿರದಲ್ಲಿಯೆ ಅತ್ತು ಅತ್ತು ಹೈರಾಣಾಗಿ ಬಿದ್ದಿದ್ದ ಕೌಸಲ್ಯೆ ಸುಮಿತ್ರೆಯರ ಮುಖದ ಮೇಲೆ ಪ್ರೇತಕಳೆ ಸುರಿಯುತ್ತಿದೆ. ಆ ನೋಡಹೊರಟವರಿಗೆ ಏಕೊ ಬಹು ಭಯವಾಯಿತು. ಕಿಟ್ಟನೆ ಕಿರಿಚಿಕೊಂಡರು. ಆ ಚೀತ್ಕಾರದಿಂದ ಎಚ್ಚತ್ತ ಕೌಸಲ್ಯಾ ಸುಮಿತ್ರೆಯರು ದಿಗಿಲು ಬಿದ್ದು ಮೇಲಕ್ಕೆದ್ದರು. ಮಹಾರಾಜನನ್ನು ಕೈಗಳಿಂದ ಮುಟ್ಟಿ ನೋಡಿದ ಅವರು ಆತನು ದಿವಂಗತನಾಗಿದ್ದಾನೆ ಎಂಬುದನ್ನರಿತವರಾಗಿ "ಹಾ ನಾಥಾ!" ಎಂದು ಚೀರುತ್ತಾ ನೆಲದ ಮೇಲೆ ಬಿದ್ದು ಮೂರ್ಛಿತರಾದರು.

ದಶರಥ ಮಹಾರಾಜನು ಸ್ವರ್ಗಸ್ಥನಾದ ಸುದ್ದಿ ಕ್ಷಣಮಾತ್ರದಲ್ಲಿ ಕಾಡುಕಿಚ್ಚಿನಂತೆ ಹಬ್ಬಿ ಹರಡಿತು. ಅರಮನೆಯೆಲ್ಲವೂ ಗೋಳಿನ ಗೂಡಾಯಿತು. ಶ್ರೀರಾಮನ ವನವಾಸದಿಂದ ಮೊದಲೆ ಸಂಕಟಗೊಂಡಿದ್ದ ರಾಣಿವಾಸ ಮಹಾರಾಜನ ಮರಣದಿಂದಮುಂದೋರದ ನಿತು ಮಹಾದುಃಖದಲ್ಲಿ ಮುಳುಗಿಹೋಯಿತು. ಕೌಸಲ್ಯಾದೇವಿಯಂತೂ ಮಹಾರಾಜನ ಮೃತದೇಹದೊಡನೆ ಸಹಗಮನ ಮಾಡುವುದಾಗಿ ನಿಶ್ಚಯಿಸಿದಳು. ಅಷ್ಟರಲ್ಲಿ ಮಂತ್ರಿಗಳೆಲ್ಲರೂ ವಸಿಷ್ಠರನ್ನು ಮುಂದುಮಾಡಿಕೊಂಡು ಅರಮನೆಗೆ ಬಂದರು. ವಸಿಷ್ಠರ ಆದೇಶದಂತೆ ರಾಜನ ಕಳೇಬರವನ್ನು ತೈಲದ್ರೋಣದಲ್ಲಿಟ್ಟುದಾಯಿತು. ಮಂತ್ರಿಗಳೆಲ್ಲರೂ ಸಭೆ ಸೇರಿ ಒಡನೆಯೆ ಭರತನಿಗೆ ಹೇಳಿ ಕಳುಹಿಸಿ, ಆತನನ್ನು ಅಯೋಧ್ಯೆಗೆ ಕರೆಸಬೇಕೆಂದೂ ಆತನು ಬರುವವರೆಗೆ ರಾಜನ ಅಂತ್ಯಸಂಸ್ಕಾರಗಳಾವುವೂ ನಡೆಯುವಂತಿಲ್ಲವೆಂದೂ ನಿಶ್ಚಯಿಸಿದರು. ವಸಿಷ್ಠರು ಕೇಕಯ ರಾಜ್ಯಕ್ಕೆ ಹೋಗಬೇಕಾದ

ದೂತರನ್ನು ಕುರಿತು "ಅಯ್ಯಾ, ನೀವು ವೇಗಗಾಮಿಗಳಾದ ಕುದುರೆಗಳನ್ನೇರಿ ಈಗಲೆ ಭರತಶತ್ರುಘ್ನರ ಬಳಿಗೆ ಹೋಗಬೇಕು. ಅವರನ್ನು ಕಂಡಾಗ ನೀವು ಸ್ವಲ್ಪವೂ ವ್ಯಥೆಯನ್ನು ತೋರಕೂಡದು. ಇಲ್ಲಿ ನಡೆದಿರುವ ಅನಾಹುತವನ್ನು ಕುರಿತು ಒಂದೂ ಮಾತು ಆಡಕೂಡದು. 'ನಿಮ್ಮಿಂದ ಅತ್ಯಾವಶ್ಯಕವಾದ ಕಾರ್ಯಗೌರವವಿರುವುದರಿಂದ ವಸಿಷ್ಠರು ಕೂಡಲೆ ಕರೆತರುವಂತೆ ಹೇಳಿದ್ದಾರೆ' ಎಂದಿಷ್ಟು ಮಾತ್ರ ಹೇಳಬೇಕು. ರಾಜಕುಮಾರರಿಗೂ ಕೇಕಯರಾಜನಿಗೂ ಅನರ್ಘ್ಯವಾದ ಉಡುಗೊರೆಗಳೊಡನೆ ಈಗಲೆ ತೆರಳಿರಿ" ಎಂದು ಆಜ್ಞಾಪಿಸಿದರು.

ವಸಿಷ್ಠರಿಂದ ಆಜ್ಞಪ್ತರಾಗಿ ಹೊರಟ ದೂತರು ಸ್ವಲ್ಪವೂ ವಿಳಂಬ ಮಾಡದೆ ಪ್ರಯಾಣ ಮಾಡಿದರು. ಹಸ್ತಿನಾಪುರದ ಬಳಿಯಲ್ಲಿ ಗಂಗಾನದಿಯನ್ನು ದಾಟಿ ಕುರುಜಾಂಗಲ ದೇಶದ ಮೂಲಕ ಪಾಂಚಾಲ ದೇಶವನ್ನು ಸೇರಿದರು. ಆ ದೇಶದಲ್ಲಿದ್ದ ಶರದಂಡವೆಂಬ ನದಿಯನ್ನು ದಾಟಿ ಅನೇಕ ಪಟ್ಟಣಗಳನ್ನು ದಾಟುತ್ತಾ ಇಕ್ಷುಮತಿ ಯೆಂಬ ನದಿಯ ತೀರವನ್ನು ಸೇರಿದರು. ಅಲ್ಲಿ ಜಲಪಾನಮಾಡಿ ವಿಶ್ರಮಿಸಿಕೊಂಡು ಬಾಹ್ಲೀಕ ದೇಶವನ್ನು ಪ್ರವೇಶಿಸಿದರು. ಅವರು ಪ್ರಯಾಣಮಾಡುವಾಗ ಅನೇಕ ಗಿರಿ ನದಿ ಕೆರೆ ಸರೋವರಗಳನ್ನೂ ಅನೇಕ ಊರುಗಳನ್ನೂ ಹಾದುಹೋಗಬೇಕಾಯಿತು. ಪಯಣ ಮುಗಿಯುವ ವೇಳೆಗೆ ಕುದುರೆಗಳೂ ಸವಾರರೂ ಬಳಲಿಹೋಗಿದ್ದರು. ಆದರೂ ನಿಲ್ಲದೆ ಪ್ರಯಾಣಮಾಡಿ ಕೊನೆಗೆ ಕೇಕಯ ರಾಜಧಾನಿಯಾದ ಗಿರಿವ್ರಜವನ್ನು ಸೇರಿದರು.

ಅವರು ಗಿರಿವ್ರಜವನ್ನು ಸೇರಿದಾಗ ರಾತ್ರಿಯಾಗಿತ್ತು. ಆದ್ದರಿಂದ ಮರುದಿನ ಬೆಳಗ್ಗೆ ಭರತನನ್ನು ಕಾಣಿಸಿಕೊಂಡರು. ಅವರು ಗಿರಿವ್ರಜವನ್ನು ಸೇರಿದ ರಾತ್ರಿಯೆಲ್ಲಾ ಭರತನಿಗೆ ಏನೇನೊ ದುಃಸ್ವಪ್ನಗಳು—ತಂದೆ ದಶರಥನು ಕೂದಲನ್ನು ಕೆದರಿಕೊಂಡು ಪರ್ವತಾಗ್ರದಿಂದ ಮಲಿನವಾದ ಗೋಮಯದ ಗುಂಡಿಗೆ ಉರುಳಿ ಬಿದ್ದಂತೆಯೂ, ಹಾಗೆ ಬಿದ್ದವನು ಗಹಗಹಿಸಿ ನಗುತ್ತಾ ಬೊಗಸೆ ಬೊಗಸೆ ತೈಲವನ್ನು ಕುಡಿದು ತಿಲಮಿಶ್ರವಾದ ಅನ್ನವನ್ನು ತಿನ್ನುತ್ತಿದ್ದಂತೆಯೂ, ಕೆಂಪು ಹೂಗಳ ಮಾಲಿಕೆಯನ್ನು ಧರಿಸಿಕೊಂಡು ಕತ್ತೆ ಗಳನ್ನು ಕಟ್ಟಿದ ರಥದಲ್ಲಿ ಕುಳಿತು ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡುತ್ತಿದ್ದಂತೆಯೂ ಆತನಿಗೆ ಸ್ವಪ್ನವಾಗಿತ್ತು. ಮರುದಿನ ಬೆಳಗ್ಗೆ ಎದ್ದಾಗ ಆತನಿಗೆ ಈ ಸ್ವಪ್ನಗಳ ನೆನಪಿನಿಂದ ಬಹು ಜುಗುಪ್ಸೆಯುಂಟಾಗಿತ್ತು. ಬೆಳಗಿನ ಜಾವದಲ್ಲಿ ಕಂಡ ಸ್ವಪ್ನಗಳು ತನ್ನ ತಂದೆಗೆ ಯಾವುದೋ ಘೋರವಾದ ಅನಿಷ್ಟವನ್ನು ಸೂಚಿಸುತ್ತವೆಂದು ಆತನು ಭಾವಿಸಿ ಭಯ ಗೊಂಡಿದ್ದನು. ಅಷ್ಟರಲ್ಲಿ ಅಯೋಧ್ಯೆಯಿಂದ ಅವಸರದ ದೂತರು ಬಂದಿರುವರೆಂಬ ವಾರ್ತೆ ಬಂದಿತು. ಅವರನ್ನು ತತ್‌ಕ್ಷಣವೆ ತನ್ನ ಬಳಿಗೆ ಕರೆಸಿಕೊಂಡು, ಬಂದ ಕಾರಣ ವನ್ನು ವಿಚಾರಿಸಿದನು. ದೂತರು ಆತನನ್ನು ಕುರಿತು "ರಾಜಕುಮಾರ, ನಿನ್ನೊಡನೆ ಅತಿ ತ್ವರಿತವಾಗಿ ಮಾತನಾಡಬೇಕಾದ್ದು ಇರುವುದರಿಂದ ನಿನ್ನನ್ನು ಕರೆದುತರ ಬೇಕೆಂಬುದಾಗಿ ವಸಿಷ್ಠರು ನಮ್ಮನ್ನು ಅಟ್ಟಿದರು. ಕ್ಷಣವೂ ಇಲ್ಲಿ ವಿಳಂಬ ಮಾಡದೆ

ಪ್ರಯಾಣ ಬೆಳಸು” ಎಂದು ಹೇಳಿ ಅನರ್ಘ್ಯವಾದ ಉಡುಗೊರೆಗಳನ್ನು ಆತನ ಮುಂದಿಟ್ಟರು.

ದೂತರ ಮಾತು ಕೇಳಿ ಭರತನಿಗೆ ಹೆದರುವವನ ಮೇಲೆ ಕಪ್ಪೆಯನ್ನೆಸೆದಂತಾಯಿತು. ದೂತರನ್ನು ಕುರಿತು ಉತ್ಕಂಠತೆಯಿಂದ ಕೇಳಿದನು—“ತಂದೆ ಕ್ಷೇಮವೆ? ರಾಮಲಕ್ಷ್ಮಣರು ಕುಶಲವಾಗಿದ್ದಾರೆಯೆ? ಪೂಜ್ಯಳಾದ ಕೌಸಲ್ಯೆಯೂ ಧರ್ಮಜ್ಞಳಾದ ಸುಮಿತ್ರೆಯೂ ಸುಖವಾಗಿರುವರೆ? ನನ್ನ ತಾಯಿಯಾದ ಕೈಕೆ ಆರೋಗ್ಯದಿಂದಿರುವಳೆ? ಆಕೆ ತುಂಬ ಕೋಪಿಷ್ಠೆ; ತಾನೇ ಪ್ರಾಜ್ಞಳೆಂಬ ಗರ್ವ ಬೇರೆ. ನೀವು ಬರುವ ಮುನ್ನ ಆಕೆಯೇನಾದರೂ ಹೇಳಿಕಳುಹಿಸಿದಳೆ?” ಆತನ ಪ್ರಶ್ನೆಗಳಿಗೆ ದೂತರು ತಡಮಾಡದೆ ಉತ್ತರವಿತ್ತರು. “ಕುಮಾರ, ಎಲ್ಲರು ಸುಕ್ಷೇಮಿಗಳು. ಪದ್ಮಹಸ್ತಳಾದ ಲಕ್ಷ್ಮಿ ನಿನಗೆ ಪ್ರಸನ್ನಳಾಗಲಿ! ಬೇಗ ಪ್ರಯಾಣಕ್ಕೆ ಸಿದ್ಧನಾಗು.”

ಭರತನಿಗೆ ದೂತರ ಆತುರ ಅರ್ಥವಾಗಲಿಲ್ಲ. ಆದರೂ ಹಿರಿಯರಾದ ವಸಿಷ್ಠರು ಹೇಳಿ ಕಳುಹಿಸಿದ್ದುದರಿಂದ ಒಡನೆಯೆ ಹೊರಡುವುದು ತನ್ನ ಕರ್ತವ್ಯವೆಂದು ಆತನು ಭಾವಿಸಿದನು. ತಮ್ಮನಾದ ಶತ್ರುಘ್ನನೊಡನೆ ತಾತನಿಂದಲೂ ಸೋದರಮಾವನಿಂದಲೂ ಅಪ್ಪಣೆಯನ್ನು ಪಡೆದು ಅಂದೇ ಆತನು ಅಯೋಧ್ಯೆಗೆ ಹೊರಟನು. ಪ್ರಯಾಣಸನ್ನದ್ಧರಾದ ಮೊಮ್ಮಕ್ಕಳಿಗೆ ಕೇಕಯ ರಾಜನು ಅಮೂಲ್ಯವಾದ ವಸ್ತುವಾಹನಗಳನ್ನೂ ಸೇವಕಸೇವಕಿಯರನ್ನೂ ಕೊಟ್ಟು ಸತ್ಕರಿಸಿದನು. ಆತನ ಚತುರಂಗಬಲವೂ ರಾಜಕುಮಾರರ ರಕ್ಷಣೆಗಾಗಿ ಅವರ ಜೊತೆ ಹೊರಟಿತು. ಈ ಪರಿವಾರದೊಡಗೂಡಿದ ಭರತನು ಇಂದ್ರಲೋಕದಿಂದ ಹೊರಹೊರಟ ಸಿದ್ಧನಂತೆ ಪ್ರಯಾಣವನ್ನು ಕೈಕೊಂಡು ತ್ವರಿತಗತಿಯಿಂದ ಮಾರ್ಗಕ್ರಮಣ ಮಾಡಿದನು. ನಾಲ್ಕಾರು ದಿನಗಳು ಪ್ರಯಾಣಮಾಡಿದ ಮೇಲೆ ಆತನಿಗೆ ಪರಿವಾರದೊಡನೆ ಹೋಗುವುದು ವಿಳಂಬಕ್ಕೆ ಕಾರಣವೆನ್ನಿಸಿತು. ಊರು ಹತ್ತಿರವಾದಂತೆಲ್ಲಾ ಆತನ ಕಳವಳ ಹೆಚ್ಚುತ್ತಿತ್ತು. ಆದ್ದರಿಂದ ಉಜ್ಜಹಾಸವೆಂಬ ಪಟ್ಟಣದ ಸಮೀಪಕ್ಕೆ ಬಂದೊಡನೆಯೆ ಆತನು ಪರಿವಾರವನ್ನೆಲ್ಲ ಹಿಂದೆ ಬಿಟ್ಟು ತಾನೊಬ್ಬನೆ ಮುಂದೆ ಹೊರಟನು. ಹಗಲೆನ್ನದೆ ಇರುಳೆನ್ನದೆ ಪಯಣವನ್ನು ಮುಂದುವರಿಸಿದ ಆತನು ಗಿರಿವ್ರಜವನ್ನು ಬಿಟ್ಟ ಎಂಟನೆಯ ದಿನ ಬೆಳಗ್ಗೆ ಅಯೋಧ್ಯೆಗೆ ಸೇರಿದನು.

---

೧೪

# ಅಯೋಧ್ಯೆಯಲ್ಲಿ ಭರತ

ದೂರದಲ್ಲಿ ಅಯೋಧ್ಯೆ ಕಾಣುತ್ತಿದ್ದಂತೆಯೆ ಭರತನ ಕಳವಳ ಹೆಚ್ಚಾಯಿತು. ಏಕೊ ಆತನಿಗೆ ಪಟ್ಟಣವೆಲ್ಲ ಮಂಕಾಗಿರುವಂತೆ ಕಾಣಿಸಿತು. ಬಹುದೂರಕ್ಕೆ ಕೇಳಿಬರ ಬೇಕಾಗಿದ್ದ ಜನರ ಕಲಕಲ ಧ್ವನಿಯೂ ಆಗ ಕೇಳಿಬರುತ್ತಿರಲಿಲ್ಲ. ಊರಿನ ಹೊರವಲ ಯದ ಉದ್ಯಾನವನದಲ್ಲಿ ಜನರು ತಂಡತಂಡವಾಗಿ ವಿಹರಿಸುತ್ತಿರಬೇಕು ; ಆದರೆ ಈಗ ಅದು ನಿರ್ಜನ ಪ್ರದೇಶವಾಗಿದೆ. ಕೇಳುವವರೇ ಇಲ್ಲದೆ 'ಬಿಕೋ' ಎಂದು ರೋದಿಸುವಂತೆ ಕಾಣುತ್ತಿದೆ. ಅದನ್ನು ಕಂಡ ಭರತನ ಮನಸ್ಸು ಬಹು ಭಾರವಾಯಿತು. ದುಃಖ ದಿಂದ ಆತನ ಕಂಠ ಒತ್ತಿಬಂದಿತು. ದುಗುಡದಿಂದಲೇ ಆತನು ಪಟ್ಟಣವನ್ನು ಪ್ರವೇಶ ಮಾಡಿದನು. ಊರಿನ ಒಳಗೆ ನೋಡಿದರೆ ಎಲ್ಲೆಲ್ಲಿಯೂ ಹಾಳು ಸುರಿಯುತ್ತಿದೆ. ಬೀದಿ ಗಳನ್ನು ಗುಡಿಸಿ ಎಷ್ಟು ದಿನಗಳಾಗಿದ್ದುವೊ! ಹೊತ್ತು ನೆತ್ತಿಯ ಮೇಲೆ ಏರಿದ್ದರೂ ಮುಚ್ಚಿದ ಮನೆಯ ಬಾಗಿಲುಗಳು ಮುಚ್ಚಿದಂತೆಯೆ ಇವೆ. ಬೀದಿಯಲ್ಲಿ ಜನಗಳೆ ಇಲ್ಲ. ಒಬ್ಬಿಬ್ಬರು ಕಣ್ಣಿಗೆ ಬಿದ್ದರೂ ಕಂಬನಿಯನ್ನು ಸುರಿಸುತ್ತಾ ಅಲ್ಲಲ್ಲೆ ತಲೆಮರೆಸಿಕೊಳ್ಳು ತ್ತಿದ್ದಾರೆ. ಇದನ್ನು ಕಂಡ ಭರತನಿಗೆ ತನ್ನ ಕನಸಿನ ನೆನಪಾಯಿತು. ಘೋರವಾದ ಅಪಘಾತವೊಂದು ನಡೆದಿರುವುದೆ ನಿಶ್ಚಯವೆಂದುಕೊಂಡು ಆತನು ಅರಮನೆಯನ್ನು ಪ್ರವೇಶಿಸಿದನು.

ಅರಮನೆಗೆ ಹೊಕ್ಕವನೆ ಭರತನು ನೇರವಾಗಿ ತನ್ನ ತಂದೆಯ ಪ್ರಾಸಾದಕ್ಕೆ ಹೋದನು. ಆದರೆ ಆತನು ಅಲ್ಲಿ ಕಾಣಿಸಲಿಲ್ಲ. 'ಇದೇನು ಇಲ್ಲಿ ಕೇಳುವವರೆ ದಿಕ್ಕಿಲ್ಲ' ಎಂದುಕೊಂಡು ತನ್ನ ತಾಯಿಯ ಅಂತಃಪುರಕ್ಕೆ ಹೋದನು. ಮಗನ ಬರವನ್ನು ಕಾಣುತ್ತಲೆ ಕೈಕೆ ತಾನು ಕುಳಿತಿದ್ದ ಸುವರ್ಣಪೀಠದಿಂದ ಎದ್ದು ಬಂದು ಆತನನ್ನು ತಬ್ಬಿಕೊಂಡಳು. ತನ್ನ ಕಾಲು ಮುಟ್ಟಿ ನಮಸ್ಕರಿಸಿದ ಮಗನನ್ನು ಮೇಲೆತ್ತಿ ತೊಡೆಯ ಮೇಲೆ ಕೂಡಿಸಿಕೊಂಡು "ಮಗೂ, ದೀರ್ಘಪ್ರಯಾಣದಿಂದ ನಿನಗೆ ಬಹಳ ಆಯಾಸ ವಾಗಿರಬೇಕಲ್ಲವೆ ? ನೀನು ಹೊರಟು ಎಷ್ಟು ದಿನಗಳಾದುವು ? ನನ್ನ ತಾಯಿಯ ಮನೆ ಯಲ್ಲಿ ಎಲ್ಲರೂ ಕ್ಷೇಮವಾಗಿದ್ದಾರೆಯೆ ?" ಎಂದು ಆಕೆ ಪ್ರಶ್ನಿಸಿದಳು. ಭರತನು ಆಕೆಯ ಪ್ರಶ್ನೆಗಳಿಗೆಲ್ಲಾ ಸ್ವಲ್ಪದರಲ್ಲಿಯೆ ಉತ್ತರ ಹೇಳಿ ಆಮೇಲೆ ಆಕೆಯನ್ನು ಕುರಿತು "ಅಮ್ಮಾ, ನಿನ್ನ ಚಿನ್ನದ ಮಂಚ ಬರಿದಾಗಿರಲು ಕಾರಣವೇನು ? ಪೂಜ್ಯನಾದ ತಂದೆ ಸದಾ ನಿನ್ನ ಅಂತಃಪುರದಲ್ಲಿಯೆ ಇರಬೇಕಾಗಿತ್ತಲ್ಲವೆ ? ಇಲ್ಲೇಕೆ ಈಗ ಆತ ಕಾಣಬರು ತ್ತಿಲ್ಲ ? ಆತನು ಕುಶಲದಿಂದಿರುವನೆ ? ನಾನು ಮೊದಲು ಆತನನ್ನು ಕಾಣಬೇಕು. ಆತನು ಈಗ ಎಲ್ಲಿರುವನು ?" ಎಂದು ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ತಾಯಿಯ

ಮೇಲೆ ಸುರಿಸಿದನು. ರಾಜ್ಯಲೋಭದಿಂದ ಮೋಹಿತಳಾಗಿದ್ದ ಕೈಕೆಗೆ ತನಗೆ ಇಷ್ಟವಾದುದು ಭರತನಿಗೆ ಇಷ್ಟವೆಂದೇ ಭ್ರಮೆ. ಆದ್ದರಿಂದ ತಾನು ನಡೆಸಿದ್ದುದೆಲ್ಲವನ್ನೂ ಆತನಿಗೆ ತಿಳಿಸಬೇಕೆಂದು ಬಗೆದು "ಮಗೂ, ಜಗತ್ತಿನ ಜೀವರಾಶಿಯೆಲ್ಲವೂ ಅಂತ್ಯದಲ್ಲಿ ಹೊಂದುವ ಗತಿಯನ್ನೆ ನಿನ್ನ ತಂದೆಯೂ ಹೊಂದಿದನು" ಎಂದಳು. ಆಕೆಯ ಬಾಯಿಂದ ಕರ್ಣ ಕಠೋರವಾದ ಆ ಮಾತು ಬರುತ್ತಿದ್ದಂತೆಯೆ ಭರತನು ಕೆಳಕ್ಕೆ ಬಿದ್ದು ಮೂರ್ಛೆ ಹೊಂದಿದನು. ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತು ಕಣ್ಣೀರು ಸುರಿಸುತ್ತಾ ಮಹಾರಾಜನ ಗುಣಗಳನ್ನು ಹಾಡಿಕೊಂಡು ಎಳೆಯ ಮಗುವಿನಂತೆ ಗಟ್ಟಿಯಾಗಿ ಅತ್ತನು.

ನೆಲದ ಮೇಲೆ ಹೊರಳಾಡುತ್ತಾ ಗೋಳಿಡುತ್ತಿದ್ದ ಮಗನನ್ನು ಕೈಕೆ ಮೇಲಕ್ಕೆಬ್ಬಿಸಿ ಸಮಾಧಾನಮಾಡುತ್ತಾ ಎಂದಳು :

"ಮಗೂ ನಿನ್ನಂತಹ ಬುದ್ಧಿಸಂಪನ್ನರು ಹೀಗೆ ಶೋಕಿಸುವುದು ತರವಲ್ಲ."

ಭರತನೆಂದನು : "ಅಮ್ಮಾ, ಇಷ್ಟು ತ್ವರೆಯಾಗಿ ನನ್ನನ್ನು ಕರೆಯ ಕಳುಹಿದುದು ಶ್ರೀರಾಮನ ರಾಜ್ಯಾಭಿಷೇಕಕ್ಕೊ ಅಥವಾ ಯಾವುದಾದರೂ ಯಜ್ಞಕ್ಕೊ ಇರಬೇಕೆಂದು ಕೊಂಡಿದ್ದೆ. ಆದರೆ ಇಲ್ಲಿ ತಂದೆ ಮೃತನಾಗಿರುವುದನ್ನು ಕೇಳಿ ನನ್ನ ಹೃದಯ ಬಿರಿದು ಹೋಗುತ್ತಿದೆ. ಅಮ್ಮಾ, ಹೀಗೆ ಆಕಸ್ಮಿಕವಾಗಿ ತಂದೆ ಮರಣಹೊಂದಲು ಕಾರಣ ವೇನು? ಆತನು ಯಾವ ರೋಗಕ್ಕೆ ತುತ್ತಾದನು? ಆತನ ಅಂತ್ಯಕ್ರಿಯೆಗಳನ್ನು ಕೈಯಾರ ನೆರವೇರಿಸಿದ ರಾಮಾದಿಗಳೆ ಧನ್ಯರು! ನನಗೆ ಆ ಭಾಗ್ಯವಿಲ್ಲದಂತಾಯಿತು. ಹೀಗೆ ನಾನು ಪ್ರಯಾಣದಿಂದ ಬಳಲಿ ಬಂದಿದ್ದರೆ, ತಂದೆ ನನ್ನ ಮೈದಡವಿ, ಧೂಳನ್ನು ಒರೆಸಿ ತಲೆಯನ್ನು ಆಘ್ರಾಣಿಸುತ್ತಿದ್ದನು. ಆ ಪುಣ್ಯ ಇನ್ನೆಲ್ಲಿಯದು! ಅದು ಹೋಗಲಿ; ಅಮ್ಮಾ, ಅಣ್ಣನಾದ ರಾಮಚಂದ್ರನೆಲ್ಲಿ? ತಂದೆ ಗತಿಸಿದ ಮೇಲೆ ಹಿರಿಯಣ್ಣನಾದ ಆತನಲ್ಲವೆ ನನಗೆ ತಂದೆ? ಸತ್ಯಸಂಧನಾದ ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಧನ್ಯನಾಗುತ್ತೇನೆ. ಅಮ್ಮಾ, ಇನ್ನೊಂದು ಮಾತು. ಸಾಯುವ ಮುನ್ನ ತಂದೆ ಏನು ಹೇಳಿದನು? ನನ್ನನ್ನು ಕುರಿತು ಯಾವುದಾದರೂ ಸಂದೇಶವನ್ನು ದಯಪಾಲಿಸಿದನೇನು?"

"ಮಗೂ ಭರತ, ಮಹಾರಾಜನು, 'ಹಾ ರಾಮ! ಹಾ ಸೀತೆ! ಹಾ ಲಕ್ಷ್ಮಣ!' ಎಂದು ವಿಲಪಿಸುತ್ತಾ, 'ಅಯೋಧ್ಯೆಗೆ ಹಿಂದಿರುಗಿದ ಸೀತಾರಾಮಲಕ್ಷ್ಮಣರನ್ನು ಪುನಃ ಯಾರು ಕಾಣುವರೋ ಅವರೇ ಧನ್ಯರು' ಎಂದು ಹೇಳಿ ಪ್ರಾಣಬಿಟ್ಟನು."

"ಅಮ್ಮಾ, ಹಾಗೆಂದರೇನು? ಸತ್ಯಸಂಧನಾದ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡನೆ ಎಲ್ಲಿಗೆ ಹೋಗಿದ್ದಾನೆ?"

"ಮಗೂ ಆತನು ವಲ್ಕಲಾಜಿನಗಳನ್ನು ಧರಿಸಿ ಹೆಂಡತಿಯೊಡನೆಯೂ ತಮ್ಮನೊಡನೆಯೂ ದಂಡಕಾರಣ್ಯಕ್ಕೆ ಹೋದನು."

"ಅಮ್ಮಾ, ಅಣ್ಣನು ದೇಶಭ್ರಷ್ಟನಾಗಿ ದಂಡಕಾರಣ್ಯಕ್ಕೆ ಹೋಗುವಂತಹ ಅಪರಾಧವನ್ನೇನು ಮಾಡಿದನು? ದ್ರವ್ಯವನ್ನು ಅಪಹರಿಸಿದನೆ? ನಿಷ್ಕಾರಣವಾಗಿ

ಯಾರನ್ನಾದರೂ ವಧಿಸಿದನೆ? ಅಥವಾ ಪರಸ್ತ್ರೀಯರನ್ನು ಕಾಮಿಸಿದನೆ? ಶ್ರೀರಾಮನ ವಿಚಾರದಲ್ಲಿ ಇವು ಸಂಭವವಲ್ಲವಲ್ಲವೆ?"

"ಇಲ್ಲ ಮಗೂ! ಶ್ರೀರಾಮನು ಅಂತಹ ಹೀನಕಾರ್ಯಗಳಾವುವನ್ನೂ ನಡಸಲಿಲ್ಲ. ನಿನ್ನ ತಂದೆ ಆತನಿಗೆ ಯುವರಾಜಪಟ್ಟವನ್ನು ಕಟ್ಟಬೇಕೆಂಬ ಸಂಭ್ರಮದಿಂದ ಸಕಲ ಸಂಭಾರಗಳನ್ನೂ ಸಿದ್ಧಗೊಳಿಸಿಕೊಂಡಿದ್ದನು. ಆದರೆ ನಾನು ಆತನನ್ನು ಅರಣ್ಯಕ್ಕೆ ಅಟ್ಟಬೇಕೆಂದೂ, ನಿನಗೆ ಪಟ್ಟಾಭಿಷೇಕ ಮಾಡಬೇಕೆಂದೂ ವರಗಳನ್ನು ಬೇಡಿದೆ. ಸತ್ಯವ್ರತನಾದ ಮಹಾರಾಜನು ಅವುಗಳನ್ನು ದಯಪಾಲಿಸಿದನು. ಶ್ರೀರಾಮನು ವನವಾಸಕ್ಕೆ ಹೊರಟುಹೋಗುತ್ತಲೆ ಆ ಪ್ರಿಯಪುತ್ರನ ಅಗಲಿಕೆಯಿಂದ ಮಹಾರಾಜನು ಮೃತಿಹೊಂದಿದನು. ನೀನೀಗ ಮಹಾರಾಜ ಪದವಿಯನ್ನು ಪಡೆದಿರುವೆ. ವ್ಯರ್ಥವಾದ ದುಃಖಕ್ಕೆ ಎಡೆಗೊಡದೆ ನಿನ್ನ ಕರ್ತವ್ಯದಲ್ಲಿ ನಿರತನಾಗು. ಮಹಾರಾಜನ ಅಂತ್ಯಕ್ರಿಯೆಗಳನ್ನು ಆದಷ್ಟು ಬೇಗ ನೆರವೇರಿಸಿ, ರಾಜ್ಯಾಭಿಷಿಕ್ತನಾಗು."

ಕೈಕೆಯ ಮಾತುಗಳು ಕಿವಿಗೆ ಬೀಳುತ್ತಲೆ ಸುಟ್ಟ ಹುಣ್ಣಿನ ಮೇಲೆ ಉಪ್ಪು ಇಟ್ಟಂತಾಯಿತು. ದುಃಖಕ್ರೋಧಗಳಿಂದ ಪರಿತಪಿಸುತ್ತಾ ಹೇಳಿದನು—"ಅಯ್ಯೋ ಪಾಪಿ? ಎಂತಹ ಅಕಾರ್ಯ ಮಾಡಿದೆ! ನೀನು ನನಗೆ ತಾಯಿಯಲ್ಲ; ಪರಮ ಶತ್ರು; ತಂದೆ ಮೃತನಾದನು; ಅಣ್ಣ ಕಾಡುಪಾಲಾದನು; ದುಃಖದ ಮೇಲೆ ದುಃಖ ಪ್ರಾಪ್ತವಾದುವು. ನೀನು ನಮ್ಮ ವಂಶವನ್ನು ನಾಶಗೊಳಿಸುವುದಕ್ಕಾಗಿ ಬಂದ ಕಾಳರಾತ್ರಿಯೇ ಹೊರತು ಹೆಣ್ಣಲ್ಲ. ಸೀತಾರಾಮಲಕ್ಷ್ಮಣರನ್ನು ಅಡವಿಗಟ್ಟಿದ್ದರಿಂದ ನಿನಗೆ ಬಂದ ಭಾಗ್ಯವೇನು? ಕೌಸಲ್ಯಾಸುಮಿತ್ರೆಯರು ಪುತ್ರಶೋಕದ ಪರಿತಾಪಕ್ಕೆ ಒಳಗಾದರಲ್ಲವೆ? ತನ್ನ ತಾಯಿಗಿಂತಲೂ ಹೆಚ್ಚು ಮಮತೆಯಿಂದ ನಿನ್ನನ್ನು ಕಾಣುತ್ತಿದ್ದ ಶ್ರೀರಾಮನಿಗೆ ನಾರುಬಟ್ಟೆಯನ್ನುಡಿಸಿ ಅಡವಿಗಟ್ಟಿದರೂ ನಿನಗೆ ಸ್ವಲ್ಪವೂ ಸಂಕಟವಾಗಲಿಲ್ಲವೆ? ಶ್ರೀರಾಮನಲ್ಲಿ ನನಗಿದ್ದ ಪರಮಭಕ್ತಿ ರಾಜ್ಯಲುಬ್ಧಳಾದ ನಿನಗೆ ಹೇಗೆ ಗೋಚರವಾಗಬೇಕು? ಆತನಿಗೆ ಸಲ್ಲಬೇಕಾದ ಈ ರಾಜ್ಯಭಾರವನ್ನು ನಾನು ವಹಿಸುವೆನೆ? ಎತ್ತು ಹೊರುವ ಭಾರವನ್ನು ಕರು ಹೊರಬಲ್ಲುದೆ? ಒಂದು ಪಕ್ಷಕ್ಕೆ ಹೊರ ಬಲ್ಲೆನಾದರೂ ನಿನಗೆ ಅಸಂತೋಷವನ್ನು ಉಂಟುಮಾಡುವುದಕ್ಕಾಗಿಯಾದರೂ ನಾನು ಅದನ್ನು ಸ್ವೀಕರಿಸುವುದಿಲ್ಲ. ಶ್ರೀರಾಮನು ನಿನ್ನಲ್ಲಿ ಜನನಿಯೆಂಬ ಗೌರವವನ್ನಿಟ್ಟಿರುವುದರಿಂದ ನಿನ್ನನ್ನೀಗ ಕ್ಷಮಿಸಬೇಕಾಗಿದೆ. ಇಲ್ಲದಿದ್ದರೆ ಸದಾಚಾರ ಹೀನಳಾದ ನಿನ್ನನ್ನು ತ್ಯಜಿಸಿ ನಿಗ್ರಹಿಸುತ್ತಿದ್ದೆ. ಹುಟ್ಟಿದ ಮತ್ತು ಸೇರಿದ ಕುಲಗಳೆರಡನ್ನೂ ನರಕಕ್ಕೆ ಅಟ್ಟಿದ ಕುಲಘಾತಕಿ! ನಿನ್ನ ಪಾಪ ಸಂಕಲ್ಪದಿಂದ ನನ್ನ ಪ್ರಾಣಕ್ಕೆ ಅಪಾಯ ತಂದೊಡ್ಡಿರುವೆ. ಆಗಲಿ. ನಿನ್ನ ದುರಾಶೆಯನ್ನು ನಿಷ್ಫಲಗೊಳಿಸಿ, ನೀನು ನೋಡುತ್ತಿರುವಂತೆಯೇ ಅರಣ್ಯಕ್ಕೆ ಹೊರಟುಹೋಗುತ್ತೇನೆ. ನಿಷ್ಕಲ್ಮಶನೂ ಬಂಧುಪ್ರಿಯನೂ ಆದ ಹಿರಿಯಣ್ಣ ರಾಮಚಂದ್ರನನ್ನು ಕರೆದುತಂದು, ಆತನಿಗೆ ಪಟ್ಟಕಟ್ಟಿ, ನಾನು ಆತನ ದಾಸನಾಗಿರುತ್ತೇನೆ."

ಮಾತನಾಡುತ್ತಾ ಹೋದಂತೆಲ್ಲ ಭರತನ ಕೋಪ ಏರುತ್ತಾ ಹೋಯಿತು. ಹೆಡೆತುಳಿದ ಹಾವಿನಂತೆ ಬುಸುಗುಟ್ಟುತ್ತಾ "ನೃಶಂಸೆ, ದುಷ್ಟಚಾರಿಣಿ, ಕುಲನಾಶಕಿ" ಎಂದು ಬಯ್ದನು. "ನೀನು ನರಕಕ್ಕೆ ಬಿದ್ದುಹೋಗು. ಪಾಪಾತ್ಮಳಾದ ನಿನಗೆ ಪರಲೋಕದಲ್ಲಿಯೂ ಪತಿಸಮಾಗಮ ಲಭಿಸದಿರಲಿ" ಎಂದು ಶಪಿಸಿದನು. "ನನ್ನ ತಂದೆಯನ್ನು ಕೊಂದೆ; ಅಣ್ಣನನ್ನು ಅರಣ್ಯಕ್ಕಟ್ಟಿದೆ; ನನಗೆ ದಾರುಣವಾದ ಅಪಕೀರ್ತಿಯನ್ನು ಜೋಡಿಸಿದೆ. ನೀನು ನನ್ನ ಪರಮಶತ್ರು. ಇಗೋ, ಈಗಲೇ ರಾಜ್ಯವನ್ನು ಬಿಟ್ಟು ತೊಲಗಿಹೋಗು. ನಿನ್ನ ದರ್ಶನ ಸಂಭಾಷಣೆಗಳು ಮಹಾಪಾಪಕರವಾದವುಗಳು. ಎಲೈ ಪಾಪಿನಿ, ನಿನ್ನ ಪಾಪಕಾರ್ಯವನ್ನು ಸಹಿಸಲಾರೆ. ಲೋಕಕ್ಕೆಲ್ಲ ದುಃಖವನ್ನು ತಂದೊಡ್ಡಿದ ಪಾಪಿಷ್ಠಳೆ, ಏಕೆ ಈ ಹಾಳು ಬಾಳುಹೊರೆಯುತ್ತಿದ್ದೀಯೆ? ಬೆಂಕಿಯಲ್ಲಿ ಬಿದ್ದೋ ಉರುಲು ಹಾಕಿಕೊಂಡೋ ಸಾಯಬಾರದೆ? ಅಥವಾ ದಂಡಕಾರಣ್ಯಕ್ಕಾದರೂ ತೊಲಗಿಹೋಗು. ನಿನಗೆ ಬೇರೆ ಗತಿಯೇ ಇಲ್ಲ. ನಾನಾದರೂ ಶ್ರೀರಾಮನನ್ನು ಕರೆತಂದು ಸಿಂಹಾಸನದಲ್ಲಿ ಪ್ರತಿಷ್ಠಿಸುತ್ತೇನೆ." ಎಂದೆಂದು ಬೆಂದು, ಬೇಯಿಸುವಂತೆ ನುಡಿದು, ಹೃದಯದ ಅಸಹ್ಯ ವೇದನೆಯಿಂದ ಮೂರ್ಛಿತನಾಗಿ ನೆಲದಮೇಲೆ ಬಿದ್ದನು.

ಮೂರ್ಛೆಗೊಂಡು ನೆಲದಮೇಲೆ ಬಿದ್ದ ಭರತನು ಬಹು ಹೊತ್ತಿನಮೇಲೆ ಎಚ್ಚರಗೊಂಡು ಮೇಲಕ್ಕೆದ್ದನು. ಅಷ್ಟುಹೊತ್ತಿಗೆ ಆತನನ್ನು ಕಾಣುವುದಕ್ಕಾಗಿ ಮಂತ್ರಿಗಳು ಬಂದು ನಿಂತಿದ್ದರು. ಅವರನ್ನು ಕಾಣುತ್ತಲೇ ಆತನ ಕಣ್ಣುಗಳಲ್ಲಿ ನೀರು ತುಂಬಿತು. ಅವರನ್ನು ಕುರಿತು ಆತನು "ನಾನು ಎಂದೂ ಈ ರಾಜ್ಯವನ್ನು ಆಶಿಸಿದವನಲ್ಲ. ಈ ಕೈಕೆ ನಡಸಿದ ಕುತಂತ್ರಗಳೊಂದನ್ನೂ ನಾನರಿಯೆ. ಶತ್ರುಘ್ನನೊಡನೆ ದೂರದೇಶದಲ್ಲಿದ್ದ ನನಗೆ ಇಲ್ಲಿ ನಡೆದಿರುವ ಸೀತಾರಾಮಲಕ್ಷ್ಮಣರ ವನವಾಸ ವಿಚಾರವೇನೇನೂ ತಿಳಿಯದು" ಎಂದು ಅಳುತ್ತಾ ಹೇಳಿದನು. ಅಷ್ಟರಲ್ಲಿ ಆತನ ಧ್ವನಿಯನ್ನು ಕೇಳಿ ಕೌಸಲ್ಯಾದೇವಿ ಆತನ ಬಳಿಗೆ ಬಂದಳು. ಆತನು ಎಂತಹ ಸದ್ಗುಣಶಾಲಿಯೆಂಬುದು ಆಕೆಗೆ ಗೊತ್ತು. ಆದರೂ ಹೊಟ್ಟೆಯ ಸಂಕಟದಲ್ಲಿ ಹಿಂದು ಮುಂದು ನೋಡದೆ, "ಕುಮಾರ, ರಾಜ್ಯಕಾಮನಾದ ನಿನಗೆ ಅಕಂಟಕವಾದ ರಾಜ್ಯ ದೊರೆಯಿತಷ್ಟೆ? ಇನ್ನು ಯಥೇಷ್ಟವಾಗಿ ಅದನ್ನು ಅನುಭವಿಸು. ಆದರೆ ಕೈಕೆ ಎಂತಹ ಅಕೃತ್ಯ ಎಸಗಿದ್ದಾಳೆ! ನನ್ನ ಮಗನಿಗೆ ನಾರುಮಡಿಗಳನ್ನುಡಿಸಿ ಅಡವಿಗಟ್ಟಿದಳಲ್ಲಾ! ಅದರಿಂದ ಆಕೆಗೆ ಬಂದ ಭಾಗ್ಯವೇನು? ಆಕೆ ಕ್ಷಿಪ್ರದಲ್ಲಿಯೇ ನನ್ನನ್ನೂ ಅಡವಿಗಟ್ಟುವಳೆಂದು ತೋರುತ್ತದೆ. ಅಥವಾ ಆಕೆ ಅಟ್ಟುವುದೇನು? ನಾನೇ ಸುಮಿತ್ರೆಯೊಡನೆ ನನ್ನ ಮಗನಿರುವ ಬಳಿಗೆ ಹೋಗುತ್ತೇನೆ. ಆ ಪುರುಷವ್ಯಾಘ್ರನು ತಪಸ್ಸು ಮಾಡುತ್ತಿರುವ ಕಾಡಿಗೆ ನನ್ನನ್ನು ಕರೆದೊಯ್ದು ಬಿಡಬಾರದೆ? ಧನಧಾನ್ಯ ಸಮೃದ್ಧವಾದ ಈ ದೊಡ್ಡ ಕೋಸಲ ರಾಜ್ಯವನ್ನು ನಿನ್ನ ತಾಯಿ ನಿನಗೆ ಸಂಪಾದಿಸಿಕೊಟ್ಟಿದ್ದಾಳೆ. ಈ ರಾಜ್ಯವನ್ನು ನಿರಾತಂಕವಾಗಿ ಆಳಿಕೊಂಡು ನೀನು ಸುಖವಾಗಿರು" ಎಂದು ಬಹು ಕ್ರೂರವಾಗಿ ಮಾತಾಡಿದಳು.

ಗಾಯದಮೇಲೆ ಸೂಜಿಯಿಂದ ಚುಚ್ಚಿದಂತಾಯಿತು ಭರತನಿಗೆ, ಕೌಸಲ್ಯೆಯ ಕ್ರೂರನುಡಿಗಳನ್ನು ಕೇಳಿ. ಆಕೆಯ ಎದುರಿಗೆ ಕೈಗಳನ್ನು ಜೋಡಿಸಿಕೊಂಡು ಹೇಳಿಕೊಂಡನು. "ಆರ್ಯೆ, ಏನೂ ಅರಿಯದ ನನ್ನನ್ನು ಏಕೆ ನಿಂದಿಸುವೆ? ರಾಘವನಲ್ಲಿ ನನಗಿರುವ ಸ್ಥಿರಪ್ರೀತಿ ನಿನಗೆ ಗೊತ್ತಿಲ್ಲವೆ? ಸತ್ಯಸಂಧನಾದ ಶ್ರೀರಾಮಚಂದ್ರಮೂರ್ತಿಯ ವನವಾಸಕ್ಕೆ ನಾನು ಅನುಮತಿಸಿದ್ದ ಪಕ್ಷದಲ್ಲಿ ಗುರುಮುಖದಿಂದ ನಾನು ಕಲಿತಿರುವ ವಿದ್ಯೆಯೆಲ್ಲವೂ ನಶಿಸಿಹೋಗಲಿ! ನಿದ್ರಿಸುವ ಗೋವನ್ನು ಕಾಲಿನಿಂದ ಒದ್ದವನ ಗತಿ ನನಗಾಗಲಿ! ಯುದ್ಧದಲ್ಲಿ ಹಿಮ್ಮೆಟ್ಟಿ ಪಲಾಯನ ಮಾಡುವವನ ದುರ್ಗತಿ ನನಗಾಗಲಿ! ಪಂಚಮಹಾಪಾತಕಗಳನ್ನು ಮಾಡಿದವನು ಬಿದ್ದುಹೋಗುವ ನರಕದಲ್ಲಿ ನಾನು ಬಿದ್ದುಹೋಗುವಂತಾಗಲಿ! ನಾನು ಸಂಸಾರರಹಿತನಾಗಿ ಹೋಗಲಿ!...."

ಹೀಗೆ ಘೋರ ಶಪಥಗಳಿಂದ ತನ್ನ ನಿರ್ದೋಷವನ್ನು ಸ್ಥಾಪಿಸುತ್ತಿರುವ ಭರತನನ್ನು ಕೌಸಲ್ಯಾದೇವಿ ಸಮೀಪಕ್ಕೆ ಬರಸೆಳೆದು ತೊಡೆಯ ಮೇಲೆ ಕೂಡಿಸಿಕೊಂಡು ಸಮಾಧಾನ ಮಾಡಿದಳು: "ವತ್ಸಾ, ನಿನ್ನ ಘೋರ ಶಪಥವನ್ನು ಕೇಳಿ ನನ್ನ ಪ್ರಾಣ ತಳಮಳಿಸುತ್ತಿದೆ. ಬೇಡ ಮಗು. ನೀನು ಧರ್ಮನಿರತನಾಗಿರುವುದು ನನ್ನ ಭಾಗ್ಯ. ಸತ್ಯಪ್ರತಿಜ್ಞನಾದ ನಿನಗೆ ಸದ್ಗತಿಯೆ ಹೊರತು ದುರ್ಗತಿಯೇಕೆ ಪ್ರಾಪ್ತವಾಗುತ್ತದೆ?"

ಮರುದಿನ ಭರತಕುಮಾರನು ವಸಿಷ್ಠರ ಆದೇಶದಂತೆ ತಂದೆಯ ಅಂತ್ಯಕ್ರಿಯೆಗಳನ್ನು ನಡಸಿದನು. ತೈಲಪಾತ್ರದಲ್ಲಿದ್ದ ದಶರಥನ ದೇಹವನ್ನು ಹೊರತೆಗೆದು ಅಲಂಕೃತವಾದ ಪಲ್ಲಕ್ಕಿಯಲ್ಲಿಟ್ಟುಕೊಂಡು ಮಂತ್ರಾಗ್ನಿಯೊಡನೆ ಶ್ಮಶಾನಕ್ಕೆ ಕೊಂಡೊಯ್ದರು. ಅಲ್ಲಿ ಮೊದಲೇ ಸಿದ್ಧಪಡಿಸಿಟ್ಟಿದ್ದ ಚಿತೆಯಮೇಲೆ ಮೃತಕಳೇಬರವನ್ನು ಇಟ್ಟುದಾಯಿತು. ಪುರೋಹಿತರ ವೇದಘೋಷಗಳ ಮಧ್ಯೆ ಭರತನು ಸೂಡಿಗೆ ಬೆಂಕಿ ಸೋಕಿಸಿದನು. ಸುತ್ತ ನೆರೆದಿದ್ದ ರಾಣಿಯರೂ ಬಂಧುಬಾಂಧವರೂ ಮತ್ತೊಮ್ಮೆ ಬಿಕ್ಕಿ ಬಿಕ್ಕಿ ಅತ್ತರು. ನೋಡು ನೋಡುತ್ತಿರುವಲ್ಲಿ ದಶರಥನ ದೇಹ ಅಗ್ನಿಗೆ ಆಹುತಿಯಾಯಿತು. ಶ್ಮಶಾನಯಾತ್ರೆಗೆ ಬಂದಿದ್ದವರೆಲ್ಲರೂ ಸರಯೂನದಿಗೆ ಹೋಗಿ ಸ್ನಾನಮಾಡಿ, ಮೃತರ ಆತ್ಮಕ್ಕೆ ಶಾಂತಿಯಾಗಲೆಂದು ಜಲತರ್ಪಣ ಕೊಟ್ಟರು. ಹಿರಿಯ ಮಗನಾದ ಶ್ರೀರಾಮಚಂದ್ರನು ಸಮೀಪದಲ್ಲಿಲ್ಲದ ಕೊರತೆಯನ್ನು ಬಿಟ್ಟರೆ ಉಳಿದುದೆಲ್ಲವೂ ಸಾಂಗವಾಗಿಯೇ ನೆರವೇರಿದಂತಾಯಿತು.

ಹತ್ತು ದಿನಗಳ ಅಶೌಚ ಕಳೆದ ಮೇಲೆ ಪುಣ್ಯಾಹವಾಚನದಿಂದ ಪರಿಶುದ್ಧನಾದ ಭರತನು ಹನ್ನೆರಡನೆಯ ದಿನ ಪಿತೃಶ್ರಾದ್ಧವನ್ನು ಭಕ್ತಿಯಿಂದ ನೆರವೇರಿಸಿದನು. ಅಗಣಿತವಾದ ದಾನದಕ್ಷಿಣೆಗಳಿಂದ ಬ್ರಾಹ್ಮಣರು ತಣಿದುಹೋದರು. ಈ ಕರ್ಮಗಳನ್ನೆಲ್ಲಾ ಮುಗಿಸಿ ಅಣ್ಣನನ್ನು ಕರೆತರುವುದಕ್ಕಾಗಿ ಅರಣ್ಯಕ್ಕೆ ತೆರಳಬೇಕೆಂದು ಭರತನು ಯೋಚಿಸಿದ್ದನು. ಆ ವಿಚಾರವನ್ನೆ ಕುರಿತು ಭರತಶತ್ರುಘ್ನರು ಆಲೋಚಿಸುತ್ತಾ ಕುಳಿತಿರುವಾಗ ಸರ್ವಾಲಂಕಾರಭೂಷಿತೆಯಾಗಿ ಒಯ್ಯಾರದಿಂದ ಓಡಾಡುತ್ತಿದ್ದ ಮಂಥರೆ ಅವರ ಕಣ್ಣಿಗೆ

ಬಿದ್ದಳು. ಹಗ್ಗಗಳಿಂದ ಬಂಧಿತಳಾದ ಹೆಣ್ಣು ಕೋತಿಯಂತೆ ಕಂಠಾಭರಣಾದಿ ಒಡವೆ ಗಳಿಂದ ಅಲಂಕೃತಳಾಗಿದ್ದ ಅವಳನ್ನು ದ್ವಾರಪಾಲಕನೊಬ್ಬನು ಎಳತಂದು ಶತ್ರುಘ್ನನ ಎದುರಿಗೆ ನಿಲ್ಲಿಸಿದನು. ಆತನು ಅವಳನ್ನು ಹಿಡಿದುಕೊಂಡು "ಈ ಅನರ್ಥಕ್ಕೆಲ್ಲಾ ಮೂಲಕಾರಣಳಾದ ಈ ಮಾರಿಗೆ ಈಗಲೆ ತಕ್ಕ ಶಿಕ್ಷೆ ಕೊಡುತ್ತೇನೆ" ಎಂದು ಅಬ್ಬರಿಸಿ ದನು. ಆತನು ಅಷ್ಟು ಹೇಳಿದುದರಿಂದಲೆ, ಮಂಥರೆ ಮನೆಯೆಲ್ಲವೂ ಸೆಲೆಹೋಗುವಂತೆ ಗಟ್ಟಿಯಾಗಿ ಕಿರಿಚಿಕೊಂಡಳು. ಅದನ್ನು ಕೇಳಿ ಇನ್ನೇನು ಅನರ್ಥ ನಡೆಯುವುದೊ ಎಂದು ಹೆದರಿದ್ದ ದಾಸಿಯರೆಲ್ಲರೂ ದಿಕ್ಕಾಪಾಲಾಗಿ ಓಡಿಹೋಗಿ ಕೌಸಲ್ಯೆಯನ್ನು ಮೊರೆ ಹೊಕ್ಕರು. ಇತ್ತ ಶತ್ರುಘ್ನನು ಕಿರಿಚಿಕೊಳ್ಳುತ್ತಿದ್ದ ಮಂಥರೆಯನ್ನು ಒಂದು ಸಲ ಸೆಳೆದು ನೆಲಕ್ಕೆ ಕುಕ್ಕಿದನು. ಅವಳು ತೊಟ್ಟಿದ್ದ ಆಭರಣಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿ ನೆಲದ ಮೇಲೆ ಬಿದ್ದುವು. ಶತ್ರುಘ್ನನು ಅಷ್ಟಕ್ಕೇ ಅವಳನ್ನು ಬಿಡದೆ ದರದರನೆ ಎಳೆದು ಕೊಂಡು ಹೋಗುತ್ತಿರಲು ಕೈಕೆ ಅಡ್ಡಬಂದು ತನ್ನ ದಾಸಿಯನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಶತ್ರುಘ್ನನು ಆಕೆಯನ್ನು ಗದರಿಸಿ, ಕಠಿಣವಾಕ್ಯಗಳಿಂದ ಅವಳನ್ನು ನಿಂದಿಸಿದನು. ಆಗ ಆಕೆ ಹೆದರಿ ಭರತನನ್ನು ಮೊರೆಹೊಕ್ಕಳು. ಆತನು ತಮ್ಮ ನನ್ನು ಸಮಾಧಾನಮಾಡಿ ಆತನಿಂದ ಆಗುತ್ತಿದ್ದ ಸ್ತ್ರೀಹತ್ಯೆಯನ್ನು ತಪ್ಪಿಸಿದನು.

ಅಣ್ಣನ ಅನ್ವೇಷಣೆಗಾಗಿ ಅರಣ್ಯಕ್ಕೆ ತೆರಳಬೇಕೆಂದು ಭರತನು ಯೋಚಿಸು ತ್ತಿದ್ದಾಗ ಮಂತ್ರಿಗಳೇ ಮೊದಲಾದ ಪ್ರಮುಖರು ಸಭೆಸೇರಿ, ಒಡನೆಯೇ ಆತನಿಗೆ ಪಟ್ಟಗಟ್ಟಬೇಕೆಂದು ಆಲೋಚಿಸುತ್ತಿದ್ದರು. ಅವರೆಲ್ಲರೂ ಆತನ ಬಳಿಗೆ ಬಂದು, "ರಾಜ ಕುಮಾರ, ಪಟ್ಟಾಭಿಷೇಕಕ್ಕೆ ಎಲ್ಲವೂ ಸಿದ್ಧವಾಗಿದೆ, ಒಡನೆಯೇ ನೀನು ರಾಜ್ಯಭಾರ ವನ್ನು ಸ್ವೀಕರಿಸಿ ಅರಾಜಕವಾಗಿರುವ ಕೋಸಲ ದೇಶವನ್ನು ಸನಾಥವಾಗಿಮಾಡು" ಎಂದರು. ಭರತನು ಅದಕ್ಕೊಪ್ಪದೆ "ಜ್ಯೇಷ್ಠನಾದವನು ರಾಜನಾಗುವುದು ಉಚಿತ. ನಮ್ಮ ವಂಶದಲ್ಲಿ ಪರಂಪರೆಯಾಗಿ ಬಂದಿರುವ ಈ ಪದ್ಧತಿಯನ್ನು ತಿಳಿದೂ ತಿಳಿದೂ ಹಿರಿಯರಾದ ನೀವು ಈ ರೀತಿ ಹೇಳಬಹುದೆ? ಶ್ರೀರಾಮನು ರಾಜನಾಗಲಿ; ಆತನಿಗೆ ಬದಲಾಗಿ ನಾನು ಹದಿನಾಲ್ಕು ವರ್ಷಗಳು ವನವಾಸ ಮಾಡುತ್ತೇನೆ. ಚತುರಂಗಬಲ ವೆಲ್ಲವೂ ನನ್ನೊಡನೆ ಹೊರಡುವುದಕ್ಕೆ ಸಜ್ಜಾಗಲಿ. ಸಿದ್ಧವಾಗಿರುವ ಅಭಿಷೇಕ ಸಾಮಗ್ರಿ ಗಳೊಡನೆ ನಾನು ಅಡವಿಗೆ ತೆರಳಿ ಅಲ್ಲಿಯೇ ಆತನಿಗೆ ಪಟ್ಟಾಭಿಷೇಕವನ್ನು ನೆರವೇರಿಸು ತ್ತೇನೆ. ಅನಂತರ 'ಯಜ್ಞಶಾಲೆಯಿಂದ ಸ್ವಗೃಹಕ್ಕೆ ಅಗ್ನಿಹೋತ್ರವನ್ನು ತರುವಂತೆ' ಶ್ರೀರಾಮಚಂದ್ರನನ್ನು ಅರಣ್ಯದಿಂದ ಅಯೋಧ್ಯೆಗೆ ಕರೆತರುತ್ತೇನೆ" ಎಂದನು.

ಭರತನ ಮಾತುಗಳನ್ನು ಕೇಳಿ ನೆರೆದಿದ್ದವರೆಲ್ಲರೂ ಆತನನ್ನು ಬಾಯ್ತುಂಬ ಹೊಗಳಿದರು. ಶೀಘ್ರದಲ್ಲಿಯೆ ಶ್ರೀರಾಮಾನ್ವೇಷಣೆಗಾಗಿ ತೆರಳುತ್ತೇವೆಂದು ಸರ್ವರೂ ಸಂಭ್ರಮಾನ್ವಿತರಾದರು.

---

೧೫

# ರಾಮಾನ್ವೇಷಣೆಗೆ

ರಾಜಕುಮಾರ ಭರತನ ಅಪ್ಪಣೆಯ ಮೇರೆಗೆ ನಗರದ ಜನರೆಲ್ಲರೂ ಪ್ರಯಾಣ ಮಾಡಲು ಅನುಕೂಲವಾಗುವಂತೆ ಅಯೋಧ್ಯೆಯಿಂದ ಗಂಗಾನದಿಯವರೆಗೆ ರಾಜಮಾರ್ಗ ವೊಂದು ನಿರ್ಮಾಣವಾಯಿತು. ಕೆಲಸಗಾರರು ಮುಂದೆ ಹೊರಟು ದಾರಿಯಲ್ಲಿದ್ದ ಗಿಡ ಮರಗಳನ್ನು ಕತ್ತರಿಸಿ ಹಳ್ಳತಿಟ್ಟುಗಳನ್ನು ಸಮಗೊಳಿಸಿದರು. ಅಲ್ಲಲ್ಲಿ ಕುಡಿಯುವ ನೀರಿಗೆ ಅನುಕೂಲಗಳು ಕಲ್ಪಿತವಾದುವು. ರಾಜಕುಮಾರನೂ ಆತನ ಪರಿವಾರವೂ ಇಳಿದುಕೊಳ್ಳಲು ಅನುಕೂಲಿಸುವಂತೆ ಮಾರ್ಗಮಧ್ಯದಲ್ಲಿ ಅಲ್ಲಲ್ಲಿಯೆ ಮಂಟಪಗಳು ತಯಾರಾದುವು. ದಾರಿಯಲ್ಲಿ ಅಡ್ಡವಾಗಿದ್ದ ನದಿಗಳಿಗೆ ಸೇತುವೆಗಳು ಸಿದ್ಧವಾದುವು. ಶ್ರೀರಾಮನನ್ನು ಕರೆತರುವುದಕ್ಕಾಗಿ ಭರತನು ಪ್ರಯಾಣಮಾಡುವನೆಂಬ ಸುದ್ದಿ ಊರ ಲ್ಲೆಲ್ಲ ಹಬ್ಬಿ ಹರಡಿತು. ಜನರು ಭರತನ ಸದ್ಗುಣಗಳನ್ನು ಹಾಡಿ ಹರಸಿದರು. ಯಾವುದೋ ದೊಡ್ಡ ಉತ್ಸವವನ್ನು ಆಚರಿಸಲಿರುವವರಂತೆ ಜನರೆಲ್ಲರೂ ಕೇವಲ ಸಂಭ್ರಮಾನ್ವಿತ ರಾದರು. ಶ್ರೀರಾಮನನ್ನು ಕಣ್ಣಾರೆ ಕಂಡು ಧನ್ಯರಾಗಬೇಕೆಂಬ ಆತುರದಿಂದ ನಾಮುಂದು ತಾಮುಂದು ಎಂದು ಪೌರರಲ್ಲಿ ಬಹುಜನ ಪ್ರಯಾಣಕ್ಕೆ ಅನುವಾದರು. ಕೌಸಲ್ಯೆ, ಸುಮಿತ್ರೆ, ಕೈಕೆಯರೂ ಮಂತ್ರಿ ಮುಖ್ಯರಾದವರೂ ತಮ್ಮ ತಮ್ಮ ರಥಗಳಲ್ಲಿ ಕುಳಿತು ಪ್ರಯಾಣಕ್ಕೆ ಸಿದ್ಧರಾದರು. ಎಲ್ಲರ ಬಾಯಿಯಲ್ಲಿಯೂ ರಾಮ ಸಂಬಂಧವಾದ ಕಥೆಗಳು. ಹೀಗೆ ನಲಿಯುತ್ತಿದ್ದ ದಿಬ್ಬಣ ಸಮುದ್ರಘೋಷವನ್ನೂ ನಿಂದಿಸುವ ಕೋಲಾಹಲ ದೊಡನೆ ಭರತನನ್ನು ಹಿಂಬಾಲಿಸಿ ಪ್ರಯಾಣಮಾಡಿ ಗಂಗಾನದಿಯ ತಡಿಯನ್ನು ಸೇರಿತು.

ಅಗಾಧವಾದ ಸೈನ್ಯದೊಡನೆ ಗಂಗಾತಟಿಯಲ್ಲಿ ಬಂದಿಳಿದುಕೊಂಡ ಭರತನನ್ನು ಕಂಡು ಶ್ರೀರಾಮಚಂದ್ರನ ಪರಮಮಿತ್ರನಾದ ಗುಹನಿಗೆ ಸ್ವಲ್ಪ ಸಂದೇಹ ಬಂದಿತು: 'ಈ ಕೈಕೆಯ ಮಗ ಯಾವ ದುರಾಲೋಚನೆಯಿಂದ ಇಷ್ಟು ಅಗಾಧವಾದ ಸೈನ್ಯವನ್ನು ಕಟ್ಟಿಕೊಂಡು ಬಂದಿರಬಹುದು? ತನ್ನ ವಶವಾಗಿರುವ ಜ್ಯೇಷ್ಠನ ರಾಜ್ಯವನ್ನು ಶಾಶ್ವತ ವಾಗಿ ಪಡೆಯುವ ದುರಾಶೆಯಿಂದ ಶ್ರೀರಾಮಚಂದ್ರನನ್ನು ಸಂಹರಿಸಲು ಬಂದಿರಬಹುದೆ? ಹಾಗೇನಾದರೂ ದುರ್ಬುದ್ಧಿಯಿಂದ ಬಂದಿದ್ದಲ್ಲಿ ಅವನಿಗೆ ತಕ್ಕಬುದ್ಧಿಯನ್ನು ಕಲಿಸ ಬೇಕು' ಎಂದುಕೊಂಡು ತನ್ನ ಸೈನ್ಯವನ್ನು ಐನೂರು ದೋಣಿಗಳಲ್ಲಿ ಸಿದ್ಧವಾಗಿರುವಂತೆ ಆಜ್ಞಾಪಿಸಿದ್ದನು. ಇಷ್ಟು ಸಿದ್ಧತೆಗಳನ್ನು ಮಾಡಿಕೊಂಡ ಮೇಲೆ ಆತನು ಕಾಣಿಕೆಗಳೊಡನೆ ಹೋಗಿ ಭರತನನ್ನು ಕಂಡನು. ಸಂದರ್ಭೋಚಿತವಾದ ಪರಸ್ಪರ ಕುಶಲಪ್ರಶ್ನೆಗಳಾದ ಮೇಲೆ ಭರತನು ಆ ನಿಷಾದಾಧಿಪತಿಯನ್ನು ಕುರಿತು "ಮಿತ್ರನೆ, ನಾನು ಭಾರದ್ವಾಜಾ

ಶ್ರಮಕ್ಕೆ ಹೋಗಬೇಕಾಗಿದೆ. ಆದರೆ ಅಪಾರವಾದ ಈ ಗಂಗಾಜಲವನ್ನು ದಾಟುವುದು ಹೇಗೆ ಎಂಬುದು ದೊಡ್ಡ ಸಮಸ್ಯೆಯಾಗಿದೆ" ಎಂದನು. ಗುಹನು ತನ್ನ ದೋಣಿಗಳ ಮೂಲಕ ಆತನ ಪರಿವಾರವನ್ನೆಲ್ಲ ಆಚೆಯ ದಡಕ್ಕೆ ಸಾಗಿಸುವುದಾಗಿ ಭರವಸೆಯಿತ್ತನು. ಆದರೆ ತನ್ನ ಮನಸ್ಸಿನಲ್ಲಿದ್ದ ಸಂದೇಹವನ್ನು ಸ್ಪಷ್ಟವಾಗಿ ಬಾಯಿಬಿಟ್ಟು ಹೇಳಿದನು. "ಕೀರ್ತಿವಂತನಾದ ರಾಜಪುತ್ರನೆ, ಈ ಮಹತ್ತಾದ ಸೇನೆಯನ್ನು ಕಂಡು ನನಗೆ ಶಂಕೆ ಜನಿಸಿದೆ ; ಆದ್ದರಿಂದ ಕೇಳುತ್ತೇನೆ ; ಧರ್ಮಾತ್ಮನಾದ ಶ್ರೀರಾಮನಿಗೆ ಕೇಡನ್ನೆಸಗುವ ದುಷ್ಟಬುದ್ಧಿಯಿಂದೇನೂ ನೀನು ಹೋಗುತ್ತಿಲ್ಲವಷ್ಟೆ ?"

ಗುಹನ ಆಶಂಕೆಯನ್ನು ಕಂಡು ಆಕಾಶದಂತೆ ನಿರ್ಮಲನಾದ ಭರತನಿಗೆ ಬಹು ವ್ಯಥೆಯಾಯಿತು. ಆದರೂ ಮೃದುಮಧುರವಾಗಿಯೆ ಆತನಿಗೆ ಉತ್ತರ ಕೊಟ್ಟನು— "ಗೆಳೆಯ, ಅಂತಹ ಆಶಂಕೆಗೆ ಕಾರಣವಿಲ್ಲ. ಶ್ರೀರಾಮನು ನನ್ನ ಹಿರಿಯಣ್ಣ. ತಂದೆಗೆ ಸಮಾನ. ವನವಾಸಿಯಾದ ಆತನನ್ನು ಹಿಂದಕ್ಕೆ ಕರೆದೊಯ್ಯಲು ನಾನೀಗ ಹೊರಟಿದ್ದೇನೆ. ಈ ಮಾತು ಸತ್ಯ. ಅನ್ಯಥಾ ಭಾವಿಸಬೇಡ". ಈ ಸರಳವಾದ ನುಡಿಗಳಿಂದ ಗುಹನ ಸಂದೇಹ ಹಾರಿಹೋಯಿತು. ಆತನು ಭರತನ ಪರಮಮಿತ್ರನಾದನು. ಭರತನಿಗೆ ತನ್ನ ಒಳಗುದಿಯನ್ನು ತೋಡಿಕೊಳ್ಳಲು ಈಗ ಸರಿಯಾದ ಪಾತ್ರ ದೊರೆತಂತಾಯಿತು. ಪಾಪಿಯಾದ ತನ್ನ ತಾಯಿಯಿಂದ ಪ್ರಾಪ್ತವಾದ ಅನರ್ಥಪರಂಪರೆಯನ್ನೆಲ್ಲಾ ಆತನೊಡನೆ ಹೇಳಿಕೊಂಡು ಗೋಳಿಟ್ಟನು. ಆತನು ಕಣ್ಣೀರಿಡುತ್ತಿದ್ದುದನ್ನು ದೂರದಿಂದ ಕಂಡು ಕೌಸಲ್ಯೆ ಸೀತಾರಾಮಲಕ್ಷ್ಮಣರಿಗೆ ಏನಾದರೂ ಅಪಾಯ ಸಂಭವಿಸಿದ್ದ ಸುದ್ದಿ ಬಂದಿರ ಬಹುದೇ ಎಂದು ಆಶಂಕಿಸುವಂತಾಯಿತು. ತನ್ನ ದುಃಖ ಹೀಗೆ ತಪ್ಪು ಅಭಿಪ್ರಾಯಕ್ಕೆ ಎಡೆಗೊಡುವುದನ್ನು ಕಂಡು ಭರತನು ಸಮಾಧಾನಗೊಂಡು ಗುಹನನ್ನು ಕುರಿತು, "ಮಿತ್ರನೆ, ನನ್ನ ಅಣ್ಣನಾದ ರಾಮಚಂದ್ರನು ಇಲ್ಲಿ ಇಳಿದುಕೊಂಡಿದ್ದ ರಾತ್ರಿ ಎಲ್ಲಿ ವಿಶ್ರಮಿಸಿದನು ? ಸೀತಾದೇವಿ ಎಲ್ಲಿದ್ದಳು ? ಲಕ್ಷ್ಮಣದೇವ ಯಾವ ಎಡೆಯಲ್ಲಿದ್ದನು ? ಅವರು ಆ ದಿನ ಏನು ಊಟ ಮಾಡಿದರು ? ಎಲ್ಲಿ ಮಲಗಿದ್ದರು ? ಎಂದು ಪ್ರಶ್ನಿಸಿದನು. ಸೀತಾರಾಮಲಕ್ಷ್ಮಣರು ಅಂದು ಬರಿಯ ನೀರನ್ನು ಕುಡಿದು ಹಸಿವು ನೀಗಿದರೆಂದೂ, ಚಿಗುರೆಲೆಗಳ ಹಾಸಿಗೆಯ ಮೇಲೆ ಸೀತಾರಾಮರು ಪವಡಿಸಿದರೆಂದೂ, ಲಕ್ಷ್ಮಣನು ರಾತ್ರಿಯೆಲ್ಲವೂ ಎಚ್ಚರದಿಂದ ಅವರನ್ನು ಕಾಯುತ್ತಾ ಧನುರ್ಧಾರಿಯಾಗಿ ಸುತ್ತಲೂ ಸಂಚಾರ ಮಾಡುತ್ತಿದ್ದನೆಂದೂ, ಮರುದಿನ ಜಟಾಧಾರಿಗಳಾದ ರಾಮಲಕ್ಷ್ಮಣರೂ ಸೀತೆಯೊಡನೆ ಮುಂಪಕ್ಕೆ ಪ್ರಯಾಣ ಮಾಡಿದರೆಂದೂ ಗುಹನು ತಿಳಿಸಿದನು. ತನ್ನ ಅಣ್ಣ ಅತ್ತಿಗೆಯರು ಮಲಗಿದ್ದ ಎಡೆಗಳನ್ನು ಆತನು ತೋರುತ್ತಲೆ ಅದನ್ನು ಕಂಡು ಭರತನಿಗೆ ದುಃಖ ಮರುಕಳಿಸಿತು. ತಾಯಿಯರಿಗೆ ಆ ಹಾಸಿಗೆಗಳನ್ನು ತೋರಿಸಿ ಕಣ್ಣೀರುಗರೆದನು. ಸೀತಾರಾಮಲಕ್ಷ್ಮಣರು ಆ ಪರಿಯಾದ ಕಷ್ಟವನ್ನು ಅನುಭವಿಸುತ್ತಿರುವಾಗ ತಾನು ರಾಜಭೋಗವನ್ನು ಅನುಭವಿಸುವುದು ಅನ್ಯಾಯವೆನಿಸಿತು, ಆತನಿಗೆ. ಆದ್ದರಿಂದ ಅಂದಿನಿಂದ ತಾನೂ ಜಟಾಧಾರಿಯಾಗಿ ವಲ್ಕಲವನ್ನು ಧರಿಸಿ ಕಂದಮೂಲಗಳನ್ನು ಭುಜಿಸುತ್ತಾ ಭೂಮಿಯಲ್ಲಿ

ಮಲಗುವುದಾಗಿ ನಿಶ್ಚಯಿಸಿಕೊಂಡನು. ಹಿಂದಕ್ಕೆ ಬಂದು ರಾಜ್ಯಭಾರವನ್ನು ವಹಿಸು ವಂತೆ ಅಣ್ಣನನ್ನು ಬೇಡಿಕೊಂಡು ಆತನಿಗೆ ಬದಲಾಗಿ ತಾನು ವನವಾಸವನ್ನು ಕೈಕೊಳ್ಳು ತ್ತೇನೆ, ಒಂದು ಪಕ್ಷಕ್ಕೆ ಆತನು ಅದಕ್ಕೆ ಒಪ್ಪದಿದ್ದರೆ ತಾನೂ ಆತನೊಡನೆ ವನವಾಸ ವನ್ನು ಕೈಕೊಳ್ಳುತ್ತೇನೆ ಎಂಬುದು ಆತನ ನಿಶ್ಚಲವಾದ ನಿರ್ಧಾರವಾಗಿತ್ತು.

ಮರುದಿನ ಬೆಳಗ್ಗೆ ಗುಹನ ಸಹಾಯದಿಂದ ಭರತನೂ ಅವನ ಪರಿವಾರವೂ ಗಂಗಾ ನದಿಯನ್ನು ದಾಟಿತು. ಅದರ ಆಚೆಯ ದಡದಲ್ಲಿ ಭರದ್ವಾಜರ ಆಶ್ರಮ. ಭರತನು ತನ್ನ ಪರಿವಾರವನ್ನೆಲ್ಲಾ ದೂರದಲ್ಲಿಯೆ ನಿಲ್ಲಿಸಿ, ಪುರೋಹಿತರಾದ ವಸಿಷ್ಠರೊಡನೆ ಆಶ್ರಮವನ್ನು ಪ್ರವೇಶಿಸಿದನು. ಭರದ್ವಾಜರು ಅತಿಥಿಗಳನ್ನು ಅರ್ಘ್ಯಪಾದ್ಯಗಳಿಂದ ಸತ್ಕರಿಸಿದ ಮೇಲೆ ಪರಸ್ಪರ ಕುಶಲಪ್ರಶ್ನೆಗಳಾದುವು. ಗುಹನಂತೆ ಭರದ್ವಾಜರಿಗೂ ಭರತರ ಆಗಮನ ವಿಚಾರದಲ್ಲಿ ಸ್ವಲ್ಪ ಸಂದೇಹ ತಲೆದೋರಿತು. ತಮ್ಮ ಸಂದೇಹವನ್ನು ಬಾಯಿ ಬಿಟ್ಟು ತಿಳಿಸಿದರು. "ಅಯ್ಯಾ ರಾಜಕುಮಾರ, ಸಾಮ್ರಾಜ್ಯ ಪಾಲನಾಕಾರ್ಯವನ್ನು ಬಿಟ್ಟು ನೀನಿಲ್ಲಿಗೆ ಬರಲು ಕಾರಣವೇನು ? ದಶರಥ ಮಹಾರಾಜನು ತನ್ನ ಹೆಂಡತಿಯ ಮೋಹಕ್ಕೊಳಗಾಗಿ ಕೌಸಲ್ಯಾನಂದನನನ್ನು ಹದಿನಾಲ್ಕುವರ್ಷಗಳ ಕಾಲ ವನವಾಸಕ್ಕಾಗಿ ಅಟ್ಟಿದನು. ಈಗ ರಾಜನಾದ ನೀನು ನಿನ್ನ ರಾಜ್ಯವು ನಿಷ್ಕಂಟಕವಾಗಬೇಕೆಂದು ಬಗೆದು ಸತ್ಯಸಂಧನಾದ ಆ ಶ್ರೀರಾಮನಿಗೆ ಏನಾದರೂ ಕೇಡನ್ನು ಬಯಸಿ ಇಲ್ಲಿಗೆ ಬಂದಿರುವೆಯೊ ಹೇಗೆ ? ಇಷ್ಟು ಸೈನ್ಯದೊಡನೆ ನೀನು ಬಂದಿರುವ ಉದ್ದೇಶವೇನು ?"

ಭರದ್ವಾಜರಾಡಿದ ಕರ್ಣಕಠೋರವಾದ ನುಡಿಗಳನ್ನು ಕೇಳಿ ಭರತನು ಬಹು ದುಃಖಿತನಾದನು. ಆತನು ಅವರನ್ನು ಕುರಿತು, "ಮಹಾತ್ಮ, ನೀವೂ ಹಾಗೆ ಭಾವಿಸಿ ದಿರಾ ? ಅಯ್ಯೋ ! ನಾನು ಕೆಟ್ಟೆ ! ನನ್ನ ತಾಯಿಯಾದ ಕೈಕೆ ನಾನಿಲ್ಲದಾಗ ಮಾಡಿದ ಕಾರ್ಯಕ್ಕೆ ನಾನು ಹೊಣೆಯೆ ? ಆಕೆಯ ಅಭಿಪ್ರಾಯವನ್ನು ನಾನು ಅನುಮೋದಿಸಿಲ್ಲ; ಈಗ ನಾನು ಹೊರಟಿರುವುದು ಆ ಪುರುಷಶ್ರೇಷ್ಠನನ್ನು ಹಿಂದಕ್ಕೆ ಕರೆತರಬೇಕೆಂದೇ. ಈ ಕಾರ್ಯದಲ್ಲಿ ನನಗೆ ವಿಜಯವಾಗಬೇಕೆಂದು ಆಶೀರ್ವದಿಸಿ ಅನುಗ್ರಹಿಸಿ. ಆತನು ಎಲ್ಲಿರುವ ನೆಂಬುದನ್ನು ನನಗೆ ದಯವಿಟ್ಟು ತಿಳಿಸಿ" ಎಂದನು. ಈ ಮಾತುಗಳನ್ನು ಕೇಳಿ ಭರದ್ವಾಜರಿಗೆ ಆನಂದವಾಯಿತು. "ವತ್ಸ ಭರತ, ರಘುವಂಶಜನಿಗೆ ಉಚಿತವಾದ ಮಾತನ್ನೆ ನೀನು ಆಡಿದೆ. ನಿನ್ನ ಸ್ವಭಾವ ನನಗೆ ತಿಳಿದಿದ್ದಿತಾದರೂ ನೀನು ಅಣ್ಣನಲ್ಲಿ ಮಹಾ ಪ್ರೇಮವುಳ್ಳವನೆಂಬ ಕೀರ್ತಿಯನ್ನು ಪ್ರಕಟಗೊಳಿಸುವುದಕ್ಕಾಗಿ ಈ ರೀತಿ ಹೇಳಿದೆ. ನೀನು ಅನ್ಯಥಾ ಭಾವಿಸಬೇಡ. ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟ ಪರ್ವತದಲ್ಲಿ ವಾಸಮಾಡುತ್ತಿದ್ದಾನೆ. ನೀನು ನಿನ್ನ ಪರಿವಾರದೊಂದಿಗೆ ಇಲ್ಲಿಯೆ ತಂಗಿದ್ದು ನಮ್ಮ ಆತಿಥ್ಯವನ್ನು ಸ್ವೀಕರಿಸಿ, ನಾಳೆ ಇಲ್ಲಿಂದ ಮುಂದಕ್ಕೆ ಪ್ರಯಾಣ ಮಾಡು" ಎಂಬುದಾಗಿ ಭರತನನ್ನು ಸಮಾಧಾನಪಡಿಸಿದನು.

ಭರದ್ವಾಜರ ಅಪ್ಪಣೆಯಂತೆ ಭರತನ ಅಸಂಖ್ಯಾತ ಸೇನೆ ಆಶ್ರಮವನ್ನು ಪ್ರವೇಶಿ ಸಿತು. ಮಹರ್ಷಿಗಳಾದ ಅವರ ತಪಃಪ್ರಭಾವದಿಂದ ಐದು ಯೋಜನಗಳಷ್ಟು ವಿಸ್ತಾರ

ವಾದ ಪ್ರದೇಶವು ಹಳ್ಳತಿಟ್ಟುಗಳಿಲ್ಲದ ಸಮಪ್ರದೇಶವಾಯಿತು. ಮೆತ್ತನೆಯ ಹುಲ್ಲಿನಿಂದ ತುಂಬಿದ ಆ ಪ್ರದೇಶದಲ್ಲಿ ಸೈನಿಕರೂ ಇಳಿದುಕೊಂಡರು. ಭರತನಿಗೂ ರಾಜಮಾತೆಯರಿಗೂ ಅನುಕೂಲಿಸುವಂತಹ ಅರಮನೆಯೊಂದು ಅಲ್ಲಿ ನಿರ್ಮಾಣವಾಯಿತು. ಸುಗಂಧಯುಕ್ತವಾದ ತಂಗಾಳಿ ಬೀಸಿ ಪ್ರಯಾಣಿಕರ ಆಯಾಸವನ್ನು ಪರಿಹರಿಸಿತು. ಗಂಧರ್ವಗಾನದಿಂದ ಅವರೆಲ್ಲರೂ ಆನಂದಭರಿತರಾದರು. ಷಡ್ರಸೋಪೇತವಾದ ರಾಜಭೋಜನದಿಂದ ಪರಿವಾರದವರೆಲ್ಲರೂ ತಣಿದುಹೋದರು. ಜನರು ಮಾತ್ರವೆ ಅಲ್ಲ, ಪ್ರಯಾಣ ಮಾಡುತ್ತಿದ್ದ ಆನೆ, ಕುದುರೆ ಮೊದಲಾದ ಪ್ರಾಣಿಗಳೂ ಕೂಡ ತಮ್ಮ ಆಹಾರವನ್ನು ತಿಂದು ತೇಗಿದುವು. ಯಾರಿಗೂ ಯಾವುದಕ್ಕೂ ಕೊರತೆಯಿಲ್ಲದಂತೆ ಆತಿಥ್ಯ ನಡೆಯಿತು. ಭೋಜನಪಾನೀಯಗಳಿಂದ ತೃಪ್ತಿಗೊಂಡ ಜನ ನಂದನವನದಂತಿದ್ದ ತಪೋವನದಲ್ಲಿ ದೇವತೆಗಳಂತೆ ವಿಹರಿಸುತ್ತಿದ್ದರು.

ಮರುದಿನ ಬೆಳಗ್ಗೆ ಭರತನು ಭರದ್ವಾಜರಿಂದ ಬೀಳ್ಕೊಳ್ಳಲು ಅವರ ಬಳಿಗೆ ಹೋದನು. ಆತನ ಜೊತೆಯಲ್ಲಿ ರಾಜಮಾತೆಯರು ಋಷಿಸಂದರ್ಶನಕ್ಕಾಗಿ ಹೋದರು. ಅವರನ್ನು ಮಹರ್ಷಿಗಳಿಗೆ ಪರಿಚಯಮಾಡಿಕೊಡುತ್ತಾ ಭರತನು ತನ್ನ ತಾಯಿಯ ಸರದಿ ಬಂದಾಗ "ಇವಳು ನನ್ನ ತಾಯಿ, ಕೈಕೆ. ಅಣ್ಣನಾದ ಶ್ರೀರಾಮನು ಅನಾಥನಂತೆ ವನವಾಸ ಕೈಗೊಂಡುದಕ್ಕೂ, ಪುತ್ರವಿಹೀನನಂತೆ ನನ್ನ ತಂದೆ ಮರಣಹೊಂದಿದುದಕ್ಕೂ ಇವಳೇ ಕಾರಣಳು. ಇವಳು ಬಹು ಕೋಪಿಷ್ಠೆ. ತನ್ನ ಸಮಾನರಾದ ಸುಂದರಿಯರೇ ಇಲ್ಲವೆಂಬ ಗರ್ವದಿಂದ ತುಂಬಿದವಳು. ಐಶ್ವರ್ಯಲೋಭದಿಂದ ಯಾವ ಪಾಪ ಮಾಡುವುದಕ್ಕೂ ಹೇಸದವಳು. ನಮ್ಮೆಲ್ಲರ ಕಷ್ಟಗಳಿಗೂ ಮೂಲ ಕಾರಣಳಾದ ಮಹಾಪಾಪಿ ಈಕೆ" ಎಂದು ಹೇಳಿ ಕಣ್ಣೀರಿಟ್ಟನು. ಕೃತಕಾರ್ಯ ಪಶ್ಚಾತ್ತಾಪದಿಂದ ಮೊದಲೇ ಸಂಕಟಪಡುತ್ತಿದ್ದ ಕೈಕೆ ಈಗ ಮತ್ತೂ ಬಾಗಿ ಭೂಮಿಗಿಳಿದಳು. ಆಗ ಭರದ್ವಾಜರು ಭರತನನ್ನು ಕುರಿತು "ಭರತಕುಮಾರ, ನಿನ್ನ ತಾಯಿಯಲ್ಲಿ ದೋಷವನ್ನು ಆರೋಪಿಸಬೇಡ. ಆಕೆಯ ಅಕಾರ್ಯವೇ ಲೋಕಕ್ಕೆ ಮಹದುಪಕಾರವಾಗಿ ಪರಿಣಮಿಸುತ್ತದೆ. ಶ್ರೀರಾಮನ ಅರಣ್ಯಗಮನವು ಮಾನವರಿಗೂ ದೇವತೆಗಳಿಗೂ ಪರಮ ಕಲ್ಯಾಣಕರವಾಗಿ ಪರಿಣಮಿಸುತ್ತದೆ" ಎಂದು ಹೇಳಿ ಆತನನ್ನು ಸಮಾಧಾನ ಪಡಿಸಿದನು.

ಭರತನು ಭರದ್ವಾಜ ಋಷಿಗಳಿಗೆ ಪ್ರದಕ್ಷಿಣ ನಮಸ್ಕಾರ ಮಾಡಿ ಸಕಲ ಪರಿವಾರದೊಡನೆ ಪ್ರಯಾಣ ಬೆಳಸಿದನು. ಆನೆ, ಕುದುರೆ, ರಥಗಳಿಂದ ಕೂಡಿದ ಆ ಸೇನೆ ದೊಡ್ಡ ಮೇಘದಂತೆ ದಕ್ಷಿಣ ದಿಗ್ಭಾಗವನ್ನು ವ್ಯಾಪಿಸಿ ಗಂಗಾತಟದ ಅರಣ್ಯವನ್ನು ದಾಟಿತು. ಭರತನು ದೂರದಲ್ಲಿ ಕಾಣುತ್ತಿದ್ದ ಪರ್ವತವನ್ನು ವಸಿಷ್ಠರಿಗೆ ತೋರಿಸಿ "ಓ ಋಷಿಶ್ರೇಷ್ಠರೆ, ಭರದ್ವಾಜ ಋಷಿಗಳು ವರ್ಣಿಸಿದ ಪ್ರದೇಶವಿದೆ. ಅಲ್ಲಿ ಕಾಣುತ್ತಿರುವ ಪರ್ವತವೆ ಚಿತ್ರಕೂಟ ಪರ್ವತವೆಂದು ತೋರುತ್ತದೆ" ಎಂದು ಹೇಳಿದನು. ಅನಂತರ ತಮ್ಮನ ಕಡೆಗೆ ತಿರುಗಿ "ವತ್ಸಾ, ಶತ್ರುಘ್ನ, ನಾವು ಬರುವುದಕ್ಕೆ ಮುಂಚೆ ನಿಶ್ಶಬ್ದವಾಗಿದ್ದ ಈ ಕಾನನ ಪ್ರಾಂತವು ಈಗ ನಮ್ಮ ಜನರಿಂದ ತುಂಬಿಕೊಂಡು ಅಯೋಧ್ಯೆಯಂತೆ ಜನ

ನಿಬಿಡವಾಗಿದೆ. ನಮ್ಮ ಸೈನ್ಯದಿಂದ ಭಯಗೊಂಡು ತಮ್ಮ ನಿವಾಸಸ್ಥಾನಗಳಿಗೆ ಓಡು ತ್ತಿರುವ ಈ ಮಯೂರಗಳನ್ನು ನೋಡು, ಎಷ್ಟು ಮನೋಹರವಾಗಿವೆ! ಕುಸುಮ ದಿಂದ ಅಲಂಕೃತವಾಗಿರುವಂತೆ ಬಿಳಿಯ ಚುಕ್ಕಿಗಳಿಂದ ಮನೋಜ್ಞವಾಗಿರುವ ಆ ಜಿಂಕೆಗಳನ್ನು ನೋಡು, ಹೆಣ್ಣು ಜಿಂಕೆಗಳೊಡನೆ ಹೇಗೆ ವಿಹರಿಸುತ್ತಿವೆ! ಋಷಿಗಳು ವಾಸಿಸಲು ಯೋಗ್ಯವಾದ ಈ ವನವು ನನಗೆ ಇಂದ್ರನ ಅಮರಾವತಿಯಂತೆ ಸುಂದರ ವಾಗಿ ತೋರುತ್ತಿದೆ. ಪುರುಷೋತ್ತಮರಾದ ಶ್ರೀರಾಮಲಕ್ಷ್ಮಣರು ಇಲ್ಲಿಯೆ ಎಲ್ಲಿಯೊ ವಾಸಿಸುತ್ತಿರಬೇಕು. ಅವರಿರುವ ಸ್ಥಳವನ್ನು ಹುಡುಕಿಕೊಂಡು ಬರುವಂತೆ ದೂತರನ್ನು ಕಳುಹಿಸು" ಎಂದನು. ಆತನ ಅಪ್ಪಣೆಯಂತೆ ಹೊರಟ ದೂತರು ಅಲ್ಲಲ್ಲಿ ಹುಡುಕು ತ್ತಿರುವಾಗ ದೂರದಲ್ಲಿ ಹೊಗೆಯೇಳುವುದನ್ನು ಕಂಡು ಅದನ್ನು ಭರತನಿಗೆ ಅರುಹಿ ದರು. ಆಗ ಭರತನು ಸೈನ್ಯಕ್ಕೆ ಅಲ್ಲಿಯೆ ತಳವೂರುವಂತೆ ತಿಳುಹಿಸಿ, ಸುಮಂತ್ರನನ್ನೂ ವಸಿಷ್ಠರನ್ನೂ ಕರೆದುಕೊಂಡು ಹೊಗೆಯೇಳುತ್ತಿದ್ದ ಸ್ಥಳಕ್ಕೆ ಹೊರಟನು. ಇನ್ನೇನು ಬೇಗನೆ ಶ್ರೀರಾಮನನ್ನು ಕಾಣುವೆವೆಂಬ ಸಂತೋಷದಿಂದ ಹಿಗ್ಗಿ ಸಮಸ್ತ ಪರಿವಾರವೂ ಹೊಗೆಯ ಶಿಖರಭಾಗದಂತಿದ್ದ ತುದಿಯನ್ನೆ ದಿಟ್ಟಿಸಿ ನೋಡುತ್ತಿತ್ತು.

---

## ೧೬

# ಚಿತ್ರಕೂಟದಲ್ಲಿ ಸಂದರ್ಶನ

ಶ್ರೀರಾಮಚಂದ್ರನು ಚಿತ್ರಕೂಟದ ಪರ್ಣಶಾಲೆಯಲ್ಲಿ ವಾಸಿಸತೊಡಗಿ ಒಂದು ತಿಂಗಳಾಗಿತ್ತು. ಆ ಒಂದು ತಿಂಗಳು ಸೀತಾರಾಮರ ವನವಾಸದಲ್ಲಿ ಅತ್ಯಂತ ಸುಖಮಯವಾದ ಕಾಲವೆಂದು ಹೇಳಬೇಕು. ಪ್ರತಿ ದಿನವೂ ಶ್ರೀರಾಮನು ಮಡದಿಗೆ ಚಿತ್ರಕೂಟದ ಅತಿ ರಮ್ಯವಾದ ಪ್ರದೇಶಗಳನ್ನು ತೋರಿಸಿ ಆಕೆಯನ್ನು ಆನಂದಪಡಿಸುವನು. ಅಲ್ಲಿಯ ಹಕ್ಕಿಗಳನ್ನೂ ಮೃಗಗಳನ್ನೂ ನೋಡುತ್ತಾ ಇಬ್ಬರೂ ವನದಲ್ಲಿ ವಿಹರಿಸುವರು; ಅಲ್ಲಲ್ಲಿ ಹರಿಯುತ್ತಿರುವ ಝರಿಗಳಲ್ಲಿ ನೀರಾಟವಾಡುವರು; ತಂಗಾಳಿಗೆ ಮೈಯೊಡ್ಡಿ ಹಕ್ಕಿಗಳ ಇಂಪಾದ ಗಾನವನ್ನು ಕೇಳುತ್ತಾ ಮೈಮರೆಯುವರು. ಮಂದಾಕಿನೀ ನದಿಯ ಮರಳು ದಿನ್ನೆಯಲ್ಲಿ ಕುಳಿತು ಹಂಸ ಸಾರಸಾದಿ ಹಕ್ಕಿಗಳನ್ನೂ, ಕಮಲಪುಷ್ಪಗಳ ಮಧ್ಯದಲ್ಲಿ ಜುಳುಜುಳು ನಾದದಿಂದ ಹರಿಯುತ್ತಿರುವ ಪ್ರವಾಹವನ್ನೂ ನೋಡಿ, ರಸನಿಮಿಷಗಳನ್ನು ಸವಿಯುವರು. ವನವಿಹಾರದ ವೇಳೆಗಳಲ್ಲಿ ಸೀತೆ ಆಶಿಸಿದ ಹೂವನ್ನೊ ಹಣ್ಣನ್ನೊ ಶ್ರೀರಾಮನು ಕಿತ್ತುತಂದು ಆಕೆಗೆ ಒಪ್ಪಿಸುವನು. ಹೂಗಳೆಂದರೆ ಆಕೆಗೆ ಪ್ರಾಣ. ಆಕೆ ಮಂದಹಾಸದಿಂದ ಅವುಗಳನ್ನು ಸ್ವೀಕರಿಸುವಳು. ಲಕ್ಷ್ಮಣನು ರುಚಿರುಚಿಯಾದ ಮಾಂಸವನ್ನು ಪಕ್ವಗೊಳಿಸಿ ಅವರಿಗೆ ನೀಡುವನು. ಅವುಗಳನ್ನು ತಿಂದು ಅವರು ತೃಪ್ತರಾಗುವರು. ಒಮ್ಮೊಮ್ಮೆ ಶ್ರೀರಾಮನು ಮಂದಹಾಸದಿಂದ ಮಡದಿಯನ್ನು ಕುರಿತು, "ಜಾನಕಿ, ಧರ್ಮಾತ್ಮನಾದ ಲಕ್ಷ್ಮಣ ನಮ್ಮ ಸಮೀಪದಲ್ಲಿದ್ದಾನೆ. ಅನುಕೂಲಳಾದ ನೀನು ಜೊತೆಯಲ್ಲಿರುವೆ. ನಿಮ್ಮ ಸಹವಾಸದಲ್ಲಿರುವ ನನಗೆ ಅಯೋಧ್ಯೆಯಾಗಲಿ, ರಾಜ್ಯೈಶ್ವರ್ಯಗಳಾಗಲಿ ಕಃಪದಾರ್ಥಗಳಾಗಿ ತೋರುತ್ತವೆ. ನನ್ನ ಪಾಲಿಗೆ ಅವು ಇಲ್ಲವೆಂದು ನನಗೆ ಸ್ವಲ್ಪವೂ ವ್ಯಥೆಯಾಗುತ್ತಿಲ್ಲ" ಎನ್ನುವನು. ಆ ಮಾತನ್ನು ಕೇಳಿ ಸೀತೆ ಮುಗುಳ್ನಗುವಳು.

ಒಂದು ದಿನ ಸೀತಾರಾಮರು ಚಿತ್ರಕೂಟದ ನಿಮ್ನ ಪ್ರದೇಶದಲ್ಲಿ ಕುಳಿತು ಲಕ್ಷ್ಮಣನು ತಂದಿತ್ತ ರುಚಿರುಚಿಯಾದ ಆಹಾರವನ್ನು ಸೇವಿಸುತ್ತಿದ್ದಾರೆ. ದೂರದಲ್ಲಿ ದೊಡ್ಡ ಕೋಲಾಹಲ ನಾದವೊಂದು ಕೇಳಿಸಿತು. ಜನರ ಕಾಲ್ತುಳಿತದಿಂದ ಎದ್ದ ಧೂಳೀ ಪ್ರವಾಹವೊಂದು ವಾಯುಮಂಡಲದಲ್ಲಿ ಕಾಣಿಸಿತು. ಅರಣ್ಯದ ಮೃಗಗಳೆಲ್ಲವೂ ಬೆದರಿ ಓಡಿ ಹೋಗುತ್ತಿದ್ದುವು. ಅದನ್ನು ಕಂಡ ಶ್ರೀರಾಮನು ತಮ್ಮನನ್ನು ಕುರಿತು "ಸೌಮಿತ್ರಿ, ಜನಕೋಲಾಹಲದಿಂದ ಬೆದರಿದ ಕಾಡುಮೃಗಗಳು ದಿಕ್ಕೆಟ್ಟು ಓಡುತ್ತಿವೆ. ಯಾವನಾದರೂ ರಾಜನೊಬ್ಬನು ಬೇಟೆಗಾಗಿ ಬಂದಿದ್ದಾನೆಯೊ ಅಥವಾ ಯಾವುದಾದರೂ ಕ್ರೂರ ಜಂತುವೊಂದು ಈ ಅರಣ್ಯವನ್ನು ಪ್ರವೇಶಿಸಿದೆಯೊ! ಪಕ್ಷಿಗಳು ಕೂಡ

ಹೊರಕ್ಕೆ ಬರದೆ ಅಲ್ಲಲ್ಲಿ ಅವಿತುಕೊಂಡಿವೆಯಲ್ಲಾ ; ಇದಕ್ಕೆ ಕಾರಣವೇನೊ ನೋಡು" ಎಂದನು. ಒಡನೆಯೆ ಲಕ್ಷ್ಮಣನು ಎತ್ತರವಾದ ಒಂದು ಮರವನ್ನು ಹತ್ತಿ ಸುತ್ತಲೂ ನೋಡಿದನು. ಉತ್ತರದಿಕ್ಕಿನಲ್ಲಿ ದೊಡ್ಡದೊಂದು ಸೈನ್ಯ ತಮ್ಮ ಕಡೆಗೆ ಸಾಗಿಬರುತ್ತಿರುವುದು ಕಾಣಿಸಿತು. ಅದರಲ್ಲಿದ್ದ ಅಸಂಖ್ಯಾತವಾದ ಆನೆಗಳನ್ನೂ ಕುದುರೆಗಳನ್ನೂ ರಥಗಳನ್ನೂ ಕಾಲಾಳುಗಳನ್ನೂ ಕಂಡು ಆತನಿಗೆ ಯಾರೊ ತಮ್ಮ ಮೇಲೆ ದಂಡೆತ್ತಿ ಬರುತ್ತಿರುವರೆಂದು ಭಾಸವಾಯಿತು. ಮರದ ನೆತ್ತಿಯಿಂದಲೆ ಕೂಗಿ ಹೇಳಿದನು: "ಅಣ್ಣಾ, ಹೊಗೆಯಾಡುತ್ತಿರುವ ನಮ್ಮ ಅಗ್ನಿಹೋತ್ರವನ್ನು ಮೊದಲು ಆರಿಸಿಬಿಡು. ಸೀತಾದೇವಿಯನ್ನು ಗುಹೆಯಲ್ಲಿ ಬಚ್ಚಿಟ್ಟು ಕವಚವನ್ನು ಧರಿಸು. ಧನುರ್ಬಾಣಗಳು ಸಿದ್ಧವಾಗಲಿ. ಯಾವುದೋ ದೊಡ್ಡ ಸೈನ್ಯವೊಂದು ಇತ್ತ ಕಡೆಗೆ ಬರುತ್ತಿದೆ" ಎಂದನು.



ಜನರ ಕಾಲ್ತುಳಿತದಿಂದ ಎದ್ದ ಧೂಳೀಪ್ರವಾಹವೊಂದು
ವಾಯುಮಂಡಲದಲ್ಲಿ ಕಾಣಿಸಿತು

ಲಕ್ಷ್ಮಣನು ಗಾಬರಿಗಾಬರಿಯಾಗಿ ಕೂಗಿ ಹೇಳಿದರೂ ಶ್ರೀರಾಮನು ಶಾಂತವಾಗಿಯೆ ಅವನನ್ನು ಕುರಿತು "ವತ್ಸ, ಆ ಸೈನ್ಯ ಯಾರದಿರಬಹುದು ? ಸ್ವಲ್ಪ ನೋಡಿ ಹೇಳು" ಎಂದನು. ಲಕ್ಷ್ಮಣನು ದೃಷ್ಟಿಸಿ ನೋಡಿದನು. ಆತನಿಗೆ ಆ ಸೈನ್ಯ ಯಾರದೆಂದು ಗೊತ್ತಾಯಿತು. ಕೋಪದಿಂದ ಕಿಡಿಕಿಡಿಯಾಗಿ ಬಿರುನುಡಿದನು. "ಅಣ್ಣಾ, ಆ ಕೈಕೆಯ ಮಗ ಸಸೈನ್ಯನಾಗಿ ಬರುತ್ತಿದ್ದಾನೆ. ಸಾಕೇತಸಾಮ್ರಾಜ್ಯದ ಪಟ್ಟಾಭಿಷೇಕದಿಂದ ತೃಪ್ತನಾಗದೆ ನಮ್ಮನ್ನು ಕೊಂದು ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿಕೊಳ್ಳಬೇಕೆಂದು ಬರುತ್ತಿದ್ದಾನೆ. ಅಗೋ ನೋಡು, ರಥದ ಮೇಲೆ ಹಾರುತ್ತಿರುವ

ಕೋವಿದಾರ ಧ್ವಜವೇ ಬರುತ್ತಿರುವವನು ಭರತನೆಂದು ಸಾರಿಹೇಳುತ್ತಿದೆ. ಅಣ್ಣಾ, ಬೇಗ ಮಾಡು. ನಾವು ಧನುರ್ಧಾರಿಗಳಾಗಿ ಚಿತ್ರಕೂಟದಲ್ಲಿ ಎತ್ತರವಾದ ಒಂದು ಪ್ರದೇಶವನ್ನು ಆಶ್ರಯಿಸೋಣ. ಬರಲಿ ಆ ಭರತ. ನಮ್ಮೆಲ್ಲರ ವ್ಯಥೆಗೂ ಕಾರಣ ಭೂತನಾದ ಅವನನ್ನು ಕೊಂದುಹಾಕುತ್ತೇನೆ. ಧರ್ಮವನ್ನು ತೊರೆದ ಆ ಅಪಕಾರಿ ಯನ್ನು ಕೊಲ್ಲುವುದರಿಂದ ಲೇಶವಾದರೂ ಪಾಪ ಬರುವುದಿಲ್ಲ. ಅವನ ಸಾವಿನಿಂದ ಅವನ ತಾಯಿ ಅಪಾರವಾದ ವ್ಯಥೆಯನ್ನು ಹೊಂದಲಿ. ಅವಳು ಸಂಕಟಪಟ್ಟಮೇಲೆ ಆವಳನ್ನೂ ಸಂಹಾರ ಮಾಡುತ್ತೇನೆ. ಇಷ್ಟು ಮಾಡಿದ ಮೇಲೆ ಪಾಪಾತ್ಮ ರಾದವರೆಲ್ಲರೂ ಮಡಿದು ಭೂಭಾರ ಕಡಿಮೆಯಾದಂತಾಗುತ್ತದೆ. ನನ್ನ ಕ್ರೋಧಾಗ್ನಿ ಯಿಂದ ಈ ಸೇನಾರೂಪದ ಕಂಟಕವೆಲ್ಲವೂ ಉರಿದುಹೋಗಲಿ. ನನ್ನ ತೀಕ್ಷ್ಣವಾದ ಬಾಣಗಳಿಗೆ ಬಲಿಯಾದ ಈ ಸೈನ್ಯದ ರಕ್ತದಿಂದ ಚಿತ್ರಕೂಟ ಪರ್ವತದ ಅರಣ್ಯವೆಲ್ಲವೂ ನೆನೆದುಹೋಗಲಿ. ಈ ಚದುರಂಗಸೇನೆಯ ಮಾಂಸಸೇವನೆಯಿಂದ ಈ ಅರಣ್ಯದ ಶ್ವಾಪದಗಳೆಲ್ಲವೂ ತಣಿದುಹೋಗಲಿ. ಈ ಭರತನನ್ನು ಅವನ ಸೈನ್ಯ ಸಹಿತವಾಗಿ ಸಂಹಾರ ಮಾಡುತ್ತೇನೆ; ಇದರಲ್ಲಿ ಸಂಶಯವಿಲ್ಲ."

ದಳ್ಳುರಿಯಂತೆ ಕಿಡಿಗಾರುತ್ತಿರುವ ತಮ್ಮನನ್ನು ಶಾಂತನಾದ ಶ್ರೀರಾಮಚಂದ್ರ ಮೂರ್ತಿ ಮೃದುಮಧುರವಾದ ಕಂಠದಿಂದ ಸಮಾಧಾನಪಡಿಸಿದನು.—"ಅಯ್ಯಾ, ಪ್ರಾಜ್ಞನಾದ ಭರತನು ತಾನೇ ಸ್ವತಃ ಇಲ್ಲಿಗೆ ಬರುತ್ತಿರುವಾಗ ಧನುಸ್ಸು, ಕತ್ತಿ, ಕವಚಗಳನ್ನು ತೆಗೆದುಕೊಂಡು ಏನು ಮಾಡಬೇಕು? ಬಂಧುವಧೆಯಿಂದ ಬರುವ ಸಂಪತ್ತು ವಿಷಮಿಶ್ರವಾದ ಅನ್ನವಿದ್ದಂತೆ. ಅಲ್ಲದೆ ಈ ರಾಜ್ಯವನ್ನು ಸ್ವಸುಖಕ್ಕಾಗಿ ನಾನೆಂದೂ ಕಾಮಿಸಿದವನಲ್ಲ. ರಾಜ್ಯ ಬಂದರೂ ಅದು ಸೋದರರಾದ ನಿಮ್ಮ ಸಂತೋಷಕ್ಕಾಗಿಯೆ ಹೊರತು ನನ್ನ ಪ್ರಯೋಜನಕ್ಕಾಗಿ ಅಲ್ಲ. ಅನ್ಯಾಯದಿಂದ ಇಂದ್ರಪದವಿ ಬರುವಂತಿದ್ದರೂ ಅದು ನನಗೆ ಬೇಡ. ಹೀಗಿರುವಲ್ಲಿ ಭರತನನ್ನು ಕೊಂದು ಆತನ ರಾಜ್ಯವನ್ನು ನಾನು ಸ್ವೀಕರಿಸಲೆ? ವತ್ಸ, ಭರತನು ನನ್ನಲ್ಲಿ ಬಹು ವಾತ್ಸಲ್ಯವುಳ್ಳವನು. ನನಗೆ ಪುನಃ ರಾಜ್ಯವನ್ನರ್ಪಿಸುವುದಕ್ಕಾಗಿಯೆ ಅವನು ಬಂದಿರ ಬಹುದು. ಎಂದಾದರೂ ಭರತನು ಮತ್ತೊಬ್ಬರಿಗೆ ಅನ್ಯಾಯವನ್ನು ಮಾಡಿದ್ದಾನೆಯೆ? ಅವನಲ್ಲಿ ಸಂದೇಹಪಡುವುದು ನಿನಗೆ ಯಾವ ನ್ಯಾಯ? ನೀನಿನ್ನು ಆತನ ವಿಚಾರದಲ್ಲಿ ಕಠಿಣವಾದ ನುಡಿಗಳನ್ನಾಡಬೇಡ. ಇದೋ ನಿನಗೆ ರಾಜ್ಯದ ಮೇಲೆ ಅಷ್ಟು ಆಪೇಕ್ಷೆ ಯಿದ್ದರೆ ನಾನು ಆತನಿಗೆ ಹೇಳಿ ರಾಜ್ಯವನ್ನು ನಿನಗೆ ಕೊಡಿಸುತ್ತೇನೆ. ನಾನು ಹೇಳಿದರೆ ಆತನು ಎಂದಿಗೂ ಹಿಂದೆಗೆಯನು" ಎಂದನು.

ಶ್ರೀರಾಮನ ಮಾತುಗಳನ್ನು ಕೇಳಿ ಲಕ್ಷ್ಮಣನಿಗೆ ಬಹು ನಾಚಿಕೆಯಾಯಿತು. ದೇಹ ಕುಗ್ಗಿ, ತಲೆತಗ್ಗಿ ಆತ ಹೇಳಿದ—"ಅಣ್ಣಾ, ನಿನ್ನನ್ನು ಕಾಣಲು ತಂದೆಯಾದ ದಶರಥನೆ ಬಂದಿದ್ದರೂ ಬಂದಿರಬಹುದು." ತಮ್ಮನ ದುರವಸ್ಥೆಯನ್ನು ಕಂಡು ಶ್ರೀರಾಮನಿಗೆ "ಪಾಪ" ಎನ್ನಿಸಿತು. ಆತನನ್ನು ಸಮಾಧಾನಪಡಿಸುವುದಕ್ಕಾಗಿ "ಇರಬಹುದು, ಮಗೂ;

ನಮ್ಮನ್ನು ಹಿಂದಕ್ಕೆ ಕರೆದೊಯ್ಯಲು ತಂದೆಯೆ ಬಂದಿದ್ದರೂ ಬಂದಿರಬಹುದು. ಕಡೆಯ ಪಕ್ಷ ಸುಕುಮಾರಿಯಾದ ಜಾನಕಿಯನ್ನಾದರೂ ಕರೆದುಕೊಂಡು ಹೋಗಲು ಆತನು ನಿಶ್ಚಯಿಸಿಕೊಂಡು ಬಂದಿರಬಹುದು. ನೋಡು! ತಂದೆಯ ಆನೆ ಆ ಶತ್ರುಂಜಯ ಹೇಗೆ ಸೇನೆಯ ಮುಂಭಾಗದಲ್ಲಿ ಗಂಭೀರವಾಗಿ ಬರುತ್ತಾ ಇದೆ. ಆದರೆ, ಲಕ್ಷ್ಮಣಾ! ಇದೇನು? ಶ್ವೇತಚ್ಛತ್ರವೆ ಕಾಣಬರುತ್ತಿಲ್ಲವಲ್ಲಾ! ನನಗೇಕೋ ಸಂದೇಹವಾಗುತ್ತಿದೆ. ವೃಕ್ಷಾಗ್ರ ದಿಂದ ನೀನು ಬೇಗ ಇಳಿದು ಬಾ" ಎಂದನು. ಅಣ್ಣನ ಆಜ್ಞೆಯಂತೆ ಲಕ್ಷ್ಮಣನು ಕೆಳಗಿಳಿದು ಬಂದನು.

ಇತ್ತ ಭರತನು ಸೇನೆಯನ್ನೆಲ್ಲ ಚಿತ್ರಕೂಟ ಪರ್ವತದ ಬುಡದಲ್ಲಿ ನಿಲ್ಲಿಸಿ, ತನ್ನ ಅಣ್ಣದೇವನನ್ನು ಕಾಣುವುದಕ್ಕಾಗಿ ಕಾಲ್ನಡಗೆಯಿಂದಲೆ ಹೊರಟನು. ಶತ್ರುಘ್ನ, ಗುಹ, ಸುಮಂತ್ರ ಮೊದಲಾದ ಪ್ರಮುಖರೂ ಆತನನ್ನು ಹಿಂಬಾಲಿಸಿದರು. ಆತನ ತಲೆಯ ತುಂಬ ಶ್ರೀರಾಮನಿಗೆ ಸಂಬಂಧಿಸಿದ ಭಾವನೆಗಳೆ. ಶ್ರೀರಾಮಚಂದ್ರನ ಮುಖಚಂದ್ರನನ್ನು ಸದಾ ಕಾಣುತ್ತಿರುವ ಲಕ್ಷ್ಮಣನು ಎಂತಹ ಪುಣ್ಯವಂತ! ಗಂಡನನ್ನು ಅನುಸರಿಸಿ ಬಂದಿರುವ ಪತಿವ್ರತಾಶಿರೋಮಣಿಯಾದ ಸೀತಾದೇವಿ ಎಂತಹ ಕೃತಕೃತ್ಯಳು! ಶ್ರೀರಾಮನಿಗೆ ವಸತಿಯನ್ನು ಕಲ್ಪಿಸಿಕೊಟ್ಟಿರುವ ಈ ಚಿತ್ರಕೂಟ ಎಂತಹ ಭಾಗ್ಯಶಾಲಿ! ಆಲೋಚನೆಗಳಿಗೆ ತಾಳಹಾಕುತ್ತಾ ಆತನ ಕಾಲುಗಳು ಮುಂದು ವರಿಯುತ್ತಿದ್ದುವು. ಗಿಡಬಳ್ಳಿಗಳನ್ನು ತೂರಿ ತೂರಿ ಹೋಗುತ್ತಿರಲು ಎದುರಿಗೆ ಪರ್ಣಶಾಲೆಯೊಂದು ಗೋಚರವಾಯಿತು. ಅದೇ ಶ್ರೀರಾಮನ ಪರ್ಣಶಾಲೆಯಿರ ಬಹುದೆ? ಅದರ ಸಮೀಪದಲ್ಲಿಯೆ ರಾತ್ರಿ ಚಳಿಕಾಯಿಸಿಕೊಳ್ಳಲು ಕೂಡಿಟ್ಟಿರುವ ಕಟ್ಟಿಗೆಗಳ ರಾಶಿಯೊಂದು ಕಡೆ; ಪೂಜೆಗಾಗಿ ಕೊಯ್ದಿಟ್ಟಿರುವ ಹೂಗಳ ರಾಶಿಯೊಂದು ಕಡೆ. ಸಮೀಪದಲ್ಲಿಯೆ ಗಿಡದ ರೆಂಬೆಗಳಿಗೆ ಕಟ್ಟಿರುವ ನಾರುಮಡಿಗಳು—ಇವು ಕಣ್ಣಿಗೆ ಬಿದ್ದುವು. ಗಿಡದ ರೆಂಬೆಗಳಿಗೆ ಕಟ್ಟಿರುವ ಹಳೆಯ ಬಟ್ಟೆಯ ತುಂಡುಗಳನ್ನು ಕಂಡು ಆವೇಳೆಯಲ್ಲಿ ದಾರಿಯನ್ನು ಗುರುತಿಸುವುದಕ್ಕಾಗಿ ಲಕ್ಷ್ಮಣನು ಅವುಗಳನ್ನು ಕಟ್ಟಿರ ಬೇಕೆಂದು ಆತನು ತರ್ಕಿಸಿದನು. ಅದು ಶ್ರೀರಾಮನ ಪರ್ಣಶಾಲೆಯೆ ಇರಬೇಕೆಂದು ಮನಸ್ಸಿಗೆ ಬೋಧೆಯಾಯಿತು. ಸೀತಾರಾಮರನ್ನು ಕಾಣಬೇಕೆಂಬ ಉತ್ಸಾಹದಿಂದ ಕಾಲುಗಳು ಚುರುಕಾದುವು. ಸಮೀಪಕ್ಕೆ ಬಂದಂತೆಲ್ಲಾ ಪರ್ಣಶಾಲೆಯ ಒಳಭಾಗವೂ ಸ್ಪಷ್ಟವಾಗಿ ಗೋಚರಿಸಲಾರಂಭವಾಯಿತು. ನಿಜ. ಇದು ಶ್ರೀರಾಮನ ಎಲೆಮನೆಯೆ! ಅಲ್ಲಿ ನೇತುಹಾಕಿರುವ ಧನಸ್ಸೂ ಬತ್ತಳಿಕೆಯೂ ಆತನವೆ. ಅಗೋ, ನಾರುಮಡಿಯ ನ್ನುಟ್ಟು ಜಟಾಧಾರಿಯಾಗಿ ಪರ್ಣಶಾಲೆಯ ಮಧ್ಯದಲ್ಲಿ ಅಗ್ನಿಹೋತ್ರದಂತೆ ಪ್ರಕಾಶ ಮಾನವಾಗಿ ಕಾಣುತ್ತಿರುವ ಆ ಮಹಾಬಾಹು ಸಾಕ್ಷಾತ್ ಶ್ರೀರಾಮನೆ!

ಅಣ್ಣನನ್ನು ಕಾಣುತ್ತಲೆ ಭರತನು ಆತನ ಬಳಿಗೆ ಎಳೆಯ ಮಗುವಿನಂತೆ ಓಡಿ ಹೋದನು. ಆತನ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. "ಆರ್ಯಾ! ಅಣ್ಣಾ!" ಎಂದು ಕೂಗಿ ಮುಂದೆ ಮಾತನಾಡಲಾರದೆ ಆತನ ಪಾದಮೂಲದಲ್ಲಿ

ಬಿದ್ದನು. ಆತನ ಹಿಂದೆಯೆ ಶತ್ರುಘ್ನನೂ ಓಡಿಬಂದು ಅಳುತ್ತಾ ಹಿರಿಯಣ್ಣನಿಗೆ ನಮಸ್ಕರಿಸಿದನು. ತಮ್ಮಂದಿರನ್ನು ಕಂಡು ಶ್ರೀರಾಮನ ಕಣ್ಣುಗಳೂ ಹನಿಗೂಡಿದುವು. ಇಬ್ಬರನ್ನೂ ಬಾಚಿ ತಬ್ಬಿಕೊಂಡನು. ಆ ವೇಳೆಗೆ ಉಳಿದವರೂ ಅಲ್ಲಿಗೆ ಬಂದರು. ಎಲ್ಲರೂ ಕ್ಷಣಕಾಲ ಮೌನವಾಗಿದ್ದರು. ಎಲ್ಲರ ಕಣ್ಣುಗಳೂ ಒದ್ದೆಯಾಗಿದ್ದುವು.

ತಮ್ಮಂದಿರನ್ನು ಕಂಡು ಆನಂದದಿಂದ ಪರವಶನಾಗಿದ್ದ ಶ್ರೀರಾಮಚಂದ್ರನು ಸ್ವಲ್ಪ ಕಾಲದ ಮೇಲೆ ಚಚ್ಚರಗೊಂಡು ಬಂದಿದ್ದವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿದನು. ಭರತನನ್ನು ಸೆಳೆದು ತೊಡೆಯ ಮೇಲೇರಿಸಿಕೊಂಡು "ಅಪ್ಪಾ ಭರತ, ಬಹುಕಾಲಕ್ಕೆ ನಿನ್ನನ್ನು ಕಂಡಂತಾಯಿತು. ನೀನಿದ್ದ ಕೇಕಯ ನಗರವೆಲ್ಲಿ, ಈ ಅರಣ್ಯವೆಲ್ಲಿ? ಎಷ್ಟು ದೂರ! ಈ ಪ್ರಯಾಣ ಎಷ್ಟು ಕ್ಲೇಶಕರ? ಈಗ ಅರಣ್ಯಕ್ಕೆ ಏಕೆ ಬಂದೆ? ಮುಪ್ಪಿನ ತಂದೆಯಿಂದ ಅಗಲಿ ಹೀಗೆ ಬರಬಹುದೆ? ಆತನು ಕ್ಷೇಮವಾಗಿರುವನೆ? ತಾಯಿಯರೆಲ್ಲರೂ ಕುಶಲದಿಂದಿರುವರೆ? ನಿನ್ನ ರಾಜ್ಯಭಾರ ಸುಗಮವಾಗಿ ನಡೆಯುತ್ತಿರುವುದೆ?" ಎಂದು ಪ್ರಶ್ನಿಸಿದನು. ಭರತನು ಆತನಿಗೆ ಉತ್ತರ ಕೊಡುತ್ತಾ "ಅಣ್ಣಾ, ನೀನಿಲ್ಲದ ಈ ರಾಜ್ಯ ನನಗೇಕೆ? ನನಗೆ ಬೇಕಾದುದು ನಿನ್ನ ಸೇವೆ. ನೀನು ಅಯೋಧ್ಯೆಗೆ ಹಿಂದಿರುಗಿ ರಾಜ್ಯಭಾರವನ್ನು ಸ್ವೀಕರಿಸು. ಈಗ ನನಗೆ ನೀನೇ ತಂದೆ. ನೀನಿತ್ತ ಅರಣ್ಯಕ್ಕೆ ಹೊರಟು ಬಂದೆ; ನಾನಿನ್ನೂ ಕೇಕಯ ರಾಜ್ಯದಲ್ಲಿಯೆ ಇದ್ದೆ; ನಾವೊಬ್ಬರೂ ಇಲ್ಲದ ಹೊತ್ತು ಪೂಜ್ಯನಾದ ತಂದೆ ಸ್ವರ್ಗಸ್ಥನಾದನು. ಸೀತಾಲಕ್ಷ್ಮಣರೊಡನೆ ವನವಾಸವನ್ನು ಕೈಕೊಂಡ ನಿನ್ನನ್ನೇ ಸ್ಮರಿಸುತ್ತಾ ಅದೇ ದುಃಖದಲ್ಲಿಯೆ ಆತನೂ ಅಸುದೊರೆದನು. ಆದ್ದರಿಂದ ನೀನು ಮೊದಲು ತಂದೆಗೆ ತಿಲೋದಕಾದಿಗಳನ್ನೂ ಕರ್ಮಗಳನ್ನೂ ಸಲ್ಲಿಸಿ ಬರುವವನಾಗು. ಆಮೇಲೆ ಉಳಿದ ವಿಚಾರವನ್ನು ಮಾತನಾಡೋಣ" ಎಂದನು.

ದಾರುಣವಾದ ತಂದೆಯ ಮರಣವಾರ್ತೆಯನ್ನು ಕೇಳಿ ಶ್ರೀರಾಮನು ದುಃಖದಿಂದ ನಿಶ್ಚೇತನನಾಗಿ ನೆಲಕ್ಕೆ ಬಿದ್ದನು. ಆತನ ತಮ್ಮಂದಿರೂ ಸೀತಾದೇವಿಯೂ ಕಳವಳಗೊಂಡು ಆತನಿಗೆ ಶೈತ್ಯೋಪಚಾರಗಳನ್ನು ನಡಸಿದರು. ಅದರಿಂದ ಎಚ್ಚತ್ತ ಶ್ರೀರಾಮನು ಅತಿ ದೀನನಂತೆ ಗೋಳಿಟ್ಟನು. ತಂದೆಯ ಮರಣಕಾಲದಲ್ಲಿ ಸಮೀಪದಲ್ಲಿದ್ದು ಆತನ ಪ್ರೇತಕಾರ್ಯಗಳನ್ನು ನಡಸುವ ಪುಣ್ಯ ತನ್ನ ಪಾಲಿಗೆ ತಪ್ಪಿಹೋದುದಕ್ಕಾಗಿ ಆತನು ಪರಿತಪಿಸಿದನು. ವನವಾಸದ ಅವಧಿ ಮುಗಿದಮೇಲೂ ತಾನು ಮತ್ತೊಮ್ಮೆ ತಂದೆಯಿಲ್ಲದ ಅಯೋಧ್ಯೆಗೆ ಹಿಂದಿರುಗಬಾರದು ಎನ್ನಿಸಿತು. ಹೆಂಡತಿಯನ್ನು ಕುರಿತು "ದೇವಿ, ನಿಮ್ಮ ಮಾವ ಸ್ವರ್ಗಸ್ಥನಾದ!" ಎಂದು ಅತ್ತನು. ಲಕ್ಷ್ಮಣನೊಡನೆ "ಲಕ್ಷ್ಮಣಾ, ನೀನು ತಂದೆಯಿಲ್ಲದ ತಬ್ಬಲಿಯಾದೆ" ಎಂದು ಗೋಳಾಡಿದನು. ಸೀತೆಯ ಕೋಮಲ ಹೃದಯ ಆ ದುಃಖವಾರ್ತೆಯಿಂದ ಕರಗಿ ಕಣ್ಣೀರಾಗಿ ಹರಿಯುತ್ತಿತ್ತು. ಹೊಟ್ಟೆಯ ದುಃಖ ಕಣ್ಣೀರಿನ ರೂಪದಿಂದ ಹರಿದು ಸ್ವಲ್ಪ ಸಮಾಧಾನಕ್ಕೆ ಬಂದಮೇಲೆ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಮಗೂ, ಮಂದಾಕಿನೀ ನದಿಗೆ ಹೋಗಿ ತಂದೆಗೆ ತಿಲೋದಕ

ಕೊಟ್ಟು ಬರೋಣ. ಜಾನಕಿ ಮುಂದೆ ಹೋಗಲಿ. ಅವಳ ಹಿಂದೆ ನೀನು ಹೋಗು. ನಾನು ಕಡೆಯಲ್ಲಿ ಬರುತ್ತೇನೆ. ಇದೇ ಸರಿಯಾದ ಕ್ರಮ" ಎಂದು ಹೇಳಿ ಮೂವರೂ ನದೀತೀರವನ್ನು ಸೇರಿದರು. ಅಲ್ಲಿ ಮೂವರೂ ಮಿಂದು ತಿಲತರ್ಪಣವನ್ನು ಕೊಟ್ಟ ಮೇಲೆ, ಇಂಗುದೀ ಪಿಷ್ಟಕ್ಕೆ ಬೋರೆಹಣ್ಣಿನ ರಸವನ್ನು ಮಿಶ್ರಮಾಡಿ ತಂದೆಗೆ ಪಿಂಡ ಪ್ರಧಾನ ಮಾಡಿದರು. ರಾಜಾಧಿರಾಜನಾದ ದಶರಥನಿಗೆ ಇಂತಹ ಪಿಂಡವನ್ನು ಕೊಡು ತ್ತಿರುವುದಕ್ಕಾಗಿ ಶ್ರೀರಾಮನಿಗೆ ಸಂಕಟವಾಯಿತಾದರೂ ತಾನೂ ತಿನ್ನುತ್ತಿರುವುದನ್ನೆ ಪರಲೋಕದಲ್ಲಿರುವ ತಂದೆಗೂ ಅರ್ಪಿಸುತ್ತಿರುವೆನೆಂದು ತಿಳಿದು ಸಮಾಧಾನಗೊಂಡನು. ಹೀಗೆ ಪ್ರೇತಕರ್ಮಗಳನ್ನು ನೆರವೇರಿಸಿದ ಮೇಲೆ ಮೂವರೂ ಒದ್ದೆ ಬಟ್ಟೆಗಳಲ್ಲಿಯೆ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ಮತ್ತೊಮ್ಮೆ ರೋದನಧ್ವನಿ ಕಾನನವನ್ನೆಲ್ಲ ತುಂಬಿತು.

ಆ ವೇಳೆಗೆ ದಶರಥನ ರಾಣಿವಾಸದವರೆಲ್ಲರೂ ಶ್ರೀರಾಮನನ್ನು ಕಾಣುವುದಕ್ಕಾಗಿ ವಸಿಷ್ಠರ ಜೊತೆಯಲ್ಲಿ ಹೊರಟು ಮಂದಾಕಿನೀ ದಡಕ್ಕೆ ಬಂದರು. ಆಗತಾನೆ ರಾಮಾದಿ ಗಳು ಅಲ್ಲಿಟ್ಟು ಹೋಗಿದ್ದ ಇಂಗುದೀ ಪಿಷ್ಟದ ಪಿಂಡಗಳನ್ನು ಕಂಡು ಕೌಸಲ್ಯೆಗೆ ಬಹು ಸಂಕಟವಾಯಿತು. ಶ್ರೀರಾಮನಂತಹ ಜಗದ್ವಿಖ್ಯಾತ ಪರಾಕ್ರಮಿ ತನ್ನ ತಂದೆಗೆ ಈ ಕದನ್ನವನ್ನು ಅರ್ಪಿಸಬೇಕಾಗಿ ಬಂದಿರುವ ಈ ದುರವಸ್ಥೆಯನ್ನು ಕಣ್ಣಾರೆಕಂಡು ತನ್ನ ಹೃದಯವೇಕೆ ಸಾವಿರ ಹೋಳುಗಳಾಗಿ ಸೀಳಿಹೋಗಲಿಲ್ಲವೆಂದು ಆಕೆ ಗೋಳಾಡಿದಳು. ಆದರೆ ಆಕೆಯ ಸಪತ್ನಿಯರು ಆಕೆಯನ್ನು ಸಮಾಧಾನಪಡಿಸಿ ಶ್ರೀರಾಮನ ಬಳಿಗೆ ಕೊಂಡೊಯ್ದರು. ಸ್ವರ್ಗಚ್ಯುತನಾದ ದೇವತೆಯಂತೆ ಸಕಲ ಭೋಗಗಳಿಂದಲೂ ವಿರಹಿತ ನಾಗಿದ್ದ ಶ್ರೀರಾಮಮೂರ್ತಿಯನ್ನು ಕಂಡು ರಾಣಿಯರೆಲ್ಲರೂ ಗಟ್ಟಿಯಾಗಿ ಅಳುತ್ತಾ ಧಾರೆಧಾರೆಯಾಗಿ ಕಣ್ಣೀರು ಸುರಿಸಿದರು. ಅವರನ್ನು ಕಾಣುತ್ತಲೆ ರಾಮಚಂದ್ರನು ಆಸನದಿಂದೆದ್ದು ಅವರ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಆತನ ಹಿಂದೆಯೆ ಲಕ್ಷ್ಮಣನೂ ಸೀತೆಯೂ ಅವರಿಗೆ ನಮಸ್ಕರಿಸಿದರು. ತನ್ನ ಪಾದವನ್ನು ಹಿಡಿದು ನಮಸ್ಕರಿಸುತ್ತಿರುವ ಸೀತಾದೇವಿಯನ್ನು ಕಾಣುತ್ತಲೆ ಕೌಸಲ್ಯೆಗೆ ಕರುಳು ಕರಗಿ ಹೋಯಿತು. ತಾಯಿ ಮಗಳನ್ನು ಆಲಿಂಗಿಸಿಕೊಳ್ಳುವಂತೆ ಅವಳನ್ನು ಎದೆಗಪ್ಪಿಕೊಂಡಳು: "ಅಯ್ಯೋ ಕಂದಾ, ಹುಟ್ಟಿದುದು ಜನಕರಾಜನ ಹೊಟ್ಟೆಯಲ್ಲಿ; ಕೈಹಿಡಿದುದು ಶ್ರೀರಾಮನನ್ನು; ಆದರೂ ನಿನ್ನ ಪಾಲಿಗೆ ಬಂದುದು ಈ ವನವಾಸ. ಬಿಸಿಲಿನ ಬೇಗೆ ಯಿಂದ ಬಾಡಿದ ಕಮಲದಂತೆ ಸೊರಗಿ ಹೋಗಿರುವೆಯಲ್ಲಾ! ಮುಗಿಲು ಮುಚ್ಚಿದ ಚಂದ್ರನಂತೆ ನಿನ್ನ ಮುಖ ಕಳೆಗುಂದಿಹೋಗಿದೆ. ನಿನ್ನನ್ನು ನೋಡಿ ನನ್ನ ಹೊಟ್ಟೆ ಉರಿದುಹೋಗುತ್ತಿದೆಯಲ್ಲಾ!" ಎಂದು ಹಳಹಳಿಸಿದಳು. ಅಷ್ಟರಲ್ಲಿಯೆ ಶ್ರೀರಾಮನು ಕುಲಪುರೋಹಿತರಾದ ವಸಿಷ್ಠರಿಗೆ ನಮಸ್ಕರಿಸಿ ಅವರನ್ನು ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ತಾನೂ ಸಮೀಪದಲ್ಲಿ ಕುಳಿತನು. ಭರತ ಶತ್ರುಘ್ನರೂ ಸುಮಂತ್ರನೆ ಮೊದಲಾದ ಇತರ ಪ್ರಮುಖರೂ ಆತನ ಸುತ್ತಲೂ ಕುಳಿತುಕೊಂಡರು.

---

೧೭

# ಸತ್ಯ ಪ್ರತಿಜ್ಞೆ

ಪರಸ್ಪರ ಕುಶಲಪ್ರಶ್ನೆ ಗಳಾದ ಮೇಲೆ ಶ್ರೀರಾಮನು ಭರತನನ್ನು ಕುರಿತು "ವತ್ಸಾ, ನೀನೇಕೆ ಈ ಜಟೆಯನ್ನೂ ನಾರುಮಡಿಯನ್ನೂ ಧರಿಸಿರುವೆ? ರಾಜ್ಯಭಾರ ಕಾರ್ಯ ವನ್ನು ಬಿಟ್ಟು ಈ ಅರಣ್ಯಕ್ಕೇಕೆ ಬಂದೆ?" ಎಂದು ಕೇಳಿದನು. ತಾನು ಬಂದ ಉದ್ದೇಶ ವನ್ನು ಭರತನು ತನ್ನ ಅಣ್ಣನಿಗೆ ವಿವರಿಸಿ ಹೇಳಿದನು...."ಪೂಜ್ಯನೆ, ತಂದೆ ಪುತ್ರಶೋಕ ಪೀಡಿತನಾಗಿ ಸ್ವರ್ಗಸ್ಥನಾದನು. ನನ್ನ ತಾಯಿಯಾದ ಕೈಕೆ ಸಾಮಾನ್ಯಸ್ತ್ರೀಯಂತೆ ತಂದೆ ಯನ್ನು ದುಷ್ಕಾರ್ಯದಲ್ಲಿ ನಿಯೋಜಿಸಿ ಆತನಿಗೆ ಅಪಕೀರ್ತಿ ತಂದಳು; ತಾನೂ ವಿಧವೆ ಯಾಗಿ ಅಗಾಧವಾದ ದುಃಖಕ್ಕೆ ಈಡಾದಳು. ಆಕೆಯ ಆಶೆಗಳೆಲ್ಲವೂ ವ್ಯರ್ಥವಾದುವು. ಆಕೆ ಪಡೆದುಕೊಂಡುದೆಂದರೆ ಘೋರವಾದ ನರಕವೊಂದನ್ನೆ. ಅಣ್ಣಾ, ನಡೆದುದನ್ನು ನೆನೆದು ಇನ್ನು ಪ್ರಯೋಜನವಿಲ್ಲ. ನಾನು ನಿನ್ನ ದಾಸ. ನಿನ್ನನ್ನು ಶರಣು ಹೊಕ್ಕಿದ್ದೇನೆ. ನನ್ನನ್ನು ಅನುಗ್ರಹಿಸು. ಕೃಪೆಯಿಟ್ಟು ಅಯೋಧ್ಯೆಗೆ ಹಿಂತಿರುಗಿ ರಾಜ್ಯವನ್ನು ಸ್ವೀಕ ರಿಸು. ಪ್ರಜೆಗಳೂ ಮಂತ್ರಿಗಳೂ ಮಾತೆಯರೂ ದಿಕ್ಕಿಲ್ಲದವರಾಗಿ ನಿನ್ನ ಬಳಿಗೆ ಬಂದಿ ದ್ದಾರೆ. ಇವರನ್ನು ಅನುಗ್ರಹಿಸಿ ಆನಂದಪಡಿಸು. ನಾವೆಲ್ಲರೂ ನಿನ್ನಲ್ಲಿ ಈ ಭಿಕ್ಷೆಯನ್ನು ಯಾಚಿಸುತ್ತಿದ್ದೇವೆ. ತಂದೆಯ ತರುವಾಯ ಹಿರಿಯ ಮಗನು ಪಟ್ಟಾಭಿಷಿಕ್ತನಾಗುವುದು ಧರ್ಮ; ನಮ್ಮ ವಂಶದಲ್ಲಿ ಅನಾದಿಕಾಲದಿಂದಲೂ ಬಂದಿರುವ ಸಂಪ್ರದಾಯ. ಆ ಸತ್ಸಂಪ್ರದಾಯವನ್ನು ಉಳಿಸಿ, ಧರ್ಮವನ್ನು ಪಾಲಿಸು." ಇಂತೆಂದು ಬೇಡುತ್ತಾ ಭರತನು ಅಣ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿದನು.

ಶ್ರೀರಾಮನು ಭರತನ ಪ್ರಾರ್ಥನೆಯನ್ನು ಅಂಗೀಕರಿಸಲು ಒಪ್ಪಲಿಲ್ಲ. "ಮಗೂ, ತಾಯಿತಂದೆಯರನ್ನು ದೂಷಿಸಬೇಡ. ಅದು ಪಾಪಕರ. ನಿರ್ದೋಷನಾದ ನಿನ್ನಂತಹವನು ಪಾಪಕಾರ್ಯವನ್ನು ಆಚರಿಸುವುದುಂಟೆ? ಭಾರ್ಯಾಪುತ್ರರ ವಿಚಾರದಲ್ಲಿ ಮನಸ್ಸು ಬಂದಂತೆ ನಡೆಸಿಕೊಳ್ಳಲು ಹಿರಿಯರಾದವರಿಗೆ ಅಧಿಕಾರವುಂಟು. ತಂದೆ ನನ್ನನ್ನು ವನವಾಸಕ್ಕೆ ಹೋಗೆಂದು ವಿಧಿಸಿರುವನು. ಜಟಾವಲ್ಕಲಧಾರಿಯಾಗಿ ನಾನು ಆ ಕಾರ್ಯ ವನ್ನು ಕೈಗೊಂಡಿದ್ದೇನೆ. ಅದೇ ತಂದೆಯೆ ರಾಜ್ಯಭಾರವನ್ನು ವಹಿಸೆಂದೂ ನಿನಗೂ ಅಜ್ಞಾಪಿಸಿದನು. ನೀನು ಆ ಕಾರ್ಯವನ್ನು ತಲೆಯಲ್ಲಿ ಹೊತ್ತು ನಡೆಸಬೇಕು. ಆತನ ಮಾತು ನಮ್ಮಿಬ್ಬರಿಗೂ ಸಮಾನವಾಗಿಯೇ ಪ್ರಮಾಣ; ಇಬ್ಬರೂ ಆತನ ಅಣತಿಯನು ನಡೆಸಬೇಕು. ನನ್ನ ವನವಾಸದ ಅವಧಿ ಮುಗಿದೊಡನೆಯೆ ನಾನು ಹಿಂದಿರುಗಿ ರಾಜ್ಯ ಭಾರವನ್ನು ಸ್ವೀಕರಿಸುತ್ತೇನೆ. ಅಲ್ಲಿಯವರೆಗೆ ನೀನು ಆ ಕಾರ್ಯವನ್ನು ನಿರ್ವಹಿಸು ತ್ತಿರು" ಎಂದನು.

ಶ್ರೀರಾಮನ ಮಾತಿನ ಧಾಟಿ ಭರತನಿಗೆ ಸೇರಲಿಲ್ಲ. "ಅಣ್ಣಾ, ನನ್ನ ತಾಯಿ ಸಾಕೇತಸಾಮ್ರಾಜ್ಯವನ್ನು ನನಗೆ ಸಂಪಾದಿಸಿಕೊಟ್ಟಿಳು. ಅದನ್ನು ನಾನೀಗ ನಿನಗೆ ಕೊಡುತ್ತೇನೆ. ದಯಮಾಡಿ ಸ್ವೀಕರಿಸು. ಈ ಅಪಾರವಾದ ರಾಜ್ಯವನ್ನು ವಹಿಸಲು ನನಗೆ ಶಕ್ತಿಯಿಲ್ಲ. ಕುದುರೆಗೆ ಸಮಾನವಾಗಿ ಕತ್ತೆ ಓಡಬಲ್ಲುದೆ? ನಿನ್ನಷ್ಟು ಸಾಮರ್ಥ್ಯದಿಂದ ನಾನು ರಾಜ್ಯಕಾರ್ಯವನ್ನು ನಡಸುವುದು ಸಾಧ್ಯವೆ? ನಾನೊಬ್ಬನೆ ಅಲ್ಲ, ಇಡೀ ಸಾಮ್ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ನಿನ್ನನ್ನು ಬೇಡುತ್ತಿರುವನೆಂದು ಭಾವಿಸಿ ನನ್ನ ಕೋರಿಕೆಯನ್ನು ಈಡೇರಿಸು" ಎಂದು ಅಣ್ಣನನ್ನು ಬೇಡಿಕೊಂಡನು. ಭರತನ ಈ ಮಾತುಗಳು ಧರ್ಮಸಮ್ಮತವಲ್ಲವೆಂದು ಶ್ರೀರಾಮನ ವಾದ. ಅಲ್ಲದೆ ಯಾವ ಕಾರ್ಯದಲ್ಲಿಯೂ ಪುರುಷನು ಸ್ವತಂತ್ರನಲ್ಲ; ಸರ್ವತಂತ್ರಸ್ವತಂತ್ರವಾದ ದೈವಕ್ಕೆ ಆತನು ಅಧೀನ. ಅದು ನಡಸಿದಂತೆ ಆತನು ನಡೆಯಬೇಕು. ಆದ್ದರಿಂದ ಇಲ್ಲದುದನ್ನು ಹಚ್ಚಿಕೊಂಡು ಹಳಹಳಿಸಬೇಡ. ನಾನು ಅರಣ್ಯವಾಸ ಮಾಡಬೇಕೆಂಬುದು ದೈವೇಚ್ಛೆ. ತಂದೆಯ ಅಪ್ಪಣೆಯ ರೂಪದಲ್ಲಿ ಅದು ಕಾಣಿಸಿಕೊಂಡಿದೆ. ಅದಕ್ಕೆ ವಿಧೇಯನಾಗದೆ ಗತ್ಯಂತರವಿಲ್ಲ. ಅಲ್ಲದೆ ತಂದೆಯ ಸಾವಿಗಾಗಿಯೂ ಸುಮ್ಮನೆ ಸಂಕಟಪಡಬೇಡ. ಕಳಿತ ಹಣ್ಣು ಕೆಳಕ್ಕೆ ಬಿದ್ದುಹೋಗುವಂತೆ ಗಳಿತವಾದ ಶರೀರ ಬಿದ್ದುಹೋಗಲೇಬೇಕು. ವಿವೇಕಿಯಾದವನು ಅದಕ್ಕಾಗಿ ವ್ಯಸನಪಡಬಾರದು" ಎಂದನು.

ಭರತನಿಗೆ ಅಣ್ಣನ ವೇದಾಂತವೆಲ್ಲವೂ ಅರ್ಥವಾಗಲಿಲ್ಲ. ಅಣ್ಣನನ್ನು ಕುರಿತು ಹೇಳಿದನು—"ಆರ್ಯಾ, ಸಂತೋಷದಲ್ಲಿ ಸಂತೋಷವನ್ನೂ ವ್ಯಥೆಯ ಕಾಲದಲ್ಲಿ ವ್ಯಸನವನ್ನೂ ಹೊಂದಿರುವುದು ಪರಮ ಜ್ಞಾನಿಯಾದ ನಿನಗೊಬ್ಬನಿಗೆ ಮಾತ್ರ ಸಾಧ್ಯ; ನನ್ನಂತಹ ಸಾಮಾನ್ಯನಿಗೆ ಅದು ಸಾಧ್ಯವಲ್ಲ. ನಾನು ಹೇಳುವುದಿಷ್ಟೆ—ನನ್ನ ನಿಮಿತ್ತವಾಗಿ ನನ್ನ ತಾಯಿ ಪಾಪಕಾರ್ಯವನ್ನು ಎಸಗಿದಳು. ಅದು ನನಗೆ ಎಷ್ಟು ಮಾತ್ರವೂ ಸಮ್ಮತವಾದುದಲ್ಲ. ಧರ್ಮಪಾಶದಿಂದ ಬದ್ಧನಾಗಿಲ್ಲದಿದ್ದರೆ ದಂಡಾರ್ಹಳಾದ ಆಕೆಗೆ ಕಠಿಣವಾದ ಶಿಕ್ಷೆಯನ್ನು ವಿಧಿಸುತ್ತಿದ್ದೆ. ತಂದೆಯಾದರೂ ಆಕೆಯ ಮೇಲಿನ ಮೋಹದಿಂದ ಆಕಾರ್ಯವನ್ನೆಸಗಿ ಅಪಕೀರ್ತಿಗೆ ಭಾಜನನಾದನು. ಸತ್ಪುತ್ರನಾದ ನೀನು ಆತನಿಗೆ ಬಂದಿರುವ ಅಪಕೀರ್ತಿಯನ್ನು ಹೋಗಲಾಡಿಸಬೇಕಲ್ಲವೆ? ಹಿರಿಯನಾದ ನೀನಿರುವಾಗ ಕಿರಿಯನಾದ ನಾನು ಹೇಗೆ ರಾಜ್ಯವನ್ನು ಸ್ವೀಕರಿಸಲಿ? ಇಗೊ ಪಟ್ಟಾಭಿಷೇಕದ ಸಕಲ ಸಾಮಗ್ರಿಗಳನ್ನೂ ನನ್ನ ಜೊತೆಯಲ್ಲಿಯೆ ಕೊಂಡುಬಂದಿದ್ದೇನೆ. ವಸಿಷ್ಠರೂ, ಇತರ ಮಂತ್ರಿಗಳೂ, ಪ್ರಜೆಗಳೂ ಇಲ್ಲಿಯೆ ನೆರೆದಿದ್ದಾರೆ. ಇಲ್ಲಿಯೆ ನಿನ್ನ ಪಟ್ಟಾಭಿಷೇಕ ಮಹೋತ್ಸವ ನಡೆದುಹೋಗಲಿ. ಆಮೇಲೆ ಅಯೋಧ್ಯೆಗೆ ಹಿಂದಿರುಗಿ ಪ್ರಭುಪದವಿಯನ್ನು ನಿರ್ವಹಿಸು. ಅಣ್ಣಾ ನೀನು ನನ್ನ ಈ ಬೇಡಿಕೆಯನ್ನು ನಡಸಿಕೊಡದಿದ್ದರೆ ನಾನು ಇಲ್ಲಿಂದ ಹಿಂದಿರುಗುವುದಿಲ್ಲ. ನಾನೂ ನಿನ್ನೊಡನೆ ಅರಣ್ಯದಲ್ಲಿಯೇ ಇದ್ದುಬಿಡುತ್ತೇನೆ" ಎಂದನು.

ತಮ್ಮನ ಅಗಾಧ ಪ್ರೇಮವನ್ನು ಕಂಡು ಶ್ರೀರಾಮನು ಕ್ಷಣಕಾಲ ಮೂಕನಂತಾದನು. ಆದರೆ ರಾಜ್ಯಸ್ವೀಕಾರ ಮಾತ್ರ ಸದ್ಯಕ್ಕೆ ಆಗದ ಮಾತು. ಅಣ್ಣ ಸ್ವೀಕರಿಸ;

ತಮ್ಮ ಬಿಡ. ಇವರ ಈ ವಾಗ್ವಾದವನ್ನು ಕೇಳುತ್ತಾ ಕುಳಿತಿದ್ದ ಪ್ರೇಕ್ಷಕ ವೃಂದದಿಂದ ಜಾಬಾಲಿ ಋಷಿ ಮುಂದೆ ಬಂದು ಹೇಳಿದನು—"ರಾಮಚಂದ್ರ, ನೀನು ದೊಡ್ಡ ತಪಸ್ವಿ. ಪರಮಜ್ಞಾನಿ. ಅದೇಕೆ ಹೀಗೆ ಪ್ರಾಕೃತನಂತೆ ಮಾತನಾಡುವೆ? ಪ್ರಪಂಚದಲ್ಲಿ ಯಾರಿಗೆ ಯಾರು ಬಂಧು? ಹುಟ್ಟುತ್ತಾ ಒಂಟಿಯಾಗಿ ಬಂದವನು ಸಾಯುವಾಗ ಒಂಟಿಯಾಗಿಯೆ ಹೊರಟುಹೋಗುತ್ತಾನೆ. ಪ್ರಯಾಣಿಕನು ಮಾರ್ಗಮಧ್ಯದಲ್ಲಿ ತಂಗುವಂತೆ ತಾಯಿ, ತಂದೆ, ಮನೆ, ಮಠಗಳೆಂಬುವು ಕೆಲವು ಕಾಲ ಮಾತ್ರ ಆಶ್ರಯಸ್ಥಾನಗಳಾಗಿರುವುವೆ ಹೊರತು ಅವು ಶಾಶ್ವತವಲ್ಲ. ಎಂದಮೇಲೆ ದಶರಥ ಮಹಾರಾಜನು ಪರಮಗುರು ವೆಂಬುದೂ ಆತನ ಮಾತನ್ನು ನೀನು ಮೀರಬಾರದೆಂಬುದೂ ಎಲ್ಲಿಯ ವ್ಯಾಮೋಹ? ಪಿತೃರಾಜ್ಯವನ್ನು ಪರಿತ್ಯಜಿಸಿ ದುಃಖಕರವಾದ ಅರಣ್ಯವಾಸವನ್ನು ಕೈಗೊಳ್ಳುವುದು ಶುದ್ಧ ಕಾಪಥವೇ ಸರಿ. ತಂದೆಯ ಮಾತನ್ನು ನಡಸಬೇಕೆಂಬ ನಿನ್ನ ಚಾಪಲ್ಯವನ್ನು ಬದಿಗಿರಿಸಿ ರಾಜ್ಯಭೋಗವನ್ನು ಆದರದಿಂದ ಅನುಭವಿಸು. ಪ್ರತ್ಯಕ್ಷವೆ ಪ್ರಮಾಣವಾದುದ ರಿಂದ ಪರಲೋಕವೆಂದು ಹಲುಬುವುದು ಹುಚ್ಚು."

ಜಾಬಾಲಿ ಋಷಿಯ ಮಾತುಗಳನ್ನೆಲ್ಲ ತಾಳ್ಮೆಯಿಂದ ಕೇಳಿದ ಶ್ರೀರಾಮನು ಆತ ನನ್ನು ಕುರಿತು "ಅಯ್ಯಾ ಋಷಿಯೆ, ನನ್ನ ಮೇಲ್ಮೆಯನ್ನೆ ದೃಷ್ಟಿಯಲ್ಲಿಟ್ಟುಕೊಂಡು ನೀನು ಈ ಮಾತುಗಳನ್ನು ಆಡಿರಬಹುದಾದರೂ ಅವು ಎಂತಹ ಅನುಚಿತವಾದ ಮಾತು ಗಳು! ಈ ರಾಜ್ಯವೆಂಬುದು ಸತ್ಯರೂಪವಾದುದು. ಸತ್ಯದಲ್ಲಿಯೆ ಈ ಜಗತ್ತು ನಿಂತಿದೆ. ಇಂತಹ ಸತ್ಯವನ್ನು ನಾನೀಗ ತ್ಯಜಿಸಿಬಿಡಲೆ? ಸತ್ಯವೆ ಜಗತ್ತಿನಲ್ಲಿ ಸರ್ವೋತ್ತಮವಾದು ದೆಂದು ದೇವತೆಗಳೂ ಋಷಿಗಳೂ ಪರಿಗಣಿಸಿದ್ದಾರೆ. ಸತ್ಯವಾದಿಯಾದವನು ಉತ್ತಮ ಲೋಕಗಳನ್ನು ಪಡೆಯುತ್ತಾನೆ. ಸತ್ಯವೇ ಈಶ್ವರ. ಆ ಸತ್ಯಕ್ಕಿಂತಲೂ ಅಧಿಕವಾದ ಧರ್ಮವಿನ್ನಿಲ್ಲ. ದಾನ, ಯಾಗ, ಹೋಮ, ತಪಸ್ಸು, ಎಲ್ಲಕ್ಕೂ ಸತ್ಯವೆ ಆಧಾರ. ಸತ್ಯ ವಂತನಿಂದ ಸಕಲ ಜಗತ್ತೂ ಉದ್ಧಾರವಾಗುತ್ತದೆ. ಇದನ್ನು ಅರಿತ ನಾನು ಸತ್ಯಕ್ಕೆ ತಪ್ಪುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆ. ಅಂತಹ ನಾನು ಈಗ ತಂದೆಯ ಸತ್ಯಕ್ಕೆ ಭಂಗತರಲೆ? ಆತನ ಇದಿರಿನಲ್ಲಿ ನಾನು ವನವಾಸ ಕೈಗೊಳ್ಳುವೆನೆಂದು ಪ್ರತಿಜ್ಞೆ ಮಾಡಿದೆ. ಇದರಿಂದ ಮಾತೆಯಾದ ಕೈಕೆ ಸಂತುಷ್ಟಳಾದಳು. ಈಗ ಪ್ರತಿಜ್ಞೆಯನ್ನು ಮುರಿಯಲೆ? ನಾಸ್ತಿಕ ಮತವನ್ನು ಬೋಧಿಸುತ್ತಿರುವ ನಿನ್ನ ಮಾತುಗಳು ನನಗೆ ಸಹಿಸಲಶಕ್ಯವಾಗಿವೆ. ನನ್ನ ತಂದೆಯ ಆಸ್ಥಾನದಲ್ಲಿ ನಿನ್ನಂತಹವನಿಗೆ ಸ್ಥಾನ ದೊರೆತು ದಕ್ಕಾಗಿ ಅನುತಾಪಪಡಬೇಕಾಗಿದೆ" ಎಂದನು.

ಶ್ರೀರಾಮನ ನಿಷ್ಠುರೋಕ್ತಿಗಳನ್ನು ಕೇಳಿ ವಸಿಷ್ಠಮಹರ್ಷಿಗಳು ಜಾಬಾಲಿಯ ಪರವಾಗಿ ಮಾತನಾಡುತ್ತಾ ಆತನನ್ನು ಕುರಿತು "ರಾಮಚಂದ್ರ, ನೀನು ರಾಜ್ಯಭಾರವನ್ನು ವಹಿಸಲೆಂಬ ಉದ್ದೇಶದಿಂದ ಜಾಬಾಲಿ ಋಷಿ ಹಾಗೆ ಹೇಳಿದರೆ ಹೊರತು ಅವರು ನಾಸ್ತಿಕ ರಲ್ಲ. ಇಕ್ಷ್ವಾಕು ವಂಶದಲ್ಲಿ ಹಿರಿಯ ಮಗನೆ ಅರಸನಾಗಬೇಕು. ಕಿರಿಯನಿಗೆ ಪಟ್ಟಗಟ್ಟುವ ಪದ್ಧತಿಯಿಲ್ಲ. ಜ್ಯೇಷ್ಠಪುತ್ರನಾದ ನೀನು ನಿಮ್ಮ ವಂಶಪರಂಪರೆಯಾಗಿ ಬಂದಿರುವ ಈ

ಧರ್ಮವನ್ನು ಪಾಲಿಸಲೇಬೇಕು. ನಾನು ನಿನ್ನ ಕುಲಪುರೋಹಿತ. ನಿನಗೆ ಮಾತ್ರವೆ ಅಲ್ಲದೆ ನಿಮ್ಮ ತಂದೆಗೂ ಆಚಾರ್ಯನಾಗಿದ್ದವನು. ಅಂತಹ ನಾನು ಹೇಳುತ್ತಿದ್ದೇನೆ— ರಾಜ್ಯಭಾರವನ್ನು ಕೈಕೊಂಡು ಪ್ರಜೆಗಳನ್ನು ಪಾಲಿಸುವುದು ನಿನ್ನ ಪರಮ ಧರ್ಮ. ಭರತನ ಪ್ರಾರ್ಥನೆಯನ್ನು ಮನ್ನಿಸಿ ಪಟ್ಟಾಭಿಷಿಕ್ತನಾಗು. ಇದರಿಂದ ವೃದ್ಧಳೂ ಧರ್ಮ ಶೀಲಳೂ ಆದ ನಿನ್ನ ತಾಯಿಯನ್ನು ನೀನು ಸೇವಿಸಲು ಅನುಕೂಲವಾಗುತ್ತದೆ" ಎಂದರು. ಯಾರೂ ಏನು ಹೇಳಿದರೂ ಶ್ರೀರಾಮನ ಮನಸ್ಸು ಚಲಿಸಲಿಲ್ಲ. ದೃಢ ನಿಶ್ಚಯ ವಾಗಿ ಹೇಳಿದನು. "ದಶರಥ ಮಹಾರಾಜನು ನನ್ನ ಹೆತ್ತ ತಂದೆ. ಆತನ ಅಪ್ಪಣೆಯಂತೆ ನಡೆಯುವುದಾಗಿ ನಾನು ಪ್ರತಿಜ್ಞೆ ಮಾಡಿದ್ದೇನೆ. ಆ ಪ್ರತಿಜ್ಞೆಗೆ ಎಂದಿಗೂ ಭಂಗಬರ ಕೂಡದು. ಆತನ ಆ ನಿಶ್ಚಿತ ಮನೋಧರ್ಮವನ್ನು ಕಂಡು ಅಣ್ಣನು ಪ್ರಸನ್ನನಾಗುವ ವರೆಗೆ ತಾನೂ ದರ್ಭಾಸನದಲ್ಲಿ ಪವಡಿಸುತ್ತಾ ಅರಣ್ಯದಲ್ಲಿಯೆ ಇದ್ದು ಬಿಡುವುದಾಗಿ ಭರತನು ಹೇಳಿದನು. "ಕೊಟ್ಟ ಸಾಲದ ಹಣವನ್ನು ಹಿಂಪಡೆಯಲೆಳಸುವ ಬ್ರಾಹ್ಮಣನಂತೆ ನಾನು ಅನಾಹಾರಿಯಾಗಿ ಈ ಪರ್ಣಶಾಲೆಯ ಮುಂದೆಯೆ ತಲೆಯಮೇಲೆ ಮುಸುಕು ಹಾಕಿಕೊಂಡು ಮಲಗಿಬಿಡುತ್ತೇನೆ" ಎಂದು ಹೇಳಿ, ಹೇಳಿದುದನ್ನು ಕಾರ್ಯತಃ ಮಾಡಿ ತೋರಿಸುವುದಕ್ಕಾಗಿ ದರ್ಭೆಗಳನ್ನು ಹಾಸಿದನು. ಸುತ್ತಲಿದ್ದ ಜನರೆಲ್ಲರೂ "ರಾಘವ, ನಿನ್ನ ತಮ್ಮನ ಪ್ರಾರ್ಥನೆಯನ್ನು ಸಲ್ಲಿಸಬಾರದೆ ?" ಎಂದು ಬೇಡಿಕೊಂಡರು. ಸೋದರರ ಈ ಪರಸ್ಪರ ಪ್ರೇಮವನ್ನೂ ಧರ್ಮಶ್ರದ್ಧೆಯನ್ನೂ ಕಂಡು ಅವರು ಪರಮಾಶ್ಚರ್ಯಭರಿತ ರಾಗಿದ್ದರು. "ಇಂತಹ ಸತ್ಪುತ್ರರನ್ನು ಪಡೆದ ದಶರಥನು ನಿಜವಾಗಿಯೂ ಧನ್ಯನೆ ಸರಿ" ಎಂದುಕೊಂಡರು. "ಅಣ್ಣಾ, ನಾನು ರಾಜ್ಯವಾಳಲು ಸಮರ್ಥನಲ್ಲ" ಎಂದು ಭರತನು ಹೇಳಿದರೆ "ತಮ್ಮ, ನಿನ್ನಂತಹ ಸಮರ್ಥನು ಇನ್ನೊಬ್ಬನಿಲ್ಲ" ಎಂದು ಶ್ರೀರಾಮನು ಸಮಾಧಾನ ಹೇಳುವನು. "ನಾನು ಇಲ್ಲೆ ಇರುವೆನು"ಎಂದರೆ, "ತಂದೆಯ ಮಾತು ಇಬ್ಬ ರಿಗೂ ವಿಧೇಯ; ನಾನು ನಡಸುತ್ತಿರುವೆನು,ನೀನೂ ನಡಸು" ಎನ್ನುವನು.ಯಾರು ಏನು ಹೇಳಿದರೂ ಶ್ರೀರಾಮನ ನಿಶ್ಚಯ ಕದಲುವಂತಿರಲಿಲ್ಲ. ಕೊನೆಗೆ ಭರತನೆ ಸೋಲಬೇಕಾ ಯಿತು. ಆತನು ಅಣ್ಣನನ್ನು ಕುರಿತು "ಪೂಜ್ಯನೆ, ನಾನು ಎಷ್ಟು ಬೇಡಿದರೂ ನೀನು ರಾಜ್ಯಭಾರವನ್ನು ಸ್ವೀಕರಿಸಲಿಲ್ಲ. ನಾನಾದರೂ ಸ್ವತಂತ್ರವಾಗಿ ರಾಜ್ಯಭಾರವನ್ನು ನಡೆಸಲು ಒಪ್ಪುವುದಿಲ್ಲ. ನಿನ್ನ ಪಾದುಕೆಗಳನ್ನು ದಯಪಾಲಿಸು. ಅವುಗಳೆ ಜನರ ಯೋಗ ಕ್ಷೇಮವನ್ನು ವಹಿಸಲಿ"ಎಂದನು. ತಮ್ಮನ ಈ ಕೋರಿಕೆಯನ್ನು ಶ್ರೀರಾಮನು ಒಡನೆಯೆ ಸಲ್ಲಿಸಿದನು. ತನ್ನ ಪಾದುಕೆಗಳನ್ನು ಒಮ್ಮೆ ಮೆಟ್ಟಿ, ಅವುಗಳನ್ನು ಆತನಿಗೆ ಒಪ್ಪಿಸಿ ದನು. ಅಣ್ಣನಿಂದ ಪಾದುಕೆಗಳನ್ನು ಪಡೆದ ಭರತನು ಅವುಗಳನ್ನು ಕಣ್ಣಿಗೊತ್ತಿಕೊಂಡು "ಅಣ್ಣಾ ರಾಮಚಂದ್ರ, ನಾನು ಹದಿನಾಲ್ಕು ವರ್ಷಗಳ ಕಾಲ ಜಟಾಜಿನಧರನಾಗಿ ಫಲಮೂಲಗಳನ್ನು ಭುಜಿಸುತ್ತಾ ನಿನ್ನ ಆಗಮನವನ್ನೆ ನಿರೀಕ್ಷಿಸಿಕೊಂಡಿರುತ್ತೇನೆ. ನೀನು ಹಿಂದಿರುಗಿ ಬರುವವರೆಗೂ ನಿನ್ನ ಪಾದುಕೆಗಳು ರಾಜ್ಯಭಾರವನ್ನು ವಹಿಸಿರು ತ್ತವೆ. ನಿರ್ದಿಷ್ಟಕಾಲವಾದ ಮೇಲೆ ವಸಂತಋತುವಿನ ಪ್ರಥಮ ದಿನವೆ ನೀನು ಹಿಂತಿರುಗ

ಬೇಕು. ಆ ದಿನ ನೀನು ಹಿಂದಿರುಗದಿದ್ದರೆ ನಾನು ಅಗ್ನಿಪ್ರವೇಶ ಮಾಡುತ್ತೇನೆ" ಎಂದನು. ಶ್ರೀರಾಮನು 'ಹಾಗೆಯೆ ಆಗಲಿ' ಎಂದು ಹೇಳಿ ಆತನನ್ನು ಆಲಿಂಗಿಸಿದನು. ಅನಂತರ ಆಗಲೆ ಭರತನನ್ನು ತನ್ನ ಪರಿವಾರದೊಡನೆ ಹಿಂದಿರುಗುವಂತೆ ತ್ವರೆಗೊಳಿಸಿದನು. ಸಪರಿವಾರನಾಗಿ ಹಿಂದಿರುಗುವ ಆತನನ್ನು ಶ್ರೀರಾಮನು ಬೀಳ್ಕೊಳ್ಳುವ ಮುನ್ನ ಅಪ್ಪಿಕೊಂಡು, "ಭರತ, ನಿನ್ನ ತಾಯಿಯನ್ನು ಉಚಿತ ರೀತಿಯಲ್ಲಿ ಮನ್ನಿಸುತ್ತಿರು. ಇಗೋ, ನನ್ನ ಮತ್ತು ಸೀತೆಯ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ಆಕೆಯ ವಿಷಯದಲ್ಲಿ ಕೋಪಮಾಡುವುದನ್ನು ಬಿಟ್ಟುಬಿಡು" ಎಂದನು. ಅನಂತರ ಶತ್ರುಘ್ನ, ಸುಮಂತ್ರ ಮೊದಲಾದ ಪ್ರಮುಖರನ್ನೂ ವಸಿಷ್ಠರೇ ಮೊದಲಾದ ಗುರುಗಳನ್ನೂ ಉಚಿತ ರೀತಿಯಲ್ಲಿ ಬೀಳ್ಕೊಟ್ಟು ಕಳುಹಿಸಿದನು. ಕೌಸಲ್ಯೆ ಮೊದಲಾದ ರಾಜಮಾತೆಯರು ಶ್ರೀರಾಮನನ್ನು ಬಿಟ್ಟು ಅಗಲಲಾರದೆ ಕಣ್ಣೀರುಗರೆಯುತ್ತಾ ನಿಂತಿದ್ದರು. "ಹೋಗಿ ಬರುತ್ತೇವೆ" ಎಂದು ಹೇಳುವುದಕ್ಕೂ ಸಾಧ್ಯವಾಗದಂತೆ ಅವರ ಗಂಟಲು ಕಟ್ಟಿಹೋಗಿತ್ತು. ಶ್ರೀರಾಮನೆ ಅವರ ಬಳಿಗೆ ಹೋಗಿ ಒಬ್ಬೊಬ್ಬರಿಗೂ ಪ್ರತ್ಯೇಕವಾಗಿ ನಮಸ್ಕರಿಸಿ ಅವರನ್ನು ಬೀಳ್ಕೊಂಡನು. ಅವರು ಅತ್ತ ಹೆಜ್ಜೆಯಿಡುತ್ತಲೆ ಇತ್ತ ಶ್ರೀರಾಮನು ಅಳುತ್ತಳುತ್ತ ಪರ್ಣಶಾಲೆಯನ್ನು ಪ್ರವೇಶಿಸಿದನು.

---

೧೮

## ಪಾದುಕಾ ಪಟ್ಟಾಭಿಷೇಕ

ಶ್ರೀರಾಮನ ಪಾದುಕೆಗಳನ್ನು ನೆತ್ತಿಯಲ್ಲಿ ಹೊತ್ತುಕೊಂಡ ಭರತನು ಶತ್ರುಘ್ನ ನೊಡನೆ ರಥವೇರಿದನು. ಸಕಲಪರಿವಾರವೂ ಆತನನ್ನು ಹಿಂಬಾಲಿಸಿತು. ಎಲ್ಲರೂ ಹಿಂತಿರುಗಿ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ಭರತನು ಭಾರದ್ವಾಜಾಶ್ರಮವನ್ನು ಪ್ರವೇಶಿಸಿ ಆ ಮಹರ್ಷಿಗಳಿಗೆ ತಾನೇ ಶ್ರೀರಾಮನನ್ನು ಕಂಡು ಬಂದ ಸಮಾಚಾರವನ್ನು ತಿಳಿಸಿದನು. "ಪೂಜ್ಯ, ಅಣ್ಣನಾದ ಶ್ರೀರಾಮಚಂದ್ರಮೂರ್ತಿ. ಅಯೋಧ್ಯೆಗೆ ಹಿಂತಿರುಗಲು ಒಪ್ಪಲಿಲ್ಲ. ತಂದೆಯ ಆಜ್ಞೆಯಂತೆ ಹದಿನಾಲ್ಕು ವರ್ಷಗಳು ವನವಾಸಮಾಡಬೇಕೆಂಬ ಆತನ ನಿಶ್ಚಲ ಪ್ರತಿಜ್ಞೆಯನ್ನು ಕದಲಿಸುವುದು ನನ್ನಿಂದಾಗಲಿಲ್ಲ. ಆದರೆ ನಾನು ಆತನಿ ಗಾಗಿ ಕೊಂಡೊಯ್ದಿದ್ದ ಈ ಬಂಗಾರದ ಪಾದುಕೆಗಳನ್ನು ಆತನು ಒಮ್ಮೆ ಮೆಟ್ಟಿ ನನಗೆ ಅನುಗ್ರಹಿಸಿದ್ದಾನೆ. ಅವುಗಳನ್ನೇ ಸಿಂಹಾಸನದಲ್ಲಿ ಪ್ರತಿಷ್ಠಿಸುವುದಕ್ಕಾಗಿ ಕೊಂಡು ಬಂದಿದ್ದೇನೆ" ಎಂದು ಹೇಳಿ ಅವುಗಳನ್ನು ತೋರಿಸಿದನು. ಮಹಾನುಭಾವನಾದ ಭರತನ ಈ ಮಾತುಗಳನ್ನು ಕೇಳಿ ಭರದ್ವಾಜರಿಗೆ ಪರಮಾನಂದವಾಯಿತು. ಆತನನ್ನು ಕುರಿತು ಆ ಮಹರ್ಷಿ "ಎಲೈ ಪುರುಷಶ್ರೇಷ್ಠ, ನಿನ್ನ ಶ್ರೇಷ್ಠವಾದ ಶೀಲಕ್ಕೆ ಉಚಿತವಾಗಿಯೆ ಇದೆ ನಿನ್ನ ಆಚರಣೆ. ತಗ್ಗಿನಲ್ಲಿ ನೀರು ನಿಲ್ಲುವುದು ಹೇಗೆ ಸ್ವಾಭಾವಿಕವೊ ಹಾಗೆ ಜೇಷ್ಠಾನು ವರ್ತನೆ ನಿನಗೆ ಸ್ವಾಭಾವಿಕವಾಗಿದೆ. ನಿನ್ನಂತಹ ಸತ್ಪುತ್ರನನ್ನು ಪಡೆದು ದಶರಥ ಮಹಾರಾಜನು ಧನ್ಯನಾದನು. ಆತನು ಮೃತನಾದರೂ ಬದುಕಿದ್ದಂತೆಯೆ ಸರಿ" ಎಂದರು. ಭರತನು ಆತನಿಗೆ ಪ್ರದಕ್ಷಿಣ ನಮಸ್ಕಾರಮಾಡಿ, ಆತನಿಂದ ಬೀಳ್ಕೊಂಡು ಪಯಣದ ಮೇಲೆ ಪಯಣ ಮಾಡುತ್ತಾ ಅಯೋಧ್ಯೆಗೆ ಬಂದು ಸೇರಿದನು.

ಶ್ರೀರಾಮನ ವನಗಮನಾನಂತರ ಕಳೆಗೆಟ್ಟ ಅಯೋಧ್ಯೆ, ಆತನು ಹಿಂದಿರುಗಿ ಬರಲಿಲ್ಲ ಎಂಬುದನ್ನು ಕೇಳಿ ಮತ್ತಷ್ಟು ಕಳೆಗೆಟ್ಟಿತು. ಕಿವಿಗಿಂಪಾದ ಗಾನವಾಗಲಿ, ಮನೋಹರವಾದ ವಾದ್ಯಘೋಷವಾಗಲಿ ಎಲ್ಲಿಯೂ ಕೇಳಿಬರದು. ಮುಗುಳ್ನಗೆಯಿಂದ ಕಳಕಳಿಸುತ್ತಿದ್ದ ಮುಖಗಳೆಲ್ಲ ಈಗ ದುಃಖದಿಂದ ಮಲಿನವಾಗಿವೆ. ಪುರಜನರಲ್ಲಿ ಒಬ್ಬರಿ ಗಾದರೂ ಗಂಧಪುಷ್ಪಾದಿ ಸಿಂಗರವಸ್ತುಗಳ ಮೇಲೆ ಅಭಿಲಾಷೆಯೆ ಇಲ್ಲ. ಸೂರ್ಯನಿಲ್ಲದ ಹಗಲಿನಂತೆ ಆ ಅರಸೂರು ಹಾಳು ಸುರಿಯುತ್ತಿತ್ತು. ಭರತನಿಗೆ ತನ್ನ ಅಣ್ಣನು ಹಿಂದಿರುಗಿ ಬರುವ ತನಕ ಆ ಪಟ್ಟಣದಲ್ಲಿರುವುದು ಅಸಹ್ಯವೆನಿಸಿತು. ಆದ್ದರಿಂದ ನಂದಿಗ್ರಾಮವೆಂಬ ಹಳ್ಳಿಗೆ ಹೋಗಿ ಅಲ್ಲಿ ಏಕಾಂತದಲ್ಲಿದ್ದುಕೊಂಡು ಶ್ರೀರಾಮನ ಪುನರಾಗಮನವನ್ನೆ ನಿರೀಕ್ಷಿಸುತ್ತಿರಬೇಕೆಂದು ನಿಶ್ಚಯಿಸಿದನು. ತನ್ನ ಈ ಅಭಿಪ್ರಾಯ ವನ್ನು ವಸಿಷ್ಠರಿಗೆ ತಿಳಿಸಿ, ಅವರ ಒಪ್ಪಿಗೆಯನ್ನು ಪಡೆದು, ಆತನು ಶ್ರೀರಾಮನ

ಪಾದುಕೆಗಳನ್ನು ತೆಗೆದುಕೊಂಡು ಖಿನ್ನಪರಿವಾರದೊಡನೆ ನಂದಿಗ್ರಾಮಕ್ಕೆ ಹೊರಟು ಹೋದನು.

ಭರತನು ನಂದಿಗ್ರಾಮವನ್ನು ಸೇರಿದೊಡನೆಯೆ ಶ್ರೀರಾಮಪಾದುಕೆಗಳನ್ನು ಸಿಂಹಾಸನದ ಮೇಲೆ ಪ್ರತಿಷ್ಠಿಸಿದನು. ಆ ಸಮಯದಲ್ಲಿ ನೆರೆದಿದ್ದ ಮಂತ್ರಿ ಸಾಮಂತರನ್ನೂ ಪುರಜನರನ್ನೂ ಕುರಿತು ಆತನು "ಎಲೈ ಮಂತ್ರಿಗಳೆ, ಪ್ರಜೆಗಳೆ, ನನ್ನ



ಭರತನು ನಂದಿಗ್ರಾಮವನ್ನು ಸೇರಿದೊಡನೆ ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದ ಮೇಲೆ ಪ್ರತಿಷ್ಠಿಸಿದನು.

ಅಗ್ರಜನಾದ ಶ್ರೀರಾಮಚಂದ್ರನು ರಾಜ್ಯವನ್ನು ಪರಿಪಾಲಿಸುವಂತೆ ನನಗೆ ಆಜ್ಞೆಯನ್ನಿತ್ತು ಈ ಪಾದುಕೆಗಳನ್ನು ನನ್ನ ವಶಕ್ಕೆ ಒಪ್ಪಿಸಿದ್ದಾನೆ. ಇವುಗಳೇ ಇನ್ನು ಮುಂದೆ ಈ ರಾಜ್ಯದ ಯೋಗಕ್ಷೇಮವನ್ನು ವಹಿಸುತ್ತವೆ. ಛತ್ರ ಚಾಮರಗಳನ್ನು ಇವುಗಳಿಗೇ ಸಲ್ಲಿಸಿ. ನಾನು ಈ ಪವಿತ್ರಪಾದಗಳ ಪ್ರತಿನಿಧಿಯಾಗಿ ಕೆಲಸ ಮಾಡುತ್ತಿರುತ್ತೇನೆ. ಅಣ್ಣನಾದ ರಾಮಚಂದ್ರನು ಹಿಂದಿರುಗಿದೊಡನೆಯೆ ನಾನು ರಾಜ್ಯಭಾರವನ್ನು

ಆತನಿಗೆ ವಹಿಸಿ ಆತನ ಪಾದಸೇವೆಯಲ್ಲಿ ನಿರತನಾಗುತ್ತೇನೆ. ಆ ಸುದಿನವನ್ನೆ ನಾವು ನಿರೀಕ್ಷಿಸುತ್ತಿರೋಣ" ಎಂದು ಹೇಳಿದನು.

ಅಂದಿನಿಂದ ಭರತನು ಆ ಪಾದುಕೆಗಳ ಹೆಸರಿನಲ್ಲಿ ರಾಜ್ಯಭಾರ ನಡಸಲು ಮೊದಲು ಮಾಡಿದನು. ಅಣ್ಣನು ಹಿಂದಿರುಗಿ ಬರುವ ದಿನದವರೆಗೂ ಆತನು ಜಟಾವಲ್ಕಲಧಾರಿಯಾಗಿ ನಂದಿಗ್ರಾಮದಲ್ಲಿಯೆ ವಾಸವಾಗಿದ್ದನು. ಸಾಮಂತರಾಜರಿಂದ ಕಪ್ಪಕಾಣಿಕೆಗಳಾಗಲಿ, ಇತರ ಗೌರವಗಳಾಗಲಿ ಶ್ರೀರಾಮನ ಪಾದುಕೆಗಳಿಗೆ ಸಲ್ಲುತ್ತಿದ್ದುವೆ ಹೊರತು ಭರತನು ಅವುಗಳನ್ನು ಸ್ವೀಕರಿಸುತ್ತಿರಲಿಲ್ಲ. ಯಾವ ರಾಜ್ಯಕಾರ್ಯವನ್ನು ನೆರವೇರಿಸಬೇಕಾದರೂ ಭರತನು ಮೊದಲು ಆ ಪಾದುಕೆಗಳಿಗೆ ನಿವೇದಿಸಿ, ತರುವಾಯ ಆ ಕಾರ್ಯವನ್ನು ಕೈಗೊಳ್ಳುವ ಸಾಧನೆಯ ಭಕ್ತಿಯೋಗವನ್ನು ಅಭ್ಯಾಸಮಾಡುತ್ತಿದ್ದನು.



## ೧೯

# ಅತ್ರಿ ಋಷಿ ಆಶ್ರಮಕ್ಕೆ

ಭರತನು ಹಿಂದಿರುಗಿದ ಮೇಲೆಯೂ ಕೆಲವುಕಾಲ ಶ್ರೀರಾಮನು ಚಿತ್ರಕೂಟದಲ್ಲಿಯೆ ವಾಸವಾಗಿದ್ದನು. ಆದರೆ ಇತ್ತೀಚೆಗೆ ಅಲ್ಲಿಯ ಋಷಿಗಳೆಲ್ಲರೂ ಏನೋ ಕಳವಳದಿಂದ ಕೂಡಿದವರಂತೆ ಕಾಣುತ್ತಿದ್ದರು. ಅದರಲ್ಲಿಯೂ ತನ್ನ ಪರ್ಣಶಾಲೆಗೆ ಕೇವಲ ಸಮೀಪ ದಲ್ಲಿದ್ದ ಆಶ್ರಮವಾಸಿಗಳು ಹೆಚ್ಚು ಭಯಗ್ರಸ್ತರಾಗಿರುವಂತೆ ಕಾಣಿಸಿತು. ಬಾಯಿ ಬಿಟ್ಟು ಅವರು ಏನೂ ಹೇಳದಿದ್ದರೂ ಆಗಾಗ ಕಣ್ಸನ್ನೆಯಿಂದ ತಮ್ಮತಮ್ಮಲ್ಲಿಯೇ ಪರಸ್ಪರ ಅಭಿಪ್ರಾಯಗಳನ್ನು ಸೂಚಿಸುವುದೂ, ಗುಟ್ಟಾಗಿ ಗುಜುಗುಟ್ಟುವುದೂ ಶ್ರೀರಾಮನ ಕಣ್ಣಿಗೆ ಬಿತ್ತು. ಇದರ ಅರ್ಥ ಅವನಿಗಾಗಲೊಲ್ಲದು. ತಾನಾಗಲಿ ಸೀತಾಲಕ್ಷ್ಮಣ ರಾಗಲಿ ಏನಾದರೂ ತಪ್ಪು ಮಾಡಿರಬಹುದೆ? ಎನ್ನಿಸಿತು ಆತನಿಗೆ. ಆದ್ದರಿಂದ ನೇರವಾಗಿ ಆ ಋಷಿಗಳಿಗೆಲ್ಲಾ ಪ್ರಮುಖರಾದವರ ಬಳಿಗೆ ಹೋಗಿ ಆತನನ್ನು ಕೇಳಿದನು. "ಪೂಜ್ಯರೆ, ನಾನಿಲ್ಲಿರುವುದರಿಂದ ನಿಮಗೇನಾದರೂ ಬಾಧೆಯಾಗಿರುವುದೆ? ನನ್ನ ತಮ್ಮ ನಾಗಲಿ ಹೆಂಡತಿಯಾಗಲಿ ಏನಾದರೂ ಅಪಚಾರ ಎಸಗಿದರೆ? ಈಚೆಗೆ ಋಷಿಗಳಿಗೆಲ್ಲ ಏನೋ ಅಸಮಾಧಾನವಾಗಿರುವಂತೆ ತೋರುತ್ತದೆಯಲ್ಲಾ! ಇದಕ್ಕೆ ಕಾರಣವೇನು?" ಪ್ರಶ್ನೆಗಳಿಗೆ ಜ್ಞಾನವೃದ್ಧನಾದ ಆ ತಾಪಸನು ಉತ್ತರ ಹೇಳುತ್ತಾ "ಅಯ್ಯಾ, ನಮ್ಮ ಕಳವಳಕ್ಕೆ ಕಾರಣವೆ ಬೇರೆ. ನೀನು ಇಲ್ಲಿರುವುದರಿಂದ ನಿನ್ನ ಮೇಲಿನ ದ್ವೇಷದಿಂದ ರಾಕ್ಷಸರು ತಪಸ್ವಿಗಳನ್ನು ಹಿಂಸಿಸುವುದಕ್ಕೆ ಆರಂಭಿಸಿದ್ದಾರೆ. ಈ ಕಾಡಿನಲ್ಲಿ ರಾವಣನ ತಮ್ಮನಾದ ಖರನೆಂಬ ರಾಕ್ಷಸನು ವಾಸಿಸುತ್ತಾನೆ. ಅವನು ಯಾರಿಗೂ ಹೆದರುವವನಲ್ಲ; ಮಹಾಘಾತುಕ, ನರಭಕ್ಷಕ. ನೀನು ಬಂದಂದಿನಿಂದಲೂ ಅವನ ಕಡೆಯ ರಾಕ್ಷಸರು ಋಷಿಗಳ ತಪಸ್ಸಿಗೆ ಭಂಗವನ್ನುಂಟುಮಾಡಲು ಆರಂಭಿಸಿದ್ದಾರೆ. ಅವರ ಹಿಂಸೆಯನ್ನು ತಡೆಯಲಾರದೆ ಋಷಿಗಳೆಲ್ಲರೂ ಬೇರೊಂದು ಸುರಕ್ಷಿತವಾದ ಪ್ರದೇಶಕ್ಕೆ ಹೊರಟುಹೋಗ ಬೇಕೆಂದು ನಿಶ್ಚಯಿಸಿದ್ದಾರೆ. ಪಾಪಿಯಾದ ಆ ಖರನಿಂದ ನಿನಗೂ ತೊಂದರೆಯಾಗ ಬಹುದು. ಆದ್ದರಿಂದ ನೀನೂ ತಮ್ಮನೊಡನೆ ಈ ಪ್ರದೇಶವನ್ನು ತೊರೆದು ಹೊರಟು ಬಾ" ಎಂದನು. ಶ್ರೀರಾಮನು ಆತನನ್ನೂ ಇತರ ಋಷಿಗಳನ್ನೂ ಎಷ್ಟು ಸಮಾಧಾನ ಪಡಿಸಿದರೂ ಅವರು ಅಲ್ಲಿರಲು ಒಪ್ಪದೆ ಬೇರೊಂದು ದೂರದ ಅರಣ್ಯಪ್ರದೇಶಕ್ಕೆ ಹೊರಟುಹೋದರು.

ಋಷಿಗಳೆಲ್ಲರೂ ಬಿಟ್ಟು ಹೊರಟುಹೋದುದರಿಂದ ಶ್ರೀರಾಮನಿಗೆ ಆ ಚಿತ್ರಕೂಟ ವಾಸ ಬೇಸರವಾಯಿತು. ಅಲ್ಲದೆ ಅಲ್ಲಿ "ಇದೋ ಇಲ್ಲಿ ಭರತನನ್ನು ನೋಡಿದೆ; ಅಲ್ಲಿ ತಾಯಿಯವರು ನಿಂತಿದ್ದರು; ಆ ಮರದ ಸಮೀಪದಲ್ಲಿಯೆ ಸುಮಂತ್ರನನ್ನು ಕಂಡುದು"

ಎಂಬ ಸ್ಮರಣೆ ಆಗಾಗ ಬಂದು ಆತನ ಮನಸ್ಸು ಸಂತಾಪಗೊಳ್ಳುತ್ತಿತ್ತು. ಭರತನ ಪರಿವಾರ ಬಂದು ಹೊರಟುಹೋದ ಮೇಲೆ ಆಶ್ರಮ ಪ್ರದೇಶವೆಲ್ಲವೂ ಕೊಳಕಾಗಿ ಹೋಗಿರುವಂತೆಯೂ ಕಂಡು ಬಂತು. ಆದ್ದರಿಂದ ಆ ಸ್ಥಳವನ್ನು ಬಿಟ್ಟು ಸೀತಾಲಕ್ಷ್ಮಣ ರೊಡನೆ ದಂಡಕಾರಣ್ಯವನ್ನು ಪ್ರವೇಶಿಸಿ ಅತ್ರಿ ಮುನಿಗಳ ಆಶ್ರಮವನ್ನು ಸೇರಿದನು. ತನ್ನ ಆಶ್ರಮಕ್ಕೆ ಅತಿಥಿಗಳಾಗಿ ಬಂದ ಶ್ರೀರಾಮಾದಿಗಳನ್ನು ಆ ಮುನಿ ಆದರೋಪ ಚಾರಗಳಿಂದ ತಣಿಸಿ ಅನಂತರ ಲೋಕೋತ್ತರ ತಪಸ್ವಿನಿಯಾದ ತನ್ನ ಮಡದಿಯನ್ನು ಪರಿಚಯಮಾಡಿಕೊಟ್ಟನು. ಪುಣ್ಯಕರ್ಮಗಳನ್ನೇ ಸದಾ ಆಚರಿಸುತ್ತಾ ಸ್ವಲ್ಪವೂ ಅಸೂಯೆಯಿಲ್ಲದುದರಿಂದ ಆಕೆಗೆ ಅನಸೂಯೆಯೆಂಬ ಹೆಸರು ಅನ್ವರ್ಥನಾಮವಾ ದಂತಾಗಿತ್ತು. ಹಣ್ಣು ಹಣ್ಣು ಮುದುಕಿಯಾಗಿ ಗಾಳಿಗೆ ತೂಗಾಡುವ ಬಾಳೆಯಂತೆ ನಡುಗುತ್ತಿದ್ದ ಆಕೆಯನ್ನು ಸೀತಾದೇವಿ ಕಾಲುಮುಟ್ಟಿ ನಮಸ್ಕರಿಸಿದಳು. ಹೀಗೆ ನಮಸ್ಕರಿಸಿದ ರಾಜಕುಮಾರಿಯನ್ನು ಆ ವೃದ್ಧತಾಪಸಿ ಬಾಚಿತಬ್ಬಿಕೊಂಡು ಮೈಯ್ಯನ್ನೆಲ್ಲಾ ಸವರುತ್ತಾ ಪಾತಿವ್ರತ್ಯದ ಮಹಿಮೆಯನ್ನು ವಿವರಿಸಿ ಹೇಳಿದಳು. ಅದನ್ನು ಭಕ್ತಿಶ್ರದ್ಧೆಗಳಿಂದ ಕೇಳಿದ ಸೀತೆಗೆ ತನ್ನ ತಾಯಿಯನ್ನು ಕಂಡಷ್ಟು ಸಂತೋಷ ವಾಯಿತು ; ಮೈಚಳಿಬಿಟ್ಟು ಮಾತನಾಡುವ ಸಲುಗೆಯಾಯಿತು. ತನ್ನ ತಂದೆಯ ಮನೆಯ ಸುದ್ದಿಯನ್ನೂ, ಗಂಡನ ಮನೆಯ ಸುದ್ದಿಯನ್ನೂ, ಸವಿಸ್ತಾರವಾಗಿ ತಿಳಿಸಿ ಶ್ರೀರಾಮನಿಗೆ ತನ್ನಲ್ಲಿರುವ, ತನಗೆ ಆತನಲ್ಲಿರುವ ಅಗಾಧವಾದ ಪ್ರೇಮವನ್ನು ವರ್ಣಿಸಿ ಹೇಳಿದಳು. ಮುದ್ದು ಮುದ್ದಾದ ಆಕೆಯ ಅನೇಕ ಮಾತುಗಳಿಂದ ಸುಪ್ರೀತ ಳಾದ ಅನಸೂಯೆ ಆಕೆಗೆ ಅನೇಕ ದಿವ್ಯಾಭರಣಗಳನ್ನು ಬಹುಮಾನವಾಗಿ ಕೊಟ್ಟು ಆಶೀರ್ವದಿಸಿದಳು.

ಸೀತಾರಾಮಲಕ್ಷ್ಮಣರು ಒಂದು ರಾತ್ರಿಯನ್ನು ಅತ್ರಿ ಋಷಿಗಳ ಆಶ್ರಮ ದಲ್ಲಿಯೇ ಕಳೆದರು. ಮರುದಿನ ಬೆಳಗ್ಗೆ ಮೂವರೂ ಮಹರ್ಷಿಗಳಿಗೆ ಭಕ್ತಿಪೂರ್ವಕ ವಾಗಿ ನಮಸ್ಕರಿಸಿ ತಾವು ಮುಂದೆ ಹೋಗಲು ಅಪ್ಪಣೆ ಬೇಡಿದರು. ಅತ್ರಿ ಋಷಿಗಳು ಅವರನ್ನು ಆಶೀರ್ವದಿಸಿ ಬೀಳ್ಕೊಳ್ಳುತ್ತಾ ಶ್ರೀರಾಮನನ್ನು ಕುರಿತು "ಎಲೈ ಸತ್ಯಸಂಧನಾದ ರಾಮಚಂದ್ರನೆ, ಮುಂದೆ ಕಾಣುವ ಘೋರಾರಣ್ಯ ರಾಕ್ಷಸರಿಗೆ ಆವಾಸಸ್ಥಾನ. ಹಣ್ಣು ಹಂಪಲುಗಳಿಗೆಂದೊ ಗೆಡ್ಡೆಗೆಣಸುಗಳಿಗಾಗಿಯೊ ಆ ಅರಣ್ಯವನ್ನು ಪ್ರವೇಶಿಸಿ ಅನೇಕ ಋಷಿಗಳು ಆ ರಾಕ್ಷಸರಿಗೆ ತುತ್ತಾಗಿದ್ದಾರೆ. ಆದ್ದರಿಂದ ನೀನು ಮೈಯೆಲ್ಲಾ ಕಣ್ಣಾಗಿ ವ್ಯವಹರಿಸಬೇಕು. ನಿನಗೆ ಮಂಗಳವಾಗಲಿ, ಹೋಗಿ ಬಾ!" ಎಂದರು. ಅವರ ಮಾತುಗಳಿಗೆ 'ಹಸಾದ'ವೆಂದು ಹೇಳಿ ಶ್ರೀರಾಮನು ಆ ಅರಣ್ಯ ಪ್ರವೇಶ ಮಾಡಿದನು.

---

# ಅರಣ್ಯ ಕಾಂಡ

---

## ೧

## ವಿರಾಧ ವಧೆ

ಸೂರ್ಯನು ಮೇಘಮಂಡಲವನ್ನು ಪ್ರವೇಶಿಸುವಂತೆ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯವನ್ನು ಹೊಕ್ಕನು. ಆ ಕಾಡಿನಲ್ಲಿ ಅವನಿಗೆ ಅನೇಕ ಋಷ್ಯಾಶ್ರಮಗಳು ಕಾಣಿಸಿದುವು. ಆ ಪರ್ಣಶಾಲೆಗಳ ಹತ್ತಿರದಲ್ಲಿ ಬೆಳೆದಿದ್ದ ದರ್ಭೆಯು ಮೇಲೆ ನಾರುಮಡಿಗಳನ್ನು ಹರಡಿದ್ದುದು ಬಿಸಿಲು ಬಿದ್ದ ಬಿಳಿಯ ಮೋಡಗಳಂತೆ ರಂಜಿಸುತ್ತಿತ್ತು. ಹಣ್ಣು ತುಂಬಿದ ಮರಗಳ ಮೇಲೆ ಹಕ್ಕಿಗಳು ಕುಳಿತು ಇಂಪಾಗಿ ಹಾಡುತ್ತಿದ್ದುವು. ಋಷಿಗಳು ನಡಸುತ್ತಿದ್ದ ಹೋಮಗಳಿಂದ ಮೇಲೆದ್ದ ಹೊಗೆ ಬಹು ದೂರದವರೆಗೆ ಕಾಣಬರುತ್ತಿತ್ತು. ಅಲ್ಲದೆ ಅವರು ಮಾಡುತ್ತಿದ್ದ ವೇದಾಧ್ಯಯನ ದಿಕ್ಕು ದಿಕ್ಕುಗಳಲ್ಲಿ ಪ್ರತಿಧ್ವನಿ ಕೊಡುತ್ತಿತ್ತು. ಅಲ್ಲಿ ವಾಸಮಾಡುತ್ತಿದ್ದ ಋಷಿಗಳು ಜಿತೇಂದ್ರಿಯರೂ ಅಗ್ನಿಸೂರ್ಯರಂತೆ ಕಾಂತಿಯುಕ್ತರೂ ಆಗಿದ್ದರು. ಆ ಮಹಾಮುನಿಗಳನ್ನು ಕಂಡು ಶ್ರೀರಾಮನು ತನ್ನ ಬಿಲ್ಲಿನ ಹಗ್ಗವನ್ನು ಸಡಿಲಿಸಿ, ಸೀತಾಲಕ್ಷ್ಮಣರೊಡನೆ ಅವರಲ್ಲಿಗೆ ಬಂದು ನಮಸ್ಕರಿಸಿದನು. ದಿವ್ಯಜ್ಞಾನಿಗಳಾದ ಆ ಋಷಿಗಳು ಅವರಿಗೆ ಕಂದಮೂಲಗಳನ್ನು ಕೊಟ್ಟು ಉಪಚರಿಸಿದರು. ಆಮೇಲೆ ಅವರು ಶ್ರೀರಾಮಚಂದ್ರನನ್ನು ಕುರಿತು, "ರಾಮಚಂದ್ರ, ನೀನು ಪಟ್ಟಣದಲ್ಲಿರು ಇಲ್ಲವೆ ಕಾಡಿನಲ್ಲಿರು; ನೀನೇ ನಮಗೆ ರಾಜ. ಧರ್ಮರಕ್ಷಕನೂ ದುಷ್ಟರನ್ನು ಶಿಕ್ಷಿಸುವವನೂ ಆದ ನೀನು ನಮ್ಮೆಲ್ಲರಿಗೆ ತಂದೆಯಂತಿರುವೆ. ಗರ್ಭದಲ್ಲಿರುವ ಮಗುವನ್ನು ತಾಯಿ ಕಾಪಾಡುವಂತೆ, ಕಾಡಿನಲ್ಲಿ ವಾಸಮಾಡುವ ನಮ್ಮನ್ನು ನೀನು ಕಾಪಾಡು" ಎಂದು ಪ್ರಾರ್ಥಿಸಿದರು.

ಮುನಿಗಳ ಆತಿಥ್ಯವನ್ನು ಸ್ವೀಕರಿಸಿ ಶ್ರೀರಾಮನು ಆ ರಾತ್ರಿಯನ್ನು ಆಶ್ರಮದಲ್ಲಿಯೆ ಕಳೆದನು. ಬೆಳಗಾಗುತ್ತಲೆ ಮುನಿಗಳ ಅಪ್ಪಣೆಯನ್ನು ಪಡೆದು ಅವರು ಮೂವರೂ ಮತ್ತೆ ಕಾಡನ್ನು ಹೊಕ್ಕರು. ಬಗೆಬಗೆಯ ಹಕ್ಕಿಗಳಿಂದಲೂ ಹುಲಿ ತೋಳ ಮೊದಲಾದ ಮೃಗಗಳಿಂದಲೂ ತುಂಬಿದ ಆ ಕಾಡಿನ ಮಧ್ಯಭಾಗಕ್ಕೆ ಅವರು ಹೊಕ್ಕು ಮುಂಬರಿಯುತ್ತಿರಲು ಭಯಂಕರನಾದ ರಾಕ್ಷಸನೊಬ್ಬನು ಅವರಿಗೆ ಇದಿರಾದನು. ಎತ್ತಿದ ಅವನ ತೋಳಮುಷ್ಟಿಯಲ್ಲಿ ಒಂದು ಅಡಕೆಯ ಮರದುದ್ದದ ಶೂಲವಿತ್ತು. ಅದರ ಒಂದೊಂದು ಮುಳ್ಳಿನಲ್ಲಿಯೂ ಆನೆ ತೋಳ ಹುಲಿ ಜಿಂಕೆ ಸಿಂಹ ಇವುಗಳ

ತಲೆ ಚುಚ್ಚಿಕೊಂಡದ್ದು ಕಾಣಿಸುತ್ತಿತ್ತು. ಆ ರಾಕ್ಷಸನು ತನ್ನ ಮೈಮೇಲೆ ಹೊದ್ದಿದ್ದ ಹಸಿಯ ಹುಲಿಯ ಚರ್ಮ ಚಿತ್ರವಿಚಿತ್ರವಾಗಿತ್ತು. ಯಮನಂತೆ ಬಾಯ್ ತೆರೆದು ಕೊಂಡಿದ್ದ ಅವನು ರಾಮಲಕ್ಷ್ಮಣರ ಮೇಲೆ ಹಾಯ್ದು ಬಂದು ಇದ್ದಕ್ಕಿದ್ದಂತೆ ಸೀತೆಯನ್ನು ಎತ್ತಿಕೊಂಡು ಓಡಿದನು. ಹೋಗುತ್ತಾ ರಾಜಕುಮಾರರಿಬ್ಬರನ್ನೂ ಕುರಿತು "ಜಟೆಯನ್ನು ಧರಿಸಿ, ನಾರುಡೆಯನ್ನುಟ್ಟಿರುವ ನೀವು ಈ ಹೆಂಗಸಿನೊಡನೆ ಈ ದುರ್ಗಮವಾದ ಕಾಡನ್ನೇಕೆ ಹೊಕ್ಕಿರಿ? ಬಿಲ್ಲುಬಾಣಗಳನ್ನು ಹಿಡಿದು ಋಷಿಗಳ ವೇಷ ಧರಿಸಿದ್ದರೂ ಅದಕ್ಕೆ ವಿರೋಧವಾದ ನಡತೆಯುಳ್ಳ ನೀವು ಯಾರು? ನಾನಾದರೊ ಋಷಿಗಳನ್ನೆ ತಿನ್ನುವವನು. ನನ್ನ ಹೆಸರು ವಿರಾಧ. ಈಗ ಈ ಸುಂದರಿಯನ್ನು ನನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳುತ್ತೇನೆ. ಹಾಗೆಯೇ ಪಾಪಿಗಳಾದ ನಿಮ್ಮಿಬ್ಬರ ರಕ್ತವನ್ನೂ ಪಾನಮಾಡುತ್ತೇನೆ" ಎಂದು ಗರ್ಜಿಸಿದನು.

ವಿರಾಧನ ಈ ಕೆಟ್ಟ ಮಾತುಗಳನ್ನು ಕೇಳಿ ಸೀತೆ ಬಿರುಗಾಳಿಯಿಂದ ಅಲುಗಾಡುವ ಬಾಳೆಯಂತೆ ನಡುಗಿಹೋದಳು. ಸದಾಚಾರಸಂಪನ್ನಳೂ ಸುಖದಲ್ಲಿಯೆ ಬೆಳೆದವಳೂ ಆದ ಸೀತೆಯನ್ನು ವಿರಾಧನು ಎತ್ತಿಕೊಂಡು ಓಡುವುದನ್ನು ಕಂಡು ರಾಮನಿಗೆ ಬಹು ದುಃಖವಾಯಿತು. "ಲಕ್ಷ್ಮಣ, ದೂರದೃಷ್ಟಿಯ ಕೈಕೆಯ ಬಯಕೆ ಇಂದು ಕೈಗೂಡಿತು. ತಂದೆ ಸತ್ತಾಗ, ರಾಜ್ಯ ಕೈಬಿಟ್ಟಾಗ ಆಗದ ದುಃಖ ಈಗ ಸೀತೆ ಪರಪುರುಷನ ತೊಡೆಯನ್ನೇರಿದುದರಿಂದ ನನಗೆ ಉಂಟಾಯಿತು" ಎಂದು ಶ್ರೀರಾಮನು ಶೋಕದಿಂದ ಕಣ್ಣೀರು ತುಂಬಿದನು. ಕಣ್ಣೀರು ಕರೆಯುತ್ತಿರುವ ಅಣ್ಣನನ್ನು ನೋಡಿ ಮಂತ್ರದಿಂದ ಕಟ್ಟಿದ ಸರ್ಪದಂತೆ ಲಕ್ಷ್ಮಣನು "ಅಣ್ಣ, ಎಲ್ಲ ಪ್ರಾಣಿಗಳನ್ನೂ ಕಾಪಾಡುವ ಶಕ್ತಿ ನಿನಗುಂಟು. ದೇವೇಂದ್ರನಿಗೆ ಸಮಾನನಾದ ನೀನು ದಿಕ್ಕಿಲ್ಲದವನಂತೆ ಏಕೆ ಅಳುವೆ? ನಾನು ಕೋಪ ಗೊಂಡರೆ ಇಂದ್ರನು ಪರ್ವತಗಳ ಮೇಲೆ ವಜ್ರಾಯುಧವನ್ನೆಸೆಯುವಂತೆ ನನ್ನ ಬಾಣ ಗಳನ್ನು ಇವನ ಮೇಲೆಸೆದು ಇವನನ್ನು ಭೂಮಿಗೆ ಬೀಳಿಸುತ್ತೇನೆ. ನಿನ್ನ ರಾಜ್ಯವನ್ನು ಬಯಸಿದ ಭರತನ ಮೇಲಿದ್ದ ಕೋಪವನ್ನು ಇವನ ಮೇಲೆ ತೀರಿಸಿಕೊಳ್ಳುತ್ತೇನೆ" ಎಂದು ಅಣ್ಣನನ್ನು ಸಮಾಧಾನ ಪಡಿಸಿದನು.

ಈ ನಡುವೆ ವಿರಾಧನು "ನಾನು ಜಯನೆಂಬ ಗಂಧರ್ವನ ಮಗ. ಶತಹ್ರದೆ ನನ್ನ ತಾಯಿ. ಸೀತೆಯನ್ನು ಬಿಟ್ಟು ನೀವು ಓಡಿಹೋಗಿ. ಹಾಗಾದರೆ ನಾನು ನಿಮ್ಮ ತಂಟೆಗೆ ಬಾರೆನು" ಎಂದು ಗುಡುಗಿದನು. ವಿರಾಧನ ಮಾತನ್ನು ಕೇಳಿ ಕೋಪಗೊಂಡ ರಾಮನು ಏಳು ಬಾಣಗಳಿಂದ ಅವನನ್ನು ಹೊಡೆದನು. ಬಾಣಗಳ ಹೊಡೆತವನ್ನು ತಿಂದ ರಾಕ್ಷಸನು ಸೀತೆಯನ್ನು ನೆಲಕ್ಕಿಳುಹಿ ಕೋಪದಿಂದ ಮೊರೆಯುತ್ತ ಶೂಲವನ್ನೆತ್ತಿ ರಾಮಲಕ್ಷ್ಮಣ ರನ್ನಟ್ಟಿ ಬಂದನು. ವಿರಾಧನಿಗೂ ಮತ್ತು ರಾಮಲಕ್ಷ್ಮಣರಿಗೂ ಸ್ವಲ್ಪ ಕಾಲ ಯುದ್ಧ ನಡೆಯಿತು. ಕೊನೆಗೆ ವಿರಾಧನು ತನ್ನ ತೋಳುಗಳಿಂದ ರಾಮಲಕ್ಷ್ಮಣರನ್ನಪ್ಪಿಕೊಂಡು ಹೊರಡಲು ಸಿದ್ಧನಾದನು. ರಾಕ್ಷಸನ ಅಭಿಪ್ರಾಯವನ್ನು ತಿಳಿದ ರಾಮನು ಲಕ್ಷ್ಮಣ ನನ್ನು ಕುರಿತು "ವತ್ಸ, ಇವನು ನಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗುವನೊ

ಹೋಗಲಿ. ರಾಕ್ಷಸನು ಹೋಗುವ ದಾರಿಯಲ್ಲಿಯೆ ನಾವು ಹೋಗಬೇಕಷ್ಟೆ" ಎಂದು ನುಡಿದನು. ವಿರಾಧನು ರಾಮಲಕ್ಷ್ಮಣರನ್ನು ಹೆಗಲಮೇಲೆ ಕೂರಿಸಿಕೊಂಡು ಭಯಂಕರ ವಾಗಿ ಕೂಗುತ್ತ ಪಕ್ಷಿಮೃಗಗಳಿಂದ ಕೂಡಿದ ಕಾಡನ್ನು ಹೊಕ್ಕನು.

ವಿರಾಧನು ರಾಮಲಕ್ಷ್ಮಣರನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ಕಂಡು ಸೀತೆ ಭಯದಿಂದ "ಅಯ್ಯೋ! ಇನ್ನೇನು ಗತಿ! ಸತ್ಯವಂತನೂ ಸದಾಚಾರಸಂಪನ್ನನೂ ಆದ ರಾಮನನ್ನೂ ಪರಾಕ್ರಮಿಯಾದ ಲಕ್ಷ್ಮಣನನ್ನೂ ಈ ರಾಕ್ಷಸನು ಎತ್ತಿಕೊಂಡು ಹೋಗುತ್ತಿದ್ದಾನೆ. ಒಬ್ಬೊಂಟಿಗಳಾದ ನನ್ನನ್ನು ಹುಲಿಗಳೂ ತೋಳಗಳೂ ತಿನ್ನುವುವು. ಎಲೈ ರಾಕ್ಷಸೋತ್ತಮ, ನಿನಗೆ ನಮಸ್ಕಾರ. ಈ ರಾಮಲಕ್ಷ್ಮಣರನ್ನು ಬಿಟ್ಟು ನನ್ನನ್ನು ಎತ್ತಿಕೊಂಡು ಹೋಗು" ಎಂದು ಕೂಗಿಕೊಂಡಳು. ಸೀತೆಯ ಆಕ್ರಂದನವನ್ನು ಕೇಳಿ ರಾಮಲಕ್ಷ್ಮಣರು ಬಹುಬೇಗ ಅವನೆರಡು ತೋಳುಗಳನ್ನೂ ಕತ್ತರಿಸಿಬಿಟ್ಟರು. ವಜ್ರಾಯುಧದಿಂದ ಕತ್ತರಿಸಿಹೋದ ಬೆಟ್ಟದಂತೆ ಆ ರಾಕ್ಷಸನು ಕೂಡಲೆ ನೆಲಕ್ಕುರುಳಿದನು. ಆ ಬಳಿಕ ಅವರು ಆ ರಾಕ್ಷಸನನ್ನು ಕೈಗಳಿಂದ ಗುದ್ದಿ ಗುದ್ದಿ ಅವನ ದೇಹವನ್ನು ನೆಲದಲ್ಲಿ ಅರೆದರು. ಇಷ್ಟಾದರೂ ವಿರಾಧನ ಪ್ರಾಣ ಹೋಗಲಿಲ್ಲ. ಆಗ ಶ್ರೀರಾಮನು ಅವನನ್ನು ಹೂಳಬೇಕೆಂದು ಲಕ್ಷ್ಮಣನಿಗೆ ಸೂಚಿಸಿದನು. ರಾಮನ ಮಾತನ್ನು ಕೇಳಿ ಆಗ ವಿರಾಧನಿಗೆ ಜ್ಞಾನೋದಯವಾಯಿತು. ವಿನಯದಿಂದ ರಾಮನನ್ನು ಕುರಿತು ವಿರಾಧನು "ಶ್ರೀರಾಮಚಂದ್ರ, ಹಿಂದಿನ ಜನ್ಮದಲ್ಲಿ ನಾನು ತುಂಬುರನೆಂಬ ಹೆಸರಾದ ಗಂಧರ್ವ. ಕುಬೇರನ ಶಾಪದಿಂದ ನನಗೆ ಈ ಘೋರವಾದ ರಾಕ್ಷಸ ಜನ್ಮ ಉಂಟಾಯಿತು. ಶ್ರೀರಾಮನು ನಿನ್ನನ್ನು ಯುದ್ಧದಲ್ಲಿ ಹೊಡೆದಾಗ ನಿನಗೆ ಶಾಪವಿಮೋಚನೆಯಾಗುವುದೆಂದು ಆತನು ಹೇಳಿದ್ದನು. ಈಗ ಆ ಕಾಲ ಬಂದಿದೆ. ನಾನಿನ್ನು ಸ್ವರ್ಗಕ್ಕೆ ಹೊರಡುತ್ತೇನೆ. ಮುಂದಿರುವ ಶರಭಂಗ ಋಷಿಗಳ ಆಶ್ರಮಕ್ಕೆ ನೀನು ಹೋದರೆ ನಿನಗೆ ಶ್ರೇಯಸ್ಸುಂಟಾಗುವುದು. ದೊಡ್ಡದೊಂದು ಗುಂಡಿಯಲ್ಲಿ ನನ್ನನ್ನು ಹೂಳು" ಎಂದು ರಾಮಲಕ್ಷ್ಮಣರನ್ನು ಪ್ರಾರ್ಥಿಸಿಕೊಂಡನು. ವಿರಾಧನ ಮಾತನ್ನು ಕೇಳಿ ಶ್ರೀರಾಮನು ದೊಡ್ಡದೊಂದು ಗುಂಡಿಮಾಡುವಂತೆ ಲಕ್ಷ್ಮಣನಿಗೆ ಅಪ್ಪಣೆಮಾಡಿ, ತಾನು ಅವನ ಕೊರಳನ್ನು ಮೆಟ್ಟಿ ನಿಂತನು. ಅಣ್ಣನ ಮಾತಿನಂತೆ ಲಕ್ಷ್ಮಣನು ಮಾಡಿದ ಗುಂಡಿಯಲ್ಲಿ ವಿರಾಧನನ್ನು ಎತ್ತಿಹಾಕಿದರು. ಬಳಿಕ ರಾಜಕುಮಾರರು ಸೀತೆಯೊಡಗೂಡಿ ಗೊಂಡಾರಣ್ಯದಲ್ಲಿ ಸಂಚರಿಸುತ್ತಾ ಮುಂದೆ ಹೊರಟರು

---

೨

# ಪಂಚವಟಿಗೆ

ಬಲಭೀಮನಾದ ವಿರಾಧನನ್ನು ಕೊಂದ ಬಳಿಕ ಶ್ರೀರಾಮನು ಸೀತೆಯನ್ನು ಅಪ್ಪಿಕೊಂಡು ಆಕೆಯನ್ನು ಸಂತೈಸಿದನು. ಅನಂತರ ದಟ್ಟವಾದ ಕಾಡನ್ನು ಆ ಮೂವರೂ ಹೊಕ್ಕರು. ಶರಭಂಗಋಷಿಯ ಆಶ್ರಮದ ಸಮೀಪಕ್ಕೆ ಬರುತ್ತಲೆ ಸೂರ್ಯಾಗ್ನಿ ಸಮಾನವಾದ ವಸ್ತುವೊಂದನ್ನು ನೋಡಿದರು. ಆ ಪದಾರ್ಥದ ಹತ್ತಿರಕ್ಕೆ ಬರುತ್ತಲೆ ಶ್ರೀರಾಮನು ದೇವೇಂದ್ರನು ಆ ಸ್ಥಳಕ್ಕೆ ಬರುತ್ತಿರುವನೆಂದರಿತನು. ಆಕಾಶದಲ್ಲಿಯೆ ತನ್ನ ರಥವನ್ನು ನಿಲ್ಲಿಸಿ, ದೇವತೆಗಳು ತನ್ನನ್ನು ಹಿಂಬಾಲಿಸಿ ಬರುತ್ತಿರಲು ಭೂಮಿಯನ್ನು ಮುಟ್ಟದೆ ಇಂದ್ರನು ಆ ಋಷಿಯ ಸಮೀಪಕ್ಕೆ ಬರುತ್ತಿದ್ದನು. ಪಚ್ಚೆ ಬಣ್ಣದಿಂದ ಕೂಡಿ ಬಾಲಸೂರ್ಯನಂತೆ ಆಕಾಶದಲ್ಲಿ ಹೊಳೆಯುತ್ತಿದ್ದ ರಥವನ್ನು ನೋಡಿ ಶ್ರೀರಾಮನು "ವತ್ಸ ಲಕ್ಷ್ಮಣ, ಒಂದು ಕ್ಷಣಕಾಲ ಸೀತೆಯೊಡನೆ ಇಲ್ಲಿ ನಿಲ್ಲು. ನಾನು ಹೋಗಿ ರಥದಲ್ಲಿರುವ ಪುರುಷಶ್ರೇಷ್ಠನಾರೆಂಬುದನ್ನು ತಿಳಿದುಬರುತ್ತೇನೆ" ಎಂದು ಹೇಳಿ ಶರಭಂಗಾಶ್ರಮಕ್ಕೆ ನಡೆದನು. ಆಶ್ರಮದ ಕಡೆಗೆ ಬರುತ್ತಿದ್ದ ಶ್ರೀರಾಮನನ್ನು ನೋಡಿ ದೇವೇಂದ್ರನು, ದೇವತಾಕಾರ್ಯ ಮುಗಿದಮೇಲೆಯೆ ಕೃತಕೃತ್ಯನಾದ ಶ್ರೀರಾಮನನ್ನು ತಾನು ನೋಡಬೇಕೆಂಬ ವಿಧಿನಿಯತಿಯಿರುವುದರಿಂದ ಆಗಲೆ ಕಾಣಿಸಿಕೊಳ್ಳದೆ, ಶ್ರೀರಾಮನು ಅಲ್ಲಿಗೆ ಬಂದಿರುವುದನ್ನು ಆ ಋಷಿಗೆ ತಿಳಿಸಿ ಆತನನ್ನು ಸತ್ಕರಿಸಿ ಹೊರಟುಹೋದನು. ದೇವೇಂದ್ರನು ಹೊರಟುಹೋದುದನ್ನು ಕಂಡು ಶ್ರೀರಾಮನು ಹಿಂದಿರುಗಿ ಬಂದು ಸೀತಾಲಕ್ಷ್ಮಣರೊಡನೆ ಶರಭಂಗಮುನಿಯನ್ನು ಕಂಡು ನಮಸ್ಕರಿಸಿದನು. ಶರಭಂಗನು ಅವರನ್ನು ಉಪಚರಿಸಿ ಕುಳ್ಳಿರಿಸಿದ ಮೇಲೆ ಶ್ರೀರಾಮನನ್ನು ಕುರಿತು ಹೇಳಿದನು— "ರಾಮಚಂದ್ರ, ದೇವೇಂದ್ರನು ನನ್ನನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ಈಗತಾನೆ ಇಲ್ಲಿಗೆ ಬಂದಿದ್ದನು. ನಾನಾದರೊ ನಿನ್ನನ್ನು ಕಾಣದೆ ಬ್ರಹ್ಮಲೋಕಕ್ಕೆ ಹೋಗಲು ಒಪ್ಪದಿದ್ದೆ. ಈಗ ನಾನು ನಿನ್ನೊಡನೆ ಮಾತನಾಡಿ ನಿನ್ನನ್ನು ಉಪಚರಿಸಿ ಬ್ರಹ್ಮ ಲೋಕಕ್ಕೆ ಹೋಗುವೆನು. ಈ ಅರಣ್ಯದಲ್ಲಿ ಸುತೀಕ್ಷ್ಣನೆಂಬ ಧಾರ್ಮಿಕನಾದ ಮುನಿ ಯೊಬ್ಬನು ವಾಸಮಾಡಿಕೊಂಡಿದ್ದಾನೆ. ನೀನು ಅವನಲ್ಲಿಗೆ ಹೋದರೆ ಈ ಕಾಡಿನಲ್ಲಿ ನೀವು ವಾಸಮಾಡಿಕೊಂಡಿರಲು ಮನೋಹರವೂ ಪ್ರಶಸ್ತವೂ ಆದ ಸ್ಥಳವೊಂದನ್ನು ಮಾಡಿ ಕೊಡುವನು. ಎಲೈ ಪುರುಷಶ್ರೇಷ್ಠನೆ, ಸ್ವಲ್ಪಕಾಲ ಇಲ್ಲಿಯೆ ನಿಲ್ಲು. ಸರ್ಪವು ಪೊರೆ ಯನ್ನು ಬಿಡುವಂತೆ ಇನ್ನು ಈ ದೇಹವನ್ನು ಬಿಡುತ್ತೇನೆ." ಇಷ್ಟು ಮಾತನ್ನಾಡಿದ ಬಳಿಕ ಶರಭಂಗನು ಮಂತ್ರದಿಂದ ಅಗ್ನಿಯನ್ನು ಪ್ರಜ್ವಲಗೊಳಿಸಿ, ಆಜ್ಯದಿಂದ ಹೋಮ ಮಾಡಿ, ಅದನ್ನು ಪ್ರವೇಶಮಾಡಿದನು. ಶ್ರೀರಾಮನು ಸೀತಾಲಕ್ಷ್ಮಣರೊಡನೆ ಈ ಸೋಜಿಗವನ್ನು ನೋಡುತ್ತಿರುವಾಗಲೆ ಶರಭಂಗನ ಆ ಭೌತಿಕ ದೇಹ ಸುಟ್ಟು ಬೂದಿ

ಯಾಯಿತು. ಆ ಅಗ್ನಿಯಿಂದಲೆ ಮೇಲೆದ್ದು ಚೆಲುವುಗೂಡಿ ಪ್ರಾಯದಿಂದ ಉಕ್ಕುತ್ತಿದ್ದ ದೇಹವನ್ನು ಧರಿಸಿ ಆ ಋಷಿ ಬ್ರಹ್ಮಲೋಕವನ್ನು ಕುರಿತು ತೆರಳಿದನು.

ಶರಭಂಗಋಷಿ ಬ್ರಹ್ಮಲೋಕಕ್ಕೆ ಹೋಗುತ್ತಲೆ, ಇತ್ತ ಅವನ ಆಶ್ರಮದಲ್ಲಿ ನಾನಾ ರೀತಿಗಳಲ್ಲಿ ತಪಸ್ಸು ಮಾಡುತ್ತಿದ್ದ ಮುನಿಗಳು ಸೀತಾರಾಮ ಲಕ್ಷ್ಮಣರನ್ನು ಇದಿರುಗೊಂಡರು. ಅವರು ಶ್ರೀರಾಮನನ್ನು ಕುರಿತು ಇಂತು ಪ್ರಾರ್ಥಿಸಿದರು—"ದೇವತೆಗಳಿಗೆಲ್ಲ ಇಂದ್ರನೆ ಮುಖ್ಯನಾಗಿರುವಂತೆ, ಇಕ್ಷ್ವಾಕುವಂಶಕ್ಕೆ ನೀನೆ ಪ್ರಭು, ಪರಾಕ್ರಮದಿಂದಲೂ ಕೀರ್ತಿಯಿಂದಲೂ ನೀನು ಮೂರು ಲೋಕಗಳಲ್ಲಿಯೂ ಹೆಸರುಗೊಂಡಿರುವೆ. ಸತ್ಯ, ಧರ್ಮ, ಪಿತೃಭಕ್ತಿ ಇದೇ ಮೊದಲಾದ ಸದ್ಗುಣಗಳು ನಿನ್ನಲ್ಲಿ ಹೇರಳವಾಗಿವೆ. ನಾವು ಮಾಡುತ್ತಿರುವ ತಪಸ್ಸಿನ ನಾಲ್ಕರಲ್ಲಿ ಒಂದು ಭಾಗವನ್ನು ಪಡೆಯಲು ನೀನು ಅರ್ಹನಾಗಿರುವೆ. ಇಲ್ಲಿ ನಮಗಾದರೊ ರಾಕ್ಷಸರಿಂದ ಸಹಿಸಲಾರದಷ್ಟು ತೊಂದರೆಯುಂಟಾಗುತ್ತಿದೆ. ಆದಕಾರಣ ನೀನು ರಾಕ್ಷಸರನ್ನು ಕೊಂದು ನಮ್ಮನ್ನು ಕಾಪಾಡಬೇಕು. ಋಷಿಗಳಾದ ನಾವು ನಿನ್ನನ್ನು ಮರೆಹೊಕ್ಕಿದ್ದೇವೆ."

ಋಷಿಗಳ ಮಾತನ್ನು ಮನ್ನಿಸಿ, ಅವರಿಗೆ ಅಭಯಕೊಟ್ಟು ಶ್ರೀರಾಮನು ಸೀತಾಲಕ್ಷ್ಮಣರೊಡನೆ ಸುತೀಕ್ಷ್ಣಮುನಿಯ ಆಶ್ರಮದ ಕಡೆಗೆ ಹೊರಟನು. ದಾರಿಯಲ್ಲಿ ಸಿಕ್ಕ ಅನೇಕ ನದಿಗಳನ್ನು ದಾಟಿ ಬಹುದೂರ ಪ್ರಯಾಣ ಮಾಡಿದಮೇಲೆ, ಅವರಿಗೆ ಕಪ್ಪಾದ ಬೆಟ್ಟವೊಂದು ಕಾಣಿಸಿತು. ಆ ಬೆಟ್ಟದ ತಪ್ಪಲಲ್ಲಿ ಹಣ್ಣುಗಳಿಂದ ತುಂಬಿದ ನಾನಾ ರೀತಿಯ ವೃಕ್ಷಗಳಿಂದ ಕೂಡಿದ ವನವೊಂದು ಅವರಿಗೆ ಗೋಚರಿಸಿತು. ಆ ವನವನ್ನು ಹೊಕ್ಕ ಅವರಿಗೆ ನಾರುಮಡಿಗಳಿಂದ ಅಲಂಕೃತವಾಗಿ ಏಕಾಂತದಲ್ಲಿದ್ದ ಆಶ್ರಮವೊಂದು ಕಣ್ಣಿಗೆ ಬಿದ್ದಿತು. ಅದೇ ಸುತೀಕ್ಷ್ಣಮುನಿಯ ಆಶ್ರಮ. ಆ ಆಶ್ರಮದಲ್ಲಿ ಜಟೆಗಳನ್ನು ಧರಿಸಿ, ತಪಸ್ಸಿನಿಂದಲೆ ಮುದುಕನಾಗಿ ಹೋಗಿದ್ದ ಸುತೀಕ್ಷ್ಣನನ್ನು ಇವರು ಕಂಡರು. ರಾಮನಾದ ನಾನು ನಿನ್ನನ್ನು ನೋಡಲು ಬಂದಿದ್ದೇನೆಂದು ಋಷಿಗೆ ತಿಳಿಸಿ ಶ್ರೀರಾಮನು ಹೆಂಡತಿ ತಮ್ಮಂದಿರೊಡನೆ ಆತನಿಗೆ ನಮಸ್ಕರಿಸಿದನು. ಸುತೀಕ್ಷ್ಣನು ಶ್ರೀರಾಮನನ್ನು ತನ್ನೆರಡು ತೋಳುಗಳಿಂದ ಬಿಗಿಯಾಗಿ ಅಪ್ಪಿಕೊಂಡು ಪ್ರೀತಿಯಿಂದ ಈ ರೀತಿ ನುಡಿದನು—"ವೀರನಾದ ರಾಮನೆ, ನಿನಗೆ ಸ್ವಾಗತ. ನಿನ್ನ ಬರುವಿಕೆಯಿಂದ, ಈ ನನ್ನ ಆಶ್ರಮ ಸನಾಥವಾಯಿತು. ನೀನು ಬರುವಿಯೆಂದೇ ತಿಳಿದು, ಇದುವರೆಗೆ ಸ್ವರ್ಗವನ್ನೇರದೆ ನಿನಗಾಗಿ ಕಾದಿದ್ದೆ. ಇದುವರೆಗೆ ತಪಸ್ಸಿನಿಂದ ನಾನು ಸಂಪಾದಿಸಿರುವ ಪುಣ್ಯಲೋಕಗಳನ್ನು ನೀನೇ ಅನುಭವಿಸು." ಸುತೀಕ್ಷ್ಣನ ಮಾತಿಗೆ ಶ್ರೀರಾಮನು "ಎಲೈ ಮುನಿಪುಂಗವನೆ, ಆ ಪುಣ್ಯಲೋಕಗಳನ್ನು ನಾನೇ ಸಂಪಾದಿಸುತ್ತೇನೆ. ಈ ಕಾಡಿನಲ್ಲಿ ವಾಸಮಾಡಲು ಯೋಗ್ಯವಾದ ಒಂದು ಸ್ಥಳವನ್ನು ತೋರಿಸು" ಎಂದನು. ಶ್ರೀರಾಮನ ಮಾತಿಗೆ ಮುನಿ "ಈ ವನದಲ್ಲಿ ಈ ಆಶ್ರಮದ ಪ್ರದೇಶವೆ ಉತ್ತಮವಾದುದು. ಎಲ್ಲ ಕಾಲದಲ್ಲಿಯೂ ಕಂದಮೂಲಗಳಿಂದ ಕೂಡಿರುವುದು. ವಾಸಮಾಡಲು ನಿನಗೆ ಈ ಸ್ಥಳವೆ ಅತ್ಯಂತ ಯೋಗ್ಯವಾದುದು. ಆದರೆ ಈ ಪ್ರದೇಶದಲ್ಲಿ ದುಷ್ಟ ಮೃಗಗಳಿಂದ ಋಷಿಗಳಿಗೆ

ತೊಂದರೆಯುಂಟು" ಎಂದನು. ತಾನು ಮೃಗಗಳನ್ನು ಕೊಲ್ಲುವುದು ಋಷಿಗಳಿಗೆ ರುಚಿಸ ದೆಂದು ತಿಳಿದು ಶ್ರೀರಾಮನು ಅಲ್ಲಿ ವಾಸಮಾಡಲು ಒಪ್ಪಲಿಲ್ಲ.

ಸುತೀಕ್ಷ್ಣನಿಂದ ಸತ್ಕಾರವನ್ನು ಪಡೆದ ಆ ಮೂವರೂ ಆ ರಾತ್ರಿಯನ್ನು ಆಶ್ರಮ ದಲ್ಲಿಯೆ ಕಳೆದರು. ಮಾರನೆಯ ದಿನ ಬೆಳಗಾಗುತ್ತಲೆ ಋಷಿಯ ಹರಕೆಯನ್ನು ಪಡೆದು ಮುಂದಕ್ಕೆ ಪ್ರಯಾಣಮಾಡಿದರು. ದಾರಿಯಲ್ಲಿ ಹೋಗುತ್ತ ಸೀತೆ ಶ್ರೀರಾಮನಿಗೆ ಈ ರೀತಿ ಹೇಳಿದಳು: "ರಾಮಚಂದ್ರ, ಸುಳ್ಳಾಡುವುದು, ಪರರ ಹೆಂಡಿರಲ್ಲಿ ಮರೆಯಾಗಿ ಬಾಳುವುದು, ವೈರವಿಲ್ಲದೆ ಮತ್ತೊಬ್ಬರನ್ನು ಹಿಂಸಿಸುವುದು—ಇವು ಒಂದನ್ನೊಂದು ಮೀರಿಸಿದ ಪಾಪಗಳು. ನಿನ್ನಲ್ಲಿ ಸುಳ್ಳು ಕನಸಿನಲ್ಲಿಯೂ ಕೂಡ ಸುಳಿಯದು. ಹಾಗೆಯೆ ಪರಸ್ತ್ರೀಯ ಬಯಕೆ ನಿನ್ನ ಮನಸ್ಸಿನಲ್ಲಿ ಹೇಗೆತಾನೆ ಸುಳಿದೀತು? ಆದರೆ ಋಷಿಗಳನ್ನು ಕಾಪಾಡಲು ರಾಕ್ಷಸರನ್ನು ಕೊಲ್ಲುವೆನೆಂದು ಅವರಿಗೆ ಅಭಯವಿತ್ತಿರುವೆ. ಇದರಿಂದ ನನ್ನ ಮನಸ್ಸು ತುಂಬ ಕಲಕಿಹೋಗಿದೆ. ದಂಡಕಾರಣ್ಯದ ನಿನ್ನ ಈ ಪ್ರವಾಸ ನನಗೆ ರುಚಿಸದು. ಬೆಂಕಿಗೆ ಕಟ್ಟಿಗೆ ಹೇಗೊ ಹಾಗೆ ಕ್ಷತ್ರಿಯರಿಗೆ ಅವರ ಬಿಲ್ಲುಬಾಣ. ಅದರಿಂದ ಅವರಿಗೆ ಪರಾಕ್ರಮ ಹೆಚ್ಚುತ್ತದೆ. ಹಿಂದೆ ಮಹಾ ತಪಸ್ವಿಯಾದ ಋಷಿ ಯೊಬ್ಬನ ಬಳಿ ದೇವೇಂದ್ರನು ಖಡ್ಗವೊಂದನ್ನು ಇಟ್ಟು ಹೋಗಿದ್ದನು. ತನ್ನ ತಪಸ್ಸನ್ನು ಕೆಡಿಸಲು ದೇವೇಂದ್ರನು ತನ್ನ ಬಳಿ ಇಟ್ಟಿರುವ ಖಡ್ಗ ಅದು ಎಂಬ ಅರಿವು ಅವನಿಗುಂಟಾಗಲಿಲ್ಲ. ಆದರಿಂದ ಅವನು ಕ್ರೂರ ಕರ್ಮಕ್ಕೆ ತೊಡಗಿದನು. ಇದರ ಫಲವಾಗಿ ಆ ತಪಸ್ವಿಗೆ ನರಕವುಂಟಾಯಿತು. ಆಯುಧವನ್ನು ಹಿಡಿಯುವುದು ಬೆಂಕಿ ಯೊಡನೆ ಸರಸವಾಡಿದಂತೆ. ಅದು ಮನಸ್ಸನ್ನು ಕಲಕಿಬಿಡುತ್ತದೆ. ನಿನ್ನಲ್ಲಿರುವ ಸ್ನೇಹದಿಂದ, ಪ್ರೀತಿಯಿಂದ ಈ ವಿಷಯವನ್ನು ನಿನ್ನ ನೆನಪಿಗೆ ತಂದುಕೊಟ್ಟೆ. ನಮ್ಮ ವಿಷಯದಲ್ಲಿ ತಪ್ಪು ಮಾಡದ ಜನರನ್ನು ಕೊಲ್ಲಲು ನಾನು ಬಯಸುವುದಿಲ್ಲ. ಅದಕ್ಕೆ ಬದಲಾಗಿ ಅಯೋಧ್ಯೆಗೆ ಹಿಂದಿರುಗಿ ಕ್ಷತ್ರಿಯ ಧರ್ಮವನ್ನು ಪಾಲಿಸುವುದೆ ಲೇಸು." ಸೀತೆಯ ಮಾತನ್ನು ಕೇಳಿ ಶ್ರೀರಾಮನು "ದೇವಿ, ನಿನ್ನ ಕುಲಕ್ಕೆ ಉಚಿತವಾದ, ಹಿತಕರವಾದ ಮಾತುಗಳನ್ನೆ ನೀನಾಡಿದೆ. ಸಂಕಟದಿಂದ ಪೀಡಿತರಾದವರನ್ನು ಕಾಪಾಡಲು ಕ್ಷತ್ರಿಯನಾದವನು ಬಿಲ್ಲನ್ನು ಹಿಡಿಯುತ್ತಾನೆ. ಋಷಿಗಳನ್ನು ಪೀಡಿಸುವ ಈ ರಾಕ್ಷಸರನ್ನು ಕೊಲ್ಲದ ಹೊರತು ಈ ಮುನಿಗಳಿಗೆ ಸುಖವೆಲ್ಲಿ ಬಂತು? ಈ ದಂಡಕಾರಣ್ಯದಲ್ಲಿರುವ ಋಷಿಗಳೆಲ್ಲ ಒಟ್ಟಾಗಿ ನನ್ನಲ್ಲಿಗೆ ಬಂದು ಈ ದುಷ್ಟರಾಕ್ಷಸರನ್ನು ಕೊಲ್ಲಬೇಕೆಂದು ಬೇಡಿಕೊಂಡಿದ್ದಾರೆ. ಮನುಷ್ಯರನ್ನೆ ತಿನ್ನುವ ಇವರಿಂದ ತಮ್ಮನ್ನು ಕಾಪಾಡಬೇಕೆಂದಿದ್ದಾರೆ. ನಾನು ಋಷಿಗಳಿಗೆ ರಾಕ್ಷಸರನ್ನು ಕೊಲ್ಲುವೆನೆಂದು ಅಭಯ ವನ್ನು ಕೊಟ್ಟಿದ್ದೇನೆ. ಈಗ ಈ ರೀತಿ ಅಭಯ ಕೊಟ್ಟು ಮರುಕ್ಷಣದಲ್ಲಿಯೆ ಅದರಂತೆ ನಡೆಯುವುದಿಲ್ಲವೆಂದು ನಾನು ಹೇಗೆತಾನೆ ನುಡಿಯಲಿ? ನಾನು ಜೀವವನ್ನಾಗಲಿ ಲಕ್ಷ್ಮಣನೊಡನೆ ನಿನ್ನನ್ನಾಗಲಿ ಬಿಟ್ಟೇನು. ಆದರೆ ಮಾಡಿದ ಪ್ರತಿಜ್ಞೆಯನ್ನು ಮಾತ್ರ ಬಿಡೆನು. ನೀನು ನನ್ನ ಪ್ರಾಣಕ್ಕಿಂತಲೂ ಮಿಗಿಲಾದವಳು; ಅಲ್ಲದೆ ಸಹಧರ್ಮಿಣಿ.

ಅಂತಹ ನೀನು ಹೇಳಿದ್ದು ನನ್ನ ಹಿತಕ್ಕೆ ತಾನೆ!" ಎಂದು ನುಡಿದು ಮುಂದೆ ಮುಂದೆ ಹೊರಟನು.

ಸೀತೆಯನ್ನು ನಡುವಿಟ್ಟುಕೊಂಡು, ಬಿಲ್ಲುಬಾಣಗಳನ್ನು ಧರಿಸಿದ ರಾಮಲಕ್ಷ್ಮಣರು ಮುಂದೆ ಮುಂದೆ ಹೊರಟರು. ಬೆಟ್ಟ, ಕಾಡು, ಕಮಲಗಳಿಂದ ಅಲಂಕೃತವಾದ ಸರೋವರ—ಇವುಗಳನ್ನು ನೋಡುತ್ತ ಸಂಜೆಯ ವೇಳೆಗೆ ಹಂಸಕಾರಂಡಗಳಿಂದ ತುಂಬಿ ಚೆಲುವನ್ನು ಸೂಸುತ್ತಿದ್ದ ಒಂದಾನೊಂದು ತಟಾಕವನ್ನು ಸೇರಿದರು. ಆ ತಟಾಕದ ಮಧ್ಯದಿಂದ ಇಂಪಾದ ಗಾನ ಕೇಳಿಬರುತ್ತಿತ್ತು. ಅದನ್ನು ಕುರಿತು ಜೊತೆಯಿದ್ದ ಋಷಿಯೊಬ್ಬನು "ರಾಮಚಂದ್ರ, ಈ ಸರೋವರದ ನಡುವೆ ಮಾಂಡಕರ್ಣಿ ಋಷಿಯ ಆಶ್ರಮವಿದೆ. ಈ ಸರೋವರದ ಹೆಸರು ಪಂಚಸರಸ್ಸು. ಹತ್ತು ಸಾವಿರ ವರುಷ ತಪಸ್ಸನ್ನು ಆಚರಿಸಿದ ಈ ಮುನಿಯ ಮಹಿಮೆಗೆ ಹೆದರಿ, ಇವನ ತಪಸ್ಸನ್ನು ಕೆಡಿಸಲು ದೇವತೆಗಳು ಐವರು ಅಪ್ಸರೆಯರನ್ನು ಕಳುಹಿಸಿದರು. ಇವರು ಈ ಋಷಿಯನ್ನು ಮೋಹಗೊಳಿಸಿ ಅವನೊಡನೆ ಇಲ್ಲಿ ಸುಖವಾಗಿರುವರು. ಅವರ ಆ ಗಾನವೆ ಈ ತಟಾಕದ ಮಧ್ಯದಲ್ಲಿ ಕೇಳಿಬರುತ್ತಿದೆ" ಎಂದು ಕತೆ ಹೇಳಿದನು. ಆಶ್ಚರ್ಯಕರವಾದ ಈ ಮಾತನ್ನು ಕೇಳಿ ಶ್ರೀರಾಮನು ಮುಂದೆ ಪ್ರಯಾಣ ಮಾಡಿ ಅಲ್ಲಿಯ ಆಶ್ಚರ್ಯಕರವಾದ ಋಷಿಗಳ ಆಶ್ರಮಗಳನ್ನು ನೋಡುತ್ತ ಮತ್ತೆ ಸುತೀಕ್ಷ್ಣ ಮುನಿಯ ಆಶ್ರಮಕ್ಕೆ ಹಿಂದಿರುಗಿ ಬಂದನು. ಅಲ್ಲಿ ಸುತೀಕ್ಷ್ಣನ ಆತಿಥ್ಯವನ್ನು ಸ್ವೀಕರಿಸಿ ರಾಮನು ಅವನನ್ನು ಕುರಿತು "ಎಲೈ ಮುನಿಪುಂಗವನೆ, ಮುನಿಪುಂಗವನಾದ ಅಗಸ್ತ್ಯನು ಈ ಕಾಡಿನಲ್ಲಿಯೆ ಇರುವನೆಂದು ಕೇಳಿದ್ದೇವೆ. ಈ ಕಾಡು ವಿಶಾಲವಾಗಿರುವುದರಿಂದ ಆತನು ಇರುವ ಆಶ್ರಮ ನನಗೆ ತಿಳಿಯದಾಗಿದೆ. ಆತನನ್ನು ಸೇವಿಸಬೇಕೆಂಬ ಬಯಕೆ ನನಗುಂಟಾಗಿದೆ. ಆ ಸ್ಥಳವನ್ನು ನೀನು ತಿಳಿಸಬೇಕು" ಎಂದನು. ಶ್ರೀರಾಮನ ಮಾತಿಗೆ ಸುತೀಕ್ಷ್ಣನು "ರಾಮಚಂದ್ರ, ನಮ್ಮ ಆಶ್ರಮಕ್ಕೆ ನಾಲ್ಕು ಹರಿದಾರಿ ದಕ್ಷಿಣಕ್ಕೆ ಹೋದರೆ ಅಲ್ಲಿ ಅಗಸ್ತ್ಯಮುನಿಯ ತಮ್ಮನ ಆಶ್ರಮ ಸಿಕ್ಕುತ್ತದೆ. ರಾತ್ರಿಯನ್ನು ಆ ಆಶ್ರಮದಲ್ಲಿ ಕಳೆದು, ಬೆಳಗಾಗುತ್ತಲೆ ಆ ಆಶ್ರಮದಿಂದ ಮೂರು ಹರಿದಾರಿ ದಕ್ಷಿಣಕ್ಕೆ ಹೋದರೆ ಅಗಸ್ತ್ಯಮುನಿಯ ಆಶ್ರಮ ಕಾಣಸುತ್ತದೆ. ತಡಮಾಡದೆ ನೀನು ಅಲ್ಲಿಗೆ ಹೋಗು. ನಿನಗೆ ಮಂಗಳವಾಗಲಿ" ಎಂದು ನುಡಿದು ಅವರನ್ನು ಬೀಳ್ಕೊಟ್ಟನು.

ಸುತೀಕ್ಷ್ಣಮುನಿ ತೋರಿಸಿದ ದಾರಿಯಲ್ಲಿಯೆ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಹೋಗುತ್ತ, ಹೂವು ಹಣ್ಣುಗಳಿಂದ ಜಗ್ಗಿ, ಹಿಪ್ಪೆಯ ಗಿಡದ ವಾಸನೆಯನ್ನು ಹೊತ್ತು ತರುತ್ತಿರುವ ಗಾಳಿಯಿಂದ ಕೂಡಿ, ಕಪ್ಪಾದ ಮೇಘಗಳಂತೆ ಹೊರಡುತ್ತಿರುವ ಹೊಗೆಗಳಿಂದ ತುಂಬಿ ಮೆರೆಯುತ್ತಿದ್ದ ಪ್ರದೇಶಕ್ಕೆ ಬಂದರು. ಸುತೀಕ್ಷ್ಣ ಮುನಿ ಹೇಳಿದ ಅಗಸ್ತ್ಯಭ್ರಾತೃವಿನ ಆಶ್ರಮ ಇದೇ ಎಂದು ಅವರು ಅರಿತರು. ಶ್ರೀರಾಮನು ಲಕ್ಷ್ಮಣನನ್ನು ಕುರಿತು "ವತ್ಸ ಲಕ್ಷ್ಮಣ, ಸುತೀಕ್ಷ್ಣ ಮುನಿ ಹೇಳಿದ ಅಗಸ್ತ್ಯ ಮುನಿ ಇಲ್ಲಿಯೆ ತಪಸ್ಸು ಮಾಡಿ, ರಾಕ್ಷಸರನ್ನು ಸಂಹರಿಸಿದನು. ಹಿಂದೆ ಈ ಸ್ಥಳದಲ್ಲಿ

ವಾತಾಪಿ ಇಲ್ವಲರೆಂಬ ಇಬ್ಬರು ರಾಕ್ಷಸ ಸೋದರರಿದ್ದರು. ಇವರಲ್ಲಿ ಕ್ರೂರಿಯಾದ ಇಲ್ವಲನು ಬ್ರಾಹ್ಮಣ ವೇಷವನ್ನು ಧರಿಸಿ, ಶ್ರಾದ್ಧ ಮಾಡಲು ಭೋಜನಕ್ಕೆ ಬ್ರಾಹ್ಮಣರನ್ನು ಕರೆಯುತ್ತಿದ್ದನು. ಆ ಬಳಿಕ ತಮ್ಮನಾದ ವಾತಾಪಿಯನ್ನು ಚೆನ್ನಾಗಿ ಬೇಯಿಸಿ ಅಡಿಗೆ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದನು. ಏನೂ ಅರಿಯದ ಬ್ರಾಹ್ಮಣರು ಊಟ ಮಾಡಿದೊಡನೆಯೆ ಇಲ್ವಲನು 'ವಾತಾಪಿ ಹೊರಟು ಬಾ' ಎಂದು ದೊಡ್ಡದಾಗಿ ಕೂಗುತ್ತಿದ್ದನು. ಆಗ ವಾತಾಪಿ ಮೇಕೆಯಂತೆ ಅರಚುತ್ತ ಬ್ರಾಹ್ಮಣರ ಹೊಟ್ಟೆಗಳನ್ನು ಸೀಳಿಕೊಂಡು ಬರುತ್ತಿದ್ದನು. ಹೀಗೆ ಸತ್ತ ಬ್ರಾಹ್ಮಣರ ಲೆಕ್ಕವನ್ನು ದೇವರೇ ಬಲ್ಲ! ಲೋಕಕಂಟಕರಾದ ಇವರನ್ನು ಕೊಲ್ಲಲು ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯನು ಇಲ್ವಲನ ಕರೆಯನ್ನು ಮನ್ನಿಸಿ ಶ್ರಾದ್ಧ ಭೋಜನಕ್ಕೆ ಹೋದನು. ವಾತಾಪಿಯನ್ನು ಪಾಕಮಾಡಿ ಇಲ್ವಲನು ಅಗಸ್ತ್ಯರಿಗೆ ಭೋಜನಕ್ಕೆ ಬಡಿಸಿದನು. ಅಗಸ್ತ್ಯನು ಉಂಡು ತೃಪ್ತಿಯಾದ ಕೂಡಲೇ ಇಲ್ವಲನು 'ವಾತಾಪಿ ಹೊರಕ್ಕೆ ಬಾ' ಎಂದು ಕೂಗಿದನು. ಆ ರಾಕ್ಷಸನನ್ನು ನೋಡಿ ನಗುತ್ತ ಅಗಸ್ತ್ಯನು 'ಮೇಕೆಯ ರೂಪವನ್ನು ಧರಿಸಿದ ನಿನ್ನ ತಮ್ಮನು ನನ್ನ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗಿದ್ದಾನೆ. ಹೀಗಿರಲು ಯಮನ ಮನೆಯನ್ನು ಕಂಡ ಅವನಿಗೆ ಹೊರಕ್ಕೆ ಬರುವ ಶಕ್ತಿಯೆಲ್ಲಿ ಬಂತು?" ಎಂದನು. ತಮ್ಮನ ಸಾವನ್ನು ಕೇಳಿ ಕೋಪದಿಂದ ತನ್ನ ಮೇಲೆ ಬೀಳಲು ಬಂದ ಇಲ್ವಲನನ್ನು ಅಗಸ್ತ್ಯನು ತನ್ನ ಕಣ್ಣುಗಳಿಂದಲೇ ಸುಟ್ಟುಬಿಟ್ಟನು" ಎಂದು ವಾತಾಪಿ ಇಲ್ವಲರ ಕಥೆಯನ್ನು ತಿಳಿಸಿದನು.

ರಾಮಲಕ್ಷ್ಮಣರು ಹೀಗೆ ಮಾತನಾಡಿಕೊಳ್ಳುತ್ತ ಅಗಸ್ತ್ಯಭ್ರಾತೃವಿನ ಆಶ್ರಮಕ್ಕೆ ಬಂದರು. ಆ ಮುನಿಯಿಂದ ಸತ್ಕೃತರಾದ ಅವರು ಆ ರಾತ್ರಿಯನ್ನು ಆ ಆಶ್ರಮದಲ್ಲಿಯೆ ಕಳೆದರು. ಮಾರನೆಯ ದಿನ ಋಷಿಗಳಿಂದ ಬೀಳ್ಕೊಂಡ ಅವರು ಅಗಸ್ತ್ಯಾಶ್ರಮದ ಕಡೆಗೆ ನಡೆದರು. ಆಶ್ರಮ ಹತ್ತಿರವಾಗುತ್ತಲೆ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ವತ್ಸ, ಇಗೋ ನೋಡು. ಈ ಪ್ರದೇಶದಲ್ಲಿ ಮರದ ಎಲೆಗಳು ನುಣುಪಾಗಿವೆ. ಮೃಗಗಳು ಯಾರ ಭಯವೂ ಇಲ್ಲದೆ ಶಾಂತವಾಗಿ ಹರಿದಾಡುತ್ತಿವೆ. ಅಗಸ್ತ್ಯಮುನಿಯ ಆಶ್ರಮ ಸಮೀಪವಾಯಿತು. ಅಗೋ, ನಾರುಮಡಿಗಳಿಂದ ಅಲಂಕೃತವಾಗಿ ಹೋಮಧೂಮಗಳಿಂದ ಕೂಡಿ ಆಶ್ರಮ ಕಾಣಿಸುತ್ತಿದೆ. ಬಳಲಿದ ಜನರ ಆಯಾಸವನ್ನು ಪರಿಹರಿಸುವ ಸ್ಥಳ ಇದು. ಇಲ್ಲಿ ಪಕ್ಷಿಗಳು ತಮ್ಮ ಕಲಕಲರವದಿಂದ ನಮ್ಮ ಕಿವಿಗೆ ಇಂಪನ್ನುಂಟುಮಾಡುತ್ತಿವೆ. ರಾಕ್ಷಸರು ಈ ಕಡೆ ಕಣ್ಣನ್ನು ಕೂಡ ಸುಳಿಸರು. ಸಜ್ಜನರಿಗೆ ಒಳ್ಳೆಯದನ್ನುಂಟುಮಾಡುವುದೆ ಅಗಸ್ತ್ಯನ ಜೀವನದ ಗುರಿ. ಇಂಥಾ ಮಹಾ ಮಹಿಮನ ಬಳಿಗೆ ಹೋಗಿ ಆತನನ್ನು ಸೇವಿಸೋಣ. ಲಕ್ಷ್ಮಣ, ನೀನು ಮುಂದೆ ಹೋಗಿ ಆ ತಪಸ್ವಿಗೆ ನಾನು ಬಂದಿರುವುದಾಗಿ ತಿಳಿಸು" ಎಂದನು.

ಅಣ್ಣನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು, ಲಕ್ಷ್ಮಣನು ಅಗಸ್ತ್ಯಾಶ್ರಮದ ದ್ವಾರವನ್ನು ಸೇರಿದನು. ಅಲ್ಲಿದ್ದ ಶಿಷ್ಯನೊಬ್ಬನನ್ನು ಕುರಿತು "ದಶರಥನ ಹಿರಿಯ

ಮಗನಾದ ಶ್ರೀರಾಮನು ಹೆಂಡತಿಯಾದ ಸೀತೆಯೊಡನೆಯೂ ತಮ್ಮನಾದ ಲಕ್ಷ್ಮಣ ನೊಡನೆಯೂ ಕಾಡಿಗೆ ಬಂದಿದ್ದಾನೆ. ಅಗಸ್ತ್ಯ ಋಷಿಯನ್ನು ನೋಡುವ ಬಯಕೆ ಯಿಂದ ಇಲ್ಲಿಗೆ ಬಂದಿರುವನು. ಈ ವಿಷಯವನ್ನು ದಯವಿಟ್ಟು ಋಷಿಗೆ ತಿಳಿಸು" ಎಂದು ಹೇಳಿದನು. ಶಿಷ್ಯನು ಈ ವಿಷಯವನ್ನು ಅಗಸ್ತ್ಯನಿಗೆ ತಿಳಿಸಲು, ಇದನ್ನು ಕೇಳಿ ಸಂತಸ ಗೊಂಡ ಮುನಿ ಅವರನ್ನು ಉಪಚರಿಸಿ ತನ್ನಲ್ಲಿಗೆ ಕರೆತರುವಂತೆ ಶಿಷ್ಯನಿಗೆ ಅಪ್ಪಣೆ ಮಾಡಿದನು. ಶಿಷ್ಯನ ಮಾತಿನಂತೆ ಶ್ರೀರಾಮನು ಆಶ್ರಮವನ್ನು ಹೊಕ್ಕು, ಶಿಷ್ಯರಿಂದ ಸುತ್ತುವರಿದ ತೇಜಸ್ವಿಯಾದ ಋಷಿಯನ್ನು ಕಂಡನು. ಮೂವರೂ ಋಷಿಯ ಪಾದ ಗಳಿಗೆ ನಮಸ್ಕರಿಸಿ ನಿಂತರು. ಅಗಸ್ತ್ಯನು ಕುಶಲಪ್ರಶ್ನೆಯನ್ನು ಕೇಳಿ ಅವರನ್ನು ಉಪಚರಿಸಿದನು. ಆ ಬಳಿಕ ರಾಮನನ್ನು ಕುರಿತು ಅಗಸ್ತ್ಯನು "ಪುರುಷವ್ಯಾಘ್ರನಾದ ಶ್ರೀರಾಮಚಂದ್ರ, ಚಿನ್ನ ಮತ್ತು ರನ್ನಗಳಿಂದ ಅಲಂಕೃತವಾದ ಈ ಧನುಸ್ಸನ್ನು ಬ್ರಹ್ಮನು ನಿರ್ಮಿಸಿದನು. ಸೂರ್ಯನ ತೇಜಸ್ಸಿನಂತೆ-ಹೊಳೆಯುವ ಈ ಬಾಣಗಳನ್ನು ನನಗೆ ಕೊಟ್ಟವನು ಬ್ರಹ್ಮನೆ. ಅಗ್ನಿತ್ರಯಗಳಂತೆ ಹೊಳೆಯುವ ಈ ಬಾಣಗಳಿಂದ ತುಂಬಿದ ಈ ಅಕ್ಷಯಸಾಯಕಗಳನ್ನೂ ಆತನೆ ನನಗೆ ಕೊಟ್ಟನು. ಚಿನ್ನದ ಹಿಡಿಯಿಂದ ಕೂಡಿದ ಈ ಖಡ್ಗದಿಂದ ಪೂರ್ವದಲ್ಲಿ ಮಹಾವಿಷ್ಣುವು ದೈತ್ಯರನ್ನು ಸಂಹರಿಸಿದನು. ದೇವೇಂದ್ರನು ವಜ್ರಾಯುಧವನ್ನು ಧರಿಸುವಂತೆ ರಾಕ್ಷಸರನ್ನು ಗೆಲ್ಲಲು ಈ ವೈಷ್ಣವ ಧನುಸ್ಸು, ಬಾಣ, ಬತ್ತಳಿಕೆ ಮತ್ತು ಖಡ್ಗಗಳನ್ನು ಧರಿಸು" ಎಂದು ಅವುಗಳನ್ನು ರಾಮನಿಗೆ ಅನುಗ್ರಹಿಸಿಕೊಟ್ಟನು. ಇದಾದ ಮೇಲೆ ಅಗಸ್ತ್ಯನು ರಾಮಲಕ್ಷ್ಮಣರಿಗೆ ಮಂಗಳವನ್ನು ಕೋರಿದನು; ಹಾಗೆಯೆ ಸೀತೆಯ ಪಾತಿವ್ರತ್ಯವನ್ನು ಹೊಗಳಿದನು. ಆಗ ರಾಮನು ಅಗಸ್ತ್ಯನಿಗೆ ಕೈಮುಗಿದು "ಸ್ವಾಮಿನ್, ತಾವು ನನ್ನ ವಿಷಯದಲ್ಲಿ ಪೂರ್ಣವಾದ ಅನುಗ್ರಹವನ್ನು ತೋರಿರುವಿರಿ. ನಿಮ್ಮ ಅನುಗ್ರಹದಿಂದ ನಾನು ಧನ್ಯನಾದೆ. ನಮ್ಮ ವನವಾಸದ ಕಾಲ ಕಳೆಯುವವರೆಗೆ ವಾಸಯೋಗ್ಯವಾದ ಆಶ್ರಮ ವನ್ನು ರಚಿಸಲು ನನಗೊಂದು ಸರಿಯಾದ ಸ್ಥಳವನ್ನು ತಿಳಿಸಿಕೊಡಬೇಕು" ಎಂದು ಬೇಡಿಕೊಂಡನು. ರಾಮನ ಮಾತನ್ನು ಕೇಳಿ ಅಗಸ್ತ್ಯನು ಎರಡು ಘಳಿಗೆ ಧ್ಯಾನಿಸಿ "ವತ್ಸ, ಇಲ್ಲಿಗೆ ಎರಡು ಯೋಜನಗಳ ದೂರದಲ್ಲಿ ಪಂಚವಟಿಯೆಂಬ ಮನೋಹರವಾದ ಸ್ಥಳವಿದೆ. ಅನೇಕ ಮೃಗಗಳಿಂದಲೂ ಕಂದಮೂಲಗಳಿಂದಲೂ ಕೂಡಿದ ಜಲಸಮೃದ್ಧಿ ಯುಳ್ಳ ಸ್ಥಳ ಅದು. ಏಕಾಂತವಾದ ಆ ಪ್ರದೇಶದಲ್ಲಿ ನೀನು ಆಶ್ರಮವನ್ನು ಕಟ್ಟಿ ಕೊಂಡು ಸುಖದಿಂದ ಇರಬಹುದು. ನಿನ್ನ ಪ್ರತಿಜ್ಞೆಯ ಕಾಲವನ್ನು ಕಳೆದು ನೀನು ಸುಖವಾಗಿ ಅಯೋಧ್ಯೆಗೆ ಹಿಂದಿರುಗುವೆ. ನಿನ್ನಂಥ ಮಗನನ್ನು ಪಡೆದ ದಶರಥನು ನಿಜವಾಗಿಯೂ ಧನ್ಯ. ನೀವೆಲ್ಲರೂ ಪಂಚವಟಿಗೆ ಪ್ರಯಾಣಮಾಡಿ. ಆ ಸ್ಥಳ ಸೀತೆಗೆ ಪ್ರಿಯವಾಗುತ್ತದೆ. ಗೋದಾವರಿ ಅಲ್ಲಿಗೆ ಸಮೀಪದಲ್ಲಿಯೆ ಹರಿಯುತ್ತಿದೆ. ಅಲ್ಲಿ ನೀನು ಆಶ್ರಮವನ್ನು ಕಟ್ಟಿಕೊಂಡು ವಾಸವಾಗಿದ್ದು ಮುನಿಗಳನ್ನು ರಕ್ಷಿಸು. ಈ ಹಿಪ್ಪೆಯ ಮರದ ಕಾಡಿನ ಉತ್ತರಕ್ಕಿರುವ ನ್ಯಗ್ರೋಧವೃಕ್ಷದ ಮಾರ್ಗವನ್ನು

ಅನುಸರಿಸಿ ಹೋಗು. ಅಲ್ಲಿ ಸಿಕ್ಕುವ ಬೆಟ್ಟವನ್ನು ಏರಿಹೋದರೆ ಪಂಚವಟಿ ಸಿಕ್ಕುತ್ತದೆ" ಎಂದನು. ಆ ರಾಜಕುಮಾರರು ಸೀತೆಯೊಡಗೂಡಿ, ಅಗಸ್ತ್ಯನು ಕೊಟ್ಟ ಬಿಲ್ಲು ಬಾಣ ಬತ್ತಳಿಕೆಗಳನ್ನು ಧರಿಸಿ, ಆತನ ಅಪ್ಪಣೆಯನ್ನು ಪಡೆದು ಪಂಚವಟಿಗೆ ತೆರಳಿದನು.

ಪಂಚವಟಿಯ ಕಡೆಗೆ ಹೋಗುತ್ತ, ಪುಣ್ಯಶಾಲಿಗಳಾದ ರಾಮಲಕ್ಷ್ಮಣರು ಮಧ್ಯ ಮಾರ್ಗದಲ್ಲಿ, ನ್ಯಗ್ರೋಧವೃಕ್ಷದ ಮೇಲಿದ್ದ ಭೀಮಪರಾಕ್ರಮಿಯೂ ದೊಡ್ಡ ದೇಹವುಳ್ಳವನೂ ಆದ ಜಟಾಯುವನ್ನು ನೋಡಿದರು. ರಾಮಲಕ್ಷ್ಮಣರು ಜಟಾಯುವನ್ನು ನೋಡಿ ಆತನಾರೆಂದು ಪ್ರಶ್ನೆ ಮಾಡಿದರು. ಆ ಮಾತಿಗೆ ಉತ್ತರವಾಗಿ ಮಧುರವೂ ಪ್ರಿಯವೂ ಆದ ಮಾತಿನಿಂದ ಜಟಾಯು ಹೇಳಿದನು—"ಅರುಣನ ಮಗನಾದ ನಾನು ದಶರಥ ರಾಜನ ಪ್ರಿಯಮಿತ್ರ. ನನ್ನನ್ನು ಜಟಾಯುವೆಂದು ಕರೆಯುವರು. ಪರಾಕ್ರಮಿಯಾದ ಸಂಪಾತಿ ನನ್ನ ತಮ್ಮ. ಈ ಕಾಡು ರಾಕ್ಷಸರಿಂದ ತುಂಬಿಹೋಗಿದೆ. ನಿಮಗೆ ಸಹಾಯಕನಾಗಿ ನಾನು ಈ ಕಾಡಿನಲ್ಲಿ ನಿಲ್ಲುತ್ತೇನೆ. ನೀವು ಈ ಕಾಡಿನಲ್ಲಿ ಸಂಚಾರ ಹೊರಟಾಗ ಸೀತೆಯನ್ನು ಕಾಪಾಡುವ ಭಾರ ನನ್ನದು." ಜಟಾಯುವಿನ ಮಾತನ್ನು ಕೇಳಿ, ಆ ಕಾಡಿನಲ್ಲಿ ತಮಗೊಬ್ಬ ಗೆಳೆಯ ದೊರೆತನೆಂದು ರಾಮಲಕ್ಷ್ಮಣರಿಗೆ ಆನಂದವಾಯಿತು. ಅಗ್ನಿ ಪತಂಗಗಳನ್ನು ಸುಟ್ಟುಹಾಕುವಂತೆ ಶತ್ರುಗಳನ್ನು ನಾಶಮಾಡಲು ಅವರು ಜಟಾಯುವಿನೊಡನೆ ಪಂಚವಟಿಗೆ ಬಂದರು.

ಪಂಚವಟಿಗೆ ಬಂದ ರಾಮನು ತೇಜಸ್ವಿಯಾದ ಲಕ್ಷ್ಮಣನನ್ನು ಕುರಿತು, "ವತ್ಸ, ಅಗಸ್ತ್ಯರು ಹೇಳಿದ ಸ್ಥಳಕ್ಕೆ ಈಗ ಬಂದಿದ್ದೇವೆ. ನಿನ್ನ ದೃಷ್ಟಿಯನ್ನು ಎಲ್ಲಕಡೆಗಳಲ್ಲಿಯೂ ಹರಿಬಿಟ್ಟು ಹೂ ಬಿಟ್ಟಿರುವ ಈ ಮರಗಳನ್ನು ನೋಡು. ನಿನಗೆ ಕಾಡಿನ ವಿಷಯವೆಲ್ಲ ಚೆನ್ನಾಗಿ ತಿಳಿದಿರುವುದಲ್ಲವೆ ? ಆದ್ದರಿಂದ ನಾವೆಲ್ಲರೂ ರಮಿಸಲು ಯೋಗ್ಯವಾದ ಜಲ ಸಮೃದ್ಧಿಯುಳ್ಳ, ಹೂವು ಹಣ್ಣು ಸಮಿತ್ತು ದರ್ಭೆಗಳಿಗೆ ಆಸರೆಯಾಗಿರುವ ರಮಣೀಯವಾದ ಒಂದು ಸ್ಥಳವನ್ನು ಗೊತ್ತುಮಾಡು" ಎಂದನು. ಅಣ್ಣನ ಮಾತಿಗೆ ಲಕ್ಷ್ಮಣನು ಸಮ್ಮತಿಸದೆ, ರಾಮನೇ ಅಂಥ ಸ್ಥಳವನ್ನು ತೋರಿಸಬೇಕೆಂದನು. ಶ್ರೀರಾಮನು ಸಂತೋಷದಿಂದ ಅವಳ ಕೈಯನ್ನು ಹಿಡಿದುಕೊಂಡು, ಅಲ್ಲಲ್ಲಿ ಹುಡುಕಿ ಕೊನೆಗೆ, ಒಂದು ಪ್ರದೇಶಕ್ಕೆ ಬಂದರು. "ವತ್ಸ, ಈ ಸ್ಥಳ ಉಬ್ಬು ತಗ್ಗುಗಳಿಲ್ಲದೆ ಸಮನಾಗಿದೆ. ಹೂ ಬಿಡುತ್ತಿರುವ ಮರಗಳಿಂದ ಕೂಡಿದೆ. ಈ ಪ್ರದೇಶದಲ್ಲಿಯೆ ನಮ್ಮ ವಾಸಕ್ಕೆ ಯೋಗ್ಯವಾದ ಆಶ್ರಮವೊಂದನ್ನು ರಚಿಸು. ಸೂರ್ಯನ ಕಾಂತಿಗೆ ಸಮವಾದ, ಸುಗಂಧಯುಕ್ತವಾದ, ಕಮಲಗಳಿಂದ ಕೂಡಿದ ರಮ್ಯವಾದ ಸರೋವರ ಹತ್ತಿರದಲ್ಲಿಯೆ ಕಾಣಿಸುತ್ತಿದೆ. ಹಂಸ ಕಾರಂಡಗಳಿಂದ ಕೂಡಿ ರಮಣೀಯಳಾದ ಗೋದಾವರಿ ಸಮೀಪದಲ್ಲಿಯೆ ಹರಿಯುತ್ತಿದ್ದಾಳೆ. ಜಿಂಕೆಗಳಿಂದಲೂ ಕುಣಿಯುತ್ತಿರುವ ನವಿಲುಗಳಿಂದಲೂ ಈ ಪ್ರದೇಶ ಕೂಡಿದೆ. ಕಂದರಗಳಿಂದಲೂ ಧಾತುರಾಗಗಳಿಂದಲೂ ಕೂಡಿದ ಬೆಟ್ಟಗಳು ಇಲ್ಲಿವೆ. ಪುಣ್ಯಕರವಾದ ಈ ಪ್ರದೇಶದಲ್ಲಿ ನಾನು ಜಟಾಯುವಿನೊಡನೆ ವಾಸಿಸುತ್ತೇನೆ" ಎಂದನು.

ಅಣ್ಣನ ಮಾತಿನಂತೆ ಮಹಾಬಲಶಾಲಿಯಾದ ಲಕ್ಷ್ಮಣನು ಆ ಸ್ಥಳದಲ್ಲಿ ಮಣ್ಣು ಅಗೆದು, ಗೋಡೆ ಕಟ್ಟಿ, ಬನ್ನಿಯ ಮರದ ಕೊಂಬೆಗಳನ್ನು ಹಾಸಿ, ಬಿದಿರಿನ ಜಂತೆಗಳನ್ನು ಜೋಡಿಸಿದನು. ಈ ಜಂತೆಗಳನ್ನು ಹುಲ್ಲು ಮತ್ತು ಎಲೆಗಳಿಂದ ಮುಚ್ಚಿ ಮನೋಹರ ವಾದ ಮತ್ತು ಉತ್ತಮವಾದ ಆಶ್ರಮವೊಂದನ್ನು ಬಹು ಬೇಗ ಕಟ್ಟಿದನು. ಅನಂತರ ಲಕ್ಷ್ಮಣನು ಗೋದಾವರಿಯಲ್ಲಿ ಮಿಂದು, ಹೂವು ಹಣ್ಣುಗಳಿಂದೊಡಗೂಡಿ ಆಶ್ರಮಕ್ಕೆ ಬಂದು ವಾಸ್ತುಪೂಜೆಯನ್ನು ನೆರವೇರಿಸಿದನು. ಈ ಕಾರ್ಯಗಳೆಲ್ಲ ಮುಗಿದಮೇಲೆ ಲಕ್ಷ್ಮಣನು ಶ್ರೀರಾಮನಿಗೆ ತಾನು ಕಟ್ಟಿದ ಆಶ್ರಮವನ್ನು ತೋರಿಸಿದನು. ಆಶ್ರಮವನ್ನು ನೋಡಿ ಸಂತೋಷಗೊಂಡ ಶ್ರೀರಾಮನು ತನ್ನೆರಡು ತೋಳುಗಳಿಂದ ತಮ್ಮನನ್ನು ಬಿಗಿ ಯಾಗಿ ಅಪ್ಪಿಕೊಂಡು "ವತ್ಸ, ನೀನು ಇಂದು ಬಹು ದೊಡ್ಡ ಕಾರ್ಯವನ್ನು ಮಾಡಿ ರುವೆ. ಇದರಿಂದ ನಾನು ಸಂತೋಷಗೊಂಡಿದ್ದೇನೆ. ನನ್ನ ಭಾವವನ್ನು ನೀನು ಗ್ರಹಿಸಿ, ಈ ಕೆಲಸವನ್ನು ಮಾಡಿರುವೆಯಾದ ಕಾರಣ, ಧರ್ಮಾತ್ಮನಾದ ತಂದೆ ಮೃತನಾಗಿಲ್ಲ ವೆಂದು ತಿಳಿಯುತ್ತೇನೆ" ಎಂದು ಆದರದಿಂದ ನುಡಿದು, ಸ್ವರ್ಗದಲ್ಲಿ ಇಂದ್ರನು ವಾಸಿಸು ವಂತೆ ತಾನೂ ಅಲ್ಲಿ ವಾಸಿಸತೊಡಗಿದನು.

---

೩

# ಶೂರ್ಪನಖಿ

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಕೆಲವು ಕಾಲ ಪಂಚವಟಿಯಲ್ಲಿ ಕಳೆದನು. ರಾಮಲಕ್ಷ್ಮಣರು ಪಂಚವಟಿಯಲ್ಲಿದ್ದ ಕಾರಣ ಋಷಿಗಳಿಗೆ ಎಷ್ಟೋ ಧೈರ್ಯ! ಈ ಸಮಯದಲ್ಲಿ ಒಮ್ಮೊಮ್ಮೆ, ಅಯೋಧ್ಯೆಯಲ್ಲಿ ತಮ್ಮಂತೆಯೆ ಕಷ್ಟಪಡುತ್ತಿದ್ದ ಭರತನ ನೆನಪುಂಟಾಗಿ, ಆ ಅಣ್ಣತಮ್ಮಂದಿರ ಕಣ್ಣು ಹನಿಗೂಡುತ್ತಿದ್ದುವು. ಕೆಲವು ಕಾಲ ಹೀಗೇ ಕಳೆಯಿತು. ಒಮ್ಮೆ ಶ್ರೀರಾಮನು ಪಂಚವಟಿಯಲ್ಲಿ ಸೀತೆಯೊಡನೆ ಕುಳಿತು ಚಿತ್ತಾನಕ್ಷತ್ರದಿಂದ ಕೂಡಿದ ಚಂದ್ರನಂತೆ ಶೋಭಿಸುತ್ತಿದ್ದನು. ಹಾಗೆ ಕುಳಿತುಕೊಂಡು ಲಕ್ಷ್ಮಣನೊಡನೆ ಮಾತನಾಡುತ್ತಿರುವಾಗ ರಾವಣನ ತಂಗಿ ಶೂರ್ಪನಖಿಯೆಂಬೊಬ್ಬ ರಾಕ್ಷಸಿ ಆ ಸ್ಥಳಕ್ಕೆ ಬಂದಳು. ಸಿಂಹದಂತೆ ಎದೆ, ಉದ್ದವಾದ ತೋಳುಗಳು, ಕಮಲದಂತೆ ಕಣ್ಣು, ಆನೆಯಂತೆ ನಡಿಗೆ, ಚೆಲುವಾದ ರೂಪು ಇವುಗಳುಳ್ಳ ರಾಮನನ್ನು ನೋಡಿ ಶೂರ್ಪನಖಿ ಅವನಲ್ಲಿ ಮೋಹಗೊಂಡಳು. ಶೂರ್ಪನಖಿಯದೊ ವಕ್ರವಾದ ಮುಖ, ದೊಡ್ಡ ಹೊಟ್ಟೆ, ಕೆಂಗೂದಲು ಮತ್ತು ಭಯಂಕರವಾದ ಧ್ವನಿ. ಆ ಘೋರ ರೂಪಿಣಿ ಜಟೆಯನ್ನು ಧರಿಸಿದ್ದ ಪ್ರಿಯವಾದಿಯೂ ಯುವಕನೂ ಆದ ಆ ರಾಮನನ್ನು ನೋಡಿ, ಮೋಹದಿಂದ ಹತ್ತಿರ ಬಂದು "ಎಲೈ ಪುರುಷನೆ, ಬಿಲ್ಲುಬಾಣಗಳನ್ನು ಹಿಡಿದು, ರಾಕ್ಷಸರಿಂದ ಕೂಡಿದ ಈ ಭಯಂಕರವಾದ ಕಾಡಿಗೆ ಹೆಂಡತಿಯೊಡನೆ ಹೇಗೆ ಬಂದೆ? ನಿಜವನ್ನು ನುಡಿ" ಎಂದಳು. ಋಜುಬುದ್ಧಿಯುಳ್ಳವನೂ ಮಹಾಸತ್ವನೂ ಕಂದರ್ಪಸದೃಶನೂ ಆದ ಶ್ರೀರಾಮನು ಆಕೆಗೆ ತಾನು ಕಾಡಿಗೆ ಬಂದ ಕಾರಣವನ್ನು ತಿಳಿಸಿದನು.

ಆಗ ಶೂರ್ಪನಖಿ ರಾಮನನ್ನು ಕುರಿತು "ರಾಮ, ಸತ್ಯವಾದ ಮಾತನ್ನು ಹೇಳುತ್ತೇನೆ ಕೇಳು. ಕಾಮರೂಪಿಣಿಯಾದ ನನ್ನ ಹೆಸರು ಶೂರ್ಪನಖಿ. ಭಯಂಕರವಾದ ಈ ಕಾಡಿನಲ್ಲಿ ನಾನೊಬ್ಬಳೆ ಸಂಚರಿಸುತ್ತಿದ್ದೇನೆ. ಪ್ರಸಿದ್ಧನೂ ವೀರನೂ ಆದ ರಾವಣನು ನನ್ನ ಅಣ್ಣ. ನಿದ್ದೆಯಲ್ಲಿಯೆ ಮನಸ್ಸುಳ್ಳ ಕುಂಭಕರ್ಣನು ನನ್ನ ಇನ್ನೊಬ್ಬ ಅಣ್ಣ. ರಾಕ್ಷಸನಾದರೂ ರಾಕ್ಷಸರಂತೆ ನಡತೆಯಿಲ್ಲದ ವಿಭೀಷಣನೂ ನನ್ನ ಇನ್ನೊಬ್ಬ ಅಣ್ಣ. ಪ್ರಖ್ಯಾತರಾದ ಖರದೂಷಣರೂ ನನ್ನ ಅಣ್ಣಂದಿರೆ! ಆದರೆ ಅವರೆಲ್ಲರನ್ನೂ ತ್ಯಾಗಮಾಡಿ, ಸುಂದರನಾದ ನಿನ್ನನ್ನು ಗಂಡನನ್ನಾಗಿ ಮಾಡಿಕೊಳ್ಳಬಯಸಿ ಇಲ್ಲಿಗೆ ಬಂದಿದ್ದೇನೆ. ಯಾರ ಅಡ್ಡಿಯೂ ಇಲ್ಲದೆ, ಯಾವ ಸ್ಥಳದಲ್ಲಿಯಾದರೂ ತಡೆಯಿಲ್ಲದೆ ಹೋಗಲು ಶಕ್ತಿಯುಳ್ಳ ನನ್ನನ್ನು ಮದುವೆಯಾಗು. ಈ ಸೀತೆಯಿಂದ ನಿನಗೇನಾಗಬೇಕು? ನಿನಗೆ ಅನುರೂಪಳಾದ ನನ್ನನ್ನು ನೋಡು. ಕುರೂಪಿಯೂ ಜೋಲಾಡುವ ಹೊಟ್ಟೆಯುಳ್ಳವಳೂ ಆದ

ಇವಳನ್ನೂ ಲಕ್ಷ್ಮಣನನ್ನೂ ಭಕ್ಷಿಸುತ್ತೇನೆ. ಆ ಬಳಿಕ ನಾವು ಬೆಟ್ಟಗಳ ಕೋಡುಗಲ್ಲು ಗಳಲ್ಲಿ, ವನಗಳಲ್ಲಿ ನಾನಾ ರೀತಿಯಲ್ಲಿ ವಿಹರಿಸೋಣ" ಎಂದು ಬೇಡಿಕೊಂಡಳು.

ಶೂರ್ಪನಖಿಯ ಮಾತನ್ನು ಕೇಳಿ ಮಾತನಾಡುವುದರಲ್ಲಿ ನಿಪುಣನಾದ ರಾಮನು ಮುಗುಳುನಗೆ ನಕ್ಕು "ಪೂಜ್ಯಳೆ, ನಾನಾದರೊ ಮದುವೆಯಾದವನು. ನಿನ್ನನ್ನು ಮದುವೆಯಾಗಿ ಇಲ್ಲಿರುವವಳಿಗೆ ಸವತಿಯೊಬ್ಬಳನ್ನು ತಂದು, ಅವಳನ್ನು ದುಃಖಕ್ಕೆ ಗುರಿ ಪಡಿಸುವ ಬಯಕೆ ನನಗಿಲ್ಲ. ಸುಶೀಲನೂ ಸುಂದರನೂ ಆದ ನನ್ನ ತಮ್ಮನು ಹೆಂಡತಿ ಯಿಲ್ಲದವನಾಗಿದ್ದಾನೆ. ಇದುವರೆಗೆ ಆತನು ಹೆಂಡತಿಯಿಂದ ಸುಖವನ್ನೇ ಕಂಡುದಿಲ್ಲ. ಯುವಕನಾದ ಆತನಿಗೆ ಹೆಂಡತಿಯೊಬ್ಬಳು ಬೇಕಾಗಿದ್ದಾಳೆ. ನಿನ್ನ ರೂಪಕ್ಕೆ ತಕ್ಕ ಗಂಡ ಅವನು. ಸವತಿಯ ಕಾಟವಿಲ್ಲದೆ, ಮೇರುಪರ್ವತವನ್ನು ಸೂರ್ಯನ ಕಾಂತಿ ಸೇವಿಸುವಂತೆ ಆತನನ್ನು ಸೇರಿ ಸುಖಿಸು" ಎಂದು ನುಡಿದನು. ಕಾಮಮೋಹಿತಳಾದ ಆಕೆ ಶ್ರೀರಾಮನ ಮಾತನ್ನು ಕೇಳಿ, ಲಕ್ಷ್ಮಣನ ಬಳಿಗೆ ಬಂದು "ನಾನು ನಿನಗೆ ಹೆಂಡತಿಯಾಗಲು ಬಂದಿ ದ್ದೇನೆ. ನನ್ನನ್ನು ಪರಿಗ್ರಹಿಸಿ ದಂಡಕಾರಣ್ಯದಲ್ಲಿ ಸುಖವಾಗಿ ವಿಹರಿಸು" ಎಂದಳು.

ಲಕ್ಷ್ಮಣ ಮಾತನಾಡುವುದರಲ್ಲಿ ಬಹು ಚತುರ. ರಾಕ್ಷಸಿಯ ಮಾತನ್ನು ಕೇಳಿ ನಕ್ಕು, "ಭದ್ರೆ, ವಿಶಾಲಾಕ್ಷಿ, ನಾನಾದರೊ ಶ್ರೀರಾಮನಿಗೆ ದಾಸ. ದಾಸನ ಹೆಂಡತಿಯಾಗಿ ಸೀತೆಯ ಶುಶ್ರೂಷೆಯನ್ನು ಮಾಡಬಯಸುವೆಯಾ ನೀನು ? ರಾಮನಿಗೇ ಹೆಂಡತಿಯಾಗಿ ಸಂತೋಷಹೊಂದು. ನಿನ್ನನ್ನು ಕೈಹಿಡಿದ ರಾಮನು ತನ್ನ ಮೊದಲಿನ ಮುದಿ ಹೆಂಡತಿ ಯನ್ನು ಬಿಟ್ಟು ನಿನ್ನನ್ನೇ ಸೇವಿಸುವನು. ಬುದ್ಧಿಶಾಲಿಯಾದ ಯಾವನು ತಾನೆ ನಿನ್ನನ್ನು



ರಾಮನ ಮಾತನ್ನು ಕೇಳಿ ಲಕ್ಷ್ಮಣನು ಕತ್ತಿಯನ್ನು ಹಿರಿದು ಶೂರ್ಪನಖಿಯ ಕಿವಿ ಮೂಗುಗಳನ್ನು ಕತ್ತರಿಸಿಬಿಟ್ಟನು.

ಬಿಟ್ಟು ಮಾನವ ಸ್ತ್ರೀಯನ್ನು ಬಯಸುತ್ತಾನೆ" ಎಂದನು. ಲಕ್ಷ್ಮಣನ ಮಾತು ಯುಕ್ತವೆಂದು ಶೂರ್ಪನಖಿಗೆ ತೋರಿತು. ಲಕ್ಷ್ಮಣನ ಮಾತಿನ ಹಿಂದೆ ಅಡಗಿದ್ದ ಹಾಸ್ಯವನ್ನು ತಿಳಿಯದೆ ಅವಳು ರಾಮನ ಬಳಿಗೆ ಮತ್ತೆ ಬಂದು ಕಾಮಮೋಹಿತಳಾಗಿ "ರಾಮ, ಮುದಿ ಹೆಂಡತಿಯನ್ನು ಮೇಲೇರಿಸಿಕೊಂಡು ನನ್ನನ್ನೇಕೆ ನೀನು ಶ್ಲಾಘಿಸುವುದಿಲ್ಲ? ನೀನು ನೋಡುತ್ತಿರುವಂತೆಯೆ ಈಕೆಯನ್ನು ಭಕ್ಷಿಸಿ, ಸವತಿಯಿಲ್ಲದವಳಾಗಿ ನಿನ್ನೊಡನೆ ಸುಖವಾಗಿ ವಿಹರಿಸುವೆನು" ಎಂದು ನುಡಿದು ಕೋಪದಿಂದ ಕ್ರೂರಗ್ರಹವು ರೋಹಿಣಿಯನ್ನಟ್ಟಿ ಬರುವಂತೆ ಸೀತೆಯನ್ನಟ್ಟಿ ಬಂದಳು. ಮೃತ್ಯುಪಾಶದಂತೆ ಮೇಲೆ ಬೀಳಲು ಬಂದ ಆಕೆಯನ್ನು ನೋಡಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಅನಾರ್ಯರೊಡನೆ ಹಾಸ್ಯಮಾಡುವುದು ಯುಕ್ತವಲ್ಲ. ಹೇಗಾದರೂ ಇವಳಿಂದ ಸೀತೆಯನ್ನು ಬದುಕಿಸಬೇಕು. ಈಕೆಯನ್ನು ವಿರೂಪಳನ್ನಾಗಿ ಮಾಡಿ ಕಳುಹಿಸು" ಎಂದನು.

ರಾಮನ ಮಾತನ್ನು ಕೇಳಿ ಲಕ್ಷ್ಮಣನು ಕತ್ತಿಯನ್ನು ಹಿರಿದು ಶೂರ್ಪನಖಿಯ ಕಿವಿ ಮೂಗುಗಳನ್ನು ಕತ್ತರಿಸಿಬಿಟ್ಟನು. ಮಳೆಗಾಲದ ಮೇಘವಂತೆ ರಕ್ತದಿಂದ ನೆನೆದ ಆಕೆ ಗುಡುಗಿನಂತೆ ಮೊಳಗಿ ಕೂಗುತ್ತ ತೋಳೆತ್ತಿಕೊಂಡು ಅರಣ್ಯವನ್ನು ಹೊಕ್ಕಳು; ರಕ್ಕಸರ ಗುಂಪಿಗೆ ಒಡೆಯನಾಗಿದ್ದ ತನ್ನಣ್ಣನಾದ ಖರನ ಮುಂದೆ ಆಕಾಶದಿಂದ ಎರಗುವ ಸಿಡಿಲಿನಂತೆ ಭೂಮಿಗೆ ಬಿದ್ದಳು.



ಖರನ ಮಾತನ್ನು ಕೇಳಿ ಎಚ್ಚರಗೊಂಡ ಶೂರ್ಪನಖಿ ಕಣ್ಣೀರು ಸುರಿಸುತ್ತಲೇ ಹೇಳಿದಳು

ನೆತ್ತರದಿಂದ ತೊಯ್ದು ಭೂಮಿಯ ಮೇಲೆ ಬಿದ್ದಿದ್ದ ಆ ವಿಕಾರರೂಪಿಣಿಯಾದ ತಂಗಿಯನ್ನು ನೋಡಿ ಖರನು ಕೋಪದಿಂದ ಉರಿದೆದ್ದು "ಭದ್ರೆ, ಏಳು. ಚಿತ್ತಚಾಂಚಲ್ಯವನ್ನೂ ಪ್ರಜ್ಞಾಹೀನತೆಯನ್ನೂ ಬಿಟ್ಟು ನಿನಗೆ ಈ ವಿರೂಪವೊದಗಲು ಕಾರಣವನ್ನು ತಿಳಿಸು. ಯಾರ ಗೋಜಿಗೂ ಹೋಗದ ಕೃಷ್ಣಸರ್ಪವನ್ನು ಬೆರಳ ತುದಿಯಲ್ಲಿ ಆಡಿಸಲೂ,

ಯಮಪಾಶವನ್ನು ಕಂಠದಲ್ಲಿ ಧರಿಸಲೂ ಯಾವನು ತಾನೆ ಬಯಸುತ್ತಾನೆ? ನಿನ್ನನ್ನು ವಿರೂಪಮಾಡಿದವರು ದೇವಗಂಧರ್ವರಲ್ಲಿ ಯಾರೇ ಆಗಿರಲಿ, ನೀರಿನೊಡನೆ ಸೇರಿರುವ ಹಾಲನ್ನು ಸಾರಸಪಕ್ಷಿಗಳು ಬೇರೆ ಮಾಡಿ ಹಾಲನ್ನು ಹೀರುವಂತೆ, ಅವರ ಪ್ರಾಣಗಳನ್ನು ಹೀರಿಬಿಡುತ್ತೇನೆ. ಈ ಕಾಡಿನಲ್ಲಿ ಈ ಅವಿನಯವನ್ನಾಚರಿಸಿದವನಾರು ಹೇಳು?" ಎಂದನು. ಅಣ್ಣನ ಮಾತನ್ನು ಕೇಳಿ ಎಚ್ಚರ ತಿಳಿದ ಶೂರ್ಪನಖಿ ಕಣ್ಣೀರು ಸುರಿಸುತ್ತಲೆ ಹೇಳಿದಳು. ದಶರಥನ ಮಕ್ಕಳಾದ ರಾಮಲಕ್ಷ್ಮಣರೆಂಬ ಅಣ್ಣತಮ್ಮಂದಿರಿಬ್ಬರು ಈ ಕಾಡಿನಲ್ಲಿದ್ದಾರೆ. ಅವರು ಧರ್ಮಾತ್ಮರೂ ರೂಪಸಂಪನ್ನರೂ ಯೌವನವಂತರೂ ಆಗಿದ್ದಾರೆ. ಗೆಡ್ಡೆಗೆಣಸುಗಳನ್ನು ತಿನ್ನುತ್ತ ಅವರು ಋಷಿವೃತ್ತಿಯಿಂದಿದ್ದಾರೆ. ಅವರ ಬಳಿ ತರುಣಿಯೂ ರೂಪವತಿಯೂ ಆದ ಸೀತೆಯೆಂಬ ಸ್ತ್ರೀಯೊಬ್ಬಳಿದ್ದಾಳೆ. ಅವಳಿಂದಲೆ ನನಗೆ ಈ ಗತಿಯುಂಟಾಯಿತು. ರಾಮಲಕ್ಷ್ಮಣರನ್ನು ನೀನು ಯುದ್ಧದಲ್ಲಿ ಕೊಲ್ಲುವುದಾದರೆ, ಅವರ ನೊರೆನೆತ್ತರನ್ನು ಕುಡಿಯಬಯಸುತ್ತೇನೆ."

---

ೞ

# ಖರದೂಷಣರ ವಧೆ

ತಂಗಿಯ ಮಾತನ್ನು ಕೇಳಿ ಖರನು ಉರಿದೆದ್ದನು. ಯಮನಿಗೆ ಸಮಾನರಾದ ಹದಿನಾಲ್ಕು ಮಂದಿ ರಾಕ್ಷಸವೀರರನ್ನು ಕರೆದು, "ನಡೆಯಿರಿ. ಆ ಮೂವರು ನರಾಧಮರನ್ನು ಕೊಂದು ಇಲ್ಲಿಗೆ ತೆಗೆದುಕೊಂಡು ಬನ್ನಿ. ಅವರ ನೆತ್ತರನ್ನು ಹೀರಿ ತಣಿಯಲಿ ನನ್ನ ತಂಗಿ" ಎಂದು ಗರ್ಜಿಸಿದನು. ಖರನ ಅಪ್ಪಣೆಯಂತೆ ಆಗ ಬಿರುಗಾಳಿಯೊಡಗೂಡಿದ ಮೋಡಗಳಂತೆ ಆ ಶೂರ್ಪಣಖಿಯೊಡಗೂಡಿ ಅವರು ದಂಡಕಾರಣ್ಯವನ್ನು ಹೊಕ್ಕು ಸೀತೆಯೊಡನಿದ್ದ ರಾಮಲಕ್ಷ್ಮಣರನ್ನು ಕಂಡರು. ತಮ್ಮ ಮೇಲೆತ್ತಿ ಬರುತ್ತಿದ್ದ ರಾಕ್ಷಸರನ್ನು ನೋಡಿ ಬಲಶಾಲಿಯಾದ ರಾಮನು ಸೀತೆಯನ್ನು ರಕ್ಷಿಸುತ್ತಿರುವಂತೆ ಲಕ್ಷ್ಮಣನಿಗೆ ಬೆಸಸಿ ಹಗೆಗಳಿಗೆ ಇದಿರಾದನು. ರಾಮನು ಬಿಟ್ಟ ಬಾಣಗಳಿಂದ ಬೇರುಸಹಿತ ಕತ್ತರಿಸಿ ಹೋದ ಮರದಂತೆ ಆ ಹದಿನಾಲ್ಕು ಮಂದಿ ರಕ್ಕಸರೂ ನೆಲಕ್ಕುರುಳಿ ಪ್ರಾಣಬಿಟ್ಟರು. ಇದನ್ನು ಕಂಡ ಶೂರ್ಪಣಖಿ ಭಯಂಕರವಾಗಿ ಕೂಗುತ್ತ ಖರನ ಬಳಿಗೋಡಿ ಬಂದು ಎಲ್ಲರೂ ರಾಮನೊಬ್ಬನಿಂದ ಹತರಾದ ಸಮಾಚಾರವನ್ನು ಅವನಿಗೆ ತಿಳಿಸಿದಳು.

ಶೂರ್ಪಣಖಿ ತಂದ ಸಮಾಚಾರದಿಂದ ಖರನು ಸಂತಪ್ತನಾದನು. ರಾಮನನ್ನು ಕೊಲ್ಲದಿದ್ದರೆ ತಾನು ಪ್ರಾಣಬಿಡುವೆನೆಂಬ ಆಕೆಯ ಮಾತುಗಳು ಅವನನ್ನು ಉದ್ರೇಕಗೊಳಿಸಿದುವು. ಭಯ, ಕೋಪ, ದುಃಖಗಳಿಂದ ಹೊಟ್ಟೆ ಬಡಿದುಕೊಳ್ಳುತ್ತಿದ್ದ ತನ್ನ ತಂಗಿಯನ್ನು ನೋಡಿ ಖರನು "ತಂಗಿ, ನಿನ್ನ ಅಪಮಾನದಿಂದ ನನಗುಂಟಾಗಿರುವ ಕೋಪವನ್ನು ಉಕ್ಕೆದ್ದ ಸಾಗರದಂತೆ ತಡೆಯಲು ಅಸಾಧ್ಯವಾಗಿದೆ. ಮನುಷ್ಯ ಮಾತ್ರದವನೂ ಅಲ್ಪಾಯುಷ್ಯ ಹೊಂದಿರುವವನೂ ಆಗಿರುವ ರಾಮನನ್ನು ನಾನು ಲೆಕ್ಕಿಸುವನೆಂದು ಬಗೆದೆಯಾ ? ಕಣ್ಣುಗಳಿಂದ ಬೀಳುತ್ತಿರುವ ಕಂಬನಿಗಳನ್ನು ತಡೆದುಕೊ. ಇಗೋ! ರಾಮನೊಡನೆ ಯುದ್ಧಕ್ಕೆ ನಾನೇ ಹೊರಟೆ. ಯುದ್ಧದಲ್ಲಿ ಮಡಿದ ರಾಮನ ಬಿಸಿ ನೆತ್ತರಿಂದ ತೃಪ್ತಿಪಡು" ಎಂದು ಅವಳನ್ನು ಸಂತೈಸಿದನು.

ಅಣ್ಣನ ಮಾತಿನಿಂದ ಶೂರ್ಪಣಖಿಗೆ ಸಂತೋಷವೂ ಹಾಗೂ ಸಮಾಧಾನವೂ ಉಂಟಾದುವು. ಅವನನ್ನು ಆಕೆ ಬಾಯಿತುಂಬ ಹೊಗಳಿದಳು. ಆಗ ಖರನು ನೀಲ ಮೇಘದ ಕಾಂತಿಯುಳ್ಳ ಭಯಂಕರಾಕಾರದ ಹದಿನಾಲ್ಕು ಸಾವಿರ ರಾಕ್ಷಸರನ್ನು ತನ್ನಲ್ಲಿಗೆ ಕಳುಹಿಸಿಕೊಡುವಂತೆ ಸೇನಾಪತಿಯಾದ ದೂಷಣನಿಗೆ ಹೇಳಿಕಳುಹಿಸಿದನು. ಒಡೆಯನ ಅಪ್ಪಣೆಯಂತೆ ದೂಷಣನು ಹೊಂಬಣ್ಣದ ಕುದುರೆಗಳಿಂದ ಹೂಡಿದ ರಥವನ್ನು ಸಿದ್ಧಪಡಿಸಿ ತಂದನು. ಆ ರಥವನ್ನು ಹತ್ತಿ ಖರನು ಯುದ್ಧಕ್ಕೆ ಹೊರಟಾಗ, ಹದಿನಾಲ್ಕು

ಸಾವಿರ ಯೋಧರ ಆಯುಧಗಳು ಆಕಾಶವನ್ನೂ, ಧ್ವನಿಗಳು ದಿಕ್ಕುದಿಕ್ಕುಗಳನ್ನೂ ತುಂಬಿದುವು.

ಯುದ್ಧಕ್ಕೆ ಹೊರಟಿದ್ದ ಖರನಿಗೆ ಆಗ ಅನೇಕ ದುಶ್ಶಕುನಗಳು ಕಾಣಿಸಿಕೊಂಡುವು. ಕತ್ತೆಯ ಬಣ್ಣದ ಮೇಘವೊಂದು ರಕ್ತದ ಮಳೆಯನ್ನೇ ಸುರಿಸಿತು. ಖರನ ರಥದ ಕುದುರೆಗಳು ಹೂವಿನ ಹಾಸಿನಂತಿದ್ದ ರಾಜಮಾರ್ಗದಲ್ಲಿ ಮುಗ್ಗರಿಸಿ ಬಿದ್ದುವು. ಸೂರ್ಯನ ಸುತ್ತಲೂ ಪರಿವೇಷ ಕಂಡುಬಂತು. ದೊಡ್ಡದೊಂದು ಹದ್ದು ಚಿನ್ನದ ದಂಡವುಳ್ಳ ಧ್ವಜದ ಮೇಲೆ ಬಂದೆರಗಿತು. ನಡುಹಗಲಿನಲ್ಲೆ ನರಿಗಳು ಅಶುಭ ಧ್ವನಿಯಿಂದ ಕೂಗಿಕೊಂಡುವು. ಭಯಂಕರವಾದ ಮೇಘಗಳು ಆಕಾಶವನ್ನೆಲ್ಲ ತುಂಬಿ ಕತ್ತಲೆಯನ್ನುಂಟುಮಾಡಿದುವು. ಆಗ ಬೀಸಿದ ಬಿರುಗಾಳಿಯಿಂದ ಧೂಳೆದ್ದು ಬೆಟ್ಟಗಳೂ ಕಾಡುಗಳೂ ನಡುಗಿಹೋದುವು. ಮುಂದೆ ಬರುವ ಕೇಡನ್ನು ಸೂಚಿಸಿ, ಖರನ ಎಡಭುಜ ನಡುಗಿತು. ಆದರೆ ದುಶ್ಶಕುನಗಳನ್ನು ಕಂಡು ಖರನು ಹೆದರಲಿಲ್ಲ. ಯುದ್ಧವನ್ನು ನೋಡಲು ದೇವತೆಗಳೂ ಗಂಧರ್ವರೂ ಋಷಿಗಳೂ ವಿಮಾನಗಳನ್ನು ಏರಿಕೊಂಡು ಆಕಾಶದಲ್ಲಿ ನೆರೆದರು.

ಖರದೂಷಣರು ತಮ್ಮ ಬಲದೊಡನೆ ರಾಮನ ಆಶ್ರಮದ ಬಳಿಗೆ ಬರುತ್ತಿರಲು, ರಾಮನು ಉತ್ಪಾತಗಳನ್ನು ನೋಡಿದನು. ಲಕ್ಷ್ಮಣನನ್ನು ಕುರಿತು "ವತ್ಸ, ರಾಕ್ಷಸರ ವಧೆಗಾಗಿ ಮೂಡಿರುವ ಈ ಉತ್ಪಾತಗಳನ್ನು ನೋಡಿದೆಯಾ? ಈ ಶಕುನಗಳು ನಮಗೆ ಶುಭವನ್ನೂ ಶತ್ರುಗಳಿಗೆ ನಾಶವನ್ನೂ ಸೂಚಿಸುತ್ತಿವೆ. ನನ್ನ ಬಲದೋಳು ಬಾರಿ ಬಾರಿಗೂ ಸ್ಫುರಿಸುತ್ತಿದೆ. ಕ್ರೂರಿಗಳಾದ ಈ ರಾಕ್ಷಸರನ್ನು ನಾನೊಬ್ಬನೆ ಇದಿರಿಸುತ್ತೇನೆ. ನೀನು ಧನುರ್ಧಾರಿಯಾಗಿ, ಗಿಡಮರಗಳಿಂದ ತುಂಬಿ ಪ್ರವೇಶಿಸಲು ಅಸಾಧ್ಯವಾದ ಬೆಟ್ಟದ ಬುಡದಲ್ಲಿರುವ ಗುಹೆಯೊಂದರೊಳಗೆ ಈ ವೈದೇಹಿಯನ್ನು ಕರೆದುಕೊಂಡುಹೋಗು" ಎಂದನು. ರಾಮನ ಮಾತಿನಂತೆ ಲಕ್ಷ್ಮಣನು ಸೀತೆಯನ್ನು ಕರೆದುಕೊಂಡುಹೋದನು. ಇತ್ತ ರಾಮನು ಅಗ್ನಿಗೆ ಸಮಾನವಾಗಿ ಕವಚವನ್ನು ತೊಟ್ಟು ಬಿಲ್ಲುಬಾಣಗಳನ್ನು ಹಿಡಿದು, ಹೊಗೆಯಿಲ್ಲದ ಬೆಂಕಿಯಂತೆ ಯುದ್ಧಕ್ಕೆ ಸಿದ್ಧನಾದನು. ಶ್ರೀರಾಮನ ಬಿಲ್ಲಿನ ಧ್ವನಿಗೆ ಹತ್ತು ದಿಕ್ಕುಗಳೂ ಮೊಳಗಿದುವು. ಯುದ್ಧಕ್ಕೆ ಸಿದ್ಧನಾಗಿ ನಿಂತ ರಾಮನು ಪ್ರಳಯಕಾಲದ ರುದ್ರನಂತೆ ರಂಜಿಸಿದನು.

ಸಿಂಹನಾದ ಮಾಡುತ್ತ ನಾನಾ ವಿಧವಾದ ಆಯುಧಗಳನ್ನು ಧರಿಸಿದ ರಾಕ್ಷಸರ ಸೇನೆ ಶ್ರೀರಾಮನನ್ನು ಸಮೀಪಿಸಿತು. ರಾಕ್ಷಸರ ಪಡೆಯನ್ನು ನೋಡಿ ಪ್ರಳಯಕಾಲದ ರುದ್ರನಂತೆ ಕೋಪಗೊಂಡು ಧನುಸ್ಸನ್ನೆತ್ತಿದ ರಾಮನನ್ನು ದರ್ಶಿಸಿದೊಡನೆಯೆ ವನದೇವತೆಗಳು ಓಡಿಹೋದುವು. ಖರನ ಅಪ್ಪಣೆಯಂತೆ ಅವನ ಸಾರಥಿ ರಥವನ್ನು ಶ್ರೀರಾಮನ ಮುಂದೆ ಹರಿಸಿದನು. ಆ ಸಮಯದಲ್ಲಿ ಖರನ ಮಂತ್ರಿಗಳೂ ರಾಮನನ್ನು ಸುತ್ತುವರಿದರು. ತಾರಾಗಣದ ನಡುವೆ ಇರುವ ಅಂಗಾರಕನಂತೆ, ರಥದ ಮೇಲಿದ್ದ ಖರನು ಶ್ರೀರಾಮನನ್ನು ಸಾವಿರಾರು ಬಾಣಗಳಿಂದ ಹೊಡೆದನು. ಅವನ ಸೈನಿಕರು

ರಾಮನ ಮೇಲೆ ಆಯುಧಗಳ ಮಳೆಯನ್ನೇ ಕರೆದರು. ಸಾಗರವು ನದಿಗಳನ್ನು ತಡೆಯು ವಂತೆ ರಾಮನು ತನ್ನ ಬಾಣಗಳಿಂದ ಹಗೆಗಳ ಬಾಣಗಳನ್ನು ಮಧ್ಯದಲ್ಲೆ ತಡೆದನು. ಅಷ್ಟೇ ಅಲ್ಲದೆ ಬಿರುಗಾಳಿಗೆ ಸಿಲುಕಿದ ಬಾಳೆಯ ಮರಗಳಂತೆ ಶತ್ರುವನ್ನು ತನ್ನ ಬಾಣಗಳಿಂದ ಉರುಳಿಸತೊಡಗಿದನು. ತನ್ನ ದಂಡು ನಷ್ಟವಾಗುತ್ತಿರುವುದನ್ನು ಕಂಡು ಕೆಂಡದಂತಾದ ದೂಷಣನು ಶ್ರೀರಾಮನ ಇದಿರು ನುಗ್ಗಿದನು. ಆಗ ಶ್ರೀರಾಮನು ಅರ್ಧಚಂದ್ರಾಕಾರದ ಬಾಣವೊಂದರಿಂದ ಅವನ ರಥದ ಕುದುರೆಗಳನ್ನು ಕೊಂದು, ಸಾರಥಿಯ ತಲೆಯನ್ನು ಕತ್ತರಿಸಿ ದೂಷಣನ ಎದೆಗೆ ಗುರಿಯಿಟ್ಟು ಹೊಡೆದನು. ಕ್ರೋಧದಿಂದ ಉದ್ದೀಪ್ತನಾದ ದೂಷಣನೂ ಪರಿಘವನ್ನೆತ್ತಿಕೊಂಡು ರಾಮನ ಮೇಲೆ ಬೀಳಬರಲು ಹರಿತವಾದ ಬಾಣ ವೊಂದರಿಂದ ರಾಮನು ಅವನ ತಲೆಯನ್ನು ಕತ್ತರಿಸಿದನು. ಕಡಿವಡೆದ ಮದಗಜದಂತೆ ದೂಷಣನು ಭೂಮಿಯಲ್ಲಿ ಮಲಗಿದನು.

ತಾನು ಮತ್ತು ತ್ರಿಶಿರಸ್ಸು ಇಬ್ಬರು ಹೊರತು ಇನ್ನುಳಿದ ತನ್ನ ಬಲವೆಲ್ಲ ನಾಶ ವಾದುದನ್ನು ನೋಡಿ, ವಜ್ರಾಯುಧವನ್ನು ಹಿಡಿದ ದೇವೇಂದ್ರನಂತೆ ಖರನೆ ಶ್ರೀರಾಮ ನನ್ನು ಎದುರಿಸಿದನು. ಇದನ್ನು ಕಂಡು ತ್ರಿಶಿರಸ್ಸು ಖರನನ್ನು ತಡೆದು "ರಾಜನ್, ನಾನೇ ಹೋಗಿ ರಾಮನನ್ನು ವಧಿಸುತ್ತೇನೆ. ತಾವು ಜನಸ್ಥಾನಕ್ಕೆ ಹಿಂದಿರುಗಬೇಕು. ಒಂದು ವೇಳೆ ನಾನು ರಣದಲ್ಲಿ ಮೃತಪಟ್ಟರೆ ಆಗ ತಾವು ರಾಮನೊಡನೆ ಯುದ್ಧಕ್ಕೆ ಬರಬಹುದು" ಎಂದು ಪ್ರಾರ್ಥಿಸಿಕೊಂಡನು. ಖರನು ತ್ರಿಶಿರಸ್ಸಿನ ಪ್ರಾರ್ಥನೆಯನ್ನು ಮನ್ನಿಸಲು ಆ ರಾಕ್ಷಸನು ಶ್ರೀರಾಮನ ಬಳಿಗೈದಿ ಅವನ ಮೇಲೆ ಬಾಣದ ಮಳೆಯನ್ನೇ ಕರೆದನು. ತ್ರಿಶಿರಸ್ಸಿನ ಸಿಂಹನಾದವಾದರೊ ಗುಡುಗನ್ನು ನೆನಪಿಗೆ ತರುವಂತಿತ್ತು. ತನ್ನನ್ನು ಸಮೀಪಿಸಿ ಬರುತ್ತಿದ್ದ ತ್ರಿಶಿರಸ್ಸನ್ನು ನೋಡಿ, ರಾಮನು ಅವನನ್ನು ಹರಿತವಾದ ಬಾಣಗಳಿಂದಲೆ ಸ್ವಾಗತಿಸಿದನು. ಅವರಿಬ್ಬರಿಗೂ ಪ್ರಬಲವಾದ ಯುದ್ಧ ವಾಯಿತು. ಆಗ ತ್ರಿಶಿರಸ್ಸು ಮೂರು ಬಾಣಗಳಿಂದ ರಾಮನ ಹಣೆಗೆ ಗುರಿಯಿಟ್ಟು ಹೊಡೆದನು. ಇದರಿಂದ ಕೋಪಗೊಂಡ ರಾಮನು ಅವನನ್ನು ಕುರಿತು "ನನ್ನ ಹಣೆಗೆ ನಿನ್ನ ಬಾಣಗಳು ಹೂವಿನಂತೆ ಬಂದು ತಾಕಿದುವು. ನಿನ್ನ ಪರಾಕ್ರಮ ದೊಡ್ಡದು. ಈಗ ನೀನು ನನ್ನ ಬಾಣಗಳನ್ನು ಸೈರಿಸಿಕೋ" ಎಂದು ಅವನನ್ನು ಹೊಗಳುತ್ತ, ಹದಿನಾಲ್ಕು ಬಾಣಗಳಿಂದ ರಾಕ್ಷಸನ ಎದೆಯನ್ನೂ, ನಾಲ್ಕರಿಂದ ಅವನ ತೇರಿನ ಕುದುರೆಗಳನ್ನೂ, ಎಂಟರಿಂದ ಸಾರಥಿಯನ್ನೂ, ಮೂರು ಬಾಣಗಳಿಂದ ತ್ರಿಶಿರಸ್ಸಿನ ತಲೆಯನ್ನೂ ಕತ್ತರಿಸಿದನು. ನೆತ್ತರನ್ನು ಕಾರುತ್ತ ಆ ರಾಕ್ಷಸನು ಭೂಮಿಗೆ ಬೀಳಲು ಖರನ ಸೇವಕರು ಹುಲಿಗೆ ಹೆದರಿದ ಹುಲ್ಲೆಗಳಂತೆ ಓಡಿಹೋದರು.

ಆ ದೃಶ್ಯವನ್ನು ಕಂಡು ಉರಿದೆದ್ದ ಖರನು ಚಂದ್ರನನ್ನು ಅಟ್ಟಿಬರುವ ರಾಹುವಿ ನಂತೆ ಶ್ರೀರಾಮನನ್ನು ಅಟ್ಟಿಬಂದನು. ರಣದಲ್ಲಿ ರಾಮಬಾಣಗಳಿಂದ ಮಡಿದು ಬಿದ್ದಿದ್ದ ದೂಷಣ ತ್ರಿಶಿರಸ್ಸುಗಳನ್ನು ನೋಡಿ ಖರನಿಗೆ ಹೆದರಿಕೆಯಾಯಿತು. ಆದರೂ ಅವನು ರಾಮನ ಮೇಲೆ ಕೃಷ್ಣ ಸರ್ಪದಂತೆ ಕ್ರೂರವಾದ, ನೆತ್ತರನ್ನು ಕುಡಿಯಲು ಹಾತೊರೆಯುವ

ಬಾಣಗಳನ್ನು ಪ್ರಯೋಗಿಸಿದನು. ಅವರಿಬ್ಬರೂ ಬಿಡುತ್ತಿದ್ದ ಬಾಣಗಳಿಂದ ಆಕಾಶ ಮುಚ್ಚಿಹೋಯಿತು ; ಬಿಲ್ಲಿನ ಧ್ವನಿಯಿಂದ ಹತ್ತು ದಿಕ್ಕುಗಳೂ ತುಂಬಿಹೋದುವು ; ಸೂರ್ಯನು ಕಾಣಿಸದಾದನು. ಆ ಸಮಯದಲ್ಲಿ ಖರನು ಹರಿತವಾದ ಬಾಣಗಳಿಂದ ಶ್ರೀರಾಮನ ಧನಸ್ಸನ್ನು ಕತ್ತರಿಸಿ, ಕವಚವನ್ನು ಸೀಳಿದನು. ಆಗ ರಾಮನು ಅಗಸ್ತ್ಯರು ತನಗೆ ಕೊಟ್ಟಿದ್ದ ವೈಷ್ಣವ ಧನುಸ್ಸಿನಿಂದ ಖರನ ರಥದ ಸ್ವರ್ಣಧ್ವಜವನ್ನು ಕತ್ತರಿಸಿದನು. ವಜ್ರಾಯುಧಕ್ಕೆ ಸಮಾನವಾದ ಮೂರು ಬಾಣಗಳಿಂದ ಖರನನ್ನು ಹೊಡೆದು, ಅವನ ರಥ ವನ್ನು ಧ್ವಂಸ ಮಾಡಿದನು. ಆದರೂ ಖರನು ಎದೆಗೆಡದೆ ಗದಾಪಾಣಿಯಾಗಿ ಯುದ್ಧಕ್ಕೆ ಮುನ್ನುಗ್ಗಿ ಬರಲು, ಅವನನ್ನು ನೋಡಿ ರಾಮನು "ಎಲೈ ನೃಶಂಸನೆ, ಪ್ರಾಣಗಳನ್ನು ಹಿಂಸಿಸುತ್ತ ನಿನ್ನಂತೆ ಪಾಪಕಾರ್ಯಗಳನ್ನು ಆಚರಿಸುತ್ತಿರುವವರು ಈ ಮೂರು ಲೋಕ ಗಳಲ್ಲಿ ಮತ್ತಾರೂ ಇಲ್ಲ. ದುಷ್ಟ ಮನುಷ್ಯನನ್ನು ಲೋಕದಲ್ಲಿ ಜನರು ಕ್ರೂರ ಸರ್ಪ ವನ್ನು ಕೊಲ್ಲುವಂತೆ ಕೊಲ್ಲುವರು. ಎಲಾ ದುಷ್ಟ, ದಂಡಕಾರಣ್ಯವಾಸಿಗಳೂ ಧರ್ಮ ಪರರೂ ಆದ ಋಷಿಗಳನ್ನು ಕೊಲ್ಲುವುದರಿಂದ ನಿನಗೆ ಬರುವ ಭಾಗ್ಯವೇನು ? ಬೇರು ಸವೆದ ಮರದಂತೆ ಪಾಪಾತ್ಮನಾದ ನೀನು ಇನ್ನು ಬಹುಕಾಲ ಬದುಕಲಾರೆ. ವಿಷದಿಂದ ಕೂಡಿದ ಅನ್ನವನ್ನು ತಿನ್ನುವವರಿಗೆ ಸಾವು ಉಂಟಾಗುವಂತೆ ಬಹುಬೇಗ ನಿನ್ನ ಪ್ರಾಣ ಗಳು ಹೊರಟುಹೋಗುತ್ತವೆ. ಹುತ್ತದಿಂದ ಬರುವ ಕೃಷ್ಣಸರ್ಪದಂತೆ ನನ್ನ ಬಾಣಗಳು ನಿನ್ನನ್ನು ಕೊಲ್ಲುವುವು" ಎಂದನು. ಆ ಮಾತಿಗೆ ಖರನು "ಸಾಮಾನ್ಯ ರಾಕ್ಷಸರನ್ನು ಕೊಂದು ನಿನ್ನನ್ನೇ ನೀನು ಹೊಗಳಿಕೊಳ್ಳುವೆ. ತಮ್ಮನ್ನು ತಾವು ಹೊಗಳಿಕೊಳ್ಳು ವುದು ವೀರರಿಗೆ ಉಚಿತವಲ್ಲ. ಉರಿಯುವ ದರ್ಭೆಯ ಕಾಂತಿ ತನ್ನನ್ನೇ ತಾನು ನಾಶ ಮಾಡಿಕೊಳ್ಳುವಂತೆ, ಆತ್ಮಸ್ತುತಿ ಮಾಡಿಕೊಳ್ಳುವ ನೀನು ಬಹುಬೇಗ ನಾಶಹೊಂದುವೆ. ಪಾಶಸಹಿತನಾದ ಯಮನಂತಿರುವ ನಾನು ಈ ಸಂಜೆಯೊಳಗೆ ನಿನ್ನನ್ನು ಕೊಂದು ಸತ್ತ ಹದಿನಾಲ್ಕು ಸಾವಿರ ರಾಕ್ಷಸ ಬಾಂಧವರ ಕಣ್ಣೀರನ್ನೊರೆಸುತ್ತೇನೆ" ಎಂದು ಗರ್ಜಿಸಿ ಸಿಡಿಲಿನಂತಿದ್ದ ಗದೆಯನ್ನು ಶ್ರೀರಾಮನ ಮೇಲೆ ಎಸೆದಪ್ಪಳಿಸಿದನು. ಆ ಗದೆಯನ್ನು ಮಧ್ಯಮಾರ್ಗದಲ್ಲಿಯೆ ಶ್ರೀರಾಮನು ಕತ್ತರಿಸಲು, ಮಂತ್ರಬಲದಿಂದ ಕೆಳಕ್ಕುರುಳಿದ ಸರ್ಪದಂತೆ ಅದು ಕೆಳಕ್ಕುರುಳಿತು.

ಗದೆ ಮುರಿದುದನ್ನು ನೋಡಿ ಖರನು ಸಂತಪ್ತನಾಗಿ ದೊಡ್ಡದೊಂದು ಮರವನ್ನು ಎತ್ತಿಕೊಂಡು 'ರಾಮ ನೀನು ಸತ್ತೆ' ಎಂದು ರಾಮನನ್ನು ಹೊಡೆದನು. ರಾಮನು ಅದನ್ನು ಅರ್ಧದಾರಿಯಲ್ಲಿಯೆ ಕತ್ತರಿಸಿ ಖರನ ಮೈಯಿಂದ ರಕ್ತದ ಕೋಡಿಯನ್ನೆ ಹರಿಯಿಸಿದನು. ದೇಹದಲ್ಲಿ ಸುರಿಯುತ್ತಿದ್ದ ರಕ್ತದಿಂದ ಖರನು ಝರಿಗಳು ಹರಿದು ಬರುವ ಬೆಟ್ಟದಂತೆ ರಂಜಿಸಿದನು. ಆ ಸಮಯದಲ್ಲಿ ಶ್ರೀರಾಮನು ಇಂದ್ರನು ಕೊಟ್ಟಿದ್ದ ಹರಿತವಾದ ಬಾಣವೊಂದರಿಂದ ಹೊಡೆಯಲು, ರುದ್ರನಿಂದ ದಹಿಸಲ್ಪಟ್ಟ ಅಂಧಕಾಸುರ ನಂತೆ ವೈರಿ ಭೂಮಿಗೆ ಬಿದ್ದನು.

ಖರನ ಸಾವಿನಿಂದ ಋಷಿಗಳು ಸಂತೋಷಗೊಂಡು ಶ್ರೀರಾಮನನ್ನು ಗೌರವಿಸಿದರು. "ರಾಮಚಂದ್ರ, ನಿನ್ನಿಂದ ಈ ಕಾರ್ಯವನ್ನು ಮಾಡಿಸುವುದಕ್ಕಾಗಿಯೆ ತೇಜಸ್ವಿಯಾದ

ಇಂದ್ರನು ಶರಭಂಗನ ಆಶ್ರಮಕ್ಕೆ ಬಂದಿದ್ದನು. ನೀನು ಇಲ್ಲಿಗೆ ಬಂದು, ಕ್ರೂರಕರ್ಮಿಗಳಾದ ಈ ರಾಕ್ಷಸರನ್ನು ಕೊಂದುದರಿಂದ ಯಾರ ಭಯವೂ ಇಲ್ಲದೆ ನಾವಿನ್ನು ಸುಖವಾಗಿ ತಪಸ್ಸನ್ನು ಆಚರಿಸಬಹುದು" ಎಂದು ಋಷಿಗಳು ಅವನನ್ನು ಕೊಂಡಾಡಿದರು. ಆಗ ದೇವದುಂದುಭಿಗಳು ಮೊಳಗಿದುವು; ದೇವತೆಗಳು ಆಕಾಶದಿಂದ ಶ್ರೀರಾಮನ ಮೇಲೆ ಹೂವಿನ ಮಳೆಯನ್ನು ಕರೆದರು. ಚಾರಣರು ರಾಮನ ಗುಣಗಳನ್ನು ಕೊಂಡಾಡಿದರು. ಆಗ ಲಕ್ಷ್ಮಣನು ಸೀತೆಯೊಡಗೂಡಿ ಗುಹೆಯಿಂದ ಹೊರಕ್ಕೆ ಬಂದು ವಿಜಯಿಯಾದ ಅಣ್ಣನನ್ನು ಕಂಡು ಸಂತೋಷಪಟ್ಟನು. ಸೀತೆ ಹರುಷಗೊಂಡು ಗಂಡನನ್ನು ಅಪ್ಪಿದಳು.

---

೫೨

# ಚಿನ್ನದ ಜಿಂಕೆ

ಖರದೂಷಣರೊಡನೆ ಹದಿನಾಲ್ಕು ಸಾವಿರ ರಾಕ್ಷಸರು ಶ್ರೀರಾಮನಿಂದ ಹತರಾಗಿ ರಣರಂಗದಲ್ಲಿ ಮಲಗಿದರು. ಇದನ್ನು ಕಂಡು ಅಕಂಪನನೆಂಬ ಗೂಢಚಾರನು ಲಂಕೆಗೆ ಬಂದು ರಾವಣನಿಗೆ ಕೈಮುಗಿದು "ರಾಜನ್, ಜನಸ್ಥಾನದಲ್ಲಿ ಶ್ರೀರಾಮನಿಂದ ಬಹು ಮಂದಿ ರಾಕ್ಷಸರು ಹತರಾದರು. ಖರನು ಯುದ್ಧದಲ್ಲಿ ಮಡಿದನು. ಬಹುಕಷ್ಟದಿಂದ ನಾನು ನಿನ್ನಲ್ಲಿಗೆ ಬಂದೆನು" ಎಂದು ನುಡಿದನು. ಚಾರನ ಮಾತನ್ನು ಕೇಳಿ ಕೋಪ ದಿಂದ ಕೆರಳಿದ ರಾವಣನು "ನಾನಾದರೊ ಯಮನಿಗೆ ಯಮ. ಯಾವ ಮನುಷ್ಯನು ತಾನೆ ನನಗೆ ಅಪ್ರಿಯವನ್ನು ಮಾಡಿ ಉಳಿಯಲು ಸಾಧ್ಯ?" ಎಂದು ಗರ್ಜಿಸಿದನು. ರಾವಣನಿಂದ ಅಭಯ ಪಡೆದ ಅಕಂಪನನು ವೀರನಾದ ದಶರಥನ ಮಗ ಶ್ರೀರಾಮನು ಈ ಕೆಲಸವನ್ನು ಮಾಡಿದನೆಂದು ನಿವೇದಿಸಿದನು.

ಅಕಂಪನನ ಮಾತನ್ನು ಕೇಳುತ್ತಲೆ ರಾವಣನು ಆದಿಶೇಷನಂತೆ ಬುಸುಗುಟ್ಟುತ್ತ ತತ್‌ಕ್ಷಣವೆ ಜನಸ್ಥಾನಕ್ಕೆ ಹೋಗಿ ರಾಮಲಕ್ಷ್ಮಣರನ್ನು ವಧಿಸಿ ಬರಬೇಕೆಂದು ಬಯಸಿದನು. ಆಗ ಅಕಂಪನನು ರಾವಣನನ್ನು ಕುರಿತು "ರಾಕ್ಷಸೇಂದ್ರ, ಪುರುಷ ಶ್ರೇಷ್ಠನಾದ ರಾಮನನ್ನು ನಿನ್ನಿಂದ ಜಯಿಸಲು ಸಾಧ್ಯವಿಲ್ಲ. ಅಲ್ಲದೆ ಆತನಿಗೆ ಸೀತೆಯೆಂಬ ಹೆಂಡತಿಯಿದ್ದಾಳೆ. ಆಕೆ ಸುಂದರಿ; ಹಾಗೂ ಯುವತಿ. ಆಕೆಗೆ ಸಮಾನ ಳಾದ ಹೆಂಗಸು ದೇವತೆಗಳಲ್ಲಾಗಲಿ, ಗಂಧರ್ವರಲ್ಲಾಗಲಿ, ಅಪ್ಸರೆಯರಲ್ಲಾಗಲಿ ಇಲ್ಲವೇ ಇಲ್ಲ. ಅವಳನ್ನು ನೀನು ಅಪಹರಿಸಿಕೊಂಡು ಬರುವುದಾದರೆ, ಸೀತೆಯಿಲ್ಲದ ಕಾಮುಕ ರಾಮ ಜೀವ ಬಿಡುತ್ತಾನೆ" ಎಂದನು.

ಅಕಂಪನನ ಮಾತು ರಾವಣನಿಗೆ ರುಚಿಸಿತು. ಅವನ ಮಾತನ್ನು ಒಪ್ಪಿ, ಮಾರ ನೆಯ ದಿನ ಸಾರಥಿಯೊಡನೆ ಒಬ್ಬನೆ ಹೋಗಿ ಸೀತೆಯನ್ನು ಕದ್ದು ತರಬೇಕೆಂದು ತನ್ನಲ್ಲಿಯೆ ನಿಶ್ಚೈಸಿಕೊಂಡನು. ಅದರಂತೆ ರಥದಲ್ಲಿ ಕುಳಿತು ಆಕಾಶಮಾರ್ಗದಲ್ಲಿ ಬರುತ್ತಾ ರಾವಣನು ಮಾರೀಚನ ಆಶ್ರಮದ ಬಳಿಗೆ ಬಂದನು. ತನ್ನಲ್ಲಿಗೆ ಬಂದ ರಾಕ್ಷಸೇಂದ್ರನನ್ನು ಮಾರೀಚನು ಉಪಚರಿಸಿ ಅವನು ಬಂದ ಕಾರಣವೇನೆಂದು ಕೇಳಿದನು. ಅದಕ್ಕೆ ರಾವಣನು "ವತ್ಸ, ಜನಸ್ಥಾನದಲ್ಲಿದ್ದ ನನ್ನವರೆಲ್ಲ ಯುದ್ಧದಲ್ಲಿ ರಾಮನಿಂದ ಹತರಾದರು. ಇದಕ್ಕೆ ಸೇಡು ತೀರಿಸಿಕೊಳ್ಳಲು ಇರುವ ಉಪಾಯ ಒಂದೇ. ಆದಕಾರಣ ರಾಮನನ್ನು ಕೊಂದು ಅವನ ಹೆಂಡತಿಯನ್ನು ಕದ್ದು ತರಬಯಸಿದ್ದೇನೆ. ಈ ಕಾರ್ಯದಲ್ಲಿ ನೀನು ನನಗೆ ಸಚಿವನಾಗಿ ನಿಂತು ಸಹಾಯ ಮಾಡು" ಎಂದು ಬೇಡಿಕೊಂಡನು. ರಾಮಬಾಣದ ರುಚಿಯನ್ನರಿತಿದ್ದ ಮಾರೀಚನು ರಾವಣನ ಮಾತಿಗೆ "ರಾಕ್ಷಸೇಂದ್ರ, ನಿನಗೆ ಸೀತೆಯ ವಿಷಯವನ್ನು ತಿಳಿಸಿ

ದವರಾರು ? ಹಾಗೆ ತಿಳಿಸಿದವನು ಮಿತ್ರರೂಪದ ಶತ್ರುವೇ ಆಗಿರಬೇಕು. ಸೀತೆಯನ್ನು ಕದ್ದು ತರಲು ನಿನಗೆ ಸಲಹೆಯನ್ನು ಕೊಟ್ಟವರಾರು ? ರಾಕ್ಷಸಲೋಕದ ಐಶ್ವರ್ಯವನ್ನು ನಾಶಗೊಳಿಸಲು ಯಾವನೊ ಒಬ್ಬನು ನಿನ್ನ ಮನಸ್ಸಿನಲ್ಲಿ ಈ ದುರ್ಬೋಧನೆಯನ್ನು ತುಂಬಿರಬೇಕು. ಕ್ರೂರಸರ್ಪದ ಹಲ್ಲುಗಳನ್ನು ಕೀಳಲು ನಿನ್ನನ್ನು ಯಾರು ಪ್ರೇರಿಸಿದರು ? ಶ್ರೀರಾಮನು ಉತ್ತಮ ಕುಲದಲ್ಲಿ ಹುಟ್ಟಿದವನು ; ಮೇಲಾಗಿ ಮಹಾ ಪರಾಕ್ರಮಿ. ಅವನನ್ನು ಯುದ್ಧದಲ್ಲಿ ಎದುರಿಸಲು ಯಾರಿಗೂ ಸಾಧ್ಯವಿಲ್ಲ. ಪುರುಷ ಸಿಂಹನಾದ ರಾಮನನ್ನು ನೀನು ಕೆಣಕುವುದು ಉಚಿತವಲ್ಲ. ನಡೆಯಬಾರದ ಕೆಟ್ಟ ಹಾದಿಯಲ್ಲಿ ನೀನು ಅಡಿಯಿಟ್ಟಿರುವೆ. ಲಂಕೇಶ್ವರ, ನನ್ನ ವಿಷಯದಲ್ಲಿ ಪ್ರಸನ್ನನಾಗಿ, ಸೀತೆಯನ್ನು ಕದ್ದು ತರುವ ಯೋಚನೆಯನ್ನು ಬಿಟ್ಟು ಲಂಕೆಗೆ ಹಿಂದಿರುಗು. ನೀನು ನಿನ್ನ ಹೆಂಡತಿಯೊಡನೆ ಸುಖವಾಗಿ ರಮಿಸು ; ರಾಮನು ತನ್ನ ಭಾರ್ಯೆಯೊಡನೆ ಸುಖವಾಗಿ ಕಾಡಿನಲ್ಲಿ ವಿಹರಿಸಲಿ" ಎಂದು ಬುದ್ಧಿ ಹೇಳಿದನು. ಮಾರೀಚನ ನೀತಿವಾಕ್ಯಗಳಿಗೆ ಕಿವಿಗೊಟ್ಟು ರಾವಣನು ಲಂಕೆಗೆ ಹಿಂದಿರುಗಿ ಬಂದನು.

ಆದರೆ ವಿಧಿ ಮಾತ್ರ ರಾವಣನ ಬೆನ್ನು ಬಿಟ್ಟಿರಲಿಲ್ಲ. ರಾಮನು ಖರ, ತ್ರಿಶಿರಸ್ಸು, ದೂಷಣರೊಡಗೂಡಿದ ಹದಿನಾಲ್ಕು ಸಾವಿರ ರಾಕ್ಷಸರನ್ನು ಕೊಂದುದನ್ನು ಕಂಡ ಶೂರ್ಪನಖಿ ಭಯದಿಂದ ದೊಡ್ಡದಾಗಿ ಅರಚಿಕೊಂಡಳು. ಅವಳ ಮನಸ್ಸು ಉದ್ವಿಗ್ನವಾಯಿತು. ಕೂಡಲೆ ಆಕೆ ಅಣ್ಣನಾದ ರಾವಣನನ್ನು ನೆನೆದು ಲಂಕೆಗೆ ಓಡಿಬಂದಳು. ಶೂರ್ಪನಖಿ ಅಣ್ಣನ ಬಳಿಗೆ ಬಂದಾಗ ದೇವತೆಗಳಿಂದ ಸುತ್ತುವರಿದ ಇಂದ್ರನಂತೆ, ಮಂತ್ರಿಗಳ ನಡುವೆ ಪುಷ್ಪಕವಿಮಾನದಲ್ಲಿ ರಾವಣನು ರಂಜಿಸುತ್ತಿದ್ದನು. ರಾವಣನೇನು ಸಾಮಾನ್ಯನೆ ? ದೇವದಾನವ ಗಂಧರ್ವರಿಗೂ ಅವನು ಅಜೇಯನಾದವನು. ಜ್ವಲಿಸುವ ಅಗ್ನಿಯಂತೆ ತೇಜಸ್ವಿಯಾದವನು. ಅವನಿಗೆ ಹತ್ತು ತಲೆ ; ಇಪ್ಪತ್ತು ತೋಳುಗಳು. ಅಗಲವಾದ ಎದೆಯಿಂದ ಕೂಡಿ ರಾಜಲಕ್ಷಣಗಳಿಂದ ಶೋಭಿತನಾದವನು ರಾವಣ. ಅವನ ಪರಾಕ್ರಮವನ್ನು ಏನೆಂದು ಬಣ್ಣಿಸುವುದು ? ದೇವತೆಗಳನ್ನು ಯುದ್ಧದಲ್ಲಿ ಮರ್ದಿಸಿದವನು ; ಕುಬೇರನನ್ನು ಯುದ್ಧದಲ್ಲಿ ಸೋಲಿಸಿ ಅವನ ಪುಷ್ಪಕವನ್ನು ಸೆಳೆದು ತಂದವನು. ಹಿಂದೆ ಹತ್ತು ಸಾವಿರ ವರ್ಷಗಳ ಕಾಲ ತಪಸ್ಸನ್ನು ಆಚರಿಸಿ, ಬ್ರಹ್ಮನಿಗೆ ತನ್ನ ತಲೆಗಳನ್ನೇ ಅರ್ಪಿಸಿದವನು ; ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಅವನಿಗೆ ವರಗಳನ್ನು ಕೊಡಲು ಅದರಿಂದ ಕೊಬ್ಬಿದವನು ; ಋಷಿಗಳ ಯಜ್ಞಗಳಿಗೆ ಕಂಟಕನಾಗಿ, ಲೋಕವನ್ನೇ ಗೋಳಿಗೆ ಈಡುಮಾಡಿದವನು. ಈ ತೆರನಾದ ಸಾಮರ್ಥ್ಯವನ್ನು ಹೊಂದಿ ಯಮನಂತಿದ್ದ ರಾವಣನನ್ನು ನೋಡಿದೊಡನೆಯೆ ಶೂರ್ಪನಖಿಯ ದುಃಖ ಮರುಕೊಳಿಸಿತು. ಜನಸ್ಥಾನದಲ್ಲಿ ರಾಮನು ತೋರಿಸಿದ ಸಾಹಸವನ್ನು ನೆನೆದು ಆಕೆ ಹಾಗೆಯೆ ಎಚ್ಚರ ತಪ್ಪಿ ಬಿದ್ದುಬಿಟ್ಟಳು.

ರಾವಣನು ತಂಗಿಯನ್ನು ಸಮಾಧಾನಗೊಳಿಸಿದನು. ಮೆಲ್ಲಗೆ ಮೂರ್ಛೆ ತಿಳಿದ ಮೇಲೆ ಶೂರ್ಪನಖಿ ಮಂತ್ರಿಗಳ ನಡುವಿದ್ದ ರಾವಣನನ್ನು ಕುರಿತು ಈ ರೀತಿ ಚುಚ್ಚು

ಮಾತುಗಳನ್ನಾಡಿದಳು. ರಾಕ್ಷಸೇಂದ್ರ, ಕಾಮಭೋಗಗಳಿಂದ ಪ್ರಮತ್ತನಾಗಿ ಯಾರ ತಡೆಯೂ ಇಲ್ಲದ ನೀನು ಈಗ ನಮಗೆ ಒದಗಿಬಂದಿರುವ ಭಯವನ್ನು ಅರಿಯದಾಗಿರುವೆ. ಶ್ಮಶಾನದ ಅಗ್ನಿಯನ್ನೆಂತೊ ಅಂತು ಅಲ್ಪವಾದ ಭೋಗಗಳಲ್ಲಿ ಮುಳುಗಿಹೋಗಿರುವ ರಾಜನನ್ನು ಪ್ರಜೆಗಳು ಮನ್ನಿಸರು. ಸ್ತ್ರೀಯರಿಗೆ ವಶನಾಗದೆ ಕಾಲಕಾಲಕ್ಕೆ ಮಾಡಬೇಕಾದ ಕೆಲಸವನ್ನು ರಾಜನು ನಡೆಸಬೇಕು. ಹಾಗೆ ಮಾಡದ ರಾಜನಿಂದ ನದಿಯ ಕೆಸರನ್ನು ಕಂಡು ಓಡಿಹೋಗುವ ಆನೆಗಳಂತೆ ಪ್ರಜೆಗಳು ದೂರವಾಗುತ್ತಾರೆ. ದೇವಗಂಧರ್ವರ ಹಗೆತನವನ್ನು ನೀನು ಬೆಳೆಸಿಕೊಂಡಿರುವೆ. ಆದರೆ ವಿಷಯವನ್ನು ಸಂಗ್ರಹಿಸಲು ಗೂಢಚಾರರನ್ನು ನಿಯಮಿಸಿಕೊಂಡಿರುವುದಿಲ್ಲ. ಮೇಲಾಗಿ ನೀನು ಬಾಲಭಾವವುಳ್ಳವನು. ನೀನು ಹೇಗೆ ತಾನೆ ರಾಜನೆಂಬ ಹೆಸರಿಗೆ ಅರ್ಹನಾಗುವೆ? ಜನಸ್ಥಾನದಲ್ಲಿ ನಿನ್ನವರಾದ ಖರದೂಷಣರು ಹದಿನಾಲ್ಕು ಸಾವಿರ ರಾಕ್ಷಸರೊಡನೆ ಏಕಾಂಗವೀರನಾದ ರಾಮನೊಬ್ಬನಿಂದಲೆ ಹತರಾದರು. ರಾಮನ ಈ ಕಾರ್ಯದಿಂದ ಇನ್ನು ಮುಂದೆ ಋಷಿಗಳು ಯಾವ ಅಡ್ಡಿಯೂ ಇಲ್ಲದೆ ಯಾರ ಭಯವೂ ಇಲ್ಲದೆ ತಪಸ್ಸನ್ನಾಚರಿಸಬಹುದು. ನೀನಾದರೊ ಇಲ್ಲಿ ಮೂರ್ಖ ಮಂತ್ರಿಗಳಿಂದ ಸುತ್ತುವರಿದವನಾಗಿ ಸ್ತ್ರೀಯರಿಗೆ ವಶನಾಗಿರುವೆ. ಉಟ್ಟು ಕಳೆದ ವಸ್ತ್ರದಂತೆ, ಮುಡಿದ ಹೂವಿನಂತೆ ನಿನ್ನಿಂದ ಯಾರಿಗೆ ತಾನೆ ಉಪಯೋಗ? ನಿನ್ನವರು ನಾಶ ಹೊಂದಿರುವುದನ್ನು ತಿಳಿಯದೆ, ಭೋಗದಿಂದ ಕೊಬ್ಬಿ ಹೋಗಿರುವ ನೀನು ಬಹುಬೇಗ ನಾಶ ಹೊಂದುವುದರಲ್ಲಿ ಸಂದೇಹವೇನು?"

ಶೂರ್ಪನಖಿಯ ಮಾತುಗಳು ರಾವಣನನ್ನು ಚಿಂತೆಗೆ ಒಳಗುಮಾಡಿದುವು. ರಾವಣನು ಕ್ಷಣಕಾಲ ಯೋಚಿಸಿ, ರಾಮನ ಸಾಮರ್ಥ್ಯವನ್ನು ತನಗೆ ತಿಳಿಸಬೇಕೆಂದು ತಂಗಿಯನ್ನು ಕೇಳಿಕೊಂಡನು. ಕ್ರೋಧದಿಂದ ಹುಚ್ಚೆದ್ದ ಶೂರ್ಪನಖಿ ರಾವಣನನ್ನು ಕುರಿತು ಈ ಮಾತುಗಳನ್ನು ಮತ್ತೆ ಹೇಳಿದಳು. "ದಶರಥನ ಮಗನಾದ ಶ್ರೀರಾಮನು ದೀರ್ಘಬಾಹು ಮತ್ತು ವಿಶಾಲಾಕ್ಷ. ರೂಪದಲ್ಲಂತೂ ಆತನು ಸಾಕ್ಷಾತ್ ಮನ್ಮಥನಂತಿದ್ದಾನೆ. ಶರಸಂಧಾನದಲ್ಲಿ ಅವನಂತಿರುವ ಬೇರೊಬ್ಬರನ್ನು ನಾನು ಕಾಣೆ. ಬಿಲ್ಲೆಳೆದು, ಬಾಣ ಹೂಡಿ, ಬಿಡುವುದನ್ನು ನಾನು ನೋಡಲೆ ಇಲ್ಲ. ಅವನ ಕೈಚಳಕ ಅಂಥದು. ಕಣ್ಣು ಮುಚ್ಚಿ ತೆರೆಯುವುದರಲ್ಲಿ ಹದಿನಾಲ್ಕು ಸಾವಿರ ರಾಕ್ಷಸರು ಖರದೂಷಣರೊಡನೆ ಹತರಾದರು. ಹೆಣ್ಣೆಂದು ತಿಳಿದು ರಾಮನು ನನ್ನನ್ನು ಕೊಲ್ಲಲಿಲ್ಲ. ರಾಮನಿಗೆ ಸಮಾನವಾದ ಗುಣವುಳ್ಳ, ಅಣ್ಣನಲ್ಲಿ ಅನುರಕ್ತನಾದ ಲಕ್ಷ್ಮಣನೆಂಬೊಬ್ಬ ತಮ್ಮನು ರಾಮನಿಗಿದ್ದಾನೆ. ಅವನು ರಾಮನ ಹೊರಗಿನ ಪ್ರಾಣವೆಂದು ತಿಳಿ. ರಾಮನಿಗೆ ಸೀತೆಯೆಂಬ ಹೆಂಡತಿಯಿದ್ದಾಳೆ. ಹುಣ್ಣಿಮೆಯ ಚಂದ್ರನಂತೆ ಮುಖ, ಬೊಗಸೆಗಣ್ಣು, ಉದ್ದವಾದ ಕೇಶವುಳ್ಳ ಆ ಸೀತೆ ಪುಟವಿಟ್ಟ ಬಂಗಾರದಂತೆ ಹೊಳೆಯುತ್ತಿದ್ದಾಳೆ. ಸೀತೆಯಂಥ ರೂಪವುಳ್ಳ ಸ್ತ್ರೀಯರು ದೇವತೆಗಳಲ್ಲಿ, ಗಂಧರ್ವರಲ್ಲಿ, ಮನುಷ್ಯರಲ್ಲಿ ಇಲ್ಲವೆಂದೇ ನನ್ನ ಭಾವನೆ. ಆಕೆಯನ್ನು ಹೆಂಡತಿಯನ್ನಾಗಿ ಪಡೆದ ಪುರುಷನೇ ಪರಮ ಸುಖಿ. ರೂಪದಿಂದ ಗುಣದಿಂದ ಜಾನಕಿ ಪರಮಶ್ಲಾಘ್ಯಳು. ನಿನಗೆ ಆಕೆ ಅನುರೂಪಳಾದ ಹೆಂಡತಿ; ಅವಳಿಗೆ

ಅನುರೂಪನಾದ ಗಂಡ ನೀನು. ನಿನ್ನ ಹೆಂಡತಿಯನ್ನಾಗಿ ಕರೆತರುವ ಈ ಕಾರ್ಯದಲ್ಲಿ ಲಕ್ಷ್ಮಣನಿಂದ ನನಗೆ ಈ ವಿರೂಪವುಂಟಾಯಿತು. ಚಂದ್ರಮುಖಿಯಾದ ಸೀತೆಯನ್ನು ನೀನು ಒಮ್ಮೆ ನೋಡಿದರೆ ಸಾಕು ; ಮನ್ಮಥನೂ ಸಹ ಬಾಣಗಳಿಗೆ ಗುರಿಯಾಗುವುದರಲ್ಲಿ ಸಂದೇಹವೇ ಇಲ್ಲ. ಖರದೂಷಣರ ಸಾವಿನ ಸೇಡನ್ನು ತೀರಿಸಿಕೊಳ್ಳಬೇಕೆನ್ನುವ ಬಯಕೆ ನಿನಗಿದ್ದರೆ, ಸೀತೆ ಹೆಂಡತಿಯಾಗಬೇಕೆಂಬ ಆಸೆ ನಿನಗಿದ್ದರೆ, ರಾಮಲಕ್ಷ್ಮಣರನ್ನು ಕೊಲ್ಲಲು ಈ ಕ್ಷಣವೆ ಜನಸ್ಥಾನಕ್ಕೆ ಹೊರಡು. ಈ ವಿಷಯದಲ್ಲಿ ಯೋಚಿಸಿ ಕೆಲಸಮಾಡು."

ವೈನವಿರೇಳಿಸುವ ಶೂರ್ಪನಖಿಯ ಮಾತು ರಾವಣನ ಮನಸ್ಸಿನಲ್ಲಿ ಬಾಣದಂತೆ ಬಲವಾಗಿ ನಾಟಿತು. ತಂಗಿಯನ್ನೂ ಮಂತ್ರಿಗಳನ್ನೂ ಕಳುಹಿಸಿಕೊಟ್ಟು ಲಂಕೇಶ್ವರನು ಅಂತಃಪುರಕ್ಕೆ ತೆರಳಿದನು. ಅಲ್ಲಿ ರಾವಣನು ಮುಂದೆ ಮಾಡತಕ್ಕ ಕಾರ್ಯದ ಬಲಾಬಲಗಳನ್ನು ತೂಗಿ ನೋಡಿ, ಮಾಡತಕ್ಕ ಕಾರ್ಯವನ್ನು ನಿಶ್ಚೈಸಿದನು. ಅವನ ಅಪ್ಪಣೆಯಂತೆ ಹೊಂದೇರು ಸಿದ್ಧವಾಗಿ ಬರಲು, ವೇಗವಾಗಿ ಹೋಗುವ ಆ ರಥವನ್ನು ಹತ್ತಿ ರಾಕ್ಷಸೇಂದ್ರನು ಜನಸ್ಥಾನದ ಕಡೆಗೆ ಹೊರಟನು. ಬೆಳ್ಗೊಡೆಯ ನೆರಳಿನಲ್ಲಿದ್ದ ರಾವಣನು ರತ್ನಾಭರಣಗಳಿಂದ ಅಲಂಕೃತನಾಗಿ, ಮಿಂಚುಗಳಿಂದ ಕೂಡಿದ ಮೇಘದಂತೆ ನೋಡಲು ಮನೋಹರವಾಗಿ ಕಾಣುತ್ತಿದ್ದನು. ಜನಸ್ಥಾನದ ಕಡೆಗೆ ಹೊರಟ ರಾವಣನು ಸಮುದ್ರದ ಮೇಲೆ ಹಾಯ್ದು ಬರುತ್ತ, ಮಾರೀಚನ ಆಶ್ರಮದ ಬಳಿಗೆ ಬಂದನು. ಆಶ್ರಮದಲ್ಲಿ ಆಲದಮರದ ಕೆಳಗಡೆ ಕುಳಿತಿದ್ದ ಮಾರೀಚನು, ಮತ್ತೆ ತನ್ನ ಬಳಿಗೆ ಬಂದ ರಾವಣನನ್ನು ಆದರದಿಂದ ಬರಮಾಡಿಕೊಂಡನು.

ಆ ಬಳಿಕ ರಾವಣನು ಮಾರೀಚನನ್ನು ಕುರಿತು "ಮಾರೀಚ, ನನ್ನ ಮಾತನ್ನು ಕೇಳು. ಈಗ ನಾನು ಮಹಾವ್ಯಸನದಿಂದ ಕೂಡಿದ್ದೇನೆ. ನನಗೆ ನೀನೇ ಗತಿ. ಜನಸ್ಥಾನದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರೊಡನೆ ಸುಖವಾಗಿ ಬಾಳುತ್ತಿದ್ದ ಖರದೂಷಣರು ಯುದ್ಧದಲ್ಲಿ ರಾಮನಿಂದ ಹತರಾದರಷ್ಟೆ. ಕಾಮುಕನಾದ ಆ ರಾಮನು ಯಾವ ವೈರಕಾರಣವೂ ಇಲ್ಲದೆ ನನ್ನ ತಂಗಿಯಾದ ಶೂರ್ಪನಖಿಯ ಕಿವಿಮೂಗುಗಳನ್ನು ಕತ್ತರಿಸಿ ವಿರೂಪಳನ್ನಾಗಿ ಮಾಡಿದ್ದಾನೆ. ಆ ರಾಮನ ಹೆಂಡತಿಯಾದ ಸೀತೆಯನ್ನು ಜನಸ್ಥಾನದಿಂದ ಕದ್ದು ತರಲು ನೀನು ಸಹಾಯ ಮಾಡು. ಬಿಳಿಯಮಚ್ಚೆಗಳಿಂದ ಕೂಡಿದ ಬಂಗಾರದ ಜಿಂಕೆಯ ಆಕಾರವನ್ನು ಧರಿಸಿ ರಾಮನ ಆಶ್ರಮದಲ್ಲಿ ಸೀತೆಯ ಎದುರಿನಲ್ಲಿ ಸುಳಿದಾಡುತ್ತಿರು. ತನಗೆ ಆ ಮೃಗವು ಬೇಕೆಂದು ಸೀತೆ ಸ್ವಲ್ಪವೂ ಅನುಮಾನವಿಲ್ಲದೆ ರಾಮಲಕ್ಷ್ಮಣರನ್ನು ಕೇಳಿಕೊಳ್ಳುವಳು. ರಾಮಲಕ್ಷ್ಮಣರು ಸೀತೆಯಿಂದ ದೂರವಾಗುತ್ತಲೆ, ರಾಹು ಚಂದ್ರನ ಕಾಂತಿಯನ್ನು ಅಪಹರಿಸುವಂತೆ, ಸೀತೆಯನ್ನು ಕದ್ದೊಯ್ಯುವೆನು. ಸೀತಾಪಹರಣದಿಂದ ಕಂದಿ ಕುಂದಿಹೋದ ರಾಮನು ಯುದ್ಧಕ್ಕೆ ಬಂದರೆ ಸುಲಭವಾಗಿ ಹೊಡೆದುಹಾಕುತ್ತೇನೆ" ಎಂದನು.

ರಾವಣನ ಮಾತುಗಳನ್ನು ಕೇಳಿ ಮಾರೀಚನ ಮುಖ ಭಯದಿಂದ ಬಾಡಿಹೋಯಿತು. ಒಣಗಿದ ತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳತೊಡಗಿದನು. ಸತ್ತವ

ನಂತೆ ರೆಪ್ಪೆ ಹೊಡೆಯದೆ ದೀನನಾದ ಮಾರೀಚನು ರಾವಣನಿಗೆ ಕೈಮುಗಿದು "ರಾಜನ್, ತಾತ್ಕಾಲಿಕವಾಗಿ ಹಿತವನ್ನುಂಟುಮಾಡುವ ಮಾತುಗಳನ್ನಾಡುವ ಜನರು ದೊರಕು ವುದು ಸುಲಭ. ಪರಿಣಾಮದಲ್ಲಿ ಹಿತವನ್ನುಂಟುಮಾಡುವ ಮಾತುಗಳನ್ನು ಹೇಳುವ ಜನರು ದೊರಕುವುದು ಕಷ್ಟ. ರಾಮನು ಇಂದ್ರನಿಗೂ ವರುಣನಿಗೂ ಸಮಾನವಾದ ಪರಾಕ್ರಮವುಳ್ಳವನು. ಅವನು ಕೋಪಗೊಂಡರೆ ಲೋಕದಲ್ಲಿ ರಾಕ್ಷಸರೆ ಇಲ್ಲದಂತಾಗುವು ದರಲ್ಲಿ ಸಂದೇಹವೇನು? ಶ್ರೀರಾಮನಿಂದ ರಕ್ಷಿತಳಾದ ಸೀತೆಯನ್ನು ಕದ್ದು ತರಲು ನಿನಗೆ ಹೇಗೆತಾನೆ ಸಾಧ್ಯವಾದೀತು? ಒಂದುವೇಳೆ ಸೀತೆಯನ್ನು ಅಪಹರಿಸಿ ತಂದೆಯಾದರೆ ರಾಮನ ಬಾಣಗಳಿಂದ ನೀನು ಬಹುಬೇಗ ನಾಶಹೊಂದುವೆ. ಪರಪತ್ನಿಯನ್ನು ಕದ್ದು ತರುವುದು ಲಂಕೇಶ್ವರನಾದ ನಿನಗೆ ನಿಶ್ಚಯವಾಗಿಯೂ ತಕ್ಕುದಲ್ಲ. ಈ ವಿಷಯವನ್ನು ನೀನು ಮಂತ್ರಿಗಳೊಡನೆ ಆಲೋಚಿಸಿ, ಹಾಗೂ ಶ್ರೀರಾಮನ ಬಲವನ್ನು ನೆನೆದು ಅನಂತರ ಉಚಿತವಾದ ಕೆಲಸವನ್ನು ಮಾಡು. ಹಿಂದೆ ನಾನು ಸಾವಿರ ಆನೆಗಳ ಬಲವನ್ನು ಹೊಂದಿ ದಂಡಕಾರಣ್ಯದಲ್ಲಿ ಋಷಿಗಳ ಮಾಂಸವನ್ನು ತಿನ್ನುತ್ತ ಸಂಚರಿಸುತ್ತಿದ್ದೆ. ಆಗ ಧರ್ಮಾತ್ಮನಾದ ವಿಶ್ವಾಮಿತ್ರಋಷಿ ನನ್ನ ಭಯವನ್ನು ನಿವಾರಿಸುವುದರ ಸಲುವಾಗಿ, ದಶರಥನನ್ನು ಬೇಡಿ ರಾಮನನ್ನು ಕರೆತಂದನು. ಆಗ ಶ್ರೀರಾಮಚಂದ್ರನಿಗೆ ಇನ್ನೂ ಹನ್ನೆರಡು ವರ್ಷ. ಶಸ್ತ್ರಾಸ್ತ್ರಗಳ ಪ್ರಯೋಗವನ್ನೆ ಅರಿಯದ ಮಗನನ್ನು ಕಳುಹಲು ದಶರಥನು ಹಿಂದು ಮುಂದು ನೋಡಲು, ವಿಶ್ವಾಮಿತ್ರನು ರಾಜನಿಗೆ ರಾಮನ ಮಹಿಮೆ ಯನ್ನು ತಿಳುಹಿ ಅವನನ್ನು ಕರೆತಂದನು. ಋಷಿಯ ಯಾಗವನ್ನು ಕೆಡಿಸಲು ಬಂದ ನನ್ನನ್ನು ನೋಡಿ ರಾಮನು ಹೆದರಲಿಲ್ಲ. ಆದರೆ ಒಂದೇ ಒಂದು ಬಾಣದಿಂದ ನೂರು ಯೋಜನ ವಿಸ್ತಾರವಾದ ಸಮುದ್ರದಲ್ಲಿ ನನ್ನನ್ನು ಎಸೆದನು. ನನ್ನನ್ನು ಹಿಂಬಾಲಿಸಿ ಬಂದಿದ್ದವರು ರಾಮನಿಂದ ಧ್ವಂಸರಾಗಿ ಹೋದರು. ನಾನಾದರೊ ಪ್ರಜ್ಞೆ ಬಂದಮೇಲೆ ಲಂಕಾಪಟ್ಟಣವನ್ನು ಸೇರಿಕೊಂಡೆ. ಆದ್ದರಿಂದ ರಾಮನನ್ನು ಕೆಣಕಿದರೆ ಖಂಡಿತವಾಗಿ ನಾಶಹೊಂದುವೆ. ಉಪ್ಪರಿಗೆಯ ಮನೆಗಳಿಂದ ಶೋಭಿಸುವ ರತ್ನಾಭರಣಗಳಿಂದ ತುಂಬಿದ ಕನಕಲಂಕೆಯನ್ನು ಸೀತೆಯ ನಿಮಿತ್ತವಾಗಿ ಹಾಳುಮಾಡಬೇಡ. ರಾಮನ ಪರಾಕ್ರಮ ವನ್ನು ನೆನೆದರೆ ದಂಡಕಾರಣ್ಯದ ತುಂಬ ರಾಮರೇ ಕಾಣುತ್ತಾರೆ. ಈ ಕಾರ್ಯದಲ್ಲಿ ನಾನು ನಿನ್ನನ್ನು ಹಿಂಬಾಲಿಸಲಾರೆ!" ಎಂದು ಬುದ್ಧಿ ಹೇಳಿದನು.

ಸಾಯಬಯಸುವವನಿಗೆ ಔಷಧಿ ಸೇರದಂತೆ, ಮಾರೀಚನ ಬುದ್ಧಿಯ ಮಾತುಗಳು ರಾವಣನಿಗೆ ರುಚಿಸಲಿಲ್ಲ. ವಿಧಿಯಿಂದ ಪ್ರೇರಿತನಾದ ರಾವಣನು ಮಾರೀಚನನ್ನು ಕುರಿತು "ಮಾರೀಚ, ಬಂಜರು ಭೂಮಿಯಲ್ಲಿ ನೆಟ್ಟ ಬೀಜದಂತೆ ನಿನ್ನ ಬುದ್ಧಿಯಮಾತು ನಿಷ್ಫಲ. ಕೇವಲ ಮನುಷ್ಯನಾದ ರಾಮನನ್ನು ಹೊಗಳಿ ನನ್ನನ್ನು ಹೆದರಿಸಬಯಸುವೆಯಾ? ಅದು ಎಂದಿಗೂ ಸಾಧ್ಯವಾಗದ ಮಾತು. ಖರನನ್ನು ಕೊಂದ ರಾಮನ ಪ್ರಿಯತಮೆಯನ್ನು ಅವಶ್ಯಕವಾಗಿ ಕದ್ದು ತರಬೇಕಾದದ್ದೆ. ಈ ಕಾರ್ಯ ನಿನಗೆ ಇಷ್ಟವೊ ಅನಿಷ್ಟವೊ ಅದನ್ನು ನಾನರಿಯೆ. ನಾನು ಮಾಡಬೇಕೆಂದು ನಿಶ್ಚಯಿಸಿರುವ ಕಾರ್ಯದಿಂದ ನನ್ನನ್ನು

ಹಿಂದಿರುಗಿಸಲು ದೇವದಾನವರಿಂದಲೂ ಸಾಧ್ಯವಿಲ್ಲ. ನಾನು ಮಾಡಬೇಕೆಂದಿರುವ ಕಾರ್ಯದ ಗುಣದೋಷಗಳನ್ನು ಕುರಿತು ನಿನ್ನನ್ನು ನಾನು ಕೇಳಲಿಲ್ಲ. ಈಗ ನೀನು ಮಾಡಬೇಕಾಗಿರುವ ಕಾರ್ಯ ಇದು. ಚಿನ್ನದ ಜಿಂಕೆಯಾಗಿ ನೀನು ಸೀತೆಯ ಮುಂದೆ ಸುಳಿ. ಅದನ್ನು ನೋಡಿ ಮೋಹಗೊಂಡ ಸೀತೆ ಜಿಂಕೆಯನ್ನು ತರುವಂತೆ ರಾಮನನ್ನು ಕೇಳಿಕೊಳ್ಳುವಳು. ನಿನ್ನನ್ನು ಹಿಡಿಯಲು ಬೆನ್ನಟ್ಟಿ ಬಂದ ರಾಮನನ್ನು ಬಹುದೂರ ಸೆಳೆದುಕೊಂಡು ಹೋಗಿ ಆ ಬಳಿಕ ರಾಮನ ಧ್ವನಿಯನ್ನು ಅನುಕರಿಸಿ ಹಾ ಸೀತೆ, ಹಾ ಲಕ್ಷ್ಮಣ ಎಂದು ಕೂಗು. ಆ ಕೂಗನ್ನು ಕೇಳಿ ಲಕ್ಷ್ಮಣನು ಅತ್ತಿಗೆಯ ಮಾತಿನಿಂದಲೂ ಅಣ್ಣನಲ್ಲಿರುವ ಸ್ನೇಹದಿಂದಲೂ ರಾಮನನ್ನು ಅನುಸರಿಸಿ ಹೋಗುತ್ತಾನೆ. ಆ ಬಳಿಕ ನಾನು ಸೀತೆಯನ್ನು ಅಪಹರಿಸುತ್ತೇನೆ. ಕಾರ್ಯ ಮುಗಿದ ಮೇಲೆ ನಿನ್ನ ಮನಸ್ಸು ಬಂದ ಕಡೆಗೆ ತೆರಳು. ಈ ಕಾರ್ಯಕ್ಕಾಗಿ ನಿನಗೆ ಅರ್ಧ ರಾಜ್ಯವನ್ನು ಕೊಡುತ್ತೇನೆ. ಇಗೋ ನಾನು ದಂಡಕಾರಣ್ಯಕ್ಕೆ ಹೊರಟೆ. ನಿನಗೆ ಮಂಗಳವಾಗಲಿ. ಈ ಕೆಲಸ ಮಾಡಲು ನೀನು ಒಪ್ಪದಿದ್ದರೆ ನಿನ್ನನ್ನು ಇಲ್ಲಿಯೇ ಕೊಲ್ಲುತ್ತೇನೆ" ಎಂದನು.

ರಾವಣನಿಂದ ಸಾಯುವುದಕ್ಕಿಂತ ರಾಮನಿಂದ ಸಾಯುವುದೆ ಮೇಲೆಂದು ಬಗೆದು ಮಾರೀಚನು ರಾವಣನ ಮಾತಿಗೆ ಒಪ್ಪಿಗೆಯನ್ನಿತ್ತನು. ಆ ಬಳಿಕ ಅವನು ರಾವಣನೊಡನೆ ರಥವನ್ನೇರಿ, ಗಿರಿದುರ್ಗಗಳನ್ನು ಕಳೆದು ದಂಡಕಾರಣ್ಯವನ್ನು ಹೊಕ್ಕನು. ಇಬ್ಬರೂ ರಥದಿಂದ ಇಳಿದು ದೂರದಿಂದಲೇ ರಾಮನ ಆಶ್ರಮವನ್ನು ನೋಡಿದರು. ಬಂದ ಕಾರ್ಯವನ್ನು ಬೇಗ ಮಾಡೆಂದು ರಾವಣನು ಮಾರೀಚನನ್ನು ತ್ವರೆಗೊಳಿಸಿದನು. ಆಗ ಮಾರೀಚನು ದೊಡ್ಡ ಚಿನ್ನದ ಜಿಂಕೆಯ ರೂಪವನ್ನು ಧರಿಸಿದನು. ಅದರ ಮುಖ ತುಸು ಕಪ್ಪು ತುಸು ಬಿಳುಪು ಬಣ್ಣದಿಂದ ಶೋಭಿಸುತ್ತಿತ್ತು. ತುಟಿಯ ಮೇಲುಗಡೆ ಕೆಂದಾವರೆಯ ಬಣ್ಣ, ಕೆಳಭಾಗದಲ್ಲಿ ಕನ್ನೈದಿಲೆಯ ಚೆಲುವು. ಇಂದ್ರನೀಲಮಣಿ ಮತ್ತು ಮಧೂಕಪುಷ್ಪ ಇವುಗಳ ಕಾಂತಿಗೆ ಕಿವಿ ರಂಜಿಸುತ್ತಿತ್ತು. ಅದರ ಗೊರಸಿನ ಕಾಂತಿ ವೈಡೂರ್ಯ. ಇಂದ್ರಚಾಪದಂತೆ ನಿಮಿರಿದ ಬಾಲ. ಮಲ್ಲಿಗೆಯ, ವಜ್ರದ ಮತ್ತು ಚಂದ್ರನ ಶೋಭೆಯಿಂದ ಮಿರುಗುತ್ತಿತ್ತು ಅದರ ಹೊಟ್ಟೆ. ಇಂತಹ ಮನೋಹರ ರೂಪವನ್ನು ಧರಿಸಿ ಮಾರೀಚನು ಸೀತೆಯನ್ನು ಪ್ರಲೋಭನಗೊಳಿಸುವುದಕ್ಕಾಗಿ ರಾಮನ ಆಶ್ರಮದಲ್ಲಿ ತರತರದ ನರ್ತನಗತಿಗಳಿಂದ ಎಂಬಂತೆ ನಲಿನಲಿದು ಸುಳಿಯುತ್ತಾ ಎಳೆಯ ಹುಲ್ಲನ್ನು ಭಕ್ಷಿಸುತ್ತಾ ತಿರುಗಾಡತೊಡಗಿದನು. ನಾನಾ ವಿಧವಾಗಿ ಅಲ್ಲಲ್ಲಿ ಕ್ರೀಡಿಸತೊಡಗಿದನು.

---

೬

## ಓ ಲಕ್ಷ್ಮಣಾ!

ಅಶೋಕ ಮಾವು ತಾವರೆ ಮೊದಲಾದ ಗಿಡಮರಗಳ ಹೂವುಗಳನ್ನು ಕೊಯ್ಯಲು ಸಂಚರಿಸುತ್ತಿದ್ದ ಸೀತೆ ಆ ಮಾಯಾಮೃಗವನ್ನು ನೋಡಿದಳು. ಆ ಮೃಗದ ಕಾಂತಿ ಸೀತೆಯ ಮನಸ್ಸನ್ನು ಸೆಳೆಯಿತು. ಮತ್ತೆ ಮತ್ತೆ ಅದು ಸೀತೆಗೆ ಸೋಜಿಗವನ್ನುಂಟು ಮಾಡುತ್ತ ಅವಳೆದುರಿಗೆ ಸಂಚರಿಸಿತು. ಚಿನ್ನ ಬೆಳ್ಳಿಯ ಕಾಂತಿಯಿಂದ ಹೊಳೆಯು ತ್ತಿದ್ದ ಆ ಮೃಗವನ್ನು ಸೀತೆ ಅರಳಿದ ಕಣ್ಣುಗಳಿಂದ ಕಂಡು ಆಯುಧಪಾಣಿಗಳಾದ ರಾಮಲಕ್ಷ್ಮಣರನ್ನು ಕೂಗಿಕೊಂಡಳು. ಪುರುಷಶ್ರೇಷ್ಠರಾದ ಅವರಿಬ್ಬರೂ ಬಂದು ಅದನ್ನು ನೋಡಿದರು. ಆಗ ಲಕ್ಷ್ಮಣನು ರಾಮನನ್ನು ಕುರಿತು ನುಡಿದನು—"ಅಣ್ಣ, ರಾಕ್ಷಸನಾದ ಮಾರೀಚನೇ ಈ ರೂಪದಿಂದ ಬಂದಿದ್ದಾನೆ. ಈ ರೀತಿಯ ಮೃಗವನ್ನು ಲೋಕದಲ್ಲಿ ನೀನು ಎಲ್ಲಿಯಾದರೂ ಕಂಡಿರುವೆಯಾ? ಇದು ಮಾಯಾಮೃಗವೆಂದು ಮೇಲೆಯೇ ಕಾಣುವುದಿಲ್ಲವೆ?"

ಈ ವೇಳೆಗಾಗಲೆ ಆ ಮೃಗದ ಬಣ್ಣವನ್ನು ನೋಡಿ ಸೀತೆಯ ಮನಸ್ಸು ಮೋಹ ಗೊಂಡಿತ್ತು. ಲಕ್ಷ್ಮಣನು ಮುಂದೆ ಮಾತನಾಡದಂತೆ ತಡೆದು ಸೀತೆ ಮುಗುಳುನಗೆ ಯನ್ನು ಬೀರುತ್ತ ರಾಮನಿಗೆ "ಆರ್ಯಪುತ್ರ, ಈ ಮೃಗದ ಚೆಲುವನ್ನು ಕಂಡು ನನ್ನ ಮನಸ್ಸು ಮರುಳುಗೊಂಡಿದೆ. ಈ ಮೃಗವನ್ನು ನೀನು ಹಿಡಿದು ತಂದರೆ, ಅದು ನಮ್ಮ ಕ್ರೀಡೆಗೆ ಒಂದು ವಸ್ತುವಾಗಿ ಪರಿಣಮಿಸುವುದು. ಜೀವಸಹಿತ ಈ ಮೃಗವನ್ನು ನೀನು ಹಿಡಿದು ತಂದರೆ, ಇದನ್ನು ನೋಡಿದ ಜನರಿಗೆ ಆಶ್ಚರ್ಯವುಂಟಾಗುವುದು; ಹಾಗೂ ಅದು ಅಂತಃಪುರಕ್ಕೆ ಒಂದು ಅಲಂಕಾರವಾಗುವುದು. ಒಂದು ವೇಳೆ ಕೈಗೆ ಸಿಕ್ಕದ ಈ ಮೃಗ ವನ್ನು ನೀನು ಕೊಂದು ತಂದರೆ ಅದರ ಚರ್ಮದ ಮೇಲೆ ನಾವಿಬ್ಬರೂ ಕುಳಿತುಕೊಳ್ಳ ಬಹುದಲ್ಲವೆ?" ಎಂದು ತನ್ನ ಆಸೆಯನ್ನು ಹೊರಪಡಿಸಿದಳು. ಬಾಲಸೂರ್ಯನಂತೆ ಬಣ್ಣ ವನ್ನು ತಳೆದ ಆ ಮೃಗವು ರಾಮನ ಮನಸ್ಸನ್ನೂ ಅಪಹರಿಸಿತು. ಆಗ ಲಕ್ಷ್ಮಣನನ್ನು ಕುರಿತು ರಾಮನು "ಸೌಮಿತ್ರಿ, ಈ ತೆರನಾದ ಮೃಗ ಕುಬೇರನ ಉದ್ಯಾನವನದಲ್ಲಿಯೂ ಇರಲಾರದು. ಮಿಂಚಿನಂತೆ ಹೊಳೆಯುವ ಇದರ ನಾಲಗೆಯನ್ನು ನೋಡು. ಮೈಮೇಲಿ ರುವ ಚಿನ್ನದ ಚುಕ್ಕೆಗಳು ಹೇಗೆ ತಳತಳಿಸುತ್ತಿವೆ! ಈ ಜಿಂಕೆಯನ್ನು ಕಂಡರೆ ಯಾರ ಮನಸ್ಸು ತಾನೆ ಸೋಲದು! ಇದರ ಚರ್ಮ ನನಗೂ ಇಷ್ಟ. ನೀನು ಹೇಳುವಂತೆ ಒಂದು ವೇಳೆ ಇದು ಮಾರೀಚನ ಮಾಯೆಯಾಗಿದ್ದರೆ ಈ ಮೃಗವನ್ನು ಕೊಲ್ಲುವುದೂ ನನ್ನ ಕರ್ತವ್ಯವೆ. ಏಕೆಂದರೆ ಮುನಿಹಿಂಸಕನಾದ ಮಾರೀಚನು ವಧ್ಯನೇ ಸರಿ. ಬಿಲ್ಲನ್ನು ಹಿಡಿದು ನೀನು ಸೀತೆಯನ್ನು ರಕ್ಷಿಸಿಕೊಂಡಿರು. ಈ ಮೃಗವನ್ನು ನಾನು ಜೀವಸಹಿತ

ಹಿಡಿದು ತರುತ್ತೇನೆ ; ಇಲ್ಲವಾದರೆ ಕೊಂದು ಇದರ ಚರ್ಮವನ್ನು ತರುತ್ತೇನೆ. ಅಪ್ರಮತ್ತನಾಗದೆ ಜಟಾಯುವಿನೊಡಗೂಡಿ ಸೀತೆಯನ್ನು ರಕ್ಷಿಸಿಕೊಂಡಿರು" ಎಂದು ಅಪ್ಪಣೆ ಮಾಡಿ ಬಿಲ್ಲುಬಾಣಗಳನ್ನು ಹಿಡಿದು ಅದನ್ನು ಹಿಂಬಾಲಿಸಿ ಹೊರಟನು.



ಈ ವೇಳೆಗಾಗಲೆ ಆ ಮೃಗದ ಬಣ್ಣವನ್ನು ನೋಡಿ ಸೀತೆಯ ಮನಸ್ಸು ಮೋಹಗೊಂಡಿತ್ತು.

ರಾಮನು ತನ್ನನ್ನು ಬೆನ್ನಟ್ಟಿ ಬರಲು, ಅವನನ್ನು ಮೋಸಗೊಳಿಸಬಗೆದು ಮಾರೀಚನು ಅದೃಶ್ಯನಾದನು. ಮೃಗ ಎಲ್ಲಿರುವುದೋ ಎಂಬ ತವಕದಿಂದ ರಾಮನು ಹಿರಿದ ಕತ್ತಿಯಿಂದ ಧಾವಿಸಲು ಅವನ ಮುಂದೆ ಮತ್ತೆ ಅದು ಕಂಗೊಳಿಸಿತು. ರಾಮಬಾಣಕ್ಕೆ ಹೆದರಿ ಭಯದಿಂದ ಆಕಾಶದಲ್ಲಿ ನೆಗೆಯುತ್ತಿದೆಯೊ ಎಂಬಂತೆ ತೋರಿಸಿಕೊಳ್ಳುತ್ತ, ಮೋಡದಿಂದ ಮುಚ್ಚಿದ ಶರತ್‌ಕಾಲದ ಚಂದ್ರನಂತೆ ಹೊಳೆದು ಕಾಣಿಸಿಕೊಳ್ಳುತ್ತ, ರಾಮನನ್ನು ಬಹುದೂರ ಕೊಂಡೊಯ್ದಿತು. ಆಯಾಸಗೊಂಡ ರಾಮನು ವಿಶ್ರಮಿಸಿಕೊಳ್ಳಲು ಮರದ ನೆರಳಿನಲ್ಲಿ ಕುಳಿತುಕೊಂಡನು. ಮೃಗಗಳ ಗುಂಪಿನಲ್ಲಿ ಮಾರೀಚನು ಮತ್ತೆ ಕಾಣಿಸಿಕೊಂಡನು. ಆ ಮೃಗದಿಂದ ಆಕರ್ಷಿತನಾದ ರಾಮನು ಮತ್ತೆ ಅದನ್ನು ಅಟ್ಟಲು, ಅದು ರಾಮನನ್ನು ವಂಚಿಸಿ ಓಡತೊಡಗಿತು. ಹೀಗೆ ತನ್ನನ್ನು ಬಾರಿಬಾರಿಗೂ ಮೋಸಗೊಳಿಸಲು ಯತ್ನಿಸುತ್ತಿದ್ದ ಮೃಗವನ್ನು ರಾಮನು ಹೊಡೆದು ಕೊಲ್ಲಲು ನಿಶ್ಚಯಿಸಿದನು. ಸೂರ್ಯಕಿರಣಗಳಿಗೆ ಸಮಾನವಾದ ಬಾಣವೊಂದನ್ನು ಸೆಳೆದು ಬಿಡಲು, ಅದು ಸಿಡಿಲೆರಗುವಂತೆ ಮಾರೀಚನ ಮೇಲೆ ಬಿದ್ದು ಅವನ ದೇಹವನ್ನು ಭೇದಿಸಿತು. ಸಾವು ಸಮೀಪಿಸಿದುದನ್ನರಿತ ಮಾರೀಚನು ಲಕ್ಷ್ಮಣನನ್ನು ಸೀತೆಯಿಂದ ಬೇರ್ಪಡಿಸುವ ಉಪಾಯವನ್ನು ನೆನೆದು ರಾಮನ ಧ್ವನಿಯಂತೆಯೆ 'ಹಾ ಸೀತೆ! ಓ ಲಕ್ಷ್ಮಣಾ!' ಎಂದು ಕೂಗಿ ತನ್ನ ಮೃಗದೇಹವನ್ನು ತ್ಯಜಿಸಿ, ರಾಕ್ಷಸ ರೂಪದಿಂದಲೆ ಪ್ರಾಣ ಬಿಟ್ಟನು. ತನ್ನ ಎದುರಿಗೆ ಬಿದ್ದ ಘೋರರೂಪಿಯಾದ ರಾಕ್ಷಸನನ್ನು ನೋಡಿ ರಾಮನು ತಮ್ಮನ ಮಾತನ್ನು ನೆನೆದು

"ರಾಕ್ಷಸನ ಧ್ವನಿಯನ್ನು ಕೇಳಿ ಸೀತೆ ಏನಾಗುವಳೊ, ಲಕ್ಷ್ಮಣನು ಯಾವ ಅವಸ್ಥೆಯನ್ನು ಹೊಂದುವನೊ" ಎಂದು ಯೋಚಿಸುತ್ತ ಆಶ್ರಮದ ಕಡೆಗೆ ಬೇಗಬೇಗನೆ ತೆರಳಿದನು. ಹೆಂಡತಿ ಮತ್ತು ತಮ್ಮನ ವಿಷಯದಲ್ಲಿ ಕಾತರನಾಗಿ ಬರುತ್ತಾ ದಾರಿಯಲ್ಲಿ ಸಿಕ್ಕಿದ ಮತ್ತೊಂದು ಮೃಗವನ್ನು ಹೊಡೆದು ಅದರ ಮಾಂಸವನ್ನು ತೆಗೆದುಕೊಂಡು ಬಂದನು.



ಆ ಮೃಗದಿಂದ ಆಕರ್ಷಿತನಾದ ರಾಮನು ಮತ್ತೆ ಅಟ್ಟಲು, ಅದು ರಾಮನನ್ನು ವಂಚಿಸಿ ಓಡತೊಡಗಿತು.

ಇತ್ತ ಮಾರೀಚನ ಧ್ವನಿಯನ್ನು ಕೇಳಿ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಆರ್ತನಾಗಿ ಕೂಗುತ್ತಿರುವ ರಾಮನ ಧ್ವನಿಯನ್ನು ಚೆನ್ನಾಗಿ ಕೇಳಿದೆ. ಅದನ್ನು ಕೇಳಿ

ನನ್ನ ಜೀವವೇ ಇಲ್ಲದಾಗಿದೆ. ದೀನನಾಗಿ ಕೂಗುತ್ತಿರುವ ರಾಮನನ್ನು ರಕ್ಷಿಸಲು ನೀನೇ ಸಮರ್ಥ. ಸಿಂಹಗಳಿಗೆ ಸ್ವಾಧೀನವಾದ ಮದಿಸಿದ ಎತ್ತಿನಂತೆ ರಾಕ್ಷಸರ ವಶವಾಗಿರುವ ನಿನ್ನ ಅಣ್ಣನ ಬಳಿಗೆ ಬೇಗ ಓಡು" ಎಂದು ಅವನನ್ನು ತ್ವರೆಗೊಳಿಸಿದಳು. ಆದರೆ ಲಕ್ಷ್ಮಣನು ರಾಮನ ಆಜ್ಞಾಧಾರಕನಾಗಿ ತಾನಿದ್ದ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಮತ್ತೆ ಸೀತೆ "ಲಕ್ಷ್ಮಣಾ, ಅಣ್ಣನಿಗೆ ಒದಗಿರುವ ವಿಪತ್ತನ್ನು ಕಂಡೂ ಹೋಗದಿರುವ ನೀನು ಅವನಿಗೆ ಮಿತ್ರರೂಪದ ಶತ್ರುವಾಗಿರುವೆ. ನನ್ನ ಮೇಲಣ ಆಶೆಯಿಂದ ನೀನು ಅವನಲ್ಲಿಗೆ ಹೋಗಬಯಸುವುದಿಲ್ಲವೆಂದು ತಿಳಿಯುತ್ತೇನೆ. ಹಾಗಲ್ಲದಿದ್ದರೆ ನೀನು ಇಲ್ಲಿ ಸುಮ್ಮನೆ ಏಕೆ ನಿಂತಿರುವೆ?" ಎಂದು ಕಣ್ಣೀರು ಮಿಡಿಯುತ್ತ ಭೀತೆಯಾಗಿ ನುಡಿದಳು. ಅತ್ತಿಗೆಯ ಮಾತಿಗೆ ಲಕ್ಷ್ಮಣನು "ಭದ್ರೆ, ಯುದ್ಧದಲ್ಲಿ ರಾಮನನ್ನು ಗೆಲ್ಲಲು ದೇವದಾನವರಿಂದಲೂ ಸಾಧ್ಯವಿಲ್ಲ. ಇಂದ್ರನಿಗೆ ಸಮಾನನಾದ ಆತನು ವಿಪತ್ತಿಗೆ ಗುರಿಯಾಗುವುದೆಂದರೇನು? ನಿನ್ನನ್ನು ಒಬ್ಬಳನ್ನೆ ಈ ಕಾಡಿನಲ್ಲಿ ನಾನು ಬಿಟ್ಟು ಹೋಗಲಾರೆ. ತಾಯಿ, ನೀನೇಕೆ ದುಃಖಪಡುವೆ? ಆ ಮೃಗವನ್ನು ಕೊಂದು ರಾಮನು ಬಹುಬೇಗ ಇಲ್ಲಿಗೆ ಬರುತ್ತಾನೆ. ಇದು ರಾಮನ ಧ್ವನಿಯಲ್ಲ; ರಾಕ್ಷಸರ ಮೋಸದ ಧ್ವನಿ. ಖರನನ್ನು ಕೊಂದು ನಾವು ರಾಕ್ಷಸರ ಹಗೆತನವನ್ನು ಗಳಿಸಿರುವ ಕಾರಣ, ನಿನ್ನೊಬ್ಬಳನ್ನೆ ಬಿಟ್ಟು ನಾನು ಇಲ್ಲಿಂದ ಕದಲಲಾರೆ. ಈ ವಿಷಯವನ್ನು ಕುರಿತು ನೀನು ಚಿಂತಿಸಬೇಡ" ಎಂದನು.

ಲಕ್ಷ್ಮಣನ ಮಾತುಗಳನ್ನು ಕೇಳುತ್ತಲೆ ಸೀತೆಯ ಕೋಪ ಉಕ್ಕೇರಿತು. ನಿಜವನ್ನು ನುಡಿದ ಲಕ್ಷ್ಮಣನನ್ನು ಕುರಿತು ಸೀತೆ ಕ್ರೂರವಾದ ಮಾತುಗಳನ್ನು ನುಡಿಯತೊಡಗಿದಳು. "ಅನಾರ್ಯ, ಕುಲಪಾಂಸುಲ, ಸ್ವಲ್ಪವಾದರೂ ಕರುಣೆಯಿಲ್ಲವೆ ನಿನಗೆ? ರಾಮನು ವಿಪತ್ತಿನಲ್ಲಿರುವುದನ್ನು ಕಂಡು ಸ್ವಲ್ಪವೂ ಮರುಕ ಪಡದಿರುವೆ. ಭರತನಿಂದ ಪ್ರೇರಿತನಾಗಿ ನನ್ನನ್ನು ಕಾಮಿಸಿ ಬಂದಿರುವ ನೀನೊಬ್ಬ ಬೇಹುಗಾರನೆಂದು ತೋರುತ್ತದೆ. ನಿನಗಾಗಲಿ ಭರತನಿಗಾಗಲಿ ನಾನು ವಶಳಾಗುವೆನೆಂದು ತಿಳಿಯಬೇಡ. ಕನ್ನೈದಿಲೆಯ ಬಣ್ಣವುಳ್ಳವನೂ ತಾವರೆಯಂತೆ ಕಣ್ಣುಳ್ಳವನೂ ಆದ ರಾಮನನ್ನು ಬಿಟ್ಟು ನಾನು ಮತ್ತೊಬ್ಬರನ್ನು ಬಯಸುವೆನೆಂದು ಬಗೆದೆಯಾ? ರಾಮನನ್ನು ಬಿಟ್ಟು ಒಂದು ಕ್ಷಣವೂ ನಾನು ಜೀವಿಸಲಾರೆ. ಇಗೋ! ನಿನ್ನೆದುರಿಗೇ ಪ್ರಾಣಬಿಡುತ್ತೇನೆ."

ದೇವಿಯ ಕ್ರೂರವಾಕ್ಯಗಳನ್ನು ಕೇಳಿ ಲಕ್ಷ್ಮಣನ ಮೈ ಜುಮ್ಮೆಂದಿತು. ಲೋಕದಲ್ಲಿ ಸ್ತ್ರೀ ಸ್ವಭಾವವೆ ಹೀಗೆಂದು ಬಗೆದು ಲಕ್ಷ್ಮಣನು ಸೀತೆಯನ್ನು ಕುರಿತು, "ಅಮ್ಮ ಜಾನಕಿ, ಕಾದ ಕಬ್ಬಿಣದಂತಿರುವ ಈ ನಿನ್ನ ಮಾತನ್ನು ಕಿವಿಯಿಂದ ಕೇಳಲಾರೆ. ನ್ಯಾಯವಾದ ಮಾತನ್ನು ಹೇಳುತ್ತಿರುವ ನನ್ನನ್ನು ನೀನು ಕಠಿಣ ವಾಕ್ಯಗಳಿಂದ ತಿರಸ್ಕರಿಸುತ್ತಿರುವೆ. ಇಗೋ, ನಾನಾದರೊ ರಾಮನನ್ನು ಕುರಿತು ಹೊರಟೆ. ಈಗ ಕಾಣಿಸುತ್ತಿರುವ ದುರ್ನಿಮಿತ್ತಗಳನ್ನು ನೋಡಿದರೆ ಮತ್ತೆ ನಿನ್ನನ್ನು ನೋಡುವೆನೋ ಇಲ್ಲವೊ ನಾನರಿಯೆ" ಎಂದನು. ಸೀತೆ ಮತ್ತೆ "ರಾಮನಿಲ್ಲದೆ ನಾನು

ಗೋದಾವರಿಯಲ್ಲಿ ಮುಳುಗಿ ಸಾಯುತ್ತೇನೆ! ಬೆಂಕಿಗೆ ಬೀಳುತ್ತೇನೆ! ಪರಪುರುಷನನ್ನು ಕಾಲಿನಿಂದಲೂ ಮುಟ್ಟುವುದಿಲ್ಲ" ಎಂದು ಕೂಗಿಕೊಳ್ಳುತ್ತ, ಎದೆಯನ್ನು ಬಡಿದು ಕೊಳ್ಳಲು ಮೊದಲು ಮಾಡಿದಳು. ಲಕ್ಷ್ಮಣನನ್ನು ಕುರಿತು ಮಾತನಾಡಲೇ ಇಲ್ಲ. ಆಗ ವಿಧಿಯಿಲ್ಲದೆ ಲಕ್ಷ್ಮಣನು ಧೈರ್ಯದಿಂದ ಸೀತೆಗೆ ನಮಸ್ಕರಿಸಿ, ಆಕೆಯನ್ನೇ ಬಾರಿಬಾರಿಗೂ ನೋಡುತ್ತ, ರಾಮನು ಹೋದ ಕಡೆ ಹೊರಟುಹೋದನು.

---

೭

# ಅಪಹರಣ

ಸೀತೆಯ ಮಾತಿನಿಂದ ರೋಷಗೊಂಡ ಲಕ್ಷ್ಮಣನು ರಾಮನನ್ನು ಕುರಿತು ಹೋದನೊ ಇಲ್ಲವೊ ರಾವಣನು ಸನ್ಯಾಸಿಯ ವೇಷವನ್ನು ಧರಿಸಿ ಬೇಗಬೇಗನೆ ಸೀತೆಯ ಬಳಿಗೆ ಬಂದನು. ಕಮಂಡಲುಧಾರಿಯಾದ ರಾವಣನು ರಾಮಲಕ್ಷ್ಮಣರಿಲ್ಲದ ಸೀತೆಯ ಬಳಿಗೆ ಬಂದದ್ದು ಚಂದ್ರಸೂರ್ಯರಿಲ್ಲದ ಸಂಧ್ಯೆಯ ಬಳಿ ಕತ್ತಲೆ ಬಂದಂತಾಯಿತು. ರಾವಣನನ್ನು ನೋಡಿ ಗೋದಾವರಿಯೂ ಹೆದರಿ ಹೆದರಿ ನಡೆ ತಡೆದು ಮಂದಮಂದವಾಗಿ ಚಲಿಸತೊಡಗಿದಳು. ಪೀತವಸನೆಯಾಗಿ ಬಾಷ್ಪಪೂರಿತಲೋಚನೆಯಾದ ಸೀತೆಯನ್ನು ನೋಡಿ ಮೋಹಗೊಂಡ ರಾವಣನು "ಮಂಗಳಾಂಗಿ, ನೀನಾರು? ನಿನ್ನ ಹಲ್ಲು ಸಮವಾಗಿವೆ. ಕಣ್ಣು ವಿಶಾಲವಾಗಿವೆ. ನಿನ್ನ ತೊಡೆಗಳು ಆನೆಯ ಸೊಂಡಿಲಿನಂತಿವೆ. ರತ್ನಾಭರಣಗಳಿಂದ ಕೂಡಿದ ನಿನ್ನ ಪಯೋಧರಗಳು ಬಹು ಮನೋಹರವಾಗಿವೆ. ನಿನ್ನ ಕೇಶಪಾಶ ಸುದೀರ್ಘವಾಗಿವೆ. ನಿನ್ನಂತಹ ಹೆಂಗಸನ್ನು ನಾನು ದೇವತೆಗಳಲ್ಲಾಗಲಿ ಗಂಧರ್ವರಲ್ಲಾಗಲಿ ಮನುಷ್ಯರಲ್ಲಾಗಲಿ ನೋಡಲಿಲ್ಲ. ನಿನ್ನ ರೂಪ, ವಯಸ್ಸು, ಈ ನಿನ್ನ ಕಾಡಿನ ವಾಸ ಇವೆಲ್ಲ ನನ್ನನ್ನು ಉನ್ಮಾದಗೊಳಿಸುತ್ತಿವೆ. ರಾಕ್ಷಸರ ವಾಸಕ್ಕೆ ತಕ್ಕ ಭೂಮಿ ಇದು. ಹೂಮುಡಿದು ಚಂದನಾದಿಗಳಿಂದ ಸಿಂಗರಿಸಿಕೊಂಡು ಗಂಡನೊಡನೆ ನೀನು ನಗರದಲ್ಲಿ ಸಮಸ್ತ ಸುಖಗಳನ್ನು ಅನುಭವಿಸಬೇಕು. ಹಾಗಿಲ್ಲದೆ ನೀನು ಇಲ್ಲಿರುವುದನ್ನು ನೋಡಿದರೆ ನಿನ್ನನ್ನು ದೇವತಾಸ್ತ್ರೀಯೆಂದು ತಿಳಿಯುತ್ತೇನೆ" ಎಂದನು.

ಸರಳಹೃದಯೆ ಸೀತಾದೇವಿಗೆ ರಾವಣನ ವಕ್ರಬುದ್ಧಿ ಗೋಚರವಾಗಲಿಲ್ಲ. ಅವನನ್ನು ನಿಜವಾದ ಯತಿಯೆಂದೆ ಭಾವಿಸಿ, ಉಪಚರಿಸಿ, ಭೋಜನ ಮಾಡುವಂತೆ ಪ್ರಾರ್ಥಿಸಿದಳು. ರಾವಣನಿಗಾದರೊ ಸೀತೆಯನ್ನು ಕದ್ದೊಯ್ಯಬೇಕೆಂಬ ಚಿಂತೆ ಮತ್ತು ಆತುರ. ಇತ್ತ ಸೀತೆ ಬಾರಿಬಾರಿಗೂ ರಾಮಲಕ್ಷ್ಮಣರು ಹೋದ ದಿಕ್ಕನ್ನೆ ನೋಡುತ್ತಿದ್ದಳು. ಆದರೆ ಕಂಡದ್ದು ಹೆಗ್ಗಾಡೆ ಹೊರತು ರಾಮಲಕ್ಷ್ಮಣರಲ್ಲ.

ಸೀತೆ ತಾನಾರೆಂಬುದನ್ನು ತಿಳಿಯಹೇಳಬೇಕೆಂದೂ ಇಲ್ಲವಾದರೆ ಯತಿಯಾದ ತಾನು ಆಕೆಯನ್ನು ಶಪಿಸುವೆನೆಂದೂ ರಾವಣನು ಹೇಳಿದನು. ಸೀತೆ ಕ್ಷಣಕಾಲ ಯೋಚಿಸಿ ರಾವಣನನ್ನು ಕುರಿತು "ಎಲೈ ದ್ವಿಜೋತ್ತಮನೆ ಜನಕರಾಯನ ಮಗಳಾದ ನನ್ನನ್ನು ಸೀತೆಯೆಂದು ಕರೆಯುತ್ತಾರೆ. ನಾನು ಶ್ರೀರಾಮಚಂದ್ರನ ಹೆಂಡತಿ. ನನ್ನ ಗಂಡನು ತಂದೆಯಾದ ದಶರಥನ ಮಾತಿನಂತೆ ಹದಿನಾಲ್ಕು ವರ್ಷ ವನವಾಸ ಮಾಡಲು ತಮ್ಮನಾದ ಲಕ್ಷ್ಮಣನೊಂದಿಗೆ ಇಲ್ಲಿಗೆ ಬಂದಿದ್ದಾನೆ. ನಾವು ಮೂವರೂ ಈ ಕಾಡಿನಲ್ಲಿ ಸಂಚರಿಸುತ್ತಿದ್ದೇವೆ. ಯತಿಪತಿಯೆ, ಒಂದು ಮುಹೂರ್ತಕಾಲ ಇಲ್ಲಿ ನಿಲ್ಲು. ನನ್ನ ಗಂಡನು ಬಹು

ಬೇಗ ಇಲ್ಲಿಗೆ ಬರುತ್ತಾನೆ. ಕಾಡಿನಲ್ಲಿ ತಿರುಗುತ್ತಿರುವ ನೀನಾರು? ನಿನ್ನ ಕುಲಗೋತ್ರಗಳನ್ನು ತಿಳಿಸು" ಎಂದು ನುಡಿದು ತಾವು ಕಾಡಿಗೆ ಬಂದ ವೃತ್ತಾಂತವನ್ನು ಅವನಿಗೆ ವಿಸ್ತಾರವಾಗಿ ತಿಳಿಸಿದಳು. ಸೀತೆಯ ಮಾತಿಗೆ ರಾವಣನು "ಭದ್ರೆ, ರಾಕ್ಷಸೇಂದ್ರನಾದ



ಕಮಂಡಲುಧಾರಿಯಾದ ರಾವಣನು ರಾಮಲಕ್ಷ್ಮಣರಿಲ್ಲದ ಸೀತೆಯ ಬಳಿಗೆ ಬಂದದ್ದು ಚಂದ್ರಸೂರ್ಯರಿಲ್ಲದ ಸಂಧ್ಯೆಯ ಬಳಿ ಕತ್ತಲೆ ಬಂದಂತಾಯಿತು.

ರಾವಣನೆಂದು ನನ್ನನ್ನು ತಿಳಿ. ದೇವಾಸುರಪನ್ನಗರು ನನ್ನನ್ನು ಕಂಡರೆ ಭಯದಿಂದ ನಡುಗುವರು. ಬಂಗಾರದ ಬಣ್ಣದ ದೇಹವುಳ್ಳವಳಾಗಿ ದಿವ್ಯವಸ್ತ್ರವನ್ನುಟ್ಟ ನಿನ್ನನ್ನು ನೋಡಿ ನನ್ನ ಹೆಂಡಿರಲ್ಲಿ ನನಗೆ ತಿರಸ್ಕಾರವುಂಟಾಗಿದೆ. ದೇವಿ, ನನ್ನ ಸ್ತ್ರೀಯರಿಗೆಲ್ಲ ನೀನು ಅಗ್ರಮಹಿಷಿಯಾಗಿ, ಸಮುದ್ರದಿಂದ ಸುತ್ತುವರಿಯಲ್ಪಟ್ಟ ಲಂಕೆಯಲ್ಲಿ ನನ್ನೊಡನೆ

ವಾಸಮಾಡು. ನೀನು ನನ್ನ ಹೆಂಡತಿಯಾಗುವುದಾದರೆ ಐದು ಸಾವಿರ ಸ್ತ್ರೀಯರು ನಿನ್ನ ದಾಸಿಯರಾಗುತ್ತಾರೆ" ಎಂದು ಕಾಮಾರ್ತನಾಗಿ ನುಡಿದನು.

ರಾವಣನ ಮಾತನ್ನು ಕೇಳಿ ಕೋಪಗೊಂಡ ಸೀತೆ ಅವನನ್ನು ಧಿಕ್ಕರಿಸಿ ನುಡಿದಳು. "ಮೇರುಪರ್ವತದಂತೆ ಶ್ರೀರಾಮನು ಅಚಲನು. ದೇವೇಂದ್ರನಿಗೆ ಸಮಾನನಾದವನು. ಸಾಗರದಂತೆ ಕದಲಿಸಲು ಅಸಾಧ್ಯನಾದವನು. ಅಂತಹ ಸತ್ಯಸಂಧನಾದ ಶ್ರೀರಾಮನನ್ನೇ ನಾನು ಅನುಸರಿಸುವೆನಲ್ಲದೆ ನಿನ್ನನ್ನು ಬಯಸುವೆನೆ? ನನ್ನನ್ನು ನೀನು ಬಯಸಿದ್ದು ನರಿ ಸಿಂಹಿಣಿಯನ್ನು ಬಯಸಿದಂತಾಯಿತು. ಬಂಗಾರದ ಮರಗಳನ್ನು ನೋಡಬಯಸುವುದೂ ಒಂದೆ, ನನ್ನನ್ನು ಬಯಸುವುದೂ ಒಂದೆ! ರಾವಣ, ಹಸಿದ ಸಿಂಹದ ಬಾಯಿಂದ, ಕ್ರುದ್ಧವಾದ ಸರ್ಪದ ಮುಖದಿಂದ ಕೋರೆದಾಡೆಗಳನ್ನು ಕೀಳಬಯಸುವೆಯಾ? ಕಾಲಕೂಟ ವಿಷವನ್ನು ಕುಡಿದು ಕ್ಷೇಮವಾಗಿ ಹಿಂದಿರುಗಲು ಸಾಧ್ಯವೆ? ಕಲ್ಲನ್ನು ಕಂಠಕ್ಕೆ ಬಿಗಿದುಕೊಂಡು ಸಮುದ್ರವನ್ನು ದಾಟಬಯಸುವವನಂತೆ ನೀನು ನನ್ನನ್ನು ಬಯಸಿದೆ. ಕ್ಷುದ್ರ ನದಿಗೂ ಸಮುದ್ರಕ್ಕೂ, ನರಿಗೂ ಸಿಂಹಕ್ಕೂ ಇರುವ ಅಂತರವೇ ನಿನಗೂ ರಾಮನಿಗೂ ಇರುವ ಅಂತರ. ಆದ್ದರಿಂದ ನೀನು ನನ್ನನ್ನು ಬಯಸುವುದು ಸರ್ವಥಾ ಉಚಿತವಲ್ಲ."

ಇಷ್ಟು ಮಾತನ್ನು ಧೈರ್ಯದಿಂದ ಹೇಳಿದರೂ ಸೀತೆ ಬಿರುಗಾಳಿಗೆ ಸಿಲುಕಿದ ಬಾಳೆಯಂತೆ ನಡುಗಿಹೋದಳು. ಸೀತೆಯ ಮಾತನ್ನು ಲಕ್ಷಿಸದೆ ರಾವಣನು "ಮಂಗಳಾಂಗಿ, ಕುಬೇರನ ಒಡಹುಟ್ಟಿದವನು ನಾನು. ಅವನು ನನ್ನ ಮಲತಾಯಿಯ ಮಗ. ಇದಲ್ಲದೆ ದಶಕಂಠನಾದ ನನ್ನನ್ನು ನೋಡಿದರೆ ದೇವಗಂಧರ್ವರೂ ಓಡಿಹೋಗುತ್ತಾರೆ. ಕುಬೇರನ ಪುಷ್ಪಕವಿಮಾನವನ್ನು ಬಲಪ್ರಯೋಗದಿಂದಲೇ ನಾನು ಸೆಳೆದು ತಂದೆ. ನನ್ನನ್ನು ಕಂಡರೆ ವಾಯು ಹೆದರಿ ಸಂಚರಿಸುತ್ತಾನೆ; ಸೂರ್ಯನು ಶೀತಕಿರಣನಾಗುತ್ತಾನೆ. ನಾನು ಕುಳಿತ ಕಡೆ ಗಿಡಮರಗಳು ಅಲುಗಾಡವು. ನದಿಗಳು ಗಂಭೀರವಾಗಿ ಮಂದವಾಗಿ ಹರಿಯುತ್ತವೆ. ಅಮರಾವತಿಗೆ ಸಮನಾದ ಲಂಕೆಯೆ ನನ್ನ ರಾಜಧಾನಿ. ನೀನು ಲಂಕೆಗೆ ಬಂದರೆ ಆಮೇಲೆ ಗತಾಯುವಾದ ರಾಮನನ್ನು ನೆನೆಯುವುದಿಲ್ಲ. ತಂದೆ ಭರತನನ್ನು ಸಿಂಹಾಸನದ ಮೇಲೆ ಕೂರಿಸಿ ರಾಮನನ್ನು ಕಾಡಿಗೆ ಅಟ್ಟಿದಾಗಲೆ ಅವನ ಪರಾಕ್ರಮ ತಿಳಿಯಿತು. ತಪಸ್ವಿಯಾದ ರಾಮನಿಂದ ನಿನಗೇನು ಪ್ರಯೋಜನ? ಕಾಮಾರ್ತನಾಗಿ ನಾನು ನಿನ್ನ ಬಳಿಗೆ ಬಂದಿದ್ದೇನೆ. ತ್ರಿಲೋಕೇಶ್ವರನೂ ರಾಕ್ಷಸೇಂದ್ರನೂ ಆದ ನನ್ನನ್ನು ನಿರಾಕರಿಸಬೇಡ" ಎಂದು ಆಕೆಯನ್ನು ಬೇಡಿಕೊಂಡನು. ಆದರೆ ತನ್ನನ್ನು ಬಯಸುವುದು ಮರಣಕ್ಕೆ ಮಾರ್ಗವೆಂದು ಸೀತೆ ಹೇಳಿದರೂ ರಾವಣನು ತನ್ನ ಆಸೆಯನ್ನು ಅಡಗಿಸಿಕೊಳ್ಳಲಾಗಲಿಲ್ಲ.

ಸೀತೆಯ ಮಾತನ್ನು ಅಲ್ಲಗಳೆದು, ಶೂರನಾದ ರಾವಣನು ಅಟ್ಟಹಾಸ ಮಾಡಿ ಆಕೆಗೆ ತನ್ನ ನಿಜರೂಪವನ್ನು ತೋರಿಸಿದನು. "ಹುಚ್ಚಿ, ನನ್ನ ಪರಾಕ್ರಮವನ್ನರಿಯದೆ ನೀನು ಮಾತನಾಡುತ್ತಿರುವಂತೆ ತೋರುತ್ತದೆ. ಸಮುದ್ರವನ್ನೆ ಕುಡಿಯುವ ಶಕ್ತಿ ನನಗುಂಟು. ಯಮನನ್ನೆ ಕೊಲ್ಲುವ ಸಾಮರ್ಥ್ಯ ನನಗಿದೆ. ಹಾಗಿರುವಾಗ ನೀನು ನನ್ನನ್ನು ಪತಿಯೆಂದು ಸ್ವೀಕರಿಸು" ಎಂದು ರಾವಣನು ಕೊಬ್ಬಿ ನುಡಿದನು. ಈ ಮಾತುಗಳನ್ನು

ಹೇಳುತ್ತ ಹೇಳುತ್ತ ಸೂರ್ಯಕಲ್ಪನಾದ ರಾವಣನ ಕಣ್ಣುಗಳು ಕೋಪದಿಂದ ಅಗ್ನಿಯ ಜ್ವಾಲೆಯಂತೆ ಕೆಂಪಾದುವು. ಆಗ ಅವನು ತನ್ನ ನಿಜಸ್ವರೂಪದಿಂದ ಅವಳೆದುರಿನಲ್ಲಿ ನಿಂತು ತನ್ನನ್ನೇ ಗಂಡನನ್ನಾಗಿ ವರಿಸೆಂದು ಅವಳನ್ನು ಪೀಡಿಸುತ್ತ, ಎಡದ ಕೈಯಿಂದ ಅವಳ ಕೂದಲನ್ನೂ ಬಲದ ಕೈಯಿಂದ ತೊಡೆಗಳನ್ನು ಹಿಡಿದುಕೊಂಡನು. ಆಗ ಅವನ ಹೊಂದೇರು ಅಲ್ಲಿ ಕಾಣಿಸಿಕೊಂಡಿತು. ಕ್ರೂರವಾಕ್ಯಗಳಿಂದ ಸೀತೆಯನ್ನು ಹೆದರಿಸಿ, ಆಕೆಯನ್ನು ತೊಡೆಯಲ್ಲಿ ಕೂರಿಸಿಕೊಂಡು ರಥವನ್ನು ಏರಿದನು. ಆಗ ಸೀತೆ ಹೆದರಿ ಹುಚ್ಚಿದ್ದು "ಹಾ ರಾಮ! ಓ ಲಕ್ಷ್ಮಣಾ! ಮಹಾಬಾಹೋ, ಗುರುಚಿತ್ತ ಪ್ರಸಾದಕ, ನೀಚನಾದ ಈ ರಾವಣನು ನನ್ನನ್ನು ಹೊತ್ತುಕೊಂಡೊಯ್ಯುವುದನ್ನು ಕಾಣದಿರುವೆಯ! ಈ ದುಷ್ಟನನ್ನು ಕೊಲ್ಲದೆ ಏಕೆ ಸುಮ್ಮನಿರುವೆ? ಅಯ್ಯೋ, ಕೈಕೆಯ ಕೋರಿಕೆ ನೆರವೇರಿತು. ಜನಸ್ಥಾನದ ವೃಕ್ಷಗಳೆ, ಪರ್ವತಗಳೆ, ಹಂಸಗಳೆ, ತಾಯಿ ಗೋದಾವರಿ, ರಾವಣನು ನನ್ನನ್ನು ಕದ್ದೊಯ್ಯುತ್ತಿರುವುದನ್ನು ಬೇಗ ರಾಮನಿಗೆ ತಿಳಿಸಿ, ಈಗೋ ನಿಮಗೆ ನಮಸ್ಕಾರ" ಹೀಗೆಂದು ಭಯದಿಂದ ನಡುಗಿ, ದೀನವದನೆಯಾಗಿ, ಕಣ್ಣೀರಿಡುತ್ತ ಗೋಳಿಟ್ಟಳು.

ಆಗ ಆಕೆಗೆ ಜಟಾಯು ಕಾಣಿಸಿಕೊಂಡನು. ಭಯದಿಂದ ಕೂಗಿಕೊಳ್ಳುತ್ತಿದ್ದ ಸೀತೆಯ ಧ್ವನಿಯಿಂದ ಮಲಗಿದ್ದ ಆತನಿಗೆ ನಿದ್ದೆ ತಿಳಿಯಿತು. ಮೊನಚಾದ ಕೊಕ್ಕುಳ್ಳ ಜಟಾಯು ರಾವಣನನ್ನು ಕುರಿತು "ರಾವಣ, ಧರ್ಮಾತ್ಮನಾದ ಶ್ರೀರಾಮನ ಹೆಂಡತಿಯನ್ನು ಕದ್ದೊಯ್ಯುವುದು ನಿನಗೆ ತರವಲ್ಲ. ನಿನ್ನ ಹೆಂಡಿರನ್ನು ರಕ್ಷಿಸುವಂತೆ, ದೀನಳಾದ ಈಕೆಯನ್ನು ಕಾಪಿಡುವುದು ನಿನಗೆ ಧರ್ಮವಲ್ಲವೆ? ಈಕೆಯಲ್ಲಿಟ್ಟಿರುವ ನಿನ್ನ ಮನಸ್ಸನ್ನು ಹಿಂದಿರುಗಿಸು. ಪಾಪಪುಣ್ಯಗಳಿಗೆ ರಾಜನೆ ಮೂಲ. ಮೇಲಾಗಿ ಶ್ರೀರಾಮನು ನಿನಗಾವ ಕೆಡುಕನ್ನುಂಟುಮಾಡಿದ್ದಾನೆ? ನಿನ್ನ ಕಂಠದಲ್ಲಿ ಯಮಪಾಶವಿರುವಂತೆ ತೋರುತ್ತದೆ. ಅರವತ್ತು ಸಾವಿರ ವರುಷಗಳು ಕಳೆದುಹೋದ ವೃದ್ಧನಾನಾಗಿದ್ದರೂ ಯುವಕನಾದ ನೀನು ಸೀತೆಯನ್ನು ಕದ್ದುಕೊಂಡು ಕ್ಷೇಮದಿಂದ ಹಿಂದಿರುಗಲಾರೆ. ನೀನು ಶೂರನೆ ಆದ ಪಕ್ಷದಲ್ಲಿ ನನ್ನೊಡನೆ ಯುದ್ಧಮಾಡು. ಒಂದು ಕ್ಷಣದಲ್ಲಿ ನಿನ್ನನ್ನು ಕೊಂದು, ಸೀತೆಯನ್ನು ಬಿಡಿಸುತ್ತೇನೆ. ಬೀಸಣಿಗೆಯಿಂದ ಹಣ್ಣನ್ನು ಕೆಡಹುವಂತೆ ನಿನ್ನನ್ನು ರಥದಿಂದ ಕೆಡವಿ, ನನ್ನ ಸ್ನೇಹಿತರಾದ ರಾಮಲಕ್ಷ್ಮಣರಿಗೆ ಹಿತವನ್ನುಂಟುಮಾಡುತ್ತೇನೆ" ಎಂದು ನುಡಿಯುತ್ತ ರಾವಣನನ್ನು ಅಟ್ಟಿ ಬಂದನು.

ರಾವಣ ಜಟಾಯುಗಳಿಗೆ ಘೋರವಾದ ಕಡುಗಾಳಗ ನಡೆದು ಹೋಯಿತು. ರಾವಣನು ಬಿಟ್ಟ ಬಾಣಗಳ ಏಟುಗಳನ್ನು ಸಹಿಸಿಕೊಂಡು ಜಟಾಯು ಅವನ ದೇಹದಲ್ಲಿ ತನ್ನ ಕೊಕ್ಕಿನಿಂದ ಗಾಯಗಳನ್ನುಂಟುಮಾಡಿದನು. ಇತ್ತ ಸೀತೆ ರಥದಲ್ಲಿ ಕಂಬನಿದುಂಬಿದವಳಾಗಿ ಜಟಾಯುವಿನ ಶೌರ್ಯವನ್ನೇ ನೋಡುತ್ತ ಕುಳಿತುಕೊಂಡಿದ್ದಳು. ತನ್ನ ಮೇಲೆ ಬೀಳುತ್ತಿದ್ದ ಬಾಣಗಳನ್ನೆಲ್ಲ ತಡೆಯುತ್ತ ಜಟಾಯು ರಾಕ್ಷಸನ ಸ್ವರ್ಣಕವಚ

ವನ್ನು ಕೊಡಹಿಬಿಟ್ಟನು. ಸಾವಿರಾರು ಬಾಣಗಳಿಂದ ಮುಚ್ಚಿಹೋದ ಜಟಾಯು ಗೂಡಿನಲ್ಲಿರುವ ಪಕ್ಷಿಯಂತೆ ಕಂಗೊಳಿಸುತ್ತಾ ರಾವಣನ ಬೆಳ್ಗೊಡೆಯನ್ನೂ ಚಾಮರ ಗಳನ್ನೂ ಕೆಡಹಿದನು. ಜಟಾಯು ತನ್ನ ಕೊಕ್ಕಿನಿಂದ ರಾವಣನ ಸಾರಥಿಯ ತಲೆಯನ್ನು ಕುಕ್ಕಿ ಕೊಲ್ಲಲು, ರಥಹೀನನಾದ ರಾವಣನು ಸೀತೆಯೊಡನೆ ಭೂಮಿಗೆ ಬಿದ್ದನು. ಆಗ ರಾವಣನು ಸೀತೆಯನ್ನೆತ್ತಿಕೊಂಡು ಅಂತರಿಕ್ಷಕ್ಕೆ ಹಾರಲು, ಜಟಾಯು ಅವನನ್ನು



ರಾವಣ ಜಟಾಯುಗಳಿಗೆ ಘೋರವಾದ ಕದನಗಾಳಗ ನಡೆದುಹೋಯಿತು.

ಅಡ್ಡಗಟ್ಟಿ ತಡೆದು "ಸೀತೆಯನ್ನು ಎತ್ತಿಕೊಂಡು ಎಲ್ಲಿಗೆ ಹೋಗುವೆ? ಮುಹೂರ್ತ ಕಾಲ ನಿಂತು ನನ್ನೊಡನೆ ಯುದ್ಧಮಾಡು" ಎಂದು ರಾವಣನ ಬೆನ್ನಿಗೆ ಬಲವಾಗಿ

ಒಡೆದನು. ಅವನ ಅಂಗಾಂಗಗಳನ್ನೆಲ್ಲ ಬಲವಾಗಿ ಗಾಯಗೊಳಿಸಿದನು ; ಕೊದಲನ್ನು ಕಿತ್ತುಹಾಕಿದನು. ಜಟಾಯುವಿನ ಕಾರ್ಯದಿಂದ ಕೋಪಗೊಂಡ ರಾವಣನು ಸೀತೆಯನ್ನು ಬಿಟ್ಟು ತನ್ನ ಕಾಲುಗಳಿಂದ ಜಟಾಯುವನ್ನು ತುಳಿದನು. ಕ್ಷಣಕಾಲ ಇಬ್ಬರಿಗೂ ಭಯಂಕರವಾದ ಯುದ್ಧ ಜರುಗಿತು. ಸೀತೆಯನ್ನು ಕೊಂಡೊಯ್ಯಲು ಆತುರನಾಗಿದ್ದ ರಾವಣನು ಆಗ ಖಡ್ಗವನ್ನು ಹಿರಿದು ಪಕ್ಷಿರಾಜನ ರೆಕ್ಕೆಗಳನ್ನು ಕತ್ತರಿಸಿಬಿಟ್ಟನು. ಅಲ್ಪಜೀವಿಯಾದ ಜಟಾಯು ಭೂಮಿಗೆ ಬೀಳಲು ರಕ್ತದಿಂದ ತೊಯ್ದ ಅವನನ್ನು ಕಂಡು ಸೀತೆ ಬಂಧುಜನರ ಬಳಿಗೆ ಬರುವಂತೆ ಓಡಿಬಂದಳು. ಕಾಡುಕಿಚ್ಚಿದ್ದು ಶಾಂತವಾಯಿತೆಂಬಂತೆ ತನಗಾಗಿ ಹೋರಾಡಿ ಭೂಮಿಯಲ್ಲಿ ಬಿದ್ದಿದ್ದ ಆತನನ್ನು ನೋಡಿ ಬಹುವಾಗಿ ಗೋಳಿಟ್ಟಳು.

ಜಟಾಯುವಿನ ಬಳಿಯಿದ್ದ ಸೀತೆಯನ್ನು ನೋಡಿ ರಾವಣನು ಓಡಿಬಂದು, ಆಕೆ ಬೇಡವೆಂದು ತಡೆಯುತ್ತಿದ್ದರೂ ತಲೆಗೂದಲನ್ನು ಹಿಡಿದುಕೊಂಡನು. ರಾವಣನು ಕದ್ದೊಯ್ಯುತ್ತಿದ್ದ ಸೀತೆಯನ್ನು ನೋಡಿ ಋಷಿಗಳು ವ್ಯಸನಗೊಂಡರು. ಸೂರ್ಯನು ಕಾಂತಿಹೀನನಾದನು. ಮೃಗಪಕ್ಷಿಗಳು ಗೋಳಿಟ್ಟುವು. ಸೀತೆಯ ತಲೆಯಿಂದ ಜಾರಿದ ಹೂವುಗಳು ಭೂಮಿಯಲ್ಲಿ ಉದುರಿಬಿದ್ದುವು. ಆಕಾಶದಿಂದ ಬೀಳುವ ಗಂಗೆಯಂತೆ ಅವಳ ಕಂಠದಿಂದ ರತ್ನದ ಹಾರ ಜಾರಿಬಿತ್ತು. ಸಿಂಹಗಳೂ ಹುಲಿಗಳೂ ಜಿಂಕೆಗಳೂ ರೋಷದಿಂದ ಸೀತೆಯ ನೆರಳನ್ನು ಹಿಂಬಾಲಿಸಿದುವು. ಝರಿಗಳಿಂದ ಕೂಡಿದ ಬೆಟ್ಟವೂ ಎತ್ತಿದ ಕೈಗಳಿಂದ ಸೀತಾಪಹರಣಕ್ಕಾಗಿ ಅರಚುತ್ತಿರುವಂತೆ ಕಾಣಿಸಿತು. ಕಾಡಿನ ಉದ್ದಕ್ಕೂ ಜಿಂಕೆಯ ಮರಿಗಳು ಸೀತೆಗಾಗಿ ಕಣ್ಣೀರಿಡುತ್ತಿದ್ದುವು. ರಾಕ್ಷಸನಾದರೊ 'ರಾಮಾ, ಲಕ್ಷ್ಮಣಾ !' ಎಂದು ಕೂಗುತ್ತಿದ್ದ ಸೀತೆಯನ್ನು ಹೊತ್ತುಕೊಂಡು ಲಂಕೆಯ ಕಡೆಗೆ ನಡೆದನು.

ಹೀಗೆ ಹೋಗುತ್ತಿದ್ದಾಗ ಉದ್ವಿಗ್ನಳಾದ ಸೀತೆ ರಾವಣನನ್ನು ಕುರಿತು "ನೀಚ ರಾವಣ ನಾಚಿಕೆ ಇಲ್ಲವೆ ನಿನಗೆ? ರಾಮಲಕ್ಷ್ಮಣರಿಬ್ಬರೂ ಇಲ್ಲದ ವೇಳೆಯಲ್ಲಿ ನನ್ನನ್ನು ಕದ್ದುಕೊಂಡು ಓಡುವೆಯಾ ? ಮಾಯಾಮೃಗದಿಂದ ನನ್ನ ಗಂಡನು ವಂಚಿತನಾದನು ; ನಮಗೆ ಪರಮಮಿತ್ರನಾದ ಪಕ್ಷಿರಾಜನು ಮರಣಹೊಂದಿದನು. ಕಳ್ಳತನದಿಂದ ಪರರ ಹೆಂಡಿರನ್ನು ಕದ್ದೊಯ್ಯುವ ನಿನ್ನ ಪರಾಕ್ರಮವನ್ನು ಸುಡಲಿ! ರಾಮಲಕ್ಷ್ಮಣರ ಬಾಣಗಳ ಮಳೆಯಿಂದ ಬೆಂಕಿಯಲ್ಲಿ ಸುಟ್ಟ ಹಕ್ಕಿಯಂತೆ ನೀನು ಪ್ರಾಣಬಿಡುವೆ. ಇದನ್ನು ತಿಳಿದಾದರೂ ನೀನು ನನ್ನನ್ನು ಬಿಡು. ಸಾಯುವವರು ಅಪಥ್ಯಮಾಡುವಂತೆ ನೀನು ನನ್ನನ್ನು ಕೊಂಡೊಯ್ಯುತ್ತಿರುವೆ. ತನ್ನ ಪ್ರಿಯಪತ್ನಿಯನ್ನು ಕೊಂಡೊಯ್ಯುತ್ತಿರುವ ನಿನ್ನನ್ನು ಶ್ರೀರಾಮನು ಕೊಲ್ಲದಿರುವನೆ?"ಎಂದು ಧಿಕ್ಕರಿಸಿ ನುಡಿದು ಬಗೆಬಗೆಯಾಗಿ ಗೋಳಿಟ್ಟಳು. ರಾವಣನು ಇದಾವುದನ್ನೂ ಗಮನಿಸದೆ, ವೇಗವೇಗವಾಗಿ ಹೋಗುತ್ತಿದ್ದನು. ಆ ಸಮಯದಲ್ಲಿ ಸೀತೆ ಬೆಟ್ಟದ ಕೋಡುಗಲ್ಲೊಂದರ ಮೇಲೆ ಕುಳಿತಿದ್ದ ಐವರು ಕಪಿವೀರರನ್ನು ಕಂಡಳು. ತನ್ನ ವಿಷಯವನ್ನು ಅವರು ಶ್ರೀರಾಮನಿಗೆ ತಿಳಿಸಬಹುದೆಂದು ನಂಬಿ, ತನ್ನ ರೇಷ್ಮೆಯ ಉತ್ತರೀಯದಲ್ಲಿ ಆಭರಣಗಳನ್ನು ಕಟ್ಟಿ ಅವರ ನಡುವೆ ಎಸೆದಳು. ಲಂಕೆಗೆ

ಹೋಗುವ ಆತುರದಲ್ಲಿದ್ದ ರಾವಣನಿಗೆ ಅದು ಗೊತ್ತಾಗಲೆ ಇಲ್ಲ. ಆ ಕಪಿಗಳು ದುಃಖ ಸಂತಪ್ತಳಾದ ಸೀತೆಯನ್ನು ಕಣ್ಣರಳಿಸಿಕೊಂಡು ನೋಡಿದರು. ಪಂಪಾ ಸರೋವರವನ್ನು ದಾಟಿ ರಾವಣನು ದಕ್ಷಿಣಾಭಿಮುಖವಾಗಿ ಲಂಕೆಯ ಕಡೆಗೆ ತೆರಳಿದನು. ಸಮುದ್ರವನ್ನು ದಾಟಿ ಲಂಕೆಯನ್ನು ಹೊಕ್ಕು ತನ್ನ ಅಂತಃಪುರದಲ್ಲಿ ಸೀತೆಯನ್ನು ಇರಿಸಿದನು.

ಆ ಬಳಿಕ ರಾವಣನು ಪಿಶಾಚಸ್ತ್ರೀಯರನ್ನು ಕರೆದು "ನನ್ನ ಅಪ್ಪಣೆಯಿಲ್ಲದೆ ಯಾವ ಪುರುಷನೆ ಆಗಲಿ ಸ್ತ್ರೀಯೆ ಆಗಲಿ ಸೀತೆಯನ್ನು ನೋಡಕೂಡದು. ಆಕೆ ಬಯಸತಕ್ಕ ಬಂಗಾರ ರತ್ನ ವಸ್ತ್ರ ಆಭರಣಗಳನ್ನು ನನ್ನ ಆಜ್ಞೆಯೆಂದೇ ತಿಳಿದು ಸೀತೆಗೆ ಕೊಡಿ. ತಿಳಿದೊ ತಿಳಿಯದೆಯೊ ಯಾವ ಹೆಂಗಸೂ ಸೀತೆಗೆ ಅಪ್ರಿಯವಾದ ಮಾತನ್ನು ನುಡಿಯಕೂಡದು. ಹಾಗೆ ಮಾಡಿದವರ ಪ್ರಾಣ ಉಳಿಯದು" ಎಂದು ಅಪ್ಪಣೆ ಮಾಡಿ ಅಂತಃಪುರದಿಂದ ಹೊರಟುಹೋದನು. ಶ್ರೀರಾಮನ ಸಮಾಚಾರವನ್ನು ತರಲು ಎಂಟು ಜನ ಸಮರ್ಥರಾದ ರಾಕ್ಷಸರನ್ನು ಜನಸ್ಥಾನದಲ್ಲಿ ಕಾವಲಿಟ್ಟನು.

ಸೀತೆಯನ್ನು ಕದ್ದು ತಂದ ರಾವಣನಿಗೆ ಸಂತೋಷವೇನೊ ಉಂಟಾಗಿತ್ತು. ಆದರೆ ಶ್ರೀರಾಮನ ವೈರವನ್ನು ಬೆಳಸಿದೆನೆಂಬ ಭಾವದಿಂದ ಅವನಿಗೆ ನಿದ್ದೆಯೇ ಬರಲಿಲ್ಲ. ಆಗ ಅವನ ಮನಸ್ಸನ್ನು ಸೀತೆಯೇ ಸಂಪೂರ್ಣವಾಗಿ ತುಂಬಿ ಬಿಟ್ಟಿದ್ದಳು. ಮನ್ಮಥನ ಹೂ ಬಾಣಗಳಿಂದ ಹೊಡೆಯಲ್ಪಟ್ಟ ಅವನು ಮತ್ತೆ ಅಂತಃಪುರವನ್ನು ಹೊಕ್ಕನು. ನೀರು ತುಂಬಿದ ಕಣ್ಣುಗಳಿಂದ ಕೂಡಿ, ದುಃಖಭಾರದಿಂದ ಕುಗ್ಗಿ, ತಲೆ ಬಗ್ಗಿಸಿ ಕುಳಿತಿದ್ದ ಸೀತೆ, ಸಮುದ್ರದ ನಡುವೆ ಮುಳುಗುತ್ತಿದ್ದ ನಾವೆಯಂತೆ ಕಂಡಳು. ಆಗ ರಾವಣನು ಶೋಕದಲ್ಲಿ ಮುಳುಗಿಹೋಗಿದ್ದ ಸೀತೆಗೆ, ಸ್ಫಟಿಕಮಯವಾದ ವಜ್ರವೈಡೂರ್ಯ ಮಣಿಗಳಿಂದ ಕೂಡಿದ ಕಂಬಗಳುಳ್ಳ ಅರಮನೆಯನ್ನು ಬಲಾತ್ಕಾರ ದಿಂದಲೆ ತೋರಿಸಿದನು. ಅವಳೊಡನೆ ಚಿನ್ನದ ಸೋಪಾನಗಳನ್ನು ಏರಿ ನಡೆದನು. ನಾನಾತೆರನಾದ ಸರೋವರಗಳನ್ನೂ ಪುಷ್ಕರಿಣಿಗಳನ್ನೂ ಅವಳಿಗೆ ತೋರಿಸಿದನು. ಪಾಪಾತ್ಮನಾದ ರಾವಣನು ಸೀತೆಗೆ ಆಸೆಯ ಬಲೆಯನ್ನೊಡ್ಡಿ ಈ ರೀತಿಯಾಗಿ ಅಂಗಲಾಚಿ ಬೇಡಿಕೊಂಡನು—"ವಿಶಾಲಾಕ್ಷಿ, ಸಮಸ್ತ ರಾಕ್ಷಸರೆಲ್ಲರಿಗೂ ನಾನು ಪ್ರಭು. ಆದರೆ ನೀನು ನನ್ನ ಪ್ರಾಣಗಳಿಗಿಂತಲೂ ಮೇಲೆನಿಸಿದವಳು. ನನ್ನ ಪತ್ನಿಯರಿ ಗೆಲ್ಲ ಸ್ವಾಮಿನಿಯೆನಿಸಿ ನನ್ನ ಹೆಂಡತಿಯಾಗು. ನಿನಗೆ ಪ್ರಿಯವನ್ನುಂಟುಮಾಡುವ ನನ್ನ ಮಾತನ್ನು ಕೇಳಿ ನನ್ನನ್ನು ಅನುಗ್ರಹಿಸು. ದೇವಯಕ್ಷಗಂಧರ್ವರಲ್ಲಿ ನನಗೆ ಸಮಾನ ರೆನಿಸಿದವರು ಮತ್ತೊಬ್ಬರಿಲ್ಲ. ರಾಜ್ಯಭ್ರಷ್ಟನೂ ದೀನನೂ ತಾಪಸಿಯೂ ಆದ ರಾಮನಿಂದ ನಿನಗೇನಾಗಬೇಕು ? ಯೌವನ ಶಾಶ್ವತವಾದುದಲ್ಲ; ಚಂಚಲವಾದುದು. ಆದಕಾರಣ ನನ್ನನ್ನು ಅನುಗ್ರಹಿಸಿ ಸಮಸ್ತ ಭೋಗಗಳನ್ನು ಅನುಭವಿಸು. ವಾಯು ವನ್ನು ಕಟ್ಟಲು, ಜ್ವಾಲೆಯನ್ನು ಹಿಡಿಯಲು ಹೇಗೆ ಅಸಾಧ್ಯವೋ ಹಾಗೆಯೆ ಸಾಗರ ದಿಂದ ಸುತ್ತುವರಿದ ಲಂಕೆಯನ್ನು ಪ್ರವೇಶಿಸುವುದೂ ಅಸಾಧ್ಯ. ಆದ್ದರಿಂದ ಎಲೈ ಸೀತೆ, ರತ್ನಾಭರಣಗಳನ್ನು ಉಟ್ಟು ತೊಟ್ಟು ಪುಷ್ಪಕವನ್ನೇರಿ ನನ್ನೊಡನೆ ವಿಹರಿಸು."

ಚಂದ್ರಮುಖಿಯಾದ ಸೀತೆ ರಾವಣನ ಮಾತನ್ನು ಕೇಳಿ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಕಣ್ಣೀರು ಸುರಿಸಿದಳು. ರಾವಣನು ಸೀತೆಯನ್ನು ಕುರಿತು ಮತ್ತೆ "ವೈದೇಹಿ, ಧರ್ಮಲೋಪವಾಗುವುದೆಂದು ನಾಚಿಕೆಗೊಳ್ಳಬೇಡ. ಇದುವರೆಗೂ ಯಾವ ಹೆಂಗಸಿಗೂ ತಲೆಬಾಗದ ನಾನು ನನ್ನ ಹತ್ತು ತಲೆಗಳನ್ನೂ ನಿನ್ನ ಪಾದಗಳ ಮೇಲಿಡು ತ್ತೇನೆ. ಇಂದಿನಿಂದ ನಾನು ನಿನ್ನ ದಾಸ, ನನ್ನನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿದನು.

ಸೀತೆ ದುಃಖಿತಳಾಗಿದ್ದರೂ ಸ್ವಲ್ಪವೂ ಹೆದರದೆ ನಡುವೆ ಹುಲ್ಲುಕಡ್ಡಿಯನ್ನಿಟ್ಟು ಕೊಂಡು ಅದನ್ನು ನಿರ್ದೇಶಿಸಿ ರಾವಣನಿಗೆ ಈ ರೀತಿ ನುಡಿದಳು: "ದೀರ್ಘಬಾಹುವೂ ವಿಶಾಲಾಕ್ಷನೂ ಆದ ರಾಮನೇ ನನ್ನ ಗಂಡ; ಅವನೇ ನನ್ನ ದೈವ. ತೇಜಸ್ವಿಯಾದ ಆತನನ್ನು ನೀನು ಎದುರಿಸಿದ್ದರೆ ಈ ವೇಳೆಗೆ ನಿನ್ನ ಅವತಾರವೆ ಮುಗಿಯುತ್ತಿತ್ತು. ರಾಮನು ದೇವಾಸುರರನ್ನು ಗೆದ್ದ ಪರಾಕ್ರಮಿ. ನೀನಾದರೊ ರಾಮನೊಡನೆ ದ್ವೇಷ ಕಟ್ಟಿಕೊಂಡು ಸಾಯಲು ಬಯಸಿದೆ. ಚಂದ್ರನನ್ನು ಅಂತರಿಕ್ಷದಿಂದ ತರಲು, ಸಾಗರ ವನ್ನು ಶೋಷಿಸಲೂ ಶಕ್ತನಾದ ರಾಮನು ನನ್ನನ್ನು ಈ ಸೆರೆಯಿಂದ ಬಿಡಿಸುವನು. ನಿನ್ನ ಪ್ರಾಣಗಳನ್ನು ತನ್ನ ಬಾಣಗಳಿಂದ ಸೆಳೆದು ಲಂಕೆಯನ್ನು ನಾಥರಿಲ್ಲದಂತೆ ಮಾಡುವನು. ಪತಿವ್ರತೆಯಾದ ನನ್ನನ್ನು ನೀನು ಮುಟ್ಟಲಾರೆ. ತಾವರೆಯ ಕೊಳದಲ್ಲಿ ರಾಜಹಂಸಗಳೊಡನೆ ಕ್ರೀಡಿಸುವ ಹಂಸೆಗೆ ನೀರುಕಾಗೆಯ ಮೇಲೆ ಮನಸ್ಸಾದೀತೆ? ರಾಕ್ಷಸಾಧಮ, ಈ ನನ್ನ ದೇಹವನ್ನು ಬೇಕಾದರೆ ಬಿಗಿಸು; ಇಲ್ಲವಾದರೆ ತಿನ್ನು. ಲೋಕದಲ್ಲಿ ಅಪವಾದ ಹೊಂದಿ ಬದುಕುವುದಕ್ಕೆ ಬದಲಾಗಿ ಈ ದೇಹವನ್ನೇ ಬಿಡುತ್ತೇನೆ."

ಸೀತೆಯ ನುಡಿಗಳನ್ನು ಕೇಳಿ ಕ್ರೋಧದಿಂದ ಕುರುಡನಾದ ರಾವಣನು "ಮೈಥಿಲಿ, ನಿನಗೆ ಇನ್ನು ಹನ್ನೆರಡು ತಿಂಗಳು ಅವಧಿಯನ್ನು ಕೊಟ್ಟಿರುತ್ತೇನೆ. ಆ ಕಾಲದಲ್ಲಿ ನೀನು ನನ್ನವಳಾಗದಿದ್ದರೆ, ನಿನ್ನನ್ನು ಬೆಳಗಿನ ಊಟಕ್ಕೆ ಕತ್ತರಿಸುವಂತೆ ಹೇಳುತ್ತೇನೆ" ಎಂದು ಹೇಳಿ ಆಕೆಯನ್ನು ಅಶೋಕವನದಲ್ಲಿ ಸೆರೆಯಲ್ಲಿಟ್ಟನು. ಜಾನಕಿ ಯನ್ನು ನಯಭಯಗಳಿಂದ ದಾರಿಗೆ ತರಲು ಘೋರರೂಪಿಗಳಾದ ರಾಕ್ಷಸಿಯರನ್ನು ಅವಳ ಸುತ್ತಲೂ ಕಾವಲಿರಿಸಿದನು. ಹುಲಿಗಳ ನಡುವೆ ಸಿಕ್ಕ ಹೆಣ್ಣುಹುಲ್ಲೆಯಂತೆ, ಸೀತೆ ರಾಕ್ಷಸಿಯರ ಬಾಧೆಗೆ ಸಿಲುಕಿ ಶ್ರೀರಾಮನನ್ನೆ ಧ್ಯಾನಿಸುತ್ತಾ ಅಶೋಕವನದಲ್ಲಿ ಕಾಲಕಳೆಯುತ್ತಿದ್ದಳು.

---

೮

# ಶ್ರೀರಾಮ ವಿಲಾಪ

ಶ್ರೀರಾಮನು ಮಾರೀಚನನ್ನು ಕೊಂದು ಸೀತೆಯನ್ನು ನೋಡಲು ಕಾತರನಾಗಿ ಆಶ್ರಮಕ್ಕೆ ಹಿಂದಿರುಗಿದನು. ಉದ್ವಿಗ್ನನಾದ ರಾಮನ ಹಿಂದೆ ನರಿಯೊಂದು ಕೂಗಿತು. ಆ ಕೂಗನ್ನು ಕೇಳಿ ಶ್ರೀರಾಮನು ಅಮಂಗಳವನ್ನು ಶಂಕಿಸಿದನು : "ಸೀತೆಯನ್ನು ರಾಕ್ಷಸರು ಭಕ್ಷಿಸಿರಬಹುದೆ ? ನನ್ನಂತೆಯೆ ಕೂಗಿದ ಮಾರೀಚನ ಧ್ವನಿಯನ್ನು ಕೇಳಿ ಸೀತೆಯೊಬ್ಬಳನ್ನೆ ಬಿಟ್ಟು ಲಕ್ಷ್ಮಣನು ನನ್ನಲ್ಲಿಗೆ ಬರುತ್ತಿರಬಹುದೆ ? ಈ ಕಾಂಚನ ಮೃಗ ನನ್ನನ್ನು ಬಹುದೂರ ಸೆಳೆದು ತಂದಿತು. ಜನಸ್ಥಾನದಲ್ಲಿರುವ ನನಗೂ ರಾಕ್ಷಸರಿಗೂ ಬದ್ಧವೈರ ಬೇರೆ ಉಂಟಾಗಿದೆ. ಸೀತಾಲಕ್ಷ್ಮಣರು ಕ್ಷೇಮದಿಂದಿರುವರೊ ಇಲ್ಲವೊ !"

ಹೀಗೆ ಚಿಂತಿಸುತ್ತಾ ಬರುತ್ತಿದ್ದ ರಾಮನಿಗೆ ಘೋರವಾದ ದುಶ್ಶಕುನಗಳು ಕಾಣಿಸಿಕೊಂಡುವು. ಇವುಗಳಿಂದ ವ್ಯಥೆಗೊಂಡ ರಾಮನು ಆಶ್ರಮಕ್ಕೆ ವೇಗವಾಗಿ ಬರುತ್ತ ದಾರಿಯಲ್ಲಿ ಕಾಂತಿಹೀನನಾದ ಲಕ್ಷ್ಮಣನನ್ನು ಕಂಡನು. ಸೀತೆಯೊಬ್ಬಳನ್ನೆ ಕಾಡಿನಲ್ಲಿ ಬಿಟ್ಟು ಬಂದ ಲಕ್ಷ್ಮಣನನ್ನು ಕುರಿತು ರಾಮನು "ಲಕ್ಷ್ಮಣ, ಸೀತೆ ಕ್ಷೇಮ ದಿಂದಿರುವಳೆ ? ಅವಳೊಬ್ಬಳನ್ನೆ ಕಾಡಿನಲ್ಲಿ ಬಿಟ್ಟು ಬಂದುದು ತಪ್ಪಾಯಿತು. ನಾವು ಆಶ್ರಮಕ್ಕೆ ಹೋಗುವವರೆಗೆ ರಾಕ್ಷಸರಿಂದ ಭಕ್ಷಿತಳಾಗದೆ ಸೀತೆ ಕ್ಷೇಮದಿಂದಿರುವಳೆ ? ಈ ದುಶ್ಶಕುನಗಳನ್ನು ನೋಡಿದರೆ ಸೀತೆ ಕ್ಷೇಮವಾಗಿರಳೆಂದೇ ನನ್ನ ನಂಬಿಕೆ. ನನ್ನನ್ನು ಮೋಸಗೊಳಿಸಿದ ಮಾರೀಚನೇನೊ ಮೃತನಾದನು. ಆದರೆ ನನ್ನ ಮನಸ್ಸು ಕುಗ್ಗಿದೆ. ಎಡಗಣ್ಣು ಬೇರೆ ಅದುರುತ್ತಿದೆ. ಲಕ್ಷ್ಮಣ, ನಾವು ಆಶ್ರಮಕ್ಕೆ ಹೋಗುವ ವೇಳೆಗೆ ಸೀತೆ ಮೃತಳಾಗಿರುತ್ತಾಳೆ; ಇಲ್ಲವೆ ರಾಕ್ಷಸರಿಂದ ಅಪಹೃತಳಾಗಿರುತ್ತಾಳೆ. ಇದರಲ್ಲಿ ಸಂದೇಹವೇ ಇಲ್ಲ. ಸೀತೆಯನ್ನು ಬಿಟ್ಟು ನಾನು ಕ್ಷಣಕಾಲವೂ ಬದುಕಿರ ಲಾರೆ. ವತ್ಸ, ಸೀತೆ ಬದುಕಿರುವಳೊ ಇಲ್ಲವೊ ಅದನ್ನು ಮೊದಲು ಹೇಳು. ಈಗ ಉಂಟಾಗಿರುವ ವ್ಯಸನದಿಂದ ನನಗೆ ಏನು ಮಾಡುವುದಕ್ಕೂ ತೋರದಾಗಿದೆ. ಖರನ ಮರಣದಿಂದ ಸಂತಾಪಗೊಂಡ ರಾಕ್ಷಸರು ಈ ಸಮಯವನ್ನೆ ಕಾಯ್ದು ಆಕೆಯನ್ನು ಭಕ್ಷಿಸಿರಬೇಕು. ಈ ವಿಧವಾದ ದುಃಖವನ್ನು ನಾನು ಅನುಭವಿಸಬೇಕೆಂದು ವಿಧಿಸಂಕಲ್ಪ ವೆಂದು ತೋರುತ್ತದೆ." ಹೀಗೆಂದು ನುಡಿದು ಹಸಿವು ನೀರಡಿಕೆ ಆಯಾಸಗಳಿಂದ ಕೂಡಿದ ರಾಮನು ಲಕ್ಷ್ಮಣನೊಡನೆ ಆಶ್ರಮಕ್ಕೆ ಬಂದನು.

ಪರ್ಣಶಾಲೆಯಲ್ಲಿ ಸೀತೆ ಕಾಣಬರಲಿಲ್ಲ. ಶ್ರೀರಾಮನು ಸೀತೆಯ ವಿಹಾರಸ್ಥಾನ ಗಳನ್ನು ಹುಡುಕಿ ನೋಡಿದನು. ಆದರೇನು ? ಸೀತೆ ಸಿಕ್ಕುವಳೆ ? ಘೋರವಾದ ದುಃಖದಿಂದ ಪೀಡಿತನಾದ ರಾಮನು ಮತ್ತೆ "ಲಕ್ಷ್ಮಣ, ಸೀತೆಯೊಬ್ಬಳನ್ನೆ ಕಾಡಿನಲ್ಲಿ

ಏತಕ್ಕಾಗಿ ಬಿಟ್ಟು ಬಂದೆ? ನಿನ್ನನ್ನು ನೋಡಿದೊಡನೆಯೆ ನನ್ನ ಎಡಗಣ್ಣೂ ಭುಜವೂ ಚಲಿಸಿದುವು" ಎಂದನು. ಲಕ್ಷ್ಮಣನು ರಾಮನನ್ನು ಕುರಿತು ಹೇಳಿದನು: "ಅಣ್ಣ, ದೇವಿಯು ಚುಚ್ಚುಮಾತುಗಳನ್ನು ಕೇಳಿ ತಡೆಯಲಾರದೆ ಮನಸ್ಸಿಲ್ಲದ ಮನಸ್ಸಿನಿಂದ ನಿನ್ನೆಡೆಗೆ ಬಂದೆ. ಹಾ ಸೀತೆ! ಓ ಲಕ್ಷ್ಮಣಾ! ಎಂಬ ಧ್ವನಿಯನ್ನು ಕೇಳಿ ಭಯದಿಂದ ನಡುಗಿ ಅತ್ತಿಗೆ ನಿನ್ನ ಬಳಿಗೆ ಹೋಗುವಂತೆ ನನಗೆ ಹೇಳಿದಳು." ಇದು ರಾಕ್ಷಸರ ಧ್ವನಿ, ರಾಮನನ್ನು ಗೆಲ್ಲಲು ದೇವಾಸುರರಿಂದಲೂ ಸಾಧ್ಯವಿಲ್ಲ, ಈ ವಿಷಯದಿಂದ ಹೆಚ್ಚು ಉತ್ಸುಕಳಾಗದಿರು" ಎಂದು ಎಷ್ಟು ಹೇಳಿದರೂ ದೇವಿ ನನ್ನನ್ನು ಕ್ರೂರವಾದ ಮಾತು ಗಳಿಂದ ನಿಂದಿಸಿದಳು. "ಅಣ್ಣನು ಸಾಯಲು ನೀನು ನನ್ನನ್ನು ಹೊಂದಬೇಕೆಂದು ಭರತ ನಿಂದ ಪ್ರೇರಿತನಾಗಿ ಬಂದಿರುವೆ. ಆದರೂ ಅದು ಸಾಧ್ಯವಾಗದ ಮಾತು ಎಂದು ಚುಚ್ಚಿ ನುಡಿದಳು. ಆ ಮಾತುಗಳನ್ನು ಕೇಳಿ ತಾಳಲಾರದೆ, ಕೋಪದಿಂದ ಹೊರಟು ಬಂದೆ" ಎಂದನು. "ಲಕ್ಷ್ಮಣ, ಸೀತೆಯನ್ನು ನೀನು ಒಂಟಿಯಾಗಿ ಬಿಟ್ಟು ಬಂದುದು ಅಕಾರ್ಯ ವಾಯಿತು. ಸೀತೆಯ ಮಾತನ್ನು ಕೇಳಿ ಕೋಪಕ್ಕೆ ವಶನಾಗಿ ನನ್ನ ಆಜ್ಞೆಯನ್ನು ಮೀರಿದೆ" ಎಂದು ನುಡಿದು ರಾಮನು ಅವನೊಡನೆ ಆಶ್ರಮವನ್ನು ಹೊಕ್ಕನು.

ಶ್ರೀರಾಮನಿಗೆ ಮತ್ತೆ ದುಶ್ಶಕುನಗಳಾದುವು. ಎಡಗಣ್ಣು ಅದುರಿತು; ದೇಹ ಕಂಪಿಸಿತು; ಕಾಲು ಜಾರಿತು. ಸೀತೆಯಿಲ್ಲದ ಆಶ್ರಮ ಹೇಮಂತ ಋತುವಿನಲ್ಲಿ ಕಾಂತಿ ಹೀನವಾದ ಕಮಲದಂತೆ ಕಾಣಿಸಿತು. ಆಶ್ರಮದ ಸುತ್ತಲೂ ಇದ್ದ ಗಿಡಮರಗಳೂ ಪಕ್ಷಿಗಳೂ ರೋದಿಸುತ್ತಿರುವಂತೆ ಕಂಡುಬಂದುವು. ದರ್ಭೆಗಳೂ ಕೃಷ್ಣಾಜಿನಗಳೂ ನೆಲದ ಮೇಲೆ ಅಸ್ತ್ಯವ್ಯಸ್ತವಾಗಿ ಬಿದ್ದಿದ್ದುವು. ಸೀತೆಯಿಲ್ಲದ ಆಶ್ರಮವನ್ನು ನೋಡಿ ರಾಮನ ಮನಸ್ಸಿನಲ್ಲಿ ನಾನಾ ರೀತಿಯ ಯೋಚನೆಗಳು ಮೂಡಿದುವು. "ಸೀತೆಯನ್ನು ಯಾರೋ ಕದ್ದೊಯ್ದಿರಬೇಕು. ಇಲ್ಲವೆ ಆಕೆ ರಾಕ್ಷಸರಿಂದ ಭಕ್ಷಿತಳಾಗಿರಬೇಕು. ಹಾಗಲ್ಲದೆ ಭಯದಿಂದ ಎಲ್ಲಿಯಾದರೂ ಅವಿತುಕೊಂಡಿರಬೇಕು ಅಥವಾ ಹೂವನ್ನು ಕೊಯ್ಯಲೋ ನದಿಗೋ ಹೋಗಿರಬೇಕು" ಹೀಗೆಂದು ಚಿಂತಿಸುತ್ತಿದ್ದ ಶ್ರೀರಾಮನು ಉನ್ಮತ್ತನಂತೆ ಕಾಣಿಸಿಕೊಂಡನು.

ಆಶ್ರಮದ ಸುತ್ತಲೂ ಶ್ರೀರಾಮನು ಹುಚ್ಚನಂತೆ ತಿರುಗಾಡಿದನು. ಮಲ್ಲಿಗೆ ಸಂಪಿಗೆ ತಾವರೆ ಕರ್ಣಿಕಾರ ಮುಂತಾದ ವೃಕ್ಷಗಳ ಬಳಿಗೆ ಹೋಗಿ 'ಜನಸುತೆಯನ್ನು ಕಂಡಿರಾ?' ಎಂದು ಅವುಗಳನ್ನು ಅಂಗಲಾಚಿ ಬೇಡಿಕೊಂಡನು. ಜಿಂಕೆಯ ಬಳಿಗೆ ಹೋಗಿ ಬೇಡಿದನು—"ಎಲೈ ಮೃಗವೇ, ಮೃಗಶಾಬಾಕ್ಷಿಯಾದ ಸೀತೆಯನ್ನು ಕಂಡೆಯಾ? ನನ್ನ ಪ್ರಿಯೆ ಯಾವಾಗಲೂ ಹೆಣ್ಣು ಜಿಂಕೆಯೊಡನೆ ಕೂಡಿರುತ್ತಿದ್ದಳು." ಆನೆಯ ಬಳಿಗೆ ಹೋಗಿ "ಎಲೈ ಗಜವೆ, ನಿನ್ನ ಸೊಂಡಿಲುಗಳಂತೆ ತೊಡೆಗಳುಳ್ಳ ಸೀತೆಯನ್ನು ಕಂಡೆಯಾ? ಆಕೆ ಎಲ್ಲಿರುವಳೆಂಬುದು ನಿನಗೆ ತಿಳಿದಿರಬೇಕು." "ಎಲೈ ಶಾರ್ದೂಲ, ಚಂದ್ರಮುಖಿಯಾದ ಸೀತೆಯನ್ನು ಕಂಡೆಯಾ? ಅದನ್ನು ಧೈರ್ಯವಾಗಿ ನನಗೆ ತಿಳಿಸು." ಹೀಗೆಂದು ನಾನಾ ಕಡೆ ಸುತ್ತಾಡುತ್ತಾ "ಜಾನಕಿ, ಎಲ್ಲಿರುವೆ? ನನಗೆ

ಉತ್ತರಕೊಡು. ಮರೆಯಲ್ಲಿ ಏಕೆ ಅಡಗಿಕೊಂಡಿರುವೆ?" ಎಂದು ಹಂಬಲಿಸುತ್ತ ಕಾಡಿನಿಂದ ಕಾಡಿಗೆ ಅಲೆದನು. ಉನ್ಮತ್ತನಂತೆ ಬೆಟ್ಟ ಹೊಳೆಗಳನ್ನು ದಾಟಿ ಕಾಡಿನ ಉಬ್ಬುತಗ್ಗುಗಳನ್ನು ಲಕ್ಷಿಸದೆ ಸಂಚರಿಸಿದನು.



ಆಶ್ರಮದ ಸುತ್ತಲೂ ಶ್ರೀರಾಮನು ಹುಚ್ಚನಂತೆ ತಿರುಗಾಡಿದನು

ಆದರೂ ಸೀತೆ ಕಾಣಿಸದಿರಲು ರಾಮನು ಹುಚ್ಚನಂತೆ ಮತ್ತೆ "ಲಕ್ಷ್ಮಣ, ಸೀತೆ ಎಲ್ಲಿ? ಯಾವ ಕಡೆ ಹೋದಳು? ಓ ಪ್ರಿಯೆ, ಗಿಡದ ಮರೆಯಲ್ಲಿ ಅಡಗಿ ನನ್ನನ್ನು ಹಾಸ್ಯಮಾಡುವುದು ಸಾಕು. ನಿನ್ನನ್ನು ಬಿಟ್ಟು ನಾನು ಬದುಕಿರಲಾರೆ. ಸತ್ತು ಸ್ವರ್ಗವನ್ನೇರಿದರೆ 'ವನವಾಸದ ಅವಧಿ ಮುಗಿಯದೆ ನೀನೇಕೆ ಇಲ್ಲಿಗೆ ಬಂದೆ ಎಂದು ತಂದೆ ಕೇಳುವುದಿಲ್ಲವೆ? ವೈದೇಹಿ? ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ? ಎಂದು ಗೋಳಾಡ ತೊಡಗಿದನು. ಆಗ ಲಕ್ಷ್ಮಣನು ಅಣ್ಣನನ್ನು ಸಮಾಧಾನಗೊಳಿಸಿ ಅವನೊಡನೆ ಗುಹೆಗಳಲ್ಲಿಯೂ ಬೆಟ್ಟದ ತಪ್ಪಲುಗಳಲ್ಲಿಯೂ ಸರೋವರಗಳಲ್ಲಿಯೂ ಸೀತೆಯನ್ನು ಹುಡುಕಿದನು. ಆದರೆ ಎಲ್ಲಿಯೂ ಸೀತೆ ಕಾಣಬರಲಿಲ್ಲ.

ಶ್ರೀರಾಮನು ಮತ್ತೆ ಗಟ್ಟಿಯಾಗಿ ರೋದಿಸುತ್ತಾ "ಲಕ್ಷ್ಮಣ, ಈ ಜಿಂಕೆಗಳ ಹನಿಗೂಡಿದ ಕಣ್ಣುಗಳನ್ನು ನೋಡಿದರೆ,ಸೀತೆ ನಷ್ಟಳಾಗಿರಬೇಕೆಂದೇ ತೋರುತ್ತದೆ. ಕೈಕೆಯ ಬಯಕೆ ಇಂದಿಗೆ ಕೈಗೂಡಿತು. ಸೀತೆಯೊಡನೆ ಕಾಡಿಗೆ ಬಂದ ನಾನು ಈಗ ಅವಳಿಲ್ಲದೆ ಅಯೋಧ್ಯೆಯ ಅಂತಃಪುರವನ್ನು ಹೇಗೆ ಹೊಗಲಿ? ಜಾನಕಿಯಿಲ್ಲದೆ ಜನಕರಾಜನನ್ನು ನಾನು ಹೇಗೆ ತಾನೆ ನೋಡಲಿ? ಸೀತೆಯಿಲ್ಲದೆ ನಾನು ಅಯೋಧ್ಯೆಯನ್ನು ಹೊಗಲಾರೆ. ಲಕ್ಷ್ಮಣ, ಅಯೋಧ್ಯೆಗೆ ಹೋಗಿ ಭರತನೇ ಈ ಭೂಮಿಯನ್ನು ಪಾಲಿಸಬೇಕೆಂಬ ನನ್ನ ಅಪ್ಪಣೆಯನ್ನು ಅವನಿಗೆ ತಿಳಿಸು. ನನ್ನ ತಾಯಿಯಾದ ಕೌಸಲ್ಯೆಯನ್ನು ಹೇಗಾದರೂ ಸಮಾಧಾನ ಪಡಿಸು" ಎಂದು ಉಸುರಿದನು. ಅಣ್ಣನ ಮಾತುಗಳನ್ನು ಕೇಳಿ ಲಕ್ಷ್ಮಣ

ನಿಗೆ ದುಃಖ ಒತ್ತರಿಸಿ ಬಂದು ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು. ಅದನ್ನು ನೋಡಿ ರಾಮನು ಇನ್ನೂ ಹೆಚ್ಚು ದುಃಖಗೊಂಡವನಾದನು. "ವತ್ಸ, ನನ್ನಂತೆ ದುಃಖಿಗಳು ಈ ಲೋಕದಲ್ಲಿ ಮತ್ತೊಬ್ಬರಿಲ್ಲವೆಂದು ತೋರುತ್ತದೆ. ರಾಜ್ಯ ತ್ಯಾಗ, ಬಂಧುಜನಗಳ ಅಗಲಿಕೆ, ತಂದೆಯ ಸಾವು ಇವು ನನ್ನ ದುಃಖವನ್ನು ಪೂರ್ಣ ಗೊಳಿಸಿದುವು. ಸೀತೆಯ ಅಗಲಿಕೆ ನನ್ನ ದೇಹವನ್ನೇ ಸುಡುತ್ತಿದೆ. ರಾಹುಗ್ರಸ್ತನಾದ ಚಂದ್ರನಂತೆ ರಾಕ್ಷಸರ ನಡುವೆ ಸೀತೆ ಶೋಭಿಸಳು. ಲಕ್ಷ್ಮಣ, ಈ ಶಿಲಾತಳದ ಮೇಲೆ ನನ್ನೊಡನೆ ಕುಳಿತುಕೊಂಡು ನಿನಗೆ ಪ್ರಿಯವಾದ ಮಾತುಗಳನ್ನಾಡಿದಳು. ಈ ಗೋದಾ ವರಿಗೆ ನನ್ನ ಪ್ರಿಯೆಗೆ ಪ್ರಿಯವಾದುದು. ಸೂರ್ಯಚಂದ್ರರೆ, ವಾಯುವೆ, ನನ್ನ ಪ್ರಿಯೆ ಎಲ್ಲಿರುವಳೆಂಬುದನ್ನು ಸತ್ಯವಾಗಿ ಹೇಳಿ" ಎಂದು ರಾಮನು ಪ್ರಲಾಪಿಸತೊಡಗಿದನು. ಆಗ ಲಕ್ಷ್ಮಣನು ಶೋಕವನ್ನು ಬಿಡುವಂತೆ ಅಣ್ಣನಿಗೆ ಧೈರ್ಯಹೇಳಿ, ಸೀತೆ ಗೋದಾವರಿಗೆ ಹೋಗಿರಬಹುದೆಂದೆಣಿಸಿ ಅವನೊಡನೆ ಅಲ್ಲಿಗೆ ಹೋದನು. ಆದರೇನು? ಸೀತೆ ಅಲ್ಲಿರುವಳೆ? ಜಿಂಕೆಗಳು ಸೀತೆ ಹೋದ ದಾರಿಗೇ ಮುಖ ತಿರುಗಿಸಿಕೊಂಡು ನೋಡುತ್ತ ಕಣ್ಣೀರು ಬಿಡುತ್ತಿದ್ದುವು. ರಾಮಲಕ್ಷ್ಮಣರು ಜಿಂಕೆಗಳು ಕಣ್ಣು ತಿರುಗಿಸಿಕೊಂಡಿದ್ದ ದಿಕ್ಕಿನ ಕಡೆಗೆ ಹೋಗುತ್ತ ನೆಲದಲ್ಲಿ ಬಿದ್ದಿದ್ದ ಹೂಮಾಲೆಯನ್ನು ನೋಡಿದರು. ರಾಮನು ಅವು ಸೀತೆ ಮುಡಿದ ಹೂಗಳೆಂದೇ ತಿಳಿದನು. ಮುಂದೆ ಹೋಗುತ್ತಾ 'ಸೀತೆಯನ್ನು ಕಂಡೆಯಾ?' ಎಂದು ಬೆಟ್ಟವನ್ನು ಕೇಳಿದನು; ಬೆಟ್ಟ ಮರುದನಿಗೊಟ್ಟಿತು. ಕೋಪದಿಂದ "ಈ ಬೆಟ್ಟವನ್ನು ಬೂದಿಮಾಡುತ್ತೇನೆ; ಈ ನದಿಯನ್ನು ಶೋಷಿಸುತ್ತೇನೆ" ಎಂದು ನುಡಿಯುತ್ತಿದ್ದ ರಾಮನಿಗೆ ರಾಕ್ಷಸನ ದೊಡ್ಡದಾದ ಕಾಲುಗುರುತು ಕಾಣಿಸಿತು. ಹಾಗೆಯೆ ಮುರಿದ ರಥ, ಬೆಳ್ಗೊಡೆ, ಚಾಮರಗಳು ಕಾಣಿಸಿದುವು. "ಲಕ್ಷ್ಮಣ, ಈ ಗುರುತುಗಳನ್ನೂ ರಕ್ತದ ಕಲೆಗಳನ್ನೂ ನೋಡಿದರೆ ಸೀತೆಗಾಗಿ ಇಬ್ಬರು ರಾಕ್ಷಸರಿಗೆ ದೊಡ್ಡ ಯುದ್ಧ ನಡೆಯಿತೆಂದೆಣಿಸುತ್ತೇನೆ. ಈ ಬೆಳ್ಗೊಡೆ ಚಾಮರ ಬಿಲ್ಲು ಇವು ಯಾರವೋ? ಸೀತೆ ಅಪಹೃತಳಾಗಿದ್ದರೆ, ಇಲ್ಲವೆ ಒಂದು ವೇಳೆ ಭಕ್ಷಿತಳಾಗಿದ್ದರೆ, ವತ್ಸ ನನ್ನ ಶಾಂತಗುಣ, ಕರುಣೆ ಇವೆಲ್ಲ ಕ್ರೋಧ ರೂಪವಾಗಿ ಪರಿಣಮಿಸಿತೆಂದೇ ತಿಳಿ. ಆಗ ದೇವದಾನವರಾಗಲಿ, ಮನುಷ್ಯರಾಗಲಿ ಸುಖವನ್ನು ಹೊಂದಲಾರರು. ದೇವತೆಗಳು ಈ ಕ್ಷಣವೇ ಸೀತೆಯನ್ನು ನನಗೆ ತಂದೊಪ್ಪಿಸದಿದ್ದರೆ, ಲೋಕವನ್ನೇ ದಹಿಸುತ್ತೇನೆ; ರಾಕ್ಷಸರೇ ಇಲ್ಲದಂತೆ ಮಾಡುತ್ತೇನೆ" ಎಂದು ಬಿಲ್ಲಿನಲ್ಲಿ ಬಾಣವನ್ನು ಹೂಡಿ ಶ್ರೀರಾಮನು ಕ್ರೋಧ ಸಂತಪ್ತನಾದನು.

ಪ್ರಳಯಕಾಲದ ಅಗ್ನಿಯಂತೆ ಲೋಕವನ್ನು ನಾಶಮಾಡಲು ಬಯಸಿ ರಾಮನು ಉಗ್ರರೂಪವನ್ನು ಧರಿಸಿದಂತೆ ಲಕ್ಷ್ಮಣನಿಗೆ ತೋರಿತು. ಕ್ರೋಧದಿಂದ ನಿಟ್ಟುಸಿರು ಬಿಡುತ್ತಿದ್ದ ರಾಮನನ್ನು ನೋಡಿ ಲಕ್ಷ್ಮಣನು ಕೈಮುಗಿದು "ಅಣ್ಣ, ಮೃದುಸ್ವಭಾವದ ನೀನು ಕೋಪಕ್ಕೆ ಒಳಗಾಗುವುದು ಉಚಿತವಲ್ಲ. ಚಂದ್ರನ ಕಾಂತಿ, ಸೂರ್ಯನ ತೇಜಸ್ಸು, ವಾಯುವಿನ ವೇಗ, ಭೂದೇವಿಯ ಕ್ಷಮೆ, ಈ ಗುಣಗಳೆಲ್ಲ ನಿನ್ನಲ್ಲಿ ಒಟ್ಟುಗೂಡಿವೆ.

ಯಾವನೊ ಒಬ್ಬ ದುಷ್ಟನಿಗಾಗಿ ಲೋಕವನ್ನೆ ಸುಡುವುದು ನಿನಗೆ ಉಚಿತವಲ್ಲ. ಈ ತೇರು, ಈ ಬಿಲ್ಲು ಯಾರವೊ ತಿಳಿಯದು. ನೆತ್ತರು ಸುರಿದಿರುವ ಈ ಸ್ಥಳವಂತು ನೋಡಲು ಬಲು ಘೋರವಾಗಿದೆ. ಈ ಯುದ್ಧವನ್ನು ನಡಸಿದ ಯಾವನೊ ಒಬ್ಬ ನೀಚನಿಗಾಗಿ ಸರ್ವಭೂತ ಶರಣ್ಯನಾದ ನೀನು ಲೋಕವನ್ನು ನಾಶಗೊಳಿಸುವುದೆ? ನಿನಗೆ ಅಪ್ರಿಯವನ್ನುಂಟುಮಾಡಿ ಬದುಕಲು ಯಾವನಿಗೆ ತಾನೆ ಸಾಧ್ಯವಾದೀತು; ಬೆಟ್ಟ, ಕಾಡು, ಗುಹೆ, ಹೆಚ್ಚೇಕೆ ಮೂರು ಲೋಕಗಳಲ್ಲಿಯೂ ಸೀತೆಯನ್ನು ಹುಡುಕೋಣ. ನಯಭಯಗಳಿಂದ ದೇವತೆಗಳು ಸೀತೆಯನ್ನು ತಂದೊಪ್ಪಿಸಿದರೆ ಸರಿ; ಇಲ್ಲವಾದರೆ ಆ ಬಳಿಕ ನಿನಗೆ ಮನಬಂದಂತೆ ಮಾಡು. ಪುರುಷಶ್ರೇಷ್ಠನಾದ ನೀನೇ ಈ ದುಃಖವನ್ನು ಸಹಿಸದೆಹೋದರೆ ಪ್ರಜೆಗಳು ಇನ್ನಾರನ್ನು ಮರೆಹೊಗಬೇಕು? ದುಃಖವನ್ನು ಅನುಭವಿಸುವುದೆ ಲೋಕದ ಸ್ವಭಾವ. ನಮ್ಮ ಕುಲಪುರೋಹಿತರಾದ ವಸಿಷ್ಠರು ನೂರು ಜನ ಮಕ್ಕಳನ್ನು ಕಳೆದುಕೊಳ್ಳಲಿಲ್ಲವೆ? ಲೋಕಕ್ಕೆ ಕಣ್ಣುಗಳಂತಿರುವ ಸೂರ್ಯ ಚಂದ್ರರನ್ನು ರಾಹು ಪೀಡಿಸುವುದಿಲ್ಲವೆ? ಬುದ್ಧಿಯಲ್ಲಿ ನೀನು ಬೃಹಸ್ಪತಿಗೆ ಸಮನಾದವನು. ಇಂಥ ನಿನಗೆ ನಾನು ಬುದ್ಧಿ ಹೇಳಬೇಕೆ? ಸೀತೆಯನ್ನು ಕದ್ದೊಯ್ದ ಹಗೆಯನ್ನು ಬೇರುಸಹಿತ ಕಿತ್ತೊಗೆಯಲು ಯತ್ನಿಸು. ಈ ದುಃಖವನ್ನೂ ಕ್ರೋಧವನ್ನೂ ತಡೆದುಕೊ" ಎಂದು ಸಮಾಧಾನ ಪಡಿಸಿದನು.

ತಮ್ಮನ ಪ್ರಿಯಕರವಾದ ಮಾತು ಅಣ್ಣನಿಗೆ ಸಮಾಧಾನವನ್ನು ತಂದಿತು. ಆಗ ರಾಮನು ಕ್ರೋಧವನ್ನು ಅಡಗಿಸಿ, ಬಿಲ್ಲನ್ನು ಅಪ್ಪಿಕೊಂಡು, ಸೀತೆಯನ್ನು ಹುಡುಕಲು ಉಪಾಯವೇನೆಂದು ಲಕ್ಷ್ಮಣನನ್ನು ಕೇಳಿದನು. ಅಣ್ಣನ ಮಾತಿಗೆ ಲಕ್ಷ್ಮಣನು "ಅಣ್ಣ, ಜನಸ್ಥಾನದ ಎಲ್ಲ ಪ್ರದೇಶಗಳಲ್ಲಿಯೂ ಸೀತೆಯನ್ನು ಹುಡುಕೋಣ. ಈ ವಿಪತ್ಕಾಲದಲ್ಲಿ ನಿನ್ನಂತಹ ಧೀರರು ಬೆಟ್ಟದಂತೆ ಅಚಲರಾಗಿರಬೇಕು" ಎಂದು ಸಲಹೆಕೊಟ್ಟನು. ಆಗ ಅಣ್ಣತಮ್ಮಂದಿರು ಬಿಲ್ಲು ಬಾಣಗಳನ್ನು ಧರಿಸಿ ತಮಗೆ ಚಿರಪರಿಚಿತವಾದ ಆ ಜನಸ್ಥಾನದಲ್ಲಿ ಸೀತೆಯನ್ನು ಹುಡುಕತೊಡಗಿದರು.

---

೯

# ಜಟಾಯು ಸಂಸ್ಕಾರ

ರಾಮಲಕ್ಷ್ಮಣರು ಸೀತೆಯನ್ನು ಹುಡುಕುವುದಕ್ಕಾಗಿ ವನದಲ್ಲಿ ಸಂಚಾರ ಮಾಡುತ್ತಿದ್ದರು. ಆಗ ನೆತ್ತರು ನಾಂದ ಭೂಮಿಯಲ್ಲಿ ಬಿದ್ದು, ಬೆಟ್ಟದ ಕೋಡುಗಲ್ಲಿನಂತೆ ಹೊಳೆಯುತ್ತಿದ್ದ ಪುಣ್ಯವಂತನಾದ ಜಟಾಯುವನ್ನು ಕಂಡರು. ಜಟಾಯುವನ್ನು ಕಂಡಕೂಡಲೆ ಶ್ರೀರಾಮನು ಆ ಪಕ್ಷಿಯೆ ಸೀತೆಯನ್ನು ಕೊಂದುತಿಂದು ಕುಳಿತಿದೆಯೆಂದು ಕ್ರೋಧಗೊಂಡು ಅದನ್ನು ಸಂಹರಿಸಲು ಅಟ್ಟಿಬಂದನು. ಶ್ರೀರಾಮನನ್ನು ನೋಡಿ ದೀನನಾದ ಜಟಾಯು ರಕ್ತವನ್ನು ಕಾರುತ್ತ ಕುಗ್ಗಿ ನುಡಿದನು : "ಹೇ ಆಯುಷ್ಮನ್, ಸೀತಾದೇವಿಯನ್ನೂ ಮತ್ತು ನನ್ನ ಪ್ರಾಣಗಳನ್ನೂ ರಾವಣನು ಅಪಹರಣ ಮಾಡಿದನು. ರಾವಣನು ಎತ್ತಿಕೊಂಡಿದ್ದ ಸೀತೆಯನ್ನು ಬಿಡಿಸಲು ಹೋಗಿ ಅವನ ರಥ ಸಾರಥಿ ಬಿಲ್ಲುಗಳನ್ನು ಮುರಿದೆ. ಇದನ್ನು ನೋಡಿ ಕ್ರೋಧದಿಂದ ಸಂತಪ್ತನಾದ ರಾವಣನು ಮುಪ್ಪಿನಿಂದ ಮುದಿಯಾದ ನನ್ನ ರೆಕ್ಕೆಗಳನ್ನು ಕತ್ತರಿಸಿ ಸೀತೆಯನ್ನು ಅಪಹರಿಸಿಕೊಂಡು ಹೋದನು. ರಾಕ್ಷಸನಿಂದ ಮೊದಲೇ ಗಾಯಗೊಂಡಿರುವ ನನ್ನನ್ನು ರಾಮ ಹೊಡೆಯಬೇಡ."

ಜಟಾಯುವಿನ ಪ್ರಿಯವಾದ ಮಾತುಗಳನ್ನು ಕೇಳಿ ಶ್ರೀರಾಮನು ಕಣ್ಣೀರು ತುಂಬಿದನು. ಬಿಲ್ಲನ್ನು ನೆಲದ ಮೇಲೆ ಎಸೆದು, ಪಕ್ಷಿರಾಜನನ್ನು ಅಪ್ಪಿಕೊಂಡು ಲಕ್ಷ್ಮಣನೊಡನೆ ಗಟ್ಟಿಯಾಗಿ ಅತ್ತನು. ಇಕ್ಕಟ್ಟಾದ ದಾರಿಯಲ್ಲಿ ಒಬ್ಬನೇ ಅಸಹಾಯಕನಾಗಿ ಬಹುಕಷ್ಟದಿಂದ ನಿಟ್ಟುಸಿರು ಬಿಡುತ್ತಿದ್ದ ಜಟಾಯುವನ್ನು ನೋಡಿ ರಾಮನು ಲಕ್ಷ್ಮಣನಿಗೆ "ವತ್ಸ, ರಾಜ್ಯ ಹೋಗಿ ನನಗೆ ವನವಾಸ ಉಂಟಾಯಿತು. ಸೀತೆ ಅಪಹೃತಳಾದಳು. ಮಿತ್ರನಾದ ಜಟಾಯು ರಾವಣನಿಂದ ಹೊಡೆಯಲ್ಪಟ್ಟನು. ಬೆಂಕಿ ಎಲ್ಲವನ್ನೂ ಸುಡುವಂತೆ, ಪಾಪಕರ್ಮಗಳು ನನ್ನನ್ನು ಸುಡುತ್ತಿವೆ. ನನ್ನ ದುಃಖವನ್ನು ಶಮನ ಮಾಡಿಕೊಳ್ಳಲು ನಾನು ಸಮುದ್ರವನ್ನು ಹೊಕ್ಕರೂ ನನ್ನ ದುಃಖದಿಂದ ಸಮುದ್ರವೇ ಶೋಷಿಸಿ ಹೋಗಿಬಿಡಬಹುದು. ಲೋಕದಲ್ಲಿ ನನ್ನಂತೆ ನಿರ್ಭಾಗ್ಯರು ಮತ್ತೊಬ್ಬರಿಲ್ಲ. ತಂದೆಗೆ ಸಮಾನನೂ ತಂದೆಗೆ ಪ್ರಿಯಸ್ನೇಹಿತನೂ ಆದ ಜಟಾಯು ನಮ್ಮ ದೌರ್ಭಾಗ್ಯದಿಂದ ಹೋರಾಡಿ ಬಿದ್ದಿದ್ದಾನೆ" ಎನ್ನುತ್ತ ತಂದೆಯಲ್ಲಿದ್ದ ಸ್ನೇಹದಿಂದ ಆತನ ದೇಹವನ್ನು ಸವರಿದನು. ಕತ್ತರಿಸಿದ ಆತನ ರೆಕ್ಕೆಗಳನ್ನೂ ರಕ್ತದಿಂದ ತೊಯ್ದ ದೇಹವನ್ನೂ ನೋಡಿ ರಾಮನು 'ಸೀತೆ ಎಲ್ಲಿ?' ಎಂದು ಕೇಳುತ್ತ ಮೂರ್ಛೆ ಹೋದನು.

ಮೂರ್ಛೆ ತಿಳಿದೆದ್ದ ರಾಮನು ಗತಪ್ರಾಣನಾಗುತ್ತಾ ಬರುತ್ತಿದ್ದ ಜಟಾಯುವನ್ನು ಸೀತೆಯ ವಿಷಯವಾಗಿ ಮತ್ತೆ ಕೇಳಿದನು. ಅದಕ್ಕೆ ಜಟಾಯು ಅಳುತ್ತಿದ್ದ ರಾಮನನ್ನು

ಕಣ್ಣೆತ್ತಿ ನೋಡಿ "ವತ್ಸ ರಾಮಚಂದ್ರ, ರಾವಣನು ತನ್ನ ಸಾಮರ್ಥ್ಯದಿಂದ ಮೇಘ ಗಳನ್ನು ಸೃಷ್ಟಿಮಾಡಿ ಕತ್ತಲನ್ನುಂಟು ಮಾಡಿದನು. ಆ ಬಳಿಕ ಬಳಲಿದ ನನ್ನ ರೆಕ್ಕೆ ಗಳನ್ನು ಕತ್ತರಿಸಿ ಸೀತೆಯನ್ನು ಕೊಂಡೊಯ್ದನು. ಅವನು ದಕ್ಷಿಣಕ್ಕೆ ಹೋದನೆಂದು ತೋರುತ್ತದೆ. ವತ್ಸ, ಸೀತೆಗಾಗಿ ವ್ಯಸನಪಡಬೇಡ. ಬಹುಬೇಗ ರಾವಣನನ್ನು ಕೊಂದು, ಸೀತೆಯನ್ನು ಪಡೆದು ನೀನು ಸುಖಿಯಾಗುವೆ. ರಾಮ ನನ್ನ ಪ್ರಾಣಗಳು ಊರ್ಧ್ವ ಮುಖವಾಗುತ್ತಿವೆ. ನೋಟ ಮಂದವಾಗುತ್ತಿದೆ. ರಾವಣನು ವಿಶ್ರವಸ್ಸಿನ ಮಗ, ಕುಬೇರನ ತಮ್ಮ" ಎಂದು ಹೇಳುತ್ತಿರುವಾಗಲೆ ಜಟಾಯುವಿನ ಪ್ರಾಣವಾಯು ಹಾರಿಹೋಯಿತು.

ಪ್ರಾಣಬಿಟ್ಟ ಜಟಾಯುವನ್ನು ನೋಡಿ ಶ್ರೀರಾಮನು ಲಕ್ಷ್ಮಣನಿಗೆ "ಲಕ್ಷ್ಮಣ, ಸೀತೆಯನ್ನು ನೀಚನಾದ ರಾವಣನಿಂದ ಬಿಡಿಸಹೋಗಿ ನನಗಾಗಿ ಜಟಾಯು ಪ್ರಾಣ ಬಿಟ್ಟನು. ಪಕ್ಷಿರಾಜನ ಸಾವಿನಿಂದ ಉಂಟಾಗಿರುವ ದುಃಖ ಸೀತಾಪಹರಣದಿಂದಲೂ ನನಗೆ ಉಂಟಾಗಲಿಲ್ಲ. ಈ ಪಕ್ಷಿರಾಜನು ಮಾನನೀಯನೂ ಮತ್ತು ಶ್ಲಾಘ್ಯನೂ ಆಗಿದ್ದಾನೆ. ನಮಗೆ ಈತನು ತಂದೆಗೆ ಸಮಾನ. ಬೇಗನೆ ಚಿತೆಯನ್ನು ಸಿದ್ಧಗೊಳಿಸು ; ಈತನಿಗೆ ದಹನಕ್ರಿಯೆಯನ್ನು ನಡಸೋಣ ; ಉತ್ತಮ ಕರ್ಮಗಳನ್ನು ಆಚರಿಸಿದವರಿಗೆ ಉಂಟಾದ ಗತಿ ಈತನಿಗಾಗಲಿ" ಎಂದನು.

ರಾಮನ ಅಪ್ಪಣೆಯಂತೆ ಲಕ್ಷ್ಮಣನು ಒಣಗಿದ ಕಟ್ಟಿಗೆಗಳಿಂದ ಚಿತೆಯನ್ನು ಸಿದ್ಧಗೊಳಿಸಿದನು. ತನ್ನ ಬಂಧುವೊಬ್ಬನ ಸಾವಿನಂತೆ ದುಃಖಗೊಂಡ ಶ್ರೀರಾಮನು ಪಕ್ಷಿರಾಜನನ್ನು ಉರಿಯುತ್ತಿದ್ದ ಚಿತೆಯಮೇಲಿಟ್ಟು, ಮಂತ್ರಪೂರ್ವಕವಾಗಿ ದಹನ ಮಾಡಿದನು. ಅನಂತರ ಅಣ್ಣತಮ್ಮಂದಿರು ಗೋದಾವರಿಯಲ್ಲಿ ಮಿಂದು ಆತನಿಗೆ ತರ್ಪಣಕೊಟ್ಟು, ಮೃಗದ ಮಾಂಸದಿಂದ ಪಿಂಡಪ್ರದಾನಮಾಡಿದರು. ಇಂತು ಜಟಾಯು ವಿಗೆ ಮಂತ್ರಪೂರ್ವಕವಾಗಿ ಸಂಸ್ಕಾರಮಾಡಿ, ಆತನಿಗೆ ಪುಣ್ಯಲೋಕಗಳನ್ನು ಒದಗಿಸಿ ಕೊಟ್ಟು, ಸೀತೆಯನ್ನು ಹುಡುಕಲು ಆ ರಾಜಕುಮಾರರು ಮುಂದಣ ಅರಣ್ಯವನ್ನು ಹೊಕ್ಕರು.

---

## ೧೦

# ಕಬಂಧ ವಧೆ

ಜಟಾಯುವಿಗೆ ಜಲಾಂಜಲಿ ಕೊಟ್ಟು, ಅಣ್ಣತಮ್ಮಂದಿರು ಪಶ್ಚಿಮ ದಿಕ್ಕಿಗೆ ಹೊರಟು, ಅಲ್ಲಿಂದ ದಕ್ಷಿಣಕ್ಕೆ ತಿರುಗಿ, ಅಲ್ಲಿಂದ ಘೋರವಾದ ನಿಬಿಡಾರಣ್ಯವನ್ನು ಹೊಕ್ಕರು. ಆ ಅರಣ್ಯವನ್ನು ದಾಟಿ ಮೂರು ಹರಿದಾರಿ ದೂರ ನಡೆದು ಅಲ್ಲಿಂದ ಮುಂದೆ ಕ್ರೌಂಚಾರಣ್ಯವನ್ನು ಸೇರಿದರು. ಆ ಕಾಡಿನಲ್ಲಿಯೂ ಸೀತೆಯನ್ನು ಹುಡುಕುತ್ತ ಪಾತಾಳಕ್ಕೆ ಸಮನಾದ ಕತ್ತಲೆಯಿಂದ ಮುಚ್ಚಿಹೋದ ಗುಹೆಯೊಂದನ್ನು ಕಂಡರು. ಅಲ್ಲಿ ಉದ್ದವಾದ ಹೊಟ್ಟೆ, ಕ್ರೂರವಾದ ದಾಡೆಹಲ್ಲುಳ್ಳ ಅಯೋಮುಖಿ ಯೆಂಬ ರಾಕ್ಷಸಿ ಲಕ್ಷ್ಮಣನನ್ನು ರತಿಕ್ರೀಡೆಗೆ ಕರೆದಳು. ಇದರಿಂದ ಕೋಪಗೊಂಡ ಲಕ್ಷ್ಮಣನು ತನ್ನ ಖಡ್ಗದಿಂದ ಅವಳ ಕಿವಿಮೂಗುಗಳನ್ನು ಕತ್ತರಿಸಲು ವಿಕಾರವಾಗಿ ಕೂಗುತ್ತಾ ಅವಳು ಕಾಡಿನೊಳಕ್ಕೆ ಓಡಿಹೋದಳು.

ಅನಂತರ ರಾಮಲಕ್ಷ್ಮಣರು ಮುಂದೆ ಹೋಗುತ್ತಿರಲು ಯುದ್ಧದಲ್ಲಿ ಜಯ ಸೂಚಕವಾದ ಶಕುನಗಳು ಅವರಿಗಾದುವು. ಸೀತೆಯನ್ನು ಹುಡುಕುತ್ತ ಹೋಗುತ್ತಿದ್ದ ಅವರಿಗೆ ಕಾಡಿನಲ್ಲಿ ಒಂದು ದೊಡ್ಡ ಘೋಷ ಕೇಳಿ ಬಂತು. ಆಗ ಗಾಳಿಯಿಂದ ಭೂಮಿ ಆಕಾಶಗಳು ಮುಚ್ಚಿಹೋದುವು. ಕೂಡಲೆ ಕತ್ತು ತಲೆಗಳಿಲ್ಲದ, ಎದೆಯಲ್ಲಿಯೆ ಮುಖವುಳ್ಳ ಕಾರ್ಮುಗಿಲಿಗೆ ಸಮಾನವಾದ ದೊಡ್ಡ ಬೆಟ್ಟದಂತಿದ್ದ ರಾಕ್ಷಸನೊಬ್ಬನು ಕಾಣಿಸಿಕೊಂಡನು. ಭಯಂಕರವಾದ ದವಡೆಗಳಿಂದ ಕೂಡಿ, ನಾಲಗೆಯಿಂದಲೆ ಮುಖ ವನ್ನು ನೆಕ್ಕಿಕೊಳ್ಳುತ್ತಿದ್ದ ಅವನು ಒಂದು ಗಾವುದದವರೆಗೆ ತನ್ನೆರಡು ತೋಳುಗಳನ್ನು ಚಾಚಿ ಸಿಕ್ಕಿದ ಹುಲಿ ಕರಡಿ ಮತ್ತು ಇತರ ಮೃಗಗಳನ್ನೆಲ್ಲ ತಿನ್ನುತ್ತಿದ್ದನು. ರಾಮಲಕ್ಷ್ಮಣರ ದಾರಿಗೆ ಅಡ್ಡವಾಗಿದ್ದ ಕಬಂಧನು ತನ್ನೆರಡು ತೋಳುಗಳನ್ನೂ ನೀಡಿ ಅಣ್ಣತಮ್ಮಂದಿರನ್ನು ತನ್ನೆಡೆಗೆ ಸೆಳೆದುಕೊಂಡನು. ತನಗುಂಟಾದ ಸ್ಥಿತಿಯನ್ನು ನೋಡಿ ಲಕ್ಷ್ಮಣನು ತನ್ನನ್ನು ರಾಕ್ಷಸನ ಆಹಾರಕ್ಕೆ ಬಿಟ್ಟು ಸೀತೆಯನ್ನು ಹುಡುಕಲು ಹೋಗುವಂತೆ ರಾಮನನ್ನು ಕೇಳಿಕೊಂಡನು. ತಮ್ಮನ ಮಾತಿಗೆ ಒಪ್ಪದೆ, ಶೂರನಾದ ಅವನು ಎದೆಗುಂದಕೂಡದೆಂದು ರಾಮನು ಲಕ್ಷ್ಮಣನಿಗೆ ಸಮಾಧಾನ ಹೇಳಿದನು. ಈ ನಡುವೆ ಕಬಂಧನು, ಗೂಳಿಯ ಹೆಗಲುಳ್ಳ ಅವರನ್ನು ತಿನ್ನುವೆನೆಂದು ಅವರಿಗೆ ತನ್ನ ಸಂಕಲ್ಪವನ್ನು ತಿಳಿಸಿದನು.

ಕಬಂಧನ ನಿಶ್ಚಯವನ್ನು ಕೇಳಿ ಶ್ರೀರಾಮನು ತಾನು ಸೀತೆಯನ್ನು ಹೊಂದದೆ ಪ್ರಾಣಬಿಡಬೇಕಾದ ದುಃಸ್ಥಿತಿಯುಂಟಾಯಿತು ಎಂದು ಶೋಕಿಸಿದನು. ಲೋಕದಲ್ಲಿ ವಿಧಿಯ ಮುಂದೆ ಇದಿರುಂಟೆ? ಹೀಗೆಂದು ರಾಮನು ನುಡಿಯುತ್ತಿರುವಾಗಲೆ ಕಬಂಧನು

ತನ್ನೆರಡು ತೋಳುಗಳನ್ನೆತ್ತಿ ರಾಮಲಕ್ಷ್ಮಣರನ್ನು ತಿನ್ನಬೇಕೆನ್ನುವಷ್ಟರಲ್ಲಿಯೆ, ಅಣ್ಣ ತಮ್ಮಂದಿರು ತಮ್ಮ ಖಡ್ಗಗಳನ್ನೆತ್ತಿ, ರಾಮನು ಬಲಭುಜವನ್ನೂ ಲಕ್ಷ್ಮಣನು ಎಡಭುಜವನ್ನೂ ಕತ್ತರಿಸಿದರು. ತೋಳು ಕತ್ತರಿಸಿ ಹೋದೊಡನೆಯ ಭಯಂಕರವಾದ ಧ್ವನಿಯಲ್ಲಿ ಕೂಗುತ್ತ ಕಬಂಧನು 'ನೀವಾರು' ಎಂದು ರಾಮಲಕ್ಷ್ಮಣರನ್ನು



ಅಣ್ಣತಮ್ಮಂದಿರು ತಮ್ಮ ಖಡ್ಗಗಳನ್ನೆತ್ತಿ, ರಾಮನು ಬಲಭುಜವನ್ನೂ
ಲಕ್ಷ್ಮಣನು ಎಡಭುಜವನ್ನೂ ಕತ್ತರಿಸಿದರು

ಪ್ರಶ್ನೆ ಮಾಡಿದನು. ಅವನ ಪ್ರಶ್ನೆಗೆ ಲಕ್ಷ್ಮಣನು ಉತ್ತರಕೊಟ್ಟನು: "ನಾವು ದಶರಥನ ಮಕ್ಕಳಾದ ರಾಮಲಕ್ಷ್ಮಣರು. ನನ್ನ ಅಣ್ಣನಾದ ಶ್ರೀರಾಮನ ಹೆಂಡತಿ ಸೀತೆ ಅಪಹೃತಳಾಗಿದ್ದಾಳೆ. ಆಕೆಯನ್ನು ಹುಡುಕಿಕೊಂಡು ಹೊರಟಿದ್ದೇವೆ." ಲಕ್ಷ್ಮಣನ ಮಾತನ್ನು ಕೇಳಿ ಕಬಂಧನಿಗೆ ಸಂತೋಷವಾಯಿತು. ಹಿಂದೆ ದೇವೇಂದ್ರನು ತನಗೆ ಹೇಳಿದ ಮಾತನ್ನು ನೆನೆದು ಅವನು ರಾಮಲಕ್ಷ್ಮಣರಿಗೆ ಈ ರೀತಿ ನುಡಿದನು:

"ರಾಮಚಂದ್ರ, ಒಮ್ಮೆ ನನಗೆ ಸೂರ್ಯಚಂದ್ರರಿಗೆ ಸಮಾನವಾದ ದಿವ್ಯರೂಪವಿತ್ತು. ಇದರಿಂದ ಕೊಬ್ಬಿಹೋದ ನಾನು ಒಂದು ಬಾರಿ ಘೋರವಾದ ರೂಪವನ್ನು ಧರಿಸಿ, ಸ್ಥೂಲಶಿರನೆಂಬ ಋಷಿಯನ್ನು ಹೆದರಿಸಿದೆನು. ಕೋಪದಿಂದ ಆತನು "ನಿನಗೆ ಇದೇ

ರೂಪ ಶಾಶ್ವತವಾಗಲಿ' ಎಂದು ಶಾಪಕೊಟ್ಟನು. ಆದರೆ ತತ್‌ಕ್ಷಣವೆ ಕನಿಕರದಿಂದ 'ಶ್ರೀರಾಮನು ಇಲ್ಲಿಗೆ ಬಂದು ನಿನ್ನ ತೋಳನ್ನು ಕತ್ತರಿಸಿ, ನಿನ್ನನ್ನು ಸುಟ್ಟಾಗ ನಿನಗೆ ಈ ಶಾಪದಿಂದ ಬಿಡುಗಡೆಯಾಗಲಿ' ಎಂದು ಪ್ರತಿಶಾಪಕೊಟ್ಟನು. ನಾನು ದನುವೆಂಬ ರಾಕ್ಷಸನ ಮಗ. ಇಂದ್ರನ ಕೋಪನಿಮಿತ್ತವಾಗಿ ನನಗೆ ಈ ಗಾವುದ ಉದ್ದವುಳ್ಳ ತೋಳುಗಳುಂಟಾದುವು. ಬ್ರಹ್ಮನ ವರಬಲದಿಂದ ದೀರ್ಘಾಯುವಾದ ನಾನು ಇಂದ್ರ ನೊಡನೆ ಸೆಣಸಿದೆ. ವಜ್ರಾಯುಧದಿಂದ ಅವನು ನನ್ನ ತೊಡೆಗಳನ್ನೇನೊ ಮುರಿದನು; ಆದರೆ ಪ್ರಾಣ ಮಾತ್ರ ಹೋಗಲಿಲ್ಲ. ಆಗ ಇಂದ್ರನು 'ನೀನು ಬಹುಕಾಲ ಹೀಗೆಯೇ ಬದುಕು' ಎಂದು ನುಡಿದು ಈ ತೋಳುಗಳನ್ನು ಅನುಗ್ರಹಿಸಿದನು. ನಿಮ್ಮ ಬರುವಿಕೆ ಗಾಗಿಯೆ ಕಾದು, ಆ ಉದ್ದೇಶದಿಂದ ಚಲಿಸಲಾರದ ನಾನು ನನ್ನೆಡೆಗೆ ಬರುವ ಎಲ್ಲ ಪದಾರ್ಥಗಳನ್ನೂ ತಿನ್ನುತ್ತಿದ್ದೇನೆ. ನನ್ನನ್ನು ಅಗ್ನಿಯಿಂದ ಸಂಸ್ಕಾರಗೊಳಿಸಿ. ಈಗ ನನಗೆ ದಿವ್ಯದೃಷ್ಟಿಯಿಲ್ಲ. ನನ್ನನ್ನು ದಹಿಸಿದ ಮೇಲೆ ದಿವ್ಯರೂಪವನ್ನು ತಳೆದು, ನಿಮಗೆ ಸೀತೆ ಯಾವನಿಂದ ಅಪಹೃತಳಾಗಿರುವಳೆಂಬುವನ್ನೂ ರಾವಣಾಸುರನ ವಿಷಯ ವಾಗಿ ತಿಳಿದ ಮನುಷ್ಯನನ್ನೂ ತಿಳಿಸುತ್ತೇನೆ. ಸೂರ್ಯ ಮುಳುಗುವುದರೊಳಗಾಗಿ ನನ್ನನ್ನು ಶಾಸ್ತ್ರೋಕ್ತವಾಗಿ ದಹಿಸಿ."

ಕಬಂಧನು ಹೇಳಿದಂತೆ ರಾಮಲಕ್ಷ್ಮಣರು ಬೆಟ್ಟದ ತಪ್ಪಲಲ್ಲಿ ದೊಡ್ಡದೊಂದು ಗುಂಡಿಯನ್ನು ಅಗೆದು, ಅದರಲ್ಲಿ ಕಬಂಧನ ದೇಹವನ್ನಿರುಳಿಸಿ, ಅದಕ್ಕೆ ಬೆಂಕಿ ಯಿಟ್ಟರು. ಮೆಲ್ಲಮೆಲ್ಲನೆ ಕಬಂಧನ ದೇಹ ಅಗ್ನಿದೇವನಿಂದ ಸುಟ್ಟು ಬೂದಿಯಾಗಿ ಹೋಯಿತು. ಆಗ ಕಬಂಧನು ಶುಭ್ರವಸ್ತ್ರವನ್ನೂ ದಿವ್ಯವಾದ ಮಾಲೆಯನ್ನೂ ಧರಿಸಿ ಧೂಮವಿಲ್ಲದ ಅಗ್ನಿಯಂತೆ ಹೊಳೆಯುತ್ತ ಮೇಲೆದ್ದು ಬಂದನು. ಚಿತೆಯಿಂದ ಮೇಲಕ್ಕೆ ಹಾರಿ, ಹಂಸಪಕ್ಷಿಗಳಿಂದ ಕೂಡಿ ಹೊಳೆಯುತ್ತಿದ್ದ ದಿವ್ಯವಾದ ವಿಮಾನದಲ್ಲಿ ಕುಳಿತು ಕಬಂಧನು ಗಗನವನ್ನಡರಿದನು. ಆಕಾಶದಿಂದಲೆ ಶ್ರೀರಾಮನನ್ನು ಕುರಿತು ಅವನು ಈ ರೀತಿ ನುಡಿದನು:

"ರಾಮಚಂದ್ರ, ಆರು ಉಪಾಯಗಳಿಂದ ಲೋಕದಲ್ಲಿ ರಾಜಕಾರ್ಯವನ್ನು ಕೈಗೂಡಿಸಿಕೊಳ್ಳಬೇಕು. ನಮಗೆ ದಾರುಣವಾದ ದುಃಖ ಒದಗಿದಾಗ ಅದು ಸ್ನೇಹಿತ ರಿಂದ ಕೊನೆಗೊಳ್ಳಬೇಕು. ಅದರ ಹೊರತಾಗಿ ನಿನಗೆ ಬೇರೆ ಸಿದ್ಧಿಯನ್ನು ನಾನು ಕಾಣೆ. ಆ ಸ್ನೇಹ ಸಂಪಾದನೆಗೆ ನಾನೀಗ ದಾರಿಯನ್ನು ತಿಳಿಸಿಕೊಡುತ್ತೇನೆ. ಅಣ್ಣನ ಕೋಪಕ್ಕೆ ಪಾತ್ರನಾಗಿ, ರಾಜ್ಯದಿಂದ ಹೊರದೂಡಲ್ಪಟ್ಟ ಸುಗ್ರೀವನೆಂಬ ಕಪಿವೀರನು ನಾಲ್ವರು ಮಹಾಕಪಿಗಳೊಡನೆ ಋಷ್ಯಮೂಕ ಪರ್ವತದಲ್ಲಿ ವಾಸಮಾಡುತ್ತಿದ್ದಾನೆ. ಸೀತೆಯನ್ನು ಹುಡುಕುವ ಕಾರ್ಯದಲ್ಲಿ ಆತನು ನಿನಗೆ ನೆರವಾಗುವನು. ನೀನು ಅವನಲ್ಲಿಗೆ ಹೋಗಿ ಅಗ್ನಿಸಾಕ್ಷಿಯಾಗಿ ಅವನ ಸ್ನೇಹವನ್ನು ಬೆಳೆಸು. ಕೃತಜ್ಞನೂ ಶೂರನೂ ಆದ ಅವನಿಂದ ನಿನ್ನ ಕೆಲಸ ಕೈಗೂಡುವುದು. ಸುಗ್ರೀವನು ಕಪಿಗಳ ಸಹಾಯದಿಂದ ಎಲ್ಲ ಕಡೆ ಗಳಲ್ಲಿಯೂ ಸೀತೆಯನ್ನು ಹುಡುಕಿಸಿ, ಆಕೆ ಇರುವ ತಾಣವನ್ನು ತಿಳಿಯುತ್ತಾನೆ.

ಸೀತೆ ರಾವಣನ ಮನೆಯಲ್ಲಿರಲಿ ಪಾತಾಳದಲ್ಲಿರಲಿ ಮೇರು ಪರ್ವತದ ತುದಿಯಲ್ಲಿರಲಿ ಆಕೆಯನ್ನು ನಿನಗೆ ತಂದುಕೊಡುತ್ತಾನೆ.

"ಪಶ್ಚಿಮ ದಿಕ್ಕಿನಲ್ಲಿ, ಹಲಸು, ನೇರಳೆ, ಮಾವು, ಬಿಲ್ವ ಮುಂತಾದ ಮರಗಳಿರುವ ಮಾರ್ಗದಲ್ಲಿ ಹೋದರೆ ನಿನಗೆ ಮಂಗಳವುಂಟಾಗುವುದು. ಆ ಮರಗಳ ಅಮೃತ ಫಲಗಳನ್ನು ತಿಂದು ನೀವಿಬ್ಬರೂ ಮುಂದೆ ಹೋಗಿ ಆ ಬಳಿಕ ಉತ್ತರಕ್ಕೆ ಹೋದರೆ ಅಲ್ಲಿ ಇಂಥವೆ ಮತ್ತೊಂದು ವನ ನಿಮಗೆ ಸಿಗುವುದು. ಅದನ್ನು ದಾಟಿ ಮುಂದಕ್ಕೆ ಹೋದರೆ ಸಮಜಲವುಳ್ಳ, ಪಾಚಿಯಿಲ್ಲದ, ಕಮಲಪುಷ್ಪಗಳಿಂದೊಪ್ಪುವ ಪಂಪಾ ಸರೋವರವನ್ನು ಕಾಣುವಿರಿ. ಕ್ರೌಂಚಪಕ್ಷಿಗಳ ಮನೋಹರವಾದ ಸ್ವರಗಳು ಅಲ್ಲಿ ಕೇಳಿಬರುತ್ತವೆ. ಆ ಸರೋವರದ ನೀರನ್ನು ಕುಡಿದು, ಅದರ ಮೇಲೆ ಬೀಸುವ ತಂಗಾಳಿಗೆ ಮೈಯೊಡ್ಡಿದರೆ ನಿಮ್ಮ ಸಂತಾಪವೂ ಆಯಾಸವೂ ಪರಿಹಾರವಾಗುತ್ತವೆ. ಅಲ್ಲಿ ಹಿಂದೆ ಮತಂಗ ಋಷಿಯ ಶಿಷ್ಯರು ವಾಸಮಾಡುತ್ತಿದ್ದರು. ಈಗ ಅಲ್ಲಿ ಅವರ ಸೇವಾವೃತ್ತಿಯನ್ನು ಮಾಡುತ್ತಿದ್ದ ಶಬರಿಯೆಂಬ ಹೆಂಗಸೊಬ್ಬಳಿದ್ದಾಳೆ. ನಿನ್ನನ್ನು ಕಂಡು ಸ್ವರ್ಗಕ್ಕೆ ಹೋಗುವ ಬಯಕೆಯಿಂದ ಆಕೆ ನಿನಗಾಗಿ ಅಲ್ಲಿ ಕಾಯುತ್ತಿದ್ದಾಳೆ. ಆಕೆ ಸ್ವರ್ಗಕ್ಕೆ ಹೋದ ಮೇಲೆ ನೀನು ಪಶ್ಚಿಮಕ್ಕೆ ಹೋದರೆ ಮತಂಗ ಋಷಿಗಳ ಆಶ್ರಮಕ್ಕೆ ಹೋಗುವೆ. ಪಂಪಾ ಸರೋವರದ ಮುಂದುಗಡೆಯಲ್ಲಿಯೆ ಪವಿತ್ರವಾದ ಋಷ್ಯಮೂಕ ಪರ್ವತವುಂಟು. ಆ ಪರ್ವತದಲ್ಲಿರುವ ಕಂದಮೂಲಗಳಿಂದ ಹಣ್ಣು ಹಂಪಲುಗಳಿಂದ ತುಂಬಿದ ಗುಹೆಯೊಂದರಲ್ಲಿ, ನಾಲ್ವರು ಕಪಿವೀರರೊಡನೆ ಸುಗ್ರೀವನು ವಾಸಮಾಡುತ್ತಿದ್ದಾನೆ. ಅಲ್ಲಿಗೆ ಹೋದರೆ ನಿಮ್ಮ ಕಾರ್ಯ ಸಿದ್ಧಿಸುತ್ತದೆ. ನಿಮಗೆ ಮಂಗಳವಾಗಲಿ."

ಹೀಗೆಂದು ಹೇಳಿ ಕಬಂಧನು ರಾಮಲಕ್ಷ್ಮಣರ ಅಪ್ಪಣೆಯನ್ನು ಪಡೆದು, ಅವರಿಗೆ ಋಷ್ಯಮೂಕಪರ್ವತದ ದಾರಿಯನ್ನು ತೋರಿಸುತ್ತ ಸ್ವರ್ಗಕ್ಕೆ ತೆರಳಿದನು.

---

೧೧

# ಶಬರಿಯ ಸಿದ್ಧಿ

ಕಬಂಧನು ಸ್ವರ್ಗವನ್ನು ಸೇರಿದ ಮೇಲೆ ರಾಮಲಕ್ಷ್ಮಣರು ಪಶ್ಚಿಮ ದಿಕ್ಕನ್ನು ಹಿಡಿದು ಅವನು ತೋರಿಸಿದ ಮಾರ್ಗವನ್ನು ಅನುಸರಿಸಿ ನಡೆದರು. ನಾನಾ ಬಗೆಯ ಗಿಡಮರಗಳನ್ನು ನೋಡುತ್ತ, ಜೇನಿಗೆ ಸಮನಾದ ಹಣ್ಣುಗಳನ್ನು ಸವಿಯುತ್ತ, ಸುಗ್ರೀವನನ್ನು ನೋಡುವ ತವಕದಿಂದ ಪಂಪಾ ಸರೋವರದ ಪಶ್ಚಿಮದಡವನ್ನು ಸೇರಿ ಅಲ್ಲಿದ್ದ ಶಬರಿಯ ಆಶ್ರಮವನ್ನು ಕಂಡರು. ಆಶ್ರಮವನ್ನು ಸೇರಿ ತನ್ನ ಸಮೀಪಕ್ಕೆ ಬಂದ ರಾಮಲಕ್ಷ್ಮಣರನ್ನು ನೋಡಿ ಶಬರಿ ಎದ್ದು ಕೈಮುಗಿದು ಅವರನ್ನು ಅರ್ಘ್ಯಪಾದ್ಯಗಳಿಂದ ಉಪಚರಿಸಿದಳು. ಆ ಬಳಿಕ ಶ್ರೀರಾಮನು ಆಕೆಯನ್ನು ಕುರಿತು "ಅಮ್ಮ ಶಬರಿ, ನಿನ್ನ ತಪಸ್ಸು ಯಾವ ತಡೆಯೂ ಇಲ್ಲದೆ ನೆರವೇರುತ್ತಿದೆಯೆ ? ಗುರು ಶುಶ್ರೂಷೆಯ ಫಲ ಸಫಲ ಹೊಂದಿತೆ?" ಎಂದು ಕೇಳಿದನು. ಶಬರಿ ಎಂದು ನಿಂತು "ರಾಮಚಂದ್ರ, ನಿನ್ನ ದರ್ಶನದಿಂದ ನನ್ನ ತಪಸ್ಸು ಫಲಿಸಿತು. ದೇವೋತ್ತಮನಾದ ನಿನ್ನನ್ನು ಪೂಜಿಸಿ ನನ್ನ ಬಾಳು ಸಾರ್ಥಕವಾಯಿತು. ನಿನ್ನ ಅನುಗ್ರಹಕ್ಕೆ ಪಾತ್ರಳಾದ ನನಗೆ ಅಕ್ಷಯ ಲೋಕಗಳು ದೊರಕುವುವು. ನೀನು ಚಿತ್ರಕೂಟದಲ್ಲಿದ್ದಾಗಲೆ ಇಲ್ಲಿದ್ದ ಋಷಿಗಳು ಸ್ವರ್ಗಕ್ಕೆ ತೆರಳಿದರು. ನಿನ್ನ ಬರುವಿಕೆಗಾಗಿಯೆ ನಾನು ಕಾದಿದ್ದೆ. ಪಂಪಾ ಸರೋವರದ ತೀರದಲ್ಲಿ ಬೆಳೆದ ಹಣ್ಣುಗಳನ್ನು ನಿನಗಾಗಿಯೆ ಸಂಗ್ರಹಿಸಿ ಇಟ್ಟದ್ದೇನೆ. ಅದನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು" ಎಂದಳು.

ಆಗ ರಾಮಲಕ್ಷ್ಮಣರು ಆ ಆಶ್ರಮದಲ್ಲಿ ಮತಂಗಋಷಿಗಳ ಪ್ರಭಾವವನ್ನು ನೋಡ ಬಯಸಿದರು. ಶಬರಿ ಅವರನ್ನು ಅಲ್ಲಿಗೆ ಕರೆದೊಯ್ದು ಋಷಿಗಳ ಮಹಿಮೆಯನ್ನು ಅವರಿಗೆ ತೋರಿಸಿದಳು. "ರಘುನಂದನ, ಜಿಂಕೆಗಳಿಂದಲೂ ಪಕ್ಷಿಗಳಿಂದಲೂ ಕೂಡಿದ ಈ ಮತಂಗವನವನ್ನು ನೋಡು. ಭಾವಿತಾತ್ಮರಾದ ನಮ್ಮ ಗುರುಗಳು ಯಜ್ಞ ಮಾಡುತ್ತಿದ್ದ ಈ ಸ್ಥಳವನ್ನೂ ನೋಡು. ಅವರ ತಪಃಪ್ರಭಾವದಿಂದ ಯಜ್ಞವೇದಿಗಳು ಇನ್ನೂ ಹೊಳೆಯುತ್ತಿವೆ. ಅವರು ಮರಗಳಲ್ಲಿ ಆರಹಾಕಿದ ನಾರುಮಡಿಗಳು ಇನ್ನೂ ಹಸಿ ಹಸಿಯಾಗಿವೆ. ಅವರು ಪೂಜೆ ಮಾಡಿದ ಹೂಮಾಲೆ ಇನ್ನೂ ಬಾಡದಾಗಿದೆ. ಈ ವನವನ್ನೆಲ್ಲ ನೋಡಿದೆಯಲ್ಲವೆ ನೀನು ? ಇನ್ನು ಅಪ್ಪಣೆಯಾದರೆ ಈ ಕಳೇಬರವನ್ನು ವಿಸರ್ಜಿಸಿ ನಾನು ಸೇವಿಸುತ್ತಿದ್ದ ಋಷಿಗಳ ಬಳಿಗೆ ಹೋಗುತ್ತೇನೆ."

ಶಬರಿಯ ಮಾತನ್ನು ಕೇಳಿ ರಾಮನಿಗೆ ಸಂತೋಷವಾಯಿತು. ಅಂತೆಯೆ ಆಕೆ ಮಾಡಿದ ಉಪಚಾರದಿಂದ ತೃಪ್ತಿಯೂ ಉಂಟಾಯಿತು. ಆ ಬಳಿಕ ಶಬರಿಯ ದೇಹತ್ಯಾಗಕ್ಕೆ ರಾಮನು ಅಪ್ಪಣೆ ಕೊಡಲು, ಆಕೆ ತನ್ನ ದೇಹವನ್ನು ಯಜ್ಞೇಶ್ವರನಿಗೆ

ಅರ್ಪಿಸಿದಳು. ತತ್‌ಕ್ಷಣವೆ ಅಗ್ನಿಗೆ ಸಮಾನವಾದ ದಿವ್ಯದೇಹವನ್ನೂ ವಸ್ತ್ರಾಲಂಕಾರ ಗಳನ್ನೂ ಧರಿಸಿ ಶೋಭಿಸುತ್ತ ಪುಣ್ಯಾತ್ಮರಿರುವ ಲೋಕವನ್ನು ಕುರಿತು ತೆರಳಿದಳು.

ಶಬರಿ ಹೊರಟುಹೋದಮೇಲೆ, ರಾಮನು ಲಕ್ಷ್ಮಣನನ್ನು ಕುರಿತು, "ವತ್ಸ ಸೋಜಿಗವನ್ನುಂಟುಮಾಡುವ ಈ ಆಶ್ರಮವನ್ನು ನೋಡಿ, ಹಾಗೂ ಇಲ್ಲಿಯ ತೀರ್ಥ ಗಳಲ್ಲಿ ಮಿಂದು, ಪಿತೃಗಳನ್ನು ತೃಪ್ತಿಪಡಿಸಿದುದಾಯಿತು. ಇಲ್ಲಿಗೆ ನಮ್ಮ ಅಶುಭ ಕೊನೆಗೊಂಡಿತು ; ನಮಗೆ ಕಲ್ಯಾಣವಾಗುವ ಕಾಲ ಹತ್ತಿರವಾಯಿತು. ಆದಕಾರಣ ಋಷ್ಯಮೂಕಪರ್ವತಕ್ಕೆ ಹೋಗಿ ಸುಗ್ರೀವನನ್ನು ನೋಡಲು ಕಾತರನಾಗಿದ್ದೇನೆ. ಅವನಿಂದ ನಮಗೆ ಸೀತೆ ದೊರಕಬೇಕಾಗಿದೆ" ಎಂದು ಹೇಳಿ ಅವನನ್ನು ತ್ವರೆಗೊಳಿಸಿದನು.



"....ಪಂಪಾಸರೋವರದ ತೀರದಲ್ಲಿ ಬೆಳೆದ ಹಣ್ಣುಗಳನ್ನು ನಿನಗಾಗಿಯೆ ಸಂಗ್ರಹಿಸಿ ಇಟ್ಟಿದ್ದೇನೆ—"

ಅಲ್ಲಿಂದ ಆ ರಾಜಕುಮಾರರಿಬ್ಬರೂ ಹೊರಟು, ಅನೇಕ ಗಿಡಮರಗಳಿಂದಲೂ ಬಳ್ಳಿ ಗಳಿಂದಲೂ ಸುತ್ತುವರಿದು, ಕಮಲಗಳಿಂದ ಕೂಡಿದ ಸ್ವಚ್ಛವಾದ ಪಂಪಾಸರೋವರ ವನ್ನು ನೋಡಿದರು. ಆ ಸರೋವರದ ಚೆಲುವು ಶ್ರೀರಾಮನ ಮನಸ್ಸನ್ನು ಸೆಳೆಯಿತು. ವಿರಹಯಾತನೆಯಿಂದ ಪೀಡಿತನಾದ ಶ್ರೀರಾಮನು ಸೀತೆಯನ್ನು ನೆನೆನೆನೆದು ಲಕ್ಷ್ಮಣ ನೊಡನೆ ಬಹಳ ಹೊತ್ತು ಆ ಸರೋವರದ ಚೆಲುವನ್ನೂ ಸುತ್ತಣ ವನದ ಸೌಂದರ್ಯ ವನ್ನೂ ಬಣ್ಣಿಸಿ, ನೋಡಿ, ಆಸ್ವಾದಿಸುತ್ತಿದ್ದನು.

# ಕಿಷ್ಕಿಂಧಾ ಕಾಂಡ

---

## ೧

## ಸುಗ್ರೀವ ಸಖ್ಯ

ಶಬರಿ ದಿವ್ಯವಾದ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದಮೇಲೆ ರಾಮ ಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಸುಗ್ರೀವನೆಂಬ ಕಪಿಶ್ರೇಷ್ಠನಿದ್ದ ಋಷ್ಯಮೂಕ ಪರ್ವತದ ಸಮೀಪಕ್ಕೆ ಬಂದರು. ಆ ಪರ್ವತದ ಸಮೀಪದಲ್ಲಿಯೇ ತಾವರೆಗಳಿಂದಲೂ ಕನ್ನೈದಿಲೆಗಳಿಂದಲೂ ಮೀನುಗಳಿಂದಲೂ ಕೂಡಿ ಶೋಭಿಸುತ್ತಿದ್ದ ಪಂಪಾಸರೋವರ ವನ್ನು ಆ ಅಣ್ಣತಮ್ಮಂದಿರು ನೋಡಿದರು. ನಿರ್ಮಲವಾದ ಆ ಸರೋವರವನ್ನು ನೋಡಿ ದೊಡನೆಯೆ ರಾಮನ ಮನಸ್ಸು ಸೀತೆಯನ್ನು ನೆನೆದು ಚಂಚಲವಾಯಿತು. ಲಕ್ಷ್ಮಣ ನನ್ನು ಕುರಿತು ರಾಮನು "ವತ್ಸ, ಲಕ್ಷ್ಮಣ, ಈ ಸರೋವರದ ನೀರು ವೈಡೂರ್ಯದ ಮಣಿಯಂತೆ ನಿರ್ಮಲವಾಗಿದೆ. ಈ ಸರೋವರದ ಸುತ್ತಲೂ ಇರುವ ಕಾಡು ರಮಣೀಯ ವಾಗಿದೆ. ಈ ಕಾಡಿನಲ್ಲಿರುವ ಮರಗಳಾದರೊ ಎತ್ತರವಾದ ಶಿಖರಗಳಿಂದ ಒಪ್ಪುವ ಪರ್ವತಗಳಂತೆ ಶೋಭಿಸುತ್ತಿವೆ. ಈಗತಾನೆ ಮೂಡಿಬಂದಿರುವ ವಸಂತಕಾಲವೂ ಭರತನ ಮತ್ತು ಸೀತೆಯ ದುಃಖದಿಂದ ಪೀಡಿತನಾದ ನನ್ನನ್ನು ಇನ್ನಷ್ಟು ಪೀಡಿಸುವುದ ಕ್ಕಾಗಿಯೆ ಬಂದಂತಿದೆ. ಈ ಸರೋವರದ ಮೇಲೆ ಬೀಸುತ್ತಿರುವ ತಂಗಾಳಿಯಿಂದ ನನ್ನ ಮನಸ್ಸೆಲ್ಲವೂ, ಸೀತೆಯನ್ನು ನೆನೆದು ವಿಕಾರಗೊಂಡಿದೆ. ಇಲ್ಲಿಯ ಮರಗಳೆಲ್ಲವೂ ಗಾಳಿಯ ಉಯ್ಯಾಲೆಗೆ ಸಿಲುಕಿ, ಶಿಲಾತಲಗಳ ಮೇಲೆ ಹೂವನ್ನು ಎರಚಿವೆ. ದುಂಬಿಗಳು ಜೇನುಂಡು ಮದಿಸಿಹೋಗಿ ಹೂವುಗಳಲ್ಲಿ ಮೊರೆಯುತ್ತಿವೆ. ಸೀತೆಯ ವಿರಹದಿಂದ ನನಗೆ ಇಲ್ಲಿರುವ ನಾನಾವಿಧವಾದ ಪಕ್ಷಿಗಳ ಧ್ವನಿ ದುಃಖವನ್ನುಂಟುಮಾಡುತ್ತಿದೆ. ಹರ್ಷಗೊಂಡ ಕೋಗಿಲೆ ದುಃಖಿತನಾದ ನನ್ನನ್ನು ಮೂದಲಿಸಿ ಕರೆಯುವಂತಿದೆ. ಈ ಕಾಡಿನ ಝರಿ ಗಳಲ್ಲಿ ಹರ್ಷದಿಂದ ನಲಿಯುತ್ತ ಕೂಗುತ್ತಿರುವ ಕಾಡುಕೋಳಿ ನನ್ನ ದುಃಖವನ್ನು ಹೆಚ್ಚಿ ಸುತ್ತಿದೆ. ಹಿಂದೆ ಕಾಡುಕೋಳಿಯ ಧ್ವನಿಯನ್ನು ಕೇಳಿ ಹರ್ಷಗೊಂಡ ಸೀತೆ ನನ್ನನ್ನು ಕರೆದು ಸಂತೋಷಗೊಂಡುದು ಈಗ ನೆನಪಾಗುತ್ತಿದೆ. ಈ ವಿರಹಾಗ್ನಿಯಿಂದ ನಾನು ಬಹುಬೇಗ ಸುಟ್ಟುಹೋಗುವಂತೆ ತೋರುತ್ತದೆ. ಗಾಳಿ ವೇಗವಾಗಿ ಬೀಸುವುದರಿಂದ ಸ್ಫಟಿಕಮಣಿಗಳಿಂದ ಮಾಡಿದ ಕಿಟಕಿಗಳಂತಿರುವ ತಮ್ಮ ಗರಿಗೆದರಿ, ಹೆಣ್ಣು ನವಿಲು ಗಳಿಂದ ಸುತ್ತುವರಿದು ಕುಣಿಯುತ್ತಿರುವ ಈ ಗಂಡು ನವಿಲುಗಳು ನನ್ನ ಕಾಮವನ್ನು

ಹೆಚ್ಚಿಸುತ್ತಿವೆ. ಹೆಣ್ಣು ನವಿಲಿನ ಒಡನಾಟದಲ್ಲಿರುವ ಈ ಗಂಡು ನವಿಲಿನ ಕುಣಿತ ನನ್ನನ್ನು ನೋಡಿ ಹಾಸ್ಯಮಾಡುವಂತಿದೆ. ಅಯ್ಯೋ! ಈ ಹೆಣ್ಣು ನವಿಲು ರಾಕ್ಷಸರಿಂದ ಅಪಹೃತಳಾಗದ ಕಾರಣ ಈ ಗಂಡು ನವಿಲು ಇಷ್ಟು ಸಂತೋಷದಿಂದಿರುವುದಲ್ಲವೆ? ಈಗ ಸೀತೆಯಿರುವ ಕಡೆಯೂ ಬಂದಿರುವ ಈ ವಸಂತವನ್ನು ನನ್ನನ್ನು ಅಗಲಿರುವ ಆಕೆ ಹೇಗೆ ಸಹಿಸುತ್ತಾಳೆ? ನನ್ನನ್ನು ಅಗಲಿದ ವಿಶಾಲಾಕ್ಷಿಯೂ ಯುವತಿಯೂ ಆದ ಆಕೆ ನಿಜವಾಗಿಯೂ ಮರಣ ಹೊಂದುವುದರಲ್ಲಿ ಸಂದೇಹವೇ ಇಲ್ಲ. ಈ ಪ್ರದೇಶದಲ್ಲಿ ತಮ್ಮ ನಲ್ಲೆಯರೊಂದಿಗೆ ಸಂಚರಿಸುತ್ತಿರುವ ಕಿನ್ನರರನ್ನು ನೋಡಿದೊಡನೆಯೆ ನನಗೆ ಸೀತೆಯು ನೆನಪಾಗುತ್ತದೆ. ಹಂಸಕಾರಂಡಗಳಿಂದಲೂ ತಾವರೆಗಳಿಂದಲೂ ಈ ಸರೋವರ ಶೋಭಿಸು ತ್ತಿದೆ. ಕಮಲಗಳೆಂದರೆ ಸೀತೆಗೆ ತುಂಬ ಆಸೆ. ಈ ಕಮಲಗಳನ್ನು ನೋಡಿ, ಸೀತೆಯಿಲ್ಲದ ನಾನು ಹೇಗೆತಾನೆ ಬದುಕಲಿ? ಸೀತೆ ನನ್ನೊಡನಿದ್ದಾಗ ಪ್ರಿಯವಾದ ವಸ್ತುಗಳು ಈಗ ನನಗೆ ಪ್ರೀತಿಯನ್ನುಂಟುಮಾಡುವಂತಿಲ್ಲ. ಈ ತಾವರೆಯ ದಳಗಳನ್ನು ಕಂಡೊಡನೆಯೆ ನನಗೆ ಸೀತೆಯ ಕಣ್ಣುಗಳು ನೆನಪಾಗುತ್ತವೆ. ತಾವರೆಯಲ್ಲಿರುವ ಧೂಳನ್ನು ಸೋಂಕಿ ಬರುವ ನರುಗಂಪಿನಿಂದ ಕೂಡಿದ ಈ ತಂಗಾಳಿ ನನ್ನ ಪ್ರಿಯೆಯ ನಿಶ್ವಾಸದಂತೆ ಹಿತಕರ ವಾಗಿದೆ. ಅಲ್ಲದೆ ಈ ಭೂಭಾಗವೆಲ್ಲ ಉದುರಿರುವ ಹೂವುಗಳಿಂದ ಕೂಡಿ, ಮಲಗಲು ಅನುಕೂಲವಾದ ಹಾಸಗೆಯಂತೆ ತೋರುತ್ತಿದೆ. ಈ ಪ್ರದೇಶದಲ್ಲಿ ಸೀತೆ ನನಗೆ ದೊರಕುವುದಾದರೆ, ನನಗೆ ಅಯೋಧ್ಯೆಯೂ ಬೇಡ, ಇಂದ್ರಪದವಿಯೂ ಬೇಡ. ಸುಂದರವಾದ ಈ ಪ್ರದೇಶದಲ್ಲಿ ನಾವಿಬ್ಬರೂ ವಾಸಮಾಡುತ್ತೇವೆ. ಆದರೆ ಈಗ ಸೀತೆಯಿಲ್ಲದೆ ನಾನು ಅಯೋಧ್ಯೆಯನ್ನು ಹೇಗೆ ಹೋಗಲಿ? ಕೌಸಲ್ಯೆ ಬಂದು 'ನನ್ನ ಸೊಸೆಯೆಲ್ಲಿ?' ಎಂದು ನನ್ನನ್ನು ಕೇಳಿದರೆ ತಾಯಿಗೆ ಏನೆಂದು ಉತ್ತರ ಕೊಡಲಿ? "ವತ್ಸ, ನೀನೊಬ್ಬನೆ ಅಯೋಧ್ಯೆಗೆ ಹಿಂದಿರುಗಿ ಭರತನೊಂದಿಗೆ ಸುಖವಾಗಿರು. ಸೀತೆಯಿಲ್ಲದೆ ನಾನು ಬದುಕಲಾರೆ" ಎಂದು ದೀನನಂತೆ ಪ್ರಲಾಪಿಸಿದನು.

ಅನಾಥನಂತೆ ಅಳುತ್ತಿರುವ ಅಣ್ಣನನ್ನು ನೋಡಿ, ಅವನನ್ನು ಸಂತೈಸಲು ಲಕ್ಷ್ಮಣನು ಮೃದುವಾದ ಮಾತುಗಳನ್ನಾಡಿದನು: "ಅಣ್ಣ, ಪುರುಷಶ್ರೇಷ್ಠನಾದ ನೀನು ಈ ರೀತಿ ದುಃಖಿಸಬಾರದು. ಧೈರ್ಯವನ್ನು ಹಿಡಿ. ಅದರಿಂದ ಖಂಡಿತವಾಗಿ ಹಿಡಿದ ಕೆಲಸ ಕೈಗೂಡುತ್ತದೆ. ರಾವಣನಿರುವ ತಾಣ ಗೊತ್ತಾದರೆ ಸಾಕು; ಅವನು ಪಾತಾಳದಲ್ಲಿರಲಿ, ಅದಿತಿಯ ಬಸಿರಿನಲ್ಲಿರಲಿ; ಅವನನ್ನು ಕೊಂದು ಸೀತೆಯನ್ನು ತರುತ್ತೇನೆ. ಎಲ್ಲ ಕಾರ್ಯಗಳಿಗೂ ಉತ್ಸಾಹವೆ ಮೂಲ. ಉತ್ಸಾಹಕ್ಕಿಂತಲೂ ಬೇರೊಂದು ಶಕ್ತಿ ಮತ್ತೊಂದಿರುವುದಿಲ್ಲ. ಯಾವ ಕಾರ್ಯದಲ್ಲಿಯೆ ಆಗಲಿ ಉತ್ಸಾಹ ವನ್ನು ತಳೆದ ಮನುಷ್ಯರು ದುಃಖಿತರಾಗುವುದಿಲ್ಲ. ನಮ್ಮಲ್ಲಿರುವ ಉತ್ಸಾಹದಿಂದಲೇ ನಾವು ಸೀತೆಯನ್ನು ಪಡೆಯುತ್ತೇವೆ. ಕಾಮವನ್ನೂ ಶೋಕವನ್ನೂ ತಡೆಗಟ್ಟಿ, ಮನಸ್ಸನ್ನು ಸ್ಥಿರಪಡಿಸಿಕೊ. ಅಣ್ಣ ನೀನೇನು ಸಾಮಾನ್ಯನೆ? ಮಹಾ ಧೈರ್ಯಶಾಲಿ. ಇಂದ್ರಿಯಗಳನ್ನು ಗೆದ್ದ ಮಹಾನುಭಾವನಲ್ಲವೆ ನೀನು?"

ಲಕ್ಷ್ಮಣನ ಮಾತುಗಳನ್ನು ಕೇಳಿ ಶ್ರೀರಾಮನು ಶೋಕವನ್ನೂ ಮೋಹವನ್ನೂ ತೊರೆದನು; ಧೈರ್ಯವನ್ನು ತಂದುಕೊಂಡನು. ಅನಂತರ ಆ ಅಣ್ಣತಮ್ಮಂದಿರಿಬ್ಬರೂ ಕಾಡುಗಳನ್ನೂ ಬೆಟ್ಟಗಳನ್ನೂ ಗುಹೆಗಳನ್ನೂ ದಾಟಿ ಮುಂದೆ ನಡೆದರು. ದುಃಖದಿಂದ ಉದ್ವೇಗಗೊಂಡ ರಾಮನ ಹಿಂದೆ ಲಕ್ಷ್ಮಣನು ಎಚ್ಚರಿಕೆಯಿಂದಲೂ ಭಕ್ತಿಯಿಂದಲೂ ನಡೆಯುತ್ತ ಅಣ್ಣನನ್ನು ಆ ಸ್ಥಿತಿಯಲ್ಲಿ ಕಾಪಿಟ್ಟನು. ಋಷ್ಯಮೂಕಪರ್ವತದ ಪ್ರದೇಶದಲ್ಲಿಯೆ ಆ ವೀರರು ಸುಗ್ರೀವನಿಗಾಗಿ ಸಂಚರಿಸುತ್ತಿದ್ದರು.

ಕಪಿಶ್ರೇಷ್ಠನಾದ ಸುಗ್ರೀವನು ಅಣ್ಣನ ಭಯದಿಂದ ತನ್ನ ನಾಲ್ವರು ಮಂತ್ರಿಗಳೊಡನೆ ಆ ಋಷ್ಯಮೂಕಪರ್ವತದಲ್ಲಿಯೆ ವಾಸಮಾಡುತ್ತಿದ್ದನು. ಪರ್ವತದ ತಪ್ಪಲಲ್ಲಿಯೆ ತಿರುಗಾಡುತ್ತಿದ್ದ ಶೂರರೂ ಆಯುಧ ಪಾಣಿಗಳೂ ಆದ ರಾಮಲಕ್ಷ್ಮಣ ರನ್ನು ನೋಡಿ ಆತನು ಹೆದರಿದನು. ಯಾವ ಸ್ಥಳದಲ್ಲಿಯೂ ನಿಲ್ಲಲಾರದಷ್ಟರಮಟ್ಟಿಗೆ ಅವನ ಮನಸ್ಸು ಚಂಚಲವಾಯಿತು. ವಾಲಿಗೆ ಪ್ರವೇಶಿಸಲು ಆಗದ ಸ್ಥಳ ಇದು. ಅಂತಹ ಪ್ರದೇಶದಲ್ಲಿ ನಾರುಮಡಿಯನ್ನುಟ್ಟು ಬಿಲ್ಲುಬಾಣಗಳನ್ನು ಧರಿಸಿದ್ದ ಅವರು ತಿರುಗಾಡುತ್ತಿದ್ದುದನ್ನು ಕಂಡು, ಕಪಟವೇಷವನ್ನು ಧರಿಸಿಬಂದ ವಾಲಿಯ ಗೂಢಚಾರರೆ ಅವರೆಂದು ಆ ಕಪಿವೀರನು ಶಂಕಿಸಿದನು. ಹೆದರಿ ಸುಗ್ರೀವನು ಆ ಬೆಟ್ಟದ ಬೇರೊಂದು ಶಿಬಿರಕ್ಕೆ ಬಂದನು. ಮತಂಗಾಶ್ರಮದಲ್ಲಿ ಭಯದಿಂದ ಅಡಗಿದ್ದ ಅವನ ಅನುಚರರು, ಹೂಬಿಟ್ಟ ಮರಗಳನ್ನು ಮುರಿಯುತ್ತ, ಜಿಂಕೆ ಹುಲಿ ಮೊದಲಾದ ಮೃಗಗಳನ್ನು ಭಯಗೊಳಿಸುತ್ತ, ಸ್ಥಳದಿಂದ ಸ್ಥಳಕ್ಕೆ ನೆಗೆಯುತ್ತ ಅವನ ಸುತ್ತಲೂ ನೆರೆದು ನಿಂತರು.

ಆಗ ಮಾತನಾಡುವುದರಲ್ಲಿ ನಿಪುಣನಾದ ಹನುಮಂತನು ಹೆದರಿದ್ದ ಸುಗ್ರೀವನನ್ನು ಕುರಿತು "ಎಲೈ ಸೌಮ್ಯನೆ, ವಾಲಿಗಾಗಿ ಏಕೆ ಭಯಪಡುವೆ? ಈ ಋಷ್ಯಮೂಕ ಪರ್ವತದಲ್ಲಿ ವಾಲಿಯ ಭಯವೆಲ್ಲಿ ಬಂತು? ಚಪಲಚಿತ್ತನಾದ ನಿನ್ನನ್ನು ಶಾಖಾಮೃಗ ವೆಂದು ಹೇಳುವುದರಲ್ಲಿ ಸೋಜಿಗವೆಲ್ಲಿ ಬಂತು? ರಾಜನು ಬುದ್ಧಿ ಮತ್ತು ಜ್ಞಾನಗಳಿಂದ ಕೂಡಿದವನಾಗಿರಬೇಕು. ಹಾಗಿಲ್ಲದವನು ಪ್ರಜೆಗಳನ್ನು ರಂಜಿಸಲು ಹೇಗೆ ತಾನೆ ಸಾಧ್ಯ?" ಎಂದನು. ಹನುಮಂತನ ಮಾತುಗಳಿಂದ ಧೈರ್ಯಗೊಂಡ ಸುಗ್ರೀವನು ಅವನನ್ನು ಕುರಿತು "ಈ ಪುರುಷಶ್ರೇಷ್ಠರಿಗೆ ಅಗಲವಾದ ಕಣ್ಣುಗಳಿವೆ, ನೀಳವಾದ ತೋಳುಗಳಿವೆ. ಬಿಲ್ಲುಬಾಣಗಳನ್ನು ಧರಿಸಿರುವ ಅವರು ದೇವೇಂದ್ರನಿಗೆ ಸಮಾನರಾಗಿದ್ದಾರೆ. ಅವರನ್ನು ನೋಡಿದರೆ ಯಾರಿಗೆ ತಾನೆ ಭಯವಾಗದು? ಅವರನ್ನು ನಾನು ವಾಲಿಯ ಗೂಢಚಾರ ರೆಂದೆ ತಿಳಿಯುತ್ತೇನೆ. ಯಾರಿಗೆ ಹಗೆಗಳುಂಟೊ ಅಂಥವರು ತಮ್ಮ ಹಗೆಗಳು ಕಪಟ ವೇಷಗಳಿಂದ ಸಂಚರಿಸುತ್ತಿರುವರೆಂಬುದನ್ನು ತಿಳಿದಿರಬೇಕು. ಮೇಲಾಗಿ ಆ ವಾಲಿ ಮೇಧಾವಿ; ಹಾಗೂ ದೂರದರ್ಶಿ. ಆದ್ದರಿಂದ ನೀನು ಸಾಮಾನ್ಯನಂತೆ ವೇಷವನ್ನು ಧರಿಸಿ ಆ ವೀರರ ಇಂಗಿತವನ್ನು ತಿಳಿದು ಬಾ. ಅವರನ್ನು ಚೆನ್ನಾಗಿ ಪರಿಶೀಲಿಸಿ ಅವರ ಸ್ವಭಾವವನ್ನು ಅರಿಯಬೇಕು" ಎಂದನು. ಸುಗ್ರೀವನ ಅಪ್ಪಣೆಯಂತೆ ಹನುಮಂತನು ಋಷ್ಯಮೂಕ ಪರ್ವತದಿಂದ ರಾಮಲಕ್ಷ್ಮಣರಿದ್ದ ಸ್ಥಳಕ್ಕೆ ಹಾರಿ, ಕಪಿರೂಪವನ್ನು

ಬಿಟ್ಟು ಭಿಕ್ಷುರೂಪವನ್ನು ಧರಿಸಿದನು. ಅನಂತರ ರಾಮಲಕ್ಷ್ಮಣರ ಬಳಿಗೆ ಬಂದು ವಿನಯದಿಂದ ಅವರಿಗೆ ನಮಸ್ಕರಿಸಿ, ಮಾತನಾಡುವುದರಲ್ಲಿ ಚತುರನಾದ ಹನುಮಂತನು ಈ ರೀತಿ ನುಡಿದನು :

"ತಾಪಸವೇಷವನ್ನು ಧರಿಸಿ ರಾಜಋಷಿಗಳಂತಿರುವ ನೀವು ಯಾರು ? ಕಾಡಿನಲ್ಲಿ ಸಂಚರಿಸುತ್ತ ನೀವು ಈ ಪ್ರದೇಶಕ್ಕೆ ಏಕೆ ಬಂದಿರಿ ? ಹೊಂಬಣ್ಣದ ನಾರುಡೆಗಳನ್ನು ನೀವು ಉಟ್ಟಿರುವಿರಿ ; ಆದರೂ ನೀವು ನಿಟ್ಟುಸಿರು ಬಿಡುವುದೇಕೆ ? ರೂಪಸಂಪನ್ನರೂ ತೇಜಸ್ವಿಗಳೂ ಆದ ನೀವೇಕೆ ಬಿಲ್ಲುಬಾಣಗಳನ್ನು ಹಿಡಿದು ಕಾಡಿಗೆ ಬಂದಿರುವಿರಿ ? ನಿಮ್ಮ ಬರುವಿಕೆಯಿಂದ ಈ ಋಷ್ಯಮೂಕಪರ್ವತ ಕಾಂತಿಯುಕ್ತವಾಯಿತು. ರಾಜ್ಯಭಾರ ಮಾಡಲು ಯೋಗ್ಯರಾದ ನೀವು ಇಲ್ಲಿಗೆ ಬಂದಿರುವುದು ಯಾರ ಕುತೂಹಲವನ್ನಾದರೂ



ತನ್ನ ಪರಿಚಯವನ್ನೂ ತಾನು ಬಂದ ಕಾರ್ಯವನ್ನೂ ತಿಳಿಸಿ ಆಂಜನೇಯನು ಸುಮ್ಮನಾದನು.

ಕೆರಳಿಸುತ್ತದೆ. ಭೂಮಿಗೆ ಇಳಿದು ಬಂದ ಸೂರ್ಯ ಚಂದ್ರರಂತಿರುವ ನಿಮಗೆ ಈ ಜಟಿಯೇಕೆ? ನಿಮ್ಮನ್ನು ನೋಡಿದರೆ ಸಕಲ ಲೋಕವನ್ನು ಕಾಪಾಡಲು ಯೋಗ್ಯರಾಗಿರುವಂತೆ ಕಾಣುವಿರಿ. ಅಣ್ಣನಾದ ವಾಲಿಗೆ ಹೆದರಿ ಅವನಿಂದ ವಂಚಿತನಾಗಿರುವ ಅವನ ತಮ್ಮ ಸುಗ್ರೀವನು ನಿಮ್ಮ ಬಳಿಗೆ ನನ್ನನ್ನು ಕಳುಹಿಸಿದ್ದಾನೆ. ವಾಯುಪುತ್ರನಾದ ನಾನು ಧರ್ಮಾತ್ಮನಾದ ಸುಗ್ರೀವನ ಮಂತ್ರಿ. ನನ್ನ ಹೆಸರು ಹನುಮಂತ. ನಿಮ್ಮ ಸ್ನೇಹವನ್ನು ಬಯಸಿ ಆತನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದನು. ಕಾಮರೂಪಿಯಾದ ನಾನು ಭಿಕ್ಷುರೂಪವನ್ನು ಧರಿಸಿ ನಿಮ್ಮಲ್ಲಿಗೆ ಬಂದಿದ್ದೇನೆ" ಎಂದು ಮೊದಲಾಗಿ ತನ್ನ ಪರಿಚಯವನ್ನೂ ತಾನು ಬಂದ ಕಾರ್ಯವನ್ನೂ ತಿಳಿಸಿ ಆಂಜನೇಯನು ಸುಮ್ಮನಾದನು.

ಹನುಮಂತನ ಮಾತನ್ನು ಕೇಳಿ ರಾಮನ ಮುಖ ಸಂತೋಷದಿಂದ ಅರಳಿತು. ಆಗ ರಾಮನು ಲಕ್ಷ್ಮಣನನ್ನು ನೋಡಿ "ವತ್ಸ, ನಾವು ಯಾವ ಸುಗ್ರೀವನನ್ನು ಹುಡುಕುತ್ತಿದ್ದೆವೊ, ಆ ಸುಗ್ರೀವನ ಮಂತ್ರಿಯಾದ ಆಂಜನೇಯನೆ ನಮ್ಮ ಬಳಿಗೆ ಬಂದಿದ್ದಾನೆ. ಮಧುರವೂ ಸ್ನೇಹಪೂರ್ಣವೂ ಆದ ಇವನ ಮಾತುಗಳನ್ನು ಕೇಳಿದರೆ ಈತನು ನಾಲ್ಕು ವೇದಗಳನ್ನೂ ಅಧ್ಯಯನ ಮಾಡಿದಂತೆ ತೋರುತ್ತದೆ. ಇವನ ನುಡಿಯಲ್ಲಿ ಅಪಶಬ್ದ ಬಾರದಿರುವ ಕಾರಣ, ವ್ಯಾಕರಣವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಾನೆ. ಇಂತಹ ಮಂತ್ರಿಯನ್ನು ಪಡೆದ ಯಾವ ಅರಸನ ಕಾರ್ಯಗಳು ತಾನೆ ನೆರವೇರವು? ಯುಕ್ತವಾದ ಮಾತುಗಳಿಂದ ನಮ್ಮ ವಿಷಯವನ್ನು ಈತನಿಗೆ ತಿಳಿಸು" ಎಂದನು.

ಅನಂತರ ಲಕ್ಷ್ಮಣನು ಹನುಮಂತನನ್ನು ಕುರಿತು "ಕಪಿಶ್ರೇಷ್ಠ, ವಾನರ ವೀರನಾದ ಸುಗ್ರೀವನ ಗುಣಗಳು ಈ ಮೊದಲೆ ನಮಗೆ ತಿಳಿದು ಬಂದಿದ್ದುವು. ವೀರನಾದ ಆತನನ್ನೆ ನಾವು ಹುಡುಕುತ್ತ ಹೊರಟಿದ್ದೆವು. ಸುಗ್ರೀವನ ಸ್ನೇಹ ಬೆಳೆಸಲು ನಮಗೂ ಇಷ್ಟವುಂಟು. ಮಹಾತ್ಮನೂ ಧರ್ಮವತ್ಸಲನೂ ಆದ ದಶರಥನೆಂಬ ಚಕ್ರವರ್ತಿಯಿದ್ದನು. ಬಹು ಯಜ್ಞಗಳನ್ನು ಮಾಡಿ ದೇವತೆಗಳನ್ನು ಆತನು ತೃಪ್ತಿಗೊಳಿಸಿದನು. ಆ ದಶರಥನ ಹಿರಿಯ ಮಗನೆ ಈ ಶ್ರೀರಾಮಚಂದ್ರ. ತಂದೆಯ ಅಪ್ಪಣೆಯನ್ನು ಪಾಲಿಸಲು ರಾಜ್ಯತ್ಯಾಗಮಾಡಿ ನನ್ನೊಡನೆ ಈತನು ಕಾಡಿಗೆ ಬಂದಿದ್ದಾನೆ. ಸೂರ್ಯನನ್ನು ಕಾಂತಿ ಅನುಸರಿಸುವಂತೆ, ಇವನ ಹೆಂಡತಿಯಾದ ಸೀತೆ ಈ ಮಹಾತ್ಮನನ್ನು ಅನುಸರಿಸಿ ಬಂದಳು. ಈತನ ದಾಸ ನಾನು. ನನ್ನನ್ನು ಲಕ್ಷ್ಮಣನೆಂದು ಕರೆಯುತ್ತಾರೆ. ಐಶ್ವರ್ಯಹೀನನಾಗಿ, ರಾಜ್ಯಭ್ರಷ್ಟನಾದ ಈತನ ಹೆಂಡತಿಯನ್ನು ರಾಕ್ಷಸರು ಕದ್ದುಕೊಂಡು ಹೋಗಿದ್ದಾರೆ. ಎಷ್ಟು ಹುಡುಕಿದರೂ ಆ ರಾಕ್ಷಸನಾರೆಂಬುದು ಇದುವರೆಗೂ ನಮಗೆ ತಿಳಿದುಬರಲಿಲ್ಲ. ಸೀತೆಯನ್ನು ಹುಡುಕಿಸುವ ಕಾರ್ಯಕ್ಕೆ ಸುಗ್ರೀವನೇ ತಕ್ಕವನೆಂದು ಕಬಂಧನು ನುಡಿಯಲು, ಆ ಕಪಿವೀರನನ್ನು ಹುಡುಕುತ್ತ ಇಲ್ಲಿಗೆ ಬಂದಿದ್ದೇವೆ. ಲೋಕದ ಜೀವಿಗಳೆಲ್ಲರಿಗೂ ಆಶ್ರಯನಾದ ಶ್ರೀರಾಮನು ಸುಗ್ರೀವನ ರಕ್ಷಣೆಯನ್ನು ಬಯಸಿ ಬಂದಿದ್ದಾನೆ!" ಎಂದನು. ಲಕ್ಷ್ಮಣನ ಮಾತಿನಿಂದ, ಸುಗ್ರೀವನ ಕಾರ್ಯ ಸಿದ್ಧಿಸಿತೆಂದು ಹನುಮಂತನು ಸಂತೋಷಪಟ್ಟನು.

ಪ್ರತ್ಯುತ್ತರವಾಗಿ ಹನುಮಂತನು "ಬುದ್ಧಿಶಾಲಿಗಳೂ ಇಂದ್ರಿಯಗಳನ್ನು ಗೆದ್ದವರೂ ಆದ ನೀವು ಸುಗ್ರೀವನ ಅದೃಷ್ಟದಿಂದ ಕಣ್ಣಿಗೆ ಬಿದ್ದಿರಿ. ಸುಗ್ರೀವನೂ ಶ್ರೀರಾಮಚಂದ್ರನಂತೆಯೇ ರಾಜ್ಯಭ್ರಷ್ಟನಾಗಿದ್ದಾನೆ. ಅಣ್ಣನಾದ ವಾಲಿಗೂ ಸುಗ್ರೀವನಿಗೂ ತುಂಬ ದ್ವೇಷ. ಅಲ್ಲದೆ ವಾಲಿ ಸುಗ್ರೀವನ ಹೆಂಡತಿಯನ್ನು ಬೇರೆ ಅಪಹರಿಸಿದ್ದಾನೆ. ಸೂರ್ಯಪುತ್ರನಾದ ಆತನು ಸೀತೆಯನ್ನು ಹುಡುಕುವ ಕಾರ್ಯದಲ್ಲಿ ನಿಮಗೆ ನಿಸ್ಸಂದೇಹವಾಗಿ ನೆರವಾಗುತ್ತಾನೆ" ಎನ್ನಲು ಅವನ ಮಾತನ್ನು ಕೇಳಿ ಸಂತೋಷಗೊಂಡ ರಾಮಲಕ್ಷ್ಮಣರು ಆತನ ಸೂಚನೆಯಂತೆಯೆ ಅವನ ಹೆಗಲನ್ನೇರಿ ಸುಗ್ರೀವನ ಬಳಿಗೆ ಬಂದರು.

ಪರ್ವತದ ಶಿಖರವನ್ನು ಸೇರಿ, "ಕಾಡಿನಲ್ಲಿ ಹೆಂಡತಿಯನ್ನು ಕಳೆದುಕೊಂಡು, ಸುಗ್ರೀವನ ಸ್ನೇಹವನ್ನು ಬಯಸಿ, ದಶರಥನ ಮಗನಾದ ಶ್ರೀರಾಮಚಂದ್ರನು ತಮ್ಮನಾದ ಲಕ್ಷ್ಮಣನೊಡನೆ ಬಂದಿದ್ದಾನೆ" ಎಂದು ಹನುಮಂತನು ಸುಗ್ರೀವನಿಗೆ ತಿಳಿಸಿದನು. ಹನುಮಂತನ ಮಾತನ್ನು ಕೇಳಿ ರಾಮಲಕ್ಷ್ಮಣರ ವಿಷಯದಲ್ಲಿ ಸುಗ್ರೀವನಿಗಿದ್ದ ಹೆದರಿಕೆ ಬಿಟ್ಟುಹೋಯಿತು. ತನ್ನಲ್ಲಿಗೆ ಬಂದ ರಾಮನಿಗೆ ಸುಗ್ರೀವನು "ರಾಮಚಂದ್ರ, ನೀನು ಧರ್ಮಾತ್ಮ; ಹಾಗೂ ಪರಾಕ್ರಮಿ. ವಾಯುಪುತ್ರನಾದ ಆಂಜನೇಯನು ನಿನ್ನ ಗುಣಗಳನ್ನು ನನಗಾಗಲೆ ತಿಳಿಸಿದ್ದಾನೆ. ನೀನು ನನ್ನ ಸ್ನೇಹ



ಹನುಮಂತನ ಮಾತನ್ನು ಕೇಳಿ ರಾಮಲಕ್ಷ್ಮಣರ ವಿಷಯದಲ್ಲಿ ಸುಗ್ರೀವನಿಗಿದ್ದ ಹೆದರಿಕೆ ಬಿಟ್ಟುಹೋಯಿತು.

ವನ್ನು ಬಯಸಿ ಬಂದಿರುವೆಯಲ್ಲವೆ? ಇಗೋ ಈ ನನ್ನ ಭುಜಗಳನ್ನು ಪ್ರಸರಿಸಿದ್ದೇನೆ; ನನ್ನನ್ನು ಆಲಿಂಗಿಸಿಕೊ. ನನ್ನ ಕೈಯನ್ನು ಹಿಡಿದು, ನಿನ್ನ ಸ್ನೇಹವನ್ನು ಸ್ಥಿರಪಡಿಸು!" ಎಂದನು.

ಸುಗ್ರೀವನ ಮಾತನ್ನು ಕೇಳಿ ತೃಪ್ತಿಗೊಂಡ ಶ್ರೀರಾಮನು ಅವನ ಕೈಯನ್ನು ಹಿಡಿದುಕೊಂಡು ಅವನನ್ನು ದೃಢವಾಗಿ ಆಲಿಂಗಿಸಿಕೊಂಡನು. ಆ ಸಮಯದಲ್ಲಿ ಹನುಮಂತನು ತನ್ನ ನಿಜರೂಪವನ್ನು ಧರಿಸಿ ಅಗ್ನಿಯನ್ನು ಪ್ರಜ್ವಲಗೊಳಿಸಿದನು. ಗಂಧಪುಷ್ಪಗಳಿಂದ ಪೂಜಿಸಿದ ಅಗ್ನಿಯನ್ನು ಆಂಜನೇಯನು ಅವರ ನಡುವೆ ಇಟ್ಟನು. ರಾಮ ಸುಗ್ರೀವರು ಅಗ್ನಿಯನ್ನು ಪ್ರದಕ್ಷಿಣೆ ಮಾಡಿ ಅಗ್ನಿಸಾಕ್ಷಿಕವಾಗಿ ತಮ್ಮ ಸ್ನೇಹವನ್ನು ದೃಢಪಡಿಸಿಕೊಂಡರು. ಆಗ ಸುಗ್ರೀವನು "ನೀನು ನನಗೆ ಪ್ರಿಯತಮ ನಾದ ಸ್ನೇಹಿತನಾಗಿರುವೆ. ಇನ್ನು ಮುಂದೆ ನಾವಿಬ್ಬರೂ ಸುಖದಲ್ಲಿ ಸಮಾನರಷ್ಟೆ" ಎಂದು ಪ್ರತಿಜ್ಞೆ ಮಾಡಿದನು. ಶ್ರೀರಾಮನೂ ಅದೇ ರೀತಿಯಾಗಿ ಪ್ರತಿಜ್ಞೆಮಾಡಿದನು. ನೆಲದ ಮೇಲೆ ಪಸರಿಸಿದ್ದ ಹೂ ತುಂಬಿದ ತಳಿರು ಕೊಂಬೆಯ ಮೇಲೆ ಅವರೆಲ್ಲರೂ ಕುಳಿತ ತರುವಾಯ ಸುಗ್ರೀವನು ಶ್ರೀರಾಮನನ್ನು ಕುರಿತು "ರಾಮಚಂದ್ರ, ವಾಲಿ ಯಿಂದ ನಾನು ವಂಚಿತನಾಗಿದ್ದೇನೆ. ಅವನಿಂದ ನನ್ನ ಹೆಂಡತಿ ಅಪಹೃತಳಾಗಿದ್ದಾಳೆ. ಅಣ್ಣನಾದ ವಾಲಿಗೆ ಹೆದರಿ ನಾನು ಕಾಡಿನಲ್ಲಿ ವಾಸಿಸುತ್ತಿದ್ದೇನೆ. ವಾಲಿಯ ಭಯ ನಿನಗಿಲ್ಲದಂತೆ ಮಾಡುವೆನೆಂದು ನನಗೆ ಅಭಯವನ್ನು ಕೊಡು" ಎಂದನು. ಶ್ರೀರಾಮನು ಮುಗುಳುನಗೆ ಸೂಸುತ್ತ ಸುಗ್ರೀವನಿಗೆ "ವಾನರಶ್ರೇಷ್ಠ, ವಜ್ರಾಯುಧಕ್ಕೆ ಸಮಾನ ವಾದ ನನ್ನ ಬಾಣಗಳು ರೋಷಗೊಂಡ ಸರ್ಪಗಳಂತೆ ವಾಲಿಯ ಮೇಲೆ ಬಿದ್ದು ಅವನನ್ನು ನೆಲಕ್ಕೆ ಕೆಡಹುವುದನ್ನು ನೀನೇ ನೋಡುವೆ" ಎಂದು ನಂಬುಗೆಯಿತ್ತನು. ಶ್ರೀರಾಮನ ನುಡಿ ಕೇಳಿ ಸುಗ್ರೀವನು ಹರ್ಷಗೊಂಡನು. ರಾಮಸುಗ್ರೀವರಿಗೆ ಸ್ನೇಹವಾದ ಕಾಲ ದಲ್ಲಿಯೆ ಸೀತೆಗೂ ರಾವಣನಿಗೂ ಎಡಗಣ್ಣು ಏಕಕಾಲದಲ್ಲಿ ಅದುರಿತು.

---

೨

# ಸಪ್ತ ಸಾಲ ಭೇದನ

ಆ ಬಳಿಕ ಸುಗ್ರೀವನು "ಸೀತಾದೇವಿ ಸ್ವರ್ಗದಲ್ಲಿರಲಿ ಪಾತಾಳದಲ್ಲಿರಲಿ; ಎಲ್ಲಿದ್ದರೂ ಆಕೆಯನ್ನು ಸತ್ಯವಾಗಿ ಜಾಗ್ರತೆಯಾಗಿ ತರಿಸಿಕೊಡುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು. ಅಲ್ಲದೆ ರಾವಣನು ಸೀತೆಯನ್ನು ಕೊಂಡೊಯ್ಯುತ್ತಿದ್ದಾಗ, ಆಕೆ ರಾಮಾ ಲಕ್ಷ್ಮಣಾ ಎಂದು ಗೋಳಿಡುತ್ತಾ ಬೆಟ್ಟದ ತುದಿಯಲ್ಲಿದ್ದ ತಮ್ಮನ್ನು ನೋಡಿ, ಸೆರಗಿನಲ್ಲಿ ಸುತ್ತಿ ಆಭರಣಗಳನ್ನು ತಮ್ಮ ಕಡೆ ಎಸೆದಳೆಂದೂ ಅವು ತಮ್ಮ ಬಳಿ ಇರುವುವೆಂದೂ ಬಿನ್ನೈಸಿಕೊಂಡನು. ಈ ಶುಭಸಮಾಚಾರವನ್ನು ಕೇಳಿದೊಡನೆಯೆ ತನ್ನ ಪ್ರಿಯೆಯ ಆಭರಣಗಳನ್ನು ನೋಡಲು ಶ್ರೀರಾಮನ ಮನಸ್ಸು ತವಕಗೊಂಡಿತು. ರಾಮನ ಕಾತರ ವನ್ನು ಕಂಡು ಸುಗ್ರೀವನು ಉತ್ತರೀಯದಲ್ಲಿ ಕಟ್ಟಿರಿಸಿದ್ದ ಆ ಒಡವೆಗಳನ್ನು ತರಿಸಿದನು.

ಒಡವೆಗಳನ್ನು ನೋಡುತ್ತಲೆ ಮಂಜುಮುಸುಕಿದ ಚಂದ್ರನಂತೆ ಶ್ರೀರಾಮನು ಕಂಬನಿದುಂಬಿದನು. ಸೀತೆಯಲ್ಲಿದ್ದ ಪ್ರೇಮದಿಂದ ಶ್ರೀರಾಮಚಂದ್ರನು ಕಣ್ಣೀರು ಬಿಡುತ್ತ, ಕ್ಷತ್ರಿಯನಿಗೆ ಸಹಜವಾದ ಧೈರ್ಯವನ್ನು ಕಳೆದುಕೊಂಡು ಭೂಮಿಯಲ್ಲಿ ಬಿದ್ದುಬಿಟ್ಟನು. ಸ್ವಲ್ಪಕಾಲದ ಮೇಲೆ ಚೇತರಿಸಿಕೊಂಡು, ಹುತ್ತದಲ್ಲಿರುವ ಹಾವಿನಂತೆ ನಿಟ್ಟುಸಿರು ಬಿಡುತ್ತ, "ಲಕ್ಷ್ಮಣ, ಸೀತೆಯ ಉತ್ತರೀಯವನ್ನೂ ಮತ್ತು ಆಭರಣ ಗಳನ್ನೂ ನೋಡು" ಎಂದು ಗೋಳಾಡತೊಡಗಿದನು. ರಾಮನ ಮಾತಿಗೆ ಲಕ್ಷ್ಮಣನು ಹೇಳಿದನು: "ಅಣ್ಣ, ನಾನು ದೇವಿಯ ಕರ್ಣಭೂಷಣಗಳನ್ನಾಗಲಿ ಕೇಯೂರಗಳ ನ್ನಾಗಲಿ ಕಂಡರಿಯೆ. ದಿನದಿನವೂ ಅತ್ತಿಗೆಯ ಪಾದಗಳಿಗೆ ನಮಸ್ಕರಿಸುತ್ತಿದ್ದ ನನಗೆ ನೂಪುರಗಳ ಪರಿಚಯ ಮಾತ್ರ ಉಂಟು."

ಅನಂತರ ರೋಷದಿಂದ ಕುದಿದುಹೋದ ರಾಮನು ಸುಗ್ರೀವನನ್ನು ಕುರಿತು "ಸುಗ್ರೀವ, ರಾಕ್ಷಸನು ಕದ್ದುಕೊಂಡು ಹೋಗುತ್ತಿದ್ದ ನನ್ನ ಪ್ರಿಯೆಯನ್ನು ನೀನೆಲ್ಲಿ ನೋಡಿದೆ? ಹೇಳು. ಆ ಕ್ರೂರ ರಕ್ಕಸನು ಎಲ್ಲಿರುವನು? ಸೀತೆಯನ್ನು ಕದ್ದೊಯ್ದ ಅವನು ತನ್ನ ನಾಶಕ್ಕಾಗಿ ಮೃತ್ಯುವಿನ ಮನೆಯ ಬಾಗಿಲನ್ನೆ ತೆರೆದುಕೊಂಡು ಹೋಗಿ ದ್ದಾನೆ!" ಹೀಗೆಂದು ನುಡಿದು ಮತ್ತೆ ಕಣ್ಣೀರುದುಂಬಿದನು.

ರಾಮನ ಮಾತನ್ನು ಕೇಳಿ ಒತ್ತರಿಸಿ ಬರುತ್ತಿದ್ದ ದುಃಖವನ್ನು ತಡೆದುಕೊಂಡು ಗದ್ಗದಸ್ವರದಿಂದ ಸುಗ್ರೀವನು ಹೇಳಿದನು: "ಎಲೈ ಅರಿಂದಮ, ಆ ರಾಕ್ಷಸನಿರುವ ಸ್ಥಳ ವನ್ನಾಗಲಿ ಅವನ ವಂಶವನ್ನಾಗಲಿ ನಾನು ಅರಿಯೆ. ಆದರೆ ಸೀತೆಯನ್ನು ನೀನು ಮರಳಿ ಪಡೆಯಲು ಯತ್ನಿಸುತ್ತೇನೆಂದು ಮಾತ್ರ ಪ್ರತಿಜ್ಞೆ ಮಾಡುತ್ತೇನೆ. ಆದ್ದರಿಂದ ಶೋಕ ವನ್ನು ಬಿಡು. ರಾವಣನನ್ನು ಕೊಂದು ನಿನ್ನ ಪೌರುಷವನ್ನು ಮೆರೆಯಲು ಬಹುಬೇಗ

ಅವಕಾಶವನ್ನು ಕಲ್ಪಿಸಿಕೊಡುತ್ತೇನೆ. ನಿನ್ನಂಥವರು ದೈನ್ಯವೃತ್ತಿಯನ್ನು ಬಿಟ್ಟು ಧೈರ್ಯವನ್ನು ಅವಲಂಬಿಸಬೇಕು. ನಿನ್ನಂತೆ ನನ್ನ ಹೆಂಡತಿ ಅಪಹೃತಳಾಗಿದ್ದರೂ ನಾನು ಶೋಕಿಸುತ್ತ ಕುಳಿತಿಲ್ಲ; ಧೈರ್ಯವನ್ನು ಬಿಟ್ಟಿರುವುದಿಲ್ಲ. ಸಾಮಾನ್ಯ ಕಪಿಯಾದ ನಾನೇ ಹೀಗಿರುವಲ್ಲಿ ಮಹಾತ್ಮನೂ ವಿನೀತನೂ ಧೈರ್ಯಶಾಲಿಯೂ ಆದ ನೀನು ಕಣ್ಣೀರು ಬಿಡುವುದು ಯೋಗ್ಯವಲ್ಲ. ಆದ್ದರಿಂದ ಪೌರುಷವನ್ನು ಆಶ್ರಯಿಸು; ದುಃಖಕ್ಕೆ ಸ್ಥಳಕೊಡಬೇಡ, ಏಕೆಂದರೆ ದುಃಖಿಗಳಿಗೆ ಸುಖವಿಲ್ಲ. ರಾಮಚಂದ್ರ, ಸ್ನೇಹ



ಸುಗ್ರೀವನು ಉತ್ತರೀಯದಲ್ಲಿ ಕಟ್ಟಿರಿಸಿದ್ದ ಆ ಒಡವೆಗಳನ್ನು ತರಿಸಿದನು

ಭಾವದಿಂದ ಈ ಮಾತುಗಳನ್ನು ನಿನಗೆ ಹೇಳಿದೆನೆ ಹೊರತು ಉಪದೇಶದ ಉದ್ದೇಶ ದಿಂದಲ್ಲ."

ಸುಗ್ರೀವನ ಮಧುರವಾದ ಮಾತುಗಳು ರಾಮನಿಗೆ ಸಮಾಧಾನವನ್ನು ತಂದುವು. ವಸ್ತ್ರದ ಕೊನೆಯಿಂದ ಮುಖವನ್ನು ಒರಸಿಕೊಂಡು ರಾಮನು ಸುಗ್ರೀವನನ್ನು ಬಿಗಿಯಾಗಿ ಅಪ್ಪಿಕೊಂಡನು. "ಅಯ್ಯಾ, ಕಪಿವೀರ, ನನಗೆ ನಿನ್ನಂಥ ಬಂಧು ದೊರಕುವುದು ದುರ್ಲಭ. ಸೀತೆಯನ್ನು ಹುಡುಕಿಸಲು ಎಲ್ಲ ಪ್ರಯತ್ನಗಳನ್ನೂ ಮಾಡು. ಮಳೆಗಾಲದಲ್ಲಿ ನೆನೆದ ಭೂಮಿಯಂತೆ ನಿನ್ನ ಕಾರ್ಯವೆಲ್ಲ ಫಲಿಸುತ್ತದೆ. ನಾನೂ ನನ್ನ ಪ್ರತಿಜ್ಞೆಯನ್ನು ನಡೆಸಿಕೊಡುತ್ತೇನೆ."

ಈ ಮಾತುಗಳನ್ನು ಕೇಳಿ ಹರ್ಷಗೊಂಡ ಸುಗ್ರೀವನು ರಾಮನಲ್ಲಿ ತನ್ನ ದುಃಖವನ್ನು ತೋಡಿಕೊಂಡನು. "ರಾಮಚಂದ್ರ, ನಿನ್ನ ಸಹಾಯವೊಂದಿದ್ದರೆ ಸ್ವರ್ಗವನ್ನೇ ಪಡೆಯುವ ಯೋಗ್ಯತೆಯುಂಟಾಗುವಾಗ ಈ ಕಪಿರಾಜ್ಯ ಸಂಪಾದನೆ ಎಷ್ಟರದು! ಈಗ ನಾನು ಅಣ್ಣನಾದ ವಾಲಿಯಿಂದ ರಾಜ್ಯಭ್ರಷ್ಟನಾಗಿದ್ದೇನೆ. ನನ್ನ ಹೆಂಡತಿಯನ್ನು ಅವನು ಅಪಹರಿಸಿದ್ದಾನೆ. ವಾಲಿಯ ಭಯದಿಂದ ನಾನು ಈ ಋಷ್ಯಮೂಕಪರ್ವತದಲ್ಲಿ ಸಂಚರಿಸುತ್ತಿದ್ದೇನೆ. ಅವನ ವಿಷಯದಲ್ಲಿ ನೀನು ನನಗೆ ಅಭಯವನ್ನು ಕೊಡಬೇಕು." ಹೀಗೆ ನುಡಿಯುತ್ತಿದ್ದಂತೆಯೆ ಆ ಕಪಿವೀರನ ಕೆನ್ನೆಯ ಮೇಲೆ ಕಣ್ಣೀರ ಹೊಳೆ ನೆರೆಯುಕ್ಕಿದಂತೆ ಹರಿಯಿತು. ಮತ್ತೆ ಬಾಯಿಂದ ಮಾತು ಹೊರಡಲಿಲ್ಲ. ಒತ್ತಿಬರುವ ದುಃಖವನ್ನು ಹೇಗೋ ತಡೆದುಕೊಂಡು ತಾನು ಬದುಕುವುದೂ ಸುಖವಾಗಿರುವುದೂ ವಾಲಿವಧೆಯನ್ನೇ ಅವಲಂಬಿಸಿದೆಯೆಂದು ಹೇಳಿಕೊಂಡನು. ರಾಮನು ಸುಗ್ರೀವನಿಗೆ ಅಭಯಕೊಟ್ಟು, ಅಣ್ಣತಮ್ಮಂದಿರಿಗೆ ವೈರವುಂಟಾಗಲು ಕಾರಣವನ್ನು ವಿಶದವಾಗಿ ತಿಳಿಸಬೇಕೆಂದು ಕೇಳಿದನು. ಶ್ರೀರಾಮನ ಕೋರಿಕೆಯಂತೆ ಸುಗ್ರೀವನು ತನ್ನ ಪೂರ್ವ ವೃತ್ತಾಂತವನ್ನು ಈ ರೀತಿಯಾಗಿ ತಿಳಿಸಿದನು :

"ಅಣ್ಣನಾದ ವಾಲಿ ನನಗೂ ನನ್ನ ತಂದೆಗೂ ಅತ್ಯಂತ ಪ್ರಿಯನಾಗಿದ್ದನು. ನನ್ನ ತಂದೆ ಋಕ್ಷರಜಸ್ಸು ಕಾಲವಾಗಲು ಮಂತ್ರಿಗಳು ವಾಲಿಯನ್ನು ಕಪಿರಾಜ್ಯದಲ್ಲಿ ಅಭಿಷೇಕ ಮಾಡಿದರು. ತಾತಮುತ್ತಾತಂದಿರ ಕಾಲದಿಂದ ಬಂದ ರಾಜ್ಯವನ್ನು ಕಾಪಾಡುತ್ತಿದ್ದ ಅಣ್ಣನಿಗೆ ನಾನು ಎಲ್ಲ ಕಾಲಗಳಲ್ಲಿಯೂ ವಿಧೇಯನಾಗಿಯೇ ಇದ್ದೆ. ಹೀಗಿರಲು ಅಣ್ಣನಾದ ವಾಲಿಗೂ ದುಂದುಭಿಯೆಂಬ ರಾಕ್ಷಸನಿಗೂ ಕಡುಹಗೆಯುಂಟಾಯಿತು. ಒಮ್ಮೆ ದುಂದುಭಿ ಕಿಷ್ಕಿಂಧೆಯ ಹೆಬ್ಬಾಗಿಲ ಬಳಿಗೆ ಬಂದು ಯುದ್ಧಕ್ಕೆ ಬರಬೇಕೆಂದು ವಾಲಿಯನ್ನು ಕರೆದು ಸಿಂಹನಾದಮಾಡಿದನು. ಆಗ ಎಲ್ಲರೂ ಮಲಗಿ ನಿದ್ರೆ ಹೋಗುತ್ತಿದ್ದ ಸಮರಾತ್ರಿಯಾಗಿತ್ತು. ಆ ಭಯಂಕರವಾದ ಧ್ವನಿಯನ್ನು ಕೇಳಿ ರೋಷದಿಂದ ಹುಚ್ಚೆದ್ದ ವಾಲಿ, ನಾನೂ ಹೆಂಗಸರೂ ಅವನನ್ನು ತಡೆಯುತ್ತಿದ್ದರೂ ನಮ್ಮನ್ನು ಒತ್ತರಿಸಿ ಯುದ್ಧಕ್ಕೆ ಹೊರಟನು. ಅಣ್ಣನಲ್ಲಿದ್ದ ಸಹಜವಾದ ಪ್ರೇಮದಿಂದ ನಾನೂ ಅವನನ್ನು ಹಿಂಬಾಲಿಸಿದೆ. ನಮ್ಮಿಬ್ಬರನ್ನು ನೋಡಿದೊಡನೆಯೆ ಆ ರಾಕ್ಷಸನು ಓಡತೊಡಗಿದನು. ಅವನನ್ನು ಹಿಂಬಾಲಿಸಿ ನಾವೂ ಓಡತೊಡಗಿದೆವು,

ಆಗ ಮಾರ್ಗವೂ ಚಂದ್ರನಿಂದ ಪ್ರಕಾಶಮಾನವಾಗಿತ್ತು. ಓಡುತ್ತಿದ್ದ ರಾಕ್ಷಸನು ದುರ್ಗಮವಾದ ಮತ್ತು ಹುಲ್ಲಿನಿಂದ ತುಂಬಿದ ದೊಡ್ಡದೊಂದು ಬಿಲವನ್ನು ಹೊಕ್ಕನು. ನಾವೂ ಆ ಬಿಲದ ಬಳಿಗೆ ಬಂದೆವು. ಆಗ ಕೋಪಗೊಂಡ ವಾಲಿ 'ಸುಗ್ರೀವ, ನಾನು ಬಿಲವನ್ನು ಹೊಕ್ಕು ಈ ರಾಕ್ಷಸನನ್ನು ಕೊಂದು ಬರುವವರೆಗೆ ನೀನು ಆತಂಕಗೊಳ್ಳದೆ ಇಲ್ಲಿಯೆ ಇರು' ಎಂದು ಅಪ್ಪಣೆಮಾಡಿದನು. ನಾನು ಅವನನ್ನು ಹಿಂಬಾಲಿಸುವೆನೆಂದು ಎಷ್ಟೇ ಬೇಡಿಕೊಂಡರೂ ಒಪ್ಪದೆ ನನ್ನ ಮೇಲೆ ಆಣೆಯಿಟ್ಟು ವಾಲಿ ಬಿಲವನ್ನು ಹೊಕ್ಕನು. ಬಿಲವನ್ನು ಹೊಕ್ಕ ನಮ್ಮಣ್ಣ ಒಂದು ವರ್ಷವಾದರೂ ಬಿಲದಿಂದ ಹಿಂದಿರುಗಲಿಲ್ಲ. ಅಣ್ಣನಲ್ಲಿದ್ದ ಪ್ರೇಮದಿಂದ ಅವನಿಗೆ ಕೇಡಾಗಿರಬಹುದೆಂದು ನಾನೂ ಊಹಿಸಿದೆ. ಬಿಲದಿಂದ ಹೊರಟ ನೊರೆ ನೆತ್ತರು ನನ್ನ ಊಹೆಯನ್ನು ಬಲಪಡಿಸಿತು. ಅಲ್ಲದೆ ಬಿಲದಿಂದ ರಾಕ್ಷಸರ ಭಯಂಕರವಾದ ಗರ್ಜನೆಯ ಧ್ವನಿ ಕೇಳಿಬರುತ್ತಿತ್ತು. ಬಿಲದಿಂದ ಹೊರಟುಬರುತ್ತಿದ್ದ ರಕ್ತವನ್ನೂ ಕಂಡು, ಧ್ವನಿಯನ್ನೂ ಕೇಳಿ ವಾಲಿ ಮಡಿದನೆಂದೇ ನಿಶ್ಚೈಸಿದೆನು. ಆ ಬಿಲದ ಬಾಗಿಲಿಗೆ ದೊಡ್ಡದೊಂದು ಬಂಡೆಯನ್ನೊಡ್ಡಿ, ಬಹು ಸಂಕಟದಿಂದ ರಾಜಧಾನಿಗೆ ಹಿಂದಿರುಗಿ ಬಂದೆ. ಈ ವರ್ತಮಾನವನ್ನು ಕೇಳಿ ಮಂತ್ರಿಗಳು ನನ್ನನ್ನೇ ರಾಜ್ಯದಲ್ಲಿ ಅಭಿಷೇಕಿಸಿದರು. ಆದರೆ ವಾಲಿ ಕೆಲಕಾಲದ ಮೇಲೆ ರಾಕ್ಷಸನನ್ನು ಕೊಂದು ನಗರಿಗೆ ಹಿಂದಿರುಗಿ ಬಂದು, ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದ ನನ್ನನ್ನು ನೋಡಿ ಕೋಪಗೊಂಡನು. ನನ್ನ ಮಂತ್ರಿಗಳನ್ನು ಸೆರೆಯಲ್ಲಿಡಿಸಿದನು. ಆಡಬಾರದ ಮಾತುಗಳನ್ನು ಆಡಿದನು. ಅಣ್ಣನನ್ನು ಮರ್ಯಾದೆ ಯಿಂದ ಕಂಡು ಆತನಿಗೆ ನಮಸ್ಕರಿಸಿದರೂ ಕೋಪಗ್ರಸ್ತನಾದ ಅವನು ನನ್ನನ್ನು ಹರಸಲಿಲ್ಲ, ಅನುಗ್ರಹಿಸಲಿಲ್ಲ.

"ಅನಂತರ ರೋಷಗೊಂಡ ವಾಲಿಯನ್ನು ಸಮಾಧಾನಗೊಳಿಸಿ, ನಡೆದ ವಿಷಯ ವನ್ನು ಅವನಿಗೆ ತಿಳಿಸಿ, ಅಣ್ಣನ ಕ್ಷಮೆಯನ್ನು ಬೇಡಿದೆ. ಅವನ ರಾಜ್ಯವನ್ನು ಅವನಿಗೊಪ್ಪಿಸುವೆನೆಂದೆ. ಆದರೆ ವಾಲಿ ನನ್ನನ್ನು ಪರಿಪರಿಯಾಗಿ ನಿಂದಿಸಿದನು. ಮಂತ್ರಿ ಗಳನ್ನೂ ಪುರಜನರನ್ನೂ ಬರಮಾಡಿಕೊಂಡು, ಹಿಂದೆ ನಡೆದುದೆಲ್ಲವನ್ನೂ ಅವರಿಗೆ ತಿಳಿಸಿ ನಮ್ಮ ಅಣ್ಣ ಮತ್ತೆ ಈ ರೀತಿ ನುಡಿದನು: ಆ ಮಾಯಾವಿಯಾದ ರಾಕ್ಷಸನನ್ನು ಹುಡುಕುವುದರಲ್ಲಿಯೇ ಒಂದು ವರ್ಷ ಕಳೆದುಹೋಯಿತು. ಆ ಬಳಿಕ ಅವನನ್ನೂ ಇನ್ನುಳಿದ ರಾಕ್ಷಸರನ್ನೂ ಸುಲಭವಾಗಿ ಕೊಂದುಬಿಟ್ಟೆ. ಹಗೆಯನ್ನು ಕೊಂದು ಬಿಲದ ಬಾಗಿಲ ಬಳಿಗೆ ಬರುವ ವೇಳೆಗೆ ದೊಡ್ಡ ಬಂಡೆಯಿಂದ ಅದು ಮುಚ್ಚಿಹೋಗಿತ್ತು. 'ಸುಗ್ರೀವ, ಸುಗ್ರೀವ' ಎಂದು ಕೂಗಿದರೂ ಉತ್ತರವೆ ಬರಲಿಲ್ಲ. ಇದರಿಂದ ದುಃಖಗೊಂಡ ನಾನು ಬಂಡೆಯನ್ನೊದ್ದು ಹೊರಗೆ ಬಂದೆ. ಒಡಹುಟ್ಟಿದವನಲ್ಲಿರಬೇಕಾದ ಪ್ರೇಮವನ್ನು ತೊರೆದು ಈ ದ್ರೋಹಿ ನನ್ನ ರಾಜ್ಯವನ್ನು ಅಪಹರಿಸಿದ್ದಾನೆ." ಹೀಗೆಂದು ನುಡಿದು ವಾಲಿ ಏಕವಸ್ತ್ರದಿಂದ ನನ್ನನ್ನು ರಾಜ್ಯದಿಂದ ಹೊರಡಿಸಿದನು. ಅಲ್ಲದೆ ನನ್ನ ಹೆಂಡತಿಯನ್ನೂ ಅಪಹರಿಸಿದನು. ವಾಲಿಯ ಭಯದಿಂದ

ನಾನು ಋಷ್ಯಮೂಕಪರ್ವತದಲ್ಲಿ ವಾಸಮಾಡುತ್ತಿದ್ದೇನೆ. ಅವನನ್ನು ನಿಗ್ರಹಿಸಿ, ರಾಮಚಂದ್ರ ನನ್ನನ್ನು ಅನುಗ್ರಹಿಸು."

ಸುಗ್ರೀವನ ಮಾತನ್ನು ಕೇಳಿ ಶ್ರೀರಾಮನು ಮುಗುಳುನಗೆ ಸೂಸುತ್ತ "ಸೂರ್ಯನಂತೆ ಪ್ರಕಾಶವುಳ್ಳ ನನ್ನ ಬಾಣಗಳು ಕೆಟ್ಟನಡತೆಯಲ್ಲಿ ತೊಡಗಿರುವ ವಾಲಿಯನ್ನು ಬಹುಬೇಗ ಕೊಲ್ಲುತ್ತವೆ. ನಿನ್ನ ಹೆಂಡತಿಯನ್ನು ಕದ್ದಿರುವ ಆ ಪಾಪಿ ನನ್ನ ಕಣ್ಣಿಗೆ ಬೀಳುವವರೆಗೆ ಮಾತ್ರ ಜೀವಿಸಿರುತ್ತಾನೆ. ನನ್ನಂತೆ ಹೆಂಡತಿಯನ್ನು ಕಳೆದುಕೊಂಡು ಆಕೆಯ ಅಗಲಿಕೆಯಿಂದ ಸಂಕಟಪಡುತ್ತಿರುವ ನಿನ್ನನ್ನು ಈ ದುಃಖದಿಂದ ಪಾರುಮಾಡಿ ನಿನ್ನ ಕೋರಿಕೆಯನ್ನು ಈಡೇರಿಸುತ್ತೇನೆ" ಎಂದು ಅಭಯವನ್ನು ನೀಡಿದನು. ಆ ಭರವಸೆಯ ಮಾತನ್ನು ಕೇಳಿ ಸುಗ್ರೀವನ ಮುಖ ಸಂತೋಷದಿಂದ ಅರಳಿತು.

ಆದರೂ ರಾಮನ ಸಾಮರ್ಥ್ಯದಲ್ಲಿ ಶಂಕೆಗೊಂಡು ಸುಗ್ರೀವನು ಮತ್ತೆ ನುಡಿದನು: "ಪ್ರಳಯ ಕಾಲದ ಸೂರ್ಯನಂತೆ ಲೋಕಗಳನ್ನು ದಹಿಸುವ ಶಕ್ತಿ ನಿನ್ನ ಬಾಣಗಳಿಗುಂಟೆಂಬುದನ್ನು ನಾನು ಕೇಳಿಬಲ್ಲೆ; ಆದರೆ ವಾಲಿಯ ಧೈರ್ಯ ಮತ್ತು ಸ್ಥೈರ್ಯಗಳು ಲೋಕಪ್ರಸಿದ್ಧವಾಗಿವೆ. ಆತನು ಅನುದಿನವೂ ನಿತ್ಯಕರ್ಮಗಳನ್ನು ಆಚರಿಸಲು ನಾಲ್ಕು ಸಮುದ್ರಗಳಿಗೂ ಅನಾಯಾಸವಾಗಿ ಹಾರಿಹೋಗುತ್ತಾನೆ. ಬೆಟ್ಟವನ್ನು ಏರಿ ಅದರ ಶಿಖರಗಳನ್ನು ಅವು ಎಷ್ಟೇ ದೊಡ್ಡವಾದರೂ ಮೇಲಕ್ಕೆ ಹಾರಿಸಿ ಮತ್ತೆ ಅವುಗಳನ್ನು ಕೈಯಲ್ಲಿ ಹಿಡಿದುಕೊಳ್ಳುತ್ತಾನೆ. ವಾಲಿಯ ಪರಾಕ್ರಮ ದಿಂದ ಕಾಡಿನಲ್ಲಿ ಭಗ್ನವಾದ ಮರಗಳೆಷ್ಟೋ! ಸಾವಿರ ಆನೆಗಳ ಬಲವುಳ್ಳ, ವರುಣ ಹಿಮವಂತರನ್ನು ಹೆದರಿಸಿದ ದುಂದುಭಿಯೆಂಬ ರಾಕ್ಷಸನನ್ನು ವಾಲಿ ಯುದ್ಧದಲ್ಲಿ ನಿರಾಯಾಸವಾಗಿ ಕೊಂದುಹಾಕಿದ್ದಾನೆ. ಕೊಂದ ಬಳಿಕ ಆ ರಕ್ಕಸನ ದೇಹವನ್ನು ಒಂದು ಗಾವುದ ಎತ್ತರಕ್ಕೆ ಚಿಮ್ಮಿ, ಅದು ಮತಂಗಮುನಿಯ ಆಶ್ರಮದಲ್ಲಿ ಬೀಳುವಂತೆ ಮಾಡಿದ್ದಾನೆ. ವಾಲಿಯ ಈ ಅಕಾರ್ಯವನ್ನು ಕಂಡು ಅವನು ಆಶ್ರಮ ವನ್ನು ಪ್ರವೇಶಿಸಿದುದೇ ಆದರೆ ಸಾವ್ಯೆದುವನೆಂದು ಋಷಿ ಶಪಿಸಿದನು. ಅಂದಿನಿಂದ ಋಷಿಯ ಶಾಪಕ್ಕೆ ಅಂಜಿ ವಾಲಿ ಋಷ್ಯಮೂಕ ಪರ್ವತದ ಪ್ರದೇಶವನ್ನು ಪ್ರವೇಶ ಮಾಡುವುದಿಲ್ಲ. ಆದ್ದರಿಂದಲೆ ನಾನು ಈ ವನದಲ್ಲಿ ಮಂತ್ರಿಗಳೊಡನೆ ಅಳಲ ಹೊರೆ ಹೊತ್ತು ಸಂಚರಿಸುತ್ತಿದ್ದೇನೆ. ರಾಮಚಂದ್ರ, ಅಲ್ಲಿ ನೋಡು, ವಾಲಿಯ ಪರಾಕ್ರಮದಿಂದ ಕೆಳಕ್ಕೆ ಬಿದ್ದಿರುವ ಪರ್ವತಕ್ಕೆ ಸಮನಾದ ದುಂದುಭಿಯ ಶರೀರ ಕಾಣಿಸುತ್ತಿದ. ಅಲ್ಲದೆ ಇಲ್ಲಿಗೆ ಕಾಣಿಸುತ್ತಿರುವ ಆ ವಿಪುಲವಾಗಿ ಬೆಳೆದಿರುವ ಸಪ್ತ ಸಾಲವೃಕ್ಷಗಳಲ್ಲಿ ಒಂದು ವೃಕ್ಷವನ್ನು ಒಂದೇ ಬಾಣದಿಂದ ಒಂದೇ ಬಾರಿಗೆ ಎಲೆಗಳಿಲ್ಲ ದಂತೆ ಉದುರಿಸುವ ಸಾಮರ್ಥ್ಯ ವಾಲಿಗಿದೆ. ಈ ತೆರನಾದ ಪರಾಕ್ರಮವನ್ನು ಪಡೆದ ವಾಲಿಯನ್ನು ಕೊಲ್ಲಲು ನೀನು ಹೇಗೆ ಸಮರ್ಥನಾಗುವೆ? ಈ ಸಂಶಯ ನನ್ನನ್ನು ಕಾಡುತ್ತಿದೆ."

ವಾಲಿಯನ್ನು ಕೊಲ್ಲುವ ವಿಷಯದಲ್ಲಿ ಸುಗ್ರೀವನಿಗೆ ನಂಬಿಕೆಯನ್ನುಂಟು ಮಾಡಲು, ಶ್ರೀರಾಮನು ದುಂದುಭಿಯ ದೇಹವನ್ನು ತನ್ನ ಕಾಲಿನ ಹೆಬ್ಬೆರಳಿನಿಂದ ಅಲುಗಿಸಿ, ಅದನ್ನು ಹತ್ತು ಗಾವುದದ ಎತ್ತರಕ್ಕೆ ಚಿಮ್ಮಿದನು. ಆದರೆ ಒಣಗಿದ ಆ ದೇಹವನ್ನು ಅಷ್ಟುದೂರ ಚಿಮ್ಮಿದರೂ ರಾಮಚಂದ್ರನ ಕಾರ್ಯ ಅಷ್ಟು ಅಧಿಕವಾಗಿ ಕಾಣಿಸದೆ ಸುಗ್ರೀವನಿಗೆ ನಂಬಿಕೆಯನ್ನುಂಟುಮಾಡಲಿಲ್ಲ. ಆದಕಾರಣ ಸಾಲವೃಕ್ಷ ಭೇದನದಿಂದ ರಾಮನ ಪರಾಕ್ರಮವನ್ನು ಅಳೆದು, ವಾಲಿವಧೆಯ ವಿಷಯದಲ್ಲಿ ನಂಬಿಕೆ ಯನ್ನು ಪಡೆಯಲು ಆ ಕಪಿವೀರನು ಬಯಸಿದನು. ಈ ವಿಷಯದಲ್ಲಿ ಸುಗ್ರೀವನಿಗೆ ನಂಬಿಕೆಯನ್ನುಂಟುಮಾಡಲು ರಾಮನು ಬಿಲ್ಲನ್ನು ಸೆಳೆದು ಸಾಲವೃಕ್ಷಗಳಿಗೆ ಗುರಿ ಯಿಟ್ಟು ಹರಿತವಾದ ಬಾಣವೊಂದನ್ನು ಬಿಟ್ಟನು. ಆ ಬಾಣವು ಸಾಲಾಗಿ ನಿಂತ ಆ ಏಳು ವೃಕ್ಷಗಳನ್ನು ಭೇದಿಸಿ ಭೂಮಿಯನ್ನು ಹೊಕ್ಕು ಹಿಂದಿರುಗಿ ಬಂದು ಬತ್ತಳಿಕೆ ಯನ್ನು ಸೇರಿತು.

ರಾಮನ ಬಾಣವೇಗದಿಂದ ಭೇದಿಸಲ್ಪಟ್ಟ ಆ ಏಳುಸಾಲವೃಕ್ಷಗಳನ್ನು ಕಂಡು ಸುಗ್ರೀವನಿಗೆ ಆಶ್ಚರ್ಯವೂ ಸಂತೋಷವೂ ಏಕಕಾಲದಲ್ಲಿ ಮೂಡಿದುವು. "ದೇವತೆ ಗಳಿಂದ ಕೂಡಿ ಇಂದ್ರನೇ ನಿನ್ನನ್ನು ಎದುರಿಸಿದರೂ ಅವನನ್ನು ಧ್ವಂಸಮಾಡಲು ನೀನು ಶಕ್ತನಿರುವೆ. ಹೀಗಿರುವಲ್ಲಿ ವಾಲಿ ಎಷ್ಟು ಮಾತ್ರದವನು? ಮಹೇಂದ್ರ ವರುಣರಿಗೆ ಸಮಾನನಾದ ನಿನ್ನಿಂದ ನನ್ನ ಶೋಕ ತೊಡೆದುಹೋಯಿತು" ಎಂದು ಕಪಿವೀರನು ರಾಮನನ್ನು ಹೊಗಳಿದನು. ಆಗ ರಾಮನು ಸುಗ್ರೀವನನ್ನು ಗಾಢವಾಗಿ ಅಪ್ಪಿಕೊಂಡು, ಕಿಷ್ಕಿಂಧೆಗೆ ತೆರಳಿ ವಾಲಿಯನ್ನು ಯುದ್ಧಕ್ಕೆ ಕರೆಯುವಂತೆ ಪ್ರೇರಿಸಿದನು.

---

೩

# ವಾಲಿಸುಗ್ರೀವರ ಯುದ್ಧ

ಅನಂತರ ರಾಮಲಕ್ಷ್ಮಣರು ಸುಗ್ರೀವನೊಡನೆ ಕಿಷ್ಕಿಂಧೆಗೆ ಹೊರಟು, ಆ ದುರ್ಗ ನಗರದ ಬಳಿಯಿದ್ದ ಕಾಡೊಂದರಲ್ಲಿ ಮರಗಳ ಹಿಂದೆ ಅವಿತು ನಿಂತರು. ಆಗ ಸುಗ್ರೀವನು ಯುದ್ಧಕ್ಕೆ ಸನ್ನದ್ಧನಾಗಿ ಗಗನವನ್ನು ಭೇದಿಸುವ ಧ್ವನಿಯಿಂದ ಕಾಕು ಹಾಕಿ ವಾಲಿಯನ್ನು ಕಾಳಗಕ್ಕೆ ಕರೆದನು. ವಾಲಿ ಸ್ವಭಾವದಿಂದಲೆ ಮುಂಗೋಪಿ. ಹೀಗಿರುವಲ್ಲಿ ಸುಗ್ರೀವನ ಧ್ವನಿ ಕೇಳಿದ ಮೇಲೆ ಕೇಳಬೇಕೆ? ಉದಯಾಚಲದಿಂದ ಹೊರಟುಬರುವ ಸೂರ್ಯನಂತೆ ವಾಲಿ ಸುಗ್ರೀವನಿಗೆ ಕಾಡಿನ ಗಬ್ಬದಿಂದ ಮೂಡಿದಂತೆ ಇದಿರಾಗಿ ಬಂದನು. ಆಗ ಆಕಾಶದಲ್ಲಿ ಬುಧನಿಗೂ ಮಂಗಳನಿಗೂ ಯುದ್ಧವಾಗುವಂತೆ ಅಣ್ಣ ತಮ್ಮಂದಿರಿಗೆ ಯುದ್ಧ ಮೊದಲಾಯಿತು. ಸಿಡಿಲಿಗೆ ಸಮಾನವಾದ ಅಂಗೈಗಳಿಂದ, ವಜ್ರಾಯುಧಕ್ಕೆ ಸರಿಯೆನಿಸುವ ಮುಷ್ಟಿಗಳಿಂದ ಒಬ್ಬರೊಬ್ಬರಿಗೆ ಯುದ್ಧ ನಡೆಯಿತು. ಇತ್ತ ಮರಗಳ ಮರೆಯಲ್ಲಿ ಅಡಗಿದ್ದ ರಾಮನಿಗೆ ಅಶ್ವಿನೀಕುಮಾರರಂತಿದ್ದ ವಾಲಿ ಸುಗ್ರೀವರನ್ನು ಕಂಡು ವಾಲಿಯಾರು, ಸುಗ್ರೀವನಾರು ಎಂಬುದು ತಿಳಿಯದಾಯಿತು. ಹೀಗೆ ಮನಸ್ಸು ಸಂಶಯದಲ್ಲಿದ್ದ ಕಾರಣ ರಾಮನು ಬಾಣಬಿಡಲಿಲ್ಲ. ಈ ನಡುವೆ ಸುಗ್ರೀವನು ವಾಲಿಯಿಂದ ಬಲವಾಗಿ ಪೆಟ್ಟು ತಿಂದು, ಶ್ರೀರಾಮನನ್ನು ಕಾಣದೆ ಋಷ್ಯಮೂಕಪರ್ವತಕ್ಕೆ ಓಡಿ ಹೋದನು. ತೇಜಸ್ವಿಯಾದ ವಾಲಿ ಋಷಿಶಾಪಕ್ಕೆ ಹೆದರಿ "ಇದೊಮ್ಮೆ ನಿನ್ನನ್ನು ಬಿಟ್ಟಿದ್ದೇನೆ; ಬದುಕಿಕೊ!" ಎಂದು ಹೇಳಿ ರಾಜಧಾನಿಗೆ ಹಿಂದಿರುಗಿ ಬಂದನು.

ಆಯಾಸದಿಂದ ಬಳಲಿ, ರಕ್ತದಿಂದ ಮೈ ನೆನೆದು, ಸುಗ್ರೀವನು ರಾಮನ ಬಳಿಗೆ ಬಂದು ನಾಚಿಕೆಯಿಂದ ನೆಲವನ್ನು ನೋಡುತ್ತ ದೈನ್ಯದಿಂದ ಈ ರೀತಿ ನುಡಿದನು: "ರಾಮಚಂದ್ರ, ವಾಲಿಯನ್ನು ಕದನಕ್ಕೆ ಕರೆ ಎಂದು ನನ್ನೊಡನೆ ಹೇಳಿಕಳುಹಿಸಿದೆ. ಮೊದಲು ನಿನ್ನ ಪರಾಕ್ರಮವನ್ನು ತೋರಿ ನನಗೆ ಭರವಸೆಯನ್ನು ಕೊಟ್ಟು, ಆ ಬಳಿಕ ವಾಲಿಯಿಂದ ನನ್ನನ್ನು ಚೆನ್ನಾಗಿ ಹೊಡೆಯಿಸಿದೆ. ವಾಲಿಯನ್ನು ಕೊಲ್ಲಲಾರೆನೆಂದು ನೀನು ಮೊದಲೇ ಹೇಳಿದ್ದರೆ ಇಲ್ಲಿಂದ ನಾನು ಹೊರಡುತ್ತಲೆ ಇರಲಿಲ್ಲ." ದೈನ್ಯದಿಂದಲೂ ಕರುಣೆಯಿಂದಲೂ ಕೂಡಿದ ಸುಗ್ರೀವನ ಮಾತನ್ನು ಕೇಳಿ ರಾಮನು "ಅಯ್ಯಾ ಸ್ನೇಹಿತ, ನನ್ನ ಮೇಲೆ ಸಿಟ್ಟಾಗಬೇಡ. ನೀವಿಬ್ಬರೂ ಯುದ್ಧಮಾಡುತ್ತಿರುವಾಗ ವಾಲಿಯನ್ನು ವಧಿಸಲು ಬಾಣಬಿಡದಿರಲೂ ಕಾರಣವನ್ನು ಹೇಳುತ್ತೇನೆ ಕೇಳು. ಅಲಂಕಾರದಿಂದಾಗಲಿ ವೇಷದಿಂದಾಗಲಿ ಮತ್ತು ನಡಗೆಯಿಂದಾಗಲಿ ತೇಜಸ್ಸಿನಿಂದಾಗಲಿ ಕಂಠಸ್ವರದಿಂದಾಗಲಿ ಮತ್ತು ಪರಾಕ್ರಮದಿಂದಾಗಲಿ ಸರ್ವಸಮರಾಗಿರುವ ನಿಮ್ಮಿಬ್ಬ

ರಿಗೂ ಇರುವ ಭೇದವನ್ನು ತಿಳಿಯಲಾರದೆಹೋದೆ. ರೂಪಸಾದೃಶ್ಯವನ್ನು ಕಂಡು, ಮೋಸ ಹೋಗಿ ಪ್ರಮಾದವಾದೀತೆಂದು ಘೋರವಾದ ಬಾಣವನ್ನು ಬಿಡಲು ನನ್ನ ಕೈ ಬಾರದಾಯಿತು. ಭಾಷೆಕೊಟ್ಟು ಅದರಂತೆ ನಡೆಯದಿರುವುದು ಮಹಾ ಪಾಪವೆಂದು ನನಗೆ ತಿಳಿಯದೆ? ನೀನು ತಿರುಗಿ ಹೋಗಿ ಯುದ್ಧ ಮಾಡು. ಒಂದು ಮುಹೂರ್ತ ದಲ್ಲಿಯೆ ಅವನನ್ನು ಕೊಂದು ಕೆಡಹುತ್ತೇನೆ" ಎಂದು ತಮ್ಮನ ಕಡೆ ತಿರುಗಿ "ಲಕ್ಷ್ಮಣ, ದ್ವಂದ್ವಯುದ್ಧದಲ್ಲಿ ಸುಗ್ರೀವನನ್ನು ಗುರುತಿಸಲು ಈ ಗಜಪುಷ್ಪವೆಂಬ ಬಳ್ಳಿಯನ್ನು ಕಿತ್ತು ಅದರಿಂದ ಸುಗ್ರೀವನ ಕೊರಳನ್ನು ಸಿಂಗರಿಸು" ಎಂದನು.

ಅಣ್ಣನ ಮಾತಿನಂತೆ ಲಕ್ಷ್ಮಣನು ಗಜಪುಷ್ಪವೆಂಬ ಬಳ್ಳಿಯಿಂದ ಸುಗ್ರೀವನ ಕೊರಳನ್ನು ಸಿಂಗರಿಸಿದನು. ತಾರೆಗಳ ಹಾರದಿಂದ ಅಲಂಕೃತನಾದ ಚಂದ್ರನಂತೆ ಕಂಗೊಳಿಸುತ್ತಿದ್ದ ಸುಗ್ರೀವನು ಸಮಾಧಾನಗೊಂಡು ರಾಮಲಕ್ಷ್ಮಣರೊಡಗೂಡಿ ಮತ್ತೆ ಕಿಷ್ಕಿಂಧೆಗೆ ಬಂದನು. ರಾಮಲಕ್ಷ್ಮಣರೂ ಸುಗ್ರೀವನ ಮಂತ್ರಿಗಳೂ ಮರಗಳ ಹಿಂದೆ ನಿಂತರು. ಸುಗ್ರೀವನಾದರೊ ಗಗನವನ್ನೇ ಸೀಳುವಂತೆ ಧ್ವನಿಗೈಯುತ್ತ ವಾಲಿಯನ್ನು ಮತ್ತೆ ಕದನಕ್ಕೆ ಕರೆದನು. ತಮ್ಮನ ಕರ್ಕಶವಾದ ದನಿಕೇಳಿ ತನ್ನ ರಾಣೀವಾಸದಲ್ಲಿದ್ದ ವಾಲಿ ರೋಷದಿಂದ ಬುಸುಗುಟ್ಟುತ್ತ ಹೊರಗೆ ಬಂದನು. ಆಗ ಅವನ ಕಾಲುಗಳು ನಡುಗಿದುವು; ಶಕ್ತಿ ಕುಗ್ಗಿದಂತೆ ತೋರಿತು. ಅಗ್ನಿಯಂತೆ ಜ್ವಲಿಸುತ್ತಿದ್ದ ವಾಲಿ ಹೊರಹೊರಟುದನ್ನು ಕಂಡು ಅವನ ಹೆಂಡತಿಯಾದ ತಾರೆ ಪ್ರೇಮದಿಂದ "ಆರ್ಯಪುತ್ರ, ನದಿಯ ವೇಗದಂತೆ ಬಂದಿರುವ ಈ ಕೋಪವನ್ನು ಬಿಡು. ಈ ಪ್ರಾತಃಕಾಲದಲ್ಲಿ ನೀನು ಸುಗ್ರೀವನೊಡನೆ ಯುದ್ಧಕ್ಕೆ ಹೊರಟಿರುವುದು ನನಗೆ ರುಚಿಸದು. ಈ ಮೊದಲೆ ನಿನ್ನಿಂದ ಏಟು ತಿಂದು ಹೋದ ಸುಗ್ರೀವನು ಮತ್ತೆ ಈಗ ಯುದ್ಧಕ್ಕೆ ಬಂದಿರುವುದನ್ನು ನೋಡಿದರೆ ಅವನು ಅಸಹಾಯನಾಗಿ ಬಂದಿರ ಲಾರನು. ಪ್ರಳಯಕಾಲದ ಅಗ್ನಿಗೆ ಸಮಾನರಾದ ಇಕ್ಷ್ವಾಕುವಂಶದ ಅರಸರಾದ ರಾಮಲಕ್ಷ್ಮಣರು ಸುಗ್ರೀವನಿಗೆ ಸಹಾಯಕರಾಗಿ ಬಂದಿರುವರೆಂದು ಅಂಗದ ಕುಮಾರನು ನನಗೆ ಹೇಳಿದನು. ಧೀರನೂ ಗುಣಸಂಪನ್ನನೂ ಆದ ರಾಮನಲ್ಲಿ ವೈರ ಉಚಿತವಲ್ಲ. ಆದ್ದರಿಂದ ಶ್ರೀರಾಮನಲ್ಲಿ ಸ್ನೇಹವನ್ನು ಬೆಳಸಿ, ಸುಗ್ರೀವನಲ್ಲಿ ಕೋಪ ವನ್ನು ಬಿಟ್ಟು ಅವನನ್ನು ಮತ್ತೆ ತಾಯಿನೆಲಕ್ಕೆ ಕರೆದುಕೊಂಡು ಯೌವರಾಜ್ಯದಲ್ಲಿ ಅಭಿಷೇಕಮಾಡು. ನನ್ನನ್ನು ನಿನ್ನ ಪ್ರಿಯಳೆಂದು ನೀನು ಭಾವಿಸುವುದಾದರೆ, ಸುಗ್ರೀವನಲ್ಲಿ ಕೋಪವನ್ನು ಬಿಟ್ಟು ನನ್ನ ಮಾತನ್ನು ನಡಸು" ಎಂದು ಪ್ರಾರ್ಥಿಸಿ ಕೊಂಡಳು.

ವಿನಾಶಕಾಲದಲ್ಲಿ ಹಿತವಾದ ಮಾತು ಯಾರಿಗೂ ರುಚಿಸುವುದಿಲ್ಲವಷ್ಟೆ. ಹಾಗೆಯೆ ತಾರೆಯ ಇನಿಮಾತು ವಾಲಿಗೆ ಹಿತವೆನಿಸಲಿಲ್ಲ. ಆಕೆಯನ್ನು ಗಜರುತ್ತ "ಚಂದ್ರಮುಖಿ, ನನಗೆ ಹಗೆಯಾದ ಸುಗ್ರೀವನ ಆಟೋಪವನ್ನು ಹೇಗೆ ಸಹಿಸಲಿ? ಯುದ್ಧಕ್ಕೆ ಕರೆ ಬಂದಿರುವಾಗ, ಆ ಕರೆಗೆ ಓಗೊಡದಿರುವುದು ವೀರರಿಗೆ ಸಾವಿಗೆ ಸಮ. ಅಲ್ಲದೆ ಎಲ್ಲ

ಧರ್ಮಗಳನ್ನೂ ತಿಳಿದ ಶ್ರೀರಾಮನು ಹೇಗೆ ತಾನೆ ಪಾಪಕಾರ್ಯ ಮಾಡುತ್ತಾನೆ? ನಿನ್ನ ಪ್ರಾಣಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ದುರಾತ್ಮನಾದ ಸುಗ್ರೀವನನ್ನು ಯುದ್ಧದಲ್ಲಿ ಗೆದ್ದು, ಹಿಂತಿರುಗುವೆನೇ ಹೊರತು ಅವನನ್ನು ಕೊಲ್ಲುವುದಿಲ್ಲ. ನೀನು ಅಂಜಬೇಡ" ಎಂದು ನುಡಿದು, ಮೆಲ್ಲಗೆ ಆಕೆಯನ್ನು ಬೀಳ್ಕೊಟ್ಟನು. ತಾರೆ ವಾಲಿಯನ್ನು ಅಪ್ಪಿಕೊಂಡು, ಮೃದುಮಾತುಗಳನ್ನಾಡಿ, ಮೆಲ್ಲಗೆ ಅಳುತ್ತ ಅವನನ್ನು ಪ್ರದಕ್ಷಿಣೆ ಮಾಡಿ, ಜಯಕೋರಿ, ಕಣ್ಣೀರುತುಂಬಿ, ಭಾರವಾದ ಮನಸ್ಸಿನಿಂದ ಅವನನ್ನು ಬೀಳ್ಕೊಟ್ಟು ಸಖಿಯರೊಡನೆ ಅಂತಃಪುರವನ್ನು ಹೊಕ್ಕಳು.

---

೪

# ವಾಲಿವಧೆ

ಇತ್ತ ವಾಲಿ ಹಸುರು ಬಣ್ಣದ ಬಟ್ಟೆಯನ್ನು ಬಿಗಿದುಟ್ಟು, ಕೊರಳಲ್ಲಿ ಕಾಂಚನ ಮಾಲೆಯನ್ನು ಧರಿಸಿ, ಕೋಪದಿಂದ ನಿಟ್ಟುಸಿರುಬಿಡುತ್ತ ಪ್ರಜ್ವಲಿಸುವ ಅಗ್ನಿಯಂತೆ ಸುಗ್ರೀವನ ಸಮೀಪಕ್ಕೆ ಬಂದನು. ರಣಪಂಡಿತನಾದ ವಾಲಿ ಮುಷ್ಟಿಯನ್ನು ಮೇಲೆತ್ತಿ ಸುಗ್ರೀವನನ್ನು ಕುರಿತು "ಇಗೋ ಈ ಹೊಡೆತ ನಿನ್ನ ಪ್ರಾಣಗಳನ್ನು ಸೆಳೆಯುವುದು" ಎಂದು ಹೇಳುತ್ತ ಮುಂದೆ ನುಗ್ಗಿದನು. ವಾಲಿಯ ಹೊಡೆತದಿಂದ ಸುಗ್ರೀವನು ರಕ್ತವನ್ನು ಕಾರುತ್ತ ಝುರಿಗಳಿಂದ ಕೂಡಿದ ಬೆಟ್ಟದಂತೆ ಕಂಡುಬಂದನು. ಅಣ್ಣ ತಮ್ಮಂದಿರಿಬ್ಬರಿಗೂ ದೊಡ್ಡ ಯುದ್ಧವೆ ಆಯಿತು. ಸುಗ್ರೀವನು ಚೇತರಿಸಿಕೊಂಡು, ಸಾಲವೃಕ್ಷವೊಂದನ್ನು ಕಿತ್ತು ವಾಲಿಯನ್ನು ಹೊಡೆದನು. ವಜ್ರಾಯುಧದ ಏಟನ್ನು ಸಹಿಸಲಾರದೆ ಬೆಟ್ಟ ನಡುಗುವಂತೆ, ಸುಗ್ರೀವನ ಹೊಡೆತದಿಂದ ವಾಲಿ ನಡುಗಿಹೋದನು. ಗರುಡನಿಗೆ ಸಮಾನವಾದ ವೇಗವುಳ್ಳ ಆ ವೀರರಿಬ್ಬರೂ ಆಕಾಶದಲ್ಲಿ ಸೂರ್ಯಚಂದ್ರರಂತೆ ಯುದ್ಧಮಾಡುತ್ತ ಪ್ರಕಾಶಿಸುತ್ತಿದ್ದರು. ಹೀಗಿರುವಲ್ಲಿ ವಾಲಿಯ ಬಲ ಕ್ರಮೇಣ ಹೆಚ್ಚುತ್ತ ಬಂತು. ಹಾಗೆಯೇ ಸೂರ್ಯಪುತ್ರನಾದ ಸುಗ್ರೀವನು ಬಲಗುಂದಿದನು. ಆದರೂ ರೆಂಬೆಗಳಿಂದಲೂ ಮುಷ್ಟಿಗಳಿಂದಲೂ ಇಬ್ಬರಿಗೂ ವೃತ್ರ ಇಂದ್ರರಿಗೆ ಯುದ್ಧವಾದಂತೆ ಭಯಂಕರವಾದ ಯುದ್ಧವಾಯಿತು. ನೆತ್ತರಿಂದ ನೆನೆದು, ಸಿಂಹನಾದ ಮಾಡುತ್ತ ದೊಡ್ಡ ಮೇಘಗಳಂತೆ ಅವರಿಬ್ಬರು ಯುದ್ಧಮಾಡುತ್ತಿದ್ದರೂ, ಕ್ಷಣ ಕ್ಷಣಕ್ಕೂ ಬಲಗುಂದಿ, ದಿಕ್ಕುಗಳನ್ನು ನೋಡುತ್ತಿದ್ದ ಸುಗ್ರೀವನನ್ನು ರಾಮನು ನೋಡಿದನು. ಆತನು ಸಿಡಿಲಿಗೆ ಸಮಾನವಾದ ಬಾಣವೊಂದನ್ನು ಬಿಲ್ಲಿನಲ್ಲಿ ಹೂಡಿ, ಸೆಳೆದು ವಾಲಿಯ ಮೇಲೆ ಪ್ರಯೋಗಿಸಿದನು. ಆ ಬಾಣದ ವೇಗದಿಂದ ಹೊಡೆಯಲ್ಪಟ್ಟ ವಾಲಿ ಪ್ರಜ್ಞೆಯಿಲ್ಲದೆ ನಿಶ್ಚೇಷ್ಟಿತನಾಗಿ ಭೂಮಿಯ ಮೇಲೆ ಬಿದ್ದನು.

ದೇವೇಂದ್ರನ ಇಂದ್ರಧ್ವಜದಂತೆ ಭೂಮಿಯ ಮೇಲೆ ಬಿದ್ದ ವಾಲಿ ಚಂದ್ರನಿಲ್ಲದ ಆಕಾಶದಂತೆ ತೋರುತ್ತಿದ್ದನು. ಅವನ ಪ್ರಾಣ ಇನ್ನೂ ಹೋಗಿರಲಿಲ್ಲ. ಆತನ ಕೊರಳಿನಲ್ಲಿ ಇಂದ್ರನು ಕೊಟ್ಟಿದ್ದ ಚಿನ್ನದ ಹಾರ ಚೆನ್ನಾಗಿ ಮಿನುಗುತ್ತಿತ್ತು. ಅದನ್ನು ಧರಿಸಿದ ವಾಲಿ ಸಂಧ್ಯಾರಾಗದಿಂದ ರಂಜಿತವಾದ ಮೇಘದಂತೆ ಶೋಭಿಸುತ್ತಿದ್ದನು. ಆ ಸಮಯದಲ್ಲಿ ಸಮೀಪಕ್ಕೆ ಬಂದ ಶ್ರೀರಾಮನು ಮಹಾಬಾಹುವೂ, ಹರಿಣಲೋಚನನೂ ಆದ ವಾಲಿಯನ್ನು ಕಂಡನು. ಸ್ವರ್ಗಲೋಕದಿಂದ ಪದಚ್ಯುತನಾದ ಯಯಾತಿಯಂತೆ ಶೋಭಿಸುತ್ತಿದ್ದ ವಾಲಿ ಮೆಲ್ಲಮೆಲ್ಲನೆ ಮೈ ತಿಳಿದು ರಾಮಲಕ್ಷ್ಮಣರನ್ನು ನೋಡಿ ಈ ರೀತಿ ನುಡಿದನು : "ರಾಮಚಂದ್ರ, ನೀನು ಪ್ರಸಿದ್ಧನೂ ಸುಶೀಲನೂ

ಆದ ಕ್ಷತ್ರಿಯ ಕುಮಾರ. ಹೀಗಿರುವ ನೀನು ಯಾವ ಲಾಭಕ್ಕಾಗಿ ನಾನು ಬೇರೊಬ್ಬ ರೊಡನೆ ಯುದ್ಧಮಾಡುತ್ತಿರುವಾಗ ನನ್ನೆದೆಗೆ ಬಾಣದಿಂದ ಹೊಡೆದೆ? ನೀನು ದಯಾಳುವೆಂದೂ, ನೀತಿಯನ್ನು ಅರಿತವನೆಂದೂ ಲೋಕವೇ ಕೊಂಡಾಡುತ್ತಿದೆ. ಅಪರಾಧಿಗಳನ್ನು ದಂಡಿಸುವುದು ರಾಜಧರ್ಮ. ಹೀಗಿರುವಲ್ಲಿ ನಿರಪರಾಧಿಯಾದ ನನ್ನನ್ನು ಮರೆಯಿಂದ ಹೊಡೆದ ನಿನ್ನನ್ನು ಅಧಾರ್ಮಿಕನೆಂದೂ ಪಾಪಾಚಾರಿಯೆಂದೂ ತಿಳಿಯುತ್ತೇನೆ. ತಾರೆ ನಿನ್ನನ್ನು ಸತ್ಕುಲಪ್ರಸೂತನೆಂದು ಹೇಳಿದಳು. ಆದರೆ ನಿನ್ನ ನಡತೆಯನ್ನು ನೋಡಿದರೆ ನೀನು ಹುಲ್ಲು ಮುಚ್ಚಿದ ಬಾವಿಯಂತೆ ಇದ್ದೀಯೆ; ಬೂದಿ ಮುಚ್ಚಿದ ಕೆಂಡದಂತಿದ್ದೀಯೆ. ನಿನ್ನ ವಿಷಯದಲ್ಲಿ ನಾನು ಅಪಚಾರವನ್ನೆಸಗಿಲ್ಲ; ನಿನ್ನನ್ನು ಅಪಮಾನಗೊಳಿಸಿಲ್ಲ. ಹೀಗಿರುವಲ್ಲಿ ನಿರಪರಾಧಿಯಾದ ನನ್ನನ್ನು ನೀನು



ಅಣ್ಣತಮ್ಮಂದಿರಿಬ್ಬರಿಗೂ ದೊಡ್ಡ ಯುದ್ಧವೇ ಆಯಿತು.

ಹೇಗೆ ಹೊಡೆದೆ? ಸತ್ಕುಲದಲ್ಲಿ ಹುಟ್ಟಿ, ಸತ್ಪುರುಷರ ವೇಷವನ್ನು ಧರಿಸಿ ಈ ಅಕಾರ್ಯವೆಸಗುವುದು ನಿನಗೆ ತರವಲ್ಲ. ಕಾಮಕ್ರೋಧಗಳೆ ನಿನ್ನ ಹುಟ್ಟುಗುಣಗಳೆಂದು ತೋರುತ್ತದೆ. ಲೋಕನಿಂದಿತವಾದ ಈ ಕೆಲಸವನ್ನು ನೀನು ಮಾಡಿದುದರಿಂದ ಧರ್ಮದಲ್ಲಿ ನಿನಗೆ ಶ್ರದ್ಧೆಯಿಲ್ಲ. ರಾಜಹತ್ಯೆ ನರಕಕ್ಕೆ ಹೆದ್ದಾರಿಯೆಂದು ನಿನಗೆ ತಿಳಿಯದೆ? ಅಯ್ಯೋ! ತಾರೆಯ ಮಾತನ್ನು ಮೀರಿದುದರಿಂದ ನನಗೆ ಈ ಗತಿಯುಂಟಾಯಿತು. ನೀನು ನನ್ನೆದುರಿಗೆ ನಿಂತು ಯುದ್ಧ ಮಾಡಿದ್ದರೆ ಈಗ ನನಗಾಗಿರುವ ಗತಿಯೇ ನಿನಗುಂಟಾಗುತ್ತಿತ್ತು. ಅಥವಾ ಈ ಮೊದಲೇ ನೀನು ನನ್ನನ್ನು ಕಂಡಿದ್ದರೆ, ಒಂದೇ ದಿನದಲ್ಲಿ ನಾನು ಸೀತೆಯನ್ನು ಹುಡುಕಿಸಿ ಕೊಡುತ್ತಿದ್ದೆ. ಯಾರನ್ನು ಕೊಲ್ಲುವ ಸಲುವಾಗಿ ಸುಗ್ರೀವನ ಬಯಕೆಯನ್ನು ಪೂರ್ಣಮಾಡಲು ನನ್ನನ್ನು ಕೊಂದೆಯೊ ಅಂಥ ರಾವಣನ ಕಂಠವನ್ನು ನಾನೇ ತಂದು ನಿನಗೊಪ್ಪಿಸುತ್ತಿದ್ದೆ. ಸಮುದ್ರದಲ್ಲಾಗಲಿ ಪಾತಾಳದಲ್ಲಾಗಲಿ ಎಲ್ಲಿದ್ದರೆ ಅಲ್ಲಿ ನಾನು ಸೀತೆಯನ್ನು ಹುಡುಕಿಸಿಕೊಡುತ್ತಿದ್ದೆ. ಈಗೇನೊ ನನ್ನ ಸಾವಿನಿಂದ ಸುಗ್ರೀವನಿಗೆ ಕಪಿರಾಜ್ಯ ಪಟ್ಟ ದೊರಕಿತು. ಆದರೆ ನೀನು ಮಾತ್ರ ನನ್ನನ್ನು ಮರೆಯಿಂದ ಹೊಡೆದುದು ಧರ್ಮವಲ್ಲ. ಈ ನನ್ನ ಪ್ರಶ್ನೆಗೆ ನಿನ್ನ ಉತ್ತರವೇನು?

ಇಷ್ಟು ಮಾತುಗಳನ್ನಾಡಿದ ವಾಲಿಗೆ ಸಂಕಟದಿಂದ ಮೋರೆ ಬಾಡಿತು. ಬೆಳಕನ್ನು ಕಳೆದುಕೊಂಡ ಸೂರ್ಯನಂತಿದ್ದ ವಾಲಿಯನ್ನು ನೋಡಿ ಮಧುರವಾದ ಮಾತಿನಿಂದ ಶ್ರೀರಾಮನು ಈ ರೀತಿ ನುಡಿದನು: "ಕಪಿವೀರ, ಧರ್ಮವನ್ನೂ ಆಚಾರವನ್ನೂ ತಿಳಿಯದ ನೀನು ನನ್ನನ್ನೇಕೆ ನಿಂದಿಸುತ್ತೀಯೆ? ಕಪಿಗೆ ಚಪಲತೆ ಸಹಜ. ಚಪಲತೆಗೆ ಎಡೆಗೊಟ್ಟು ನೀನು ನನ್ನನ್ನು ದೂರುವುದು ಉಚಿತವಲ್ಲ. ಬೆಟ್ಟ ವನ ನದಿಗಳಿಂದ ಕೂಡಿದ ಈ ಸಮಸ್ತ ಭೂಮಿಗೆ ಭರತನೇ ಒಡೆಯ. ಆ ಧರ್ಮಾತ್ಮನಾದ ಭರತನ ಅಪ್ಪಣೆಯಂತೆ, ಧರ್ಮೋದ್ಧಾರಕ್ಕಾಗಿಯೆ ನಾವು ಈ ಭೂಮಿಯಲ್ಲಿ ಸಂಚರಿಸುತ್ತಿದ್ದೇವೆ. ಧರ್ಮವನ್ನು ಮೀರಿ ನಡೆಯುವವರನ್ನು ನಿಗ್ರಹಿಸುವುದು ನಮ್ಮ ಕರ್ತವ್ಯ. ನಿನ್ನನ್ನು ಕೊಲ್ಲಲು ಕಾರಣವನ್ನು ಹೇಳುತ್ತೇನೆ, ಕೇಳು. ಧರ್ಮವನ್ನು ಬಿಟ್ಟು, ನಿನ್ನ ಸೊಸೆಯಂತಿರುವ ಸುಗ್ರೀವನ ಹೆಂಡತಿಯಲ್ಲಿ ನೀನು ಕಾಮದಿಂದ ರಮಿಸಿರುವೆ. ಇದು ಪಾಪಕರ್ಮವಲ್ಲದೆ ಮತ್ತೇನು? ಆದ್ದರಿಂದ ನೀನು ದಂಡಾರ್ಹ. ಈ ಪಾಪಕ್ಕೆ ಮರಣವೆ ಶಿಕ್ಷೆ. ಒಡಹುಟ್ಟಿದವಳಂತಿರುವ ತಮ್ಮನ ಹೆಂಡತಿಯನ್ನು ಭೋಗಿಸುವುದನ್ನು ಕಂಡು ಯಾವ ಕ್ಷತ್ರಿಯನು ತಾನೆ ಸಹಿಸುವನು? ಭರತನ ಅಪ್ಪಣೆಯನ್ನು ಪಾಲಿಸುವ ನಾವು ನೀನು ಆಚರಿಸಿದ ಅಧರ್ಮವನ್ನು ಕಂಡು ನಿನ್ನನ್ನು ಶಿಕ್ಷಿಸಿದೆವು. ನನ್ನಂತೆಯೆ ಸುಗ್ರೀವನೂ ರಾಜ್ಯ ಮತ್ತು ಹೆಂಡತಿಯನ್ನು ಕಳೆದುಕೊಂಡಿರುವ ಕಾರಣ ನಮ್ಮಿಬ್ಬರಿಗೂ ಸ್ನೇಹವುಂಟಾಯಿತು. ಅಗ್ನಿಸಾಕ್ಷಿಯಾಗಿ ಸುಗ್ರೀವನಿಗೆ ನಾನು ಮಾಡಿದ ಪ್ರತಿಜ್ಞೆಯನ್ನು ಮುರಿಯಲು ಹೇಗೆತಾನೆ ಸಾಧ್ಯ? ತಮ್ಮನ ಹೆಂಡತಿಯನ್ನು ಹರಣಮಾಡಿದ ಕಾರಣ ನಿನಗೆ ಶಿಕ್ಷೆಯಾಯಿತೆಂಬುದನ್ನು ಒಪ್ಪಿಕೊ. ಧರ್ಮಮಾರ್ಗದಲ್ಲಿ ನಡೆಯುತ್ತಿರು

ವನನು ಮಿತ್ರಕಾರ್ಯವನ್ನು ಅವಶ್ಯವಾಗಿ ಮಾಡತಕ್ಕದ್ದು. ಮೇಲಾಗಿ ರಾಜರಿಂದ ಪಾಪಿಗಳು ಶಿಕ್ಷಿತರಾದರೆ ಸ್ವರ್ಗವನ್ನು ಸೇರುವರೆಂದು ನೀತಿಶಾಸ್ತ್ರವುಂಟು. ಪಾಪಕಾರ್ಯ ಗಳನ್ನು ಯಾರು ಆಚರಿಸುವರೋ ಅವರನ್ನು ಶಿಕ್ಷಿಸದಿದ್ದರೆ ರಾಜನಿಗೆ ಆ ಪಾಪವುಂಟಾಗು ವುದು. ಆದ್ದರಿಂದ ನೀನು ಸಂತಾಪಗೊಳ್ಳಬೇಡ. ಮೇಲಾಗಿ ನೀನು ಶಾಖಾಮೃಗವಾದ ಕಾರಣ, ಮೃಗಗಳನ್ನು ಸಮಯವರಿತು ಎದುರಿನಲ್ಲಿಯೂ ಮರೆಯಲ್ಲಿಯೂ ನಿಂತು ನಿಗ್ರಹಿಸುವಂತೆ ನಾನು ನಿನ್ನನ್ನು ನಿಗ್ರಹಿಸಿದ್ದೇನೆ. ಆದ್ದರಿಂದ ನೀನು ನನ್ನ ವಿಷಯ ದಲ್ಲಿ ಕೋಪಿಸಕೂಡದು.

ರಾಮನ ಮಾತು ವಾಲಿಗೆ ಸಮಾಧಾನ ತಂದಿತು. ರಾಮನಲ್ಲಿದ್ದ ಕೋಪವನ್ನು ಬಿಟ್ಟುಬಿಟ್ಟನು. ಆದರೆ ಅವನ ದುಃಖ ಮಾತ್ರ ಪೂರ್ಣವಾಗಿ ಶಮನವಾಗಿರಲಿಲ್ಲ. ಆ ಸ್ಥಿತಿಯಲ್ಲಿಯೆ ವಾಲಿ ರಾಮನಿಗೆ ಕೈಮುಗಿದು "ರಾಮಚಂದ್ರ, ನೀನು ಹೇಳಿದ ಮಾತು ನಿಜ. ನೀನಾಡಿದ ಮಾತಿಗೆ ಪ್ರತಿಹೇಳಲು ನಾನು ಶಕ್ತನಲ್ಲ. ಹಿಂದೆ ನಿನ್ನ ವಿಷಯದಲ್ಲಿ ನಾನಾಡಿದ ಅಪ್ರಿಯವಾದ ಮಾತುಗಳನ್ನು ಮನಸ್ಸಿನಲ್ಲಿಡಬೇಡ. ಪ್ರಜೆಗಳ ಹಿತದಲ್ಲಿಯೆ ಆಸಕ್ತವಾದ ನಿನ್ನ ಮನಸ್ಸು ನಿರ್ಮಲವಾದುದು. ಆದರೆ ಈ ಒಂದು ವಿಷಯದಲ್ಲಿ ನನಗೆ ಅಭಯಪ್ರದಾನಮಾಡು. ನಾನು ಬಂಧುಗಳನ್ನಾಗಲಿ ತಾರೆಯನ್ನಾ ಗಲಿ ನನ್ನ ವಿಷಯವನ್ನಾಗಲಿ ಕುರಿತು ಚಿಂತಿಸುವುದಿಲ್ಲ. ಆದರೆ ಹುಡುಗತನದಿಂದಲೂ ನನ್ನ ಮುದ್ದಿನಿಂದಲೂ ಬೆಳೆದಿರುವ ಅಂಗದನು, ಈ ನನ್ನ ಸಾವಿನಿಂದ ಬಿಸಿಲಿನಿಂದ ಬಾಡಿದ ಕೆರೆಯ ನೀರಿನಂತೆ, ಬಾಡಿಹೋಗುತ್ತಾನೆ. ಆ ನನ್ನ ಒಬ್ಬನೇ ಮಗನು ನನಗೆ ಅತ್ಯಂತ ಪ್ರಿಯನಾಗಿದ್ದಾನೆ. ಅತ್ಯಂತ ಬಲಶಾಲಿಯಾದ ಇವನ ರಕ್ಷಣೆಯ ಹೊರೆಯನ್ನು ನಿನಗೊಪ್ಪಿಸಿದ್ದೇನೆ. ಸುಗ್ರೀವನಿಗೂ ಅಂಗದನಿಗೂ ಮಾರ್ಗದರ್ಶಕನಾಗು. ತಾರೆಯಲ್ಲಿ ಅನುಗ್ರಹವನ್ನು ತೋರು. ನಿನ್ನ ಅನುಗ್ರಹದಿಂದ ಈ ಭೂಮಂಡಲವನ್ನಲ್ಲದೆ ದೇವಲೋಕವನ್ನೂ ಸಾಧಿಸಲು ನನಗೆ ಅಸಾಧ್ಯವೆನ್ನಿಸುತ್ತಿರಲಿಲ್ಲ. ಆದರೆ ತಾರೆ ಹೇಳಿದ ಮಾತುಗಳನ್ನು ಕೇಳದೆ ಸುಗ್ರೀವನೊಡನೆ ದ್ವಂದ್ವಯುದ್ಧಕ್ಕೆ ಬಂದೆ. ನಿನ್ನ ಪ್ರಸಾದವನ್ನು ಬಯಸಿ ಬರಲಿಲ್ಲ" ಎಂದು ನುಡಿದು ಸುಮ್ಮನಾದನು. "ಕಪಿವೀರ, ಅಂಗದನ ವಿಷಯದಲ್ಲಿ ನೀನು ಚಿಂತಿಸಬೇಡ. ದೈವವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ವ್ಯಸನವನ್ನು ಬಿಡು" ಎಂದು ರಾಮನು ಧರ್ಮಯುಕ್ತವಾದ ಹಿತವಚನ ಗಳಿಂದ ವಾಲಿಯನ್ನು ಸಂತೈಸಿದನು. ರಾಮನ ಮಾತನ್ನು ಕೇಳಿ ಸುಪ್ರೀತನಾದ ವಾಲಿ ತನ್ನ ಅಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡನು.

---

೫

## ತಾರಾವಿಲಾಪ

ಇಷ್ಟು ಮಾತುಗಳನ್ನಾಡಿ ರಾಮಬಾಣದಿಂದಲೂ ಸುಗ್ರೀವನ ಹೊಡೆತದಿಂದಲೂ ಜರ್ಝರಿತವಾದ ದೇಹವುಳ್ಳ ವಾಲಿ ಆಯಾಸದಿಂದ ಮೂರ್ಛಿತನಾದನು. ಈ ವೇಳೆಗೆ ವಾಲಿವಧೆಯ ವೃತ್ತಾಂತವನ್ನು ಕೇಳಿದ ತಾರೆ ಹೆದರಿ ಗಂಡನಿದ್ದ ಸ್ಥಳಕ್ಕೆ ಬಂದಳು. ಶ್ರೀರಾಮನನ್ನು ಕಂಡು ಅಂಗದನ ಅನುಚರರು ಓಡಿಹೋದರು. ವಾಲಿಯ ಅನುಚರರಾದ ಅವರು ಓಡಿಹೋಗುವುದು ಅನುಚಿತವೆಂದು ತಾರೆ ಅವರನ್ನು ಬೇಡಿಕೊಂಡಳು. ತಾರೆಯನ್ನು ಸಂತೈಸುತ್ತ ಆ ಕಪಿಶ್ರೇಷ್ಠರು ಮೊದಲು ಆಕೆ ಅಂಗದನನ್ನು ಕಾಪಿಟ್ಟು, ಅವನಿಗೆ ರಾಜ್ಯಾಭಿಷೇಕಮಾಡಬೇಕೆಂದೂ ನಗರವನ್ನು ರಕ್ಷಿಸಬೇಕೆಂದೂ ಪ್ರಾರ್ಥಿಸಿಕೊಂಡರು. ಆದರೆ ವಾಲಿಯನ್ನು ಕಳೆದುಕೊಂಡ ತಾರೆಗೆ ರಾಜ್ಯವಾಗಲಿ ಮಗನಾಗಲಿ ಬೇಡವೆನ್ನಿಸಿತು. ಅದಕ್ಕೆ ಬದಲಾಗಿ ವಾಲಿಯನ್ನು ಅನುಸರಿಸಿ ಹೋಗುವುದೇ ಯುಕ್ತವೆಂದು ಆಕೆಗೆ ತೋರಿತು. ತಾರೆ ಶೋಕದಿಂದ ಅಳುತ್ತ, ತಲೆ ಕೆದರಿಕೊಂಡು ತೋಳುಗಳಿಂದ ಹೊಟ್ಟೆಯನ್ನು ಹೊಡೆದುಕೊಳ್ಳುತ್ತ ವಾಲಿಯಿದ್ದೆಡೆಗೆ ಓಡಿದಳು. ಮಾಂಸದ ಆಸೆಗಾಗಿ ಹೊಡೆಯಲ್ಪಟ್ಟ ಸಿಂಹದಂತೆ ಬಿದ್ದಿರುವ ವಾಲಿಯನ್ನೂ ಬಿಲ್ಲನ್ನು ಅಪ್ಪಿ ನಿಂತಿದ್ದ ರಾಮಲಕ್ಷ್ಮಣರನ್ನೂ ಅಣ್ಣನನ್ನು ಕೊಲ್ಲಿಸಿದ ಸುಗ್ರೀವನನ್ನೂ ತಾರೆ ಕಂಡಳು. ಆ ದೃಶ್ಯವನ್ನು ಕಂಡು ಆಕೆ 'ಆರ್ಯಪುತ್ರ' ಎಂದು ಕುರರ ಪಕ್ಷಿಯಂತೆ ಕೂಗುತ್ತ ಮೂರ್ಛೆಹೋದಳು. ತಾರೆಯನ್ನೂ ಅವಳ ಜೊತೆಯಲ್ಲಿ ಬಂದ ಅಂಗದನನ್ನೂ ಕಂಡು ಸುಗ್ರೀವನು ದುಃಖದಿಂದ ಕಣ್ಣೀರು ತುಂಬಿದನು.

ಮೆಲ್ಲಮೆಲ್ಲನೆ ಎಚ್ಚರ ತಿಳಿದು, ತಾರೆ ಗಂಡನನ್ನು ಅಪ್ಪಿಕೊಂಡು ವಿಲಾಪಿಸತೊಡಗಿದಳು: "ವಾನರಶ್ರೇಷ್ಠ, ದೀನಳಾದ ನನ್ನನ್ನು ಏಕೆ ಮಾತನಾಡಿಸದಿರುವೆ? ನಿನ್ನಂಥ ರಾಜೋತ್ತಮರು ಉತ್ತಮವಾದ ಹಾಸಿಗೆಯಲ್ಲಿ ಮಲಗುವುದನ್ನು ಬಿಟ್ಟು ಭೂಮಿಯಲ್ಲಿ ಮಲಗುವುದು ಯೋಗ್ಯವೆ? ಅಯ್ಯೋ, ನನಗಿಂತಲೂ ನಿನಗೆ ಈ ಭೂಮಿ ಪ್ರಿಯಳೆನಿಸಿದಳೆ? ನಿನ್ನ ಸಾವಿನಿಂದ ನಾನು ಶೋಕಸಾಗರದಲ್ಲಿ ಮುಳುಗಿಹೋದೆ. ವನಗಳಲ್ಲಿ ನಾವೆಸಗಿದ ವಿಹಾರಗಳು ಇಂದಿಗೆ ಕೊನೆಗಂಡುವು. ನಿನ್ನನ್ನು ನೋಡಿ ಸಾವಿರ ಹೋಳಾಗದಿರುವ ನನ್ನ ಹೃದಯ ನಿಜವಾಗಿಯೂ ಪಾಷಾಣಕ್ಕೆ ಸಮಾನವಾದುದು. ನನ್ನ ಮಾತನ್ನು ನೀನು ಕೇಳದಾದೆ. ಆದಕಾರಣ ಸುಗ್ರೀವನ ಹೆಂಡತಿಯನ್ನು ಅಪಹರಿಸಿದುದಕ್ಕೆ ತಕ್ಕ ಫಲ ನಿನಗುಂಟಾಯಿತು. ಈಗ ನಿನ್ನನ್ನು ಹೊಂದುವ ಅಪ್ಸರೆಯರು ನನಗಿಂತಲೂ ಧನ್ಯರು. ನಾನಾದರೋ ಶೋಕದಿಂದ ಕುಗ್ಗಿ ವೈಧವ್ಯವನ್ನು ಧರಿಸಬೇಕಾಯಿತು. ಸುಗ್ರೀವನು ಕೋಪಗೊಂಡರೆ ಸುಕುಮಾರನಾದ ಅಂಗದನ ಅವಸ್ಥೆ ಏನಾಗುವುದೊ?

ವತ್ಸ ಅಂಗದ, ಧರ್ಮವತ್ಸಲನಾದ ನಿನ್ನ ತಂದೆಯನ್ನು ಚೆನ್ನಾಗಿ ನೋಡು. ಇನ್ನು ಮುಂದೆ ಅವನ ದರ್ಶನ ನಿನಗೆ ದುರ್ಲಭ. ಕಪಿವೀರ, ಈ ನಿನ್ನ ಮಗನ ಮಂಡೆಯನ್ನು ಆಘ್ರಾಣಿಸಿ, ಅವನಿಗೆ ಉಚಿತವಾದ ಬುದ್ಧಿಮಾತುಗಳನ್ನಾಡು. ಅಯ್ಯೋ, ನಿನ್ನನ್ನು ಹೊಡೆದು ಶ್ರೀರಾಮನು ಮಹತ್ಕಾರ್ಯವನ್ನು ಸಾಧಿಸಿದನು. ಸುಗ್ರೀವ, ನಿನ್ನ ಆಸೆ ಕೈಗೂಡಿತಷ್ಟೆ. ಇನ್ನು ಮುಂದೆ ಯಾರ ಭಯವೂ ಇಲ್ಲದೆ ರುಮೆಯೊಡನೆ ಈ ಕಪಿ ರಾಜ್ಯವನ್ನು ಅನುಭವಿಸು. ವಾನರ ಶ್ರೇಷ್ಠ, ಅಳುತ್ತಿರುವ ನನ್ನನ್ನೇಕೆ ಮಾತನಾಡಿಸ ಲೊಲ್ಲೆ. ನಿನಗೆ ಬಹುಪ್ರಿಯನಾದ ಈ ಅಂಗದನನ್ನು ಬಿಟ್ಟು ನೀನೆಲ್ಲಿಗೆ ಹೋಗುವೆ? ಬಹುದೂರ ಪ್ರಯಾಣ ಹೊರಟಿರುವ ನೀನು ನನ್ನ ಅಪರಾಧಗಳನ್ನು ಮನ್ನಿಸು. ಇಗೋ ನಿನ್ನ ಪಾದಗಳ ಮೇಲೆ ತಲೆಯಿಟ್ಟು ಬೇಡುತ್ತೇನೆ."

'ಇಷ್ಟನ್ನು ನುಡಿದು ತಾರೆ ದುಃಖವನ್ನು ತಡೆಯಲಾರದೆ ಹೋದಳು. ಪ್ರಾಯೋಪವೇಶ ಮಾಡಲು ನಿಶ್ಚೈಸಿ ಆಕೆ ನೆಲದ ಮೇಲೆ ಬಿದ್ದುಬಿಟ್ಟಳು. ಆಕಾಶದಿಂದ ಜಾರಿಬಿದ್ದ ನಕ್ಷತ್ರದಂತೆ ಭೂಮಿಯ ಮೇಲೆ ಬಿದ್ದಿದ್ದ ತಾರೆಯನ್ನು ನೋಡಿ ಹನುಮಂತನು ಆಕೆಯನ್ನು ಸಂತೈಸಲು ಈ ರೀತಿ ನುಡಿದನು: "ಲೋಕದಲ್ಲಿ ಪ್ರತಿ ಯೊಬ್ಬನೂ ತಾನು ಮಾಡಿದ ಕರ್ಮಗಳಿಗೆ ತಕ್ಕಂತೆ ಸುಖದುಃಖಗಳನ್ನು ಹೊಂದುತ್ತಾನೆ. ಆದ ಕಾರಣ ತಾನು ಮಾಡಿದ ಕರ್ಮದ ಫಲವಾಗಿ ವಾಲಿ ಸುಗ್ರೀವ ನಿಂದ ಹತನಾದನು. ಸತ್ತವರ ವಿಷಯವನ್ನು ಕುರಿತು ಯೋಚಿಸಿ ಫಲವಿಲ್ಲ. ಈಗ ನಿನ್ನನ್ನೇ ಕುರಿತು ನೀನು ಚಿಂತಿಸಬೇಕಾಗಿದೆ. ನೀನು ಎಲ್ಲವನ್ನೂ ತಿಳಿದವಳು. ನಿನ್ನ ಮಗನ ಮುಂದಿನ ಏಳಿಗೆಯನ್ನು ಕುರಿತು ನೀನು ಚಿಂತಿಸಬೇಡವೆ? ವಾಲಿ ಧರ್ಮದಿಂದ ರಾಜ್ಯಭಾರ ಮಾಡಿದನು. ದುಃಖಿತರಾದ ಬಂಧುಗಳನ್ನು ಸಂತೈಸಿ, ಉಪಕಾರ ವೆಸಗಿದನು. ಅರ್ಥಿಗಳ ಇಷ್ಟಾರ್ಥವನ್ನು ಕೈಗೂಡಿಸಿದನು. ಇಂಥ ಮಹಾತ್ಮನನ್ನು ಕುರಿತು ಚಿಂತಿಸಿ ದುಃಖಿಸಬೇಡ. ಈ ವಾನರ ರಾಜ್ಯವನ್ನು ನಿನ್ನ ಮಗನಾದ ಅಂಗದನು ಪಾಲಿಸಲಿ. ಅಂಗದನಿಂದ ವಾಲಿಗೆ ಸಂಸ್ಕಾರ ಮಾಡಿಸಿ, ಅವನನ್ನು ಸಿಂಹಾಸನದಲ್ಲಿ ಕೂರಿಸಿ ಆ ಮಗನ ಏಳ್ಗೆಯನ್ನು ಕಂಡು ನಿನ್ನ ದುಃಖವನ್ನು ಹಿಡಿದುಕೊ." ಹನುಮಂತನ ಮಾತಿನಿಂದ ತಾರೆಗೆ ಶಾಂತಿ ದೊರಕಲಿಲ್ಲ. ಅಂಗದನ ಪಟ್ಟಾಭಿಷೇಕದಲ್ಲಿ ಭಾಗವಹಿಸುವುದಾಗಲಿ, ವಾಲಿಗೆ ಸಂಸ್ಕಾರವೆಸಗುವುದಾಗಲಿ ಆಕೆಗೆ ರುಚಿಸಲಿಲ್ಲ. ವಾಲಿ ಸತ್ತಮೇಲೆ ಆ ಭಾರ ಸುಗ್ರೀವನಿಗೆ ಸೇರಿತಷ್ಟೆ. ಅಂಗದನಂತಹ ನೂರು ಮಕ್ಕಳನ್ನು ಸಾಕುವುದಕ್ಕಿಂತ ವೀರನಾದ ವಾಲಿಯೊಡನೆ ಸಹಗಮನವೇ ಆಕೆಗೆ ಲೇಸೆಂದು ತೋರಿತು.

ಈ ವೇಳೆಗೆ ವಾಲಿ ನಿಟ್ಟುಸಿರು ಬಿಡುತ್ತ ಮೆಲ್ಲಮೆಲ್ಲನೆ ಚೇತರಿಸಿಕೊಂಡನು. ಜಯವನ್ನು ಹೊಂದಿ ತನ್ನ ಮಗನ ಮುಂದೆ ನಿಂತ ಸುಗ್ರೀವನನ್ನು ಕರೆದು ಸ್ಪಷ್ಟವಾದ ಮಾತಿನಿಂದ ಅವನಿಗೆ ಸ್ನೇಹಪೂರ್ವಕವಾಗಿ ಈ ರೀತಿ ನುಡಿದನು: "ವತ್ಸ, ನಿನ್ನ ಹೆಂಡತಿಯನ್ನು ಬಲಾತ್ಕಾರದಿಂದ ಸೆಳೆದೊಯ್ದು, ನಿನ್ನನ್ನು ಅಡವಿಗಟ್ಟಿದನೆಂದು ನನ್ನಲ್ಲಿ ದೋಷವನ್ನೆಣಿಸಬೇಡ. ದೈವಗತಿಯಿಂದ ನನಗೆ ಈ ಗತಿಯುಂಟಾಯಿತು.

ನಾವಿಬ್ಬರೂ ಒಡ ಹುಟ್ಟಿದವರಾದರೂ ಪ್ರೀತಿಯಿಂದಿದ್ದು ರಾಜ್ಯವಾಳುವ ಪುಣ್ಯವನ್ನು ಪಡೆದು ಬರಲಿಲ್ಲ. ಈಗ ನೀನೇ ಈ ವಾನರ ರಾಜ್ಯವನ್ನು ಅನುಭವಿಸತಕ್ಕದ್ದು. ನಾನಾದರೋ ಈ ಐಶ್ವರ್ಯ, ಈ ರಾಜ್ಯ, ಈ ಕೀರ್ತಿಗಳನ್ನು ಬಿಟ್ಟು ಬಹುದೂರ ಪ್ರಯಾಣ ಹೊರಟಿದ್ದೇನೆ. ಈ ನನ್ನ ಮಗನಾದ ಅಂಗದನನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಕಾಣು. ಯಾವ ವಿಧದಲ್ಲಿಯೂ ತಂದೆಯಿಲ್ಲದ ಕೊರತೆಯನ್ನು ಅವನಿಗುಂಟುಮಾಡಬೇಡ. ರಾಕ್ಷಸರ ಸಂಹಾರ ಕಾರ್ಯದಲ್ಲಿ ನಿನಗಿಂತಲೂ ಅವನು ಮುಂದಾಗುವನು. ಯುವಕನೂ ಬಲಶಾಲಿಯೂ ಆದ ಅಂಗದನು ಯುದ್ಧದಲ್ಲಿ ತನ್ನ ಬಲಕ್ಕೆ ಅನುರೂಪವಾದ ಕಾರ್ಯಗಳನ್ನು ಮಾಡುವನು. ಈಗ ನೀನು ಮಿತ್ರನಾದ ಶ್ರೀರಾಮನ ಕಾರ್ಯವನ್ನು ಶ್ರದ್ಧೆಯಿಂದ ಮಾಡು. ಮಿತ್ರದ್ರೋಹಕ್ಕೆ ಮಿಗಿಲಾದ ಮತ್ತೊಂದು ಪಾಪ ಈ ಲೋಕದಲ್ಲಿಲ್ಲ. ಇಗೋ, ನಾನು ಸತ್ತ, ಇದರ ತೇಜಸ್ಸು ಅಳಿಯುವುದಕ್ಕೆ ಮುಂಚೆ ನನ್ನ ಕೊರಳಿನಲ್ಲಿರುವ ಕಾಂಚನಮಾಲೆಯನ್ನು ಧರಿಸು."

ಅಣ್ಣನಾದ ವಾಲಿಯ ಮಾತುಗಳನ್ನು ಕೇಳಿ ಸುಗ್ರೀವನ ದುಃಖ ಉಕ್ಕೇರಿ ಬಂತು. ರಾಹು ಹಿಡಿದ ಚಂದ್ರನಂತೆ ಅವನು ದೀನನಾಗಿ ಕುಗ್ಗಿ ಹೋದನು. ಆದರೂ ಅಣ್ಣನ ಮಾತಿನಂತೆ ಆ ಹಾರವನ್ನು ತೆಗೆದುಕೊಂಡು ತನ್ನ ಕೊರಳಲ್ಲಿ ಧರಿಸಿಕೊಂಡನು. ಅನಂತರ ಮರಣೋನ್ಮುಖನಾದ ವಾಲಿ ಮಗನಲ್ಲಿದ್ದ ಪ್ರೇಮದಿಂದ ಅಂಗದನನ್ನು ಕುರಿತು ನುಡಿದನು: "ವತ್ಸ, ನಾನು ಇಷ್ಟರಲ್ಲೆ ಪರಲೋಕವನ್ನು ಕುರಿತು ತೆರಳುತ್ತೇನೆ. ನನ್ನ ಪ್ರೇಮದಿಂದ ವಂಚಿತನಾದ ನೀನು ಇನ್ನು ಮುಂದೆ ಸುಗ್ರೀವನ ಇಷ್ಟದಂತೆ ನಡೆದುಕೊ. ಸುಗ್ರೀವನ ಹಗೆಗಳೊಡನೆ ಸ್ನೇಹ ಬೆಳೆಸಬೇಡ. ಜಿತೇಂದ್ರಿಯನಾದ ಸುಗ್ರೀವನ ಏಳಿಗೆಯನ್ನು ಹಾರೈಸುತ್ತಾ, ಅವನ ವಶದಲ್ಲಿರು."

ಹೀಗೆ ಮಾತನಾಡುತ್ತಿರುವಾಗಲೆ ರಾಮಬಾಣದ ವೇದನೆ ಪ್ರಬಲವಾಗಿ ವಾಲಿ ಹಲ್ಲುಕಿರಿದು ಬಾಯಿತೆರೆದು ಪ್ರಾಣಗಳನ್ನು ತೊರೆದನು. ವಾನರಾಧಿಪನಾದ ವಾಲಿ ಸ್ವರ್ಗವನ್ನು ಸೇರಲು, ಎಲ್ಲ ವಾನರರೂ ಗಟ್ಟಿಯಾಗಿ ಗೋಳಿಟ್ಟರು. ಕಿಷ್ಕಿಂಧೆ, ಬೆಟ್ಟ, ಕಾಡು ಇವೆಲ್ಲ ವಾಲಿಯ ಸಾವಿನಿಂದ ಬರಿದಾಗಿ ತೋರಿದುವು. ಕಪಿವೀರರ ಮುಖಗಳೆಲ್ಲ ಕಳೆಗುಂದಿದುವು. ಸಿಂಹದಿಂದ ಕೆಳಗೆ ಬೀಳಿಸಲ್ಪಟ್ಟ ಗೂಳಿಯಂತೆ, ಭೂಮಿಯ ಮೇಲೆ ಬಿದ್ದಿದ್ದ ಮಹಾಬಲಶಾಲಿಯಾದ ವಾಲಿಯನ್ನು ಸುತ್ತುಗಟ್ಟಿ ನಿಂತ ವಾನರರು ಗೋಳಿಡುತ್ತಿದ್ದರು. ಕಡಿದುಹಾಕಿದ ದೊಡ್ಡ ವೃಕ್ಷವನ್ನು ಆಶ್ರಯಿಸಿದ ಲತೆಯಂತೆ ತಾರೆ ದುಃಖದಲ್ಲಿ ಮುಳುಗಿ ಗಂಡನನ್ನು ಅಪ್ಪಿಕೊಂಡು ಭೂಮಿಯಲ್ಲಿ ಬಿದ್ದಳು.

---

೬

# ವಾಲಿಯ ಚಿತೆ

ಗಂಡನ ಒಡಲನ್ನು ಅಪ್ಪಿಕೊಂಡು ತಾರೆ ಬಹುವಿಧವಾಗಿ ಗೋಳಿಡುತ್ತಿರಲು, ನೀಲನೆಂಬ ಕಪಿವೀರನು, ಬೆಟ್ಟದ ಗುಹೆಯಲ್ಲಿ ಅಡಗಿರುವ ಸರ್ಪವನ್ನು ಹೊರಗೆಳೆಯುವಂತೆ, ವಾಲಿಯ ಎದೆಯಲ್ಲಿ ನೆಟ್ಟ ಬಾಣವನ್ನು ಹೊರಗೆಳೆದು ತೆಗೆದನು. ಆಗ ವಾಲಿಯ ಮೈಯಿಂದ ರಕ್ತ ಗೈರಿಕಾದಿಧಾತುಗಳಿಂದ ಕೂಡಿದ ಜಲಧಾರೆಗಳಂತೆ ಧಾರೆಧಾರೆಯಾಗಿ ಹರಿಯತೊಡಗಿತು. ಆಗ ತಾರೆ ವಾಲಿಯ ಮೈಮೇಲಿನ ಧೂಳನ್ನು ತೊಡೆಯುತ್ತ, ಕಂಬನಿಯಿಂದ ಅವನ ದೇಹವನ್ನು ನೆನಸುತ್ತ, ತನ್ನ ಮುದ್ದು ಮಗನಾದ ಅಂಗದನನ್ನು ಹತ್ತಿರಕ್ಕೆ ಕರೆದು "ವತ್ಸ, ನಿನ್ನ ತಂದೆ ಮರಣಹೊಂದಿದನು. ವೈರಕ್ಕೆ ತಕ್ಕಗತಿ ವೀರನಾದ ವಾಲಿಗುಂಟಾಯಿತು. ಯಮಪುರಿಗೆ ತೆರಳುತ್ತಿರುವ ಮಾನವಂತನಾದ ನಿನ್ನ ತಂದೆಗೆ ನಮಸ್ಕರಿಸು" ಎಂದಳು. ತಾಯಿಯ ಮಾತಿನಂತೆ ಅಂಗದನು ಮೇಲೆದ್ದು ತನ್ನೆರಡು ಕೈಗಳಿಂದ ತಂದೆಯ ಪಾದಗಳನ್ನು ಹಿಡಿದುಕೊಂಡು 'ಅಂಗದನಾದ ನಾನು ನಮಸ್ಕರಿಸುತ್ತೇನೆ' ಎಂದು ನಮಸ್ಕರಿಸಿದನು. ಆಗ ದುಃಖವನ್ನು ತಡೆಯಲಾರದೆ ತಾರೆ "ಪ್ರಿಯನೆ, ನಮಸ್ಕರಿಸುವ ಅಂಗದನನ್ನು ಕುರಿತು ಮೊದಲಿನಂತೆ, 'ವತ್ಸ, ದೀರ್ಘಾಯುವಾಗು' ಎಂದು ಏಕೆ ಹರಸದಿರುವೆ? ನೀನು ಸಾವೈದಲು ಇಂದಿಗೆ ನನ್ನ ಸೌಭಾಗ್ಯವೆಲ್ಲ ಹಾಳಾಯಿತು" ಎಂದು ಮತ್ತೆ ಗೋಳಿಟ್ಟಳು.

ತಾರೆಯ ದುಃಖವನ್ನು ಕಂಡೊಡನೆಯೆ ಅಣ್ಣನ ಮರಣದ ಸಂಕಟ ಹೆಚ್ಚಿದಂತಾಗಿ ಕಂಬನಿದುಂಬಿ ಸುಗ್ರೀವನು ಅತ್ತನು. ಅವನ ಧೈರ್ಯ ಸ್ಥೈರ್ಯಗಳು ಕುಸಿದುಬಿದ್ದುವು. ಶ್ರೀರಾಮನ ಬಳಿಗೆ ಬಂದು ಅವನನ್ನು ಕುರಿತು ಸುಗ್ರೀವನು ಹೇಳಿದನು : "ರಾಮಚಂದ್ರ ನೀನೇನೋ ನಿನ್ನ ಪ್ರತಿಜ್ಞೆಯಂತೆ ಕಾರ್ಯಮಾಡಿ ಮುಗಿಸಿದೆ. ಆದರೆ ಈಗ ನನ್ನ ಮನಸ್ಸು ಭೋಗಗಳಿಂದ ಹಿಮ್ಮೆಟ್ಟಿದೆ. ಅಣ್ಣನಾದ ವಾಲಿ ಮಡಿದನು. ತಾರೆ ಗಂಡ ಮಡಿದ ಸಂಕಟದಿಂದ ಬಹುವಾಗಿ ಗೋಳಿಡುತ್ತಿದ್ದಾಳೆ. ತಂದೆಯ ಸಾವಿನಿಂದ ಅಂಗದನು ಬದುಕುವನೊ ಇಲ್ಲವೊ ಎಂಬ ಸಂಶಯವುಂಟಾಗಿದೆ. ಪಟ್ಟಣಿಗರ ಗೋಳಂತೂ ಹೇಳತೀರದಾಗಿದೆ. ಈ ನೋಟವನ್ನು ಕಂಡು ಎದೆಗರಗಿ ನನಗೆ ರಾಜ್ಯವೆ ಬೇಡವಾಗಿದೆ. ನನಗುಂಟಾದ ಅಪಮಾನಕ್ಕೆ ವಾಲಿವಧೆ ನನಗೆ ಹಿತವೆನ್ನಿಸಿದರೂ, ಈಗ ಇದಕ್ಕಾಗಿ ಪರಿತಪಿಸುತ್ತಿದ್ದೇನೆ. ರಾಜ್ಯವಾಳುವುದಕ್ಕಿಂತ ಈ ಋಷ್ಯಮೂಕ ಪರ್ವತದಲ್ಲಿ ವಾಸಿಸುವುದೆ ಹೆಚ್ಚು ಶ್ರೇಯಸ್ಕರವೆಂದು ಭಾವಿಸುತ್ತೇನೆ. ಮಹಾತ್ಮನಾದ ವಾಲಿ ಎಷ್ಟೋ ಬಾರಿ ನನ್ನನ್ನು ಕೊಲ್ಲದೆ 'ನಿನ್ನ ಮನಬಂದಂತೆ ಚರಿಸು ಹೋಗು' ಎಂದು ಹೇಳುತ್ತಿದ್ದನು. ಮಹಾತ್ಮನಾದ ಆತನಿಗೆ ಅನುವಾದ ಮಾತು ಅದು. ಗುಣಾಢ್ಯನಾದ

ಅಂಥ ಅಣ್ಣನನ್ನು ಕೊಲ್ಲಿಸಿದ ನಾನು ಈ ರಾಜ್ಯವನ್ನು ಹೇಗೆ ಆಳಲಿ? ಅಣ್ಣನ ಸಾವಿನಿಂದ ನನಗೆ ಘೋರವಾದ ಪಾಪವುಂಟಾಯಿತು. ಈ ಪಾಪವನ್ನು ಆಚರಿಸಿರುವ ನಾನು ಪ್ರಜೆಗಳಿಗೆ ಹೇಗೆ ಪ್ರಿಯನಾದೇನು? ಚಿನ್ನವನ್ನು ಬೆಂಕಿಯಲ್ಲಿ ಕಾಯಿಸಿದರೆ, ತನ್ನ ಕಲ್ಮಷವನ್ನು ಕಳೆದುಕೊಂಡ ಅದು ಶುಭ್ರವಾಗುವಂತೆ, ಬೆಂಕಿಯಲ್ಲಿ ಬಿದ್ದು ನಾನು ಈ ಪಾಪವನ್ನು ಕಳೆದುಕೊಳ್ಳುತ್ತೇನೆ. ಇನ್ನಾವ ದೇಶದಲ್ಲಿ ತಾನೆ ಇಂಥ ಅಣ್ಣನನ್ನು ಕಾಣಲಾದೀತು? ಅಂಗದನು ಬದುಕಿದರೆ ತಾರೆ ಬದುಕುತ್ತಾಳೆ. ಆದರೆ ಮಗನನ್ನು ಕಳೆದುಕೊಂಡ ದೇವಿ ಬದುಕಳೆಂದೇ ತೋರುತ್ತದೆ. ನಾನು ಅಗ್ನಿಪ್ರವೇಶ ಮಾಡಿದರೂ ಈ ವಾನರ ವೀರರು ನಿನ್ನ ಕಾರ್ಯವನ್ನು ನೆರವೇರಿಸಿಕೊಡುತ್ತಾರೆ. ಕುಲನಾಶಕನೂ ಬದುಕಲು ಯೋಗ್ಯನಲ್ಲದವನೂ ಆದ ನನಗೆ ಅಗ್ನಿಪ್ರವೇಶವಮಾಡಲು ಅಪ್ಪಣೆ ಕೊಡು."

ದೀನನಾದ ಸುಗ್ರೀವನ ನುಡಿಗೇಳಿ, ಕಂಬನಿದುಂಬಿ, ವೀರನಾದ ಶ್ರೀರಾಮನಿಗೂ ಕ್ಷಣಕಾಲ ಏನುಮಾಡಲೂ ತೋರದಾಯಿತು. ಬಳಿಕ ರಾಮನು ಶೋಕದಲ್ಲಿ ಮುಳುಗಿ ಹೋದ ತಾರೆಯನ್ನು ಸಂತೈಸಲು ಯತ್ನಿಸಿದನು. ಸೂರ್ಯನಂತೆ ತೇಜಸ್ವಿಯಾದ ರಾಮನನ್ನು ಕಂಡು, ಅವನೇ ರಾಮನೆಂದು ಅರಿತ ತಾರೆ ಅವನಿಗೆ "ರಾಮಚಂದ್ರ, ನೀನು ಜಿತೇಂದ್ರಿಯ; ಧರ್ಮಜ್ಞ. ಉತ್ತಮವಾದ ಕೀರ್ತಿಯನ್ನು ಪಡೆದವನು. ಯುಕ್ತಾ ಯುಕ್ತಗಳನ್ನು ತಿಳಿದವನು. ಆದ್ದರಿಂದ ಯಾವ ಒಂದು ಬಾಣದಿಂದ ನನ್ನ ಗಂಡನನ್ನು ಹೊಡೆದು ಕೊಂದೆಯೋ ಅದೇ ಬಾಣದಿಂದ ನನ್ನನ್ನು ಹೊಡೆದು ಕೊಲ್ಲು. ಏಕೆಂದರೆ ನನ್ನನ್ನು ಅಗಲಿ ವಾಲಿ ಇರುವುದಿಲ್ಲ. ನನ್ನನ್ನು ಕೊಲ್ಲುವುದರಿಂದ ಸ್ತ್ರೀಹತ್ಯಾ ದೋಷ ಬರುವುದೆಂದು ಶಂಕಿಸಬೇಡ. ನಾನು ವಾಲಿಯ ಅರ್ಧ ಅಂಶಳೆಂದು ತಿಳಿದು ಹೊಡೆದರೆ ನಿನಗೆ ಹೇಗೆತಾನೆ ದೋಷವುಂಟಾದೀತು? ನನಗೆ ಪ್ರಿಯವನ್ನುಂಟು ಮಾಡುವ ಬಯಕೆ ನಿನಗಿದ್ದರೆ ನನ್ನನ್ನು ಕೊಂದು ವಾಲಿಯ ಬಳಿಗೆ ಕಳುಹು" ಎಂದು ಗೋಳಿಟ್ಟಳು. ಶ್ರೀರಾಮನು ಆಕೆಯನ್ನು ಸಂತೈಸಿ "ವೀರಪತ್ನಿಯಾದ ನೀನು ಈ ರೀತಿ ಶೋಕಿಸಕೂಡದು. ವಿಧಿನಿಯಮದಂತೆ ಮನುಷ್ಯರು ಸುಖದುಃಖಗಳನ್ನು ಅನುಭವಿಸು ವರು. ನಿನ್ನ ಮಗನಾದ ಅಂಗದನು ಯುವರಾಜನಾಗುತ್ತಾನೆ. ಆ ಸಂತೋಷವನ್ನು ಕಂಡು ಈ ದುಃಖವನ್ನು ಮರೆತುಬಿಡು" ಎಂದನು. ಶ್ರೀರಾಮನ ವಾಣಿಯ ಧೈರ್ಯ ತಾರೆಯ ಹೃದಯಕ್ಕೂ ತಗುಲಿದಂತಾಗಿ ಆಕೆಯ ಮನಸ್ಸು ಒಯ್ಯನೊಯ್ಯನೆ ಸಮಾಧಾನಹೊಂದಿತು.

ತಾರೆಯನ್ನು ಸಂತೈಸಿ, ಶ್ರೀರಾಮನು ಮುಂದೆ ಮಾಡಬೇಕಾದ ಕಾರ್ಯಗಳಿಗಾಗಿ ಸುಗ್ರೀವ ಅಂಗದರನ್ನು ಕುರಿತು "ನೀವು ಹೀಗೆ ಅಳುತ್ತಿದ್ದರೆ ವಾಲಿಗೆ ಉತ್ತಮವಾದ ಲೋಕಗಳು ಲಭಿಸವು. ಸತ್ತವರಿಗಾಗಿ ನೀವು ಕಂಬನಿ ಸುರಿಸದಿರಿ. ಈಗ ವಾಲಿಗೆ ಸಂಸ್ಕಾರಮಾಡಲು ತಕ್ಕ ಏರ್ಪಾಟುಗಳನ್ನು ಮಾಡಬೇಕು. ವಿಧಿನಿಯಮದಂತೆ ಈ ಕೆಲಸ ನಡೆದಿದೆ. ಯುದ್ಧದಲ್ಲಿ ಮಡಿದ ವಾಲಿಗೆ ಅವನ ಪಾಪಗಳೆಲ್ಲ ನಾಶವಾಗಿ ಸ್ವರ್ಗ

ವುಂಟಾಗುವುದರಲ್ಲಿ ಸಂದೇಹವಿಲ್ಲ. ಮೇಲಾಗಿ ಮಹಾತ್ಮನಾದ ವಾಲಿ ಮೃತಿಹೊಂದಿದ ಕಾಲವೂ ಮಂಗಳಕರವಾದುದು. ಆದ್ದರಿಂದ ಮುಂದಿನ ಕೆಲಸ ನಡೆಯಲಿ" ಎಂದನು. ಅನಂತರ ಪ್ರಜ್ಞೆಯಿಲ್ಲದೆ ಬಿದ್ದಿದ್ದ ಸುಗ್ರೀವನನ್ನು ಲಕ್ಷ್ಮಣನು ಎಚ್ಚರಗೊಳಿಸಿ ವಾಲಿಯ ದಹನಕ್ರಿಯೆಗೆ ಏರ್ಪಡಿಸಬೇಕೆಂದು ತಿಳಿಯಹೇಳಿದನು.

ಲಕ್ಷ್ಮಣನ ನುಡಿಗೇಳಿದ ವಾನರರು ಉತ್ತಮವಾದ ಆಸನದಿಂದ ಕೂಡಿ, ಚಿತ್ರಗಳಿಂದ ಅಲಂಕಾರಗೊಂಡು ಸಿದ್ಧಪುರುಷರ ವಿಮಾನದಂತಿದ್ದ ಮನೋಹರವಾದ ಪಲ್ಲಕ್ಕಿಯನ್ನು ಕಿಷ್ಕಿಂಧೆಯಿಂದ ಹೊತ್ತು ತಂದರು. ಹೂಗಳಿಂದಲೂ ಕಿರುಗಂಟೆಗಳಿಂದಲೂ ಅಲಂಕೃತವಾದ ಆ ಪಲ್ಲಕ್ಕಿ ಬಾಲಸೂರ್ಯನಂತೆ ಹೊಳೆಯುತ್ತಿತ್ತು. ಅದನ್ನು ನೋಡಿ ಶ್ರೀರಾಮನು ದಹನಕಾರ್ಯಕ್ಕಾಗಿ ವಾಲಿಯ ಶವವನ್ನು ಅದರಲ್ಲಿಟ್ಟು ಹೊತ್ತು ತರುವಂತೆ ಆಜ್ಞಾಪಿಸಿದನು. ಶ್ರೀರಾಮನ ಅಪ್ಪಣೆಯಂತೆ ವಾನರರು ವಾಲಿಯನ್ನು ನಾನಾಬಗೆಯ ಹೂಮಾಲೆಗಳಿಂದಲೂ ವಸ್ತ್ರಗಳಿಂದಲೂ ಆಭರಣಗಳಿಂದಲೂ ಅಲಂಕರಿಸಿದರು. ಆನಂತರ ರಾಜನಿಗೆ ತಗುವ ರೀತಿಯಲ್ಲಿ ಸಂಸ್ಕಾರ ಮಾಡುವ ಉದ್ದೇಶದಿಂದ, ಗೋಳಾಡುತ್ತಿದ್ದ ವಾನರರು ಆ ದೇಹವನ್ನು ಪಲ್ಲಕ್ಕಿಯಲ್ಲಿಟ್ಟು, ನಾನಾವಿಧವಾದ ರತ್ನಗಳನ್ನು ದಾನಮಾಡುತ್ತ ಅದನ್ನು ಹೊತ್ತು ನಡೆದರು. ಆ ವಾಹನದ ಹಿಂದೆ ವಾಲಿಯ ಬಂಧುಗಳೂ ತಾರೆಯೂ ಅಂಗದನೂ ಪ್ರಲಾಪಿಸುತ್ತ ನಡೆದರು. ವಾನರಸ್ತ್ರೀಯರ ಮತ್ತು ಬಂಧುಗಳ ಪ್ರಲಾಪಗಳಿಂದ ಕಾಡುಗಳೂ ಬೆಟ್ಟಗಳೂ ರೋದಿಸುತ್ತಿರುವಂತೆ ತೋರುತ್ತಿದ್ದುವು. ಹೀಗೆ ಬಲಶಾಲಿಗಳಾದ ವಾನರರು ಆ ಪಲ್ಲಕ್ಕಿಯನ್ನು ಹೊತ್ತು ನಡೆದು, ಜನರಹಿತವಾದ ಒಂದು ಬೆಟ್ಟದ ನದಿಯ ಮರಳುದಿಣ್ಣೆಯಲ್ಲಿ ಅದನ್ನು ಇಳುಹಿ ಚಿತೆಯನ್ನು ಹೂಡಿದರು.

ತಾರೆ ವಾಲಿಯ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ಮತ್ತೆ "ಹಾ, ವಾನರ ಮಹಾರಾಜ! ಹಾ ನಾಥ! ಮಹಾಬಾಹೋ! ನನ್ನನ್ನು ನೋಡಿ ಏಕೆ ಮಾತನಾಡದಿರುವೆ? ಶ್ರೀರಾಮನ ಒಂದು ಬಾಣ ನಿನಗೆ ಮೃತ್ಯುವಾಗಿ ಪರಿಣಮಿಸಿತೆ? ಆ ಒಂದು ಬಾಣದಿಂದ ಎಷ್ಟುಜನ ವಾನರ ಸ್ತ್ರೀಯರಿಗೆ ವೈಧವ್ಯವುಂಟಾಯಿತು! ನಿನ್ನನ್ನು ಸುತ್ತುಗಟ್ಟಿ ನಿಂತಿರುವ ಈ ಸುಗ್ರೀವನನ್ನೂ ನನ್ನನ್ನೂ ಅಂಗದಕುಮಾರನನ್ನೂ ಮಂತ್ರಿಗಳನ್ನೂ ಪುರಪರಿಜನರನ್ನೂ ಏಕೆ ನೋಡದಿರುವೆ? ನುಡಿಸದಿರುವೆ?" ಎಂದು ಗೋಳಿಟ್ಟಳು. ಇದನ್ನು ನೋಡಿ ಉಳಿದ ವಾನರ ಸ್ತ್ರೀಯರು ಗಂಡನ ಮೇಲೆ ಬಿದ್ದು ಹೊರಳುತ್ತಿರುವ ತಾರೆಯನ್ನು ಮೇಲಕ್ಕೆ ಎಬ್ಬಿಸಿದರು. ಅಂಗದನು ಸುಗ್ರೀವನೊಡನೆ ಅಳುತ್ತಳುತ್ತಲೆ ತಂದೆಯ ದೇಹವನ್ನು ಎತ್ತಿ ಚಿತೆಯಮೇಲಿರಿಸಿದನು. ಬಳಿಕ ಯಮಲೋಕವನ್ನು ಕುರಿತು ತೆರಳುತ್ತಿರುವ ತಂದೆಯನ್ನು ಅಪ್ರದಕ್ಷಿಣೆ ಮಾಡಿ ಶಾಸ್ತ್ರೋಕ್ತವಾಗಿ ಅಗ್ನಿಸಂಸ್ಕಾರಮಾಡಿದನು. ಸಂಸ್ಕಾರ ಮುಗಿದ ಬಳಿಕ ಸುಗ್ರೀವನು ತಾರೆಯಿಂದಲೂ ಇತರ ವಾನರರಿಂದಲೂ ಕೂಡಿ ನದಿಯಲ್ಲಿ ಮಿಂದು ವಾಲಿಗೆ ತಿಲೋದಕ ಕೊಟ್ಟನು. ಈ ನೋಟವನ್ನು ನೋಡಿ ದಶರಥನ ಹಿರಿಯಮಗನಿಗೆ ದುಃಖ ಉಕ್ಕಿ

ಬರುತ್ತಿದ್ದರೂ ಅದನ್ನು ತಡೆದು, ಸುಗ್ರೀವ ಅಂಗದರಿಂದ ಧೈರ್ಯನಿಧಿಯಾದ ಆತನು ಪ್ರೇತಕಾರ್ಯವನ್ನು ಮಾಡಿಸಿದನು.

ಸಂಸ್ಕಾರಗಳೆಲ್ಲವೂ ಮುಗಿದಮೇಲೆ ಒದ್ದೆ ಬಟ್ಟೆಗಳನ್ನುಟ್ಟ ವಾನರರು ಸುಗ್ರೀವನನ್ನು ಮುಂದಿಟ್ಟುಕೊಂಡು ಶ್ರೀರಾಮನ ಬಳಿಗೆ ಬಂದರು. ಆಗ ಮೇರುಪರ್ವತಕ್ಕೆ ಸಮನಾದ ಕಾಂತಿಯು ಮತ್ತು ಬಾಲಸೂರ್ಯನಂತೆ ಹೊಳೆವ ವದನದ ಆಂಜನೇಯನು ಕೈಮುಗಿದುಕೊಂಡು ಈ ರೀತಿ ನುಡಿದನು : "ಎಲೈ ಸ್ವಾಮಿಯೆ, ನಿನ್ನ ಅನುಗ್ರಹದಿಂದ ಸುಗ್ರೀವನಿಗೆ ಈ ವಾನರ ರಾಜ್ಯ ದೊರಕಿತು. ನಿನ್ನ ಅಪ್ಪಣೆಯಂತೆ ನಿನ್ನನ್ನೂ ಇತರ ಸ್ನೇಹಿತರನ್ನೂ ಮುಂದಿಟ್ಟುಕೊಂಡು ಸುಗ್ರೀವನು ಕಿಷ್ಕಿಂಧೆಯನ್ನು ಹೊಗುತ್ತಾನೆ. ಅಲ್ಲಿ ಆತನು ಪಟ್ಟಾಭಿಷಿಕ್ತನಾಗಿ ನಿನ್ನನ್ನು ಪೂಜಿಸುವನು. ಪ್ರಯಾಣಕ್ಕೆ ಅಪ್ಪಣೆ ಕೊಡು." ಹನುಮಂತನ ಮಾತಿಗೆ ರಾಮನು "ಎಲೈ ಸೌಮ್ಯ, ತಂದೆಯ ಅಪ್ಪಣೆಯನ್ನು ಪಾಲಿಸುತ್ತಿರುವ ನಾನು ಹದಿನಾಲ್ಕು ವರ್ಷಗಳ ಕಾಲ, ಪಟ್ಟಣವನ್ನಾಗಲಿ, ಗ್ರಾಮವನ್ನಾಗಲಿ ಪ್ರವೇಶಿಸುವುದಿಲ್ಲ. ಆದ್ದರಿಂದ ವಾನರ ಶ್ರೇಷ್ಠನಾದ ಸುಗ್ರೀವನಿಗೆ ಸಿರಿಯ ತವರಾದ ಕಿಷ್ಕಿಂಧೆಯಲ್ಲಿ ಅಭಿಷೇಕ ನಡೆಯಲಿ" ಎಂದನು. ಹೀಗೆಂದು ಹೇಳಿ ಮರ್ಯಾದೆಯನ್ನು ಅರಿತ ಶ್ರೀರಾಮನು ಸುಗ್ರೀವನಿಗೆ "ಸುಗ್ರೀವ, ವೀರನಾದ ಅಂಗದನನ್ನು ಯೌವರಾಜ್ಯದಲ್ಲಿ ಅಭಿಷೇಕಮಾಡು. ವಾಲಿಯ ಮಗನಾದ ಇವನು ಪರಾಕ್ರಮದಲ್ಲಿ ನಿನಗೆ ಸಮನಾಗಿದ್ದಾನೆ. ಈಗ ತಾನೆ ವರ್ಷಾಕಾಲ ಮೊದಲಾಗಿದೆ. ಸೀತಾನ್ವೇಷಣಕ್ಕೆ ಈ ನಾಲ್ಕು ತಿಂಗಳು ಸಕಾಲವಲ್ಲ. ಈಗ ನೀನು ಮಂಗಳಕರವಾದ ಮುಹೂರ್ತದಲ್ಲಿ ನಿನ್ನ ರಾಜಧಾನಿಗೆ ಪ್ರವೇಶಮಾಡು. ಇಗೋ ಮುಂದೆ ಕಾಣುತ್ತಿರುವ ರಮ್ಯವಾದ ಬೆಟ್ಟದ ಗುಹೆಯಲ್ಲಿ ಈ ಕಾಲವನ್ನು ಕಳೆಯುತ್ತೇನೆ. ಕಾರ್ತಿಕಮಾಸ ಬರಲು ಸೀತಾನ್ವೇಷಣ ಕಾರ್ಯದಲ್ಲಿ ಯತ್ನಮಾಡು. ಈಗ ಪಟ್ಟಣವನ್ನು ಹೊಕ್ಕು, ಪಟ್ಟಾಭಿಷಿಕ್ತನಾಗಿ ನಿನ್ನ ಸ್ನೇಹಿತನನ್ನು ಸಂತೋಷಗೊಳಿಸು" ಎಂದನು.

ವಿಧಿಯಿಲ್ಲದೆ ಶ್ರೀರಾಮನ ಮಾತನ್ನು ಒಪ್ಪಿಕೊಂಡು ಸುಗ್ರೀವನು ಮಂತ್ರಿಗಳೊಡನೆ ಕಿಷ್ಕಿಂಧೆಯನ್ನು ಹೊಕ್ಕನು. ಕಪಿಮುಖ್ಯರೆಲ್ಲರೂ ದೊರೆಯಾದ ಸುಗ್ರೀವನನ್ನು ಬಂದು ಕಂಡು ನಮಸ್ಕರಿಸಿದರು. ಸುಗ್ರೀವನೂ ಸಹ ಅವರೆಲ್ಲರನ್ನೂ ಪ್ರೀತಿಯಿಂದ ಕಂಡು ಆದರಿಸಿದನು. ಅನಂತರ ವಾನರ ಮುಖ್ಯರು ಪಟ್ಟಾಭಿಷೇಕಕ್ಕೆ ಬೇಕಾದ ಬೆಳ್ಗೊಡೆಯನ್ನೂ ಚಿನ್ನದ ಹಿಡಿಯುಳ್ಳ ಚಾಮರಗಳನ್ನೂ ರತ್ನ, ಹಾಲು, ಹೂವು, ಗಂಧ, ಜೇನು ಮೊಸರು ಇವೇ ಮೊದಲಾದ ಪದಾರ್ಥಗಳನ್ನೂ ತರಿಸಿದರು. ಗೋರೋಜನ ಲೇಪನ ಮುಂತಾದ ಮಂಗಳದ್ರವ್ಯಗಳನ್ನೂ ತೆಗೆದುಕೊಂಡು ಶುಭಲಕ್ಷಣ ಸಂಪನ್ನೆಯರಾದ ಹದಿನಾರು ಮಂದಿ ಕನ್ನೆಯರು ಬಂದರು. ತರುವಾಯ ವೇದಮಂತ್ರಗಳಿಂದ ಹೋಮ ಮಾಡಿದರು. ಚಿನ್ನದ ಮೆಟ್ಟಲುಳ್ಳ, ನಾನಾ ವಿಧವಾದ ಹೂವುಗಳಿಂದ ಸಿಂಗರಿಸಲ್ಪಟ್ಟ ಸಿಂಹಾಸನದಲ್ಲಿ ಸುಗ್ರೀವನನ್ನು ಪೂರ್ವದಿಕ್ಕಿಗೆ ಇದಿರಾಗಿ ಕೂರಿಸಿ, ನಾನಾತೀರ್ಥಗಳ ನೀರಿನಿಂದ ಮಂತ್ರಪೂರ್ವಕವಾಗಿ ಪುರೋಹಿತ ವರ್ಗದವರು ಅಭಿಷೇಕಿಸಿದರು. ಆಗ

ಸಿಂಹಪೀಠದಲ್ಲಿ ಕುಳಿತ ಸುಗ್ರೀವನು ದೇವೇಂದ್ರನಂತೆ ಮೆರೆದನು. ಆ ಸಮಯದಲ್ಲಿ ದಿಕ್ಕಗಳು ಪ್ರಸನ್ನವಾದುವು. ತಂಗಾಳಿ ಬೀಸಿತು. ಗಗನ ಬಿರಿದುಹೋಗುವಂತೆ ವಾನರರು ಹರ್ಷಧ್ವನಿಗೈದರು. ಸುಗ್ರೀವನು ಅಂಗದನನ್ನು ಯೌವರಾಜ್ಯದಲ್ಲಿ ಅಭಿಷೇಕಿಸಿದನು. ವಾನರರು ಸುಗ್ರೀವನನ್ನೂ ರಾಮಲಕ್ಷ್ಮಣರನ್ನೂ ಕೊಂಡಾಡಿದರು. ಪಟ್ಟಾಭಿಷೇಕ ಸಮಯದಲ್ಲಿ ಸಮಗ್ರ ಕಿಷ್ಕಿಂಧೆಯೂ ಸಂತೋಷಸಾಗರದಲ್ಲಿ ಮುಳುಗಿತು. ಉತ್ಸವ ಮುಗಿದ ಮೇಲೆ ಅದರ ವಿವರಗಳನ್ನು ಶ್ರೀರಾಮನಿಗೆ ನಿವೇದಿಸಿ ಸುಗ್ರೀವನು ರುಮೆಯನ್ನು ಹೊಂದಿ ಕಿಷ್ಕಿಂಧೆಯಲ್ಲಿ ಸುಖದಿಂದಿದ್ದನು.

---

೭

# ಪ್ರಸ್ರವಣ ನಿವಾಸಿ

ಇತ್ತ ಶ್ರೀರಾಮನು ಲಕ್ಷ್ಮಣನೊಡನೆ ಕ್ರೂರಮೃಗಗಳಿಂದ ತುಂಬಿದ ಪ್ರಸ್ರವಣ ಪರ್ವತಕ್ಕೆ ಬಂದನು. ಆ ಬೆಟ್ಟದ ತುದಿಯಲ್ಲಿದ್ದ ವಿಸ್ತಾರವಾದ ಗುಹೆಯೊಂದರಲ್ಲಿ ವಾಸ ಮಾಡಲು ನಿಶ್ಚೈಸಿದನು. ತನ್ನ ಬಳಿಯಿದ್ದ ಲಕ್ಷ್ಮಣನನ್ನು ಕುರಿತು "ವತ್ಸ, ಈ ಗುಹೆ ರಮ್ಯವೂ ವಿಶಾಲವೂ ಆಗಿದೆ; ಗಾಳಿ ಇಲ್ಲಿ ತಂಪಾಗಿ ಬೀಸುತ್ತಿದೆ; ಬಣ್ಣಬಣ್ಣದ ಧಾತುಗಳೂ ಬಗೆ ಬಗೆಯ ಮರಬಳ್ಳಿಗಳೂ ಮನೋಹರವಾಗಿ ಹಾಡುವ ಹಕ್ಕಿಗಳೂ ಇಲ್ಲಿ ವಿಶೇಷವಾಗಿವೆ. ಚೆಲುವಾದ ಈ ಸ್ಥಳದಲ್ಲಿ ನೀರು ಸಮೃದ್ಧವಾಗಿದೆ. ಹತ್ತಿರ ದಲ್ಲಿಯೆ ದಡದ ನಾನಾ ವಿಧವಾದ ಗಿಡಗಳಿಂದ ಕೂಡಿ, ಒಡವೆಗಳಿಂದ ಅಲಂಕೃತಳಾದ ಹೆಂಗಸಿನಂತೆ ನದಿ ಹರಿಯುತ್ತಿದೆ. ಸುಗ್ರೀವನ ರಾಜಧಾನಿಯಾದ ಕಿಷ್ಕಿಂಧೆ ಇಲ್ಲಿಗೆ ಹತ್ತಿರವಾಗಿದೆ. ರಾಜಧಾನಿಯಲ್ಲಿ ಮೃದಂಗಧ್ವನಿಗಳೂ ವಾನರರ ಹರ್ಷಧ್ವನಿಗಳೂ ಕೇಳಿ ಬರುತ್ತಿವೆ. ಇವನ್ನು ಆಲಿಸಿದರೆ ಸುಗ್ರೀವನು ತನ್ನ ಹೆಂಡತಿಯೊಡನೆ ಸುಖವಾಗಿರು ವಂತೆ ತೋರುತ್ತದೆ. ಈ ಮನೋಹರವಾದ ಗುಹೆಯಲ್ಲಿದ್ದು ವರ್ಷಾಕಾಲವನ್ನು ಕಳೆಯೋಣ" ಎಂದನು.

ರಾಮಲಕ್ಷ್ಮಣರು ಆ ಗುಹೆಯಲ್ಲಿ ವಾಸಮಾಡುತ್ತ ದಿವಸಗಳನ್ನು ಕಳೆಯ ತೊಡಗಿದರು. ಪ್ರಾಣಕ್ಕಿಂತಲೂ ಪ್ರಿಯಳಾದ ಸೀತೆಯನ್ನು ಕಳೆದುಕೊಂಡ ರಾಮನಿಗೆ ಆ ಸುಂದರವಾದ ತಾಣ ಸುಖವನ್ನುಂಟುಮಾಡಲಿಲ್ಲ. ರಾತ್ರಿ ಅವನಿಗೆ ನಿದ್ದೆ ಬಾರ ದಾಯಿತು. ಸೀತೆಯನ್ನು ನೆನೆದು ರಾಮನು ಕಣ್ಣೀರು ಬಿಡತೊಡಗಿದನು. ದುಃಖಿತ ನಾದ ಅಣ್ಣನನ್ನು ನೋಡಿ ಲಕ್ಷ್ಮಣನು "ಅಣ್ಣ, ಧೀರನಾದ ನೀನು ಈ ರೀತಿ ದುಃಖಿಸಕೂಡದು. ನಿನ್ನ ಪರಾಕ್ರಮದಿಂದ ರಾವಣನನ್ನು ಕೊಂದು ಸೀತೆಯನ್ನು ಪಡೆಯಬಹುದು. ಶರತ್ಕಾಲ ಬರುತ್ತಲೆ ಆ ಕಾರ್ಯ ಸಾಧ್ಯವಾಗುವುದು. ಅಲ್ಲಿಯ ವರೆಗೆ ಈ ದುಃಖವನ್ನು ಸಹಿಸಿಕೊ" ಎಂದು ಸಂತೈಸಿದನು. ತಮ್ಮನ ಮಾತುಗಳಿಂದ ಸಮಾಧಾನ ಹೊಂದಿದ ರಾಮನು ವರ್ಷಾಕಾಲ ಕಳೆದು ಶರತ್ಕಾಲ ಬರುವುದನ್ನೆ ನಿರೀಕ್ಷಿಸತೊಡಗಿದನು. ಸುಗ್ರೀವನಿಂದ ತನಗೆ ಸಹಾಯವೊದಗುವುದೆಂಬ ಆಸೆಯೂ ಈ ಸಮಾಧಾನಕ್ಕೆ ಕಾರಣವಾಯಿತು.

ರಾಮನು ಹೀಗೆ ಲಕ್ಷ್ಮಣನೊಡನೆ ವಾಸಮಾಡುತ್ತಿರಲು ವರ್ಷಾಕಾಲ ಮೊದ ಲಾಯಿತು. ಬಂಡೆಬಂಡೆಯ ಬೆಟ್ಟದಂತೆ ಗಾತ್ರಭೀಮವಾದ ಮೇಘಗಳು ಆಕಾಶವನ್ನು ಮುಚ್ಚಿ ಮರೆಮಾಡಿದುವು. ಸಂಜೆಗೆಂಪಿನಿಂದ ಕೆಂಪಾಗಿಯೂ ತುದಿಯಲ್ಲಿ ಬಿಳು ಪಾಗಿಯೂ ಬಹು ಮೃದುವಾಗಿಯೂ ಇರುವ ಮೇಘಗಳೆಂಬ ಬಟ್ಟೆಯ ತುಂಡು

ಗಳಿಂದ ಕಟ್ಟಿದ ವ್ರಣದಂತೆ ಆಕಾಶವು ಶೋಭಿಸಿತು. ಕಾದ ಭೂಮಿಯ ಮೇಲೆ ಬಿದ್ದ ಮಳೆ ನೀರು ಅಗಲಿಕೆಯ ಸಂಕಟದಿಂದ ಭೂಮಿ ಕಣ್ಣೀರು ಕರೆಯುವಂತೆ ತೋರುತ್ತಿತ್ತು. ಕೇದಗೆಯ ಹೂವು ಅರಳಿ ಸುವಾಸನೆ ಬೀರತೊಡಗಿದುವು. ಕಪ್ಪಾದ ಮೇಘಗಳ ನಡುವೆ ಹೊಳೆಯುತ್ತಿದ್ದ ಮಿಂಚು ಶ್ರೀರಾಮನಿಗೆ ರಾವಣನ ತೊಡೆಯಲ್ಲಿ ದೀನಳಾಗಿ ಸಂಕಟಪಡುತ್ತಿದ್ದ ಸೀತೆಯ ನೆನಪನ್ನು ತರುತ್ತಿತ್ತು. ಥೂಳಡಗಿ ಗಾಳಿ ತಣ್ಣಗೆ ಬೀಸತೊಡಗಿತು. ಮೇಘಗಳಿಂದ ಮುಚ್ಚಿಹೋದ ಗಗನದಲ್ಲಿ ಸೂರ್ಯಚಂದ್ರ ರಾಗಲಿ ಗ್ರಹತಾರೆಗಳಾಗಲಿ ಕಾಣಬರಲಿಲ್ಲ. ಪ್ರಿಯರನ್ನು ನೆನೆದು ಪ್ರವಾಸಿಗಳು ಗೃಹಾಭಿಮುಖರಾಗಿ ನಡೆಯತೊಡಗಿದರು. ನೇರಳೆ ಹಣ್ಣು ಬಿರಿತು ತಿನ್ನಲು



ಲಕ್ಷ್ಮಣ...."ಅಣ್ಣ, ಧೀರನಾದ ನೀನು ಈ ರೀತಿ ದುಃಖಿಸಕೂಡದು"

ಅನುಕೂಲವಾದುವು. ಗಾಳಿಯ ಹೊಡೆತದಿಂದ ಮಾವಿನಹಣ್ಣು ನೆಲಕ್ಕೆ ಉದುರಿದುವು. ಮಳೆನೀರಿನಿಂದ ನೆನೆದು ಹುಲ್ಲಿದ್ದ ಪ್ರದೇಶಗಳಲ್ಲಿ ನವಿಲುಗಳು ನರ್ತಿಸತೊಡಗಿದುವು. ಮದ್ದಾನೆಗಳಂತಿದ್ದ ಮೇಘಗಳು ಪರ್ವತಶಿಖರಗಳಲ್ಲಿ ನಿಂತು ನಿಧಾನವಾಗಿ ಚಲಿಸುವ ನೋಟ ಎಲ್ಲರ ಕಣ್ಮನಗಳನ್ನು ಸೆಳೆಯುವಂತಿತ್ತು. ಹಾರಿ ಹೋಗುತ್ತಿದ್ದ ಕೊಕ್ಕರೆಗಳ ಸಾಲು ಗಗನಕ್ಕೆ ಬೆಳ್ದಾವರೆಯ ಮಾಲೆಯನ್ನು ಕಟ್ಟಿದಂತೆ ಒಪ್ಪುತ್ತಿತ್ತು. ಹೊಸ ಹುಲ್ಲೆಂಬ ಹಸುರುಡೆಯುಟ್ಟು ನಡುವೆ ಇಂದ್ರಗೋಪವೆಂಬ ಹುಳುಗಳನ್ನುಳ್ಳ ಭೂಮಿ, ಹಸುರುಡೆಯುಟ್ಟು ಕಾಲಿಗೆ ಲಾಕ್ಷಾರಸವನ್ನು ಧರಿಸಿದ ಸ್ತ್ರೀಯಂತೆ ಕಂಗೊಳಿಸಿತು. ನೀರಿನಿಂದ ತುಂಬಿಹೋದ ನದಿಗಳು ಸಮುದ್ರವನ್ನು ಕುರಿತು ವೇಗವಾಗಿ ಹರಿಯತೊಡಗಿದುವು. ಅರಳಿದ ಹೂವುಗಳನ್ನೂ ಕುಣಿಯುವ ನವಿಲನ್ನೂ ಕಂಡು ಸ್ತ್ರೀ ಪುರುಷರು ತಮ್ಮ ಪ್ರಿಯರನ್ನು ನೆನೆದರು. ಮುತ್ತಿದುರು ವಂತೆ ಎಲೆಗಳಿಂದ ಬೀಳುತ್ತಿದ್ದ ಹನಿನೀರನ್ನು ಕುಡಿದು ಹಕ್ಕಿಗಳು ಸಂತೋಷ ಗೊಂಡುವು. ಮೇಘಗಳು ಸಮುದ್ರದಂತೆ ಭೋರ್ಗರೆಯುತ್ತ ಮಳೆಯನ್ನು ಸುರಿಸ ತೊಡಗಿದುವು. ಬೆಟ್ಟದ ಶಿಖರಗಳೂ ನೆಲವೂ ನೀರಿನಿಂದ ನೆನೆದು ಶುಚಿಯಾದುವು. ಪರ್ವತಗಳಿಂದ ಹರಿಯುತ್ತಿದ್ದ ಝರಿಗಳಿಂದ ಬೆಟ್ಟಗಳಿಗೆ ಮುತ್ತಿನ ಹಾರದ ಅಲಂಕಾರ ವನ್ನು ಮಾಡಿದಂತೆ ತೋರುತ್ತಿತ್ತು. ಸರೋವರಗಳಲ್ಲಿ ಕಮಲಗಳು ಅರಳಿ ಭೂದೇವಿಯ ಹರ್ಷವನ್ನು ಸೂಚಿಸುತ್ತಿದ್ದುವು.

ಮನೋಹರವಾದ ವರ್ಷಾಕಾಲವನ್ನು ನೋಡಿ ಶ್ರೀರಾಮನು ಸೀತೆಯನ್ನು ನೆನೆದು ದುಃಖಿತನಾದನು. ಸರಯೂ ನದಿಯ ಪೂರ್ಣಪ್ರವಾಹ, ಭರತನು ಆಚರಿಸುವ ಆಷಾಢ ಶುದ್ಧ ಪೌರ್ಣಮಿಯ ವ್ರತ, ಆ ಸಂದರ್ಭದಲ್ಲಿ ಪಟ್ಟಣಿಗರ ಆನಂದ, ಇವೆಲ್ಲ ರಾಮನಿಗೆ ನೆನಪಾಗಿ ಅವನ ಶೋಕವನ್ನು ಇಮ್ಮಡಿಸಿದುವು. ರಾಜ್ಯ ಕೈಬಿಟ್ಟುದು, ಹೆಂಡತಿಯ ಅಪಹರಣ, ಪ್ರಬಲವಾದ ಹಗೆಯೊಡನೆ ವೈರ ಇವು ಒಂದಕ್ಕಿಂತ ಒಂದು ಸಂಕಟಗೊಳಿಸ ತಕ್ಕುವಾಗಿ ಶ್ರೀರಾಮನಿಗೆ ತೋರಿದುವು. ಆದರೂ ತಾನು ಮಾಡಿರುವ ಉಪಕಾರವನ್ನು ನೆನೆದು ಸುಗ್ರೀವನು ಸೀತೆಯನ್ನು ಹುಡುಕಿಸಿಕೊಡುವ ಕಾರ್ಯದಲ್ಲಿ ತನಗೆ ನೆರವಾಗುವನೆಂದು ಸಮಾಧಾನಗೊಂಡನು.

ಶರತ್ಕಾಲದ ಬರುವಿಕೆಯನ್ನು ಇದಿರುನೋಡುತ್ತ ಶ್ರೀರಾಮನು ಮಳೆಗಾಲ ವನ್ನು ಕಳೆದನು. ಆಕಾಶ ನಿರ್ಮಲವಾಯಿತು. ಇತ್ತ ಸುಗ್ರೀವನಾದರೋ ರಾಜಕಾರ್ಯ ಗಳನ್ನು ಮಂತ್ರಿಗಳಿಗೆ ವಹಿಸಿ ಹೆಂಡತಿಯಾದ ರುಮೆಯೊಡನೆಯೂ ತಾರೆಯೊಡನೆಯೂ ಸುಖವಾಗಿ ಕಾಲಕಳೆಯುತ್ತಿದ್ದನು. ರಾಮಕಾರ್ಯಕ್ಕಾಗಿ ಸುಗ್ರೀವನನ್ನು ಎಚ್ಚರ ಗೊಳಿಸಲು ಹನುಮಂತನು ಅವನ ಬಳಿಗೆ ಬಂದು ಮೃದುವಾದ ಮಾತುಗಳಿಂದ ಈ ರೀತಿ ನುಡಿದನು: "ಪ್ರಭೋ, ನಿನಗೆ ರಾಜ್ಯಕೋಶಗಳು ಕೈವಶವಾದುವು. ಮಿತ್ರರು ದೊರಕಿದರು. ನಿನ್ನ ರಾಜ್ಯಕೋಶಗಳು ಏಳಿಗೆ ಹೊಂದಬೇಕಾದರೆ ನೀನು ಉಳಿದ ಕಾರ್ಯಗಳೆಲ್ಲವನ್ನೂ ಬಿಟ್ಟು ನಿನ್ನ ಸ್ನೇಹಿತನ ಕೆಲಸವನ್ನು ಮಾಡಿಕೊಡ

ತಕ್ಕದ್ದು. ಕಾಲ ಮೀರುವುದಕ್ಕೆ ಮುಂಚೆ ಮಹಾತ್ಮನಾದ ಶ್ರೀರಾಮನ ಕಾರ್ಯ ವಾಗಿರುವ ಸೀತಾನ್ವೇಷಣಕಾರ್ಯಕ್ಕೆ ಎಲ್ಲ ಸಿದ್ಧತೆಯನ್ನೂ ಮಾಡು. ದೇವದಾನವ ರನ್ನು ದಮನಮಾಡಲು ಶಕ್ತನಾದ ಶ್ರೀರಾಮನು ನೀನು ಕೊಟ್ಟ ಮಾತನ್ನು ನಡೆಸಿ ಕೊಡುವುದನ್ನೆ ಇದಿರುನೋಡುತ್ತಿದ್ದಾನೆ. ಮೂರು ಲೋಕಗಳಲ್ಲಿದ್ದರೂ ನಾವು ಸೀತೆಯನ್ನು ಹುಡುಕಿ ರಾಮನಿಗೆ ಪ್ರಿಯವನ್ನುಂಟುಮಾಡಬೇಕು."

ಕಾಲೋಚಿತವಾದ ಹನುಮಂತನ ನುಡಿಗಳಿಂದ ರಾಮಕಾರ್ಯ ವಿಚಾರದಲ್ಲಿ ಸುಗ್ರೀವನು ಎಚ್ಚರಗೊಂಡನು. ಸೀತೆಯನ್ನು ಹುಡುಕುವ ಕಾರ್ಯಕ್ಕಾಗಿ ಸೇನಾಪತಿ ಯಾದ ನೀಲನನ್ನು ಕರೆಸಿ ಅವನಿಗೆ ಸುಗ್ರೀವನು "ನನ್ನ ಸೇನೆಯೆಲ್ಲವೂ ಇಲ್ಲಿಗೆ ಜಾಗ್ರತೆಯಾಗಿ ಬರುವಂತೆ ಆಜ್ಞಾಪಿಸು. ಅಲ್ಲದೆ ಉಳಿದ ವಾನರ ವೀರರೆಲ್ಲರೂ ಇಲ್ಲಿಗೆ ಬರಲಿ. ಹಾಗೆ ಬಂದ ವೀರರಿಗೆಲ್ಲ ನೀನು ಸೇನಾಪತಿಯಾಗಿ ಅವರನ್ನು ನಡಸು ಹದಿನೈದು ದಿನ ಕಳೆದು ಹದಿನಾರನೆಯ ದಿನ ಯಾರು ಇಲ್ಲಿಗೆ ಬರುವುದಿಲ್ಲವೊ ಅವರಿಗೆ ಮರಣದಂಡನೆಯೆಂದು ಸಾರಿಸು. ಈ ವಿಷಯದಲ್ಲಿ ವಿಮರ್ಶೆಗೆ ಅವಕಾಶವೆ ಇಲ್ಲ. ಅಂಗದನನ್ನು ಮುಂದಿಟ್ಟುಕೊಂಡು ಈ ನನ್ನ ಆಜ್ಞೆಯನ್ನು ಜಾಂಬವನೆ ಮೊದಲಾದ ಎಲ್ಲ ವೀರರಿಗೂ ತಿಳಿಸು" ಎಂದು ಅಪ್ಪಣೆ ಮಾಡಿ ಅಂತಃಪುರವನ್ನು ಸೇರಿಬಿಟ್ಟನು.

ವರ್ಷಾಕಾಲ ಕಳೆದು ಮೆಲ್ಲನೆ ಶರತ್‌ಕಾಲ ಕಾಲಿಟ್ಟಿತು. ಮೋಡಗಳಿಲ್ಲದೆ ಆಕಾಶ ನಿರ್ಮಲವಾಯಿತು. ಚಂದ್ರಮಂಡಲ ಶುಭ್ರವಾಯಿತು. ರಾತ್ರಿಯ ಕಾಲದಲ್ಲಿ ಹಾಲು ಚೆಲ್ಲಿದಂತಿದ್ದ ಬೆಳುದಿಂಗಳು ಕಾಮಿಗಳಿಗೆ ಮೋಹವನ್ನುಂಟುಮಾಡತೊಡಗಿತು. ತಂಪಾದ ಬೆಳುದಿಂಗಳು, ಗೈರಿಕಾದಿ ಧಾತುಗಳಿಂದ ಸಿಂಗಾರಗೊಂಡ ಗಿರಿಶಿಖರದ ಚೆಲುವು, ಶುಭ್ರವಾದ ಮತ್ತು ನಿರ್ಮಲವಾದ ಆಕಾಶ, ಸಾರಸ ಪಕ್ಷಿಗಳ ಇಂಪಾದ ಕೂಗು, ಇವೆಲ್ಲವನ್ನೂ ನೋಡಿ ರಾಮನ ಮನಸ್ಸು ಸೀತೆಯನ್ನು ನೆನೆದು ಕರಗಿ ಹೋಯಿತು. ಹಿಂದೆ ಸೀತೆಯೊಡನೆ ಶರತ್‌ಕಾಲದಲ್ಲಿ ತಾನು ನಡಯಿಸುತ್ತಿದ್ದ ವಿಹಾರ ವನ್ನೂ ಈಗ ತಾನಿಲ್ಲದೆ ಸೀತೆ ಕಷ್ಟಪಡುತ್ತಿರುವುದನ್ನೂ ನೆನೆದು ರಾಮನ ಮನಸ್ಸು ಚಂಚಲವಾಯಿತು. ಆಗತಾನೆ ಹಣ್ಣುಹಂಪಲುಗಳನ್ನು ಆಯ್ದು ತಂದಿದ್ದ ಲಕ್ಷ್ಮಣ ನನ್ನು ಕುರಿತು ಸೀತೆಯ ಅಗಲಿಕೆಯಿಂದ ದುಃಖಿತನಾದ ರಾಮನು ಕಂಬನಿದುಂಬಿ ಈ ರೀತಿ ನುಡಿದನು: "ವತ್ಸ ಲಕ್ಷ್ಮಣ, ದೇವೇಂದ್ರನು ಮಳೆ ಸುರಿಸಿ ಭೂಮಿಯನ್ನು ತೃಪ್ತಿಗೊಳಿಸಿದನು; ಸಸ್ಯಗಳನ್ನು ಪೋಷಿಸಿ ಧನ್ಯನೆನಿಸಿದನು. ಮೇಘಗಳ ವೇಗ, ಗರ್ಜನೆ ಇವು ಕಡಿಮೆಯಾದುವು. ನವಿಲುಗಳು ತಮ್ಮ ಕುಣಿತವನ್ನು ನಿಲ್ಲಿಸಿವೆ. ಬಾಳೆಯ ಕೊಂಬೆಯಲ್ಲಿಯೂ ನಕ್ಷತ್ರ ಚಂದ್ರಸೂರ್ಯರಲ್ಲಿಯೂ ತನ್ನ ಕಾಂತಿಯನ್ನು ಹರಡಿ ಈ ಶರತ್ಕಾಲ ಕಂಗೊಳಿಸುತ್ತಿದೆ. ಸರೋವರಗಳಲ್ಲಿ ಅರಳಿದ ಕಮಲಗಳ ಕಾಂತಿಕಂಪುಗಳು ಸೂಸುತ್ತಿವೆ. ಆಕಾಶ ಹೊಳೆಯುವ ಅಲಗಿನ ಬಣ್ಣವನ್ನು ತಳೆಯಿತು. ನದಿಗಳ ಪ್ರವಾಹದ ವೇಗ ಕಡಮೆಯಾಗಿ ಅವು ಮಂದವಾಗಿ ಹರಿಯುತ್ತಿವೆ. ಹೆಣ್ಣಾನೆ ಗಳು ಗಂಡಾನೆಗಳನ್ನು ಅನುಸರಿಸಿ ಹೋಗುವುದನ್ನು ನೋಡು. ಸರೋವರದಲ್ಲಿ

ಸಂತೋಷದಿಂದ ಹಂಸಪಕ್ಷಿಗಳು ಕ್ರೀಡಿಸುತ್ತಿವೆ. ಇಗೋ! ರಾಜರಿಗೆ ವಿಜಯಯಾತ್ರೆಯ ಕಾಲ ಹತ್ತಿರವಾಯಿತು. ಆದರೆ ಸೀತೆಯನ್ನು ಹುಡುಕಿಸಲು ಸುಗ್ರೀವನು ಯಾವ ಪ್ರಯತ್ನವನ್ನೂ ಮಾಡಿರುವಂತೆ ತೋರುವುದಿಲ್ಲ. ನನಗೆ ರಾಜ್ಯ ಹೋಯಿತು. ಈಗ ಹೆಂಡತಿಯಿಂದ ನಾನು ವಿರಹಹೊಂದಿದ್ದೇನೆ. ಆದರೂ ಸುಗ್ರೀವನ ದಯೆ ನನ್ನ ಮೇಲುಂಟಾಗಲಿಲ್ಲ. ದುರ್ಬುದ್ಧಿಯುಳ್ಳ ಸುಗ್ರೀವನು ಸೀತಾನ್ವೇಷಣಕ್ಕೆ ಪ್ರತಿಜ್ಞೆ ಮಾಡಿ ವಿಷಯಸುಖದಲ್ಲಿ ಮತ್ತನಾಗಿ ಈಗ ಅದನ್ನು ಮರೆತಂತಿದೆ. ನೀನು ಈಗ ಕಿಷ್ಕಿಂಧೆಗೆ ಹೋಗಿ ಕಾಮಾಸಕ್ತನಾಗಿರುವ ಆ ಮೂರ್ಖ ಸುಗ್ರೀವನಿಗೆ ನನ್ನ ಈ ಮಾತನ್ನು ತಿಳಿಸು: "ಮೊದಲು ಆಸೆಯನ್ನು ಹುಟ್ಟಿಸಿ ಯಾರು ಆ ಬಳಿಕ ಅದನ್ನು ಭಂಗಗೊಳಿಸುವರೊ ಅವರು ಪುರುಷಾಧಮರು. ಯಾರು ಮಿತ್ರರಿಂದ ಉಪಕಾರ ಹೊಂದಿ ಆ ಬಳಿಕ ಮಿತ್ರರಿಗೆ ಉಪಕಾರಿಗಳಾಗುವುದಿಲ್ಲವೊ ಅವರ ಮಾಂಸವನ್ನು ಪಿಶಾಚಿಗಳೂ ಹದ್ದುಗಳೂ ಕೂಡ ತಿನ್ನವು. ನನ್ನ ಬಿಲ್ಲಿನ ಟೇಂಕಾರವನ್ನು ಮತ್ತೊಮ್ಮೆ ಕೇಳುವ ಬಯಕೆ ಸುಗ್ರೀವನಿಗಿರುವಂತೆ ತೋರುತ್ತದೆ. ನನ್ನ ತೋಳ್ ಬಲವನ್ನು ಕಂಡು ಸುಗ್ರೀವನಿಗೆ ಎಚ್ಚರವುಂಟಾಗಲಿಲ್ಲ. ಸುಗ್ರೀವನಿಗಾದರೊ ತನ್ನ ಕೋರಿಕೆ ಈಡೇರಿತು. ಈಗ ಸುಖಮಗ್ನನಾದ ಅವನು ದೀನರಾದ ನಮ್ಮನ್ನು ನೆನೆದು ಕೊಳ್ಳಲಿಲ್ಲವಲ್ಲ! ನಾನು ಮಿತ್ರಕಾರ್ಯಕ್ಕಾಗಿ ವಾಲಿಯೊಬ್ಬನನ್ನೇ ಹೊಡೆದು ಕೊಂದೆ. ಈಗ ಕೊಟ್ಟ ಭಾಷೆಯನ್ನು ಮೀರಿದ ಸುಗ್ರೀವನನ್ನೂ ಬಂಧುಬಾಂಧವ ರೊಡನೆ ಕೊಲ್ಲುವೆನೆಂದು ತಿಳಿಸು. ಅಲ್ಲದೆ ವ್ಯರ್ಥವಾಗಿ ಯಮನನ್ನು ಕಾಣುವುದು ಉಚಿತವಲ್ಲವೆಂದೂ ಆತನಿಗೆ ಹೇಳು."

ದುಃಖಭಾರದಿಂದ ಕುಗ್ಗಿಹೋದ ಅಣ್ಣನನ್ನು ನೋಡಿ ಲಕ್ಷ್ಮಣನು "ಅಣ್ಣ, ಕಪಿಗೆ ಒಳ್ಳೆಯ ನಡವಳಿಕೆ ಎಲ್ಲಿಂದ ಬಂತು? ಅಗ್ನಿಸಾಕ್ಷಿಯಾಗಿ ಸ್ನೇಹ ಬೆಳಸಿದ ಸುಗ್ರೀವನು ಕಾರ್ಯಸಾಧನೆಗೆ ಮನಸ್ಸು ತರಲಿಲ್ಲ. ದ್ರೋಹಿಯಾದ ಸುಗ್ರೀವನು ರಾಜನಾಗಲು ತಕ್ಕವನಲ್ಲ. ನಾನಾದರೊ ಈಗ ಕೋಪವನ್ನು ತಡೆಯಲಾರೆ. ಸುಗ್ರೀವ ನನ್ನು ಈಗಲೆ ಸಂಹರಿಸಿಬಿಡುತ್ತೇನೆ. ಅಂಗದನಿಗೆ ಪಟ್ಟವನ್ನು ಕಟ್ಟುತ್ತೇನೆ. ಅವನೇ ಸೀತಾನ್ವೇಷಣ ಕಾರ್ಯದಲ್ಲಿ ತೊಡಗಲಿ" ಎಂದು ಗರ್ಜಿಸಿದನು. ಸುಗ್ರೀವನನ್ನು ಕೊಲ್ಲಲು ಬಿಲ್ಲುಬಾಣಗಳನ್ನೆತ್ತಿದ ತಮ್ಮನ ಕೋಪವನ್ನು ಕಂಡು ರಾಮನು "ವತ್ಸ, ನಿನಗೆ ಕೋಪ ತರವಲ್ಲ. ಸತ್ಪುರುಷರು ಮಿತ್ರವಧೆಯನ್ನು ಮಾಡಕೂಡದು. ಉಪಾಯದಿಂದಲೆ ಸುಗ್ರೀವನನ್ನು ದಾರಿಗೆ ತರಬೇಕು" ಎಂದು ಅವನ ಕೋಪವನ್ನಿಳಿಸಿ ಅವನನ್ನು ಕಿಷ್ಕಿಂಧೆಗೆ ಕಳುಹಿಸಿಕೊಟ್ಟನು.

---

೮

# ಲಕ್ಷ್ಮಣನ ಕೋಪ

ಅಣ್ಣನ ಹಿತದಲ್ಲಿಯೆ ದೃಷ್ಟಿಯುಳ್ಳ ಲಕ್ಷ್ಮಣನು ಅಣ್ಣನನ್ನು ಬೀಳ್ಕೊಂಡು ಕಿಷ್ಕಿಂಧೆಯನ್ನು ಹೊಕ್ಕನು. ಕೋಪದಿಂದ ಅದಿರುತ್ತಿದ್ದ ತುಟಿಯುಳ್ಳ ಲಕ್ಷ್ಮಣನು ಸುಗ್ರೀವನ ಅರಮನೆಯನ್ನು ಕುರಿತು ವೇಗವಾಗಿ ನಡೆದನು. ಲಕ್ಷ್ಮಣನ ಕೋಪವನ್ನು ಕಂಡು ಹೆದರಿದ ವಾನರರು, ತಾರೆಯೊಡನೆ ರಾಣೀವಾಸದಲ್ಲಿದ್ದ ಸುಗ್ರೀವನಿಗೆ ಅವನ ಬರುವಿಕೆಯನ್ನು ತಿಳಿಸಿದರು. ಆದರೆ ಆ ವಾನರರ ಮಾತು ಸುಗ್ರೀವನ ಗಮನವನ್ನು ಸೆಳೆಯಲೇ ಇಲ್ಲ. ಸುಗ್ರೀವನ ಮದವನ್ನೂ, ಅಣ್ಣನ ಶೋಕವನ್ನೂ ನೆನೆದು ಲಕ್ಷ್ಮಣನು ಕೋಪದಿಂದ ಕುರುಡನಂತಾದನು. ಅಂಗದನು ಲಕ್ಷ್ಮಣನ ಸಂದೇಶವನ್ನು ತಂದಾಗ ಸುಗ್ರೀವನು ಮದ್ಯಪಾನದಿಂದ ಮತ್ತನಾಗಿದ್ದನು. ಸುಗ್ರೀವನಿಗೂ ತಾರೆಗೂ ನಮಸ್ಕರಿಸಿ ಲಕ್ಷ್ಮಣನ ಮಾತನ್ನು ತಿಳಿಸಿದರೂ ಸುಗ್ರೀವನಿಗೆ ಎಚ್ಚರವುಂಟಾಗಲಿಲ್ಲ. ಸುಗ್ರೀವನಿಗೆ ಎಚ್ಚರವನ್ನುಂಟುಮಾಡಲು ಲಕ್ಷ್ಮಣನು ಸಿಂಹನಾದವನ್ನೂ ಕಪಿಗಳು ದೊಡ್ಡ ಶಬ್ದವನ್ನೂ ಮಾಡಬೇಕಾಯಿತು. ಆಗ ಪ್ಲಕ್ಷ ಮತ್ತು ಪ್ರಭಾವರೆಂಬ ಮಂತ್ರಿಗಳು ಎಚ್ಚರಗೊಂಡ ಸುಗ್ರೀವನಿಗೆ ಲಕ್ಷ್ಮಣನ ಬರುವಿಕೆಯನ್ನು ತಿಳಿಸಿದರು. ಹಾಗೂ ಅವನ ಕೋಪವನ್ನು ಶಮನಗೊಳಿಸುವಂತೆ ಬೇಡಿಕೊಂಡರು.

ಮಂತ್ರಿಗಳ ಮಾತನ್ನು ಕೇಳಿ ಸುಗ್ರೀವನು ಹಾಸಗೆಯನ್ನು ಬಿಟ್ಟೆದ್ದನು. ನೀತಿಕುಶಲನಾದ ಆತನು ನಿಪುಣರಾದ ತನ್ನ ಮಂತ್ರಿಗಳನ್ನು ಕರೆಸಿಕೊಂಡು ಅವರೊಡನೆ ಮಂತ್ರಾಲೋಚನೆಯನ್ನು ನಡೆಸಿದನು. "ರಾಮನ ತಮ್ಮನಾದ ಲಕ್ಷ್ಮಣನು ಕೋಪಗೊಂಡು ಏತಕ್ಕಾಗಿ ಇಲ್ಲಿಗೆ ಬಂದಿರುವನೊ ನಾನರಿಯೆ. ರಾಮಲಕ್ಷ್ಮಣರಿಗೆ ನಾನಾವ ಕೇಡನ್ನೂ ಬಗೆದಿಲ್ಲ. ಕೆಡುನುಡಿಯನ್ನೂ ನುಡಿದಿಲ್ಲ. ಲಕ್ಷ್ಮಣನು ನನ್ನ ವೈರಿಗಳ ಚಾಡಿಮಾತುಗಳಿಗೆ ಕಿವಿಗೊಟ್ಟನೊ ಏನೊ! ರಾಮನನ್ನಾಗಲಿ ಲಕ್ಷ್ಮಣನನ್ನಾಗಲಿ ಕಂಡರೆ ನನಗೆ ಹೆದರಿಕೆಯಿಲ್ಲದಿದ್ದರೂ, ಲಕ್ಷ್ಮಣನ ಕೋಪವು ನನ್ನ ಸಂಭ್ರಮವನ್ನು ಹೆಚ್ಚಿಸಿ ಭಯವನ್ನುಂಟುಮಾಡುತ್ತಿದೆ. ರಾಮನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಲು ನನಗೆ ಇನ್ನೂ ಸಾಧ್ಯವಾಗಿಲ್ಲವೆಂದು ಮನಸ್ಸು ತಳಮಳಗೊಳ್ಳುತ್ತಿದೆ."

ಸುಗ್ರೀವನ ಮಾತನ್ನು ಕೇಳಿ ನೀತಿಕುಶಲನಾದ ಹನುಮಂತನು: "ಸುಗ್ರೀವ, ತನ್ನ ಕಾರ್ಯವನ್ನು ಸುಗ್ರೀವನು ಇನ್ನೂ ಮಾಡಲಿಲ್ಲವೆಂದು ಅರಿತು ಕೋಪಗೊಂಡ ರಾಮನು ಲಕ್ಷ್ಮಣನನ್ನು ಇಲ್ಲಿಗೆ ಕಳುಹಿಸಿದ್ದಾನೆ. ನೀನು ನೀತಿಶಾಸ್ತ್ರಕುಶಲನು.

ಈಗಲಾದರೋ ಶರತ್‌ಕಾಲ ಕಾಲಿಟ್ಟಿದೆ. ಸೀತೆಯ ಅಗಲಿಕೆಯಿಂದ ದುಃಖಿತನಾದ ರಾಮನು ಲಕ್ಷ್ಮಣನೊಡನೆ ಕಠಿಣ ವಚನಗಳನ್ನು ಹೇಳಿಕಳುಹಿಸಿರಬಹುದು. ಮಿತ್ರ ಕಾರ್ಯದಲ್ಲಿ ತೊಡಗಿದ ನೀನು ಅವುಗಳನ್ನು ಸಹಿಸಿಕೊಳ್ಳಬೇಕು. ಆದ್ದರಿಂದ ಕೈಮುಗಿದು ಬೇಡಿ ಲಕ್ಷ್ಮಣನ ಕೋಪವನ್ನು ನೀನು ಸಮಾಧಾನಗೊಳಿಸು. ಕೋಪ ಗೊಂಡ ರಾಮನನ್ನು ತಡೆದು ನಿಲ್ಲಿಸಲು ದೇವಗಂಧರ್ವರಿಗೂ ಸಾಧ್ಯವಿಲ್ಲ. ಆದ್ದರಿಂದ ಮೊದಲು ಲಕ್ಷ್ಮಣನನ್ನು ಪ್ರಸನ್ನಗೊಳಿಸಿ ಮಿತ್ರಕಾರ್ಯದಲ್ಲಿ ತೊಡಗು" ಎಂದು ಬುದ್ಧಿ ಹೇಳಿದನು.

ಆ ವೇಳೆಗೆ ಲಕ್ಷ್ಮಣನು ಮನೋಹರವಾದ ಸುಗ್ರೀವನ ಅಂತಃಪುರವನ್ನು ಹೊಕ್ಕು, ಅಲ್ಲಿ ಮಧುರವಾದ ವೀಣಾಗಾನವನ್ನು ಕೇಳಿದನು; ರೂಪಯೌವನದಿಂದ ಗರ್ವಿತರಾದ ಸ್ತ್ರೀಯರನ್ನು ಆ ಸುಗ್ರೀವಭವನದಲ್ಲಿ ಕಂಡನು. ಆ ಸ್ತ್ರೀಯರ ನೂಪುರಗಳ ಸದ್ದನ್ನು ಕೇಳಿ ಲಕ್ಷ್ಮಣನಿಗೆ ಸ್ವಲ್ಪ ನಾಚಿಕೆಯೆ ಆಯಿತು. ಆದರೂ ಕೋಪಗೊಂಡ ಲಕ್ಷ್ಮಣನು ಏಕಾಂತದಲ್ಲಿ ನಿಂತು ಬಿಲ್ಲನ್ನು ಧ್ವನಿಮಾಡಿದನು. ಅದನ್ನು ಕೇಳಿ ಸುಗ್ರೀವನು ಭಯದಿಂದ ಇದ್ದಲ್ಲಿಯೆ ನಡುಗಿಹೋದನು. ಲಕ್ಷ್ಮಣನ ಬರುವಿಕೆ ಯನ್ನು ಅರಿತ ಸುಗ್ರೀವನು ಗಾಬರಿಯಿಂದ ಕೂಡಿ ತಾರೆಯನ್ನು ಕುರಿತು "ಪ್ರಿಯೆ, ಲಕ್ಷ್ಮಣನು ಯಾವ ಕಾರಣಕ್ಕಾಗಿ ಕೋಪಗೊಂಡು ಬಂದಿರುವನೊ ಅದು ತಿಳಿಯ ದಾಗಿದೆ. ಉತ್ತಮರು ಕಾರಣವಿಲ್ಲದೆ ಕೋಪಗೊಳ್ಳರು. ಆದ್ದರಿಂದ ನೀನೇ ಹೋಗಿ ಲಕ್ಷ್ಮಣನನ್ನು ಇನಿಮಾತುಗಳಿಂದ ಸಂತೈಸಿ ಪ್ರಸನ್ನನನ್ನಾಗಿ ಮಾಡು. ಆ ಬಳಿಕ ನಾನು ಲಕ್ಷ್ಮಣನನ್ನು ಕಾಣುತ್ತೇನೆ. ಮಹಾತ್ಮರು ಸ್ತ್ರೀಯರ ವಿಷಯದಲ್ಲಿ ಕೋಪಗೊಳ್ಳರು" ಎಂದನು.

ಅನಂತರ ಮದ್ಯಪಾನದಿಂದ ಕಣ್ಣು ಚಂಚಲವಾಗಿ, ಸೊಂಟದ ಪಟ್ಟಿ ಜೋಲಾಡು ವಂತೆ ಸಡಿಲವಾಗಿ, ಅಡಿಗಡಿಗೂ ತತ್ತರಿಸುತ್ತಿದ್ದ ತಾರೆ ಲಕ್ಷ್ಮಣನ ಬಳಿಗೆ ಬಂದಳು. ವಿನಯದಿಂದ ನಮಸ್ಕರಿಸಿದ ತಾರೆಯನ್ನು ಲಕ್ಷ್ಮಣನು ಉದಾಸೀನ ಭಾವದಿಂದಲೆ ಕಂಡನು. ಆದರೇನು? ಸ್ತ್ರೀ ಸಾಮೀಪ್ಯದಿಂದ ಲಕ್ಷ್ಮಣನ ಕೋಪವೆಲ್ಲ ಮಾಯ ವಾಯಿತು. ರಾಜಕುಮಾರನು ತಾರೆಯನ್ನು ನೋಡಿ ನಾಚಿ ಮುಖ ತಗ್ಗಿಸಿದನು. ಇನಿಮಾತುಗಳಿಂದಲೆ ಲಕ್ಷ್ಮಣನ ಕೋಪಕ್ಕೆ ಕಾರಣವೇನೆಂದು ತಾರೆ ಕೇಳಿದಳು. ತಾರೆಯ ಮಾತಿಗೆ ಲಕ್ಷ್ಮಣನು "ಕಾಮಮತ್ತನಾದ ಸುಗ್ರೀವನಿಗೆ ಧರ್ಮಾರ್ಥಗಳ ಚಿಂತೆ ಯುಂಟೇ? ರಾಜ್ಯದ ಹಿತಚಿಂತನೆ ಅವನಿಗೆ ಬೇಕಿಲ್ಲವೆಂದೇ ತೋರುತ್ತದೆ. ಸಂಕಟದಿಂದ ಕುಗ್ಗಿಹೋದ ನಮ್ಮನ್ನು ಮರೆತು, ಕಾಮಾಸಕ್ತನಾದ ಅವನು ವರ್ಷಾಕಾಲ ಕಳೆದಿರುವುದನ್ನೇ ಅರಿಯದಿದ್ದಾನೆ. ಉಪಕಾರಿಗಳ ವಿಷಯದಲ್ಲಿ ಅಪಕಾರವೆಸಗುವುದು ಧರ್ಮಲೋಪಕ್ಕೂ ಮೈತ್ರೀನಾಶಕ್ಕೂ ಕಾರಣ ಎಂಬುದು ಅವನಿಗೆ ತಿಳಿಯದಾಗಿದೆ. ಧರ್ಮಮಾರ್ಗವನ್ನು ಮೀರಿರುವ ಅವನ ವಿಷಯದಲ್ಲಿ ನಾವು ಮಾಡತಕ್ಕ ಕೆಲಸವನ್ನು ಅವನಿಗೆ ತಿಳಿಸು" ಎಂದು ನುಡಿದನು.

ಧರ್ಮಯುಕ್ತವೂ ಮಧುರವೂ ಆದ ಲಕ್ಷ್ಮಣನ ಮಾತನ್ನು ಕೇಳಿ ತಾರೆ ವಿಶ್ವಾಸದಿಂದ ರಾಜಕುಮಾರನಿಗೆ ಈ ರೀತಿ ನುಡಿದಳು: "ರಾಜಕುಮಾರ, ಸ್ವಜನರಲ್ಲಿ ಕೋಪಗೊಳ್ಳುವುದು ಉಚಿತವಲ್ಲ. ಸುಗ್ರೀವನು ನಿಮ್ಮ ಕಾರ್ಯದಲ್ಲಿಯೆ ನಟ್ಟ ಮನಸ್ಸುಳ್ಳವನಾಗಿದ್ದಾನೆ. ಅವನ ಈ ಅಲ್ಪ ಅಪರಾಧವನ್ನು ಮನ್ನಿಸು. ನಿನ್ನಂಥ ಶೂರರು ಬಲಹೀನರಲ್ಲಿ ಕೋಪಗೊಳ್ಳುವುದು ಯುಕ್ತವೆ? ತಾನು ಕಾಲವಿಳಂಬ ಮಾಡಿರುವುದೂ ಅದಕ್ಕಾಗಿ ರಾಮನು ಕೋಪಗೊಂಡಿರುವುದೂ ಸುಗ್ರೀವನಿಗೆ ತಿಳಿದಿದೆ. ಇದುವರೆಗೂ ಇಂದ್ರಿಯಗಳನ್ನು ದಮನಮಾಡಿಕೊಂಡಿದ್ದ ನಿನ್ನ ತಮ್ಮನಾದ ಸುಗ್ರೀವನು ಈಗ ಸ್ವಲ್ಪ ಕಾಮಾಸಕ್ತನಾದರೆ ಆ ತಪ್ಪನ್ನು ನೀನು ಮನ್ನಿಸಬೇಕು. ಋಷಿಗಳೇ ಕಾಮವಶರಾಗುವರೆಂದ ಮೇಲೆ ಸುಗ್ರೀವನ ಮಾತೇನು? ಸ್ವಭಾವದಿಂದ ಸುಗ್ರೀವನು ಚಪಲನಲ್ಲವೆ? ಆತನು ಕಾಮಾಸಕ್ತನಾಗಿದ್ದರೂ ಬಹಳ ದಿನಗಳ ಹಿಂದೆಯೇ ನಿಮ್ಮ ಕಾರ್ಯಕ್ಕಾಗಿ ವಾನರರನ್ನು ಬರುವಂತೆ ಅಪ್ಪಣೆ ಮಾಡಿದ್ದಾನೆ. ಅವನ ಅಪ್ಪಣೆಗೆ ತಲೆಬಾಗಿ ಕಾಮರೂಪಿಗಳೂ, ಶೂರರೂ ಆದ ವಾನರರು ಬಂದು ನೆರೆದಿದ್ದಾರೆ. ಪರಸ್ತ್ರೀಯರನ್ನು ಸತ್ಪುರುಷರು ಮಿತ್ರಭಾವದಿಂದ ಕಾಣುವುದರಲ್ಲಿ ದೋಷವಿಲ್ಲ. ಆದ್ದರಿಂದ ನೀನು ಒಳಕ್ಕೆ ಬರಬಹುದು."

ತಾರೆಯ ಕರೆಯನ್ನು ಮನ್ನಿಸಿ ಲಕ್ಷ್ಮಣನು ಅಂತಃಪುರವನ್ನು ಹೊಕ್ಕನು. ಹೇಮಪೀಠದಲ್ಲಿ ಕುಳಿತು ದೇವೇಂದ್ರನಂತೆ ಮೆರೆಯುತ್ತಿದ್ದ ಸುಗ್ರೀವನನ್ನು ಕಂಡು ಲಕ್ಷ್ಮಣನು ಕೋಪದಿಂದ ಕೆಂಡವಾದನು. ಸುಗ್ರೀವನೂ ಅವನನ್ನು ನೋಡಿದೊಡನೆಯೆ ದೀನನಾದನು. ರುಮೆಯ ಅಪ್ಪುಗೆಯನ್ನು ಸಡಿಲಿಸಿಕೊಂಡು ಸುಗ್ರೀವನು ಪೀಠದಿಂದೆದ್ದು ಲಕ್ಷ್ಮಣನ ಬಳಿಗೆ ಬಂದನು. ನಕ್ಷತ್ರಗಳಿಂದ ಸುತ್ತುವರಿದ ಚಂದ್ರನಂತೆ, ಸ್ತ್ರೀಯರಿಂದ ಸುತ್ತುವರಿದ ಸುಗ್ರೀವನಿಗೆ ಲಕ್ಷ್ಮಣನು ನುಡಿದನು: "ಒಳ್ಳೆಯ ವಂಶದಲ್ಲಿ ಹುಟ್ಟಿದವನೂ ಜಿತೇಂದ್ರಿಯನೂ ಸತ್ಯವಂತನೂ ಆದ ಪುರುಷನು ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳುತ್ತಾನೆ. ಅಂಥ ರಾಜನನ್ನು ಮಹಾತ್ಮನೆನ್ನುತ್ತಾರೆ. ಮಾಡಿದ ಉಪಕಾರವನ್ನು ಮರೆತು ಸ್ನೇಹಿತರೆದುರಿಗೆ ಸುಳ್ಳು ಪ್ರತಿಜ್ಞೆಯನ್ನು ಮಾಡುವವನಿಗಿಂತಲೂ ಘಾತುಕನು ಮತ್ತೊಬ್ಬನುಂಟೇ? ಸುಳ್ಳುನುಡಿ ನುಡಿಯುವುದು ಸಾವಿರ ಹಸುಗಳನ್ನು ಕೊಂದ ಪಾಪಕ್ಕೆ ಸಮನಾದುದು. ಮಿತ್ರರಿಂದ ಉಪಕಾರಹೊಂದಿ ಅವರ ಕಾರ್ಯವನ್ನು ನೆರವೇರಿಸಿಕೊಡದವನು ವಧೆಗೆ ಅರ್ಹನು. ಚಿನ್ನವನ್ನು ಕದ್ದ, ಗುರುಪತ್ನಿಯಲ್ಲಿ ಗಮನಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವುಂಟು. ಆದರೆ ಮಾಡಿದ ಉಪಕಾರವನ್ನು ಮರೆತ ಪಾಪಕ್ಕೆ ಯಾವ ಪ್ರಾಯಶ್ಚಿತ್ತವೂ ಇರದು. ರಾಮನಿಂದ ಉಪಕಾರ ಹೊಂದಿ ಸೀತಾನ್ವೇಷಣ ಕಾರ್ಯದಲ್ಲಿ ತೊಡಗದಿರುವ ನಿನಗಿಂತಲೂ ಕೃತಘ್ನನು ಮತ್ತೊಬ್ಬನುಂಟೆ? ಕಾಮಾಸಕ್ತನಾಗಿ ನೀನು ಸುಳ್ಳು ಪ್ರತಿಜ್ಞೆಯನ್ನು ಮಾಡಬಹುದೇ? ರಾಮನ ಉಪಕಾರವನ್ನು ನೆನೆಯದಾದರೆ ನಿನಗೂ ವಾಲಿಯ ಗತಿಯೆ ಉಂಟಾಗುವುದೆಂದು ತಿಳಿ. ಆದರೆ ವಾಲಿಯ ಮಾರ್ಗವನ್ನು ಅನುಸರಿಸಬೇಡ. ವಜ್ರಾಯುಧಕ್ಕೆ ಸಮನಾದ ರಾಮಬಾಣಗಳು ಸಾಮಾನ್ಯವಲ್ಲ."

ಕೋಪದಿಂದ ಮಾತನಾಡುತ್ತಿದ್ದ ತೇಜಸ್ವಿಯಾದ ಲಕ್ಷ್ಮಣನನ್ನು ತಾರೆ ಮತ್ತೆ ಸಂತೈಸಿದಳು : "ಲಕ್ಷ್ಮಣ, ಶ್ರೀರಾಮನು ಮಾಡಿದ ಉಪಕಾರವನ್ನು ಮರೆಯುವಷ್ಟು ಸುಗ್ರೀವನು ಕೃತಘ್ನನಲ್ಲ. ಬಹುಕಾಲದಿಂದ ಇಂದ್ರಿಯಗಳನ್ನು ನಿಗ್ರಹಮಾಡಿದ ಇವನ ಕಾಮಾಸಕ್ತತೆಯನ್ನು ನೀವು ಮನ್ನಿಸಬೇಕು. ಸುಗ್ರೀವನು ರಾಮಕಾರ್ಯಕ್ಕಾಗಿ ಸಮಯ ಬಂದರೆ ತನ್ನನ್ನೂ, ರುಮೆಯನ್ನೂ, ಕೊನೆಗೆ ರಾಜ್ಯವನ್ನೂ ಬಿಡಲು ಸಿದ್ಧನಿದ್ದಾನೆ. ಸುಗ್ರೀವನ ಅಪ್ಪಣೆಯನ್ನು ನಿರೀಕ್ಷಿಸುತ್ತ ಈಗಾಗಲೆ ವಾನರ ವೀರರು ಸಿದ್ಧರಾಗಿದ್ದಾರೆ."

ತಾರೆಯ ಮೃದುಮಾತು ಲಕ್ಷ್ಮಣನ ಮನಸ್ಸನ್ನು ಕರಗಿಸಿತು ; ಅವನ ಕೋಪವನ್ನು ಇಳಿಸಿತು. ಈ ವೇಳೆಗೆ ಲಕ್ಷ್ಮಣನ ವಿಷಯದಲ್ಲಿ ಸುಗ್ರೀವನ ಭಯವೂ ಬಿಟ್ಟು ಹೋಯಿತು. ಅನಂತರ ಅವನನ್ನು ಒಲಿಸಿಕೊಳ್ಳಲು ಸುಗ್ರೀವನು ಈ ರೀತಿ ನುಡಿದನು: "ಲಕ್ಷ್ಮಣ, ಕೈಬಿಟ್ಟುಹೋದ ಈ ವಾನರ ರಾಜ್ಯ ನನಗೆ ಶ್ರೀರಾಮನ ದಯೆಯಿಂದ ದೊರಕಿತು. ಆತನು ಮಾಡಿರುವ ಉಪಕಾರಕ್ಕೆ ನಾನು ಏನುತಾನೆ ಪ್ರತ್ಯುಪಕಾರ ಮಾಡಲಿ? ಸೀತೆಯನ್ನು ಪಡೆಯಲು ಆತನಿಗೇ ಶಕ್ತಿಯುಂಟು. ಆದಕಾರಣ ನನ್ನ ಸಹಾಯ ರಾಮನಿಗೆ ನಿಮಿತ್ತಮಾತ್ರವೆಂದು ತಿಳಿಯುತ್ತೇನೆ. ಶ್ರೀರಾಮನ ಆಜ್ಞೆಯನ್ನು ಹೂವಿನಂತೆ ತಲೆಯಲ್ಲಿ ತೊಟ್ಟು ಅವನನ್ನು ಹಿಂಬಾಲಿಸುತ್ತೇನೆ. ನನ್ನ ಮೇಲಿರುವ ಪ್ರೀತಿ ವಿಶ್ವಾಸಗಳಿಂದ ನನ್ನ ತಪ್ಪನ್ನು ಶ್ರೀರಾಮನು ಮನ್ನಿಸತಕ್ಕದ್ದು." ಸುಗ್ರೀವನ ಮಾತು ಲಕ್ಷ್ಮಣನನ್ನು ಸಂತೋಷಗೊಳಿಸಿತು. "ವಾನರವೀರ, ನಿನ್ನ ಕುಲಕ್ಕೆ ತಕ್ಕ ಮಾತುಗಳನ್ನೆ ನೀನು ಆಡಿದೆ. ನಿನ್ನ ವಿಷಯದಲ್ಲಿ ಆಡಿದ ಕಠಿಣೋಕ್ತಿಗಳನ್ನು ಕ್ಷಮಿಸು" ಎಂದು ಲಕ್ಷ್ಮಣನು ಸುಗ್ರೀವನನ್ನು ಕೇಳಿಕೊಂಡನು.

ಅನಂತರ ಸುಗ್ರೀವನು ಹನುಮಂತನನ್ನು ಕರೆದು "ಪರ್ವತಗಳಲ್ಲಿ ವಾಸಮಾಡುವ ಕಡಲಿನ ತೀರದಲ್ಲಿರುವ, ವೃಕ್ಷಗಳನ್ನು ಆಶ್ರಯಿಸಿರುವ ಎಲ್ಲ ಕಪಿಗಳನ್ನು ಬೇಗ ಬರಮಾಡು. ಈ ಮೊದಲೆ ಕಪಿಗಳನ್ನು ಕರೆತರಲು ದೂತರು ಹೋಗಿರುವರು. ಈಗ ಇನ್ನೂ ಕೆಲವರನ್ನು ಕಳುಹು. ನನ್ನ ಆಜ್ಞೆಯನ್ನು ಕೇಳಿದ ಹತ್ತು ದಿನಗಳಲ್ಲಿ ಯಾರು ಇಲ್ಲಿಗೆ ಬರುವುದಿಲ್ಲವೊ ಅವರನ್ನು ಕೂಡಲೆ ಸಂಹರಿಸತಕ್ಕದ್ದು" ಎಂದು ಅಪ್ಪಣೆ ಮಾಡಿದನು.

ಸುಗ್ರೀವನ ಅಪ್ಪಣೆಯಂತೆ ಹನುಮಂತನು ಎಲ್ಲ ಸ್ಥಳಗಳಿಗೂ ವಾನರರನ್ನು ಕಳುಹಿಸಿಕೊಟ್ಟನು. ಅವರು ಬೆಟ್ಟ ಸಮುದ್ರ ಕಾಡುಗಳಲ್ಲಿ ಸಂಚರಿಸಿ ರಾಮಕಾರ್ಯಕ್ಕಾಗಿ ಬರಲು ಎಲ್ಲ ಕಪಿಗಳನ್ನು ಹುರಿದುಂಬಿಸಿದನು. ಯಮನಿಗೆ ಸಮಾನವಾದ ಸುಗ್ರೀವನ ಆಜ್ಞೆಯನ್ನು ಕೇಳಿ, ಹೆದರಿ, ತಂಡ ತಂಡವಾಗಿ ಕಪಿಗಳು ಬಂದರು. ಅಪಾರವಾದ ಕಪಿಸೇನೆಯನ್ನು ಕಂಡು, ಅವರು ತಂದೊಪ್ಪಿಸಿದ ಹಣ್ಣು ಗೆಡ್ಡೆ ಗೆಣಸುಗಳನ್ನು ಸ್ವೀಕರಿಸಿ ಸುಗ್ರೀವನು ಅವರನ್ನು ಬಿಡಾರಕ್ಕೆ ಕಳುಹಿಸಿದನು.

ಸುಗ್ರೀವನ ಸೇನೆಯನ್ನು ನೋಡಿ ಲಕ್ಷ್ಮಣನ ಕೋಪವಿಳಿದು, ಸಂತೋಷ ವುಕ್ಕಿತು. ಕಿಷ್ಕಿಂಧೆಯಿಂದ ಹೊರಟು, ರಾಮನಿಗೆ ಈ ಪ್ರಿಯವಾರ್ತೆಯನ್ನು ಬೇಗ

ತಿಳಿಸಬೇಕೆಂದು ಲಕ್ಷ್ಮಣನು ಸುಗ್ರೀವನನ್ನು ಹುರಿದುಂಬಿಸಿದನು. ತನ್ನೊಡನಿದ್ದ ತಾರೆ ಮೊದಲಾದ ಸ್ತ್ರೀಯರನ್ನು ಅಂತಃಪುರಕ್ಕೆ ಕಳುಹಿಸಿಕೊಟ್ಟಮೇಲೆ, ರಾಮನ ಬಳಿಗೆ ಹೋಗಲು ಸುಗ್ರೀವನು ಲಕ್ಷ್ಮಣನೊಡನೆ ಪಲ್ಲಕ್ಕಿಯಲ್ಲಿ ಕುಳಿತು ಹೊರಟನು. ವಾನರ ದೂತರು ಸುಗ್ರೀವ ಲಕ್ಷ್ಮಣರಿಗೆ ಬೆಳ್ಗೊಡೆ ಹಿಡಿದರು ; ಚಿನ್ನದ ಹಿಡಿಯ ಚಾಮರಗಳನ್ನು ಬೀಸಿದರು. ಶಂಖದುಂದುಭಿಗಳು ಮೊರೆಯುತ್ತಿರಲು ಶಸ್ತ್ರಾಸ್ತ್ರಗಳನ್ನು ಹಿಡಿದ ವೀರರಿಂದ ಸುತ್ತುವರಿದ ಸುಗ್ರೀವನು ಮಹಾ ವೈಭವದಿಂದ ಶ್ರೀರಾಮನ ಬಳಿಗೆ ಐತಂದನು.

---

೯

# ಸುಗ್ರೀವನ ಶಾಸನ

ಶ್ರೀರಾಮನನ್ನು ಕಾಣುತ್ತಲೇ ಸುಗ್ರೀವನು ಪಲ್ಲಕ್ಕಿಯಿಂದಿಳಿದು, ಕೈಮುಗಿದು ಕೊಂಡೆ ಅವನ ಬಳಿಗೆ ನಡೆದು ನಿಂತನು. ತಾವರೆಯ ಮೊಗ್ಗುಗಳಿಂದ ಕಿಕ್ಕಿರಿದ ಕೊಳದಂತೆ ಬಹುಸಂಖ್ಯೆಯಲ್ಲಿ ಆತನನ್ನು ಹಿಂಬಾಲಿಸುತ್ತಿದ್ದ ಆ ದೊಡ್ಡ ವಾನರಸೇನೆ ಯನ್ನು ನೋಡಿ ಶ್ರೀರಾಮನಿಗೆ ಕೋಪವಡಗಿತು; ಸುಗ್ರೀವನಲ್ಲಿ ಮೈತ್ರಿ ಯುಂಟಾಯಿತು. ತನ್ನ ಪಾದಗಳನ್ನು ಹಿಡಿದು ನಮಸ್ಕರಿಸಿದ ಸುಗ್ರೀವನನ್ನು ಮೇಲಕ್ಕೆತ್ತಿ ಶ್ರೀರಾಮನು ಅವನನ್ನು ದೃಢವಾಗಿ ಅಪ್ಪಿಕೊಂಡನು. ಸುಗ್ರೀವನನ್ನು ಪೀಠದಲ್ಲಿ ಕುಳ್ಳಿರಿಸಿದ ಬಳಿಕ ಶ್ರೀರಾಮನು ಅವನನ್ನು ಕುರಿತು: "ಮಿತ್ರನೆ, ಯುದ್ಧಕ್ಕೆ ಹೊರಡಲು ಈಗ ಸಕಾಲವಾಗಿದೆ. ಈ ವಿಷಯವನ್ನು ಕುರಿತು ಮಂತ್ರಿ ಗಳೊಡನೆ ಚೆನ್ನಾಗಿ ಯೋಚಿಸು" ಎಂದನು. ಶ್ರೀರಾಮನ ಮಾತನ್ನು ಕೇಳಿ ಸುಗ್ರೀವನು: "ರಾಮಚಂದ್ರ, ನಿನ್ನ ಅನುಗ್ರಹದಿಂದ ನನಗೆ ಈ ವಾನರ ರಾಜ್ಯ ದೊರಕಿತು. ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡದವನು ಪುರುಷಾಧಮನಲ್ಲವೆ? ಇಗೋ! ಬೆಟ್ಟ ಗುಡ್ಡಗಳಲ್ಲಿ, ಕಾಡುಗಳಲ್ಲಿ ವಾಸ ಮಾಡುವ, ಮೇರುಪರ್ವತಕ್ಕೆ ಸಮನಾದ ಧೈರ್ಯವುಳ್ಳ, ಯುದ್ಧದಲ್ಲಿ ರಾವಣನನ್ನು ಕೊಲ್ಲಲು ಶಕ್ತರಾದ ಈ ವಾನರರು ನಿನ್ನ ಕಾರ್ಯಸಾಧನೆಗಾಗಿ ಕೋಟಿ ಸಂಖ್ಯೆಯಲ್ಲಿ ಬರುತ್ತಿದ್ದಾರೆ. ಸೀತೆ ಯನ್ನು ಹುಡುಕುವ ಕಾರ್ಯದಲ್ಲಿ ಇನ್ನು ನಾವು ತೊಡಗಬಹುದು." ಸುಗ್ರೀವನ ಮಾತನ್ನು ಕೇಳಿ ಅವನ ಕಾರ್ಯೋದ್ಯೋಗವನ್ನು ಕಂಡು ಶ್ರೀರಾಮನ ಕಣ್ಣುಗಳು ಹರ್ಷದಿಂದ ಅರಳಿದುವು.

ಅನಂತರ ಶ್ರೀರಾಮನು ಸುಗ್ರೀವನನ್ನು ನೋಡಿ "ವಾನರೇಶ್ವರ, ದೇವೇಂದ್ರನು ಮಳೆಗರೆಯುವುದೂ ಸೂರ್ಯನು ಕತ್ತಲೆಯನ್ನು ಕಳೆಯುವುದೂ ಬೆಳುದಿಂಗಳಿಂದ ಚಂದ್ರನು ಲೋಕವನ್ನು ಸಂತೋಷಗೊಳಿಸುವುದೂ ಹೇಗೆ ಸಹಜವೊ ಹಾಗೆಯೆ ಉಪಕಾರವೆಸಗಿದವರಿಗೆ ನೀನು ಪ್ರತ್ಯುಪಕಾರವೆಸಗುವುದೊಂದು ಆಶ್ಚರ್ಯವಲ್ಲ. ನಿನ್ನ ಸಹಾಯವೊಂದಿದ್ದರೆ ಯುದ್ಧದಲ್ಲಿ ಜಯಿಸುವುದೊಂದು ಕಷ್ಟವೇ? ಈ ಕಷ್ಟ ಕಾಲದಲ್ಲಿ ನೀನೇ ನನ್ನ ಆಪದ್ಬಂಧು. ತನ್ನ ನಾಶಕ್ಕಾಗಿಯೆ ರಾವಣನು ಸೀತೆ ಯನ್ನು ಅಪಹರಿಸಿದನು. ನನ್ನ ಹರಿತವಾದ ಬಾಣಗಳಿಂದಲೂ ನಿನ್ನ ನೆರವಿನಿಂದಲೂ ಇಂದ್ರನು ಪುಲೋಮನನ್ನು ಸಂಹರಿಸಿದಂತೆ ರಾವಣನನ್ನು ನಾಶಮಾಡುತ್ತೇನೆ?" ಎಂದನು.

ಶ್ರೀರಾಮನು ಹೀಗೆ ನುಡಿಯುತ್ತಿದ್ದಾಗಲೆ ಸೂರ್ಯನ ಕಾಂತಿ ಕಾಣದಂತೆ ಎಲ್ಲೆಲ್ಲಿಯೂ ಧೂಳು ಮುಸುಗಿತು. ಬೆಟ್ಟ ಕಾಡು ಭೂಮಿಗಳೆಲ್ಲವೂ ನಡುಗಿಹೋದುವು. ಕ್ಷಣಮಾತ್ರದಲ್ಲಿಯೆ ಕಾಮರೂಪಿಗಳಾದ ವಾನರರು ಕೋಟಿ ಸಂಖ್ಯೆಯಲ್ಲಿ ಮೇಘದಂತೆ ಗಂಭೀರವಾಗಿ ಧ್ವನಿಗೈಯುತ್ತ ಸುಗ್ರೀವನ ಸುತ್ತಲೂ ನೆರೆದುನಿಂತರು. ರಾಮ ಲಕ್ಷ್ಮಣರು ನೋಡುತ್ತಿರುವಂತೆಯೆ ಭೂಮಿಯೆಲ್ಲವೂ ವಾನರರಿಂದ ಮುಚ್ಚಿಹೋಯಿತು. ಶತಬಲಿ, ಸುಷೇಣ, ತಾರ, ಹನುಮಂತ, ನೀಲ, ಗಜ, ಕರಡಿಗಳ ಒಡೆಯರಾದ ಧೂಮ್ರ ಮತ್ತು ಜಾಂಬವ ಇವರೆಲ್ಲರೂ ತಮ್ಮ ಅಪಾರವಾದ ಸೇನಾ ಬಲದೊಡನೆ ಸುಗ್ರೀವನನ್ನು ಬಂದುಸೇರಿದರು. ಹೀಗೆ ಬಂದು ನೆರೆದ ವಾನರರನ್ನು ಎಣಿಸಲು ಸಾವಿರ ಬಾಯ ಶೇಷನಿಗೂ ಅಸಾಧ್ಯವಾಯಿತು. ಹೀಗೆ ಬಂದ ವಾನರರು



ಕಾಮರೂಪಿಗಳಾದ ವಾನರರು ಕೋಟಿ ಸಂಖ್ಯೆಯಲ್ಲಿ ಮೇಘದಂತೆ ಗಂಭೀರವಾಗಿ ಧ್ವನಿಗೈಯುತ್ತ ಸುಗ್ರೀವನ ಸುತ್ತಲೂ ನೆರೆದು ನಿಂತರು.

ಸುಗ್ರೀವನಿಗೆ ನಮಸ್ಕರಿಸಿ, ಅವನ ಅಪ್ಪಣೆಯನ್ನು ಹಾರೈಸುತ್ತ ಕೈಕಟ್ಟಿಕೊಂಡು ನಿಂತರು.

ಆಗ ಪರಬಲಭಯಂಕರನಾದ ಸುಗ್ರೀವನು ಪುರುಷಸಿಂಹನಾದ ರಾಮನನ್ನು ಕುರಿತು: "ರಾಮಚಂದ್ರ, ಈಗ ನೆರೆದಿರುವ ವಾನರರಿಗೆ ಬೀಡು ಬಿಡಿಸಲು ಸ್ಥಳವಿಲ್ಲದಾಗಿದೆ. ಅವರ ಸಂಖ್ಯೆ ಅಷ್ಟು ಅಪರಿಮಿತವಾಗಿದೆ. ಇವರು ದೈತ್ಯರಂತೆ ಶೂರರು. ಸಂಚರಿಸುವುದರಲ್ಲಿ ವಾಯುವಿಗೆ ಸಮಾನರು. ಹಾರುವುದರಲ್ಲಿ ಇವರನ್ನು ಮೀರಿಸಿದವರೇ ಇಲ್ಲ. ಇಲ್ಲಿ ನೆರೆದಿರುವ ಕಪಿಗಳೆಲ್ಲರೂ ನಿನ್ನ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತು ನಡೆಸಲು ಇಲ್ಲಿಗೆ ಬಂದಿರುವರು. ಇವರು ಮಾಡತಕ್ಕ ಕೆಲಸವನ್ನು ಅಪ್ಪಣೆ ಕೊಡಿಸು" ಎಂದನು. ಸುಗ್ರೀವನ ಮಾತನ್ನು ಕೇಳಿ ಹರ್ಷಗೊಂಡ ಶ್ರೀರಾಮನು ಅವನನ್ನು ಅಪ್ಪಿಕೊಂಡು ಈ ರೀತಿ ನುಡಿದನು: "ನೀತಿಕುಶಲನಾದ ಸುಗ್ರೀವ, ಮೊದಲು ವೈದೇಹಿ ಬದುಕಿರುವಳೊ ಇಲ್ಲವೋ ಎಂಬುದನ್ನು ತಿಳಿಯಬೇಕು. ಆ ಬಳಿಕ ರಾವಣನ ದೇಶವನ್ನು ಗೊತ್ತುಪಡಿಸಬೇಕು. ಸೀತೆ ಮತ್ತು ರಾವಣರ ವಿಷಯವನ್ನು ಅರಿತ ಬಳಿಕ ಮುಂದೆ ಮಾಡಬೇಕಾದ ಕಾರ್ಯವನ್ನು ನಿನ್ನೊಡನೆ ಯೋಚಿಸುತ್ತೇನೆ. ಆದ್ದರಿಂದ ಈ ಕಪಿವೀರರು ಈಗ ಮಾಡಬೇಕಾಗಿರುವ ಕಾರ್ಯವನ್ನು ನೀನೇ ಆಜ್ಞಾಪಿಸು. ನಿನ್ನಂಥ ಒಳ್ಳೆಯ ಮಿತ್ರ, ಪರಾಕ್ರಮಿಯಾದ ಲಕ್ಷ್ಮಣನು ಇರುವಲ್ಲಿ ನನ್ನ ಕಾರ್ಯ ಕೈಗೂಡುವುದರಲ್ಲಿ ಸಂದೇಹವೇನು?"

ಶ್ರೀರಾಮನ ಮಾತನ್ನು ಕೇಳಿ ವಾನರೇಶ್ವರನಾದ ಸುಗ್ರೀವನು ವಿನತನೆಂಬ ಸೇನಾಪತಿಯನ್ನು ಕರೆದು ಈ ರೀತಿ ಅಪ್ಪಣೆ ಮಾಡಿದನು: "ಅಯ್ಯಾ ವಿನತ, ನೀನು ದೇಶಕಾಲಗಳನ್ನು ತಿಳಿದವನು. ನೀತಿನಿಪುಣನಾದ ನೀನು ಶೂರರಾದ ಲಕ್ಷ ವಾನರರಿಂದ ಕೂಡಿ ಪೂರ್ವ ದಿಕ್ಕಿಗೆ ತೆರಳು. ಆ ದಿಕ್ಕಿನಲ್ಲಿರುವ ಕಾಡುಮೇಡುಗಳಲ್ಲಿ, ಲತಾಕುಂಜಗಳಲ್ಲಿ, ನದೀ ತೀರಗಳಲ್ಲಿ ಸೀತೆಯನ್ನು ಹುಡುಕತಕ್ಕದ್ದು. ಹಾಗೆಯೆ ರಾವಣನ ದೇಶವಾವುದೆಂಬುದನ್ನು ನೀವು ತಿಳಿದು ಬರಬೇಕು. ಮಾಳವ, ಮಗಧ, ವಂಗ ದೇಶಗಳಲ್ಲಿ ಸೀತೆಯನ್ನು ಹುಡುಕಿ. ಈ ಅನ್ವೇಷಣ ಕಾಲದಲ್ಲಿ ಎಲ್ಲ ಮನೆಗಳನ್ನೂ ನಾನಾ ಬಗೆಯ ಜನರನ್ನೂ ಪರೀಕ್ಷಿಸುವುದು ಆವಶ್ಯಕ. ಬೆಟ್ಟದಿಂದ ಬೆಟ್ಟಕ್ಕೆ, ಕಾಡಿನಿಂದ ಕಾಡಿಗೆ, ಕೋಟೆಯಿಂದ ಕೋಟೆಗೆ ಹಾರಿ ನಿಮ್ಮ ಕಾರ್ಯವನ್ನು ತ್ವರೆಗೊಳಿಸಿ. ಗರುಡನ ಅರಮನೆಯಲ್ಲಿ, ವರುಣನ ರಾಜಮಂದಿರದಲ್ಲಿ ಸೀತೆಯನ್ನು ಹುಡುಕಲು ಯತ್ನಿಸಿ. ಹಾಗೆಯೆ ಘೋರರೂಪಿಗಳಾದ ರಾಕ್ಷಸರನ್ನೂ ಶೋಧಿಸದೆ ಬಿಡಕೂಡದು. ಈ ಕೆಲಸವನ್ನು ಪೂರೈಸಲು ನಿಮಗೆ ಕೊಟ್ಟಿರುವ ಅವಧಿ ಒಂದೇ ಒಂದು ತಿಂಗಳು ಮಾತ್ರ. ಆ ಅವಧಿಯಲ್ಲಿ ನೀವು ಎಲ್ಲೆಡೆಯಲ್ಲಿಯೂ ಹುಡುಕಿ ಸೀತೆಯಿರುವ ಸ್ಥಳವನ್ನು ತಿಳಿದು ಬರಬೇಕು. ಆ ಕಾಲವನ್ನು ಮೀರಿದವರು ವಧಾರ್ಹರಾಗುತ್ತಾರೆ."

ವಿನತನನ್ನು ಪೂರ್ವದಿಕ್ಕಿಗೆ ಕಳುಹಿಸಿದಮೇಲೆ, ಸುಗ್ರೀವನು ನೀಲ, ಹನುಮಂತ, ಜಾಂಬವಂತ, ಅಂಗದ, ಸುಷೇಣ ಮುಂತಾದ ವೀರರನ್ನು ಕರೆದು ದಕ್ಷಿಣದಿಕ್ಕಿಗೆ ಹೋಗು

ವಂತೆ ಅಪ್ಪಣೆ ಮಾಡಿದನು. ದಕ್ಷಿಣದಿಕ್ಕಿಗೆ ಹೊರಟು ನಿಂತ ಆ ಕಪಿವೀರರನ್ನು ಕುರಿತು ಸುಗ್ರೀವನು : "ವಾನರ ವೀರರೆ, ವಿಂಧ್ಯಪರ್ವತದಲ್ಲಿ, ನರ್ಮದಾ ಗೋದಾವರೀ ವರದಾ ನದಿಗಳಲ್ಲಿ, ಅವಂತಿಯೇ ಮೊದಲಾದ ಪಟ್ಟಣಗಳಲ್ಲಿ, ವಿದರ್ಭ ಮಹಿಷ ಕೇರಳ ಪಾಂಡ್ಯ ಮೊದಲಾದ ದೇಶಗಳಲ್ಲಿ ಸೀತೆಯನ್ನು ಹುಡುಕಿ ಆಕೆಯ ಸಮಾಚಾರವನ್ನು ನೀವು ತರಲೇಬೇಕು. ಮಲಯಪರ್ವತದಲ್ಲಿ ಅಗಸ್ತ್ಯಋಷಿಯನ್ನು ಕಂಡು, ಅಲ್ಲಿಂದ ಮುಂದೆ ನಡೆದು, ಕಾವೇರಿ ಮತ್ತು ತಾಮ್ರಪರ್ಣಿ ನದಿಗಳಲ್ಲಿ ಸೀತೆಯನ್ನು ಹುಡುಕಿ. ಆ ಬಳಿಕ ಸಮುದ್ರತೀರವನ್ನು ಸೇರಿ ಅಲ್ಲಿ ನೀವು ಮಾಡಬೇಕಾದ ಕಾರ್ಯವನ್ನು ಯೋಚಿಸಿ. ಸಮುದ್ರದ ನಡುವೆ ಮಹೇಂದ್ರಪರ್ವತವಿದೆ. ಅಲ್ಲಿಯೂ ಸೀತೆಯನ್ನು ಹುಡುಕಿ. ಸಮುದ್ರದ ಆಚೆಯ ದಡದಲ್ಲಿ ನೂರುಯೋಜನ ವಿಸ್ತೀರ್ಣವುಳ್ಳ ದ್ವೀಪದಲ್ಲಿ ನೀವು ಸೀತೆಯನ್ನು ಚೆನ್ನಾಗಿ ಹುಡುಕಬೇಕು. ದುರಾತ್ಮನಾದ ರಾವಣನಿಗೆ ಅದು ವಾಸಸ್ಥಾನ. ಇಷ್ಟೇ ಅಲ್ಲದೆ ಸೂರ್ಯವಂತ, ವೈದ್ಯುತಿ, ಕುಂಜರ ಮುಂತಾದ ಪರ್ವತಗಳಲ್ಲಿಯೂ, ಸರ್ಪಗಳಿಗೆ ವಾಸಸ್ಥಾನವಾದ ಭೋಗವತಿಯಲ್ಲಿಯೂ, ಸೀತೆಯನ್ನು ಹುಡುಕಿ. ವೀರರಿರಾ, ಈ ಪ್ರದೇಶಗಳಲ್ಲಿ ಹುಡುಕಿ ಒಂದು ತಿಂಗಳಲ್ಲಿ ಹಿಂದಿರುಗಿ ಬನ್ನಿ. ಸೀತೆಯ ಸಮಾಚಾರವನ್ನು ತಂದವರು ಒಂದು ವೇಳೆ ಅಪರಾಧ ಮಾಡಿದರೂ ನನಗೆ ಪ್ರಿಯರಾಗುತ್ತಾರೆ" ಎಂದು ಅಪ್ಪಣೆ ಮಾಡಿ ಅವರನ್ನು ಬೀಳ್ಕೊಟ್ಟನು.

ಆಮೇಲೆ ಸುಗ್ರೀವನು ತಾರೆಯ ತಂದೆಯೂ ತನ್ನ ಮಾವನೂ ಆದ ಸುಷೇಣನಿಗೆ ನಮಸ್ಕರಿಸಿ, ಕೈಮುಗಿದು ಆತನಿಗೆ ಈ ರೀತಿ ನುಡಿದನು : "ವಾನರೋತ್ತಮರೇ, ನೀವೆಲ್ಲರೂ ಪಶ್ಚಿಮದಿಕ್ಕಿಗೆ ಹೋಗಿ ಸೀತೆಯನ್ನು ಹುಡುಕಬೇಕು. ಸೌರಾಷ್ಟ್ರ ಬಾಹ್ಲಿಕ ದೇಶಗಳನ್ನು ಕುರಿತು ಹೋಗಿ ಅಲ್ಲಿನ ಗ್ರಾಮಗಳನ್ನೂ ವನಗಳನ್ನೂ ಎಲೆವನಗಳನ್ನೂ ಚೆನ್ನಾಗಿ ಶೋಧಿಸಿ ಅಲ್ಲಿಂದ ಮುಂದೆ ಪಶ್ಚಿಮ ಸಮುದ್ರತೀರವನ್ನು ಸೇರಿ ಅಲ್ಲಿ ಸೀತೆಯನ್ನು ಹುಡುಕಿ. ಸಿಂಧೂನದಿ ಸಾಗರವನ್ನು ಸೇರುವಲ್ಲಿಯೂ ಹೇಮಗಿರಿಯಲ್ಲಿಯೂ ಸೀತೆಯನ್ನು ಹುಡುಕಬೇಕು. ವರಾಹ ಸುವರ್ಣಶೃಂಗಗಳೆಂಬ ಬೆಟ್ಟಗಳು ನಿಮ್ಮ ಶೋಧನೆಗೆ ಯೋಗ್ಯವಾದುವು. ಹಾಗೆಯೆ ಪ್ರಾಗ್‌ಜ್ಯೋತಿಷ ನಗರವನ್ನೂ ಶೋಧನೆ ಮಾಡಿ. ಈ ಪ್ರದೇಶಗಳಲ್ಲೆಲ್ಲ ಹುಡುಕಿ ಸೀತೆಯ ರಾವಣನ ವರ್ತಮಾನವನ್ನು ತನ್ನಿ. ಸೀತೆಯನ್ನು ಹುಡುಕುವ ಕಾರ್ಯದಲ್ಲಿ ನಿಮಗೆ ಸಹಾಯಕನಾಗಿ ನಿಮ್ಮೊಡನೆ ನನ್ನ ಮಾವನಾದ ಸುಷೇಣನು ಬರುತ್ತಾನೆ. ಸುಷೇಣನು ನಮ್ಮೆಲ್ಲರಿಗೂ ಹಿರಿಯನು ಹಾಗೂ ಗುರು. ಈತನನ್ನು ಮುಂದಿಟ್ಟುಕೊಂಡು, ಈತನ ಅಪ್ಪಣೆಯನ್ನು ಪಾಲಿಸುತ್ತ ಪಶ್ಚಿಮ ದಿಕ್ಕಿನಲ್ಲೆಲ್ಲ ಹುಡುಕಿ ಬನ್ನಿ. ಶ್ರೀರಾಮನಿಂದ ನಮಗಾದ ಉಪಕಾರಕ್ಕೆ ಪ್ರತಿಯಾಗಿ ಸೀತೆಯನ್ನು ಹುಡುಕಿಕೊಟ್ಟು ಧನ್ಯರಾಗೋಣ." ಹೀಗೆಂದು ಹೇಳಿ ಸುಷೇಣನನ್ನು ಪಶ್ಚಿಮದಿಕ್ಕಿಗೆ ಕಳುಹಿಸಿಕೊಟ್ಟನು.

ಅನಂತರ ಸುಗ್ರೀವನು ಶತಬಲಿಯೆಂಬ ವಾನರನನ್ನು ಕರೆದು ಮೃದು ಮಾತಿನಿಂದಲೆ ಅವನಿಗೆ ಈ ರೀತಿ ಅಪ್ಪಣೆಮಾಡಿದನು: "ನಿನ್ನಂತೆ ಶೂರರಾದ ಲಕ್ಷವಾನರರೊಡಗೂಡಿ ಸೀತಾನ್ವೇಷಣಕ್ಕಾಗಿ ಉತ್ತರಕ್ಕೆ ತೆರಳು. ನಮ್ಮಿಂದ ಈ ಕಾರ್ಯ ಪೂರ್ಣವಾದುದೆ ಆದರೆ ಶ್ರೀರಾಮನ ಋಣದಿಂದ ಬಿಡುಗಡೆಹೊಂದಿ ನಾವು ಧನ್ಯರಾಗುತ್ತೇವೆ. ಆಗ ನಮ್ಮ ಬಾಳು ಸಫಲವೆನಿಸುತ್ತದೆ. ಉಪಕಾರಿ ಯಲ್ಲದ ಯಾಚಕನ ಕೆಲಸವನ್ನು ಮಾಡಿಕೊಡುವುದರಿಂದ ಬಾಳು ಸಫಲವಾಗು ತ್ತದೆ. ಹೀಗೆಂದಮೇಲೆ ಉಪಕಾರಮಾಡಿದವರಿಗೆ ಪ್ರತಿಯಾಗಿ ಉಪಕಾರಮಾಡಿದರೆ ಹೇಳತಕ್ಕದ್ದೇನು? ಇದನ್ನು ನೆನಪಿನಲ್ಲಿಟ್ಟು ನಿಮ್ಮ ಕರ್ತವ್ಯವನ್ನು ನೀವು ಮಾಡಬೇಕು. ಮ್ಲೇಚ್ಛ, ಮದ್ರ, ಕಾಂಭೋಜ, ಕುರು, ಇವೇ ಮೊದಲಾದ ದೇಶಗಳಲ್ಲಿಯೂ ಕಾಡು ಬೆಟ್ಟಗಳಲ್ಲಿಯೂ ಸೀತೆಯನ್ನು ಹುಡುಕಿ, ಉತ್ತರಕ್ಕೆ ನೀವು ಹೋದುದೇ ಆದರೆ ನಿಮಗೆ ಕೈಲಾಸ ಪರ್ವತ ಸಿಗುವುದು. ಅಲ್ಲಿ ದೇವಶಿಲ್ಪಿ ಯಾದ ವಿಶ್ವಕರ್ಮನು ಕಟ್ಟಿರುವ ಕುಬೇರನ ಅರಮನೆ ಇದೆ. ಸಿರಿಯೊಡೆಯ ನಾದ ಕುಬೇರನು ಯಕ್ಷರೊಡನೆ ಅಲ್ಲಿ ರಮಿಸುವನು. ಆ ಕೈಲಾಸದ ಗುಹೆಗಳಲ್ಲಿ ನೀವು ಸೀತೆಯನ್ನು ಹುಡುಕತಕ್ಕುದು. ಇದೂ ಅಲ್ಲದೆ ಉತ್ತರ ಸಮುದ್ರದವರೆಗೆ ಇರುವ ಪ್ರದೇಶಗಳಲ್ಲೆಲ್ಲ ಚೆನ್ನಾಗಿ ಹುಡುಕಿ ಸೀತೆಯ ಹೆಜ್ಜೆಯನ್ನು ಕಂಡು ಹಿಡಿಯಿರಿ. ನಾನು ಹೇಳದೆ ಬಿಟ್ಟಿರುವ ದೇಶಗಳಿಗೂ ಹೋಗಿ ನೀವು ಕಾರ್ಯ ಸಾಧನೆ ಮಾಡಿ, ನೀವು ದೇವಿಯ ಸಮಾಚಾರವನ್ನು ತಂದುದಾದರೆ ಶ್ರೀರಾಮನು ಸುಪ್ರೀತನಾಗುವನು. ನನಗೂ ಅದಕ್ಕಿಂತ ಹೆಚ್ಚು ಪ್ರಿಯವಾದ ಕಾರ್ಯ ಮತ್ತೊಂದಿಲ್ಲ." ಹೀಗೆಂದು ನುಡಿದು ಅವರನ್ನು ಕಳುಹಿಸಿಕೊಟ್ಟನು.

ನಾಲ್ಕು ದಿಕ್ಕುಗಳಿಗೂ ಶೂರರಾದ ವಾನರರನ್ನು ಕಳುಹಿಸಿಕೊಟ್ಟ ಮೇಲೆ ಸೀತೆಯನ್ನು ಹುಡುಕುವ ಕಾರ್ಯ ಹನುಮಂತನಿಂದಲೇ ನೆರವೇರುವುದೆಂದು ಸುಗ್ರೀವನು ಅರಿತನು. ಪರಾಕ್ರಮಿಯಾದ ಹನುಮಂತನನ್ನು ಕರೆದು ಸುಗ್ರೀವನು ಈ ರೀತಿ ನುಡಿದನು: "ಎಲೈ ವಾನರವೀರ, ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ ನಿನ್ನ ಸಂಚಾರಕ್ಕೆ ತಡೆಯೆ ಇಲ್ಲ. ವೇಗದಲ್ಲಿ, ತೇಜಸ್ಸಿನಲ್ಲಿ, ಹಾರುವಿಕೆಯಲ್ಲಿ ನೀನು ನಿನ್ನ ತಂದೆ ವಾಯುದೇವನಿಗೆ ಸಮಾನನೆನಿಸಿರುವೆ. ಬುದ್ಧಿಯಲ್ಲಿ, ನೀತಿ ಕುಶಲತೆಯಲ್ಲಿ ನಿನ್ನನ್ನು ಮೀರಿಸಿದವರು ಮತ್ತೊಬ್ಬರಿಲ್ಲ. ಸೀತಾದೇವಿ ಯಾವ ಉಪಾಯದಿಂದಲಾದರೂ ದೊರಕುವಂತೆ ಮಾಡುವ ಭಾರ ನಿನ್ನದಾಗಿದೆ." ಸುಗ್ರೀವನ ಮಾತಿನಿಂದ ಹಿಡಿದ ಕೆಲಸವನ್ನು ಕೊನೆ ಮುಟ್ಟಿಸುವ ಶಕ್ತಿ ಮಾರುತಿಯಲ್ಲಿರುವು ದೆಂದು ಶ್ರೀರಾಮನು ತಿಳಿದನು. ಸಂತೋಷದಿಂದ ಅವನನ್ನು ತನ್ನ ಬಳಿಗೆ ಬರ ಮಾಡಿಕೊಂಡು, ತನ್ನ ಮುದ್ರೆಯುಂಗುರವನ್ನು ಸೀತೆಗೆ ಗುರುತಿಗಾಗಿ ಕೊಡಲು ಅವನಿಗೆ ಕೊಟ್ಟನು. "ಎಲೈ ವಾನರಶ್ರೇಷ್ಠ, ಈ ಉಂಗುರವನ್ನು ನೋಡಿದೊಡನೆಯೆ ಸೀತೆ ಭಯಪಡದೆ ನೀನು ನನ್ನ ಕಡೆಯಿಂದ ಬಂದವನೆಂದು ತಿಳಿಯುತ್ತಾಳೆ. ನಿನ್ನ

ಉದ್ಯೋಗ ಪರಾಕ್ರಮ ಇವುಗಳನ್ನು ನೋಡಿದರೆ ನಿನ್ನಿಂದಲೇ ಈ ಕಾರ್ಯ ನೆರವೇರುವಂತೆ ತೋರುತ್ತದೆ" ಎಂದು ನುಡಿದನು. ಆ ಮುದ್ರೆಯುಂಗುರವನ್ನು ತಲೆಯಲ್ಲಿ ಧರಿಸಿ, ಶ್ರೀರಾಮನಿಗೆ ನಮಸ್ಕರಿಸಿ ಹನುಮಂತನು ಪಯಣಹೊರಡಲು ಸಿದ್ಧನಾದನು.

ರಾಮಕಾರ್ಯಸಿದ್ಧಿಗಾಗಿ ಸುಗ್ರೀವನು ಮತ್ತೊಮ್ಮೆ ಎಲ್ಲ ವಾನರರನ್ನೂ ಕರೆದು, ತಾನು ಹೇಳಿದ ರೀತಿಯಲ್ಲಿ ಅವರೆಲ್ಲರೂ ಅನ್ವೇಷಣ ಕಾರ್ಯವನ್ನು ಸಾಧಿಸಬೇಕೆಂದು ಕಟ್ಟಪ್ಪಣೆ ಮಾಡಿದನು. ಸುಗ್ರೀವನ ಉಗ್ರಶಾಸನವನ್ನು ವಾನರರೆಲ್ಲರೂ ಮನಸ್ಸಿಗೆ ತಂದುಕೊಂಡು, ಮಿಡತೆಗಳಂತೆ ಭೂಮಿಯೆಲ್ಲವನ್ನೂ ಮುಚ್ಚಿ ರಾಮಕಾರ್ಯಸಾಧನೆಗೆ ಹೊರಟರು. ಶ್ರೀರಾಮನು ಸೀತೆಯ ವೃತ್ತಾಂತವನ್ನೇ ನಿರೀಕ್ಷಿಸುತ್ತ ಲಕ್ಷ್ಮಣನೊಡನೆ ಮತ್ತೊಂದು ತಿಂಗಳು ಕಾಲ ಆ ಪ್ರಸ್ರವಣಗಿರಿಯಲ್ಲಿ ನಿಂತನು.

---

## ೧೦

# ಅನ್ವೇಷಣೆ

ಶೂರನಾದ ಶತಬಲಿ ಉತ್ತರದಿಕ್ಕಿಗೂ, ವಿನತನೂ ಪೂರ್ವದಿಕ್ಕಿಗೂ, ಅಂಗದನು ದಕ್ಷಿಣಕ್ಕೂ, ಸುಷೇಣನು ಪಶ್ಚಿಮಕ್ಕೂ ತಮ್ಮ ತಮ್ಮ ಸೇನೆಗಳೊಡನೆ ಸೀತೆಯನ್ನು ಹುಡುಕಲು ಹೊರಟರು. ಸೀತೆಯನ್ನು ಹುಡುಕುವ ಕಾರ್ಯಕ್ಕೆ ಸಮರ್ಥರಾದ ವಾನರರನ್ನು ಕಳುಹಿಸಿಕೊಟ್ಟಮೇಲೆ ಸುಗ್ರೀವನ ಮನಸ್ಸು ಸ್ವಲ್ಪ ಸಮಾಧಾನ ಹೊಂದಿತು. ಇತ್ತ ಅನ್ವೇಷಣ ಕಾರ್ಯಕ್ಕಾಗಿ ಹೊರಟವರ ಉತ್ಸಾಹವಾದರೊ ಮುಗಿಲನ್ನು ಮುಟ್ಟುವಂತಿತ್ತು. 'ನಾನೊಬ್ಬನೇ ಸೀತೆಯನ್ನು ಹುಡುಕಿ ತರುತ್ತೇನೆ.' 'ದುಷ್ಟನಾದ ರಾವಣನನ್ನು ತೀರಿಸಿಯೆ ಬಿಡೋಣ.' 'ಯುದ್ಧದಲ್ಲಿ ರಾವಣನನ್ನು ತೀರಿಸಲು ನಾನೊಬ್ಬನೆ ಸಾಕು.' 'ಸೀತೆ ಪಾತಾಳದಲ್ಲಿದ್ದರೂ ಆಕೆಯನ್ನು ತರುವ ಶಕ್ತಿ ನನಗುಂಟು.' 'ಬೆಟ್ಟಗಳನ್ನೆ ಸೀಳುವ ಸಾಮರ್ಥ್ಯ ನನಗಿದೆ.' 'ನೂರು ಯೋಜನಗಳ ನ್ನಾದರೂ ನಾನು ಹಾರಬಲ್ಲೆ' ಎಂದು ವಾನರ ವೀರರು ತಂತಮ್ಮ ಪ್ರತಾಪಗಳನ್ನು ಕೊಚ್ಚಿಕೊಳ್ಳುತ್ತ, ಸಿಂಹನಾದ ಮಾಡುತ್ತ, ಪ್ರತಿಜ್ಞೆಯನ್ನು ಘೋಷಿಸುತ್ತಾ ಹೊರಟರು.

ಸುಗ್ರೀವಾಜ್ಞೆಯಿಂದ ಕಟ್ಟುಗೊಂಡ ವಾನರರು ಬೆಟ್ಟಗಳಲ್ಲಿ, ಕಾಡುಗಳಲ್ಲಿ, ನದೀದುರ್ಗಗಳಲ್ಲಿ, ಗುಹೆಗಳಲ್ಲಿ ಸೀತೆಯನ್ನು ಹುಡುಕತೊಡಗಿದರು. ಹಗಲೆಲ್ಲ, ಸೀತೆ ಯನ್ನು ಹುಡುಕಿ ರಾತ್ರಿಯ ಕಾಲದಲ್ಲಿ ಅವರೆಲ್ಲ ಒಂದೆಡೆ ಸೇರಿ ಮಲಗುತ್ತಿದ್ದರು. ದೇಶದೇಶಗಳಲ್ಲಿ ಅವರು ದೇವಿಯನ್ನು ಹುಡುಕುತ್ತಿದ್ದಾಗ ಹಣ್ಣುಗಳಿಂದಿಡಿದ ಮರಗಳೆ ರಾತ್ರಿಯ ವೇಳೆ ಅವರಿಗೆ ಹಾಸಗೆಯಾಗುತ್ತಿದ್ದುವು. ಹೀಗೆ ಒಂದು ತಿಂಗಳ ಕಾಲ ಹುಡುಕಿದರೂ ಸೀತೆಯನ್ನು ಕಾಣದೆ, ಶತಬಲಿ, ವಿನತ, ಸುಷೇಣರು ತಮ್ಮ ತಮ್ಮ ಸೇನೆಗಳೊಡನೆ ಉತ್ತರ, ಪೂರ್ವ, ಪಶ್ಚಿಮ ದಿಕ್ಕುಗಳಿಂದ ಹಿಂದಿರುಗಿ ಬಂದು ಸುಗ್ರೀವ ನನ್ನು ಕಂಡರು. ಹಾಗೆ ಬಂದ ಅವರು ಸುಗ್ರೀವನಿಗೆ ತಾವು ಎಲ್ಲೆಡೆಯಲ್ಲಿಯೂ ಹುಡುಕಿ ಸೀತೆಯನ್ನು ಕಾಣದೆ ವಿಫಲರಾದುದನ್ನು ವಿಷಾದದಿಂದ ಅರುಹಿದರು. ಇವರ ಮಾತನ್ನು ಕೇಳಿ ಸುಗ್ರೀವ ನಿರಾಸೆಗೊಳ್ಳಲಿಲ್ಲ. ಸೀತೆಯನ್ನು ಹುಡುಕುವ ಕಾರ್ಯ ದಕ್ಷಿಣಕ್ಕೆ ಹೋದ ಅಂಗದಾದಿಗಳಿಂದ ನೆರವೇರಬಹುದೆಂದು ಆತನು ಸಮಾಧಾನ ಹೊಂದಿದನು.

ಇತ್ತ ಹನುಮಂತನು ಸುಗ್ರೀವಾಜ್ಞೆಯಂತೆ ಅಂಗದನೊಡನೆ ವಿಂಧ್ಯ ಪರ್ವತದ ಪ್ರದೇಶಕ್ಕೆ ಬಂದನು. ಅಲ್ಲಿನ ಗುಹೆ, ಕಾಡು, ನದಿ, ಪೊದೆಗಳಲ್ಲಿ ಅವರು ಸೀತೆಯನ್ನು ಹುಡುಕತೊಡಗಿದರು. ಸುಗ್ರೀವನು ಸೂಚಿಸಿದ ಪ್ರದೇಶಗಳಲ್ಲಿ ಸೀತೆಯನ್ನು ಹುಡುಕಿ ದರೂ ಆಕೆ ದೊರೆಯಲಿಲ್ಲ. ಅಲ್ಲದೆ ಅವಳಿದ್ದ ನೆಲೆಯೂ ತಿಳಿದುಬರಲಿಲ್ಲ ; ಸುಳಿವೂ

ಕಾಣಿಸಲಿಲ್ಲ. ಆ ಕಾಲದಲ್ಲಿ ಹನುಮಾದಿಗಳು ನೋಡದ ಬೆಟ್ಟಗಳಿರಲಿಲ್ಲ; ಹುಡುಕದ ಕಾಡುಗಳಿರಲಿಲ್ಲ; ಕಾಣದ ಮೃಗಗಳಿರಲಿಲ್ಲ. ವಾನರವೀರರು ನದಿಗಳಲ್ಲಿ ಸೀತೆಯನ್ನು ಅರಸಿದರು. ಪ್ರವೇಶಿಸಲು ಅಸಾಧ್ಯವಾದ ಸ್ಥಳಗಳನ್ನು ಹೊಕ್ಕು ಹುಡುಕಿದರು. ಆದರೇನು? ಕೊನೆಗೆ ಅವರಿಗೆ ದುಃಖವೇ ಕೈಗಟ್ಟಿತು. ಹೀಗೆ ಹುಡುಕುತ್ತ ಅವರು ಮುಂದೆ ಮುಂದೆ ನಡೆಯಲು, ಬಳ್ಳಿಗಳಿಂದಲೂ ಪೊದೆಗಳಿಂದಲೂ ಸುತ್ತುವರಿದ ಒಂದು ಸ್ಥಳದಲ್ಲಿ ದೇವತೆಗಳಿಗೂ ಹೆದರದಿದ್ದ ಕ್ರೂರಿಯಾದ ಒಬ್ಬ ರಾಕ್ಷಸನನ್ನು ಕಂಡರು. ಆ ರಾಕ್ಷಸನಾದರೊ ಬೆಟ್ಟದಂತೆ ದೇಹವುಳ್ಳವನು! ವಾನರರನ್ನು ಕುರಿತು ಅವನು: "ನೀವು ಇಲ್ಲಿಗೆ ಬಂದುದೇ ಆದರೆ ನಾಶಹೊಂದುವಿರಿ" ಎಂದು ಗರ್ಜಿಸುತ್ತ ಅವರನ್ನು ಅಟ್ಟಿ ಬಂದನು. ಅವನನ್ನು ನೋಡಿ ಅಂಗದನು ಅವನೇ ರಾವಣನೆಂದು ಬಗೆದು ತನ್ನ ಅಂಗೈಯಿಂದ ಅವನ ತಲೆಯ ಮೇಲೆ ಬಲವಾಗಿ ಒಂದು ಪೆಟ್ಟು ಕೊಟ್ಟನು. ಆ ಆಘಾತದ ರಭಸವನ್ನು ತಡೆಯಲಾರದೆ ರಕ್ಕಸನು ನೆತ್ತರು ಕಾರುತ್ತ ಪ್ರಾಣಬಿಟ್ಟನು. ಬಳಿಕ ಜಯಶಾಲಿಗಳಾದ ವಾನರರು ಆ ಪ್ರದೇಶಗಳಲ್ಲಿ ಸೀತೆಯನ್ನು ಹುಡುಕಿದರು. ಆದರೆ ದೇವಿ ಅವರಿಗೆ ಕಾಣಿಸಲಿಲ್ಲ. ಎಲ್ಲರೂ ದುಃಖಿತರಾಗಿ ಒಂದು ಮರದಡಿಯಲ್ಲಿ ಚಿಂತೆಯ ಚಪ್ಪಡಿಗಳನ್ನೆ ತಲೆಯ ಮೇಲೆ ಹೊತ್ತಂತೆ ಕುಳಿತುಬಿಟ್ಟರು.

ಆಗ ಬುದ್ಧಿವಂತನಾದ ಅಂಗದನು ಬಳಲಿದ ವಾನರವೀರರನ್ನು ಇನಿವಾತುಗಳಿಂದ ಸಂತೈಸಿದನು. ಅವರನ್ನು ಅನ್ವೇಷಣಕಾರ್ಯದಲ್ಲಿ ಹುರಿದುಂಬಿಸಲು "ವೀರರೇ, ಪರ್ವತಗಳಲ್ಲಿ, ಅರಣ್ಯಗಳಲ್ಲಿ, ನದೀದುರ್ಗಗಳಲ್ಲಿ, ದೇಶದೇಶಗಳಲ್ಲಿ ಹುಡುಕಿದರೂ ನಮಗೆ ಸೀತೆ ದೊರಕಲಿಲ್ಲ. ದೇವಕನ್ನಿಕೆಯಂತಿರುವ ಸೀತೆಯನ್ನು ಕದ್ದೊಯ್ದ ರಾವಣನ ನೆಲೆಯೂ ಸಿಕ್ಕಲಿಲ್ಲ. ಸುಗ್ರೀವನು ನಮಗೆ ಕೊಟ್ಟ ಅವಧಿಯಾದರೊ ಕಳೆದುಹೋಯಿತು. ಸುಗ್ರೀವನ ಉಗ್ರಶಾಸನವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಆದರೇನು? ನೀವೆಲ್ಲರೂ ನಿದ್ರೆ ಶೋಕ ಆಲಸ್ಯಗಳನ್ನು ತೊರೆದು ಮತ್ತೊಮ್ಮೆ ಸೀತೆಯನ್ನು ಹುಡುಕಬೇಕು. ಉತ್ಸಾಹ, ಧೈರ್ಯ ಮತ್ತು ಸಾಹಸ ಈ ಮೂರುಗುಣಗಳೂ ಕಾರ್ಯಸಿದ್ಧಿಗೆ ಕಾರಣಗಳು. ಆದ್ದರಿಂದ ವೈರಾಗ್ಯವನ್ನೂ ಆಲಸ್ಯವನ್ನೂ ಬದಿಗಿಟ್ಟು ಮತ್ತೊಮ್ಮೆ ಸೀತೆಯನ್ನು ಹುಡುಕಲು ತೊಡಗಿದರೆ ಕಾರ್ಯ ಕೈಗೂಡುವುದರಲ್ಲಿ ಸಂದೇಹವೇ ಇಲ್ಲ. ಮೇಲಾಗಿ ಸುಗ್ರೀವನು ಉಗ್ರಕೋಪಿ; ಅವಧಿ ಮೀರಿ ಸೀತೆಯ ಸುದ್ದಿಯನ್ನು ಒಯ್ಯದ ನಮ್ಮನ್ನು ಆತನು ಶಿಕ್ಷಿಸದೆ ಬಿಡುವುದಿಲ್ಲ. ಸುಗ್ರೀವನಿಗೂ ಶ್ರೀರಾಮನಿಗೂ ಹೆದರಿ ಈ ಕಾರ್ಯದಲ್ಲಿ ಯತ್ನಿಸಬೇಕು. ನನ್ನ ಮಾತು ನಿಮಗೆ ರುಚಿಸಿದರೆ, ಈ ಕಾರ್ಯವನ್ನು ಮತ್ತೊಮ್ಮೆ ಕೈಗೊಳ್ಳಿ" ಎಂದನು.

ಅಂಗದನ ಮಾತನ್ನು ಕೇಳಿ ವಾನರರಲ್ಲಿ ಹೊಸ ಉತ್ಸಾಹ ಉಕ್ಕಿತು. ಗಂಧಮಾದನನೆಂಬ ವಾನರನು ಹಸಿವು ನೀರಡಿಕೆಗಳಿಂದ ಬಳಲಿದ್ದರೂ ತಡವರಿಸುತ್ತ ಈ ರೀತಿ ನುಡಿದನು: "ವೀರರೇ, ಅಂಗದನು ಹಿತವಾದ ಮಾತುಗಳನ್ನೇ ಆಡಿದ್ದಾನೆ. ಅವನು ನುಡಿದಂತೆ ಮತ್ತೊಮ್ಮೆ ದೇವಿಯನ್ನು ಹುಡುಕುವ ಕಾರ್ಯದಲ್ಲಿ ತೊಡಗಿ ಮಹಾತ್ಮ

ನಾದ ಸುಗ್ರೀವನ ಕಾರ್ಯವನ್ನು ಕೊನೆಮುಟ್ಟಿಸೋಣ." ಈ ಮಾತನ್ನು ಕೇಳಿ ಉತ್ಸಾಹಗೊಂಡ ವಾನರರು ಮತ್ತೊಮ್ಮೆ ಆ ಪ್ರದೇಶಗಳಲ್ಲಿ ಹೊಕ್ಕು ಹರಿದು ಹುಡುಕಿದರು. ಆದರೇನು ಅವರ ಉತ್ಸಾಹಕ್ಕೆ ಶ್ರಮಕ್ಕೆ ತಕ್ಕ ಫಲ ದೊರಕಲಿಲ್ಲ.

ಅಂಗದಾದಿಗಳು ವಿಂಧ್ಯಪರ್ವತದ ಗುಹೆಗಳಲ್ಲಿ ಕಾಡುಮೇಡುಗಳಲ್ಲಿ ಸೀತೆಯನ್ನು ಹುಡುಕುತ್ತಿರಲು ಸುಗ್ರೀವನು ಕೊಟ್ಟ ಅವಧಿ ಕಳೆದುಹೋಯಿತು. ಆದರೂ ಅವರು ತಮ್ಮ ಕರ್ತವ್ಯವನ್ನು ಬಿಡದೆ, ಸೀತೆಯನ್ನು ಹುಡುಕುತ್ತ ಋಕ್ಷಬಿಲವೆಂಬ ಗುಹೆಯ ಬಳಿಗೆ ಬಂದರು. ಮಯನಿಂದ ರಕ್ಷಿತವಾದ ಆ ಗುಹೆಯನ್ನು ಹೊಗಲು ಯಾರಿಗೂ ಸಾಧ್ಯವಿರಲಿಲ್ಲ. ಆ ಗುಹೆಯ ಬಳಿಗೆ ಬರುವ ವೇಳೆಗೆ ಅವರೆಲ್ಲರೂ ಹಸಿವು ನೀರಡಿಕೆಗಳಿಂದ ಬಳಲಿಹೋಗಿದ್ದರು. ವಾನರರು ಆ ಬಿಲದ ಬಳಿ ನಿಂತು ನೋಡುತ್ತಿರುವಂತೆಯೆ ಅಲ್ಲಿಂದ ಕ್ರೌಂಚ, ಹಂಸ, ಚಕ್ರವಾಕ ಪಕ್ಷಿಗಳು ಹೊರಗೆ ಬಂದುವು. ಇದನ್ನು ಕಂಡು ವಾನರರಿಗೆ ಸೋಜಿಗವಾಯಿತು. ಆ ಬಿಲದಲ್ಲಿ ಸರೋವರವೊಂದು ಇರಬಹುದೆಂದು ಊಹಿಸಿ, ನೀರಡಿಕೆಯಿಂದ ಬಳಲಿದ ಆ ಕಪಿಗಳು ಹನುಮಂತನನ್ನು ಮುಂದಿಟ್ಟುಕೊಂಡು ಕತ್ತಲೆ ಕವಿದ ಆ ಗುಹೆಯನ್ನು ಹೊಕ್ಕರು. ಹಾಗೆ ಹೋಗುತ್ತಿರುವಾಗ ದೂರದಲ್ಲಿ ಒಂದು ಮನೋಹರವಾದ ಪ್ರದೇಶ ಅವರಿಗೆ ಕಾಣಿಸಿತು. ಕತ್ತಲಿಂದ ಇಡಿದು, ಪ್ರವೇಶಿಸಲು ದುಃಸಾಧ್ಯವಾದ ಆ ಬಿಲದಲ್ಲಿ ಒಬ್ಬರನೊಬ್ಬರು ಅಪ್ಪಿಕೊಂಡು ಒಂದು ಯೋಜನ ದೂರ ನಡೆದರು. ಆಯಾಸದಿಂದ ಬಳಲಿದ ಅವರಿಗೆ ಬದುಕುವ ಆಸೆಯೆ ಇರಲಿಲ್ಲ. ಹೀಗೆ ನಡೆದೂ ನಡೆದೂ ಅವರು ಆ ಬೆಳಕಿನ ಪ್ರದೇಶಕ್ಕೆ ಬಂದರು. ಅಲ್ಲಿ ಸಂಪಗೆ ತಾಳೆ ಸುರಹೊನ್ನೆ ತಾವರೆ ಮುಂತಾದ ಹೂವುಗಳು ಗಿಡಗಳಲ್ಲಿ ಅರಳಿ ನಗುತ್ತಿದ್ದುವು. ವೈಡೂರ್ಯದಿಂದ ರಚಿತವಾದ ಜಗುಲಿಗಳು ಅಲ್ಲಿದ್ದುವು. ಚಿನ್ನದ ಮೆಟ್ಟಲುಗಳುಳ್ಳ, ವೈಡೂರ್ಯಗಳಿಂದ ರಚಿತವಾದ ಮನೆಗಳು ಅವರಿಗೆ ಗೋಚರಿಸಿದುವು. ಬಾಯಾರಿದ್ದ ಅವರಿಗೆ ನಿರ್ಮಲವಾದ ನೀರಿನಿಂದ ಕೂಡಿದ ಸರೋವರವೊಂದು ಕಾಣಿಸಿತು. ಅದನ್ನು ಕಂಡು ವಾನರರಿಗೆ ಸ್ವರ್ಗವೇ ಕೈಸೇರಿದಂತಾಯಿತು. ಅಷ್ಟೇ ಅಲ್ಲದೆ ಆ ಸ್ಥಳದಲ್ಲಿ ಪೀಠಗಳಿಗಾಗಲಿ ವಾಹನಗಳಿಗಾಗಲಿ ರತ್ನಾಭರಣಗಳಿಗಾಗಲಿ ಪಾತ್ರೆಗಳಿಗಾಗಲಿ ಕೊರತೆಯೆ ಕಾಣಿಸಲಿಲ್ಲ. ಹಣ್ಣಿನಿಂದ ಜಗ್ಗುತ್ತಿದ್ದ ಮರಗಳನ್ನೂ ಜೇನುಗೂಡುಗಳನ್ನೂ ಕಂಡು ವಾನರರ ಬಾಯಲ್ಲಿ ನೀರು ಕರೆಯಿತು. ಇಂಥ ಮನೋಹರವಾದ ಪ್ರದೇಶದಲ್ಲಿ ವಾನರರು ಸೀತೆಯನ್ನು ಹುಡುಕುತ್ತಿರಲು, ಅವರ ಸಮೀಪದಲ್ಲಿ ಹೆಂಗಸೊಬ್ಬಳು ಕಾಣಿಸಿಕೊಂಡಳು. ತಪೋನಿರತಳೂ ಮಿತಾಹಾರಿಯೂ ತೇಜಸ್ವಿನಿಯೂ ಆದ ಆ ಮಹಾತ್ಮಳನ್ನು ಕಂಡು ವಾನರರು ಭಯದಿಂದಲೂ ಆಶ್ಚರ್ಯದಿಂದಲೂ ಅಲ್ಲಿಯೆ ನಿಂತರು. ಆಗ ಹನುಮಂತನು ಆಕೆಗೆ ನಮಸ್ಕರಿಸಿ "ತಾಯೆ, ಈ ಬಿಲ ಯಾರದು? ಈ ರತ್ನಾಭರಣಗಳು ಯಾರವು?" ಎಂದು ಪ್ರಶ್ನಿಸಿದನು.

ಹನುಮಂತನ ಪ್ರಶ್ನೆಗೆ ಉತ್ತರವಾಗಿ ಆಕೆ ಈ ರೀತಿ ನುಡಿದಳು: "ಮಯನೆಂಬ ದಾನವನು ಈ ಕಾಂಚನವನವನ್ನು ನಿರ್ಮಿಸಿದನು. ಈ ಅರಮನೆಯಲ್ಲಿ ಆತನು ಸಾವಿರ

ವರ್ಷಗಳು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಇದರ ಫಲವಾಗಿ ಅವನು ಬ್ರಹ್ಮ ನಿಂದ ಶಿಲ್ಪಶಾಸ್ತ್ರದಲ್ಲಿ ಪಾಂಡಿತ್ಯವನ್ನು ವರವಾಗಿ ಪಡೆದನು. ಅನಂತರ ಅವನು ಹೇಮಾ ಎಂಬ ಅಪ್ಸರೆಯೊಡನೆ ಕೆಲವು ಕಾಲ ಇಲ್ಲಿ ಸುಖದಿಂದಿದ್ದನು. ದಾನವನಾದ ಮಯನು ಅಪ್ಸರೆಯೊಡನಿದ್ದುದನ್ನು ಕಂಡು, ಕೋಪಗೊಂಡ ದೇವೇಂದ್ರನು ತನ್ನ ವಜ್ರಾಯುಧ ದಿಂದ ಅವನನ್ನು ಹೊಡೆದು ಕೊಂದುಬಿಟ್ಟನು. ಆ ಬಳಿಕ ಬ್ರಹ್ಮನು ಸುಂದರ ವಾದ ಪ್ರದೇಶವನ್ನೂ ಅರಮನೆಯನ್ನೂ ಹೇಮೆಗೇ ಕೊಟ್ಟುಬಿಟ್ಟನು. ನಾನು ಮೇರುಸಾವರ್ಣಿಯ ಮಗಳು. ನನ್ನ ಹೆಸರು ಸ್ವಯಂಪ್ರಭೆ. ನೃತ್ಯಗೀತಗಳಲ್ಲಿ ಹೆಸರಾದ ಹೇಮೆ ನನಗೆ ಪ್ರಿಯಸಖಿ. ಅವಳ ಈ ಅರಮನೆಯನ್ನು ನಾನು ಕಾಪಾಡು ತ್ತಿದ್ದೇನೆ. ಈ ಕಾಡಿನಲ್ಲಿ ನೀವೇಕೆ ಅಲೆಯುತ್ತಿರುವಿರಿ? ಯಾವ ಕಾರ್ಯಸಾಧನೆಗಾಗಿ ನೀವು ಈ ಬಿಲವನ್ನು ಹೊಕ್ಕಿರಿ? ಯಾರಿಗೂ ಹೊಗಲು ಸಾಧ್ಯವಿಲ್ಲದ ಈ ಗುಹೆ ನಿಮಗೆ ಹೇಗೆ ಕಾಣಿಸಿತು? ನೀವು ಬಳಲಿದ್ದೀರಿ. ಈ ಕಂದಮೂಲಗಳನ್ನು ತಿಂದು ತಣಿದು, ನಿಮ್ಮ ವೃತ್ತಾಂತವನ್ನು ತಿಳಿಸಿ."

ಸ್ವಯಂಪ್ರಭೆಯ ಮಾತಿಗೆ ಹನುಮಂತನು: "ಅಮ್ಮ, ದಶರಥನ ಮಗನಾದ ಶ್ರೀರಾಮನ ಹೆಂಡತಿಯಾದ ಸೀತೆಯನ್ನು ರಾವಣನು ಕದ್ದೊಯ್ದನು. ಆಕೆಯನ್ನು ಹುಡುಕಲು ವಾನರಾಧಿಪನಾದ ಸುಗ್ರೀವನು ನಮ್ಮನ್ನು ದಕ್ಷಿಣ ದಿಕ್ಕಿಗೆ ಕಳುಹಿಸಿದನು. ಹಾಗೆ ಹುಡುಕುತ್ತ ಬರುತ್ತಿರುವಾಗ ಗಿಡಬಳ್ಳಿಗಳಿಂದ ಮುಚ್ಚಿಹೋಗಿದ್ದ ಈ ಬಿಲವನ್ನು ಕಂಡೆವು. ಈ ಬಿಲದಿಂದ ಹಂಸಕಾರಂಡಗಳು ಹೊರಟುಬಂದುದನ್ನು ಕಂಡು ನೀರಡಿಸಿದ ನಾವು ಇಲ್ಲಿ ಸರೋವರವಿರಬಹುದೆಂದೆಣಿಸಿ ಇದನ್ನು ಹೊಕ್ಕೆವು" ಎಂದು ತಿಳಿಸಿದನು. ಹನುಮಂತನ ಮಾತಿನಿಂದ ಸ್ವಯಂಪ್ರಭೆ ಹರ್ಷಗೊಂಡಳು. ಆಕೆ ಪ್ರೀತಿ ಯಿಂದ ಕೊಟ್ಟ ಕಂದಮೂಲಗಳನ್ನು ತಿಂದು, ನೀರನ್ನು ಕುಡಿದು ವಾನರರು ತಣಿದರು.

ಅನಂತರ ಹನುಮಂತನು ಸ್ವಯಂಪ್ರಭೆಯನ್ನು ಕುರಿತು: "ಅಮ್ಮ ನಿನ್ನ ಉಪಚಾರದಿಂದ ನಮಗೆ ತೃಪ್ತಿಯುಂಟಾಯಿತು. ಇತ್ತ ಸುಗ್ರೀವನು ಕೊಟ್ಟ ಅವಧಿ ಯಾದರೊ ಕಳೆದುಹೋಯಿತು. ನಮ್ಮಲ್ಲಿ ನೀನು ಪ್ರಸನ್ನಳಾಗಿ ಈ ಭಯಂಕರವಾದ ಬಿಲದಿಂದ ಪಾಟಿಸಬೇಕು. ಆ ಶಕ್ತಿ ನಿನಗೊಬ್ಬಳಿಗೇ ಉಂಟು. ಸುಗ್ರೀವನ ಭಯದಿಂದ ನಮ್ಮನ್ನು ಕಾಪಾಡಲು ನೀನೇ ಶಕ್ತಳು" ಎಂದನು. ಹನುಮಂತನ ಮಾತನ್ನು ಕೇಳಿ ಸ್ವಯಂಪ್ರಭೆ ಎಲ್ಲರೂ ತಮ್ಮ ತಮ್ಮ ಕಣ್ಣು ಮುಚ್ಚಿಕೊಳ್ಳಬೇಕೆಂದು ಹೇಳಿದಳು. ಆಮೇಲೆ ಮಹಾತ್ಮಳಾದ ಸ್ವಯಂಪ್ರಭೆ ನಿಮಿಷಮಾತ್ರದಲ್ಲಿ ಅವರನ್ನು ತನ್ನ ಪ್ರಭಾವದಿಂದ ಬಿಲದ ಹೊರಗೆ ತಂದುಬಿಟ್ಟಳು. ಸೀತೆಯನ್ನು ಹುಡುಕುವ ಕಾರ್ಯ ದಲ್ಲಿ ಅವರಿಗೆ ಮಂಗಳವಾಗಲಿ ಎಂದು ಹರಸಿ ತಿರುಗಿ ಆ ತಪಸ್ವಿನಿ ಬಿಲವನ್ನು ಹೊಕ್ಕಳು.

---

## ೧೧

# ಅಂಗದನ ಪ್ರಾಯೋಪವೇಶ

ಸ್ವಯಂಪ್ರಭೆಯಿಂದ ಬೀಳ್ಕೊಂಡ ವಾನರರು ಮುಂದೆ ನಡೆದು ಹೇರಲೆಗಳಿಂದ ಕೂಡಿ ಘೋರ್ಗರೆಯುತ್ತಿದ್ದ, ದಡವೇ ಕಾಣಿಸದಿದ್ದ ಮಹಾಸಾಗರವನ್ನು ಕಂಡರು. ಗಿಡಗಳಲ್ಲಿ ಅರಳಿದ ಹೂವುಗಳನ್ನು ನೋಡಿ, ವಸಂತಋತು ಕಾಲಿಟ್ಟುದನ್ನು ಅವರು ಅರಿತರು. ಗಿಡಮರಗಳಲ್ಲಿ ಚಿಗುರು ಹೂವುಗಳನ್ನು ಕಂಡ ಅವರು ಸುಗ್ರೀವನ ಶಾಸನ ವನ್ನು ನೆನೆದು ಭಯದಿಂದ ಭೂಮಿಯಲ್ಲಿ ಬಿದ್ದುಬಿಟ್ಟರು. ಮತ್ತೆ ಕೆಲವರು ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಅವರನ್ನು ಕಂಡು ಯುವರಾಜನಾದ ಅಂಗದನು "ವಾನರವೀರರೇ, ಬಿಲದಲ್ಲಿದ್ದ ನಮಗೆ ತಿಂಗಳಾದುದೇ ತಿಳಿಯಲಿಲ್ಲ. ಬುದ್ಧಿ ವಂತರೂ ನೀತಿನಿಪುಣರೂ ಆದ ನೀವು ನನ್ನನ್ನು ಮುಂದಿಟ್ಟುಕೊಂಡು ಈ ಕಾರ್ಯಕ್ಕಾಗಿ ಬಂದಿರಿ. ಈಗ ಅವಧಿ ಮೀರಿ ಹೋಗಿರುವಾಗ ಸುಗ್ರೀವನ ಬಳಿಗೆ ಹೋಗಲು ಹೇಗೆ ತಾನೆ ಸಾಧ್ಯ? ಅಪರಾಧಿಗಳಾದ ನಮ್ಮನ್ನು ಸುಗ್ರೀವನು ಖಂಡಿತ ವಾಗಿಯೂ ಕ್ಷಮಿಸನು. ಆದ್ದರಿಂದ ನಾವೆಲ್ಲರೂ ಪ್ರಾಯೋಪವೇಶ ಮಾಡುವುದೇ ಸರಿಯೆಂದು ತೋರುತ್ತದೆ. ಸೀತೆಯ ಸಮಾಚಾರ ನಮಗೆ ತಿಳಿದುಬಂದಿದ್ದರೆ ವಿಷಯವೇ ಬೇರೆಯಾಗುತ್ತಿತ್ತು. ಕಾಲಮೀರಿ ಸುಗ್ರೀವನ ಸಮೀಪಕ್ಕೈದಿ ಸಾಯುವುದಕ್ಕಿಂತ ಪ್ರಾಯೋಪವೇಶವೇ ಮೇಲಲ್ಲವೆ? ಸ್ವಭಾವದಿಂದ ಸುಗ್ರೀವನು ಮುಂಗೋಪಿ. ಸೀತೆಯ ವಿಷಯವನ್ನು ತಿಳಿದುಬರದ ನಮ್ಮನ್ನು ಕಂಡು ಶ್ರೀರಾಮನು ನಿರಾಶ ನಾಗುವನು. ಹೀಗಿರುವಲ್ಲಿ ಅಪರಾಧಿಗಳಾದ ನಮ್ಮನ್ನು ಸುಗ್ರೀವನು ಕೊಲ್ಲಿಸು ವುದರಲ್ಲಿ ಸಂದೇಹವಿಲ್ಲ. ವಾಲಿಯ ಮಗನಾದ ನನ್ನನ್ನು ಕಂಡರೆ ಸುಗ್ರೀವನಿಗೆ ಬದ್ಧ ವೈರ. ಆದಕಾರಣ ಅಪರಾಧಿಗಳು ಸ್ವಾಮಿಯ ಬಳಿಗೆ ಹೋಗುವುದು ಉಚಿತವಲ್ಲ. ಸುಗ್ರೀವನಿಂದ ಸಾಯುವುದಕ್ಕಿಂತ ಪುಣ್ಯಕರವಾದ ಸಮುದ್ರ ತೀರದಲ್ಲಿಯೇ ನಾನಂತೂ ಸಾಯುತ್ತೇನೆ" ಎಂದು ತನ್ನ ನಿಶ್ಚಯವನ್ನು ತಿಳಿಸಿದನು. ಅಂಗದನ ಮಾತಿಗೆ ತಾರನೆಂಬ ವಾನರನು, ರಾಮ ಸುಗ್ರೀವರ ಭಯವಿಲ್ಲದೆ ಈ ಗುಹೆಯಲ್ಲಿಯೆ ವಾಸಮಾಡಬಹುದೆಂದು ಸೂಚಿಸಿದನು. ಅಂತೂ ಸುಗ್ರೀವನ ಕಠೋರ ಶಾಸನವನ್ನು ನೆನೆದು ವಾನರರೆಲ್ಲ ನಡುಗಿಹೋದರು.

ಬುದ್ಧಿವಂತನಾದ ಅಂಗದನ ಮಾತಿನ ಒಳಗುಟ್ಟನ್ನು ಹನುಮಂತನು ಗ್ರಹಿಸಿ ದನು. ಯುವರಾಜನು ಸುಗ್ರೀವನಲ್ಲಿ ಭೇದೋಪಾಯವನ್ನು ಅನುಸರಿಸುತ್ತಿರುವನೆಂದು ಆ ಕಪಿ ವೀರನು ತಿಳಿದನು. ಸುಗ್ರೀವನಿಗೆ ಹಿತವನ್ನುಂಟುಮಾಡುವ ಸಲುವಾಗಿ, ಉಳಿದ ವಾನರರು ಅಂಗದನ ಮಾತಿಗೆ ಕಿವಿಗೊಡದಂತೆ, ಸಮಾಧಾನಗಳಿಂದ ಹನುಮಂತನು

ಅವರಿಗೆ ತಿಳಿಯ ಹೇಳಿದನು. ಆ ಬಳಿಕ ಅಂಗದನನ್ನು ಕುರಿತು ಕೋಪದಿಂದ "ಅಂಗದ, ವಾಲಿಯಂತೆ ನೀನೂ ಶೂರ. ಕಪಿರಾಜ್ಯವನ್ನು ವಹಿಸಬಲ್ಲ ಶಕ್ತಿ ನಿನಗುಂಟು. ಕಪಿಯ ಚಿತ್ತ ಚಂಚಲ. ಆದ್ದರಿಂದ ಹೆಂಡತಿ ಮಕ್ಕಳನ್ನು ಬಿಟ್ಟು ಬಂದಿರುವ ಯಾರೂ ನಿನ್ನ ಮಾತನ್ನು ನಡೆಸರು. ಚತುರೋಪಾಯಗಳಿಂದಲೂ ಈ ನೀಲ, ಈ ಸುಹೋತ್ರ, ಈ ಜಾಂಬವಂತ ಇವರನ್ನು ಸುಗ್ರೀವನಿಂದ ತೊರಸಿ ನಿನ್ನ ಕಡೆ ಸೆಳೆದುಕೊಳ್ಳಲಾರೆ. ಮುಚ್ಚುಮರೆಯಿಲ್ಲದೆ ನಿನ್ನೆದುರಿಗೆ ಸತ್ಯವನ್ನೇ ನುಡಿಯುತ್ತಿದ್ದೇನೆ. ಬಲಿಷ್ಠರೊಡನೆ ಬಲಹೀನರು ವೈರವನ್ನು ಕಟ್ಟಿಕೊಳ್ಳಕೂಡದು. ನೀನು ಈ ಗುಹೆಯನ್ನು ಹೊಕ್ಕರೇನಾಯಿತು? ಅದನ್ನು ಭೇದಿಸುವ ಶಕ್ತಿ ರಾಮಲಕ್ಷ್ಮಣರ ಬಾಣಗಳಿಗುಂಟು. ಆಗ ವಾನರರೆಲ್ಲರೂ ಹೆಂಡತಿ ಮಕ್ಕಳನ್ನು ನೆನೆದು ನಿನ್ನನ್ನು ಕೈಬಿಡುವರು. ಬಂಧುಗಳಿಂದ ಸ್ನೇಹಿತರಿಂದ ದೂರನಾದ ನೀನು ಹುಲ್ಲಿಗಿಂತಲೂ ಕಡೆಯಾಗುವೆ. ಆಗಲೂ ನೀನು ಲಕ್ಷ್ಮಣನ ಬಾಣಗಳಿಂದ ತೊಂದರೆಗೀಡಾಗದಿರುವೆಯಾ? ಆದ್ದರಿಂದ ನಮ್ಮೊಡನೆ ನೀನು ನಮ್ರನಾಗಿ ಹಿಂದಿರುಗಿದರೆ ಸುಗ್ರೀವನು ನಿನ್ನನ್ನು ಮನ್ನಿಸುವನು. ನಿನ್ನ ತಾಯಿಯನ್ನು ಪ್ರೀತಿಸುತ್ತಿರುವ ಸುಗ್ರೀವನು ನಿನ್ನನ್ನು ಕೊಲ್ಲುವನೆ? ಸಂತಾನವಿಲ್ಲದ ಸುಗ್ರೀವನಿಗೆ ನೀನೇ ಮಗನಲ್ಲವೆ? ಆದ್ದರಿಂದ ನಾವೆಲ್ಲರೂ ಸುಗ್ರೀವನ ಬಳಿಗೆ ಹೋಗುವುದೇ ಉಚಿತ" ಎಂದು ಹಿತವಚನಗಳನ್ನಾಡಿದನು.

ಸ್ವಾಮಿಭಕ್ತನಾದ ಹನುಮಂತನು ಆಡಿದ ಮಾತುಗಳನ್ನು ಕೇಳಿ ಅಂಗದನು ಇಂತೆಂದನು : "ಸುಗ್ರೀವನಲ್ಲಿ ಕೃತಜ್ಞತೆ, ಶುಚಿತ್ವ, ಸರಳ ಸ್ವಭಾವ, ಧೈರ್ಯ ಇವಾವ ಗುಣಗಳೂ ಇರುವುದಿಲ್ಲ. ಅಣ್ಣ ಬದುಕಿರುವಾಗಲೆ ತಾಯಿಗೆ ಸಮಾನಳಾದ ಅತ್ತಿಗೆಯನ್ನು ಪರಿಗ್ರಹಿಸಿದವನಲ್ಲವೆ ಸುಗ್ರೀವ? ವಾಲಿ ದುಂದುಭಿಯೊಡನೆ ಕದನವಾಡುತ್ತಿರುವಾಗಲೆ ಬಿಲದ ಬಾಗಿಲಿಗೆ ಬಂಡೆಯನ್ನು ಮುಚ್ಚಿಬಂದವನಲ್ಲವೆ ಅವನು? ತನಗೆ ಉಪಕಾರಮಾಡಿದ ಶ್ರೀರಾಮನ ಕಾರ್ಯವನ್ನು ಮರೆತವನು ಆ ಸುಗ್ರೀವ. ಧರ್ಮಕ್ಕೆ ಕಟ್ಟುಬಿದ್ದು ಅವನೇನು ಅನ್ವೇಷಣ ಕಾರ್ಯಕ್ಕೆ ತೊಡಗಿರುವನೇ? ಅಲ್ಲ, ಲಕ್ಷ್ಮಣನ ಬಾಣಕ್ಕೆ ಹೆದರಿ. ಕೃತಘ್ನನೂ ಚಪಲಚಿತ್ತನೂ ಆದ ಸುಗ್ರೀವನಲ್ಲಿ, ಬದುಕಿ ಬಾಳಬೇಕೆನ್ನುವ ಯಾವನು ತಾನೆ ವಿಶ್ವಾಸವನ್ನಿಟ್ಟಾನು? ಮುಂದೆ ಹುಟ್ಟುವ ತನ್ನ ಮಗನಿಗಲ್ಲದೆ ನನಗೆ ಹೇಗೆತಾನೆ ಅವನು ರಾಜ್ಯವನ್ನು ಕೊಡುತ್ತಾನೆ? ಕಿಷ್ಕಿಂಧೆಗೆ ಹೋಗಿ ಸಾಯುವುದಕ್ಕಿಂತ ಪ್ರಾಯೋಪವೇಶವೇ ಮೇಲು, ನೀವೆಲ್ಲರೂ ನನಗೆ ಸಾಯಲು ಅನುಜೆ ಕೊಟ್ಟು, ನಿಮ್ಮ ಮನೆಗಳಿಗೆ ತೆರಳಿ. ರಾಜಧಾನಿಗೆ ಹೋಗದೆ ನಾನು ಇಲ್ಲಿಯೆ ಸಾಯುತ್ತೇನೆ. ರಾಮಲಕ್ಷ್ಮಣರಿಗೂ ಸುಗ್ರೀವನಿಗೂ ನನ್ನ ನಮಸ್ಕಾರಗಳನ್ನು ತಿಳಿಸಿ. ಸ್ವಭಾವದಿಂದ ಕೋಮಲಳಾದ ನನ್ನ ತಾಯಿ ತನ್ನ ಮುದ್ದುಮಗನ ಸಾವನ್ನು ಕೇಳಿ ಪ್ರಾಣಬಿಡುವುದರಲ್ಲಿ ಸಂದೇಹವಿಲ್ಲ."

ಹೀಗೆಂದು ಹೇಳಿ ಅಂಗದನು ವೃದ್ಧನಾದ ವಾನರರಿಗೆ ನಮಸ್ಕರಿಸಿ, ಕಣ್ಣೀರು ಬಿಡುತ್ತ ದರ್ಭೆಯನ್ನು ಹಾಸಿ ಅದರ ಮೇಲೆ ಮಲಗಿದನು. ಅಂಗದನನ್ನು ನೋಡಿ

ಉಳಿದ ವಾನರರೆಲ್ಲ ಕಂಬನಿದುಂಬಿ ಅವನನ್ನು ಸುತ್ತುಗಟ್ಟಿ ತಾವೂ ಪ್ರಾಯೋಪವೇಶ ಮಾಡಲು ನಿಶ್ಚೈಸಿದರು. ಹೀಗೆ ನಿಶ್ಚೈಸಿ, ವಾನರರು ದರ್ಭೆಗಳನ್ನು ಹಾಸಿ, ನೀರನ್ನು ಮುಟ್ಟಿ, ಉತ್ತರಾಭಿಮುಖವಾಗಿ ಸಮುದ್ರ ತೀರದಲ್ಲಿ ಮಲಗಿದರು. ಹೀಗೆ ಪ್ರಾಯೋಪವೇಶದಲ್ಲಿ ದೃಢ ಮನಸ್ಸು ಮಾಡಿದ ವಾನರರು ಶ್ರೀರಾಮನ ವನವಾಸ, ಸೀತಾಪಹರಣ, ಸುಗ್ರೀವಸಖ್ಯ, ವಾಲಿವಧೆ ಇವೇ ಮೊದಲಾದ ವಿಷಯಗಳನ್ನು ಕುರಿತು ಮಾತನಾಡುತ್ತಿರಲು ಆ ಗುಜುಗುಜು ಧ್ವನಿ ಪ್ರರ್ವತಪ್ರದೇಶವನ್ನೆಲ್ಲ ತುಂಬಿಹೋಯಿತು.

---

## ೧೨

# ಸಂಪಾತಿ ದರ್ಶನ

ಆ ಪ್ರದೇಶದಲ್ಲಿ ಜಟಾಯುವಿನ ಅಣ್ಣನಾದ ಸಂಪಾತಿಯೆಂಬ ಪಕ್ಷಿರಾಜನು ವಾಸ ಮಾಡಿಕೊಂಡಿದ್ದನು. ವಾನರರಿದ್ದ ಪರ್ವತದ ಒಂದು ಗುಹೆಯಿಂದ ಆ ಪಕ್ಷಿವೀರನು ಹೊರಬಂದು, ಇವರ ಮಾತೆಲ್ಲವನ್ನೂ ಕೇಳಿದನು. ಅಲ್ಲಿ ಮಲಗಿದ್ದ ವಾನರರನ್ನು ನೋಡಿ ತನಗೆ ತಿನ್ನಲು ಸಾಮಗ್ರಿ ಸಿಕ್ಕಿತೆಂದು ಸಂಪಾತಿಗೆ ಸಂತೋಷವಾಯಿತು. "ದೈವವೇ ಪ್ರಾಣಿಗಳ ಕ್ಷೇಮವನ್ನು ವಿಚಾರಿಸುವುದೆಂಬ ಮಾತು ಈಗ ನಿಜವಾಯಿತು. ಹಸಿದಿರುವ ನಾನು ಈ ವಾನರರನ್ನು ತಿಂದು ತಣಿಯುತ್ತೇನೆ" ಎಂದುಕೊಂಡು, ಸಂಪಾತಿ ತನ್ನ ಅಭಿಪ್ರಾಯವನ್ನು ಅವರಿಗೆ ತಿಳಿಸಿದನು. ಸಂಪಾತಿಯು ನುಡಿಗೇಳಿ ಹದ್ದಿನ ವೇಷದಲ್ಲಿ ಯಮನೇ ತಮ್ಮನ್ನು ಕೊಲ್ಲಲು ಬಂದಿರುವನೆಂದು ವಾನರರಿಗೆ ಭಯವಾಯಿತು. ಆಗ ಅಂಗದನು "ನಾವು ಶ್ರೀರಾಮನ ಕಾರ್ಯವನ್ನು ಮಾಡಲಿಲ್ಲ. ಸುಗ್ರೀವನ ಮಾತನ್ನು ನಡಸಲಿಲ್ಲ. ಆದರೆ ನಮಗೆ ಈ ತೆರನಾದ ವಿಪತ್ತು ಬಂದೊದಗಿತು. ಹಿಂದೆ ಜಟಾಯು ಸೀತೆಗೆ ಪ್ರಿಯವನ್ನುಂಟುಮಾಡಿದನೆಂದು ಕೇಳಿದ್ದೆವು. ಶ್ರೀರಾಮನಿಗಾಗಿ ಪಕ್ಷಿಗಳು ಕೂಡ ಪ್ರಾಣವನ್ನು ತೊರೆದುವು. ನಮಗಾದರೊ ಸುತ್ತಿ ಸುತ್ತಿ ಆಯಾಸವುಂಟಾಯಿತೇ ಹೊರತು ಸೀತೆ ಮಾತ್ರ ದೊರಕಲಿಲ್ಲ. ರಾವಣನಿಂದ ಸೀತೆಗಾಗಿ ಮಡಿದ ಜಟಾಯುವೇ ಧನ್ಯ. ಆ ಕಾರ್ಯದಿಂದ ಆತನಿಗೆ ಮೋಕ್ಷ ದೊರಕಿತು. ನಮಗಾದರೊ ಸೀತಾಪಹರಣದಿಂದ ಪ್ರಾಣಕ್ಕೆ ಸಂಚಕಾರ ಬಂತು. ಈ ಅನರ್ಥಗಳಿಗೆಲ್ಲ ದಶರಥನು ಕೈಕೆಗಿತ್ತ ವರವೇ ಮೂಲ ಎಂದು ಸಂತಾಪಕರವಾದ ಮಾತುಗಳನ್ನಾಡಿದನು. ಈ ಮಾತುಗಳನ್ನು ಕೇಳಿ ಸಂಪಾತಿಯ ಮನಸ್ಸು ಕರಗಿತು. ಕುಗ್ಗಿದ ಧ್ವನಿಯಿಂದಲೆ ಅವನು ವಾನರರನ್ನು ಈ ರೀತಿ ನುಡಿಸಿದನು :

"ಅಯ್ಯೋ, ವಾನರರಿರ, ನನ್ನೆದೆ ನಡುಗುವಂತೆ ನನ್ನ ಪ್ರೀತಿಯ ತಮ್ಮನಾದ ಜಟಾಯುವಿನ ವಧೆಯನ್ನು ತಿಳಿಸುತ್ತಿರುವ ನೀವಾರು ? ಜನಸ್ಥಾನದಲ್ಲಿ ರಾವಣನಿಗೂ ಮತ್ತು ಜಟಾಯುವಿಗೂ ಯುದ್ಧವಾದುದು ನಿಜವೇ ? ಬಹಳ ಕಾಲದ ಮೇಲೆ ನನ್ನಣುಗುದಮ್ಮನಾದ ಜಟಾಯುವಿನ ಹೆಸರನ್ನು ಕೇಳಿ ನನಗೆ ಸಂತೋಷವಾಯಿತು. ಸೂರ್ಯಕಿರಣಗಳಿಂದ ರೆಕ್ಕೆಗಳು ಸುಟ್ಟುಹೋಗಿರುವ ನನ್ನನ್ನು ಈ ಕೋಡುಗಲ್ಲಿನಿಂದ ಕೆಳಕ್ಕಿಳಿಸಿ. ಜಟಾಯುವಿನ ಸಾವಿನ ಸಮಾಚಾರವನ್ನು ಅರಿಯಲು ನಾನು ತುಂಬ ಕಾತರನಾಗಿದ್ದೇನೆ.

ದುಃಖದಿಂದ ಕತ್ತುಬಿಗಿದು ಸಂಪಾತಿ ತಡವರಿಸಿ ಮಾತನಾಡುತ್ತಿದ್ದರೂ ಅವನನ್ನು ವಾನರರು ನಂಬದೆಹೋದರು. ಸಂಪಾತಿಯನ್ನು ಕೆಳಕ್ಕಿಳಿಸಿದರೆ ಆತನು ತಮ್ಮನ್ನು ತಿನ್ನಬಹುದೆಂದು ಅವರು ಬಗೆದರು. ಆದರೆ ಸಾಯಲು ಸಿದ್ಧರಾದ ತಮ್ಮನ್ನು ಸಂಪಾತಿ

ತಿನ್ನುವುದಾದರೆ ಅದೇ ಒಂದು ಕ್ಷೇಮವಲ್ಲವೆ ? ಹೀಗೆಂದು ಬಗೆದು ಅವರು ಆ ಪಕ್ಷಿರಾಜನನ್ನು ಬೆಟ್ಟದ ತುದಿಯಿಂದ ಕೆಳಕ್ಕೆ ಇಳಿಸಿದರು. ಅನಂತರ ಅಂಗದನು ಸಂಪಾತಿಗೆ ವಾಲಿ ಸುಗ್ರೀವರ ವೃತ್ತಾಂತ, ಸೀತಾಪಹರಣ, ಜಟಾಯು ವಧೆ, ಸುಗ್ರೀವ ಸಖ್ಯ, ವಾಲಿ ವಧೆ, ತಮ್ಮ ಸೀತಾನ್ವೇಷಣ ಕಾರ್ಯ—ಈ ವಿಷಯಗಳನ್ನು ಕ್ರಮವಾಗಿ ತಿಳಿಸಿದನು. "ಸ್ವಯಂಪ್ರಭೆಯ ಬಿಲವನ್ನು ಹೊಕ್ಕ ನಮಗೆ ಅಲ್ಲಿಯೇ ಸುಗ್ರೀವನು ಕೊಟ್ಟ ಅವಧಿ ಮುಗಿದುಹೋಯಿತು. ಸುಗ್ರೀವನ ಮಾತನ್ನು ನಡಸದ ನಮಗೆ ಅವನ ದೆಸೆಯಿಂದ ಭಯವುಂಟಾಗಿದೆ. ಈಗ ನಾವು ಸುಗ್ರೀವನ ಬಳಿಗೆ ಹೋದರೂ ನಮ್ಮ ಪ್ರಾಣ ಉಳಿಯುವುದಿಲ್ಲ."



ಆ ಪ್ರದೇಶದಲ್ಲಿ ಜಟಾಯುವಿನ ಅಣ್ಣನಾದ ಸಂಪಾತಿಯೆಂಬ ಪಕ್ಷಿರಾಜನು ವಾಸಮಾಡಿಕೊಂಡಿದ್ದನು.

ಸಾಯಲು ಸಿದ್ಧರಾದ ವಾನರರ ದೀನಸ್ವರವನ್ನು ಕೇಳಿ ಸಂಪಾತಿ ಕಂಬನಿದುಂಬಿದನು. "ವಾನರವೀರರೇ, ರಾವಣನಿಂದ ಯುದ್ಧದಲ್ಲಿ ಮಡಿದ ಜಟಾಯು ನನ್ನ ಪ್ರೀತಿಯ ತಮ್ಮ. ಜಟಾಯುವಿನ ಸಾವಿನ ಸುದ್ದಿಯನ್ನು ಕೇಳಿಯೂ, ರೆಕ್ಕೆಗಳಿಲ್ಲದ ನನಗೆ ಹಗೆ ತೀರಿಸಿಕೊಳ್ಳಲು ಶಕ್ತಿಯಿಲ್ಲದಾಗಿದೆ. ಹಿಂದೆ ಎಂದರೆ ವೃತ್ರಾಸುರನ ಸಂಹಾರ ಕಾಲದಲ್ಲಿ ಹಾರುವುದರಲ್ಲಿ ಒಬ್ಬರನ್ನೊಬ್ಬರು ಗೆಲ್ಲುವ ಹುರುಡಿನಿಂದ ನಾವಿಬ್ಬರೂ ಸೂರ್ಯಮಂಡಲದ ಕಡೆಗೆ ಹಾರಿದೆವು. ನಾವಿಬ್ಬರೂ ವೇಗವಾಗಿ ಹೋಗುತ್ತಿರುವಾಗ ಮಧ್ಯಾಹ್ನವಾಯಿತು. ಆ ಸಮಯದಲ್ಲಿ ಜಟಾಯುವಿನ ಬಲ ಕುಗ್ಗುತ್ತಿದ್ದುದನ್ನು ಕಂಡು, ಅವನಲ್ಲಿದ್ದ ಪ್ರೇಮದಿಂದ ನನ್ನ ರೆಕ್ಕೆಗಳಿಂದ ಅವನನ್ನು ಮುಚ್ಚಿದೆನು. ಆಗ ಸೂರ್ಯನ ತಾಪದಿಂದ ನನ್ನ ರೆಕ್ಕೆಗಳು ಸುಟ್ಟುಹೋಗಿ ಈ ಪರ್ವತದ ಕೋಡುಗಲ್ಲಿನ ಮೇಲೆ ಬಿದ್ದೆ. ಇಲ್ಲಿ ಬಿದ್ದಕೂಡಲೆ ನಾನು ಪ್ರಾಣಗಳನ್ನು ತೊರೆಯಬೇಕೆಂದಿದ್ದೆ. ಆದರೆ ನಿಶಾಕರನೆಂಬ ಮುನಿ 'ಮುಂದೆ ಸೀತೆಯನ್ನು ಹುಡುಕುವುದಕ್ಕಾಗಿ ವಾನರರು ಇಲ್ಲಿಗೆ ಬರುವರು. ಅವರಿಗೆ ನೀನು ಸೀತೆಯ ವೃತ್ತಾಂತವನ್ನು ಅರುಹು. ಆಗ ನಿನಗೆ ರೆಕ್ಕೆಗಳು ಮತ್ತೆ ಬರುವುವು' ಎಂದು ಹೇಳಿದ್ದನು. ಸೀತೆಯ ಸಮಾಚಾರವನ್ನು ನಿಮಗೆ ತಿಳಿಸುವ ಆ ಕಾಲ ಈಗ ಬಂದಿದೆ" ಎಂದನು.

ಸಂಪಾತಿಯ ಮಾತನ್ನು ಕೇಳಿ ಆತನಿಗೆ ಸೀತೆಯ ಸಮಾಚಾರ ತಿಳಿದಿರಬಹುದೆಂದು ವಾನರರು ಆಸೆಗೊಂಡರು. ರಾವಣನಿರುವ ಸ್ಥಳ ತಿಳಿದಿದ್ದರೆ ತಮ್ಮ ಮೇಲೆ ಕೃಪೆಯಿಟ್ಟು ಅದನ್ನು ತಿಳಿಸಬೇಕೆಂದು ಅಂಗದನು ಸಂಪಾತಿಯನ್ನು ಬೇಡಿಕೊಂಡನು. ವಾನರರಿಗೆ ಸಂತೋಷವೂ ರೋಮಾಂಚಕಾರಕವೂ ಆದ ಆ ಸಮಾಚಾರವನ್ನು ಸಂಪಾತಿ ಅವರಿಗೆ ತಿಳಿಸಿದನು : "ವೀರರೇ, ರೆಕ್ಕೆಗಳು ಸುಟ್ಟುಹೋಗಿರುವ ನಾನು ಶ್ರೀರಾಮನಿಗೆ ಯಾವ ಸಹಾಯವನ್ನೂ ಮಾಡುವಂತಿಲ್ಲ. ಆದರೆ ನಾನು ನಿಮಗೆ ವಾಕ್ ಸಹಾಯ ಮಾಡುತ್ತೇನೆ. ಮುಪ್ಪಿನಿಂದ ಶಕ್ತಿ ಕುಗ್ಗಿದ್ದರೂ ನಾನು ಶ್ರೀರಾಮನ ಈ ಕೆಲಸವನ್ನು ಮೊದಲು ಮಾಡಬೇಕು. ಈಗ ಸ್ವಲ್ಪಕಾಲದ ಹಿಂದೆ ರಾವಣನು ಹಿಡಿದೊಯ್ಯುತ್ತಿರುವಾಗ 'ರಾಮಾ, ರಾಮಾ' ಎಂದು ಅಳುತ್ತಿದ್ದ ಯುವತಿಯೊಬ್ಬಳನ್ನು ಕಂಡೆ. ಬೆಟ್ಟದ ತುದಿಯಲ್ಲಿ ಹೊಳೆಯುವ ಸೂರ್ಯಕಾಂತಿಯಂತೆ, ಮೇಘದಲ್ಲಿರುವ ಮಿಂಚಿನಂತೆ ಆಕೆ ಯುಟ್ಟ ಸೀರೆ ಹೊಳೆಯುತ್ತಿತ್ತು. ನಿಮ್ಮ ಮಾತಿನಿಂದ ಆಕೆ ಸೀತೆಯೇ ಇರಬೇಕೆಂದು ಊಹಿಸುತ್ತೇನೆ. ವಿಶ್ರವಸ್ಸಿನ ಮಗನೂ ಕುಬೇರನ ತಮ್ಮನೂ ಆದ ರಾವಣನು ಲಂಕೆಯಲ್ಲಿ ವಾಸಮಾಡಿಕೊಂಡಿರುತ್ತಾನೆ. ಮನೋಹರವಾದ ಲಂಕೆಯ ಕೋಟೆ ದುರ್ಗಮವಾದುದು. ರಾವಣನ ಅಂತಃಪುರದಲ್ಲಿ ನಾರುಡೆಗಳನ್ನುಟ್ಟು ಕಂದಿದ ಮುಖವುಳ್ಳವಳಾಗಿ ಸೀತೆ ಇದ್ದಾಳೆ. ಸಾಗರದಿಂದ ಸುತ್ತುಗಟ್ಟಿದ ಆ ಲಂಕೆಯಲ್ಲಿ ನೀವು ಸೀತೆಯನ್ನು ಕಾಣುವಿರಿ. ಆದ್ದರಿಂದ ನೀವು ಈ ಸಮುದ್ರವನ್ನು ದಾಟಲು ಉಪಾಯವನ್ನು ಚಿಂತಿಸಿ. ಸಾವೈದಿದ ನನ್ನ ಚುಗುದಮ್ಮನಿಗೆ ತಿಲೋದಕವನ್ನು ಕೊಡಲು ನನಗೆ ಆಸೆಯಾಗಿದೆ. ದಯೆಯಿಟ್ಟು ನನ್ನನ್ನು ಸಮುದ್ರತೀರಕ್ಕೆ ಕೊಂಡೊಯ್ಯಿರಿ."

ಸಂಪಾತಿಯ ಮಾತನ್ನು ಕೇಳಿ ಹರ್ಷಗೊಂಡ ವಾನರರು, ಸೂರ್ಯಕಿರಣಗಳಿಂದ ಬೆಂದ ರೆಕ್ಕೆಯುಳ್ಳ ಆತನನ್ನು ಸಮುದ್ರತೀರಕ್ಕೆ ಹೊತ್ತು ತಂದರು. ಅಲ್ಲಿ ಸಂಪಾತಿ ಮಡಿದ ತಮ್ಮನಿಗೆ ತಿಲೋದಕ ಕೊಟ್ಟನು. ಆ ವೇಳೆಗೆ ನಿಶಾಕರಮುನಿ ಹೇಳಿದ ಕಾಲ ಬರಲು ಸಂಪಾತಿಗೆ ಹೊಸ ರೆಕ್ಕೆ ಹುಟ್ಟಿದುವು. ವಾನರರ ಕಾರ್ಯಕ್ಕೆ ಮಂಗಳವನ್ನು ಕೋರಿ ತನ್ನ ಹೊಸ ರೆಕ್ಕೆಗಳ ಶಕ್ತಿಯನ್ನು ಪರೀಕ್ಷಿಸಲು ಆತುರನಾಗಿ ಆಕಾಶಕ್ಕೆ ನೆಗೆದನು. ಈ ಸೋಜಿಗವನ್ನು ನೋಡುತ್ತ ವಾನರರು ಅಲ್ಲಿಯೆ ನಿಂತರು.

---

೧೩

# ಸಮುದ್ರಲಂಘನೋದ್ಯೋಗ

ಪಕ್ಷಿರಾಜನಾದ ಸಂಪಾತಿ ಹಾರಿಹೋದಮೇಲೆ, ಸಿಂಹವಿಕ್ರಮಿಗಳಾದ ವಾನರರು ಸಂತೋಷದಿಂದ ಕೋಲಾಹಲ ಧ್ವನಿಮಾಡಿದರು. ಆ ಬಳಿಕ ಈ ಲೋಕಕ್ಕೆಲ್ಲ ಕನ್ನಡಿಯಂತಿದ್ದ ದಕ್ಷಿಣ ಸಮುದ್ರದ ಉತ್ತರ ತೀರಕ್ಕೆ ಬಂದು ಅಲ್ಲಿ ಬೀಡುಬಿಟ್ಟರು. ಪರ್ವತಕ್ಕೆ ಸಮಾನವಾದ ಅಲೆಗಳಿಂದ ಕೂಡಿ, ದೊಡ್ಡ ಜಂತುಗಳನ್ನೊಳಗೊಂಡಿದ್ದ ಆ ಸಾಗರವನ್ನು ಕಂಡು ಮುಂದೇನು ಮಾಡಬೇಕೆಂದು ಅವರು ಯೋಚಿಸಿದರು. ಸಾಗರದ ವಿಸ್ತಾರವನ್ನು ಕಂಡು ವಾನರವೀರರ ಮನಸ್ಸು ಕುಗ್ಗಿತು; ಚಿಂತೆಯಿಂದ ಮುಖ ಬಾಡಿತು. ಬುದ್ಧಿವಂತನಾದ ಅಂಗದನು ಆ ವಾನರ ವೀರರನ್ನು ಸಂತೈಸಿ ಈ ರೀತಿ ನುಡಿದನು: "ವೀರರೇ ಈಗ ನೀವು ಸಂಕಟಕ್ಕೆ ಎಡೆಕೊಡಕೂಡದು. ಕೋಪಗೊಂಡ ಹಾವು ಎಳೆಯ ಮಗುವನ್ನು ಕಚ್ಚುವಂತೆ, ಚಿಂತೆ ಮನುಷ್ಯನನ್ನು ನಾಶಮಾಡುತ್ತದೆ. ಕಷ್ಟಕಾಲದಲ್ಲಿ ಧೈರ್ಯವೊಂದಿದ್ದರೆ ನಾವು ಎಂಥ ಕಾರ್ಯವನ್ನಾದರೂ ಸಾಧಿಸಬಹುದು."

ಸಮುದ್ರವನ್ನು ದಾಟುವ ಉಪಾಯವನ್ನು ಯೋಚಿಸುತ್ತಿರುವಾಗಲೆ ರಾತ್ರಿ ಕಳೆದು ಬೆಳಗಾಯಿತು. ಆಗ ವಾನರರೆಲ್ಲರೂ ಅಂಗದನನ್ನು ಸುತ್ತಿಮುತ್ತಿ ಮುಂದಿನ ಕಾರ್ಯವನ್ನು ಆಲೋಚಿಸಿದರು. ವೃದ್ಧರಾದ ವಾನರ ವೀರರನ್ನು ನೋಡಿ ಅಂಗದನು "ವಾನರವೀರರೇ, ನೂರು ಯೋಜನ ವಿಸ್ತೀರ್ಣವುಳ್ಳ ಈ ಕಡಲನ್ನು ದಾಟಿ, ಸೀತೆಯ ವೃತ್ತಾಂತವನ್ನು ತಿಳಿದುಬಂದು, ನಮ್ಮನ್ನು ಈ ದುಃಖದಿಂದ ದಾಟಿಸುವ ಶಕ್ತಿ ನಿಮ್ಮಲ್ಲಿ ಯಾರಿಗುಂಟು? ಯಾರ ದಯೆಯಿಂದ ನಾವು ಮನೆಯನ್ನು ಸೇರಿ ಹೆಂಡತಿ ಮಕ್ಕಳನ್ನು ನೋಡಿ ಸುಖದಿಂದ ಇರಬಹುದು? ಶ್ರೀರಾಮಸುಗ್ರೀವರ ಅನುಗ್ರಹಕ್ಕೆ ನಮ್ಮನ್ನು ಪಾತ್ರರನ್ನಾಗಿ ಮಾಡುವ ಸಮರ್ಥನು ನಿಮ್ಮಲ್ಲಿ ಯಾವನಿದ್ದಾನೆ? ನಿಮ್ಮಲ್ಲಿ ಯಾರಿಗಾದರೂ ಆ ಶಕ್ತಿಯಿದ್ದರೆ ಆ ಮಹಾತ್ಮನು ಮುಂದೆ ಬಂದು ನಮಗೆ ಅಭಯ ಕೊಡಲಿ" ಎಂದನು.

ಅಂಗದನ ಮಾತಿಗೆ ಯಾರೊಬ್ಬರೂ ಪಡಿನುಡಿಯಲಿಲ್ಲ. ಅಲೆಯಡಗಿದ ಕಡಲಂತೆ ವಾನರ ಸೇನೆ ಸುಮ್ಮನೆ ನಿಂತುಬಿಟ್ಟಿತು. ಆಗ ಅಂಗದನು ಮತ್ತೆ ವಾನರವೀರರ ಸಮುದ್ರಲಂಘನ ಶಕ್ತಿಯನ್ನು ತಿಳಿಸುವಂತೆ ಬೇಡಿಕೊಂಡನು.

ಅಂಗದನ ಮಾತನ್ನು ಕೇಳಿ ವಾನರವೀರರು ತಮ್ಮ ಸಮುದ್ರಲಂಘನ ಶಕ್ತಿಯನ್ನು ಹೇಳಿಕೊಂಡರು. ಗಜನು ಹತ್ತು ಯೋಜನ, ಗವಾಕ್ಷನು ಇಪ್ಪತ್ತು, ಗವಯನ ಮೂವತ್ತು, ಶರಭನು ನಾಲ್ವತ್ತು, ಗಂಧಮಾದನನು ಐವತ್ತು, ಮೈಂದನು ಅರವತ್ತು, ದ್ವಿವಿದನು ಎಪ್ಪತ್ತು, ಸುಷೇಣನು ಎಂಭತ್ತುಯೋಜನ ದೂರ ಹಾರಬಲ್ಲೆ

ವೆಂದು ತಮ್ಮ ತಮ್ಮ ಶಕ್ತಿಯನ್ನು ಹೇಳಿಕೊಂಡರು. ಮುದುಕನಾದ ತನಗೆ ತೊಂಬತ್ತು ಯೋಜನ ದೂರ ಹಾರುವ ಶಕ್ತಿ ಮಾತ್ರ ಉಂಟೆಂದು ಜಾಂಬವನನು ನುಡಿದನು. 'ನೂರು ಯೋಜನ ವಿಸ್ತೀರ್ಣವುಳ್ಳ ಸಮುದ್ರವನ್ನು ದಾಟುವ ಶಕ್ತಿ ನನಗುಂಟು. ಆದರೆ ಹಿಂತಿರುಗಿ ಬರುವ ಸಾಮರ್ಥ್ಯ ನನಗುಂಟೋ ಇಲ್ಲವೊ ಎಂಬುದನ್ನು ಮಾತ್ರ ಹೇಳಲಾರೆ' ಎಂದು ಅಂಗದನು ಹೇಳಿದನು. ಅಂಗದನಿಗೆ ಎಷ್ಟೇ ಸಾಮರ್ಥ್ಯ ವಿದ್ದರೂ, ಸ್ವಾಮಿಯಾದ ಅವನಿಂದ ಈ ಕೆಲಸ ಮಾಡಿಸಲು ಅವರು ಒಪ್ಪಲಿಲ್ಲ.

ವಾನರರು ಕಡಲನ್ನು ಹಾರುವ ವಿಷಯವನ್ನು ಯೋಚಿಸುತ್ತಿರುವಾಗ ಹನುಮಂತನು ಸಮುದ್ರದ ತೀರದಲ್ಲಿ ಒಂಟಿಯಾಗಿ ಕುಳಿತಿದ್ದನು. ಪರಾಕ್ರಮದಲ್ಲಿ, ಕಡಲನ್ನು ಹಾರುವುದರಲ್ಲಿ ಅವನನ್ನು ಮೀರಿಸಿದವರು ಇನ್ನೊಬ್ಬರಿರಲಿಲ್ಲ. ಅವನಿಂದಲೇ ಈ ಕೆಲಸ ನಡೆಯಬಹುದೆಂದೆಣಿಸಿ ಜಾಂಬವನು ಅವನ ಬಳಿಗೆ ಬಂದು ಅವನನ್ನು ಹುರಿದುಂಬಿಸಿದನು: "ವೀರನೆ, ಒಂಟಿಯಾಗಿ ಕುಳಿತು ನೀನೇಕೆ ಮಾತನಾಡದಿರುವೆ? ಭುಜಬಲದಲ್ಲಿ ನೀನು ರಾಮ ಲಕ್ಷ್ಮಣರಿಗೂ ಸುಗ್ರೀವನಿಗೂ ಸರಿಯೆನಿಸಿರುವೆ. ನಿನ್ನ ತೋಳ್‌ಬಲ ಗರುಡವೇಗಕ್ಕೇನೂ ಕಡಮೆಯಾದುದಲ್ಲ. ಬುದ್ಧಿ, ತೇಜಸ್ಸು ಶಕ್ತಿಗಳಲ್ಲಿ ಎಲ್ಲರನ್ನೂ ಮೀರಿಸಿರುವ ನೀನು ನಿನ್ನ ಬಲವನ್ನೇಕೆ ತಿಳಿಯದಿರುವೆ? ವಾಯುದೇವನ ದಯೆಯಿಂದ ಅಂಜನಾದೇವಿಯಲ್ಲಿ ಜನಿಸಿದವನು ನೀನಲ್ಲವೆ? ಬುದ್ಧಿ, ಪರಾಕ್ರಮ, ತೇಜಸ್ಸು ಮತ್ತು ಲಂಘನಾಸಾಮರ್ಥ್ಯ ಇವುಗಳಲ್ಲಿ ತನಗೆ ಸಮನಾದ ಮಗನು ಹುಟ್ಟುವನೆಂದು ನಿನ್ನ ತಂದೆಯಾದ ವಾಯುದೇವನು ನಿನ್ನ ತಾಯಿಗೆ ವರ ಕೊಟ್ಟಿದ್ದನು. ಹುಟ್ಟಿದಾಗಲೇ ಸೂರ್ಯನನ್ನೇ ಹಣ್ಣೆಂದು ಭ್ರಮಿಸಿ ತಿನ್ನಲು ಹೋದ ವೀರನಲ್ಲವೆ ನೀನು? ಇಂದ್ರನು ವಜ್ರಾಯುಧದಿಂದ ನಿನ್ನ ಎಡಕೆನ್ನೆಯನ್ನು ಹೊಡೆಯಲು ಕೋಪಗೊಂಡ ನಿನ್ನ ತಂದೆ ಬೀಸುವ ತನ್ನ ಕರ್ತವ್ಯವನ್ನೆ ನಿಲ್ಲಿಸಿಬಿಟ್ಟನು. ಬಹು ಕಷ್ಟಕ್ಕೆ ಈಡಾದ ಲೋಕಪಾಲಕರು ನಿನ್ನ ತಂದೆಯನ್ನು ಬಹಳವಾಗಿ ಬೇಡಿಕೊಂಡು ಒಲಿಸಿಕೊಳ್ಳಬೇಕಾಯಿತು. ಆಗ ಬ್ರಹ್ಮನು ಶಸ್ತ್ರಗಳಿಂದ ಸಾವಿಲ್ಲವೆಂದು ನಿನಗೆ ವರಕೊಟ್ಟನು. ಸಂತೋಷಗೊಂಡ ದೇವೇಂದ್ರನು ನಿನಗೆ ಇಚ್ಛಾಮರಣವುಂಟಾಗಲೆಂದು ವರದಾನ ಮಾಡಿದನು. ಪರಾಕ್ರಮದಲ್ಲಿ ಹಾರುವುದರಲ್ಲಿ ನೀನು ವಾಯುದೇವನಿಗೆ ಸಮಾನನೆನಿಸಿರುವೆ. ಈಗ ನೀನು ನಿನ್ನ ಪರಾಕ್ರಮದಿಂದ ನಮ್ಮನ್ನು ಉಳಿಸಬೇಕು. ವಾನರ ಸೇನೆ ನಿನ್ನ ಶಕ್ತಿ ಸಾಮರ್ಥ್ಯಗಳನ್ನು ನೋಡಬಯಸುತ್ತಿದೆ. ಆದ್ದರಿಂದ ವಿಸ್ತಾರವಾದ ಈ ಕಡಲನ್ನು ನೀನು ದಾಟು. ಈ ನಿನ್ನ ಕಾರ್ಯದಿಂದ ಎಲ್ಲ ಜೀವಿಗಳಿಗೂ ಮಂಗಳವುಂಟಾಗುತ್ತದೆ. ಈ ವಾನರರು ದೀನರಾಗಿದ್ದಾರೆ. ತ್ರಿವಿಕ್ರಮನು ಮೂರು ಹೆಜ್ಜೆಗಳಿಂದ ಈ ಲೋಕವನ್ನು ಅಳೆದಂತೆ ಈ ಮಹಾ ವಿಸ್ತೀರ್ಣದ ಕಡಲನ್ನು ದಾಟಿ ನಮ್ಮನ್ನು ಆನಂದಗೊಳಿಸು."

ಜಾಂಬವನ ಪ್ರೋತ್ಸಾಹವಚನಗಳಿಂದ ಹುರುಪುಗೊಂಡ ಹನುಮಂತನು ನೂರು ಯೋಜನದ ಕಡಲನ್ನು ದಾಟಲು ತಕ್ಕಂತೆ ತನ್ನ ದೇಹವನ್ನು ಬೆಳೆಸಿಕೊಂಡನು. ಬೆಳೆಯುತ್ತಿರುವ ಹನುಮಂತನ ದೇಹವನ್ನು ನೋಡಿ ವಾನರರು ಶೋಕವನ್ನು ಬಿಟ್ಟು ಹರ್ಷ

ದಿಂದ ಸಿಂಹನಾದ ಮಾಡಿದರು. ಅಷ್ಟೇ ಅಲ್ಲದೆ ಹನುಮಂತನ ಪರಾಕ್ರಮವನ್ನು ಹೊಗಳಿದರು. ಅವರು ಹೊಗಳಿದಷ್ಟೂ ಹನುಮಂತನು ವೃದ್ಧಿ ಹೊಂದಿದನು. ಹರ್ಷದಿಂದ ಅವನು ಬಾಲವನ್ನು ಅಲ್ಲಾಡಿಸಿದಷ್ಟೂ ಅವನ ಬಲ ಅಧಿಕವಾಯಿತು. ಆಗ ತೇಜಸ್ವಿಯಾದ ಹನುಮಂತನ ಮುಖಮಂಡಲ ಹೊಗೆಯಿಲ್ಲದ ಅಗ್ನಿಯಂತೆ ಪ್ರಕಾಶಿಸುತ್ತಿತ್ತು.

ಆಗ ಹನುಮಂತನು ಕಪಿಗಳ ನಡುವೆ ಎದ್ದು, ಹಿರಿಯರಿಗೆ ನಮಸ್ಕರಿಸಿ ಈ ರೀತಿ ನುಡಿದನು: "ವೀರವಾನರರೇ, ವಾಯುಪುತ್ರನಾದ ನನಗೆ ಹಾರುವುದರಲ್ಲಿ ಸಮಾನರು ಮತ್ತೊಬ್ಬರಿಲ್ಲ. ಆಕಾಶವನ್ನೇ ಮುತ್ತಿಡುತ್ತಿರುವ ಮೇರುಪರ್ವತವನ್ನು ಸಾವಿರಬಾರಿ ಸುತ್ತಿಬರುವ ಉತ್ಸಾಹ ನನಗುಂಟು. ಕಡಲನ್ನು ಶೋಷಿಸುವ, ಭೂಮಿಯನ್ನು ಸೀಳುವ ಪರ್ವತಗಳನ್ನು ಪುಡಿಗುಟ್ಟುವ ಶಕ್ತಿ ನನಗುಂಟು. ಹೀಗಿರುವಲ್ಲಿ ಈ ಸಾಗರವನ್ನು ದಾಟುವುದೊಂದು ಕಷ್ಟವೆ? ಆಕಾಶದಲ್ಲಿ ಹಾರಿ ಈ ಸಾಗರದ ದಕ್ಷಿಣದ ತೀರದಲ್ಲಿ ನಿರಾಯಾಸವಾಗಿ ಇಳಿಯುವ ನನ್ನನ್ನು ನೀವು ನೋಡುವಿರಿ. ಲಂಕೆಗೆ ಹೋಗಿ ಸೀತೆಯನ್ನು ಕಂಡುಬರುತ್ತೇನೆ. ನೀವು ಸಂತೋಷದಿಂದಿರಿ. ದೇವೇಂದ್ರನಿಂದ ಅಮೃತ ಕಲಶವನ್ನು ಹರಣಮಾಡುವ ಶಕ್ತಿಯುಳ್ಳ ನನಗೆ ಇದೊಂದು ಮಹಾಕಾರ್ಯವಲ್ಲ."

ಹನುಮಂತನ ವೀರವಾಣಿಯನ್ನು ಕೇಳಿ ಜಾಂಬವಂತನು "ಆಂಜನೇಯ, ನಿನ್ನಿಂದ ನಮ್ಮ ಶೋಕ ಕೊನೆಗಂಡಿತು. ನಿನ್ನ ಶ್ರೇಯಸ್ಸಿನಲ್ಲಿ ಆಸಕ್ತರಾದ ನಾವು ನಿನಗೆ ಮಂಗಳವನ್ನು ಕೋರುತ್ತೇವೆ. ಋಷಿಗಳ ಅನುಗ್ರಹದಿಂದ, ವೃದ್ಧ ವಾನರರ ಆಶೀರ್ವಾದದಿಂದ, ಗುರುಗಳ ಪ್ರಸಾದದಿಂದ ಈ ದೊಡ್ಡ ಸಾಗರವನ್ನು ದಾಟು. ನಿನ್ನ ಬರುವಿಕೆಯನ್ನೆ ಇದಿರುನೋಡುತ್ತ ನಾವೆಲ್ಲರೂ ಒಂದೇಕಾಲಿನಲ್ಲಿ ನಿಂತು ನಿನ್ನನ್ನು ನಿರೀಕ್ಷಿಸುತ್ತೇವೆ. ವಾನರರ ಪ್ರಾಣಗಳೆಲ್ಲ ನಿನ್ನನ್ನೆ ಆಶ್ರಯಿಸಿವೆ" ಎಂದು ಸಂತೋಷದಿಂದ ನುಡಿದನು.

ಹಿರಿಯರ ಹರಕೆಯನ್ನು ಹೊತ್ತು ಹನುಮಂತನು, ಭೂಮಿ ತನ್ನ ವೇಗವನ್ನು ಧರಿಸಲಾರದೆಂದು ಮಹೇಂದ್ರ ಪರ್ವತ ಶಿಖರಕ್ಕೆ ಏರಿದನು. ಹೂಬಳ್ಳಿಗಳಿಂದ ತುಂಬಿ, ಹರಿಯುವ ಝರಿಗಳಿಂದಲೂ ಸಿಂಹ ಶಾರ್ದೂಲಗಳಿಂದಲೂ ಕೂಡಿದ ಆ ಪರ್ವತದ ಮೇಲೆ ಮಹಾಬಲಶಾಲಿಯಾದ ಹನುಮಂತನು ತಾನೇತಾನಾಗಿ ಸಂಚರಿಸಿದನು. ಕಪಿವೀರನ ಹೊಡೆತಕ್ಕೆ ಸಿಕ್ಕ ಆ ಪರ್ವತ ಸಿಂಹದಿಂದ ಹೊಡೆಯಲ್ಪಟ್ಟ ಆನೆಯಂತೆ ಶೋಭಿಸುತ್ತಿತ್ತು. ಹನುಮಂತನ ಕಾಲಿನ ಹೊಡೆತಕ್ಕೆ ಬಂಡೆಗಳು ಜಾರಿದುವು. ಬೆಟ್ಟದಲ್ಲಿದ್ದ ನೀರು ಜಿನುಗಿ ಝರಿಗಳಾಗಿ ಹರಿಯಲಾರಂಭಿಸಿತು. ಪಕ್ಷಿಗಳು ಹಿಂಡು ಹಿಂಡಾಗಿ ಹಾರಿಹೋದುವು. ಬಿಲದಲ್ಲಿದ್ದ ಸರ್ಪಗಳು ನಿಟ್ಟುಸಿರು ಬಿಡುತ್ತ ಅರ್ಧಮರ್ಧವಾಗಿ ಹೆಡೆತೆರೆದು ಹೊರಗೆ ಬಂದು ಪರ್ವತದ ಧ್ವಜಗಳಂತೆ ಕಂಗೊಳಿಸುತ್ತಿದ್ದುವು. ಮಹರ್ಷಿಗಳು ಭ್ರಾಂತರಾಗಿ ಆಶ್ರಮಗಳನ್ನು ಬಿಟ್ಟುಹೋಗಲು, ಸಂಗಡಿಗರಿಲ್ಲದೆ ಕಾಡಿನಲ್ಲಿ ದುಃಖಿಸುವ ಪ್ರಯಾಣಿಕನಂತೆ ಪರ್ವತವು ಕಾಣಿಸಿತು. ಹೀಗೆ ಸಮುದ್ರವನ್ನೇ ನೆಗೆದು ದಾಟುವ ಮನಸ್ಸುಮಾಡಿ ಪರಂತಪನಾದ ಹನುಮಂತನು ಪರ್ವತದ ತುದಿಯಲ್ಲಿ ನಿಂತು, ಮನಸ್ಸಿನಿಂದಲೆ ಲಂಕೆಯನ್ನು ಸೇರಿದಂತಿದ್ದನು.

# ಸುಂದರಕಾಂಡ

---

## ೧

## ಸಮುದ್ರಲಂಘನ

ಸೀತಾನ್ವೇಷಣೆಗೆಂದು ಹೊರಟ ಮಾರುತಿ ತನ್ನ ಪ್ರಯಾಣಕ್ಕೆ ದೇವಚಾರಣರಿಗೆ ದಾರಿಯಾದ ಆಕಾಶವೆ ಅತ್ಯುತ್ತಮವೆಂದು ಭಾವಿಸಿದನು. ಮಹೇಂದ್ರ ಪರ್ವತದ ಕಂದರದಲ್ಲಿ ತಲೆಯೆತ್ತಿ ನಿಂತಿದ್ದ ಆ ವಾನರವೀರನು ಮಲೆತು ನಿಂತಿರುವ ಮಹಾ ವೃಷಭ ದಂತೆ ಕಂಗೊಳಿಸುತ್ತಿದ್ದನು. ವೈಡೂರ್ಯ ವರ್ಣದಿಂದ ವಿರಾಜಿಸುತ್ತಿದ್ದ ಹಸುರು ಹುಲ್ಲಿನಮೇಲೆ ಒಂದು ಕ್ಷಣಕಾಲ ಶತಪಥ ತಿರುಗುತ್ತಿದ್ದು ಅನಂತರ ಕೋಡುಗಲ್ಲೊಂದ ನ್ನೇರಿ ನಿಂತುಕೊಂಡನು. ಮುಹೂರ್ತಮಾತ್ರ ಕಣ್ಮುಚ್ಚಿ ಪಂಚಭೂತಗಳನ್ನು ಮನಸ್ಸಿ ನಲ್ಲಿ ಧ್ಯಾನಿಸಿದಮೇಲೆ ಆ ವೀರನು ಪರ್ವತದ ಸತ್ವವನ್ನು ಪರೀಕ್ಷಿಸುವುದಕ್ಕೋ ಎಂಬಂತೆ ಒಮ್ಮೆ ಕಾಲನ್ನು ನೆಲಕ್ಕೆ ಅಪ್ಪಳಿಸಿದನು. ಅದರಿಂದ ಪರ್ವತವೆಲ್ಲವೂ ಅಲುಗಿದಂತಾಯಿತು. ಸುತ್ತಲಿದ್ದ ವೃಕ್ಷಗಳಿಂದ ಹೂಗಳೆಲ್ಲವೂ ಉದುರಿದುವು. ಸಂದಿಗಳಲ್ಲಿ ಹುದುಗಿದ್ದ ಹಾವು ಗಳೆಲ್ಲವೂ ಹೊರಕ್ಕೆ ಬಂದುವು. ದೂರದಲ್ಲಿ ನಿಂತಿದ್ದ ವಾನರರು ಈತನ ಸಾಮರ್ಥ್ಯವನ್ನು ಕಂಡು ಮನಸ್ಸಿನಲ್ಲಿಯೇ ನಲಿದರು. ಬೆಟ್ಟದ ನೆತ್ತಿಯೇರಿ ನಿಂತಿರುವ ಮತ್ತೊಂದು ಬೆಟ್ಟದಂತೆ ಬಹು ದೂರದವರೆಗೂ ಆತನು ಕಾಣಬರುತ್ತಿದ್ದನು. ಆತನ ಆಕಾರವನ್ನೂ ನಿಲವನ್ನೂ ಕಂಡು ಮಹೇಂದ್ರಪರ್ವತದಲ್ಲಿದ್ದ ಋಷಿಗಳು ಆತನು ತನ್ನ ಕಾರ್ಯದಲ್ಲಿ ವಿಜಯಿಯಾಗಲು ಸಂದೇಹವೇ ಇಲ್ಲವೆಂದು ಭಾವಿಸಿದರು. ಹನುಮಂತನು ಅಲ್ಲಿಂದ ಹಾರಲು ನಿಶ್ಚೈಸಿ ಒಮ್ಮೆ ಮೈಯನ್ನೊದರಿದನು. ಮೈಮೇಲಿದ್ದ ಕೂದಲುಗಳು ನಿಮಿರಿ ನೆಟ್ಟನೆ ನಿಂತುವು. ಬಾಲವು ಮೇಲಕ್ಕೆದ್ದು ನಿಂತು ಅದರ ತುದಿ ಗೊಂಡೆಯಂತಾಯಿತು. ಸಮುದ್ರದ ಅಲೆಗಳಂತಿದ್ದ ಬಾಹುಗಳೆರಡೂ ಮೇಲಕ್ಕೂ ಕೆಳಕ್ಕೂ ತೂಗಾಡಿದುವು. ಚಿಮ್ಮುವ ಪೊದಲು ಕಾಲುಗಳನ್ನು ಭೂಮಿಗೆ ಬಲವಾಗಿ ಊರಿದುದರಿಂದ ಅವು ಸಂಕುಚಿತವಾದುವು. ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಮಹಾಧನುಸ್ಸಿನಿಂದ ಹೊರಡುವ ದಿವ್ಯಮಾರ್ಗಣದಂತೆ ಹನುಮಂತನು ಆಕಾಶಕ್ಕೆ ನೆಗೆದನು. ಶ್ರೀರಾಮನು ರಾವಣನ ಮೇಲೆ ಪ್ರಯೋಗಿಸುವ ಮೊಟ್ಟಮೊದಲನೆಯ ಬಾಣವೇ ಹನುಮಂತನೆಂಬಂತೆ ಕಾಣಿಸಿತು. ಆತನು ಹಾರಿದ ವೇಗಕ್ಕೆ ಬಿರುಗಾಳಿಯೆದ್ದು ಸುತ್ತಲಿನ ಮರಗಿಡಗಳು ಮುರಿದುಬಿದ್ದುವು; ಹೂಗಳೂ ಎಲೆಗಳೂ ಆ ವೇಗಕ್ಕೆ ಸಿಕ್ಕಿ ಆತನ ಹಿಂದೆಯೇ

ಹಾರಿಹೋದುವು, ಆತನನ್ನು ಸಾಗಕಳುಹುವುದಕ್ಕೋ ಎಂಬಂತೆ. ಮೇಲೆದ್ದು ನಿಂತಿದ್ದ ಬಾಲವೆ ತನ್ನ ವಿಜಯಧ್ವಜದಂತೆ ಕಂಗೊಳಿಸುತ್ತಿರಲು, ಆತನು ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಹೊರಟನು.



ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಮಹಾಧನುಸ್ಸಿನಿಂದ ಹೊರಡುವ ದಿವ್ಯ ಮಾರ್ಗಣದಂತೆ ಹನುಮಂತನು ಆಕಾಶಕ್ಕೆ ನೆಗೆದನು.

ಮೇಲೆ ವಿಸ್ತಾರವಾದ ನೀಲಗಗನ; ಕೆಳಗೆ ಅಪಾರವಾದ ಸಾಗರ. ಅವುಗಳ ನಡುವೆ ಅದ್ಭುತ ವೇಗದಿಂದ ಚಲಿಸುವ ವಾಯುಪುತ್ರನನ್ನು ನೋಡುವುದಕ್ಕಾಗಿ ದೇವಾನುದೇವತೆಗಳೆಲ್ಲರೂ ಅಂತರಿಕ್ಷದಲ್ಲಿ ನೆರೆದರು. ಜಲದೇವತೆಯರೆಲ್ಲರೂ ಸಮುದ್ರದ ಮೇಲೆ ನೆರೆದರು. ಸ್ವತಃ ಸಮುದ್ರರಾಜನೇ ಆ ಮಹಾತ್ಮನ ಮಹಾಕಾರ್ಯವನ್ನು ಕಂಡು ಮೆಚ್ಚಿ, ತನ್ನಲ್ಲಿ ಅಡಗಿದ್ದ ಮೈನಾಕಪರ್ವತವನ್ನು ಕುರಿತು "ಎಲೈ ಮೈನಾಕನೆ, ನೀರನ್ನು ಬಿಟ್ಟು ಮೇಲಕ್ಕೇಳು. ದುರ್ಭರ ಕಾರ್ಯದಲ್ಲಿ ತೊಡಗಿರುವ ಆಂಜನೇಯನು ಕ್ಷಣಕಾಲ ನಿಂತು ಆಯಾಸವನ್ನು ಕಳೆದುಕೊಳ್ಳಲಿ" ಎಂದನು. ಆತನ ಅಪ್ಪಣೆಯಂತೆ ಮೈನಾಕನು ತನ್ನ ಸುವರ್ಣ ಶಿಖರಗಳೊಡನೆ ನೀರಿನಿಂದ ಮೇಲಕ್ಕೆದ್ದು ಹನುಮಂತನ ದಾರಿಗೆ ಅಡ್ಡವಾಗಿ ನಿಂತನು. ಇದನ್ನು ನೋಡಿ ಹನುಮಂತನಿಗೆ ತನ್ನ ಗಮನಕ್ಕೆ ಇದೇನೋ ಒಂದು ಅಡ್ಡಿ ಬಂದಿತೆಂದು ಭಾಸವಾಯಿತು. ಒಮ್ಮೆ ತನ್ನ ಎದೆಯಿಂದ ವೇಗವಾಗಿ ಹಾದು ಅದನ್ನು ಕೆಳಕ್ಕೆ ತಾಡಿಸಿದನು. ಕೆಳಕ್ಕೆ ಬಿದ್ದರೂ ಮೈನಾಕನಿಗೆ ಮಾರುತಿಯ ಪರಾಕ್ರಮವನ್ನು ಕಂಡು ಅತಿಶಯಾನಂದವಾಯಿತು. ಆದ್ದರಿಂದ ಆತನನ್ನು ಕುರಿತು "ಪೂಜ್ಯನೆ, ಸಮುದ್ರರಾಜನೂ ನಾನೂ ನಿನ್ನ ಹಿತವನ್ನೇ ಕೋರತಕ್ಕವರು. ಆದ್ದರಿಂದ ಸಮುದ್ರರಾಜನ ಅಪ್ಪಣೆಯಂತೆ ನಿನ್ನ ವಿಶ್ರಾಂತಿಗಾಗಿ ನಾನು ನಿನ್ನ ಇದಿರಿಗೆ ನಿಂತೆ. ಅಲ್ಲದೆ ನಿನ್ನ ತಂದೆಯಾದ ವಾಯುದೇವನಿಗೆ ನಾನು

ಚಿತಮಣಿ. ಹಿಂದೆ ಇಂದ್ರನು ಬೆಟ್ಟಗಳ ರೆಕ್ಕೆಗಳನ್ನೆಲ್ಲಾ ಕತ್ತರಿಸುತ್ತಿದ್ದಾಗ, ನಾನು ನಿನ್ನ ತಂದೆಯ ದಯದಿಂದ ಹಾರಿಬಂದು ಈ ಸಮುದ್ರದಲ್ಲಿ ಅಡಗಿಕೊಂಡೆ. ನನ್ನ ಪ್ರಾಣವನ್ನು ಉಳಿಸಿದ ಆತನು ನನಗೆ ತಂದೆಯಿದ್ದಂತೆ. ಆ ಮೂಲಕ ನೀನು ನನಗೆ ಸೋದರನಾದಂತಾಯಿತು. ದಯವಿಟ್ಟು ನನ್ನ ಅತಿಥ್ಯವನ್ನು ಸ್ವೀಕರಿಸಿ ಮುಂದಕ್ಕೆ ಪ್ರಯಾಣ ಬೆಳಸು" ಎಂದು ಪ್ರಾರ್ಥಿಸಿದನು. ಆದರೆ ಹನುಮಂತನು ಕಾರ್ಯಗೌರವ ದಿಂದ ತನಗೆ ಈಗ ವ್ಯವಧಾನವಿಲ್ಲವೆಂದು ತಿಳಿಸಿ ಲಂಕೆಯಿಂದ ಹಿಂದಿರುಗಿ ಬರುವಾಗ ಆತನ ಆತಿಥ್ಯವನ್ನು ಸ್ವೀಕರಿಸುವುದಾಗಿ ಮಾತುಕೊಟ್ಟು ಪ್ರಯಾಣವನ್ನು ಮುಂದು ವರಿಸಿದನು.

ಮುಂದಕ್ಕೆ ಪ್ರಯಾಣ ಹೊರಟ ಹನುಮಂತನು ಕ್ಷಣಮಾತ್ರದಲ್ಲಿ ಮೈನಾಕ ಪರ್ವತದಿಂದ ಕಣ್ಮರೆಯಾಗಿ ಹೊರಟುಹೋದನು. ಕ್ಷಣ ಕ್ಷಣಕ್ಕೂ ಆತನ ವೇಗ ಹೆಚ್ಚುತ್ತಿತ್ತು. ಆಯಾಸವೆಂದರೆ ಏನೆಂಬುದೇ ಆತನಿಗೆ ಗೊತ್ತಿಲ್ಲವೆಂದು ತೋರುತ್ತದೆ. ಅಗೋ! ಮತ್ತೆ ಅದೇನು? ಸಮುದ್ರ ಮಧ್ಯದಿಂದ ಘೋರವಾದ ರಾಕ್ಷಸಾಕಾರ ವೊಂದು ಮೇಲಕ್ಕೇಳುತ್ತಿದೆ! ಅಹುದು! ದೇವತೆಗಳು ಹನುಮಂತನ ಸತ್ವವನ್ನು ಪರೀಕ್ಷಿಸಬೇಕೆಂದು ಸುರಸೆಯೆಂಬ ಪನ್ನಗಮಾತೆಯನ್ನು ಆತನನ್ನು ತಡೆಯಲು ಕಳುಹಿಸಿದ್ದಾರೆ. ಅವಳು ಅತಿ ವಿಕಾರ ರೂಪದಿಂದ ಮಾರುತಿಯನ್ನು ಅಡ್ಡಗಿಸಿ ದೊಡ್ಡ ಕಮರಿಯಂತಿದ್ದ ತನ್ನ ಬಾಯನ್ನು ತೆರೆದು ಅವನನ್ನು ನುಂಗುವವಳಂತೆ ಬರು ತ್ತಿದ್ದಾಳೆ. ಅವಳು ಹನುಮಂತನನ್ನು ಕುರಿತು "ಎಲೈ ವಾನರನೆ, ದೇವತೆಗಳು ನಿನ್ನನ್ನು ನನಗೆ ಆಹಾರವಾಗಿ ತೋರಿಸಿದ್ದಾರೆ. ನಾನು ನಿನ್ನನ್ನು ಭಕ್ಷಿಸಬೇಕು. ನನ್ನ ಬಾಯನ್ನು ಪ್ರವೇಶಿಸು" ಎಂದಳು. ಹನುಮಂತನು ತನ್ನ ಕಾರ್ಯಗೌರವವನ್ನು ಆಕೆಗೆ ವಿವರಿಸಿ ಹೇಳಿ, ತನ್ನ ಕಾರ್ಯಸಾಧನೆಯಾದಮೇಲೆ ಹಿಂದಿರುಗಿ ಬರುವಾಗ ಅವಳ ಇಷ್ಟದಂತೆ ನಡೆದುಕೊಳ್ಳುವುದಾಗಿ ತಿಳಿಸಿ, ತನ್ನನ್ನು ಸದ್ಯಕ್ಕೆ ತೊಂದರೆಪಡಿಸಕೂಡದೆಂದು ಕೈಮುಗಿದು ವಿನಯದಿಂದ ಬೇಡಿಕೊಂಡನು. ಆದರೆ ಸುರಸೆ ಇದಕ್ಕೊಪ್ಪಲಿಲ್ಲ. ಆದ್ದರಿಂದ ಹನುಮಂತನು ಅವಳ ಬಾಯಿಗೆ ಅಳವಡದಷ್ಟು ಎತ್ತರವಾಗಿ ಬೆಳೆದು ನಿಂತನು. ಅದನ್ನು ಕಂಡು ಸುರಸೆ ತನ್ನ ಬಾಯನ್ನು ಹಿಗ್ಗಲಿಸಿದಳು. ಹನುಮಂತ ಹತ್ತು ಯೋಜನ ಬೆಳೆದರೆ ಅವಳ ಬಾಯಿ ಇಪ್ಪತ್ತು ಯೋಜನದಷ್ಟು ವಿಸ್ತಾರವಾಗು ವುದು. ಆತನ ದೇಹ ಮೂವತ್ತು ಯೋಜನದಷ್ಟು ಬೆಳೆದರೆ ಅವಳ ಬಾಯಿ ನಲವತ್ತು ಯೋಜನದಷ್ಟು ಹಿಗ್ಗಲಿಸುವುದು. ಇವಳನ್ನು ನಿಗ್ರಹಿಸಲು ಪ್ರಯತ್ನಿಸಿದರೆ ತನ್ನ ಕಾರ್ಯ ವಿಳಂಬವಾಗುವುದೆಂದುಕೊಂಡು ಮಾರುತಿ ಥಕ್ಕನೆ ಅಂಗುಷ್ಟ ಪ್ರಮಾಣಕ್ಕೆ ತನ್ನ ದೇಹವನ್ನು ಕುಗ್ಗಿಸಿಕೊಂಡು ಅವಳು ತನ್ನ ದೇಹವನ್ನು ಕುಗ್ಗಿಸಿಕೊಳ್ಳುವುದರೊಳ ಗಾಗಿಯೆ ಅವಳ ಬಾಯಲ್ಲಿ ಹೊಕ್ಕು ಹೊರಕ್ಕೆ ಬಂದನು. ಅನಂತರ ಆತನು ಸುರಸೆ ಯನ್ನು ಕುರಿತು "ಎಲೈ ರಾಕ್ಷಸಿಯೆ, 'ನನ್ನ ಬಾಯನ್ನು ಪ್ರವೇಶಿಸು' ಎಂದು ನೀನು ಹೇಳಿದಂತೆ ಇದೋ ಪ್ರವೇಶಿಸಿ ಹೊರಬಂದಿದ್ದೇನೆ. ಇನ್ನು ನನ್ನನ್ನು ಬಿಡು ಸ್ವಾಮಿ

ಕಾರ್ಯಕ್ಕೆ ವಿಳಂಬವಾಗುವುದು" ಎಂದನು. ಆತನ ಧೈರ್ಯವನ್ನೂ ಜಾಣ್ಮೆಯನ್ನೂ ಕಂಡು ಸುರಸೆಗೆ ಆನಂದವಾಯಿತು. ಆತನನ್ನು ಬಾಯ್ತುಂಬ ಹರಸಿ ಬೀಳ್ಕೊಟ್ಟಳು.

ಸುರಸೆಯಿಂದ ಬೀಳ್ಕೊಂಡ ಹನುಮಂತನು ಮಳೆಗಾಲದ ಚಂದ್ರನಂತೆ ಮೇಘಗಳ ಮಧ್ಯದಲ್ಲಿ ಹಾರಿಹೋಗುತ್ತಾ ಸ್ವಲ್ಪದೂರವನ್ನು ಸವೆಸಿದ್ದನೊ ಇಲ್ಲವೊ ಅಷ್ಟರಲ್ಲಿ ಮತ್ತೊಂದು ವಿಘ್ನ ಪ್ರಾಪ್ತವಾಯಿತು. ಸಮುದ್ರ ಮಧ್ಯದಲ್ಲಿ ವಾಸಿಸುತ್ತಿದ್ದ ಸಿಂಹಿಕೆ ಯೆಂಬ ರಾಕ್ಷಸಿಯೊಬ್ಬಳು ಆತನನ್ನು ಕಂಡಳು. ಮೇಲೆ ಸಂಚರಿಸುವ ಪ್ರಾಣಿಗಳ ನೆರಳಿ ನಿಂದಲೆ ಅವುಗಳ ಚಲನೆಯನ್ನು ತಡೆದುನಿಲ್ಲಿಸಿ, ಅವುಗಳನ್ನು ತನ್ನ ಹೊಟ್ಟೆಗೆ ಹಾಕಿ ಕೊಳ್ಳುವುದು ಆ ರಾಕ್ಷಸಿಯ ನಿತ್ಯಕ್ರಮ. ಇಂದು ದೊಡ್ಡ ಬೇಟೆಯೊಂದು ದೊರೆಯಿ ತೆಂದು ಅವಳಿಗೆ ಮಹದಾನಂದವಾಯಿತು. ಸಮುದ್ರದ ಮೇಲೆ ಬಿದ್ದಿದ್ದ ಹನುಮಂತನ ನೆರಳನ್ನು ಹಿಡಿದು ಅವನ ಆಕಾಶಗಮನವನ್ನು ತಡೆದು ನಿಲ್ಲಿಸಿದಳು. ಎದುರುಗಾಳಿಯಿಂದ ತೊಂದರೆಗೊಳಗಾದ ಹಡಗಿನಂತೆ ತನ್ನ ಸ್ಥಿತಿ ಆಗಿರುವುದನ್ನು ಕಂಡು ಹನುಮಂತನು ಕೆಳಗೆ ನೋಡುತ್ತಾನೆ., ಭಯಂಕರ ರಾಕ್ಷಸಿ ಕಮರಿಯಂತಿರುವ ತನ್ನ ಬಾಯನ್ನು ತೆರೆದುಕೊಂಡು, ನೆರಳಿನ ಮೂಲಕ ತನ್ನನ್ನು ಕೆಳಗೆಳೆಯುತ್ತಿದ್ದಾಳೆ! ಸುಗ್ರೀವನು ಹಿಂದೆ ಹೇಳಿದ್ದ 'ನೆರಳನ್ನು ಹಿಡಿದು ಭಕ್ಷಿಸುವ ಭೂತ' ಇವಳೇ ಇರಬೇಕೆಂದುಕೊಂಡು ಆತನು ತನ್ನ ದೇಹವನ್ನು ಅದ್ಭುತಾಕಾರವಾಗಿ ಬೆಳೆಸಿದನು. ಅನಂತರ ದೇಹವನ್ನು ಡು ಗಿಸಿಕೊಂಡು ತಾನಾಗಿಯೆ ಅವಳ ಬಿಚ್ಚಿದ ಬಾಯಲ್ಲಿ ಪ್ರವೇಶಿಸಿದನು. ಹೊಟ್ಟೆಯಲ್ಲಿ ಹೊಕ್ಕ ಹನುಮಂತನು ಅವಳ ಉದರ ಸ್ಥಾನವನ್ನು ಸಿಗಿದು ಅಲ್ಲಿಂದ ಪುಟವೆದ್ದ ಚಂಡಿ ನಂತೆ ಆಕಾಶಕ್ಕೆ ನೆಗೆದನು. ಆ ರಾಕ್ಷಸಿ ಘೋರವಾಗಿ ಚೀತ್ಕರಿಸುತ್ತ ಸತ್ತು ನೀರಿನಲ್ಲಿ ಬಿದ್ದಳು. ಇಷ್ಟಾದ ಮೇಲೆ ಮತ್ತಾವ ವಿಘ್ನವೂ ಇಲ್ಲದೆ ಆತನು ಗರುಡನಂತೆ ಸುಖ ವಾಗಿ ಹಾರುತ್ತಾ ಸಮುದ್ರದ ದಂಡೆಗೆ ಬಂದು ಸೇರಿದನು. ಅದರ ತೀರದಲ್ಲಿ ದೊಡ್ಡ ದೊಂದು ಅಡವಿಯಿತ್ತು. ಹನುಮಂತನು ನೆಲಕ್ಕಿಳಿಯುವ ಮುನ್ನ ತನ್ನ ದೇಹವನ್ನು ಅತ್ಯಂತ ಚಿಕ್ಕದಾಗಿ ಕುಗ್ಗಿಸಿಕೊಂಡು ಆ ಅಡವಿಯಲ್ಲಿ ಕೇತಕೀ ವನದಿಂದ ತುಂಬಿರುವ ಲಂಬಾಚಲವೆಂಬ ಪರ್ವತದ ಶಿಖರದ ಮೇಲೆ ಬಂದಿಳಿದನು. ಆ ಪರ್ವತದಿಂದಾಚೆ ಅತ್ಯಂತ ಎತ್ತರವಾದ ತ್ರಿಕೂಟ ಶಿಖರವೆಂಬ ಪರ್ವತವಿತ್ತು. ಅದರ ಮೇಲ್ಗಡೆಯಲ್ಲಿಯೆ ಕಾಣಿಸಿತು ಲಂಕಾಪಟ್ಟಣ.

---

೨

# ಲಂಕಾ ಪ್ರವೇಶ

ಭಾರತದ ದಕ್ಷಿಣ ಸಮುದ್ರ ತೀರದಿಂದ ಲಂಕಾದ್ವೀಪಕ್ಕೆ ಒಂದು ನೂರು ಯೋಜನ ದೂರವಿತ್ತು. ಹನುಮಂತನು ಅಷ್ಟು ದೀರ್ಘವಾದ ಅಂತರವನ್ನು ಹಾರಿ ಬಂದಿದ್ದರೂ ಆತನಿಗೆ ಬಳಲಿಕೆಯೇನೂ ತೋರಲಿಲ್ಲ. ಆದಷ್ಟು ಬೇಗ ತಾನು ಬಂದಿರುವ ಕಾರ್ಯವನ್ನು ಸಾಧಿಸಬೇಕೆಂಬುದಷ್ಟೇ ಆತನ ಆತುರ. ಆದ್ದರಿಂದ ಆತನು ಇದಿರಿಗೆ ಕಾಣುತ್ತಿದ್ದ ತ್ರಿಕೂಟ ಪರ್ವತದ ಶಿಖರದಲ್ಲಿದ್ದ ಲಂಕಾಪಟ್ಟಣವನ್ನು ಪ್ರವೇಶಿಸುವ ಪ್ರಯತ್ನದಲ್ಲಿ ತೊಡಗಿದನು. ಲಂಬಾಚಲಕ್ಕೂ ತ್ರಿಕೂಟ ಶಿಖರಕ್ಕೂ ಮಧ್ಯೆ ನಿಸರ್ಗ ಶೋಭೆ ಕಣ್ಣು ಕೋರೈಸುವಂತಿತ್ತು. ನೆಲವೆಲ್ಲವೂ ಹಸುರು ಹುಲ್ಲಿನಿಂದ ತುಂಬಿತ್ತು. ಅಲ್ಲಲ್ಲಿ ದೊಡ್ಡ ದೊಡ್ಡ ಕಲ್ಲುಬಂಡೆಗಳು, ಅವುಗಳ ಪಕ್ಕದಲ್ಲಿ ಗಗನ ಚುಂಬಿತವಾದ ವೃಕ್ಷಗಳು,ಹೂಗಿಡಗಳಿಂದ ತುಂಬಿದ ರಮ್ಯವಾದ ಉದ್ಯಾನಗಳು; ಮಧ್ಯೆ ಮಧ್ಯೆ ತಿಳಿನೀರಿನಿಂದ ತುಂಬಿದ ಕೊಳಗಳು. ಮಾರುತಿ ಇವುಗಳೆಲ್ಲವನ್ನೂ ನೋಡುತ್ತ ಆನಂದಪಡುತ್ತಾ ತ್ರಿಕೂಟಪರ್ವತವನ್ನು ಸಮೀಪಿಸಿದನು. ಪರ್ವತದ ಮೇಲ್ಭಾಗದಲ್ಲಿ, ಮೋಡದಿಂದ ತೂಗುಬಿಟ್ಟಿರುವಂತೆ ಕಾಣುತ್ತಿರುವ ಲಂಕಾಪಟ್ಟಣವು, ಸಂಜೆಯ ಹೊಂಬಿಸಿಲಲ್ಲಿ ಮಿರಿ ಮಿರಿ ಮಿಂಚುತ್ತಿತ್ತು. ಆ ಊರಿನ ಸುತ್ತಲೂ ಅಭೇದ್ಯವಾದ ಕೋಟೆ. ಆ ಕೋಟೆಯ ಗೋಡೆಯ ಮೇಲೆ ಶಸ್ತ್ರಸಜ್ಜಿತರಾದ ಯೋಧರು ಎಡೆಬಿಡದೆ ಕಾವಲು ತಿರುಗುತ್ತಿದ್ದಾರೆ. ಸಮುದ್ರ ಮಧ್ಯದಲ್ಲಿರುವ ಆ ದ್ವೀಪದಲ್ಲಿ, ಅಂತಹ ಅಭೇದ್ಯವಾದ ಕೋಟೆಯಲ್ಲಿ ಆ ಬಗೆಯಾದ ಕಾವಲಿರುವಾಗ ಶೂರನಾದ ರಾವಣನನ್ನು ಗೆಲ್ಲುವುದು ಸಾಧ್ಯವೆ ? ಎನ್ನಿಸಿತು ಹನುಮಂತನಿಗೆ. ನೂರು ಯೋಜನ ವಿಸ್ತಾರವಾದ ಸಮುದ್ರವನ್ನು ಹಾರುವಂತಹ ಶೂರರು ಎಷ್ಟು ಜನಗಳಿದ್ದಾರೆ ? ಹಾಗೆ ಹಾರಿಬಂದರೂ ಈ ಕೋಟೆಯನ್ನು ಭೇದಿಸಿ ಕೊಂಡು ಒಳನುಗ್ಗಿ ಶೂರನಾದ ರಾವಣನೊಡನೆ ಯುದ್ಧಮಾಡಬಲ್ಲವರಾರು ? ಹನುಮಂತನು ಕ್ಷಣಮಾತ್ರ ಯೋಚನೆಯಲ್ಲಿ ಮುಳುಗಿದ್ದನು. ಆದರೆ ಮರುಕ್ಷಣದಲ್ಲಿ "ಅದೆಲ್ಲಾ ಆಲೋಚನೆ ಈಗೇಕೆ ? ಮೊದಲು ಸೀತಾದೇವಿ ಬದುಕಿರುವಳೊ ಇಲ್ಲವೊ, ಬದುಕಿದ್ದರೆ ಎಲ್ಲಿರಬಹುದು—ಎಂಬುದನ್ನು ತಿಳಿದುಕೊಳ್ಳುತ್ತೇನೆ" ಎಂದುಕೊಂಡನು. ಸ್ವಸ್ವರೂಪದಿಂದ ಆತನು ಲಂಕಾಪಟ್ಟಣವನ್ನು ಪ್ರವೇಶಿಸುವುದು ಸಾಧ್ಯವಿರಲಿಲ್ಲ. ಏನಿದ್ದರೂ ಕಾವಲುಗಾರನನ್ನು ವಂಚಿಸಿ ಕೋಟೆಯನ್ನು ಪ್ರವೇಶಮಾಡಬೇಕು. ಅದಕ್ಕಾಗಿ ಆತನು ತನ್ನ ದೇಹವನ್ನು ಕುಗ್ಗಿಸಿಕೊಂಡನು. ಕೇವಲ ಒಂದು ಬೆಕ್ಕಿನಷ್ಟು ಗಾತ್ರವಾಯಿತು ಅವನ ದೇಹ. ಸೂರ್ಯನು ಮುಳುಗುವುದನ್ನು ಕಾಯುತ್ತಿದ್ದು ಕತ್ತಲಾದ ಮೇಲೆ ಕೋಟೆಯ ಸಮೀಪದಲ್ಲಿಯೆ ನಡೆಯುತ್ತ ಪ್ರವೇಶಕ್ಕೆ ಮಾರ್ಗವನ್ನು ಹುಡುಕು

ತ್ತಿದ್ದನು. ಹೀಗೆ ಹುಡುಕುತ್ತಿರಲು ಕೋಟೆಯ ಉತ್ತರದಿಕ್ಕಿಗೆ ಹೆಬ್ಬಾಗಿಲು ಕಾಣಿಸಿತು. ಚಿನ್ನದಿಂದ ಮಾಡಿದ್ದ ಆ ಬಾಗಿಲುಗಳನ್ನು ರತ್ನಖಚಿತವಾದ ಬಾಗಿಲುವಾಡಗಳನ್ನೂ ವಜ್ರ ವೈಡೂರ್ಯಗಳಿಂದ ಕೂಡಿದ ಮೆಟ್ಟಿಲುಗಳನ್ನೂ ನೋಡಿ ಆಶ್ಚರ್ಯಪಡುತ್ತಾ ಆತನು ಕೋಟೆಯೊಳಕ್ಕೆ ಪ್ರವೇಶಿಸಲೆಂದು ಹವಣಿಸುತ್ತಿದ್ದನು.

ಕೋಟೆಯಲ್ಲಿ ಕಾಲಿಡಬೇಕೆಂದು ಹೆಜ್ಜೆಯೆತ್ತುವಷ್ಟರಲ್ಲಿ ಆತನ ಇದಿರಿಗೆ ಭಯಂಕರಳಾದ ರಾಕ್ಷಸಿಯೊಬ್ಬಳು ಕಾಣಿಸಿಕೊಂಡಳು. ಸಿಡಿಲಿನಂತಹ ಗಡಸು ದನಿಯಲ್ಲಿ ಆ ಲಂಕಿಣಿ ಹನುಮಂತನನ್ನು ಗದರಿಸುತ್ತಾ "ಎಲೈ, ಕಾಡುಕಪಿ, ನೀನು ಯಾರು? ಇಲ್ಲಿಗೆ ಏಕೆ ಬಂದೆ? ನಾನು ನಿನ್ನನ್ನು ಸಂಹರಿಸುವುದಕ್ಕೆ ಮುಂಚೆಯೇ ಈ ವಿಚಾರ ವನ್ನಷ್ಟು ಯಥಾರ್ಥವಾಗಿ ತಿಳಿಸಿಬಿಡು" ಎಂದಳು. ವೀರನಾದ ಮಾರುತಿ ಅವಳ ಮಾತುಗಳನ್ನು ಕೇಳಿ ನಗುತ್ತ "ಎಲೈ ವಿಕಾರಸ್ವರೂಪಳೆ, ನನ್ನ ವಿಚಾರವನ್ನು ಕೇಳುವ ಮೊದಲು ನೀನಾರೆಂಬುದನ್ನು ತಿಳಿಸು. ನನ್ನ ಪಾಡಿಗೆ ನಾನು ಪುರಪ್ರವೇಶ ಮಾಡು ತ್ತಿರಲು ನನ್ನನ್ನು ನೀನೇಕೆ ತಡೆಯುತ್ತಿರುವೆ? ಅದನ್ನು ಕೇಳಿ ಆಮೇಲೆ ನನ್ನ ಸಮಾಚಾರವನ್ನು ತಿಳಿಸುತ್ತೇನೆ" ಎಂದನು. ಅವನ ಮಾತುಗಳಿಂದ ಲಂಕಿಣಿಗೆ ಕೋಪ ಕೆರಳಿತು. ಕ್ರೋಧದಿಂದ ಕೆಂಪಾದ ತನ್ನ ಕಣ್ಣುಗಳಿಂದ ಹನುಮಂತನನ್ನು ಸುಟ್ಟು ಬಿಡುವಳೆಂಬಂತೆ ದುರುಗುಟ್ಟಿ ನೋಡುತ್ತಾ "ಎಲವೋ, ವಾನರಾಧಮ, ನಾನಾರೆಂಬು ದನ್ನು ಕೇಳು. ನಾನು ರಾವಣೇಶ್ವರನ ಆಜ್ಞಾಧಾರಕಳು. ಈ ನಗರವನ್ನು ಸಂರಕ್ಷಿಸ ಲೆಂದು ಆತನು ನನ್ನನ್ನು ನೇಮಿಸಿರುವನು. ಈ ಪಟ್ಟಣಕ್ಕೆ ಅಧಿದೇವತೆಯಾದ ಲಂಕಾದೇವಿಯೆ ನಾನು. ನನ್ನನ್ನು ಗೆದ್ದು ಈ ಊರನ್ನು ಪ್ರವೇಶಿಸುವುದು ನಿನ್ನಂತಹ ಹುಲುಗೋಡಗಕ್ಕೆ ಆಗಹೋಗದ ಕೆಲಸ" ಎಂದಳು. ತನ್ನ ಇದಿರಿಗೆ ನಿಂತಿರುವವಳು ಸ್ವತಃ ಲಂಕಾದೇವತೆಯೆಂಬುದನ್ನು ಕೇಳಿದಾಗಲೂ ಹನುಮಂತನ ಧೈರ್ಯ ಕಲಕಲಿಲ್ಲ. ಆತನು ಆಕೆಯನ್ನು ಕುರಿತು "ದೇವಿ, ಸುಂದರವಾದ ಈ ಪಟ್ಟಣವನ್ನು ಕಣ್ತುಂಬ ನೋಡಬೇಕೆಂಬ ಆಸೆ ನನಗೆ. ಒಮ್ಮೆ ಊರನ್ನೆಲ್ಲಾ ಸುತ್ತಿಕೊಂಡು ಬರುತ್ತೇನೆ" ಎಂದನು. ಆದರೆ ಲಂಕಾದೇವಿ ಅದಕ್ಕೆ ಒಪ್ಪಲಿಲ್ಲ. ತನ್ನನ್ನು ಜಯಿಸದೆ ರಾವಣರಕ್ಷಿತ ವಾದ ಆ ಪುರವನ್ನು ಪ್ರವೇಶಿಸುವುದು ಅಸಾಧ್ಯವೆಂದು ಮತ್ತೆ ಆತನಿಗೆ ತಿಳಿಸಿದಳು. ಆದರೂ ಆತನು "ಎಲೆ ಭದ್ರೆ, ನೀನು ನನ್ನಲ್ಲಿ ಸಂಶಯ ಪಡಬೇಡ. ಒಮ್ಮೆ ಊರನ್ನೆಲ್ಲಾ ನೋಡಿದ ಬಳಿಕ ಬಂದಹಾದಿಯಲ್ಲೆ ಹಿಂದಿರುಗಿ ಹೋಗುತ್ತೇನೆ. ಅಷ್ಟು ಅವಕಾಶ ಕೊಟ್ಟರೆ ಸಾಕು" ಎಂದು ಕೇಳಿಕೊಂಡನು. ಆತನ ಮೃದುನುಡಿಗಳು ಲಂಕಾದೇವಿಯನ್ನು ಒಲಿಸಲಾರದೆ ಹೋದುವು. ಆಕೆ ಮತ್ತಷ್ಟು ಕ್ರುದ್ಧಳಾಗಿ ವಿಕಾರವಾಗಿ ಕೂಗುತ್ತಾ ಮಾರುತಿಯ ತಲೆಯ ಮೇಲೆ ತನ್ನ ಮುಷ್ಟಿಯಿಂದ ಬಲವಾಗಿ ಪ್ರಹಾರ ಮಾಡಿದಳು. ಆ ಪೆಟ್ಟು ಬಿದ್ದೊಡನೆಯೆ ಆತನ ಸಮಾಧಾನ ಹಾರಿಹೋಯಿತು. ಎಡಗೈ ಮುಷ್ಟಿ ಯಿಂದ ಒಮ್ಮೆ ಲಂಕಾದೇವಿಯ ನೆತ್ತಿಯಮೇಲೆ ಗುದ್ದಿದನು. ಆ ಪೆಟ್ಟನ್ನು ತರಹರಿಸ ಲಾರದೆ ಆಕೆ ಜರ್ಝರಿತಶರೀರಳಾಗಿ ನೆಲದಮೇಲೆ ಬಿದ್ದಳು. ಆಕೆಯ ಕೆಚ್ಚೆಲ್ಲವೂ ಅಲ್ಲಿಗೆ

ಅಡಗಿಹೋಯಿತು. ಕೋಟೆಯಿಂದ ತಾನು ಸೋತದ್ದರಿಂದ ರಾವಣನ ಅಧೋಗತಿ ಆರಂಭವಾಗುವುದೆಂದು ಹಿಂದೆ ಬ್ರಹ್ಮನು ತನಗೆ ಹೇಳಿದ್ದ ಮಾತು ಈಗ ಆಕೆಗೆ ಜ್ಞಾಪಕಕ್ಕೆ ಬಂದಿತು. ಕೇವಲ ವಿನೀತಭಾವದಿಂದ ಅದನ್ನು ಹನುಮಂತನಿಗೆ ತಿಳಿಸಿ "ಎಲೈ ವಾನರೋತ್ತಮ, ದುರಾತ್ಮನಾದ ರಾವಣನಿಗೂ, ಆತನ ಸಕಲ ಪರಿವಾರಕ್ಕೂ ಮೃತ್ಯು ಹತ್ತಿರವಾಗುತ್ತಾ ಬಂದಿದೆ. ಇಗೋ ಯಥೇಚ್ಛವಾಗಿ ಊರಿನೊಳಕ್ಕೆ



ಕೋಟೆಯಲ್ಲಿ ಕಾಲಿಡಬೇಕೆಂದು ಹೆಜ್ಜೆಯೆತ್ತುವಷ್ಟರಲ್ಲಿ ಆತನ ಇದಿರಿಗೆ
ಭಯಂಕರಳಾದ ರಾಕ್ಷಸಿಯೊಬ್ಬಳು ಕಾಣಿಸಿಕೊಂಡಳು

ಪ್ರವೇಶಮಾಡು. ನೀನು ಯಾವ ಕಾರ್ಯವನ್ನು ಮಾಡಬೇಕೆಂದೆಣಿಸಿರುವೆಯೋ, ಅದನ್ನು ಅಗತ್ಯವಾಗಿ ನಡಸು. ಯಾವ ಅಡಚಣೆಯೂ ಇಲ್ಲದೆ ಎಲ್ಲೆಡೆಗಳಲ್ಲೂ ಸಂಚರಿಸಿ ಪತಿವ್ರತಾಶಿರೋಮಣಿಯಾದ ಜನಕನಂದಿನಿಯನ್ನು ಹುಡುಕುವವನಾಗು" ಎಂದಳು. ವಿಘ್ನ ನಿವಾರಣೆಯಿಂದ ಉತ್ಸಾಹಗೊಂಡ ಹನುಮಂತನು ಕೋಟೆಯ ಗೋಡೆಯನ್ನು ಹಾರಿ ಲಂಕಾಪಟ್ಟಣದ ಒಳಕ್ಕಿಳಿದನು.

---

೩

# ರಾತ್ರಿಯಲ್ಲಿ ಲಂಕಾನಗರ

ಶತ್ರುವಿನ ಹೆಡದಲೆ ಮೆಟ್ಟುವಂತೆ ವೀರ ಮಾರುತಿ ಲಂಕೆಯ ನೆಲದ ಮೇಲೆ ಎಡಗಾಲಿಟ್ಟು ಪುರವನ್ನು ಪ್ರವೇಶಿಸಿದನು. ಭಯಂಕರರಾದ ರಾಕ್ಷಸರು ಕಾವಲು ಕಾಯುತ್ತಿದ್ದ ರಾಜಮಾರ್ಗವನ್ನು ಅನುಸರಿಸಿಯೇ ಆತನು ನಡೆದನು. ಕಾಲಿಟ್ಟರೆ ಎಲ್ಲಿ ಮಾಸುವುದೋ ಎನ್ನುವಂತಿದ್ದ ಆ ರಾಜಮಾರ್ಗದ ಇಕ್ಕೆಲಗಳಲ್ಲಿಯೂ ಗಗನ ಚುಂಬಿತಗಳಾದ ಉಪ್ಪರಿಗೆಯ ಮನೆಗಳಿದ್ದುವು. ಜಗತ್ತಿನ ಐಶ್ವರ್ಯವೆಲ್ಲವೂ ಅಲ್ಲಿಯೇ ನೆಲೆಸಿರುವಂತೆ ನವರತ್ನಗಳಿಂದ ಅಲಂಕೃತವಾಗಿರುವ ಆ ಸೌಧಸೌಧದಿಂದಲೂ, ವಾದ್ಯಧ್ವನಿ ಹೊರಹೊಮ್ಮುತ್ತಿತ್ತು. ಎಲ್ಲಿ ನೋಡಿದರು ನಗುವಿನ ತರಂಗಗಳನ್ನೆಬ್ಬಿಸು ತ್ತಿರುವ ಹೆಣ್ಣು ಗಂಡುಗಳು. ಅಪ್ಸರೆಯರ ಕೋಮಲ ಕಂಠವನ್ನು ನಿಂದಿಸುವ ಕೋಕಿಲ ಗಾನದೊಡನೆ ಅತ್ತಿತ್ತ ಸಂಚರಿಸುತ್ತಿರುವ ನವಯುವತಿಯರ ಕಾಂಚೀ ನಿನಾದವೂ ಕಾಲಂದುಗೆಗಳ ಝಣಝಣತ್ಕಾರವೂ ಸೇರಿ ಮಧುರವಾದ ಸ್ವರಮೇಳನವೊಂದು ಕೇಳಿಬರುತ್ತಿತ್ತು. ಹನುಮಂತನು ಲಂಕೆಯ ಸೌಂದರ್ಯವನ್ನೂ ಜನರ ರಸಿಕತೆ ಯನ್ನೂ ಕಂಡು ಮೆಚ್ಚುತ್ತಾ ಮುಂದೆ ಹೊರಟನು. ಕೆಲವು ಮನೆಗಳಲ್ಲಿ ವೇದಘೋಷ ಕೇಳಿಬರುತ್ತಿದೆ. ಕೆಲವು ಮನೆಗಳಲ್ಲಿ ರಾಜಾಶೀರ್ವಾದ ಕೇಳಿಬರುತ್ತಿದೆ. ರಾಜಮಾರ್ಗ ವನ್ನು ಆವರಿಸಿ ನಿಂತಿರುವ ರಾವಣನ ಮೂಲಬಲ ಒಂದು ಕಡೆ, ಅವರ ಮಧ್ಯದಲ್ಲಿ ಕಾರ್ಯಗೌರವದಿಂದ ಓಡಾಡುತ್ತಿರುವ ಅನೇಕ ರಾಜದೂತರು. ಅವರಲ್ಲಿ ಕೆಲವರಿಗೆ ಒಂದೇ ಕಣ್ಣು ; ಕೆಲವರಿಗೆ ಒಂದೇ ಕಿವಿ ; ಕೆಲವರು ಬೃಹದಾಕಾರಿಗಳು ; ಮತ್ತೆ ಕೆಲವರು ಕೇವಲ ಕುಳ್ಳರು ; ಪ್ರತಿಯೊಬ್ಬರ ಕೈಯಲ್ಲಿಯೂ ಒಂದೊಂದು ಬಗೆಯಾದ ಭಯಂಕರ ವಾದ ಆಯುಧ—ಇವುಗಳನ್ನೆಲ್ಲಾ ನೋಡುತ್ತಾ ಆಂಜನೇಯನು ರಾಜಬೀದಿಯನ್ನು ಹಿಡಿದು ಮುಂದುವರಿಯುತ್ತಿರಲು ರಾಕ್ಷಸೇಶ್ವರನಾದ ರಾವಣನ ಅರಮನೆ ಸಿಕ್ಕಿತು. ಅರಮನೆಯ ಸುತ್ತಲೂ ದೊಡ್ಡ ಪ್ರಾಕಾರ; ಅಲ್ಲಿ ಎಲ್ಲಿ ನೋಡಿದರೂ ರಥಗಳೂ ವಾಹನಗಳೂ ವಿಮಾನಗಳೂ ಆನೆಕುದುರೆಗಳೂ ಕಿಕ್ಕಿರಿದು ತುಂಬಿದ್ದುವು. ಅದರ ಹೊರಬಾಗಿಲು ಬಂಗಾರದಿಂದ ನಿರ್ಮಿತವಾದುದು. ಬಹುಬಲಾಢ್ಯರಾದ ಸಾವಿರಾರು ಮಂದಿ ರಾಕ್ಷಸರು ಆ ಬಾಗಿಲ ಬಳಿ ಬಹು ಎಚ್ಚರಿಕೆಯಿಂದ ಕಾವಲ ಕೆಲಸ ನಡಸು ತ್ತಿದ್ದರು. ಹನುಮಂತನು ಆ ಪ್ರಾಕಾರದೊಳಗೆ ಪ್ರವೇಶಿಸಿದನು.

ಧೀಮಂತನಾದ ಹನುಮಂತನು ರಾವಣನ ಅರಮನೆಯ ಪ್ರಾಕಾರವನ್ನು ಪ್ರವೇಶಿ ಸುವ ಹೊತ್ತಿಗೆ ಮಧ್ಯರಾತ್ರಿಯ ಸಮಯವಾಗಿತ್ತು. ಆ ಹೊತ್ತಿಗೆ ಸರಿಯಾಗಿ ಚಂದ್ರೋ ದಯವಾಯಿತು. ತುರುಮಂದೆಯ ಮಧ್ಯದಲ್ಲಿರುವ ಕೊಬ್ಬಿದ ಗೂಳಿಯಂತೆ ನಕ್ಷತ್ರ

ಮಧ್ಯದಲ್ಲಿ ಹೊಳೆಯುತ್ತಿರುವ ಚಂದ್ರನು ನಾಲ್ಕು ದಿಕ್ಕುಗಳಲ್ಲಿಯೂ ತನ್ನ ತಂಪಾದ ಕಿರಣಗಳನ್ನು ಎರಚಹೊರಟನು. ಸರೋವರದ ಮಧ್ಯದಲ್ಲಿನ ಕಮಲದಂತೆ ಗಗನ ಮಧ್ಯದಲ್ಲಿ ಬೆಳಗುತ್ತಿದ್ದ ಆ ಚಂದ್ರನು ಹನುಮಂತನ ಕಣ್ಣಿಗೆ ರಜತಪಂಜರದಲ್ಲಿ ರಾರಾಜಿಸುವ ರಾಜಹಂಸದಂತೆಯೂ ಮಂದರಪರ್ವತದ ಕಂದರ ಪ್ರಾಂತದಲ್ಲಿ ನಿಂತಿರುವ ಸಿಂಹದಂತೆಯೂ ಮದಗಜದ ಮೇಲೆ ಕುಳಿತಿರುವ ಮಾವಟಿಗನಂತೆಯೂ ಭಾಸವಾದನು. ಸಿಂಹಾಸನವನ್ನೇರಿದ ರಾಜನಂತೆ ಉಲ್ಲಾಸವನ್ನು ಎಲ್ಲೆಡೆಯಲ್ಲಿಯೂ ಬೀರುತ್ತಿರುವ ಚಂದ್ರನನ್ನು ಕಾಣುತ್ತಲೇ ಕತ್ತಲೆ ಎತ್ತಲೋ ಹಾರಿಹೋಯಿತು. ನಾಯಿಕಾನಾಯಕರ ಪ್ರಣಯಕೋಪಗಳು ತೊಲಗಿ ಅವರು ಅನ್ಯೋನ್ಯಾಸಕ್ತರಾದರು. ಪಟ್ಟಣದಲ್ಲಿ ನಾಲ್ಕು ದಿಕ್ಕುಗಳಿಂದಲೂ ವೀಣಾ, ವೇಣು ಮೊದಲಾದ ತಂತೀವಾದ್ಯಗಳು ಕಿವಿಗಿಂಪಾದ ಇಂಚರವನ್ನು ಹೊರಚಲ್ಲತೊಡಗಿದುವು. ಪತಿವ್ರತೆಯರಾದ ಸ್ತ್ರೀಯರು ತಮ್ಮ ಪತಿಗಳ ತೋಳತಲ್ಪದಲ್ಲಿ ಸುಖನಿದ್ರಾಸಕ್ತರಾದರು. ರಾತ್ರಿಂಚರರಾದ ರಾಕ್ಷಸರು ತಮ್ಮ ಕ್ರೂರಕೃತ್ಯಗಳಿಗಾಗಿ ವಿಹರಿಸಲು ಮನೆಯಿಂದ ಹೊರಹೊರಟರು. ಒಂದು ಕಡೆ ಹಾಸ್ಯಪರಿಹಾಸಗಳಲ್ಲಿ ತೊಡಗಿರುವ ಹೆಣ್ಣುಗಳು ; ಮತ್ತೊಂದೆಡೆ ಪರಸ್ಪರ ಆಲಿಂಗನದಲ್ಲಿ ಬಾಹ್ಯಜಗತ್ತನ್ನು ಮರೆತು ಅರ್ಥವಿಲ್ಲದ ಜಲ್ಪಿತದಲ್ಲಿ ಮಗ್ನರಾಗಿರುವ ಕಾಮಾಸಕ್ತರು ; ಇನ್ನೊಂದೆಡೆ ಪಾನದಿಂದ ಮತ್ತೇರಿ ಬಾಯಿಗೆ ಬಂದಂತೆ ಹರಟುತ್ತಲೊ ಅಥವಾ ಒಬ್ಬರನ್ನೊಬ್ಬರು ಬಯ್ದಾಡುತ್ತಲೊ ಇರುವ ಕುಡುಕರ ತಂಡ. ಭುಜದಮೇಲೆ ಪರಸ್ಪರ ತೋಳುಗಳನ್ನು ಬೀಸಿಕೊಂಡು ಓಡಾಡುತ್ತಿರುವ ಕಾಮಿಗಳು ಗಂಧಪುಷ್ಪಾದಿಗಳಿಂದಲಂಕೃತರಾಗಿ ನಗೆಮೊಗದಿಂದ ಉಲ್ಲಾಸವನ್ನು ಹೊರಸೂಸುತ್ತಿರುವ ಪ್ರಣಯಿ ಜನರೂ ಅಲ್ಲಲ್ಲಿ ಕಾಣಬರುತ್ತಿದ್ದರು. ಆ ಊರಿನಲ್ಲಿ ಸತ್ಪುರುಷರಿಗೂ ಕಡಿಮೆಯಿರಲಿಲ್ಲ. ಉತ್ತಮ ರೂಪ, ರೂಪಕ್ಕೆ ತಕ್ಕ ಗುಣ, ಗುಣಕ್ಕೆ ತಕ್ಕ ನಡವಳಿಕೆ—ಇವುಗಳುಳ್ಳ ರಾಕ್ಷಸರನ್ನು ಕಂಡು ಹನುಮಂತನಿಗೆ ಆನಂದವಾಯಿತು.

ಹನುಮಂತನು ಮನೆಯಿಂದ ಮನೆಗೆ ಹೋಗುತ್ತಾ ಸೀತೆಯ ಸಮಾಚಾರವನ್ನು ಸಂಗ್ರಹಿಸುವ ಪ್ರಯತ್ನಕ್ಕೆ ಕೈಹಾಕಿದನು. ಬರಬರುತ್ತಾ ರಾತ್ರಿ ವೇಳೆ ಮೀರಿದುದರಿಂದ ಜನರೆಲ್ಲರೂ ಸಾಮಾನ್ಯವಾಗಿ ನಿದ್ರಾಸಕ್ತರಾಗಿದ್ದರು. ಆದ್ದರಿಂದ ಅವನ ಕೆಲಸಕ್ಕೆ ಎಷ್ಟೋ ಅನುಕೂಲವಾದಂತಾಯಿತು. ಶ್ರೀರಾಮನು ತಿಳುಹಿದ್ದ ಕುರುಹುಗಳೆಲ್ಲವನ್ನೂ ಜ್ಞಾಪ್ತಿಯಲ್ಲಿಟ್ಟುಕೊಂಡು ಮನೆಮನೆಯಲ್ಲಿಯೂ ಸೀತೆಯ ಶೋಧನೆಗೆ ತೊಡಗಿದನು. ಮಂಜುಲ ವಸ್ತ್ರಾಭರಣಗಳಿಂದಲೂ ಸುಂದರ ಲಾವಣ್ಯದಿಂದಲೂ ಬೆಳಗುತ್ತಿದ್ದ ಅನೇಕ ಕಾಮಿನಿಯರು ಆತನ ಕಣ್ಣಿಗೆ ಬಿದ್ದರಾದರೂ ಸೀತೆ ಕಾಣಿಸಲಿಲ್ಲ. ಹೂಗಳಲ್ಲಿ ಓಡಾಡುವ ದುಂಬಿಗಳಂತೆ ಆನಂದಪರವಶರಾಗಿ ಮೈಮರೆತು ಮಲಗಿದ್ದ ಅನೇಕ ಸುರಸುಂದರಿಯರು ಅವನಿಗೆ ಕಾಣಬಂದರು. ಆದರೆ ಅವರಲ್ಲಿ ಒಬ್ಬರೂ ಸೀತೆಯನ್ನು ಹೋಲುತ್ತಿರಲಿಲ್ಲ. ಉಪ್ಪರಿಗೆಯ ಮೇಲೆ ಪತಿಯ ತೊಡೆಯಮೇಲೇರಿ

ಕುಳಿತು ಬೆಳದಿಂಗಳನ್ನು ಹೀರುತ್ತಾ ಆನಂದಿಸುತ್ತಿದ್ದ ಪ್ರಮದೆಯರ ತಂಡದಲ್ಲಿಯೂ ಸೀತೆ ಕಾಣಬರಲಿಲ್ಲ. ರತಿಕೇಳಿಯಿಂದಾಯಾಸಗೊಂಡು, ಸ್ವೈಮರೆತು ಮೇಲು ಹೊದ್ದಿಕೆಯೂ ಇಲ್ಲದೆ ಚಿನ್ನದಂತೆ ಹೊಳೆಯುವ ದೇಹಕಾಂತಿಯನ್ನು ಬೀರುತ್ತಾ ನಿದ್ರಾಮುದ್ರಿತರಾಗಿದ್ದ ಮತ್ತಕಾಶಿನಿಯರ ಸಮೂಹದಲ್ಲಿ ಎಲ್ಲಿಯೂ ಸೀತೆ ಕಾಣ ಬರಲಿಲ್ಲ. ಸಹಸ್ರಾರು ಹೆಣ್ಣುಗಳಲ್ಲಿ ಹುಡುಕಿನೋಡಿದರೂ ಸೀತಾದೇವಿಯ ಸುಳಿವೆ ಇರಲಿಲ್ಲ. ಉತ್ತಮಸ್ತ್ರೀಯರಲ್ಲಿ ಪರಮೋತ್ತಮಳೆಂದು ಪ್ರಸಿದ್ಧಳಾದ ಪತಿವ್ರತಾ ಶಿರೋಮಣಿ ಸೀತಾಮಾತೆ ಕಣ್ಣಿಗೆ ಬೀಳದಿದ್ದುದರಿಂದ ಹನುಮಂತನು ವ್ಯಥೆಗೊಂಡು ಕಿಂಕರ್ತವ್ಯತಾ ಮೂಢನಾಗಿ ಕ್ಷಣಕಾಲ ಸುಮ್ಮನೆ ನಿಂತನು.

---

## ಲಂಕೇಶ್ವರನ ಅಂತಃಪುರ

ಮುಂದೇನು ಮಾಡಬೇಕೆಂದು ಕ್ಷಣಕಾಲ ಯೋಚನೆಯಲ್ಲಿ ಮುಳುಗಿದ್ದ ಹನುಮಂತನು ಮತ್ತೊಮ್ಮೆ ವೇಗವಾಗಿ ಊರನ್ನೆಲ್ಲ ಸುತ್ತಿಕೊಂಡು ಬಂದನು. ಎಲ್ಲಿಯೂ ಆತನ ಅಪೇಕ್ಷೆ ನೆರವೇರಲಿಲ್ಲ. ಆದ್ದರಿಂದ ಮತ್ತೊಮ್ಮೆ ರಾವಣನ ಅರಮನೆಯನ್ನು ಪ್ರವೇಶಿಸಿ, ಆತನ ಅಂತಃಪುರದಲ್ಲಿ ಹುಡುಕಿ ನೋಡಬೇಕೆಂದು ನಿಶ್ಚಯಿಸಿದನು. ಆ ಒಂದೆಡೆಯನ್ನು ಆತನಿನ್ನೂ ಶೋಧಿಸಿರಲಿಲ್ಲ. ಆದ್ದರಿಂದ ಅದೊಂದೆಡೆಯಲ್ಲಿ ಹುಡುಕಿ ತನ್ನ ಸಂದೇಹವನ್ನು ನಿವಾರಣೆ ಮಾಡಿಕೊಳ್ಳಬೇಕೆಂದು ಆತನು ನಿಶ್ಚಯಿಸಿದನು. ಕ್ರೂರರಾದ ರಾಕ್ಷಸರು ಕಾಯುತ್ತಾ ನಿಂತಿದ್ದ ಆ ರಾಕ್ಷಸೇಶ್ವರನ ಅಂತಃಪುರವು ಸಿಂಹಗಳು ಕಾಯುತ್ತಿರುವ ಘೋರಾರಣ್ಯದಂತೆ ಭಾಸವಾಯಿತು ಹನುಮಂತನಿಗೆ. ಆ ದಿವ್ಯ ಭವನದ ಸೌಂದರ್ಯವನ್ನೂ ವೈಭವವನ್ನೂ ಕಂಡು ಆತನಿಗೆ ಆಶ್ಚರ್ಯ ವುಂಟಾಯಿತು. ಚಿನ್ನದ ಚಿತ್ರಕಾರ್ಯಗಳಿಂದ ಕೂಡಿದ ಬೆಳ್ಳಿಯ ಹೊರಬಾಗಿಲುಗಳು! ಚಿತ್ರವಿಚಿತ್ರವಾದ ಒಳತೊಟ್ಟಿಗೆಗಳು! ರತ್ನಖಚಿತವಾದ ಒಳಬಾಗಿಲುಗಳು! ಶಸ್ತ್ರವಿದ್ಯೆಯಲ್ಲಿ ಪರಿಣತರಾದ ಸಹಸ್ರಾರು ಯೋಧರು ಅಲ್ಲಿ ಸದಾ ಕಾವಲಾಗಿರುವರು. ಅಲ್ಲಲ್ಲಿ ಪ್ರಮುಖರಾದ ರಾಜಪುರುಷರು ಆನೆಯ ಮೇಲೆ ಕುಳಿತು ಗಸ್ತು ತಿರುಗುತ್ತಿರುವರು. ಅಲ್ಲಿಯೆ ಸಮೀಪದಲ್ಲಿ ದಂತದಿಂದಲೂ ಬಂಗಾರದಿಂದಲೂ ನಿರ್ಮಿತವಾದ ರಥಗಳು ನಿಂತಿರುವುವು. ಎಲ್ಲಿ ನೋಡಿದರೂ ರಾಜಯೋಗ್ಯವಾದ ಆಸನಗಳು ಅಲಂಕೃತವಾಗಿರುವುವು. ಅಲ್ಲಲ್ಲಿ ಹಕ್ಕಿಗಳಿಂದ ಕೂಡಿದ ನವರತ್ನ ಪಂಜರಗಳು ತೂಗುಗಟ್ಟಿವೆ. ವಿಲಾಸ ವಿಭ್ರಮಗಳಿಂದ ಮೆರೆಯುತ್ತಿರುವ ಸ್ತ್ರೀಯರು ಅತ್ತಿಂದಿತ್ತ ಸಂಚರಿಸುತ್ತಿರಲು ಆಭರಣಗಳ ಧ್ವನಿ ಸಮುದ್ರಘೋಷದಂತೆ ಮೊಳಗುತ್ತಿರುವುದು. ಭೇರಿ, ಮೃದಂಗ, ವೀಣೆಗಳ ಮಂಗಳ ಧ್ವನಿಗಳು ನಾಲ್ಕು ಮೂಲೆಗಳಿಂದಲೂ ಕೇಳಿಬರುತ್ತಿದೆ. ಅಗರು ಚಂದನಾದಿಗಳ ಧೂಪಧೂಮದಿಂದ ಅರಮನೆಯೆಲ್ಲವೂ ಸುವಾಸಿತವಾಗಿದೆ. ಇದನ್ನೆಲ್ಲಾ ಕಂಡ ಮಾರುತಿಯ ಮನಸ್ಸಿನಲ್ಲಿ "ಈ ಅರಮನೆ ಈ ಲಂಕಾಪಟ್ಟಣಕ್ಕೆ ಒಂದು ಆಭರಣ" ಎನ್ನಿಸಿತು.

ಹನುಮಂತನು ಈ ಅರಮನೆಯಲ್ಲಿದ್ದ ಉಪ್ಪರಿಗೆಗಳಲ್ಲಿಯೂ ಉದ್ಯಾನಗಳಲ್ಲಿಯೂ ಸೀತಾದೇವಿಯನ್ನು ಹುಡುಕುತ್ತಾ ಹೊರಟನು. ಪ್ರಹಸ್ತ, ಸುಪಾರ್ಶ್ವ, ಕುಂಭಕರ್ಣ, ವಿಭೀಷಣ, ಮಹೋದರ, ವಿರೂಪಾಕ್ಷ, ವಿದ್ಯುಜ್ಜಿಹ್ವ, ವಿದ್ಯುನ್ಮಾಲಿ, ವಜ್ರದಂಷ್ಟ್ರ, ಶುಕ, ಸಾರಣ, ಇಂದ್ರಜಿತ್ತು, ಜಂಬುಮಾಲಿ—ಇವರೇ ಮೊದಲಾದ ಮಹಾರಾಜ ಪರಿವಾರದವರ ಮನೆಯನ್ನೆಲ್ಲಾ ಶೋಧಿಸಿದುದಾದಮೇಲೆ ಹನುಮಂತನು ರಾವಣನ

ಸ್ವಂತ ಅರಮನೆಯನ್ನು ಪ್ರವೇಶಿಸಿದನು. ಆತನ ಪುಷ್ಪಲತಾ ಮಂದಿರಗಳೂ, ವಿಲಾಸ ಭವನಗಳೂ ಕೃತಕ ಶೈಲಗಳೂ, ಮನ್ಮಥ ಸದನಗಳೂ ಮಾರುತಿಯನ್ನು ಬೆರಗುಗೊಳಿಸಿದುವು. ಎಲ್ಲಿ ನೋಡಿದರೂ ರನ್ನದ ರಾಶಿಗಳು, ನವನಿಧಿಗಳು! ಕುಬೇರನಿಗೂ ಇಂತಹ ಐಶ್ವರ್ಯವಿರದು! ಅಲ್ಲಿಯ ಕ್ರೀಡಾಭವನವಂತೂ ರಾವಣೇಶ್ವರನ ತಪಃಫಲದಂತೆ ಕಂಗೊಳಿಸುತ್ತಿತ್ತು. ಹಂಸತೂಲಿಕಾತಲ್ಪಗಳೂ ಸುಖಾಸನಗಳೂ ಅವುಗಳ ಬಳಿಯಲ್ಲೆ ಇದ್ದ ಪಾನಪಾತ್ರೆಗಳೂ ಆ ಲಂಕೇಶ್ವರನ ರಸಿಕತೆಗೆ ಸಾಕ್ಷಿಯಂತಿದ್ದುವು. ಹನುಮಂತನು ಅವುಗಳನ್ನೆಲ್ಲಾ ನೋಡುತ್ತಾ ತೊಟ್ಟಿಯಿಂದ ತೊಟ್ಟಿಗೆ ಪ್ರವೇಶಿಸುತ್ತಾ ಹೊರಟನು. ಆಯುಧಾಗಾರವನ್ನೂ ಚಂದ್ರಶಾಲೆಯನ್ನೂ ದಾಟಿದ ಮೇಲೆ ರಾವಣನ ಪುಷ್ಪಕ ವಿಮಾನವು ಮಾರುತಿಯ ಕಣ್ಣಿಗೆ ಬಿತ್ತು. ಅದರ ಕೆತ್ತನೆಯ ಕೆಲಸ ಅದ್ಭುತವಾಗಿತ್ತು. ಅದೊಂದು 'ಕಲೆಯ ಬಲೆ'ಯೇ ಸರಿ. ಆ ವಿಮಾನದ ಮೇಲ್ಮೈಯ್ಯಲ್ಲಿ ಪುಷ್ಪಭರಿತಗಳಾದ ಮರಗಳೇನು, ಬೆಳ್ಳಗೆ ಬೆಳಗುತ್ತಿರುವ ದಿವ್ಯ ಭವನಗಳೇನು, ಅರಳಿದ ತಾವರೆಗಳಿಂದ ನಿಬಿಡವಾದ ಸರೋವರಗಳೇನು, ಮನೋಹರವಾದ ಉದ್ಯಾನಗಳೇನು, ಬಗೆ ಬಗೆಯಾದ ಮೃಗಪಕ್ಷಿಗಳೇನು—ಇವುಗಳ ಚಿತ್ರಗಳನ್ನು ಕಣ್ತುಂಬ ನೋಡುತ್ತಾ ಕ್ಷಣಕಾಲ ಅದರ ಮುಂದೆ ನಿಂತುಕೊಂಡನು. ಅದರೊಳಗೆ ಪ್ರವೇಶಿಸಿ, ಅಲ್ಲೆಲ್ಲಾ ಸೀತಾದೇವಿಯನ್ನು ಹುಡುಕಿ ನೋಡಿದನು. ಪೂಜ್ಯಳಾದ ಸೀತಾಮಾತೆ ಅಲ್ಲಿಯೂ ಕಾಣಬರಲಿಲ್ಲ.

ರಾವಣನ ಅರಮನೆಯೆಂದರೆ ಅದೊಂದು ನಗರವಿದ್ದಂತೆ. ಆ ಅರಮನೆಯ ಮಧ್ಯದಲ್ಲಿದ್ದ ವಿಮಾನವೇ ಒಂದು ದೊಡ್ಡ ಮನೆಯಷ್ಟು ವಿಸ್ತಾರವಾಗಿತ್ತು. ಅದನ್ನು ದಾಟಿ ಅತ್ತ ಹೋದರೆ ಮತ್ತೊಂದು ದೊಡ್ಡ ಮಹಲು. ಅದು ಅರ್ಧ ಯೋಜನ ಅಗಲ ಒಂದು ಯೋಜನ ಉದ್ದ ವಿಸ್ತಾರವಾದದ್ದು. ಅದರಲ್ಲಿಯೇ ರಾವಣೇಶ್ವರನ ಪತ್ನಿಯರೂ ಆತನು ಭುಜಬಲದಿಂದ ಅಪಹರಿಸಿ ತಂದಿದ್ದ ರಾಜಕನ್ನಿಕೆಯರೂ ಅಸಂಖ್ಯಾತವಾಗಿ ತುಂಬಿದ್ದರು. ಆ ಸ್ತ್ರೀಯರೆಲ್ಲರೂ ರಾತ್ರಿ ಬಹಳ ಹೊತ್ತಿನವರೆಗೂ ಕ್ರೀಡಿಸುತ್ತಿದ್ದು ಅರ್ಧ ರಾತ್ರಿಯಾದ ಮೇಲೆ ನಿದ್ರೆಯಿಂದಲೂ ಪಾನಮದದಿಂದಲೂ ಮೈಮರೆತು ಮಲಗಿದ್ದರು. ರಂಗುರಂಗಾದ ವಸ್ತ್ರಗಳನ್ನು ಧರಿಸಿ ಪುಷ್ಪಮಾಲಿಕೆಗಳಿಂದಲೂ ವಿವಿಧಾಭರಣಗಳಿಂದಲೂ ಭೂಷಿತೆಯರಾಗಿ ರತ್ನಗಂಬಳಿಯ ಮೇಲೆ ಮೌನದಿಂದ ಮಲಗಿದ್ದ ಅವರನ್ನು ನೋಡಿದರೆ ನಿಶ್ಶಬ್ದವಾಗಿ ನಿದ್ರಿಸುತ್ತಿರುವ ಹಂಸ ಭ್ರಮರಗಳಿಂದ ಕೂಡಿದ ಕಮಲವನದಂತೆ ಕಾಣುತ್ತಿತ್ತು. ಸೂರ್ಯೋದಯವಾದೊಡನೆಯೆ ಅರಳಿ ಸೂರ್ಯಾಸ್ತದೊಡನೆ ಮೊಗ್ಗಾಗುವ ಕಮಲಗಳಂತೆ ಕಳಕಳಿಸುತ್ತಿದ್ದ ಆ ಕಮಲಮುಖಿಯರು ಕಣ್ಣುಮುಚ್ಚಿ ತಮ್ಮ ನಿಶ್ವಾಸದೊಡನೆ ಸುಗಂಧವನ್ನು ಹೊರಚಲ್ಲುತ್ತಾ ಮಲಗಿದ್ದರು. ಅವರ ಮಧ್ಯದಲ್ಲಿ ಹಂಸತೂಲಿಕಾತಲ್ಪದಲ್ಲಿ ಮಲಗಿದ್ದ ಲಂಕಾಧಿಪತಿಯು ನಕ್ಷತ್ರಮಧ್ಯದಲ್ಲಿ ಇರುವ ಚಂದ್ರನಂತೆ ಕಂಗೊಳಿಸುತ್ತಿದ್ದನು. ನಿಜವಾಗಿಯೂ ಅವರು ಪುಣ್ಯಶೇಷದಿಂದ ಸ್ತ್ರೀರೂಪವನ್ನು ಧರಿಸಿದ್ದ ನಕ್ಷತ್ರಗಳೇ

ಹನುಮಂತನು ಭಾವಿಸಿದನು. ಅಷ್ಟು ಕಾಂತಿ ಲಾವಣ್ಯಗಳಿಂದ ಬೆಳಗುತ್ತಿದ್ದರು, ಆ ಕಾಂತೆಯರು. ಮಧುಪಾನಮಾಡಿ ರತಿಕ್ರೀಡೆಯಲ್ಲಿ ತೊಡಗಿದಾಗ ಪುಷ್ಪಹಾರಗಳೂ ಆಭರಣಗಳೂ ಸಡಿಲಿಹೋಗಿರಲು, ಅವುಗಳನ್ನು ನೇವರಿಸಿಕೊಳ್ಳದೆ ಹಾಗೆಯೇ ಅವರು ನಿದ್ರಾಸಕ್ತರಾಗಿದ್ದರು. ಕೆಲವರಿಗೆ ತಿಲಕ ಅರ್ಧ ಅಳಿಸಿ ಹೋಗಿದೆ; ಕೆಲವರ ಕಾಲಂದುಗೆ ಜಾರಿಹೋಗಿದೆ; ಕೆಲವರ ಕಂಠಹಾರಗಳು ಜಾರಿಬಿದ್ದಿವೆ; ಕೆಲವರ ಉಟ್ಟಬಟ್ಟೆಯೇ ಸಡಿಲಿಹೋಗಿದೆ; ಮತ್ತೆ ಕೆಲವರಿಗೆ ಒಡ್ಯಾಣ ಕಿತ್ತುಹೋಗಿದೆ. ಹೂವರಳಿದ ಬಳ್ಳಿಗಳನ್ನು ಕಾಡಾನೆ ಕಿತ್ತೆಸದಂತೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಪ್ರಮದೆಯರು ಒಂದು ಕಡೆ; ನಿದ್ರಾವಸ್ಥೆಯಲ್ಲಿಯೂ ಶೃಂಗಾರ ಚೇಷ್ಟೆಗಳಲ್ಲಿ ತೊಡಗಿರುವ ಕಾಮಿನಿಯರು ಮತ್ತೊಂದು ಕಡೆ. ಅಲ್ಲೊಬ್ಬ ಪ್ರೌಢೆಯ ಸೆರಗು ಅವಳ ಉಸಿರಿನ ಗಾಳಿಯಿಂದ ಹೇಗೆ ಬಾರಿಬಾರಿಗೂ ಮೇಲೆದ್ದು ಕುಣಿಯುತ್ತಿದೆ! ಬಣ್ಣದ ಧ್ವಜಪಟವೊಂದು ಗಾಳಿಯಿಂದ ಹರಿದಾಡುತ್ತಿರುವಂತೆ ಅದು ಕಾಣುತ್ತಿದೆ! ಇತ್ತಕಡೆ ಒಬ್ಬಳು ತರುಣಿ ಪಕ್ಕದಲ್ಲಿರುವ ತನ್ನ ಸವತಿಯನ್ನೇ ರಾವಣನೆಂದು ಭ್ರಮಿಸಿ ಅವಳ ಮುಖಕ್ಕೆ ಮುತ್ತಿಡುತ್ತಿದ್ದಾಳೆ! ಮದ್ಯಪಾನದಿಂದ ಮೈಮರೆತು ಬಿದ್ದಿದ್ದ ಅವಳು ತನ್ನ ಗಂಡನೇ ಮುದ್ದಿಸುತ್ತಿರುವನೆಂದು ಮೋಹಗೊಂಡು ಪ್ರತಿಚುಂಬನದಿಂದ ಆ ಸವತಿಯನ್ನು ಸಂತೋಷಪಡಿಸುತ್ತಿದ್ದಾಳೆ. ಒಬ್ಬಳು ತೋಳನ್ನೇ ತಲೆಗಿಂಬಾಗಿ ಮಾಡಿಕೊಂಡಿದ್ದರೆ ಮತ್ತೊಬ್ಬಳು ಉಟ್ಟಬಟ್ಟೆಯನ್ನೇ ಸುತ್ತಿ ತಲೆಗಿಂಬಾಗಿ ಉಪಯೋಗಿಸಿದ್ದಾಳೆ. ಒಬ್ಬಳ ಭುಜದ ಮೇಲೆ ಮತ್ತೊಬ್ಬಳು; ಅವಳ ಭುಜದಮೇಲೆ ಮತ್ತೊಬ್ಬಳು; ಅವಳ ತೊಡೆಯಮೇಲೆ ಇನ್ನೊಬ್ಬಳು; ಅವಳ ತೋಳಿನಮೇಲೆ ಮಗುದೊಬ್ಬಳು. ಸಾಲಾಗಿ ಪೋಣಿಸಿರುವ ಪುಷ್ಪಮಾಲೆಗಳಂತೆ ಆ ಸ್ತ್ರೀಸಮೂಹ ಕಾಣುತ್ತಿರಲು ಆ ಅಂತಃಪುರವೊಂದು ಹೂಬಳ್ಳಿಯ ತೋಟದಂತೆ ಬೆಳಗುತ್ತಿದ್ದಿತು.

ಹನುಮಂತನು ಈ ಸ್ತ್ರೀ ಸದಸ್ಸನ್ನು ಕಂಡು ನಿಟ್ಟುಸಿರಿಟ್ಟನು. "ಈ ರಮಣಿಯರು ರಾವಣನೊಡನೆ ಸುಖವಾಗಿರುವಂತೆ ಸೀತಾಮಾತೆಯೂ ಶ್ರೀರಾಮನೊಡನೆ ಸುಖದಿಂದಿದ್ದರೆ ಎಷ್ಟು ಚೆನ್ನಾಗಿತ್ತು! ಆಕೆಯನ್ನು ಶ್ರೀರಾಮನಿಗೆ ಅರ್ಪಿಸಿದರೆ ರಾವಣನ ಬದುಕೂ ಎಷ್ಟೋ ಶ್ರೇಯಸ್ಕರವಾಗುವುದಿಲ್ಲವೆ? ಅಯ್ಯೋ, ಈ ಮಹಾವೈಭವಗಳಿಂದ ಕೂಡಿದ ಈ ಶೂರ ರಾವಣನು ಸೀತಾದೇವಿಯನ್ನು ಕದ್ದು ತಂದು ಎಂತಹ ಅನರ್ಥಕ್ಕೆ ಕಾರಣವಾದನು! ಇದು ಏನು ವಿನಾಶಕಾಲ ಇವನಿಗೆ!" ಎಂದು ಮನಸ್ಸಿನಲ್ಲಿಯೇ ಮಿಡುಕಿಕೊಂಡನು.

ಹನುಮಂತನು ಅಲ್ಲಿದ್ದ ಹೆಣ್ಣುಗಳನ್ನು ಒಬ್ಬೊಬ್ಬರನ್ನಾಗಿ ಪರೀಕ್ಷಿಸಿ ನೋಡುತ್ತಾ ಹೊರಟನು. ಅವರಲ್ಲಿ ಒಬ್ಬರೂ ಸೀತೆಯನ್ನು ಹೋಲುವಂತಿಲ್ಲ. ಮುಂದುವರಿದು ಹಾಗೆಯೇ ಮುಂದಕ್ಕೆ ಬರಲು ಅಲ್ಲಿ ರಾವಣನ ಶಯನ ವೇದಿಕೆ ಕಾಣಬಂದಿತು. ಅದನ್ನು ಸ್ಫಟಿಕ ಶಿಲೆಯಿಂದ ನಿರ್ಮಿಸಿತ್ತು. ಅದರ ಸುತ್ತಲೂ ಅಂಚಿನಲ್ಲಿ ಚಿತ್ರಕಲೆಯಿಂದ ತುಂಬಿಹೋದ ದಂತದ ಕಟ್ಟುಗಳು. ಅದರ ಮೇಲಿದ್ದ ಹಲಗೆ ವೈಡೂರ್ಯ

ನಿರ್ಮಿತವಾದುದು. ಅದರ ಮೇಲೆ ಅಮೂಲ್ಯವಾದ ರತ್ನಗಂಬಳಿಗಳೊಡನೆ ಕೂಡಿದ ಹಂಸತೂಲಿಕಾತಲ್ಪ. ಆ ವೇದಿಕೆಯ ಅಗ್ರಭಾಗದಲ್ಲಿ ಪುಷ್ಪಮಾಲಿಕೆಗಳಿಂದ ಅಲಂಕೃತ ವಾಗಿ ಚಂದ್ರಬಿಂಬದಂತೆ ಬೆಳ್ಳಗೆ ಬೆಳಗುತ್ತಿರುವ ಶ್ವೇತಚ್ಛತ್ರವೊಂದು ಎತ್ತಿಕಟ್ಟಿದೆ. ಅದರ ಸಮೀಪದಲ್ಲಿಯೆ ಕೈಲಿ ಚಾಮರಗಳನ್ನು ಹಿಡಿದು ಬೀಸುತ್ತಿರುವ ಕೀಲುಗೊಂಬೆ ಗಳು. ಪಾರಿಜಾತಾದಿ ಪುಷ್ಪಗಳಿಂದ ಆ ಪರ್ಯಂಕವನ್ನು ಅಲಂಕರಿಸಿತ್ತು. ಆ ಮನೋ ಹರವಾದ ಪರ್ಯಂಕದ ಮೇಲೆ ಕಾರ್ಮುಗಿಲಿನಂತೆ ದೀರ್ಘಕಾಯನಾದ ಲಂಕೇಶ್ವರನು ಮಲಗಿದ್ದನು. ಆತನ ಕಿವಿಯಲ್ಲಿದ್ದ ಕರ್ಣಕುಂಡಲಗಳು ಥಳಥಳ ಹೊಳೆಯುತ್ತಿದ್ದುವು. ಸುವರ್ಣವಸ್ತ್ರವನ್ನು ಧರಿಸಿ ಗಂಧಪುಷ್ಪಾದಿಗಳಿಂದ ಅಲಂಕೃತನಾಗಿದ್ದ ಆತನನ್ನು ನೋಡಿದರೆ ಮಿಂಚಿನೊಡಗೂಡಿ ಸಂಜೆಗೆಂಪಿನಿಂದ ಹೊಳೆಯುವ ಮುಗಿಲಿನಂತೆ ಕಾಣಬರು ತ್ತಿದ್ದನು. ದಿವ್ಯಾಭರಣಗಳಿಂದ ಭೂಷಿತನಾದ ಆ ಆಜಾನುಬಾಹುವನ್ನು ಕಂಡು ಹನು ಮಂತನಿಗೆ ಮೆಚ್ಚಿಗೆಯಾಗುವುದಕ್ಕೆ ಬದಲಾಗಿ "ಇವನು ಸೀತಾಪಹರಣ ಮಾಡಿದ ಮಹಾಪಾಪಿ" ಎಂಬ ಭಾವನೆ ಮನಸ್ಸಿನಲ್ಲಿ ಸುಳಿದು, ಪಿಶಾಚವನ್ನು ಕಂಡವನು ಹಿಮ್ಮೆಟ್ಟುವಂತೆ ಆತನು ಸ್ವಲ್ಪ ಹಿಂದಕ್ಕೆ ಸರಿದನು. ಆದರೂ ಆ ಪರ್ಯಂಕವನ್ನು ಹತ್ತಿ ಅವನ ಪಾದಮೂಲದಲ್ಲಿ ಮಲಗಿದ್ದ ಅವನ ಪ್ರಿಯ ಪತ್ನಿಯರೆಲ್ಲಾ ಪರೀಕ್ಷಿಸಿ ನೋಡಿದನು. ಆ ಪ್ರಮದೆಯರು ಮಲಗುವ ಮುನ್ನ ನುಡಿಸುತ್ತಿದ್ದ ವಾದ್ಯವಿಶೇಷಗಳು ಅವರ ಬಳಿಯಲ್ಲಿಯೇ ಬಿದ್ದಿದ್ದುವು. ರಮಣಿಯೊಬ್ಬಳು ವೀಣೆಯನ್ನು ಹಾಗೆಯೇ ಅಪ್ಪಿ ಕೊಂಡು ಮಲಗಿರಲು ತಾವರೆಯ ಬಳ್ಳಿಯೊಂದು ತೆಪ್ಪವನ್ನು ಆಶ್ರಯಿಸುವಂತೆ ಕಾಣು ತ್ತಿತ್ತು. ಮತ್ತೊಬ್ಬಳು ಮನೋಹರಿ ತಮಟೆಯನ್ನಪ್ಪಿ ಮಲಗಿರಲು ಬಹುಕಾಲದಿಂದ ಅಗಲಿಬಂದ ಪ್ರಿಯನನ್ನು ಅಪ್ಪಿದವಳಂತೆ ಕಾಣುತ್ತಿದ್ದಳು. ಹಾಗೆಯೆ ಮದ್ದಲೆಯನ್ನಪ್ಪಿ ಮಲಗಿರುವವಳು, ಕೊಳಲನ್ನು ಕಟ್ಟಿಕೊಂಡು ಮಲಗಿರುವವಳು—ಆಂಜನೇಯನು ಒಬ್ಬರಾದಮೇಲೊಬ್ಬರಂತೆ ಇವರನ್ನೆಲ್ಲಾ ಪರೀಕ್ಷಿಸುತ್ತಾ ಮುಂದೆ ಬರಲು ಅಲ್ಲಿಯೆ ಪ್ರತ್ಯೇಕವಾದ ಒಂದು ಹಾಸಿಗೆಯ ಮೇಲೆ ಏಕಾಂತ ಸ್ಥಳದಲ್ಲಿ ಮಲಗಿದ್ದ ದಿವ್ಯಸುಂದರ ಸ್ತ್ರೀಯೊಬ್ಬಳನ್ನು ಕಂಡನು. ಆಕೆಯ ಸರ್ವ ಅವಯವಗಳೂ ಮುಕ್ತಾಭರಣಗಳಿಂದ ಅಲಂಕೃತವಾಗಿದ್ದುವು. ಸುವರ್ಣ ಕಾಂತಿಯಿಂದ ಹೊಳೆಯುತ್ತಿರುವ ಆಕೆಯ ದೇಹ ಕಾಂತಿಯಿಂದ ಆ ಸದಸ್ಸೆಲ್ಲವೂ ಕಾಂತಿಯುಕ್ತವಾಗುತ್ತಿರುವಂತೆ ಕಾಣಿಸುತ್ತಿತ್ತು. ಸೌಂದರ್ಯಾಧಿ ದೇವತೆಯಂತೆ ಕಾಣುತ್ತಿದ್ದ ಆಕೆಯನ್ನು ಕಂಡು ಹನುಮಂತನಿಗೆ ಆಕೆಯೇ ಸೀತಾಮಾತೆಯಿರಬೇಕೆನ್ನಿಸಿತು. ಆತನು ಅಮಿತಾನಂದದಿಂದ ತನ್ನ ಬಾಲ ವನ್ನು ಒಮ್ಮೆ ಮುತ್ತಿಟ್ಟುಕೊಂಡು ಕುಣಿದಾಡಿಬಿಟ್ಟನು.

ಈ ಬಗೆಯಾದ ಸೀತೆಯೆಂಬ ಭ್ರಾಂತಿಯನ್ನು ಹುಟ್ಟಿಸಿದ ದಿವ್ಯ ಸುಂದರಿ ರಾವಣನ ಪ್ರಾಣಪ್ರಿಯೆಯಾದ ಮಂಡೋದರಿ. ಹನುಮಂತನಿಗೆ ಹುಟ್ಟಿದ ಭ್ರಾಂತಿ ಯಾದರೂ ಕ್ಷಣಿಕವಾದುದು. ಮರುಕ್ಷಣದಲ್ಲಿಯೆ ಆತನು ತನ್ನ ಅವಿವೇಕಕ್ಕಾಗಿ ಸಂತಾಪಗೊಂಡನು. "ಮಹಾ ಪತಿವ್ರತೆಯಾದ ಸೀತಾಮಾತೆಯೆಲ್ಲಿ, ಈ ಕ್ಷುದ್ರಳಾದ

ಹೆಣ್ಣೆಲ್ಲಿ? ರಾಮನನ್ನು ಅಗಲಿರುವ ಆ ಸತೀಮಾತೆಗೆ ನಿದ್ರೆಯೆಂದರೇನು? ಅಲಂಕಾರವೆಂದರೇನು? ಮದ್ಯಪಾನದಿಂದ ಮತ್ತೇರಿ ಮಲಗಿರುವ ಈ ಹೆಣ್ಣನ್ನು ಸೀತೆಯೆಂದು ಯೋಚಿಸಿದುದು ಮಹಾಪಾತಕ. ರಾಮನ ಸುಂದರಾಕಾರವನ್ನು ಕಂಡ ಹೆಣ್ಣು ಬೇರೊಬ್ಬನನ್ನು ಮೋಹಿಸಿಯಾಳೆ? ಇವಳೆಂದಿಗೂ ಸೀತೆಯಲ್ಲ" ಎಂದು ನಿಶ್ಚಯಿಸಿಕೊಂಡನು. ಅಲ್ಲಿದ್ದವರನ್ನೆಲ್ಲಾ ಮತ್ತೊಮ್ಮೆ ಎಚ್ಚರದಿಂದ ಪರೀಕ್ಷಿಸಿ, ಅಲ್ಲೆಲ್ಲಿಯೂ ಸೀತೆಯಿಲ್ಲವೆಂದು ನಿಶ್ಚಯವಾದ ಮೇಲೆ ಅಲ್ಲಿಂದ ಹೊರಕ್ಕೆ ಹೊರಟನು.

ಶಯನ ಗೃಹಕ್ಕೆ ಸಮೀಪದಲ್ಲಿಯೆ ರಾವಣನ ಪಾನಗೃಹವಿತ್ತು. ಹನುಮಂತನು ಪ್ರವೇಶಿಸಿ ಸೀತೆಯನ್ನು ಹುಡುಕ ಹೊರಟನು. ಅಲ್ಲಿಯೂ ಕೆಲವರು ಸ್ತ್ರೀಯರು ಮಲಗಿದ್ದರು. ಅವರಲ್ಲಿ ಮನ್ಮಥ ಕ್ರೀಡೆಯಿಂದ ಬಳಲಿ ಮಲಗಿರುವವರು ಕೆಲವರು; ಮದ್ಯಪಾನದಿಂದ ಮತ್ತರಾಗಿ ಮೈಮರೆತು ಮಲಗಿರುವವರು ಕೆಲವರು; ನರ್ತನದಿಂದಲೋ ಸಂಗೀತದಿಂದಲೋ ಶ್ರಾಂತರಾಗಿ ಮಲಗಿರುವವರು ಕೆಲವರು; ಸಂಗೀತ ಸಾಧನಗಳನ್ನೇ ತಲೆದಿಂಬಾಗಿಟ್ಟುಕೊಂಡು ಮಲಗಿರುವವರು ಕೆಲವರು. ಅವರಾರೂ ಸೀತೆಯನ್ನು ಹೋಲುವಂತಿರಲಿಲ್ಲ. ಹನುಮಂತನು ಮತ್ತೊಮ್ಮೆ ರಾವಣನ ಶಯನ ಗೃಹಕ್ಕೆ ಹೋಗಿ ಗೂಳಿಯ ಸುತ್ತಲೂ ಮಲಗಿರುವ ಗೋವುಗಳಂತಿದ್ದ ಅಲ್ಲಿನ ಹೆಣ್ಣುಗಳ ಮಧ್ಯೆ ಅರಸಿದನು; ಪುನಃ ಮತ್ತೊಮ್ಮೆ ಪಾನಭೂಮಿಯನ್ನು ಪ್ರವೇಶಿಸಿ ಅಲ್ಲಿದ್ದ ಬಗೆಬಗೆಯಾದ ಮಾಂಸಗಳ ರಾಶಿಯನ್ನೂ ಭಕ್ಷ್ಯಭೋಜ್ಯಗಳಿಂದ ತುಂಬಿದ ಭಾಂಡಗಳನ್ನೂ ರತ್ನಖಚಿತವಾದ ಸುವರ್ಣ ಪಾನಪಾತ್ರೆಗಳನ್ನೂ ಅಮೂಲ್ಯಮದ್ಯಗಳಿಂದ ಕೂಡಿ ಸಾಲಾಗಿರಿಸಿದ್ದ ಸುವರ್ಣ ಕುಂಭಗಳನ್ನೂ ಕಂಡನೇ ಹೊರತು ಸೀತೆಯನ್ನು ಬೇರೆ ಕಾಣಲಿಲ್ಲ. ನಾನಾವರ್ಣದ ನಾನಾಜಾತಿಯ ನಾನಾರೂಪಿನ ಹೆಣ್ಣುಗಳು ಅಲ್ಲಿ ಅಸ್ತವ್ಯಸ್ತವಾಗಿ ಮಲಗಿದ್ದರು. ಅವರನ್ನು ಆ ಸ್ಥಿತಿಯಲ್ಲಿ ನೋಡುವುದೇ ಪಾಪಕರವೆನ್ನಿಸಿತು ಆತನಿಗೆ. ಪರಪುರುಷರ ಪ್ರವೇಶಕ್ಕೆ ಆಸ್ಪದವಿಲ್ಲವೆಂದು ಅರಿತೇ ಆ ಸ್ತ್ರೀಯರು ನಿರ್ಲಜ್ಜರಾಗಿ ಮೈಮರೆತು ಮಲಗಿದ್ದರು. ಆ ಸ್ಥಿತಿಯಲ್ಲಿ ಅವರನ್ನು ನೋಡುವುದು ಪರಮಪಾತಕವೆನ್ನಿಸಿತು ಆ ಪಾಪಭೀರುವಿಗೆ. ಕ್ಷಣಕಾಲ ಈ ಭಾವನೆಯಿಂದ ಆತನು ಮನಸ್ಸಿನಲ್ಲಿಯೆ ಕೊರಗಿ ಮರುಗಿದನು. ಆದರೆ ತಾನು ಬಂದ ಕಾರ್ಯಕ್ಕೆ ತಾನು ಆಚರಿಸಿದಂತೆ ಆಚರಿಸದ ಹೊರತೂ ಗತ್ಯಂತರವಿಲ್ಲ. ಆದ್ದರಿಂದ ತನ್ನಲ್ಲಿಯೆ ತಾನು ಹೀಗೆಂದು ಸಮಾಧಾನ ತಂದುಕೊಂಡನು: "ನಗ್ನಸ್ತ್ರೀಯರನ್ನು ಕಂಡರೂ ನನ್ನ ಮನಸ್ಸು ವಿಕಾರಗೊಳ್ಳದು. ಸಮಸ್ತ ಇಂದ್ರಿಯಗಳ ಪ್ರವರ್ತನೆಗೂ ಕಾರಣವಾದ ಮನಸ್ಸು ಸ್ವಾಧೀನದಲ್ಲಿರುವಾಗ ದೋಷಕ್ಕೆ ಅವಕಾಶವೆಲ್ಲಿಯದು? ಸೀತಾದೇವಿಯನ್ನು ಹೆಂಗಸರ ಮಧ್ಯದಲ್ಲಿ ಅಲ್ಲದೆ ಬೇರೆಲ್ಲಿ ಹುಡುಕುವುದು?

---

೫

## ಹನುಮಂತನ ಚಿಂತೆ

ಎಲ್ಲೆಲ್ಲಿ ಹುಡುಕಿದರೂ ಸೀತಾಮಾತೆ ಕಾಣಬರದಿದ್ದುದರಿಂದ ಹನುಮಂತನು ಅತ್ಯಂತ ಚಿಂತಾಕ್ರಾಂತನಾದನು. "ಆಕೆ ಆತ್ಮಹತ್ಯೆ ಮಾಡಿಕೊಂಡಿರುಬಹುದೆ ? ಅಥವಾ ತನ್ನ ಇಷ್ಟಕ್ಕೆ ಒಳಗಾಗದ ಆ ಪತಿವ್ರತಾಶಿರೋಮಣಿಯನ್ನು ರಾವಣನೇ ಕೊಂದುಹಾಕಿರ ಬಹುದೆ ? ಕರಾಳಾಕೃತಿಯ ರಾಕ್ಷಸ ಸ್ತ್ರೀಯರನ್ನು ಕಂಡು ಭಯದಿಂದ ಆಕೆ ಮೃತಿ ಹೊಂದಿದ್ದರೂ ಹೊಂದಿರಬಹುದು. ಇನ್ನು ಆಕೆಯನ್ನು ಕಾಣದೆ ನಾನು ಹಿಂದಿರುಗಿ ಸುಗ್ರೀವನಿಗೆ ಮುಖತೋರಿಸುವುದು ಹೇಗೆ ? ನೂರು ಗಾವುದದ ಸಮುದ್ರವನ್ನು ಹಾರಿಬಂದ ನನ್ನ ಶ್ರಮವೆಲ್ಲವೂ ವ್ಯರ್ಥವಾಯಿತಲ್ಲಾ ! ಅಯ್ಯೋ ದುರ್ವಿಧಿ ! ನಾನು ಇಲ್ಲಿ ವ್ಯರ್ಥವಾಗಿ ಕಾಲಕ್ಷೇಪಮಾಡುತ್ತಾ ಕುಳಿತರೆ ಸಮುದ್ರತೀರದಲ್ಲಿ ನನಗಾಗಿ ಕಾಯುತ್ತ ಕುಳಿತಿರುವ ಅಂಗದಾದಿಗಳು ಏನು ಮಾಡಬೇಕು ? ಅವಧಿ ಮೀರಿದರೆ ಅವರೆಲ್ಲ ಪ್ರಾಯೋಪವೇಶ ಮಾಡುವರಲ್ಲ !" ಹೀಗೆಯೇ ಬಹುಕಾಲ ಚಿಂತೆಮಾಡುತ್ತ ಕುಳಿತಿದ್ದ ಹನುಮಂತನು ತನ್ನ ನಿರುತ್ಸಾಹವನ್ನು ಕೊಡಹಿ ಮೇಲಕ್ಕೆದ್ದನು. "ಉತ್ಸಾಹವೇ ಸಮಸ್ತ ಸಂಪತ್ತಿಗೂ ಮೂಲ. ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆಳೆಯದೆ ಮುನ್ನುಗ್ಗಿ ಕೆಲಸಮಾಡುವುದೀಗ ಧೀರನ ಲಕ್ಷಣ" ಎಂದುಕೊಂಡು ಮತ್ತೊಮ್ಮೆ ರಾವಣನ ಅಂತಃ ಪುರವನ್ನೆಲ್ಲಾ ಒಂದು ಅಂಗುಲ ಪ್ರಮಾಣದಷ್ಟೂ ಸ್ಥಳವನ್ನು ಬಿಡದೆ ಹುಡುಕಿನೋಡಿ ದನು. ಕುರೂಪಿಗಳೂ ಕರಾಳವದನೆಯರೂ ಆದ ರಾಕ್ಷಸಿಯರು ಕಾಣಿಸಿದಂತೆ ಸುರೂಪೆ ಯರಾದ ವಿದ್ಯಾಧರಿಯರೂ ಚಂದ್ರಮುಖಿಯರಾದ ನಾಗಕನ್ಯೆಯರೂ ಅಸಂಖ್ಯಾತ ರಾಗಿ ಕಾಣಬಂದರಾದರೂ ಅವರಲ್ಲಿ ಒಬ್ಬರಾದರೂ ಸೀತೆಯಾಗಿರಲಿಲ್ಲ. ಮುಗಿಲಿಂದ ಮುಗಿಲಿಗೆ ನೆಗೆವ ಮಿಂಚುಬಳ್ಳಿಯಂತೆ ಆತನು ಉಪ್ಪರಿಗೆಯಿಂದ ಉಪ್ಪರಿಗೆಗೆ ಹಾರಿಹಾರಿ ಮನೆಮನೆಗಳಲ್ಲಿ ಶೋಧಿಸಿದರೂ ರಾಮಪತ್ನಿಯಾದ ಸೀತೆಯ ಸುಳಿವೇ ಇರಲಿಲ್ಲ. ಹನು ಮಂತನ ತಲೆಯಲ್ಲಿ ಆಲೋಚನಾ ತರಂಗಗಳು ಏಳಲಾರಂಭಿಸಿದುವು. "ರಾಜಕುಮಾರಿ ಯೇನಾದರೂ ಸದ್ವರ್ತನೆಯನ್ನು ಗಾಳಿಗೆ ತೂರಿ ರಾವಣನ ಪ್ರೇಮವನ್ನು ಅಂಗೀಕರಿಸಿರ ಬಹುದೆ ? 'ಶಾಂತಂ ಪಾಪಂ ! ಶಾಂತಂ ಪಾಪಂ !' ಎಂತಹ ದುರ್ಭಾವನೆ ಮನಸ್ಸಿನಲ್ಲಿ ಸುಳಿಯಿತು ? ಹಾಗೆಂದಿಗೂ ನಡೆಯಲಾರದು. ಸಾಗರದ ಮೇಲೆ ಬರುತ್ತಿರುವಾಗ ಆಕೆ ಸಾಗರದಲ್ಲಿ ಬಿದ್ದುಹೋಗಿರಬಹುದು. ಅಥವಾ ಆ ರಾಕ್ಷಸನ ಬಾಹುಪೀಡನ ದಿಂದ ಆ ಕೋಮಲಾಂಗಿಯ ಪ್ರಾಣವಾಯು ಹಾರಿಹೋಗಿರಬಹುದು. ಈ ರಾವಣನೋ ಅಥವಾ ಅವನ ಸ್ತ್ರೀಯರಲ್ಲಿ ಯಾರಾದರೂ ಆ ಕೋಮಲೆಯನ್ನು ಭಕ್ಷಿಸಿರುವುದೂ ಸಾಧ್ಯ. ಇರಬೇಕಿರಬೇಕು. ಹಾಗೆಯೇ ಮೃತಿಹೊಂದಿರಬೇಕು. ಪಾಪ, ಸಾಯುವ

ಮುನ್ನ 'ಹಾ ರಾಮಾ! ಹಾ ಲಕ್ಷ್ಮಣಾ!' ಎಂದು ಎಷ್ಟು ಹಂಬಲಿಸುತ್ತ ಪ್ರಾಣ ಬಿಟ್ಟಳೊ! ಹಾಗಲ್ಲದೆ ಆಕೆ ರಾವಣನ ಅರಮನೆಯಲ್ಲಿಯೇ ರಹಸ್ಯವಾದ ಯಾವುದಾದ ರೊಂದು ಸ್ಥಳದಲ್ಲಿ ಪಂಜರಸ್ಥವಾದ ಗಿಳಿಯಂತೆ ಬಂಧಿತಳಾಗಿ ರೋಧಿಸುತ್ತಿರುವಳೋ ಏನೋ! ಅದು ಸಾಧ್ಯವಿಲ್ಲವೆಂದು ತೋರುತ್ತದೆ. ನಾನು ಆ ಅರಮನೆಯಲ್ಲಿ ಬೆದಕದ ಸ್ಥಳವೇ ಇಲ್ಲ. ಆಕೆ ದೇಹತ್ಯಾಗ ಮಾಡಿರುವುದೇ ನಿಶ್ಚಯ. ಆಕೆಯಲ್ಲಿ ಪ್ರಾಣಾಧಿಕ ಪ್ರೇಮವನ್ನು ಇಟ್ಟಿರುವ ಶ್ರೀರಾಮನಿಗೆ ಈ ಸುದ್ದಿಯನ್ನು ಕೊಂಡೊಯ್ದು ನಿವೇದಿಸು ವುದು ಹೇಗೆ? ಹೇಳದೆ ಸುಮ್ಮನಿರುವುದಕ್ಕೆ ತಾನೆ ಸಾಧ್ಯವೆ? ಈಗ ನನ್ನ ಕರ್ತವ್ಯ ವೇನು? ಸೀತಾದೇವಿಯನ್ನು ಕಾಣದೆ ಹಿಂತಿರುಗಿದರೆ ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು? 'ಸೀತೆಯನ್ನು ನಾನು ಕಾಣಲಾಗಲಿಲ್ಲ' ಎಂಬ ದಾರುಣ ವಾಕ್ಯ ಕಿವಿಗೆ ಬಿದ್ದೊಡನೆಯೆ ಶ್ರೀರಾಮಚಂದ್ರನು ಜೀವತ್ಯಾಗಮಾಡುತ್ತಾನೆ. ಅದನ್ನು ಕಂಡು ಅಣ್ಣನಲ್ಲಿ ಭಕ್ತಿ ವಾತ್ಸಲ್ಯಗಳಿಂದ ತುಂಬಿ ತುಳುಕುತ್ತಿರುವ ಲಕ್ಷ್ಮಣಸ್ವಾಮಿ ತನ್ನ ಪ್ರಾಣಗಳನ್ನು ಧರಿಸಿಯಾನೆ? ಈ ಸೋದರರು ಮಡಿದುದನ್ನು ಕೇಳಿದರೆ ಬಂಧು ಪ್ರೇಮಿಗಳಾದ ಭರತ ಶತ್ರುಘ್ನರೂ ಪ್ರಾಣಗಳನ್ನು ತೊರೆಯುತ್ತಾರೆ. ರಾಜಮಾತೆಯ ರಾದ ಕೌಸಲ್ಯಾ ಸುಮಿತ್ರಾ ಕೈಕೆಯರಿಗೂ ಮರಣವೇ ಶರಣಾಗಬೇಕಾಗುತ್ತದೆ. ಈ ಮರಣ ಪರಂಪರೆಗಳನ್ನು ಕಂಡು ಸುಗ್ರೀವನು ಜೀವಿಸಲು ಸಾಧ್ಯವೆ? ಆತನೂ ಅಸು ದೊರೆವನು ; ಆತನ ಹೆಂಡತಿ ಮಕ್ಕಳೂ ಆತನೊಡನೆಯೆ ಸತ್ತುಹೋಗುವರು. ಇದನ್ನು ಕಂಡು ಅಂಗದನೂ ಕಪಿವೀರರೂ ಎದೆಯೊಡೆದು ಪ್ರಾಣ ಬಿಡುವರು. ಹೀಗೆ ಇಕ್ವಾಕು ಕುಲನಾಶದೊಡನೆ ಕಪಿಕುಲವೂ ನಾಮಾವಶೇಷವಾಗಿ ಹೋಗುವುದು. ಇದು ತಪ್ಪ ಬೇಕಾದರೆ ನಾನು ಕೃತಕಾರ್ಯನಾಗದೆ ಹಿಂದಿರುಗಬಾರದು. ಆದ್ದರಿಂದ ಸೀತಾ ವೃತ್ತಾಂತವು ತಿಳಿಯುವವರೆಗೂ ನಾನು ಇಲ್ಲಿಯೇ ಇದ್ದು ಬಿಡಬೇಕು."

ಕೈಕೊಂಡ ಕಾರ್ಯ ವಿಫಲವಾದುದಕ್ಕಾಗಿ ಹನುಮಂತನಿಗೆ ಅಸಹ್ಯವೇದನೆಯಾ ಗಿತ್ತು. ಒಮ್ಮೊಮ್ಮೆ "ಹಾಳು ಈ ಪ್ರಾಣಗಳನ್ನು ಪ್ರಾಯೋಪವೇಶದಿಂದ ಕೊನೆಗಾಣಿ ಸಲೆ?" ಎಂದುಕೊಳ್ಳುವನು. ಆದರೆ ಮರುಕ್ಷಣದಲ್ಲಿಯೇ ಆ ಧೀರನು "ಛೆ ಛೆ! ಆತ್ಮಹತ್ಯೆ ಹೇಡಿತನ. ಜೀವವೊಂದಿದ್ದರೆ ಇಂದಲ್ಲ ನಾಳೆ ಶುಭವನ್ನು ಕಂಡೇನು! ಆತ್ಮಹತ್ಯದಂತಹ ಹೇಯಕಾರ್ಯವನ್ನು ಕೈಕೊಂಡು ಇಹಪರಗಳಿಗೆ ದೂರನಾಗಲೆ?" ಎಂದು ಸಮಾಧಾನಪಟ್ಟುಕೊಳ್ಳುವನು. "ಪಾಪಿ ರಾವಣನನ್ನು ಸಂಹರಿಸಿಬಿಡಲೆ?" ಎಂದು ಒಮ್ಮೆ ಆಲೋಚಿಸುವನು. ಆದರೆ ಮರುಕ್ಷಣದಲ್ಲಿಯೆ "ಉಹು! ಅವನನ್ನು ಎಳೆದೊಯ್ದು, ಅಗ್ನಿಗೆ ಪಶುವನ್ನು ಬಲಿಕೊಡುವಂತೆ, ಶ್ರೀರಾಮನಿಗೆ ಕಾಣಿಕೆಯಾಗಿ ಒಪ್ಪಿಸುವೆನು" ಎಂದುಕೊಳ್ಳುವನು. ಏನುಮಾಡಿದರೂ ತಾನು ಕೈಕೊಂಡ ಕಾರ್ಯ ವನ್ನು ಸಾಧಿಸಲಾಗುವುದಿಲ್ಲವೆಂಬ ಭಾವನೆ ಮನಸ್ಸಿನಲ್ಲಿ ಉದಿಸಲು ಆತನ ಮನಸ್ಸು ಮತ್ತೆ ಉದ್ವಿಗ್ನಗೊಳ್ಳುವುದು. ಜಿತೇಂದ್ರಿಯನಾಗಿ, ನಿಯತಾಹಾರದಿಂದ ಅಲ್ಲಿಯೇ ಇದ್ದು ಬಿಡುವುದೇ ಸರಿಯೆಂದು ಆತನು ನಿರ್ಧರಿಸಿದನು. ಅಷ್ಟರಲ್ಲಿ ತನ್ನ ಎದುರಿಗೇ

ಕಾಣಿಸುತ್ತಿದ್ದ ಅಶೋಕವನವನ್ನು ತಾನು ಹುಡುಕಿ ನೋಡಲಿಲ್ಲವಲ್ಲಾ ಎಂದುಕೊಂಡು ಅದನ್ನು ಶೋಧಿಸಹೊರಟನು. ಹೊರಡುವ ಮುನ್ನ ಅಷ್ಟವಸುಗಳಿಗೂ, ಏಕಾದಶ ರುದ್ರರಿಗೂ, ದ್ವಾದಶಾದಿತ್ಯರಿಗೂ, ಅಶ್ವಿನೀ ದೇವತೆಗಳಿಗೂ, ಸಪ್ತಮರುತ್ತುಗಳಿಗೂ ಭಕ್ತಿಯಿಂದ ಮನಸಾವಂದಿಸಿದನು. ಆ ವನದಲ್ಲಿ ದೇವಿಯೇನಾದರೂ ಕಂಡುಬಂದರೆ, ತಪಸ್ಸಿಗೆ ಫಲಪ್ರಧಾನಮಾಡುವಂತೆ, ವಿರಹಪೀಡಿತನಾದ ಶ್ರೀರಾಮನಿಗೆ ಆಕೆಯನ್ನು ಒಪ್ಪಿಸುತ್ತೇನೆ ಎಂದುಕೊಂಡನು. ಮನಸ್ಸಿಗೇಕೋ ಸೀತೆಯನ್ನು ಕಂಡರೆ ಹೇಗೋ ಹಾಗೆ ಸಂತೋಷವಾಯಿತು. ಚಿರತಪಸ್ವಿನಿಯಾದ ಸೀತೆಯನ್ನು ಯಾವಾಗ ಕಾಣುವೆನೊ ಎಂದು ಚಿಂತಿಸುತ್ತಾ ರಾವಣಾಂತಃಪುರದಿಂದ ಒಂದೇ ನೆಗೆತಕ್ಕೆ ಅಶೋಕವನದ ಪ್ರಾಕಾರಕ್ಕೆ ಹಾರಿದನು.

---

೬

# ಅಶೋಕವನ

ಬಿಲ್ಲಿಗೆ ಹೂಡಿದ ಅಂಬು ಹಾರಿಬರುವಂತೆ ವೇಗವಾಗಿ ಹಾರಿಬಂದ ಹನುಮಂತನು ಗಿಡಗಳ ಮಧ್ಯೆ ತೂರಿಬಂದು, ಮಾವಿನ ಮರಗಳ ಮಧ್ಯದಲ್ಲಿದ್ದ ಒಂದು ಲತಾಕುಂಜ ದಲ್ಲಿ ಇಳಿದನು. ಆಗ ವಸಂತಕಾಲವಾದುದರಿಂದ ಮರಗಿಡಗಳು ಪುಷ್ಪಸಮೃದ್ಧವಾಗಿ ದ್ದುವು. ಆದುದರಿಂದ ಆತನು ತೂರಿಬಂದ ರಭಸಕ್ಕೆ ಮರಗಿಡಗಳು ಅಲುಗಿ ಆತನ ದೇಹವೆಲ್ಲವೂ ಪುಷ್ಪಗಳಿಂದ ತುಂಬಿ, ಆ ವನಮಧ್ಯದಲ್ಲಿ ವಿಹಾರಾರ್ಥವಾಗಿ ಮಾಡಿಟ್ಟ ಹೂವಿನ ಬೆಟ್ಟದಂತೆ ಕಂಗೊಳಿಸುತ್ತಿದ್ದನು. ಹನುಮಂತನು ಭೂಮಿಗೆ ಅವತರಿಸಿದವನೇ ಒಮ್ಮೆ ಸುತ್ತಲೂ ದೃಷ್ಟಿಯನ್ನು ಚೆಲ್ಲಿದನು. ಆಹಾ! ಏನು ಚೆಲುವದು! ರಾವಣನ ರಸಿಕತೆಗೆ ಆ ಪ್ರಮದವನವೇ ಒಂದು ಹಿರಿಯ ಸಾಕ್ಷಿ ಎಂಬಂತಿತ್ತು. ಎಲ್ಲೆಲ್ಲಿ ನೋಡಿದರೂ ಫಲಪುಷ್ಪಭರಿತವಾದ ಗಿಡ, ಮರ, ಬಳ್ಳಿಗಳು. ಅದೆಷ್ಟು ಬಗೆಯಾದ ವೃಕ್ಷಗಳು! ಅದೆಲ್ಲಿಂದ ಅಷ್ಟು ಸುಂದರವಾದ ವೃಕ್ಷಗಳನ್ನು ತಂದು ಅಲ್ಲಿ ನಾಟಿರಬಹುದು! ಎತ್ತಕಡೆ ನೋಡಿದರೂ ಕಣ್ಣಿಗೆ ಹಬ್ಬ! ಬಣ್ಣಬಣ್ಣದ ಹಕ್ಕಿಗಳು ತಮ್ಮ ಕೂಜಿತದಿಂದ ಕರ್ಣಾಮೃತವನ್ನು ಸುರಿಸುತ್ತಿವೆ! ಅಲ್ಲಲ್ಲಿಯೇ ಮರಗಳ ಕೊಂಬೆಗಳ ಮೇಲೆ ಕಾಮನ ಬಿಲ್ಲಿನಂತೆ ಗರಿಗೆದರಿಕೊಂಡು ಕೇಕಾಧ್ವನಿಯೊಡನೆ ನರ್ತಿಸುತ್ತಿರುವ ನವಿಲುಗಳು. ಮರಗಳಿಂದ ಉದುರಿದ ಹೂಗಳು ವಿಚಿತ್ರವಾದ ರಂಗವಲ್ಲಿಯಂತೆ ಕಾಣುತ್ತಿವೆ. ಹನುಮಂತನು ಆ ಶೋಭಾ ರಾಶಿಯನ್ನು ಕಣ್ಣುಗಳಿಂದ ಕುಡಿಯುತ್ತಾ ಕ್ಷಣಕಾಲ ಸ್ತಂಭಿತನಾಗಿ ನಿಂತುಬಿಟ್ಟನು. ಬೆಳುದಿಂಗಳ ಮಳೆಯಲ್ಲಿ ನೆನೆದು ನಿಂತಿದ್ದ ಆ ವನರಾಜಿಯ ಶೋಭೆಯನ್ನು ನೋಡುತ್ತಾ ಮೈಮರೆಯುವ ವೇಳೆಯಲ್ಲ ಅದು. ಸೀತಾದೇವಿಯ ಶೋಧನೆಗಾಗಿ ಹೊರಟಿದ್ದ ಹನುಮಂತನಿಗೆ ಆ ವನದ ಸೌಂದರ್ಯ ವನ್ನು ಕಂಡು ಸಂತೋಷವಾಗುವುದಕ್ಕೆ ಬದಲಾಗಿ ಕೋಪವುಕ್ಕಿತು. ಬಳಿಯಲ್ಲಿದ್ದ ಒಂದು ಅಸುಗೆಯ ಮರವನ್ನು ಹಿಡಿದು ಅಲ್ಲಾಡಿಸಿದನು. ಅದರ ಎಲೆಗಳೆಲ್ಲಾ ಬಳಬಳ ಉದುರಿ, ಜೂಜಿನಲ್ಲಿ ಸರ್ವಸ್ವವನ್ನೂ ಸೋತು ನಿರ್ಧನಿಕನಾಗಿ ನಿಂತ ಜೂಜಾಳಿನಂತೆ ಅದು ಬೋಡಾಗಿ ನಿಂತಿತು. ಅಷ್ಟರಿಂದ ಶಾಂತನಾಗದೆ ಅವನು ಒಂದೆರಡು ಮರಗಳನ್ನು ಬುಡಸಹಿತವಾಗಿ ಕಿತ್ತೆಸೆದನು. ಇಷ್ಟಾದಮೇಲೆ ತನ್ನ ಶೋಧನಕಾರ್ಯವನ್ನು ಮುಂದು ವರಿಸಿದನು.

ಅದೇನು ಆ ವನದ ವೈಭವ! ರಸ್ತೆಯ ನೆಲಗಟ್ಟೆಲ್ಲವೂ ರತ್ನಖಚಿತವಾಗಿದೆ. ಅಲ್ಲಲ್ಲಿಯೆ ಸರೋವರಗಳು. ಅವುಗಳಿಗೆಲ್ಲಾ ಸ್ಫಟಿಕನಿರ್ಮಿತವಾದ ಸೋಪಾನಗಳು. ಒಳಗೆ ತಳಕಾಣುವಂತಿರುವ ಸ್ವಚ್ಛವಾದ ತಿಳಿನೀರು; ಅಲ್ಲಲ್ಲಿಯೆ ಅರಳಿರುವ

ಕನ್ನೈದಿಲೆಯ ಪುಷ್ಪಗಳು; ತಾವರೆ ನೈದಿಲೆಯೆಲೆಗಳ ಬಳಿ ವಿಶ್ರಾಂತಿಗೊಳ್ಳುತ್ತಿರುವ ಹಂಸಸಾರಸಾದಿ ಪಕ್ಷಿಗಳು. ಸರೋವರವನ್ನು ದಾಟಿ ಎರಡು ಹೆಜ್ಜೆ ಮುಂದೆ ಹೋದರೆ ಅಲ್ಲೊಂದು ಸಣ್ಣ ಪ್ರವಾಹ. ಅದರ ಎರಡು ದಂಡೆಗಳಲ್ಲಿಯೂ ಕಲ್ಪವೃಕ್ಷಗಳಂತೆ ಕಂಗೊಳಿಸುತ್ತಿರುವ ಮರಗಳ ಸಾಲು; ಬಣ್ಣ ಬಣ್ಣದ ಹೂಗಳಿಂದ ತುಂಬಿದ ಸಹಸ್ರಾರು ಬಳ್ಳಿಗಳು ಆ ವೃಕ್ಷಗಳನ್ನಾಲಿಂಗಿಸಿ ಬಳುಕುತ್ತ ನಿಂತಿವೆ. ಅವುಗಳ ಸಮೀಪದಲ್ಲಿಯೆ ಲತಾಗೃಹಗಳು. ಅವುಗಳನ್ನು ಹಾದು ಮುಂದೆ ಬಂದರೆ ಹಚ್ಚನೆಯ ಹಸುರನ್ನು ಹೊದ್ದು ನಿಂತಿರುವ ಕೃತಕಪರ್ವತ. ಅದರ ನಾಲ್ಕೂ ಕಡೆಗಳಲ್ಲಿ ವಿಶ್ರಾಂತಿಗೃಹಗಳು. ಆ ಕೃತಕಪರ್ವತದಿಂದ ಸಣ್ಣ ಝರಿಯೊಂದು ಕೆಳಗಿಳಿದು ಬರುತ್ತಿದೆ. ಅದನ್ನೂ ದಾಟಿ ಹೋದರೆ ಸುತ್ತಲೂ ಜಗಲಿಗಳುಳ್ಳ ಸುಂದರ ವೃಕ್ಷಗಳು; ಸುವರ್ಣ ನಿರ್ಮಿತವಾದ ಸೋಪಾನಗಳು ಆ ಜಗಲಿಗಳಿಗೆ. ಅಂತಹ ವೃಕ್ಷಗಳಲ್ಲಿ ಒಂದಾದ ಶಿಂಶುಪವೃಕ್ಷವೊಂದು ವನರಾಜನಂತೆ ಶೋಭಿಸುತ್ತಾ ನಿಂತಿತ್ತು. ಅದರ ಸುತ್ತಲೂ ಇದ್ದ ವೃಕ್ಷಗಳು ಸುವರ್ಣ ಕಾಂತಿಯಿಂದ ಬೆಳಗುತ್ತಿದ್ದುವು. ಹನುಮಂತನು ಆ ಶಿಂಶುಪವೃಕ್ಷವನ್ನು ಏರಿ ಕುಳಿತು, ಅಲ್ಲಿಂದ ಸೀತಾನ್ವೇಷಣೆಯಲ್ಲಿ ತತ್ಪರನಾಗುವೆನೆಂದುಕೊಂಡನು. ಸುತ್ತಲಿದ್ದ ವೃಕ್ಷಗಳ ಕಾಂತಿಯಿಂದ ತನ್ನ ದೇಹವೆಲ್ಲವೂ ಸುವರ್ಣಮಯವಾದುದನ್ನು ಕಂಡು "ಭಲೆ! ಈಗ ನಾನೊಂದು ಚಿನ್ನದ ಕಪಿಯಾದೆ!" ಎಂದುಕೊಂಡು ಒಮ್ಮೆ ಮುಗುಳ್ನಗೆ ನಕ್ಕನು. ರಾಮವಿರಹದಿಂದ ಕುದಿಯುತ್ತಿರುವ ಸೀತಾಮಾತೆ ದುಃಖೋಪಶಮನಕ್ಕಾಗಿ ಇಲ್ಲಿಗೆ ಬಂದರೂ ಬರಬಹುದು. ಶ್ರೀರಾಮನೊಡನಿದ್ದಾಗ ಆಕೆಗೆ ವನವಿಹಾರವೆಂದರೆ ಬಲು ಸಂತೋಷವಂತೆ! ಆದ್ದರಿಂದ ಇಷ್ಟು ರಮ್ಯವಾದ ಈ ಸ್ಥಳಕ್ಕೆ ಬಾರದೆ ಇರಳು. ಆಕೆ ಹೇಗಿದ್ದರೂ ಸಂಧ್ಯೋಪಾಸನೆಯನ್ನು ತಪ್ಪದೆ ಮಾಡತಕ್ಕವಳು. ಅದಕ್ಕಾಗಿ ಬೆಳಗು ಮುಂಜಾವಿಗೆ ಈ ನದಿಯ ಬಳಿಗೆ ಬಂದರೂ ಬರಬಹುದು. ಆಕೆ ಬದುಕಿರುವುದೇ ನಿಜವಾದರೆ ಈ ನಿರ್ಝರಿಣಿಗೆ ಬರದೆ ಇರುವುದಿಲ್ಲ" ಎಂದುಕೊಂಡು ಜಾನಕಿಯನ್ನು ಬಿಡುಗಣ್ಣಾಗಿ ನಿರೀಕ್ಷಿಸುತ್ತಾ ಹನುಮಂತನು ಆ ಮರದ ಮೇಲೆಯೇ ವಿಶ್ರಮಿಸಿದನು.

---

## ೭

# ಅಶೋಕವನದಲ್ಲಿ ಸೀತಾಮಾತೆ

ಮಧ್ಯರಾತ್ರಿ ಮೀರಿತ್ತು. ಚಳಿಗಾಳಿ ಸುಯ್ಯೆಂದು ಬೀಸಲಾರಂಭಿಸಿತ್ತು. ಹನುಮಂತನು ತಾನು ಕುಳಿತಿದ್ದ ಶಿಂಶುಪವೃಕ್ಷದಿಂದ ಸುತ್ತಲೂ ನೋಡಿದನು. ಎಂತಹ ಮನಮೋಹಕ ದೃಶ್ಯವದು! ಬೆಳುದಿಂಗಳಲ್ಲಿ ಆ ನೋಟ ನೂರ್ಮಡಿ ಹೆಚ್ಚು ಸುಂದರವಾಗಿ ಕಂಗೊಳಿಸುತ್ತಿದೆ. ಸುತ್ತಲೂ ಪುಷ್ಪಸಮೃದ್ಧವಾದ ನೂರಾರು ಅಶೋಕ ವೃಕ್ಷಗಳು ಬೆಂಕಿಯ ಜ್ವಾಲೆಯಂತೆ ಬೆಳಗುತ್ತಾ, 'ಅಶೋಕವನ'ವೆಂಬ ಆ ವನದ ಹೆಸರನ್ನು ಸಾರ್ಥಕಗೊಳಿಸಿದ್ದುವು. ಅವುಗಳ ಮಧ್ಯೆ ಅಲ್ಲಲ್ಲಿಯೆ ಕಮಲ ಕನ್ನೈದಿಲೆಗಳಿಂದ ತುಂಬಿದ ಕೊಳಗಳು; ಒಂದೊಂದು ವೃಕ್ಷದ ಕೆಳಗೂ ದಿವ್ಯವಾದ ಆಸನಗಳು; ರಸ್ತೆಗಳಿಗೆಲ್ಲಾ ಅನರ್ಘ್ಯವಾದ ರತ್ನಗಂಬಳಿಗಳನ್ನು ಹಾಸಿದೆ. ಹನುಮಂತನು ಆಶ್ಚರ್ಯದಿಂದ ಅವುಗಳನ್ನು ನೋಡುತ್ತಿರುವಲ್ಲಿ, ಮರಗಳ ಮಧ್ಯೆ ಅನತಿ ದೂರದಲ್ಲಿ ಇದ್ದ ಭವ್ಯ ಭವನವೊಂದು ಗೋಚರಿಸಿತು. ಆತನು ಹೆಚ್ಚು ಸದ್ದಿಲ್ಲದಂತೆ ಆ ಭವನವನ್ನು ಸಮೀಪಿಸಿದನು. ಸುತ್ತಲೂ ಸಾವಿರಾರು ಕಂಭಗಳನ್ನು ನಿಲ್ಲಿಸಿ ಕಟ್ಟಿದ ಉಪ್ಪರಿಗೆಯ ಮನೆ ಕೈಲಾಸದಂತೆ ಬೆಳ್ಳಗೆ ಬೆಳಗುತ್ತಿತ್ತು. ಅದರ ಸುತ್ತಲೂ ಸೋಪಾನಗಳು ಹವಳದಿಂದ ನಿರ್ಮಿತವಾದುವು. ಮನೆಯ ಮುಂದಿನ ಜಗಲಿ ಸುವರ್ಣಮಯ. ಆ ಭವನದ ದಿವ್ಯಕಾಂತಿಯಿಂದ ಹನುಮಂತನ ಕಣ್ಣುಗಳು ಕ್ಷಣಕಾಲ ಕೋರೈಸಿದಂತಾಯಿತು.

ಹನುಮಂತನಿಗೆ ಅರಮನೆಯ ದಿವ್ಯತೆಯನ್ನು ನೋಡಿ ಆಶ್ಚರ್ಯಪಡುತ್ತಾ ನಿಲ್ಲಲು ವ್ಯವಧಾನವಿರಲಿಲ್ಲ. ಅಗೋ, ಆ ಅರಮನೆಯ ಸಮೀಪದಲ್ಲಿಯೆ ಮರದ ಕೆಳಗೆ ಮಲಿನವಸ್ತ್ರಗಳನ್ನುಟ್ಟು ಕಳೆಗುಂದಿದ ಮುಖದಿಂದ ಕುಳಿತಿರುವ ಆ ದಿವ್ಯಮಂಗಳ ಮೂರ್ತಿ! ಅದರ ಸುತ್ತಲೂ ಕುಳಿತಿರುವ ಕರಾಳವದನೆಯರಾದ ರಾಕ್ಷಸಿಯರು. ಹನುಮಂತನು ಈ ದೃಶ್ಯವನ್ನು ಕಾಣುತ್ತಲೇ ಸ್ತಂಭಿತನಾದನು. ಅದೆಂತಹ ತೇಜೋರಾಶಿ, ಅದು! ಆ ಮಾಸಿದ ಬಟ್ಟೆಗಳು ಹೊಗೆಯಂತೆ ಆ ತೇಜೋರಾಶಿಯನ್ನು ಆವರಿಸಿವೆ. ಕಿತ್ತು ಬಿಸಿಲಿಗೆಳೆದ ಕಮಲದಂತೆ ಮುಖ ಬಾಡಿದೆ! ಕ್ಷಣಕ್ಷಣಕ್ಕೂ ಆಕೆ ನಿಟ್ಟುಸಿರು ಬಿಡುತ್ತಿದ್ದಾಳೆ! ತಲೆಗೂದಲೆಲ್ಲವೂ ಜಡೆಗಟ್ಟಿಹೋಗಿದೆ. ಹೂವಿಲ್ಲದ ಬಳ್ಳಿಯಂತೆ ಕಳೆಗೆಟ್ಟು ಆಕೆ ಕೇವಲ ಕೃಶಳಾಗಿ ಹೋಗಿದ್ದಾಳೆ! ನಾಯಿಗಳು ಮುತ್ತಿಕೊಂಡಿರುವ ಹುಲ್ಲೆಯಂತೆ ಪರಿತಪಿಸುತ್ತಿರುವ ಆ ದಿವ್ಯಮೂರ್ತಿಯನ್ನು ಕಂಡು ಹನುಮಂತನು ಆಕೆಯೇ ಸೀತಾಮಾತೆಯಿರಬೇಕೆಂದುಕೊಂಡನು. ಶ್ರೀರಾಮನು ಸೂಚಿಸಿದ್ದ ಕುರುಹುಗಳೆಲ್ಲವೂ ಆಕೆಯಲ್ಲಿ ಮೂಡಿರುವಂತೆ ಕಾಣಿಸಿತು ಆತನಿಗೆ.

ಋಷ್ಯಮೂಕ ಪರ್ವತದಲ್ಲಿ ಆಕೆ ಆಭರಣಗಳನ್ನು ಕಟ್ಟಿ ಒಗೆದಿದ್ದ ಬಟ್ಟೆಯೂ ಇಲ್ಲಿ ಉಟ್ಟಿದಬಟ್ಟೆಯೂ ಒಂದೇ ಬಣ್ಣದವು ; ಒಂದೇ ಜಾತಿಯವು. ಶ್ರೀರಾಮನು ಮಾಡಿದ ಸೀತಾಮಾತೆಯ ಅಂಗಪ್ರತ್ಯಂಗಗಳ ವರ್ಣನೆಗೂ ಇಲ್ಲಿ ಕಾಣುತ್ತಿರುವ ಸುಂದರ ವಿಗ್ರಹಕ್ಕೂ ಏನೂ ವ್ಯತ್ಯಾಸವಿಲ್ಲ. ಯಾರಿಗಾಗಿ ಶ್ರೀರಾಮಚಂದ್ರನು ಹಗಲಿರುಳೂ ಪರಿತಪಿಸುತ್ತಿರುವನೋ ಆ ತ್ರಿಭುವನಸುಂದರಿ ಈಕೆಯೆ ಎಂಬುದರಲ್ಲಿ ಏನೂ ಸಂಶಯ ವಿಲ್ಲ. ಈ ಸೌಕುಮಾರ್ಯವೂ ಈ ಸೌಂದರ್ಯವೂ ಈ ದೇಹ ಸೌಷ್ಠವವೂ ಮತ್ತಾರಿಗಿರಲು ಸಾಧ್ಯ? "ಆದರೆ ಈ ದೇವಿಯನ್ನು ಅಗಲಿಯೂ ಶ್ರೀರಾಮನು ದೇಹತ್ಯಾಗಮಾಡದೆ ಜೀವಧಾರಣೆ ಮಾಡಿಕೊಂಡಿರುವುದು ನಿಜವಾಗಿಯೂ ಆಶ್ಚರ್ಯ ವಾದುದೇ ಸರಿ! ಅದೆಂತಹ ಮಹನೀಯ ಆತ!" ಎಂದು ಮಾರುತಿ ಮನಸ್ಸಿನಲ್ಲಿಯೇ ಶ್ರೀರಾಮನನ್ನು ಶ್ಲಾಘಿಸಿದನು.



ಅಗೋ! ಮರದ ಕೆಳಗೆ....ಕೆಳಗ್ಗುಂದಿದ ಮುಖದಿಂದ ಕುಳಿತಿರುವ ಆ ದಿವ್ಯ ಮಂಗಳಮೂರ್ತಿ!

ಸೀತಾದೇವಿಯ ಶೋಚನೀಯ ಸ್ಥಿತಿಯನ್ನು ಕಂಡು ಹನುಮಂತನ ಕಣ್ಣು ಹನಿಗೂಡಿದವು. "ಇದೆಂತಹ ಕಾಲಗತಿ ! ಲೋಕಗುರುವಾದ ಶ್ರೀರಾಮನೆ ಕೈಹಿಡಿದ ಗಂಡನಾಗಿದ್ದರೂ ಈ ದೇವಿಗೆ ಇಂತಹ ದುಃಸ್ಥಿತಿ ತಪ್ಪಲಿಲ್ಲವಲ್ಲಾ ! ಆದರೂ ಈಕೆಯ ಮನಸ್ಥೈರ್ಯ ಎಷ್ಟು ದೊಡ್ಡದು ! ಪೂರ್ಣಪ್ರವಾಹದಿಂದ ಕೂಡಿದ ಗಂಗಾನದಿ ಯಂತೆ ಗಾಂಭೀರ್ಯಯುಕ್ತಳಾಗಿದ್ದಾಳೆಯಲ್ಲಾ ! ತನ್ನ ಗಂಡನ ಪರಾಕ್ರಮವನ್ನೂ ಮೈದುನನ ಧೈರ್ಯ ಸ್ಥೈರ್ಯಗಳನ್ನೂ ಬಲ್ಲವಳಾದುದರಿಂದಲೇ ಈಕೆ ಇಷ್ಟು ತಾಳ್ಮೆಯಿಂದಿರುವಳು" ಎಂದು ಮನಸ್ಸಿನಲ್ಲಿ ಸಮಾಧಾನಪಟ್ಟುಕೊಳ್ಳಲು ಪ್ರಯತ್ನಿಸಿದನು. "ಶೀಲದಲ್ಲಿಯೂ ವಯಸ್ಸಿನಲ್ಲಿಯೂ ರೂಪದಲ್ಲಿಯೂ ಪರಸ್ಪರ ಅನುರೂಪವಾದ ದಾಂಪತ್ಯ ಸೀತಾರಾಮರದು" ಎಂದುಕೊಂಡನು, ಆತ. "ತನ್ನ ರೂಪಗುಣಗಳಿಂದ ಪತಿಯ ಮನಸ್ಸನ್ನು ಒಲಿಸಿಕೊಂಡಿದ್ದ ಈಕೆಗಾಗಿ ಶ್ರೀರಾಮನು ಎಷ್ಟು ಸಾಹಸಕಾರ್ಯಗಳನ್ನು ನಡಸಿಲ್ಲ ? ಈಕೆಗಾಗಿಯೆ ಅಲ್ಲವೆ ರಾಮಚಂದ್ರನು ವಾಲಿಯನ್ನು ವಧಿಸಿದುದು ? ವೀರ್ಯದಲ್ಲಿ ರಾವಣನಿಗೆ ಸಮಾನನಾದ ಕಬಂಧನನ್ನು ಸಂಹರಿಸಿದುದು ಈಕೆಗಾಗಿಯೆ. ಘೋರರೂಪಿಯಾದ ವಿರಾಧನು ಮೃತ್ಯುವಿಗೆ ತುತ್ತಾದುದು ಈಕೆಗಾಗಿಯೆ. ಜನಸ್ಥಾನದಲ್ಲಿದ್ದ ಅಸಂಖ್ಯಾತ ರಾಕ್ಷಸರು ನಿರ್ಮೂಲವಾದುದು ಈ ದೇವಿಗಾಗಿಯೆ. ಖರ ತ್ರಿಶಿರ ದೂಷಣ ಮೊದಲಾದ ರಾಕ್ಷಸರನ್ನು ಶ್ರೀರಾಮನು ತನ್ನ ಬಾಣಕ್ಕೆ ಆಹುತಿ ತೆಗೆದುಕೊಂಡುದೂ ಈ ಸೀತಾಮಾತೆಗಾಗಿಯೆ. ಈಕೆಗಾಗಿ ರಾಮಚಂದ್ರನು ಸಮುದ್ರಾಂತವಾದ ಸಕಲ ಭೂಮಂಡಲವನ್ನೂ, ತಲೆಕೆಳಗಾಗಿ ಮಾಡಿದರೂ ಅದು ಅತಿಶಯವೇನೂ ಅಲ್ಲ. ತ್ರಿಲೋಕಾಧಿಪತ್ಯವನ್ನೂ, ಈ ಜಾನಕೀದೇವಿಯನ್ನೂ ಪರಸ್ಪರ ಹೋಲಿಸಿದಾಗ ತ್ರಿಲೋಕಾಧಿಪತ್ಯವೆಂಬುದು ಈ ಧರ್ಮಶೀಲಳ ಪಾದರೇಣುವಿಗೂ ಸಮಾನವಾಗಲಾರದು. ಅಯೋನಿಜೆಯೆಂದು ಜಗದ್ವಿಖ್ಯಾತಳಾದ ಈ ಶ್ರೀರಾಮಪತ್ನಿಗೆ ಹುಲು ರಾಕ್ಷಸಿಯರ ಕಾವಲೆ ? ಸಮಸ್ತ ರಾಜಭೋಗಗಳನ್ನೂ ತೃಣವೆಂದು ಬಗೆದು ಗಂಡನನ್ನು ಹಿಂಬಾಲಿಸಿ ಅರಣ್ಯವಾಸವನ್ನು ಕೈಗೊಂಡ ಸಾಧ್ವೀಶಿರೋಮಣಿಗೆ ಈ ದುರವಸ್ಥೆಯೆ ? ಪತಿ ಶುಶ್ರೂಷೆಯಲ್ಲಿಯೆ ನಿರತಳಾಗಿ, ಕಾಡಿನ ಗೆಡ್ಡೆಗೆಣಸುಗಳಿಂದಲೆ ತೃಪ್ತಿಗೊಂಡು, ಕಷ್ಟದವಿಯಲ್ಲಿಯೂ ನಗುಮುಖದಿಂದ ಶ್ರೀರಾಮನ ಮನಸ್ಸಿಗೆ ಆನಂದದಾಯಕಳಾಗಿದ್ದ ಈ ದೇವಿಗೆ ಇಂತಹ ನರಕಯಾತನೆಯೆ ? ಮುಗುಳ್ನಗೆಯ ಮೆಲುನುಡಿಗಳಲ್ಲಿ ಬೆಳುದಿಂಗಳ ತಂಪೆರೆಯುತ್ತಿದ್ದ ಈ ಸುಮಕೋಮಲೆ ಈ ರಾಕ್ಷಸರಿಂದಾಗುತ್ತಿರುವ ಈ ಯಾತನೆಗಳನ್ನು ಸಹಿಸಬೇಕೆ ? ಈಕೆಯನ್ನು ಪುನಃ ಪಡೆದಾಗ ಶ್ರೀರಾಮನ ಸಂತೋಷಕ್ಕೆ ಪಾರವುಂಟೆ ? ದಾಹದಿಂದ ದಹಿಸುತ್ತಿರುವವನು ಅರವಟಿಗೆಯನ್ನು ಕಂಡಂತೆ ಈತನು ಮತ್ತೊಮ್ಮೆ ಸೀತೆಯನ್ನು ಕಂಡಾಗ ಸಂತೋಷಗೊಳ್ಳುವನು. ಕಪ್ಪಾದ ಕುರುಳುಳ್ಳ ಈ ಕಮಲನೇತ್ರೆ ಸುಖಕ್ಕೆ ಅರ್ಹಳೆ ಹೊರತು ಸಂಕಟಕ್ಕೆ ಅರ್ಹಳಲ್ಲ. ಈಕೆಯನ್ನು ಕಂಡು ಕಪಿಯಾದ ನನಗೂ ಇಷ್ಟು ತಳಮಳವಾಗುತ್ತಿರುವಾಗ ದಯಾಳುವಾದ ಶ್ರೀರಾಮನಿಗೆ ಇನ್ನೆಷ್ಟು ಸಂಕಟವಾಗುತ್ತಿರುವುದೋ ! ರಾಮಲಕ್ಷ್ಮಣರ ಕಾವಲಿನಲ್ಲಿ

ನಖಮಾಂಸದಂತೆ ಸುರಕ್ಷಿತಳಾಗಿದ್ದ ಈಕೆ ಈಗ ಈ ಘೋರರಾಕ್ಷಸರ ಕಾವಲಿಗೆ ಒಳಗಾಗ ಬೇಕಾಯಿತೆ! ಈ ವಸಂತ ಕಾಲದಲ್ಲಿ ಪುಷ್ಪಭಾರದಿಂದ ಬಾಗಿ ಬಳಕುತ್ತಿರುವ ಈ ಅಶೋಕವೃಕ್ಷಗಳನ್ನು ಕಂಡು ಆಕೆಯ ದುಃಖ ಎಷ್ಟು ಉಲ್ಬಣಗೊಂಡಿದೆಯೊ!" ಹೀಗೆಂದು ನೆನೆನೆನೆದ ಆ ಹನುಮಂತನ ಕಣ್ಣುಗಳಲ್ಲಿ ದಿವ್ಯಾಶ್ರು ಬಿಂದುಗಳುಕ್ಕಿ ತೊಟ್ಟಿಕ್ಕಿದುವು.

ಸೀತಾದೇವಿಯನ್ನು ಬಳಸಿ ಕುಳಿತಿದ್ದ ಆ ಘೋರ ರೂಪದ ರಕ್ಕಸಿಯರನ್ನು ಕಂಡು ಹನುಮಂತನಿಗೆ ಕೂಡ ಅಸಹ್ಯವಾಯಿತು. ಒಂದೆ ಕಣ್ಣುಳ್ಳವಳು, ಒಂದೆ ಕಿವಿಯುಳ್ಳವಳು, ಕಣ್ಣು ಕಿವಿಗಳೇ ಇಲ್ಲದವಳು, ಊರುಗೋಲಿನಂತಹ ಕಿವಿಯುಳ್ಳ ವಳು, ತಲೆಯಮೇಲೆ ಮೂಗುಗಳುಳ್ಳವಳು, ಜೋಲು ಹೊಟ್ಟೆಯವಳು, ಜೋಲು ತುಟಿಯವಳು, ಚಪ್ಪಟೆ ಮೂಗಿನವಳು, ಗೂನು ಬೆನ್ನವಳು, ಹಂದಿಯಂತೆ ಮುಖವುಳ್ಳ ವಳು, ಕತ್ತೆಯ ಮುಖದವಳು, ಒಂಟೆಯ ಕಾಲಿನವಳು, ಆನೆಯ ಕಾಲಿನವಳು, ಜೋಲು ನಾಲಗೆಯವಳು—ಹೀಗೆ ವಿಕಾರವಿಕಾರವಾದ ಆಕಾರವುಳ್ಳ ರಾಕ್ಷಸಿಯರು ಶೂಲ ಮುದ್ಗರ ಮೊದಲಾದ ಆಯುಧಗಳನ್ನು ಹಿಡಿದು ಕುಳಿತಿದ್ದರು. ಕೆಲವರು ಮದ್ಯಪಾನ ಮಾಡುತ್ತಿದ್ದಾರೆ, ಕೆಲವರು ಮಾಂಸಗಳನ್ನು ಹಲ್ಲುಗಳಿಂದ ಕಿತ್ತು ಕಿತ್ತು ತಿನ್ನುತ್ತಾ ಕುಳಿತಿದ್ದಾರೆ. ಕೆಲವರಿಗೆ ಮೈಕೈಗಳೆಲ್ಲಾ ರಕ್ತಮಯವಾಗಿದೆ. ಈ ಪಿಶಾಚ ಗಳ ಮಧ್ಯದಲ್ಲಿ ಕುಳಿತಿದ್ದ ಸೀತಾದೇವಿ ದುಃಖದಿಂದ ತಳಮಳಿಸುತ್ತಿರಲು, ಕ್ಷೀಣಪುಣ್ಯ ದಿಂದ ನೆಲಕ್ಕುದುರಿದ ನಕ್ಷತ್ರದಂತೆ ಕಾಣುತ್ತಿದ್ದಳು. ಸ್ವಭಾವಸುಂದರವಾದ ಆಕೆಯ ದೇಹವು ಮಲಿನವಾಗಿ ಪಂಕಮಗ್ನವಾದ ಪದ್ಮದಂತೆ ವ್ಯಕ್ತಾವ್ಯಕ್ತವಾದ ಕಾಂತಿಯಿಂದ ಕೂಡಿದ್ದಿತು. ಆಕೆಗೆ ಅಲ್ಲಿ ರಕ್ಷಕರಾರೂ ಇರಲಿಲ್ಲ; ಆದರೇನು? ಆಕೆಯ ಸೌಶೀಲ್ಯವೆ ಆಕೆಗೆ ಸಂರಕ್ಷಣ ಶಕ್ತಿಯಾಗಿದ್ದಿತು. ಆಕೆಯನ್ನು ನೋಡಿದಂತೆಲ್ಲಾ ಹನುಮಂತನಿಗೆ ಭಕ್ತಿ ಏರುತ್ತಾ ಹೋಯಿತು. ಮನಸ್ಸಿನಲ್ಲಿಯೆ ಆಕೆಗೆ ನಮಸ್ಕರಿಸಿ, ಶ್ರೀರಾಮ ಲಕ್ಷ್ಮಣರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿದನು.

---

೮

## ಸೀತಾ-ರಾವಣ ಸಂವಾದ

ರಾತ್ರಿಯ ಕಡೆಯ ಜಾವದ ವೇಳೆ, ಬೆಳಗು ಮುಂಜಾವಿಗೆ ಎದ್ದು ಉಚ್ಚಕಂಠದಿಂದ ವೇದಘೋಷ ಮಾಡುತ್ತಿರುವ ಬ್ರಹ್ಮರಾಕ್ಷಸರ ಧ್ವನಿ ದೂರದಿಂದ ಕೇಳಿಬರುತ್ತಿತ್ತು. ಅರಮನೆಯಲ್ಲಿ ಮಂಗಳ ವಾದ್ಯಗಳು ಭೋರ್ಗರೆಯಲು ಮೊದಲಾಗಿವೆ. ಆ ಧ್ವನಿಯಿಂದ ರಾವಣನಿಗೆ ಎಚ್ಚರವಾಯಿತು. ಎದ್ದು ಕುಳಿತನು. ಕನಸುಮನಸ್ಸಿನಲ್ಲಿಯೂ ಅವನಿಗೆ ಸೀತೆಯ ಸ್ಮರಣೆಯೇ. ಮದೋನ್ಮತ್ತನಾದ ಆ ರಾವಣ ದಿಗ್ಗನೆ ಮೇಲಕ್ಕೆದ್ದು ಸರ್ವಾಲಂಕಾರಗಳಿಂದ ಭೂಷಿತನಾದನು. ಆತನು ವಸನಭೂಷಣಗಳಿಂದ ಸಿದ್ಧನಾಗುವಷ್ಟರಲ್ಲಿ ರಾಣೀವಾಸದ ನೂರು ಜನ ಹೆಣ್ಣುಗಳು ಆತನ ಸೇವೆಗೆ ಸಜ್ಜಾದರು. ಆತನಿಗೆ ದೀವಟಿಗೆಗಳನ್ನು ಹಿಡಿದು ದಾರಿತೋರುತ್ತಾ ಕೆಲವರು, ಚಾಮರ ಹಾಕುತ್ತಾ ಮತ್ತೆ ಕೆಲವರು, ಪಾನಪಾತ್ರೆಗಳನ್ನು ಹಿಡಿದು ಮತ್ತೆ ಕೆಲವರು, ಆಯುಧಪಾಣಿಗಳಾದ ಅಂಗರಕ್ಷಕರಂತೆ ಇನ್ನು ಹಲವರು—ಹೀಗೆ ಆ ಹೆಣ್ಣುಗಳು ಮೇಘವನ್ನು ಅನುಸರಿಸುವ ಮಿಂಚಿನಂತೆ ಬಳಸಿ ಬರುತ್ತಿರಲು ರಾವಣೇಶ್ವರನು ಅರಮನೆಯನ್ನು ಬಿಟ್ಟು ಹೊರಟು ಅಶೋಕವನವನ್ನು ಪ್ರವೇಶಿಸಿದನು. ಕಡೆದ ಹಾಲಿನ ನೊರೆಯಂತೆ ಬೆಳ್ಳಗೆ ಬೆಳಗುತ್ತಿದ್ದ ದುಕೂಲವನ್ನು ಧರಿಸಿ, ಠೀವಿಯಿಂದ ಬರುತ್ತಿದ್ದ ಆತನನ್ನು ನೋಡಿದರೆ, ಕುಸುಮ ಚಾಪವನ್ನು ತೊರೆದು ಬಂದಿರುವ ಮದನನಂತೆ ಕಾಣುತ್ತಿದ್ದನು. ವೀರ್ಯದ ಕೆಚ್ಚಿನಿಂದಲೂ ಮಧುಪಾನ ಮದದಿಂದಲೂ ಓಲಾಡುತ್ತಾ ಬರುತ್ತಿರುವಾಗ ಹೆಗಲಮೇಲೆ ಹೊದ್ದಿದ್ದ ಬಿಳಿಯ ದುಕೂಲವು ಭುಜ ಕೀರ್ತಿಗಳಲ್ಲಿ ತಾಕಿಕೊಳ್ಳಲು ಅದನ್ನು ಅವನು ಗಾಂಭೀರ್ಯದಿಂದ ಸೆಳೆದುಕೊಳ್ಳುತ್ತಾ ಬರುತ್ತಿದ್ದನು. ಶಿಂಶುಪವೃಕ್ಷದಲ್ಲಿ ಕುಳಿತು ಸೀತಾಮಾತೆಯನ್ನು ವೀಕ್ಷಿಸುತ್ತಿದ್ದ ಹನುಮಂತನಿಗೆ ಈ ರಾಜಠೀವಿ ದೂರದಿಂದಲೆ ಕಣ್ಣಿಗೆ ಬಿತ್ತು. ಆತನು ದಟ್ಟವಾಗಿ ಎಲೆ ತುಂಬಿದ ರೆಂಬೆಗಳಲ್ಲಿ ಹುದುಗಿಕೊಂಡು, ಆಗಮಿಸುತ್ತಿರುವ ವ್ಯಕ್ತಿಯನ್ನೇ ದೃಷ್ಟಿಸಿ ನೋಡುತ್ತಾ ಕುಳಿತನು. ನೋಡುನೋಡುತ್ತಿದ್ದಂತೆ ರಾವಣನು ಅಶೋಕ ವೃಕ್ಷಗಳಿಂದ ನಿಬಿಡವಾಗಿದ್ದ ಆ ರಮ್ಯಪ್ರದೇಶವನ್ನು ಪ್ರವೇಶಿಸಿದನು. ಅವನ ವೇಷಭೂಷಣಗಳನ್ನೂ ಸುತ್ತಣ ಪರಿವಾರವನ್ನೂ ಕಂಡು ಹನುಮಂತನಿಗೆ ಅವನು ರಾವಣನೇ ಇರಬೇಕೆಂದು ನಿಶ್ಚಯವಾಯಿತು. ವನವನ್ನು ಪ್ರವೇಶಿಸಿದ ರಾವಣನು ನೀಲವೇಣಿಯಾದ ಸೀತೆಯ ಬಳಿಗೆ ನೇರವಾಗಿ ಬಂದನು.

ರಾವಣನನ್ನು ಕಾಣುತ್ತಲೆ ಸೀತಾದೇವಿ ಬಿರುಗಾಳಿಗೆ ಸಿಕ್ಕ ಬಾಳೆಯಂತೆ ಗಡಗಡ ನಡುಗಿದಳು. ಆಕೆಯ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಪ್ರವಹಿಸಲು ಮೊದಲಾಯಿತು. ಗುಬ್ಬಚ್ಚಿಯಂತೆ ಮುದುರಿಕೊಂಡು ಕುಳಿತು, ಕಣ್ಣುಮುಚ್ಚಿ, ಆಕೆ

ಶ್ರೀರಾಮನನ್ನು ಧ್ಯಾನಿಸಲು ಮೊದಲು ಮಾಡಿದಳು. ಬತ್ತಿದ್ದ ತೊರೆಯಂತೆ ಕಾಂತಿ ಹೀನಳಾಗಿದ್ದ ಆಕೆಗೆ ರಾವಣನು ಬರುತ್ತಿರುವ ಕಡೆ ಕಣ್ಣೆತ್ತಿ ನೋಡುವುದಕ್ಕೂ ಹೆದರಿಕೆ. ತನ್ನ ಕುಲದೇವತೆಗೆ ಮನಸ್ಸಿನಲ್ಲಿಯೆ ಮಣಿದು, ಈ ರೌರವದಿಂದ ತಪ್ಪಿಸು ವಂತೆ ಬೇಡಿಕೊಂಡಳು.

ಸೀತೆಯ ರೂಪಕ್ಕೆ ಕರಗಿಹೋಗಿದ್ದ ರಾವಣನು ಆಕೆಯನ್ನು ಸಮೀಪಿಸುತ್ತಲೇ ತನ್ನ ಮನೋಭಿಪ್ರಾಯವನ್ನು ಆಕೆಗೆ ತಿಳಿಸಿದನು: "ಮೋಹನಾಂಗಿ, ನನ್ನನ್ನು ನೋಡಿ ಹೆದರುವುದೇಕೆ? ನಿನ್ನ ಸುಂದರವಾದ ದೇಹವನ್ನು ಹಾಗೆ ಸಂಕೋಚ ಗೊಳಿಸುವುದೇಕೆ? ಹೇ ವಿಶಾಲಾಕ್ಷಿ, ನಾನು ನಿನ್ನನ್ನು ಕಾಮಿಸುತ್ತಿದ್ದೇನೆ. ಪ್ರಿಯೆ ನನ್ನನ್ನು ಅನುಗ್ರಹಿಸು. ನೀನು ಸರ್ವಾಂಗ ಗುಣಸಂಪನ್ನೆ. ಸರ್ವಲೋಕ ಮನೋಹರಿ. ಅಂತಹ ನೀನು ಜಗತ್ತಿನಲ್ಲಿ ಯಾರಿಗೂ ಹೆದರಬೇಕಾದುದಿಲ್ಲ. ಎಲೈ ಭೀರುವೆ, ಪರಸ್ತ್ರೀಹರಣವು ರಾಕ್ಷಸರಾದ ನಮಗೆ ಕುಲಧರ್ಮ; ಆದ್ದರಿಂದ ನಿನ್ನನ್ನು ಅಪಹರಿಸಿ ತಂದಿದ್ದೇನೆ. ಆದರಿಂದಾಗಿ ನನ್ನನ್ನು ದೋಷಿಯೆಂದು ನೀನು ಭಾವಿಸಕೂಡದು. ಎಲೆ ಮೈಥಿಲಿ, ನಾನು ಅತಿಕಾಮಿ, ನಿಜ; ಆದರೆ ನೀನಾಗಿ ನನ್ನನ್ನು ಕಾಮಿಸಿದ ಹೊರತು ನಾನು ನಿನ್ನನ್ನು ಮುಟ್ಟುವುದಿಲ್ಲ. ದೇವಿ, ನನ್ನಲ್ಲಿ ನಂಬುಗೆಯನ್ನಿಡು; ನಿನ್ನ ಪ್ರೇಮ ವನ್ನು ನೀಡು, ಸೀತಾ! ನೀನು ದುಃಖಾಕ್ರಾಂತಳಾಗಬೇಡ. ಕೋಮಲಾಂಗಿಯಾದ ನೀನು ಹೀಗೆ ಕೊಳಕು ಬಟ್ಟೆಗಳನ್ನು ಧರಿಸಿ ಭೂಮಿಯ ಮೇಲೆ ಶಯನಿಸುತ್ತಾ, ನಿಷ್ಕಾರಣವಾಗಿ ನಿರಶನವ್ರತವನ್ನು ನಡಸುತ್ತಿರುವುದು ಯುಕ್ತವಾದುದಲ್ಲ. ಮೈಥಿಲಿ, ನೀನು ನನ್ನನ್ನು ವರಿಸು; ನನ್ನ ಅರಮನೆಯಲ್ಲಿ ನಿನಗೆ ಯಾವುದಕ್ಕೆ ಕೊರತೆಯಿದೆ? ಪರಿಮಳದ್ರವ್ಯಗಳಿಗಾಗಲಿ ವಸನ ಭೂಷಣಗಳಿಗಾಗಲ್ಲಿ ಹಂಸತೂಲಿಕಾತಲ್ಪಗಳಿಗಾಗಲಿ ಕೊರತೆಯಿದೆಯೆ? ಹೇ ಸುಂದರಿ, ನೀನು ಸ್ತ್ರೀಯರಲ್ಲಿ ರತ್ನಪ್ರಾಯೆ. ನಿನ್ನ ಸುಂದರ ವಾದ ಅವಯವಗಳು ಅಲಂಕಾರವಿರಹಿತವಾಗಿರಬಾರದು! ಯೌವನವು ಜಲಪ್ರವಾಹ ದಂತೆ. ಒಮ್ಮೆ ಕಳೆದು ಹೋದರೆ ಮತ್ತೆ ಬಂದೀತೆ? ಜಾನಕಿ, ನಿನ್ನ ಈ ಸುಂದರ ದೇಹವನ್ನು ಕಂಡು ಯಾವ ಪುರುಷನು ತಾನೆ ಮನಸ್ಸನ್ನು ಜಯಿಸಬಲ್ಲನು? ಬ್ರಹ್ಮನಿಗೂ ಕೂಡ ಅದು ಸಾಧ್ಯವಿಲ್ಲ. ಮನೋಹರಿ, ನೀನು ನನ್ನ ಮಡದಿಯಾಗು. ನನ್ನ ರಾಣೀವಾಸದಲ್ಲಿರುವ ಸುರ ಸುಂದರಿಯರೆಲ್ಲರೂ ನಿನ್ನ ದಾಸಿಯರಾಗುವರು. ನೀನು ಅವರ ಸೇವೆಯನ್ನು ಕೈಕೊಳ್ಳುತ್ತಾ ನನ್ನ ಪಟ್ಟಮಹಿಷಿಯಾಗು. ನನ್ನ ಸಕಲೈಶ್ವರ್ಯವನ್ನೂ ನಿನ್ನ ಪದತಲದಲ್ಲಿ ಅರ್ಪಿಸಿದ್ದೇನೆ. ಅದನ್ನು ಸ್ವೀಕರಿಸಿ ನನ್ನನ್ನು ಉದ್ಧರಿಸು. ಸುಂದರಿ, ನಿನಗಾಗಿ ನಾನು ಏನು ಮಾಡುವುದಕ್ಕೂ ಸಿದ್ಧನಾಗಿರುವೆನು. ಈ ಜಗತ್ತನ್ನೇ ಜಯಿಸಿ ನಿನ್ನ ತಂದೆಗೆ ಕಾಣಿಕೆಯಾಗಿ ಅರ್ಪಿಸುತ್ತೇನೆ. ನನ್ನ ಪದವಿ-ಭಾಗ್ಯ, ಕೀರ್ತಿ ಇವು ಸಾಮಾನ್ಯವಾದುವೇನೂ ಅಲ್ಲ. ಇವುಗಳ ಮುಂದೆ ನಾರುಬಟ್ಟೆಯ ನ್ನುಟ್ಟ ಆ ಸನ್ಯಾಸಿ ರಾಮನ ಯೋಗ್ಯತೆ ಎಷ್ಟರದು? ಮತ್ತೊಮ್ಮೆ ನೀನು ಅವನನ್ನು ಮರೆತುಬಿಡು. ದೇವಿ, ಗರುಡನು ಹಾವನ್ನು ಸೆಳೆದೊಯ್ಯುವಂತೆ ನಿನ್ನ ಕಣ್ಚೆಲುವು

ನನ್ನ ಮನಸ್ಸನ್ನು ಅಪಹರಿಸಿದೆ. ಎಲೈ ಭಾಮಿನಿ, ನೀನು ನನ್ನೊಡನೆ ಸೇರಿ ಸ್ವೇಚ್ಛೆಯಾಗಿ ವಿಹರಿಸು ; ವಿನೋದವಾಗಿ ಕ್ರೀಡಿಸು ; ಇದೋ ನಾವಿಬ್ಬರೂ ಸೇರಿ ಈ ಸಮುದ್ರತೀರದ ತೋಟಗಳಲ್ಲಿ ಮನತಣಿಯುವಷ್ಟು ವಿಹಾರ ಮಾಡೋಣ."

ಸೀತಾದೇವಿಗೆ ರಾವಣನ ಒಂದೊಂದು ಮಾತೂ ಕಾಸಿದ ಸೀಸರಸವನ್ನು ಕಿವಿಗೆ ಹೊಯ್ದಂತೆ ಕರ್ಣಕಠೋರವಾಗಿತ್ತು. ಪಾಪಿಯಾದ ಅವನನ್ನು ನೋಡುವುದಾಗಲಿ, ಅವನೊಡನೆ ಮಾತಾಡುವುದಾಗಲಿ ತನ್ನ ಘನತೆಗೆ ತಕ್ಕುದಲ್ಲವೆಂದು ಆಕೆಯ ಭಾವನೆ. ಆದುದರಿಂದ ಒಂದು ಹುಲ್ಲುಕಡ್ಡಿಯನ್ನೇ ತನ್ನೆದುರಿಗಿಟ್ಟುಕೊಂಡು ಅದರೊಡನೆ ಮಾತ



ಒಂದು ಹುಲ್ಲುಕಡ್ಡಿಯನ್ನೇ ತನ್ನೆದುರಿಗಿಟ್ಟುಕೊಂಡು ಅದರೊಡನೆ ಮಾತನಾಡುವ ನೆಪದಿಂದ ಸೀತೆ ರಾವಣನಿಗೆ ಪ್ರತ್ಯುತ್ತರ ಕೊಟ್ಟಳು.

ನಾಡುವ ನೆಪದಿಂದ ರಾವಣನ ಮಾತುಗಳಿಗೆ ಪ್ರತ್ಯುತ್ತರ ಕೊಟ್ಟಳು—ರಾಕ್ಷಸ, ನೀನು ನನ್ನನ್ನು ಬಯಸುವುದು ಪಾಪಿ ಮುಕ್ತಿಯನ್ನು ಬಯಸಿದಂತೆ. ನಾನು ಸತ್ಕುಲ ಪ್ರಸೂತೆ; ಪವಿತ್ರವಾದ ಮತ್ತೊಂದು ಕುಲಕ್ಕೆ ಸೇರಿದ್ದೇನೆ. ಪತಿಪ್ರಾಣಳಾದ ನಾನು ನೀನು ಹೇಳುವ ಅಕಾರ್ಯಕ್ಕೆ ಒಪ್ಪುವುದು ಸಾಧ್ಯವಿಲ್ಲ. ನೀನು ನನ್ನ ಮೇಲಿನ ಮೋಹವನ್ನು ತ್ಯಜಿಸು. ಇದರಿಂದ ನಿನಗೂ ಶ್ರೇಯಸ್ಸು. ಪರಸ್ತ್ರೀಯರನ್ನು ಕಾಮಿಸಿ ದವನು ಇಹಪರಗಳೆರಡರಲ್ಲಿಯೂ ಅಧೋಗತಿಗೆ ಇಳಿದುಹೋಗಬೇಕಾಗುತ್ತದೆ. ಸ್ವಲ್ಪ ಯೋಚಿಸಿನೋಡು. ನಿನ್ನ ಪತ್ನಿಯನ್ನು ಪರಪುರುಷರಿಂದ ರಕ್ಷಿಸುವಂತೆ ಇತರರ ಪತ್ನಿಯರನ್ನೂ ರಕ್ಷಿಸಬೇಡವೆ? ನಿನ್ನ ಪತ್ನಿಯರಲ್ಲಿ ನೀನು ರಮಿಸು. ನಿನ್ನ ರಾಜ್ಯ ಇಷ್ಟು ದೊಡ್ಡದು; ಇದರಲ್ಲಿ ನಿನಗೆ ಬುದ್ಧಿವಾದ ಹೇಳುವ ಹಿರಿಯರು ಒಬ್ಬರೂ ಇಲ್ಲವೇ? ಅಥವಾ ಇದ್ದರೂ ಅತಿಕಾಮಿಯಾದ ನೀನು ಅವರ ಮಾತನ್ನು ಮೀರಿ ನಡೆಯುತ್ತಿರಬಹುದು. ಅವರು ಹೇಳುವ ಮಾತುಗಳು ನಿನಗೀಗ ಪಥ್ಯವಾಗದಿದ್ದರೆ ಕೊನೆಯಲ್ಲಿ ಕೇಡು ತಪ್ಪಿದುದಲ್ಲ. ನೀನು ನಿನ್ನ ಭೋಗಸಾಮಗ್ರಿಗಳನ್ನು ತೋರಿ ನನ್ನ ಮನಸ್ಸನ್ನು ಒಲಿಸಬೇಕೆಂದು ಭ್ರಾಂತಿಪಡುವೆಯಲ್ಲಾ! ನಿನ್ನ ಆ ಐಶ್ವರ್ಯವೆಲ್ಲಾ ಶ್ರೀರಾಮನ ಪಾದರೇಣುವಿಗೂ ಸಮನಲ್ಲ. ಆ ನನ್ನ ಸ್ವಾಮಿಯ ಭುಜದಮೇಲೆ ತಲೆಯಿಟ್ಟು ಮಲಗುತ್ತಿದ್ದ ನಾನು ಮತ್ತೊಬ್ಬರ ತೋಳನ್ನು ಸೋಂಕುವೆನೆ? ಜ್ಞಾನಿಗೆ ವಿದ್ಯೆ ಹೇಗೋ ಹಾಗೆ ನಾನು ಶ್ರೀರಾಮನಿಂದ ಅಭಿನ್ನೆ. ರಾವಣಾ, ಈಗಲೂ ಚಿಂತೆಯಿಲ್ಲ. ಆತನೊಡನೆ ನನ್ನನ್ನು ಸೇರಿಸಿ ಪುಣ್ಯಕಟ್ಟಿಕೋ. ಇಗೋ ರಾಕ್ಷಸಾ, ಸಾರಿ ಹೇಳಿದ್ದೇನೆ. ನಿನಗೆ ಜೀವಸಹಿತ ಉಳಿಯಬೇಕೆಂಬ ಆಶೆಯಿದ್ದರೆ ಶ್ರೀರಾಮಚಂದ್ರ ನಲ್ಲಿ ಪ್ರಸನ್ನತೆಯನ್ನು ಪಡೆ. ನೀನು ಮಹಾಪರಾಧಿಯಾದರೂ ಆ ಕರುಣಾಳು ನಿನ್ನನ್ನು ಕ್ಷಮಿಸುವನು. ನನ್ನನ್ನು ಕೊಂಡೊಯ್ದು ಆತನಿಗೆ ಒಪ್ಪಿಸಿ ಆತನಿಗೆ ಶರಣಾಗತನಾಗು. ನಿನಗೆ ಪ್ರಾಣದಾನ ಮಾಡುವಂತೆ ನಾನು ಆತನನ್ನು ಪ್ರಾರ್ಥಿಸು ತ್ತೇನೆ. ನಾನು ಹೇಳಿದಂತೆ ನೀನು ಆಚರಿಸಲಿಲ್ಲವೋ ನಿನಗೆ ಮಾತ್ರವಲ್ಲ, ಈ ಲಂಕೆಯಲ್ಲಿರುವ ಪ್ರತಿಯೊಬ್ಬರಿಗೂ ಮೃತ್ಯು ತಪ್ಪಿದುದಲ್ಲ. ಶ್ರೀರಾಮನ ನಾಮಾಂಕಿತ ವಾದ ಬಾಣಗಳು ಸಿಡಿಲಿನ ಮಳೆಯಂತೆ ಲಂಕೆಯನ್ನೆಲ್ಲಾ ವ್ಯಾಪಿಸುವಾಗ ಅದನ್ನು ನಿವಾರಿಸುವರಾರು? ನೀನು ಇಂದ್ರನ ವಜ್ರಾಯುಧಕ್ಕೆ ಹೆದರದಿರಬಹುದು; ಯಮನ ಕಾಲಪಾಶಕ್ಕೆ ಹೆದರದಿರಬಹುದು; ಆದರೆ ಶ್ರೀರಾಮನ ಬಾಣಗಳನ್ನು ನಿತ್ತರಿಸುವುದು ಮಾತ್ರ ಅಸಾಧ್ಯ. ಆ ಪುರುಷಸಿಂಹನು ತನ್ನ ತಮ್ಮನೊಡನೆ ಆಶ್ರಮದಿಂದ ದೂರವಿದ್ದ ಸಮಯದಲ್ಲಿ ಮೋಸದಿಂದ ಕದ್ದುತಂದೆ. ಅವರ ವಾಸನೆಯೇನಾದರೂ ಅಲ್ಲಿದ್ದರೆ ಹೆಬ್ಬುಲಿಯ ವಾಸನೆಯನ್ನು ಕಂಡ ನಾಯಿಯಂತೆ ನೀನು ಪಲಾಯನವಾಗುತ್ತಿದ್ದೆ. ಎಲೆ ಹೇಡಿ ರಾವಣಾ, ನನ್ನ ಪ್ರಾಣನಾಥನಾದ ಶ್ರೀರಾಮಚಂದ್ರನು ತನ್ನ ತಮ್ಮ ನೊಡನೆ ಶೀಘ್ರವಾಗಿಯೇ ಇಲ್ಲಿಗೆ ಬರುವನು. ಸೂರ್ಯನು ತನ್ನ ಪ್ರಖರ ಕಿರಣಗಳಿಂದ ತೇವವನ್ನು ಹೀರುವಂತೆ ಆತನು ತನ್ನ ಬಾಣಗಳಿಂದ ನಿನ್ನ ಪ್ರಾಣಗಳನ್ನು

ಹೀರುವನು. ನಿಜವಾಗಿಯೂ ನಿನಗೆ ಕೇಡುಗಾಲ ಬಂದಿದೆ; ಅದಕ್ಕೇ ಈ ವಿಪರೀತ ಬುದ್ಧಿ ಹುಟ್ಟಿದೆ. ಮರವೆಷ್ಟು ದೊಡ್ಡದಾದರೂ ಸಿಡಿಲಿಗೆ ಸಿಕ್ಕಿ ಹೇಗೆ ಬದುಕಲಾರದೋ ಹಾಗೆ ನೀನೂ ಶ್ರೀರಾಮಬಾಣಕ್ಕೆ ಸಿಕ್ಕಿ ಉಳಿಯಲಾರೆ. ವೇಳೆಮೀರುವುದಕ್ಕೆ ಮುನ್ನವೆ ಎಚ್ಚತ್ತುಕೊ. ಇಲ್ಲದಿದ್ದರೆ ನೀನು ಯಾವ ದೇವರನ್ನು ಮರೆಹೊಕ್ಕರೂ, ಎಲ್ಲಿ ಬಚ್ಚಿಟ್ಟುಕೊಂಡರೂ ಮೃತ್ಯು ತಪ್ಪದು."

ಸೀತಾದೇವಿಯ ಮಾತುಗಳನ್ನು ಕೇಳಿ ರಾವಣನ ಕೋಪ ಕೆರಳಿತು. ಆದರೂ ಅದನ್ನು ನುಂಗಿಕೊಂಡು "ಜಾನಕಿ, ಹಿತದ ನುಡಿಗಳನ್ನು ಹೇಳಿದಷ್ಟೂ ತಿರಸ್ಕರಿಸುತ್ತಾ ಹೋಗುವುದು ಸ್ತ್ರೀಯರ ಸ್ವಭಾವ. ಅದೆಷ್ಟು ನನ್ನನ್ನು ತಿರಸ್ಕರಿಸಿ ಮಾತ ನಾಡುವೆಯೋ ಆಡು. ಸಾರಥಿ ಹದ್ದು ಮೀರಿದ ಕುದುರೆಗಳನ್ನು ಬಿಗಿ ಹಿಡಿದಂತೆ ನನ್ನ ಕೋಪವನ್ನು ನಿನ್ನ ಮೇಲಿನ ಪ್ರೇಮದಿಂದ ತಡೆದು ನಿಲ್ಲಿಸುತ್ತೇನೆ. ಕಾಮ ಹುಟ್ಟಿದ ಕಡೆ ದಯಾಪ್ರೇಮಗಳು ಹುಟ್ಟುತ್ತವೆ. ಆದ್ದರಿಂದ ನಿನ್ನ ಕಡುನುಡಿಗಳನ್ನೆಲ್ಲಾ ಕ್ಷಮಿಸುತ್ತೇನೆ. ನಿನ್ನ ಮಾನಭಂಗವಾಗಲಿ ವಧೆಯಾಗಲಿ ನನಗೊಂದು ಮಹತ್ಕಾರ್ಯ ವಲ್ಲ. ಆದರೆ ಹೇ ಸುಂದರಿ, ನನ್ನ ಕಾಮ ನನ್ನ ಕೋಪವನ್ನು ಹಿಡಿದು ನಿಲ್ಲಿಸಿದೆ. ಎಲೆ ಸೀತೆ, ನಿನಗೆ ಕೊಟ್ಟಿದ್ದ ವರ್ಷಾವಧಿಯಲ್ಲಿ ಇನ್ನೆರಡು ತಿಂಗಳು ಮಾತ್ರ ಉಳಿದಿದೆ. ಅಷ್ಟರೊಳಗೆ ನೀನು ನನ್ನ ಹಾಸಿಗೆಗೆ ಏರಲೇ ಬೇಕು. ಹಾಗಾಗದಿದ್ದಲ್ಲಿ ನಿನ್ನನ್ನು ನನ್ನ ಬೆಳಗಿನ ಊಟಕ್ಕಾಗಿ ಅಡುಗೆಯ ಮನೆಗೆ ಕಳುಹಿಸಬೇಕಾದೀತು !" ಎಂದನು.

ರಾವಣನ ಕಠೋರ ಶಾಸನವನ್ನು ಕೇಳಿ ಅವನೊಡನೆ ಬಂದಿದ್ದ ದೇವಕನ್ಯೆಯ ರೆಲ್ಲರೂ ಸೀತೆಗಾಗಿ ಮರುಗಿ ಕಣ್ಣೀರಿಟ್ಟರು. ಅವರಲ್ಲಿ ಕೆಲವರು ಸೀತೆಗೆ ಸಂಜ್ಞೆಯಿಂದಲೆ ಸಮಾಧಾನ ಹೇಳಿದರು. ಆದರೆ ಆಕೆಗೆ ಆ ಸಮಾಧಾನದ ಅವಶ್ಯಕತೆಯೆ ಇರಲಿಲ್ಲ. ತನ್ನ ಪಾತಿವ್ರತ್ಯವೆ ತನಗೆ ಬೆಂಬಲವೆಂಬುದು ಆಕೆಯ ಧೈರ್ಯ. ಅದನ್ನು ನಂಬಿ ಧೈರ್ಯ ದಿಂದಲೆ ರಾವಣನಿಗೆ ಉತ್ತರ ಕೊಟ್ಟಳು—"ಎಲವೊ ರಾವಣಾ, ನೀನು ಎಂತಹ ನೀಚ ! ಇಂದ್ರನಿಗೆ ಶಚೀದೇವಿಯಂತೆ ಧರ್ಮಾತ್ಮನಾದ ಶ್ರೀರಾಮನಿಗೆ ಪತ್ನಿಯಾದಂತಹ ನನ್ನನ್ನು ಬಯಸುವವರು ಮೂರು ಲೋಕಗಳಲ್ಲಿ ನಿನ್ನ ಹೊರತು ಮತ್ತಾರೂ ಇಲ್ಲ. ಇದು ಅಧರ್ಮ ಕಾರ್ಯವೆಂದು ನಿನಗೆ ಬುದ್ಧಿ ಹೇಳಿ ನಿನ್ನ ಮನಸ್ಸನ್ನು ನಿರ್ಮಲ ಗೊಳಿಸುವವಳು ನಿನಗೆ ಯಾರೂ ಇಲ್ಲವೆ? ಅಯ್ಯೋ, ರಾಕ್ಷಸಾಧಮಾ, ಶ್ರೀರಾಮ ಪತ್ನಿಯಾದ ನನ್ನಲ್ಲಿ ನೀನಾಡಿರುವ ಪಾಪವಚನಗಳಿಗೆ ತಕ್ಕ ಫಲ ನೀನೆಲ್ಲಿ ಹೋದರೆ ತಪ್ಪೀತು? ಮದಗಜವನ್ನು ಕೆಣಕಿದ ಮೊಲದಂತೆ ನೀನು ಶ್ರೀರಾಮನನ್ನು ಕೆರಳಿಸಿ ರುವೆ. ಹೇಡಿಯಾದ ನೀನು ರಾಮಬಾಣಕ್ಕೆ ಹೆದರಿ ಕಳ್ಳತನದಿಂದ ನನ್ನನ್ನು ಹೊತ್ತುಕೊಂಡು ಬಂದೆಯಲ್ಲಾ ! ನನ್ನೆದುರಿಗೆ ನಿನ್ನ ಪ್ರತಾಪವನ್ನು ಕೊಚ್ಚಿಕೊಳ್ಳು ವುದಕ್ಕೆ ನಿನಗೆ ನಾಚಿಕೆಯಾದರೂ ಆಗುವುದಿಲ್ಲವೆ? ನನ್ನನ್ನು ಪಾಪದ ಕಣ್ಣುಗಳಿಂದ ನೋಡುತ್ತಿರುವ ನಿನ್ನ ಕಣ್ಣುಗಳು ಉದುರಿ ಹೋಗಬಾರದೆ? ಧರ್ಮಜ್ಞನಾದ ರಾಮನ ಪತ್ನಿಯಾಗಿ, ದಶರಥನ ಸೊಸೆಯಾದ ನನ್ನಲ್ಲಿ ಅವಾಚ್ಯಗಳನ್ನಾಡುವ ನಿನ್ನ

ನಾಲಗೆ ಸೀಳಿ ಹೋಗಬಾರದೆ! ನನ್ನ ಪತಿವ್ರತಾಶಕ್ತಿ ನಿನ್ನನ್ನು ಸುಟ್ಟು ಭಸ್ಮಮಾಡ ಬಾರದೆ! ಪಾಪಿ! ನೀನು ಅಲ್ಲ ನನ್ನನ್ನು ಇಲ್ಲಿಗೆ ಕರೆತಂದುದು, ನಿನ್ನ ದುರ್ವಿಧಿ ನಿನ್ನ ಮೃತ್ಯುವನ್ನು ಇಲ್ಲಿಗೆ ಕರೆತಂದಿದೆ."

ರಾವಣನು ಸೀತೆಯ ನುಡಿಗಳನ್ನು ಕೇಳಿ ಕೋಪದಿಂದ ಸಂತಪ್ತನಾದನು. ಅವನು ಕಿಡಿಗಳನ್ನು ಕಾರುತ್ತಿದ್ದ ತನ್ನ ಕಣ್ಣುಗಳಿಂದ ಆಕೆಯನ್ನು ದಹಿಸುವವನಂತೆ ದುರುಗುಟ್ಟಿಕೊಂಡು ನೋಡಿದನು. ನೀಲಮೇಘದಂತೆ ಕಪ್ಪಾದ ಆ ಮಹಾಕಾಯನು ಸ್ಮಶಾನದಲ್ಲಿನ ಮಹಾವೃಕ್ಷದಂತೆ ಭಯಂಕರನಾಗಿ ತೋರುತ್ತಾ, "ದರಿದ್ರರಾಮ ನಲ್ಲಿಯೆ ನಟ್ಟಮನಸ್ಸುಳ್ಳ, ಏ, ದರಿದ್ರಹೆಣ್ಣೇ, ಸೂರ್ಯನು ಸಂಧ್ಯಾಕಾಲದ ರೂಪಳಿಸು ವಂತೆ ನಾನು ಕ್ಷಣಮಾತ್ರದಲ್ಲಿ ನಿನ್ನನ್ನು ಧ್ವಂಸಮಾಡುತ್ತೇನೆ, ತಡೆ" ಎಂದು ಗದರಿ ನುಡಿದು ಅಲ್ಲಿದ್ದ ರಾಕ್ಷಸಿಯರನ್ನು ಹತ್ತಿರಕ್ಕೆ ಕರೆದನು. ಕಾಲಿನಲ್ಲಿ ಜುಟ್ಟಿರುವವಳು, ಆನೆಯ ಕಿವಿಯವಳು, ಮೂಗಿಲ್ಲದವಳು, ಹಂದಿಯ ಮುಖದವಳು—ಇತ್ಯಾದಿ ವಿಕಾರ ರೂಪಿಯವರು ಒಡನೆಯೆ ಓಡಿ ಬಂದರು. ರಾವಣನು ಅವರನ್ನು ಕುರಿತು "ಎಲೈ ರಾಕ್ಷಸಿಯರೆ, ನೀವು ಒಡನೆಯೆ ಸೀತೆಯನ್ನು ನನ್ನ ವಶಪಡಿಸಿರಿ. ನಯವೋ, ಭಯವೋ; ಕೊನೆಗೆ ದಂಡೋಪಾಯವಾದರೂ ಚಿಂತೆಯಿಲ್ಲ" ಎಂದನು. ಮಾತ ನಾಡುತ್ತಾ ಆಡುತ್ತಾ ಅವನ ಕಾಮವೂ ಕೋಪವೂ ಉಲ್ಬಣಕ್ಕೇರಿದುವು. ಸೀತೆಯ ಮಾನಭಂಗಕ್ಕಾಗಿ ಆತನು ಮುಂದೆ ನುಗ್ಗಿದನು. ಅಷ್ಟರಲ್ಲಿ ಧಾನ್ಯಮಾಲಿನಿಯೆಂಬ ಆತನ ರಾಣಿ ಆತನನ್ನು ತಡೆದು, "ಮಹಾರಾಜ, ಇಷ್ಟು ಕೋಪವೇಕೆ? ಈ ಸೀತೆಯೇನು ಮಹಾ! ನೀನು ಕ್ರೀಡಿಸಬೇಕೆಂದರೆ ನಾವು ಇಲ್ಲವೆ? ಈ ನರಹುಳು ಕಂದಿ, ಕುಂದಿ, ಕೃಶವಾಗಿ ಹೋಗಿದೆ; ಅದನ್ನು ಏನೆಂದು ಕಾಮಿಸುತ್ತಿರುವೆ? ಸುಖವನ್ನು ಭೋಗಿಸುವುದಕ್ಕೂ ಪುಣ್ಯಬೇಕು. ರಾಜಾಧಿರಾಜನಾದ ನೀನು ಸ್ವತಃ ಮುಂದೆ ಬಂದು ಬೇಡಿದರೆ, ಆ ಭೋಗವನ್ನು ಅನುಭವಿಸುವುದು ಈ ಹಾಳು ಹೆಣ್ಣಿನ ಹಣೆಯಲ್ಲಿ ಬರೆದಿಲ್ಲ. ಇದಕ್ಕೆ ನೀನೇನು ಮಾಡೀಯೆ? ಕಾಮಿಸದವಳೊಡನೆ ಭೋಗ ಸುಖವನ್ನು ಅಪೇಕ್ಷಿಸುವುದು ವೃಥಾ ಶ್ರಮ. ತಾನಾಗಿಯೆ ಬಯಸಿ ಬಂದವಳೊಡನೆ ಅನುಭವಿಸುವ ಭೋಗಸುಖವೆ ಅತ್ಯಂತ ಶ್ರೇಯಸ್ಕರವಾದುದು. ಆದ್ದರಿಂದ ಅವಳಲ್ಲಿನ ಮೋಹವನ್ನು ತ್ಯಜಿಸು. ಇಗೋ ನನ್ನೊಡನೆ ಕ್ರೀಡಿಸು" ಎಂದಳು. ಅವಳ ಮಾತು ಗಳನ್ನು ಕೇಳಿ ರಾವಣನ ಮನಸ್ಸು ಹರ್ಷಗೊಂಡಿತು. ಮುಗುಳ್ನಗೆ ನಗುತ್ತಾ ಧಾನ್ಯಮಾಲಿನಿಯ ಕೈಹಿಡಿದುಕೊಂಡು ಆ ರಾವಣನು ಭೂಮಿ ನಡುಗುವಂತೆ ಹೆಜ್ಜೆಗಳನ್ನಿಡುತ್ತಾ ಅಲ್ಲಿಂದ ಹಿಂತಿರುಗಿ ತನ್ನ ಅಂತಃಪುರವನ್ನು ಸೇರಿದನು. ಹೋಗುವ ಮುನ್ನ ಹೇಗಾದರೂ ಮಾಡಿ ಸೀತೆಯನ್ನು ತನ್ನ ವಶಪಡಿಸಬೇಕೆಂದು ಅಲ್ಲಿದ್ದ ಕಾವಲವರಿಗೆ ಆತನು ಕಟ್ಟಾಜ್ಞೆ ಮಾಡುವುದನ್ನು ಮಾತ್ರ ಮರೆಯಲಿಲ್ಲ.

---

೯

# ಧಿಕ್ ಈ ಮನುಷ್ಯತೆಗೆ!

ಅತ್ತ ರಾವಣನು ಕಣ್ಮರೆಯಾಗುತ್ತಲೆ ಇತ್ತ ರಾಕ್ಷಸಿಯರು ಸೀತೆಯನ್ನು ಸುತ್ತಿಕೊಂಡು ಅವಳನ್ನು ಗೋಳುಹೊಯ್ದುಕೊಳ್ಳಲು ಆರಂಭಿಸಿದರು. ಅದರಲ್ಲಿ ಒಬ್ಬಳು ಆಕೆಯನ್ನು ಕುರಿತು "ಎಲೈ ಸೀತೆ, ರಾವಣ ಸಾರ್ವಭೌಮನೆಂದರೆ ಏನೆಂದು ತಿಳಿದುಕೊಂಡೆ. ಆತನು ಪುಲಸ್ತ್ಯಬ್ರಹ್ಮನ ವಂಶದಲ್ಲಿ ಹುಟ್ಟಿದ ಮಹನೀಯ! ಆತನಿಗೆ ಹತ್ತು ತಲೆ. ಅಂತಹವನಿಗೆ ಭಾರ್ಯೆಯಾಗಲು ಸಮ್ಮತಿಯಿಲ್ಲವೆ? ಚೆನ್ನಾಯಿತು!" ಎಂದಳು. ಮತ್ತೊಬ್ಬಳು "ಎಲೆ ಸೀತೆ, ಪುಲಸ್ತ್ಯ ಎಂದರೆ ಯಾರು ಗೊತ್ತೆ? ಮರೀಚಿಯೇ ಮೊದಲಾದ ಆರು ಮಂದಿ ಬ್ರಹ್ಮರಲ್ಲಿ ಆತನೂ ಒಬ್ಬ. ಆತನ ಮಾನಸಪುತ್ರನಾದ ವಿಶ್ವವಸ್ಸು ನಮ್ಮ ರಾವಣೇಶ್ವರನ ತಂದೆ. ನಮ್ಮ ರಾವಣೇಶ್ವರನೆಂದರೆ ರಾಕ್ಷಸ ವಂಶಕ್ಕೆಲ್ಲಾ ಚಕ್ರವರ್ತಿ. ಇವನಿಗೆ ನೀನು ಪತ್ನಿಯಾಗಿರಲೊಲ್ಲೆಯಾ? ನಿನಗೇನು ಅವಿವೇಕ? ಈಗಲಾದರೂ ನನ್ನ ಮಾತು ಕೇಳು. ನಿನ್ನ ಹಿತಕ್ಕಾಗಿಯೆ ನಾನು ಹೇಳುತ್ತಿರುವುದು. ಆದ್ದರಿಂದ ನನ್ನ ಮಾತನ್ನು ತಿರಸ್ಕರಿಸಬೇಡ ರಾವಣೇಶ್ವರನನ್ನು ವರಿಸಿ ಸುಖವಾಗಿರು" ಎಂದಳು. ಅಷ್ಟರಲ್ಲಿ ಬೆಕ್ಕಿನ ಕಣ್ಣಿನ 'ಹರಿಜಟೆ'ಯೆಂಬುವಳು "ಎಲೆ ಸೀತಾ, ರಾವಣನ ಪರಾಕ್ರಮ ಎಂತಹುದು ಗೊತ್ತೆ? ಮೂವತ್ತು ಮೂರು ಕೋಟಿ ದೇವತೆಗಳಿಗೂ ದೊರೆಯಾದ ಇಂದ್ರನೇ ಆತನ ಕೈಲಿ ಸೋತು ಹೋಗಿದ್ದಾನೆ. ಇಂತಹ ಶೂರನನ್ನು ಕೈಹಿಡಿಯಲು ಪುಣ್ಯ ಪಡೆದಿರಬೇಕು" ಎಂದಳು. ಅನಂತರ ಪ್ರಘಸೆ ಎಂಬುವಳು "ಏ, ಹುಚ್ಚಿ, ರಾವಣೇಂದ್ರನಿಗೆ ಹೆಂಡತಿಯರು ಗತಿಯಿಲ್ಲದುದಕ್ಕಾಗಿ ನಿನಗೆ ಸೋತು ಬಾಯ್ಬಿಟ್ಟಿರುವನೆಂದು ಭಾವಿಸಿದೆಯಾ? ಆತನಿಗೆ ಎಷ್ಟೋ ಮಂದಿ ಮಡದಿಯರುಂಟು. ಅವರಿಗೆಲ್ಲಾ ಪ್ರಮುಖಳಾದ ಮಂಡೋದರಿಯೆಂಬ ಪಟ್ಟದ ರಾಣಿಯೂ ಉಂಟು. ಅವರೆಲ್ಲರನ್ನೂ ಕಡೆಗಣಿಸಿ ನಿನ್ನನ್ನು ಕಾಮಿಸಿ ಬಂದಿದ್ದಾನೆ. ಆತನನ್ನು ಸೇರಿದರೆ ನೀನೇ ಅಂತಃಪುರದ ಒಡತಿಯಾಗುತ್ತಿ." ಅವಳಾದ ಮೇಲೆ ವಿಕಟೆಯೆಂಬ ಬೇರೆ ರಾಕ್ಷಸಿ ಹೇಳಿದಳು—"ಅಯ್ಯೋ, ರಾವಣನಂತಹ ಮಹಾ ಶೂರನನ್ನು ಸೇರುವುದಕ್ಕೂ ಪುಣ್ಯ ಬೇಕಲ್ಲ!" ದುರ್ಮುಖಿ, ವಿಕಟೆಯ ಮಾತನ್ನು ಮುಂದುವರಿಸುತ್ತಾ "ಅಷ್ಟಲ್ಲದೆ ಏನು? ರಾವಣ ಸಾರ್ವಭೌಮನನ್ನು ಕಂಡರೆ ಸೂರ್ಯ ಹೆದರಿ ತಣ್ಣಗಾಗುತ್ತಾನೆ; ವಾಯು ನಡುಗಿ ನಿಧಾನವಾಗಿ ನಡೆಯುತ್ತಾನೆ; ಮರಗಳು ಹೆದರಿ ಹೂಮಳೆ ಕರೆಯುತ್ತವೆ; ಮೇಘಗಳು ಹೆದರಿ ನೀರನ್ನು ಸುರಿಸುತ್ತವೆ. ಅಂತಹ ಮಹನೀಯನಿಗೆ ಭಾರ್ಯೆಯಾಗಲು ಇವಳಿಗೇಕೆ ಬುದ್ಧಿ ಹುಟ್ಟಲೊಲ್ಲದು? ಸೀತೆ, ನಾವು ಯಥಾರ್ಥವಾದ ಸಂಗತಿಗಳನ್ನು ನಿನಗೆ ಹೇಳಿದ್ದೇವೆ. ನಮ್ಮ ಮಾತಿನಂತೆ

ನಡೆದೆಯೊ, ನೀನು ಉಳಿದುಕೊಳ್ಳುತ್ತಿ ; ಇಲ್ಲವೋ ನಿನ್ನ ಪ್ರಾಣಗಳು ಉಳಿಯುವುದು ಕಷ್ಟ" ಎಂದಳು.

ನರಿಗಳು ಬಳ್ಳಿಕ್ಕಿದರೆ ದೇವಲೋಕ ಹಾಳೆ ? ಸೀತಾದೇವಿ ಅವರ ಮಾತುಗಳನ್ನು ಕೇಳಿ 'ಉಂ' ಎನಲಿಲ್ಲ, 'ಉಃ' ಎನಲಿಲ್ಲ. ಅದನ್ನು ಕಂಡು ಅವಳನ್ನು ಮುತ್ತಿದ ರಾಕ್ಷಸಿಯರಿಗೆ ಬಹು ಕೋಪ ಬಂದಿತು. ಅವರು ಆಕೆಯನ್ನು ಕಠೋರ ರೀತಿಯಲ್ಲಿ ನಿಂದಿಸುತ್ತಾ "ಎಲೇ ಸೀತೆ, ಅತ್ಯುತ್ತಮ ಶಯನಾಸನಗಳಿಂದ ಶೋಭಿಸುವ ರಾವಣನ ಅಂತಃಪುರ ನಿನಗೆ ರುಚಿಸದೆ ಹೋಯಿತೆ ? ದುರದೃಷ್ಟದಿಂದ ಒಮ್ಮೆ ಮನುಷ್ಯ ಮಾತ್ರರ ಹೆಂಡತಿಯಾದ ಮಾತ್ರಕ್ಕೆ ಕಡೆಯವರೆವಿಗೂ ಅವರ ಹೆಂಡತಿಯಾಗಿಯೇ ಉಳಿಯಬೇಕೆ ? ಆ ದರಿದ್ರ ರಾಮನಿಂದ ನಿನ್ನ ಮನಸ್ಸನ್ನು ತಿರುಗಿಸು. ಇನ್ನು ನೀನು ರಾಮನನ್ನು ಕಾಣುವುದು ಸಾಧ್ಯವೆ ? ಆ ಆಸೆಯನ್ನು ತ್ಯಜಿಸು. ಮೂರು ಲೋಕದ ಐಶ್ವರ್ಯಕ್ಕೂ ಒಡೆಯನಾದ ರಾವಣೇಶ್ವರನೆಲ್ಲಿ ? ರಾಜ್ಯಭ್ರಷ್ಟನಾದ ಆ ದೀನ ರಾಮನೆಲ್ಲಿ ? ನೀನೋ ಕುಂದಿಲ್ಲದ ಸೌಂದರ್ಯಕ್ಕೆ ಒಡತಿ. ನಿನಗೆ ಸರಿಯಾದ ಗಂಡನೆಂದರೆ ರಾವಣೇಶ್ವರನೇ. ಆದ್ದರಿಂದ ನಿನ್ನ ಮರುಳಾಟವನ್ನು ಬಿಟ್ಟು, ರಾವಣೇಶ್ವರನಲ್ಲಿ ಸೇರಿ ಇಷ್ಟಬಂದಂತೆ ವಿಹರಿಸು" ಎಂದರು.

ಗಂಡನ ದೂಷಣೆಯನ್ನು ಕೇಳಿ ಸೀತೆಯ ಪದ್ಮನೇತ್ರಗಳಲ್ಲಿ ಕಂಬನಿದುಂಬಿದುವು. ಆಕೆ ಗಳಗಳನೆ ಅಳುತ್ತಾ ಆ ರಾಕ್ಷಸಿಯರನ್ನು ಕುರಿತು "ನೀವು ಆಡುತ್ತಿರುವ ಆ ಅಸಹ್ಯಕರವಾದ ಮಾತುಗಳು ಪಾಪಕರವೆಂದು ನಿಮಗೆ ಏಕೆ ತೋರುತ್ತಿಲ್ಲ ? ನಿಮ್ಮ ನುಡಿಗಳನ್ನು ನಾನು ಕಿವಿಯಿಂದ ಕೇಳಲಾರೆ. ನೀವೆಲ್ಲರೂ ಸೇರಿ ನನ್ನನ್ನು ಕಿತ್ತು ತಿಂದರೂ ಚಿಂತೆಯಿಲ್ಲ. ನಾನು ಬೇರೆ ನಿಮ್ಮ ಇಷ್ಟದಂತೆ ನಡೆಯಲಾರೆ. ದರಿದ್ರನಾಗಲಿ ರಾಜ್ಯಭ್ರಷ್ಟನಾಗಿರಲಿ ನನ್ನನ್ನು ಕೈಹಿಡಿದಾತನು ನನ್ನ ಪಾಲಿನ ದೇವರು. ಅರುಂಧತಿ ವಸಿಷ್ಠನನ್ನು, ಸಾವಿತ್ರಿ ಸತ್ಯವಾನನನ್ನು, ದಮಯಂತಿ ನಳಮಹಾರಾಜನನ್ನು ಅನುವರ್ತಿಸುವಂತೆ ನಾನೂ ನನ್ನ ಪತಿಯನ್ನು ಅನುಸರಿಸುವವಳೇ ಸರಿ" ಎಂದಳು. ಅವಳ ಮಾತುಗಳಿಂದ ರಾಕ್ಷಸಿಯರಿಗೆ ಬಹಳ ಕೋಪ ಬಂದಿತು. ತುಟಿಗಳನ್ನು ಕಡಿಯುತ್ತಾ ಕೈಲಿದ್ದ ಗಂಡುಗೊಡಲಿಗಳನ್ನು ಎತ್ತಿ ತೋರಿಸುತ್ತಾ "ರಾವಣೇಶ್ವರ ನನ್ನು ವರಿಸುವ ಭಾಗ್ಯ ಈ ನತದೃಷ್ಟಳಿಗೆಲ್ಲಿಯದು ?" ಎಂದು ಹೀಯಾಳಿಸಿದರು. ಸೀತಾದೇವಿ ಅವರ ಅವಾಚ್ಯಶಬ್ದಗಳನ್ನು ಕೇಳಲಾರದೆ ಅಲ್ಲಿಂದೆದ್ದು ಹನುಮಂತನು ಕುಳಿತಿದ್ದ ಮರದ ಕೆಳಕ್ಕೆ ಹೊರಟು ಹೋದಳು. ಬೆನ್ನಟ್ಟಿ ಬರುವ ಪ್ರಾರಬ್ಧದಂತೆ ಆ ರಾಕ್ಷಸಿಯರೂ ಆಕೆಯ ಹಿಂದೆಯೇ ಅಲ್ಲಿಗೆ ಹೋದರು. ಅವರಲ್ಲಿ ವಿನತೆಯೆಂಬ ಬತ್ತಿದ ಹೊಟ್ಟೆಯ ಭಯಂಕರ ರಾಕ್ಷಸಿ ಸೀತೆಯನ್ನು ಕುರಿತು "ಎಲೌ ಮಂಗಳಾಂಗಿ, ನೀನು ನಿನ್ನ ಪತಿ ಪ್ರೇಮವನ್ನು ಬಹು ಚೆನ್ನಾಗಿ ಪ್ರದರ್ಶಿಸಿರುವೆ. ಇದರಿಂದ ನಾನು ಅತ್ಯಂತ ಸುಪ್ರೀತಳಾಗಿರುವೆನು. ಆದ್ದರಿಂದ ನಿನ್ನ ಮೇಲ್ಮೆಗಾಗಿ ನಾನೊಂದು ಮಾತು ಹೇಳುತ್ತೇನೆ ಕೇಳು. ಇಲ್ಲಿ ನೋಡು ; ಅತಿಯಾಗಿ ಯಾವುದನ್ನೂ ಮಾಡುವುದು

ಅವಿವೇಕಿ. ಇನ್ನು ರಾಮ, ರಾಮ ಎಂದು ಹಾಳು ರಾಮನಿಗಾಗಿ ಹಲುಬುವುದನ್ನು ನಿಲ್ಲಿಸು. ಮಹಾತ್ಮನಾದ ನಮ್ಮ ರಾವಣೇಶ್ವರನನ್ನು ವರಿಸು. ದಿವ್ಯವಾದ ಗಂಧವನ್ನು ಲೇಪಿಸಿಕೊಂಡು, ದಿವ್ಯವಾದ ಆಭರಣಗಳನ್ನು ಧರಿಸಿ ಇಂದು ಮೊದಲಾಗಿ ಸಮಸ್ತ ಲೋಕಗಳಿಗೂ ಮಹಾರಾಣಿಯಾಗು. ಇಷ್ಟನ್ನೂ ನಿನ್ನ ಹಿತಕ್ಕಾಗಿ ಹೇಳುತ್ತಿದ್ದೇನೆ. ನಿನ್ನ ಹಿತ ನಿನಗೆ ಬೇಡವಾದರೆ ಇದೋ ನಾವೆಲ್ಲರೂ ಸೇರಿ ನಿನ್ನನ್ನು ಭಕ್ಷಿಸಿಬಿಡುತ್ತೇವೆ" ಎಂದಳು. ಅವಳು ಮಾತಾಡಿ ಮುಗಿಸುವಷ್ಟರಲ್ಲಿ ಜೋಲು ದೇಹದ ವಿಕಟೆ ತನ್ನ ಬೆರಳು ಗಳನ್ನೆಲ್ಲಾ ಮಡಚಿ, ಮುಷ್ಟಿಯನ್ನು ಮೇಲಕ್ಕೆತ್ತಿಕೊಂಡು ಅಬ್ಬರಿಸುತ್ತಾ "ಎಲೆ ದುರಾತ್ಮಳೆ, ನಿನ್ನ ಕೆಡುನುಡಿಗಳನ್ನು ಕೇಳಿಕೊಂಡು ಎಷ್ಟು ತಾಳ್ಮೆಯಿಂದಿದ್ದರೂ ನೀನು ನಿನ್ನ ಹಟವನ್ನು ಬಿಡುವಂತೆ ಕಾಣುತ್ತಿಲ್ಲ. ಇನ್ನು ನಾವು ದಯೆ ತೋರುವುದು ಸಾಧ್ಯವಿಲ್ಲ. ನಿನ್ನ ಕಣ್ಣೀರನ್ನು ಕಂಡು ನಾವು ಕರಗುತ್ತೇವೆಂದು ತಿಳಿದುಕೊಂಡೆಯಾ? ಹಾಗೇನೂ ಭಾವಿಸಬೇಡ. ನಿನ್ನ ಗಂಡ ಸಮುದ್ರವನ್ನು ದಾಟಿ ಬಂದು ರಾವಣನ ಅಂತಃಪುರದಲ್ಲಿ ನಮ್ಮ ಕಾವಲಿನಲ್ಲಿರುವವಳನ್ನು ಬಿಡಿಸಿಕೊಂಡು ಹೋಗುವನೆಂಬ ಭ್ರಾಂತಿ ನಿನಗಿನ್ನೂ ಇದ್ದರೆ ನಿನ್ನಂತಹ ಅವಿವೇಕಿಗಳು ಇನ್ನಾರೂ ಇಲ್ಲ. ಯೌವನ ಅಸ್ಥಿರವಾದುದು. ಅದು ಕಳೆದುಹೋಗುವುದಕ್ಕೆ ಮೊದಲೇ ಸಮಸ್ತ ಸುಖಗಳನ್ನೂ ಅನುಭವಿಸುವುದು ವಿವೇಕಿಯ ಲಕ್ಷಣ. ಪ್ರಭುವಾದ ರಾವಣೇಶ್ವರನೊಡನೆ ಉದ್ಯಾನ ವನಗಳಲ್ಲಿಯೂ ಪರ್ವತಪ್ರದೇಶಗಳಲ್ಲಿಯೂ ನದಿಯ ತೀರಗಳಲ್ಲಿಯೂ ಯಥೇಚ್ಛವಾಗಿ ವಿಹರಿಸುತ್ತಾ ಆನಂದಿಸು. ಇದಕ್ಕೆ ಒಪ್ಪಲಿಲ್ಲವೋ, ಇಲ್ಲಿ ನೋಡು. ಈಗಲೇ ನಿನ್ನ ಗುಂಡಿಗೆಯನ್ನು ಕಿತ್ತು ತಿಂದುಬಿಡುತ್ತೇನೆ" ಎಂದಳು. ಚಂಡೋದರಿಯೆಂಬ ಮತ್ತೊಬ್ಬ ರಾಕ್ಷಸಿ ಅಲ್ಲಿದ್ದವರೆಲ್ಲರನ್ನೂ ಕುರಿತು "ಎಲೆ, ಗೆಳತಿಯರಿರಾ, ಇವಳನ್ನು ಕಂಡಾಗಿನಿಂದ ನನಗೊಂದು ಹಿರಿಯ ಬಯಕೆ—ತಾವರೆಯ ಮೊಗ್ಗಿನಂತಿರುವ ಆ ಸ್ತನಗಳೆರಡನ್ನೂ ಹೃದಯ ಭಾಗವನ್ನೂ ಕಿತ್ತು ತಿನ್ನಬೇಕೆಂಬುದು" ಎಂದಳು. ಆಗ ಪ್ರಘಸೆಯೆಂಬುವಳು "ಎಲೆ, ಒಂದು ಉಪಾಯ ಮಾಡೋಣ. ಈ ಕಠಿಣಚಿತ್ತೆಯಾದ ಸೀತೆಯ ಕತ್ತು ಹಿಸುಕಿಬಿಡೋಣ. ಆಮೇಲೆ ರಾಕ್ಷಸೇಶ್ವರನ ಬಳಿಗೆ ಹೋಗಿ, 'ಈ ಮನುಷ್ಯ ಸ್ತ್ರೀ ಸತ್ತುಹೋದಳು' ಎಂದು ಹೇಳಿಬಿಡೋಣ. ಆತನು ಅವಳನ್ನು ತಿಂದುಬಿಡಿರಿ ಎಂದು ಹೇಳುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ" ಎಂದಳು. ಅದನ್ನು ಕೇಳಿ ಅಜಾಮುಖಿಯೆಂಬುವಳು, ಆಗಲೇ ರಾವಣನಿಂದ ಅಪ್ಪಣೆ ಬಂದವಳಂತೆ "ಎಲೆ, ಸಖಿಯರೆ! ಈ ಸೀತೆಯನ್ನು ಸಣ್ಣ ತುಂಡುಗಳಾಗಿ ಹೆಚ್ಚಿ ರಾಶಿಹಾಕಿರಿ. ಜೇನುತುಪ್ಪ ವನ್ನು ತಂದು ಅದಕ್ಕೆ ಸುರಿಯೋಣ. ಆಮೇಲೆ ಮದ್ಯವನ್ನು ತಂದಿಟ್ಟುಕೊಂಡು ಊಟಕ್ಕೆ ಆರಂಭಿಸೋಣ" ಎಂದಳು. ಶೂರ್ಪನಖಿ ಎಂಬುವಳು ಸೀತೆಯನ್ನು ತಿಂದು ಮುಗಿಸಿದ ಮೇಲೆ ಗ್ರಾಮದೇವತೆಯಾದ ನಿಕುಂಭಿಲೆಯ ಪ್ರೀತ್ಯರ್ಥವಾಗಿ ನರ್ತನ ಮಾಡಬೇಕೆಂದು ಸಲಹೆಯಿತ್ತಳು.

ರಾಕ್ಷಸಿಯರ ಈ ಮಾತುಗಳನ್ನು ಕೇಳಿ ಸೀತೆಯ ಜೀವ ತಲ್ಲಣಿಸಿತು. ಆಕೆ ಮುಂದೋರದೆ ಕಳವಳಪಡುತ್ತಾ ಆ ರಾಕ್ಷಸಿಯರನ್ನು ಕುರಿತು "ಎಲೌ ರಾಕ್ಷಸಿಯರೇ,

ಮನುಷ್ಯಸ್ತ್ರೀ ರಾಕ್ಷಸನಿಗೆ ಪತ್ನಿಯಾಗುವುದೆಂತು? ಅದು ಉಚಿತವಲ್ಲ. ನೀವು ನನ್ನನ್ನು ಭಕ್ಷಿಸುವುದಾದರೆ ಅಗತ್ಯವಾಗಿಯೂ ಹಾಗೆ ಮಾಡಬಹುದು” ಎಂದಳು. ಹಿಂಡು ತಪ್ಪಿ ತೋಳಗಳ ಗುಂಪಿಗೆ ಸಿಕ್ಕಿಬಿದ್ದಿದ್ದ ಜಿಂಕೆಯು ಮರಿಯಂತೆ ಆಕೆ ತಲ್ಲಣಿಸುತ್ತಾ ಎದ್ದು ನಿಂತು ಮರದ ಕೊಂಬೆಯೊಂದನ್ನು ಹಿಡಿದುಕೊಂಡು ಗೋಳೋ ಎಂದು ಅತ್ತಳು. “ಹಾ ರಾಮ! ಹಾ ಲಕ್ಷ್ಮಣಾ! ಅಯ್ಯೋ ಅತ್ತೆ, ಕೌಸಲ್ಯೆ! ಸುಮಿತ್ರೆ!” ಎಂಬ ಮಾತುಗಳು ಆಕೆಯ ಬಾಯಿಂದ ಅಪ್ರಯತ್ನವಾಗಿಯೆ ಹೊರಬಿದ್ದುವು. ತನಗೆ ಮರಣ ಬಂದರೆ ಸಾಕೆನಿಸಿತು, ಆಕೆಗೆ. “ಕಾಲ ಬರದೆ ಮರಣ ಬರದು; ನಾನು ಅಲ್ಪ ಪುಣ್ಯೆ, ಮರಣ ಬರುವಂತಿಲ್ಲ. ನಾನೇನು ತಾನೆ ಮಾಡಲಿ? ನನ್ನ ಸ್ವಾಮಿಯಾದ ರಾಮಚಂದ್ರಮೂರ್ತಿಯನ್ನು ಕಾಣುವ ಭಾಗ್ಯ ನಿರ್ಭಾಗ್ಯಳಾದ ನನಗೆ ಇಲ್ಲವಾಗಿದೆ. ಆತ್ಮವೇತ್ತನಾದ ಆತನನ್ನು ಅಗಲಿ ಈ ಪರಿಯಾದ ದುಃಖಕ್ಕೆ ಒಳಗಾಗಬೇಕಾದರೆ ನಾನು ಪೂರ್ವಜನ್ಮದಲ್ಲಿ ಮಾಡಿರುವ ಪಾಪ ಸಾಧಾರಣವಾದುದಾಗಿರಲಾರದು. ಥೂ, ನಾನೇಕೆ ಬದುಕಿರಬೇಕು? ಸಾಯುವುದು ಖಂಡಿತವಾಗಿಯೂ ನನ್ನ ಕರ್ತವ್ಯ. ಆದರೆ ಪರಾಧೀನಳಾಗಿರುವ ನಾನು ಸಾಯುವುದಕ್ಕೂ ಸ್ವಾತಂತ್ರ್ಯವಿಲ್ಲದವಳಾಗಿದ್ದೇನೆ” ಎಂದು ಮನಸ್ಸಿನಲ್ಲಿಯೆ ತನ್ನನ್ನು ತಾನೆ ಧಿಕ್ಕರಿಸಿಕೊಂಡಳು: “ಧಿಕ್ ಈ ಮನುಷ್ಯತೆಗೆ! ಧಿಕ್ ಈ ಸ್ತ್ರೀ ಜನ್ಮಕ್ಕೆ! ಧಿಕ್ ಈ ಪರವಶತೆಗೆ!”

---

೧೦

# ತ್ರಿಜಟಾ ಸ್ವಪ್ನ

ಸೀತಾದೇವಿ ದುಃಖದಿಂದ ಹುಚ್ಚಿಯಂತಾಗಿದ್ದಳು. ಆಕೆ ನಿಲ್ಲುವುದಕ್ಕೆ ಕೂಡ ತ್ರಾಣ ಸಾಲದೆ ನೆಲದ ಮೇಲೆ ಬಿದ್ದು ಧೂಳಿಯಲ್ಲಿ ಹೊರಳಾಡಿದಳು. "ಅಯ್ಯೋ! ನನ್ನ ದುರ್ವಿಧಿ ಎಷ್ಟು ಕಠೋರ. ಈ ಕ್ರೂರ ರಾಕ್ಷಸಿಯರು ನನ್ನನ್ನು ಭಯಂಕರವಾಗಿ ಭೀತಿಗೊಳಿಸುತ್ತಿರುವರು. ಶ್ರೀರಾಮನನ್ನು ಅಗಲಿ ಈ ದುರವಸ್ಥೆಯನ್ನು ಅನುಭವಿಸುತ್ತಿರುವ ನನ್ನ ಪ್ರಾಣಗಳು ಇನ್ನೂ ಹಾಗೆಯೆ ನಿಂತಿವೆಯಲ್ಲ! ನನ್ನ ಈ ಹಾಳು ಬಾಳೇನು ಅಜರಾಮರವಾದುದಾಗಿರಬಹುದೆ? ಗಂಡನನ್ನು ಅಗಲಿದರೂ ಇನ್ನೂ ಜೀವಿಸಿರುವ ಅನಾರ್ಯಳಾದ ನನ್ನ ಬಾಳಿಗೆ ಬೆಂಕಿ ಹಾಕಿತು! ಆ ಪಾಪಿ ರಾವಣ ನನ್ನೇನು ನಾನು ಎಡಗಾಲಿನಿಂದಲೂ ಮುಟ್ಟುವವಳಲ್ಲ. ಆದರೆ ಅವನು ಈ ರಾಕ್ಷಸಿಯರ ಮೂಲಕ ಕೊಡುತ್ತಿರುವ ಈ ಸಂಕಟವನ್ನು ಹೇಗೆ ಅನುಭವಿಸಲಿ?" ಎಂದು ಮನಸ್ಸಿನಲ್ಲಿಯೇ ಮಿಡುಕುತ್ತಾ ಹುಚ್ಚು ಧೈರ್ಯದಿಂದ ಆ ರಾಕ್ಷಸಿಯರನ್ನು ಕುರಿತು "ಎಲೆ ರಕ್ಕಸಿಯರಿರಾ, ನೀವು ನನ್ನನ್ನು ತುಂಡುತುಂಡಾಗಿ ಕತ್ತರಿಸಿ, ಅಂಗಾಂಗಗಳನ್ನೇ ಕಿತ್ತು ತಿನ್ನಿರಿ, ಬೆಂಕಿಯಲ್ಲಿ ಬೇಯಿಸಿರಿ, ನಾನು ಬೇರೆ ನಿಮ್ಮ ಮಾತಿನಂತೆ ನಡೆಯಲಾರೆ. ವೃಥಾ ಏಕೆ ಪ್ರಲಾಪಿಸುವಿರಿ? ನನ್ನ ಪತಿಯಾದ ಶ್ರೀರಾಮನ ವಿಷಯ ನಿಮಗೆ ಗೊತ್ತಿಲ್ಲ. ಜನಸ್ಥಾನದಲ್ಲಿ ಒಬ್ಬನೇ ಹದಿನಾಲ್ಕು ಸಹಸ್ರ ರಾಕ್ಷಸರನ್ನು ಸಂಹರಿಸಿದನು. ಆತನಿಗೆ ಈ ರಾವಣಾಧಮನು ಎಷ್ಟು ಮಾತ್ರದವನು? ಸಮುದ್ರ ಮಧ್ಯದಲ್ಲಿರುವ ಈ ಲಂಕಾ ನಗರ ದುಷ್ಪ್ರವೇಶ್ಯವೆಂದು ತಿಳಿದಿರುವಿರೇನೊ. ಶ್ರೀರಾಮನ ಬಾಣಗಳು ಪ್ರವೇಶಿಸದ ಪ್ರದೇಶ ಈ ಲೋಕದಲ್ಲಾವುದಿದೆ? ಆತನಿಗೆ ನಾನಿರುವ ಎಡೆ ಇನ್ನೂ ಗೊತ್ತಿಲ್ಲವೆಂದು ತೋರುತ್ತದೆ. ಪಾಪ! ಜಟಾಯುವಾದರೂ ಬದುಕಿದ್ದರೆ ಆತನಿಗೆ ಈ ವಿಷಯವನ್ನು ತಿಳಿಸುತ್ತಿದ್ದನು; ಅನ್ಯಾಯವಾಗಿ ಈ ರಾವಣನಿಂದ ಆತನು ಮರಣಹೊಂದಿದನು. ಶ್ರೀರಾಮಚಂದ್ರನಿಗೆ ನಾನಿರುವ ಎಡೆಯೇನಾದರೂ ಗೊತ್ತಾಗಿದ್ದರೆ, ಆತನು ಸುತ್ತಲೂ ಇರುವ ಈ ಸಮುದ್ರವನ್ನು ಶೋಷಿಸಿ, ಲಂಕೆಯನ್ನು ಈ ವೇಳೆಗೆ ನಿರ್ಮೂಲನ ಮಾಡುತ್ತಿದ್ದನು. ಈಗ ನಾನು ಗೋಳಾಡುತ್ತಿರುವುದಕ್ಕಿಂತಲೂ ಹೆಚ್ಚಾಗಿ ಈ ಲಂಕಾನಗರದ ನಾರಿಯರೆಲ್ಲರೂ ಗಂಡಂದಿರನ್ನು ಕಳೆದುಕೊಂಡು ಗೋಳಿಡುತ್ತಿದ್ದರು. ರಾಮಲಕ್ಷ್ಮಣರ ಕಣ್ಣಿಗೆ ಬಿದ್ದ ಶತ್ರು ಅಳಿಯದೆ ಉಳಿಯುವನೆ? ಹೀಗೆಯೇ ನೋಡುತ್ತಿರಿ. ಇನ್ನು ಕೆಲವು ದಿನಗಳಲ್ಲಿಯೇ ಈ ಲಂಕಾನಗರ ಶ್ಮಶಾನವಾಗಿ ಹದ್ದುಗಳ ಕೋಲಾಹಲಕ್ಕೆ ಬೀಡಾಗುವುದು. ರಾವಣ ಸತ್ತು ಲಂಕೆ ಗಂಡಸತ್ತ ವಿಧವೆಯಂತೆ ಕಾಂತಿಹೀನವಾಗುವುದು. ಮನೆಮನೆಯಲ್ಲಿಯೂ ಭರ್ತೃವಿಯೋಗ

ವ್ಯಸನದಿಂದ ಕಣ್ಣೀರು ಕರೆಯುತ್ತಾ ಗೋಳಿಡುವ ಹೆಣ್ಣುಗಳ ಆರ್ತಧ್ವನಿ ಕೇಳಿ ಬರುವಂತಾಗುವುದು. ಶ್ರೀರಾಮನ ಬಾಣ ಪರಂಪರೆಯಿಂದ ಲಂಕೆ ಭಸ್ಮವಾಗಿ ಹೋಗುವುದು. ಆದರೆ ಇದಿಷ್ಟು ಆದುದನ್ನು ನೋಡುವ ಭಾಗ್ಯ ನನಗಿದೆಯೋ ಇಲ್ಲವೋ! ಕ್ರೂರನಾದ ರಾವಣನು ನನಗೆ ಕೊಟ್ಟಿರುವ ಅವಧಿ ಮುಗಿಯುತ್ತಾ ಬಂದಿದೆ. ನಾನೇನು ರಾಕ್ಷಸರ ಆಹಾರವಾಗಬೇಕೊ, ರಾವಣನ ಬೆಳಗಿನ ಊಟಕ್ಕಾಗಿ ಪಕ್ವವಾಗಬೇಕೊ, ಯಾರಿಗೆ ಗೊತ್ತು? ಇನ್ನು ಎರಡು ತಿಂಗಳು ಬದುಕಿರುವುದೂ ನನಗೆ ಬೇಡವಾಗಿದೆ. ಯಾರಾದರೂ ಸ್ವಲ್ಪ ವಿಷವನ್ನು ತಂದುಕೊಟ್ಟರೆ ಸುಖವಾಗಿ ಪ್ರಾಣ ಬಿಟ್ಟೇನು. ಶ್ರೀರಾಮಚಂದ್ರನು ಇದುವರೆಗೂ ಇಲ್ಲಿಗೆ ಬರದೆ ಏಕೆ ತಡೆದಿರ ಬಹುದು? ನನ್ನ ಅಗಲಿಕೆಯ ದುಃಖದಿಂದ ಆ ಪ್ರೇಮಮಯನು ಪ್ರಾಣಗಳನ್ನು ತ್ಯಜಿಸಿರಬಹುದೆ? ಹಾಗಿದ್ದಲ್ಲಿ ಆತನನ್ನು ಸದಾ ಕಾಣುತ್ತಿರುವ ದೇವತೆಗಳು ಧನ್ಯರೇ ಸರಿ. ಅಥವಾ ಆತನು ಕೇವಲ ವೈರಾಗ್ಯಪರನಾಗಿ ಶಸ್ತ್ರಸನ್ಯಾಸ ಮಾಡಿ ಪರಿವ್ರಾಜಕ ವೃತ್ತಿಯನ್ನು ಅವಲಂಬಿಸಿರಬಹುದೆ? ಹಾಗಲ್ಲದೆ, ಈ ದುರಾತ್ಮನಾದ ರಾವಣನು ರಾಮಲಕ್ಷ್ಮಣರೊಡನೆ ಯುದ್ಧಮಾಡಲು ಅಂಜಿ, ಕಪಟದಿಂದ ಅವರನ್ನು ಸಂಹರಿಸಿರ ಬಹುದೆ? ಅಯ್ಯೋ, ನನಗೆ ಒಂದೂತೋಚದು. ಯೋಚಿಸಿ ನನಗೆ ಹುಚ್ಚು ಹಿಡಿದಂತಾಗಿದೆ. ಹೇಗೆ ಹೇಗೆ ಯೋಚಿಸಿದರೂ ನನಗೆ ಮರಣವೇ ಶರಣೆಂದುತೋರು ತ್ತಿದೆ. ಸುಖದುಃಖಗಳಿಂದ ಮುಕ್ತರಾದ ಮಹರ್ಷಿಗಳು ಎಷ್ಟು ಧನ್ಯರು! ಪ್ರಿಯವಸ್ತು ವಿರುವವರಿಗೆ ದುಃಖ ತಪ್ಪುವುದಿಲ್ಲ; ಭಯವೂ ಅಧಿಕ. ಪ್ರಿಯಾಪ್ರಿಯಗಳನ್ನು ತೊರೆದ ಮಹಾತ್ಮರೇ ಧನ್ಯರು. ನನಗೆ ಆ ಭಾಗ್ಯ ಇಲ್ಲ. ರಾಮನ ಮೇಲಿನ ಪ್ರೇಮವನ್ನು ನಾನು ತೊರೆಯಲಾರೆ. ಆದ್ದರಿಂದ ಪ್ರಾಣಗಳನ್ನು ತೊರೆಯುವುದೇ ಸರಿ" ಎಂದಳು.

ಸೀತೆಯ ವಾಕ್ಯಗಳನ್ನು ಕೇಳುತ್ತಿರುವಂತೆ ರಾಕ್ಷಸಿಯರು ಕ್ರೋಧ ಮೂರ್ಛಿ ತೆಯರಾದರು. "ಎಲೆ ದುಷ್ಟೆ, ಆತ್ಮಹತ್ಯಕ್ಕೂ ಹೇಸದಷ್ಟು ನೀಚತನಕ್ಕೆ ಇಳಿದೆಯಾ? ತಡೆ ಈಗಲೇ ನಿನ್ನನ್ನು ಭಕ್ಷಿಸಿಬಿಡುತ್ತೇವೆ" ಎಂದು ಅರ್ಭಟಿಸುತ್ತಾ ಅವರು ಮೇಲಕ್ಕೆದ್ದರು. ಆಗ ತ್ರಿಜಟೆಯೆಂಬ ರಾಕ್ಷಸವೃದ್ಧೆ ಅವರನ್ನು ತಡೆದು "ಎಲೇ ಪಾಪಿಗಳಿರಾ, ನಿಮ್ಮ ನಿಮ್ಮ ಶವಗಳನ್ನು ನೀವೇ ಕಿತ್ತು ತಿನ್ನುವ ಗತಿ ನಿಮಗೆ ಪ್ರಾಪ್ತವಾಗಿರುವಾಗ ದಶರಥನ ಸೊಸೆಯಾದ ಈ ಜಾನಕಿಯನ್ನು ತಿನ್ನುವುದಕ್ಕೆ ಹವಣಿಸುವಿರಾ? ಈಗತಾನೆ ನಾನೊಂದು ಭಯಂಕರವಾದ ಸ್ವಪ್ನವನ್ನು ಕಂಡೆ. ಅದನ್ನು ಕೇಳಿ; ಕೇಳಿ ನಡುಗಿರಿ. ಸೀತಾಭರ್ತನಾದ ಶ್ರೀರಾಮಚಂದ್ರನು ಶುಕ್ಲ ಮಾಲ್ಯಾಂಬರಧರನಾಗಿ, ಗಜದಂತದಿಂದ ಮಾಡಿದ ವಿಮಾನವನ್ನು ಸಹಸ್ರ ಹಂಸಗಳು ಹೊತ್ತಿರಲಾಗಿ ಆಕಾಶ ಮಾರ್ಗದಲ್ಲಿ ಈ ಲಂಕಾಪಟ್ಟಣಕ್ಕೆ ಬಂದನು. ಆತನ ತಮ್ಮನಾದ ಲಕ್ಷ್ಮಣನು ಜೊತೆಯಲ್ಲಿಯೇ ಇದ್ದನು. ಈ ಸೀತಾದೇವಿಯೂ ಶುಭ್ರಧವಳವಾದ ವಸ್ತ್ರಗಳನ್ನು ಧರಿಸಿ ಶ್ವೇತಪರ್ವತದ ಮೇಲೆ ನಿಂತಿದ್ದವಳು ಸೂರ್ಯನೊಡನೆ ಬೆಳಕು ಸೇರುವಂತೆ ಶ್ರೀರಾಮನೊಡನೆ ವಿಮಾನರೂಢೆಯಾದಳು. ಮರುಕ್ಷಣದಲ್ಲಿಯೆ

ಮತ್ತೊಂದು ದೃಶ್ಯ ಕಾಣಿಸಿತು—ರಾಮಲಕ್ಷ್ಮಣರು ಚತುರ್ದಂತಗಳಿಂದ ಕೂಡಿದ ಆನೆಯನ್ನೇರಿ ತಮ್ಮ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತಾ ಸೀತಾದೇವಿಯ ಬಳಿಗೆ ಬಂದರು. ಅವರು ಈಕೆಯನ್ನು ಎತ್ತಿ ಆನೆಯ ಕುಂಭಸ್ಥಳದಲ್ಲಿ ಕುಳ್ಳಿರಿಸಿದರು. ಆಗ ಆಕೆ ಎದ್ದು ಒಂದು ಕ್ಷಣಕಾಲ ಶ್ರೀರಾಮನ ತೊಡೆಗಳ ಮೇಲೆ ಕುಳಿತಿದ್ದು ಅನಂತರ ಕೈಗಳನ್ನು ಮೇಲಕ್ಕೆ ನೀಡಿ ಸೂರ್ಯಚಂದ್ರರನ್ನು ಕೈಲಿ ಹಿಡಿದುಕೊಂಡಳು. ಅವರು ಕುಳಿತಿದ್ದ ಬಿಳಿಯ ಆನೆ ಲಂಕಾನಗರದ ಮೇಲೆ ಹಾರಿ ಬಂದಿತು. ಶ್ರೀರಾಮ ತಮ್ಮನೊಡನೆಯೂ ಮಡದಿಯೊಡನೆಯೂ ಆನೆಯಿಂದಿಳಿದು ಎಂಟು ಬಿಳಿ ಎತ್ತುಗಳ ರಥವನ್ನು ಆರೋಹಿಸಿ ಲಂಕೆಯನ್ನು ಪ್ರವೇಶಿಸಿದನು. ಇಲ್ಲಿಗೆ ಬಂದ ಮೇಲೆ ಅವರೆಲ್ಲರೂ ಪುಷ್ಪಕ ವಿಮಾನವನ್ನೇರಿ ಉತ್ತರ ದಿಕ್ಕಿಗೆ ಪ್ರಯಾಣ ಹೊರಟರು. ಈ



ರಾತ್ರಿಯೆಲ್ಲವೂ ನಿದ್ದೆಗೆಟ್ಟಿದ್ದ ಆ ರಾಕ್ಷಸಿಯರಿಗೆ ಹಾಗೆಯೆ ಜೊಂಪು ಬಂದಂತಾಯಿತು.

ಬಗೆಯಾಗಿ ಕಾಣಿಸಿದ ಶ್ರೀರಾಮಚಂದ್ರನನ್ನು ದೇವತೆಗಳಾಗಲಿ, ರಾಕ್ಷಸರಾಗಲಿ ಜಯಿಸುವುದು ಎಲ್ಲಾದರೂ ಸಾಧ್ಯವೆ? ಸ್ವಪ್ನವು ಇನ್ನೂ ಮುಂದುವರಿಯಿತು. ನಮ್ಮ ದೊರೆಯಾದ ರಾವಣನು ಮೈಗೆಲ್ಲಾ ಎಣ್ಣೆ ಬಳಿದುಕೊಂಡು, ಕೆಂಪು ಬಟ್ಟೆ ಉಟ್ಟು, ಕೆಂಪು ಹಾರ ಧರಿಸಿ, ಮದ್ಯಪಾನ ಮಾಡುತ್ತಾ ಮದಿಸಿ, ಪುಷ್ಪಕವಿಮಾನ ವನ್ನೇರಿದನು. ಅಲ್ಲಿಂದ ಕೆಳಕ್ಕೆ ಬಿದ್ದು ಭೂಮಿಯ ಮೇಲೆ ಹೊರಳಾಡುತ್ತಿದ್ದನು. ಆ ದೃಶ್ಯ ಮುಗಿಯುವಷ್ಟರಲ್ಲಿ ಮತ್ತೊಮ್ಮೆ ಆತ ಕಾಣಿಸಿಕೊಂಡನು. ಆತನ ಮೈ ಮೇಲೆಲ್ಲಾ ಕೆಂಪು ಹೂವಿನ ಸರಗಳು; ಮೈಗೆಲ್ಲಾ ಕೆಂಪುಗಂಧ ಬಳಿದಿದೆ; ತೈಲಪಾನ ಮಾಡುತ್ತಾ ಹುಚ್ಚನಂತೆ ನಗುತ್ತಿದ್ದಾನೆ. ಈ ಅವಸ್ಥೆಗಳಲ್ಲಿ ಅವನು ಕತ್ತೆಯನ್ನು ಹೂಡಿದ ರಥವನ್ನು ಹತ್ತಿ ದಕ್ಷಿಣ ದಿಕ್ಕಿಗೆ ಪ್ರಯಾಣ ಹೊರಟನು. ಪ್ರಯಾಣ ಮುಂದುವರಿಯುವಷ್ಟರಲ್ಲಿ ಆತನು ಆ ರಥದಿಂದ ಕೆಳಕ್ಕೆ ಬಿದ್ದು ಗಾಢಾಂಧಕಾರದಿಂದ ಕೂಡಿ ದುರ್ಗಂಧಮಯವಾಗಿದ್ದ ನರಕೋಪಮವಾದ ಮಲಪಂಕದಲ್ಲಿ ಮುಳುಗಿ ಹೋದನು. ರಾವಣೇಶ್ವರನ ಮಕ್ಕಳೆಲ್ಲರೂ ಶರೀರಕ್ಕೆ ಎಣ್ಣೆಯನ್ನು ಬಳಿದುಕೊಂಡು ದಕ್ಷಿಣ ದಿಕ್ಕಿಗೆ ಪ್ರಯಾಣ ಹೊರಟರು. ವಿಭೀಷಣನೊಬ್ಬನು ಮಾತ್ರ ಶುಭ್ರವಸ್ತ್ರ ಗಳನ್ನು ಧರಿಸಿ, ದಿವ್ಯಾಲಂಕಾರಭೂಷಿತನಾಗಿ ತನ್ನ ನಾಲ್ವರು ಮಂತ್ರಿಗಳೊಡನೆ ಶ್ವೇತಚ್ಛತ್ರದ ನೆರಳಿನಲ್ಲಿ ಆನೆಯ ಮೇಲೆ ಕುಳಿತು ಆಕಾಶ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿದ್ದನು. ಆತನ ವಿನಾ ಉಳಿದ ರಾಕ್ಷಸರೆಲ್ಲರೂ ಎಣ್ಣೆಯನ್ನು ಕುಡಿಯುತ್ತಾ ಕೆಂಪು ಬಟ್ಟೆ ಕೆಂಪು ಹಾರಗಳನ್ನು ಧರಿಸಿ ಹುಚ್ಚರಂತೆ ಕುಣಿಯುತ್ತಿದ್ದರು. ರಾವಣ ಪಾಲಿತವಾದ ಈ ಲಂಕಾನಗರಿಯನ್ನೆಲ್ಲಾ ಶ್ರೀರಾಮದೂತನಾದ ವಾನರ ವೀರ ನೊಬ್ಬನು ಸುಟ್ಟು ಬೂದಿಮಾಡಿದನು. ಈ ಲಂಕೆಯ ಹೆಂಗಸರೂ ಸಹ ಎಣ್ಣೆಯನ್ನು ಕುಡಿದು ಸಿಕ್ಕಿದಂತೆ ಗಹಗಹಿಸಿ ನಗುತ್ತಾ, ಲಂಕೆಯಲ್ಲೆಲ್ಲಾ ಕುಣಿದಾಡುತ್ತಿದ್ದರು. ಎಲೆ ರಾಕ್ಷಸಿಯರಿರಾ, ಈ ಸ್ವಪ್ನವು ಏನನ್ನು ಸೂಚಿಸುತ್ತದೆ ಹೇಳಿ? ನನ್ನ ಮಾತನ್ನು ಕೇಳಿ. ಈಗಲೇ ನೀವೆಲ್ಲರೂ ಊರುಬಿಟ್ಟು ಓಡಿಹೋಗಿಬಿಡಿರಿ. ಹಾಗೆ ಮಾಡಲಿಲ್ಲವೋ ಮೃತ್ಯು ತಪ್ಪಿದ್ದಲ್ಲ. ಶ್ರೀರಾಮನು ಸೀತಾದೇವಿಯನ್ನು ಇಲ್ಲಿಂದ ಕರೆದೊಯ್ಯುವುದು ಖಂಡಿತ. ಆತನು ಇಲ್ಲಿಗೆ ಬಂದಾಗ ಸೀತೆಯನ್ನು ಇಷ್ಟು ಗೋಳುಹೊಯ್ದು ಕೊಂಡಿರುವ ನಿಮಗೆಲ್ಲರಿಗೂ ಸಾವು ಸ್ವತಃಸಿದ್ಧ. ಇಗೋ ಸಾರಿ ಹೇಳುತ್ತೇನೆ. ಇನ್ನು ನೀವು ಸೀತಾದೇವಿಯನ್ನು ಸಾಂತ್ವನ ವಚನಗಳಿಂದ ಸಮಾಧಾನಪಡಿಸಿರಿ. ಇದರಿಂದ ಶ್ರೇಯಸ್ಸುಂಟು. ತಪ್ಪನ್ನು ಕ್ಷಮಿಸೆಂದು ಆಕೆಯ ಕಾಲಿಗೆ ಅಡ್ಡ ಬೀಳಿರಿ; ಜೀವದಾನ ಮಾಡಲಿ. ಶ್ರೀರಾಮನ ಅಭ್ಯುದಯವೂ ರಾವಣನ ಸರ್ವನಾಶವೂ ಸನ್ನಿಹಿತವಾಗಿದೆ. ಆದ್ದರಿಂದ ಎಚ್ಚರದಿಂದ ವರ್ತಿಸಿ” ಎಂದು ತಿಳಿಸಿದಳು. ಅವಳ ಮಾತುಗಳನ್ನು ಕೇಳಿದ ರಾಕ್ಷಸಿಯರು ನಡುಗಿ ಕ್ಷಣಕಾಲ ಸ್ತಂಭಿತರಾಗಿ ಕುಳಿತರು. ರಾತ್ರಿಯೆಲ್ಲವೂ ನಿದ್ರೆ ಗೆಟ್ಟಿದ್ದ ಆ ರಾಕ್ಷಸಿಯರಿಗೆ ಹಾಗೆಯೆ ಜೊಂಪು ಬಂದಂತಾಯಿತು. ಕುಳಿತಲ್ಲಿಯೆ ಉರುಳಿಕೊಂಡು ಗಾಢ ನಿದ್ರಾಸಕ್ತರಾದರು.

---

೧೧

## ಸಂದೇಹ ನಿವಾರಣೆ

ಸೀತಾದೇವಿ ತನ್ನ ದುರದೃಷ್ಟವನ್ನು ನಿಂದಿಸಿಕೊಳ್ಳುತ್ತಾ ತನ್ನ ಹಾಳು ಬಾಳನ್ನು ಕೊನೆಗೊಳಿಸುವುದು ಹೇಗೆಂದು ಚಿಂತಿಸಿದಳು. ಇದ್ದಕ್ಕಿದ್ದಂತೆ ಒಂದು ಉಪಾಯ ಹೊಳೆಯಿತು. ಹೇಗಿದ್ದರೂ ರಾಕ್ಷಸಿಯರು ಮಲಗಿದ್ದಾರೆ....ನಿಡುನೀಳವಾದ ತನ್ನ ಕೇಶರಾಶಿಯನ್ನು ಕೊರಳಿಗೆ ಸುತ್ತಿಕೊಂಡು ತಾನು ಕುಳಿತಿದ್ದ ಮರಕ್ಕೇ ನೇಣು ಹಾಕಿಕೊಂಡರೆ! ಮನಸ್ಸಿನಲ್ಲಿ ಹೊಳೆದುದೇ ತಡ, ಆಕೆ ಆ ಕಾರ್ಯದಲ್ಲಿ ಪ್ರವೃತ್ತೆ ಯಾದಳು. ಕಡೆಗಾಲದಲ್ಲಿ ಒಮ್ಮೆ ತನ್ನ ಪತಿಯನ್ನೂ ಲಕ್ಷ್ಮಣನನ್ನೂ ಹುಟ್ಟಿದ ಮತ್ತು ಸೇರಿದ ಮನೆಯ ಹಿರಿಯರನ್ನೂ ನೆನೆದುಕೊಂಡಳು. ತನ್ನವರು ಯಾರಿದ್ದರೂ ವಿಧಿಯನ್ನು ತಡೆಯಲಾರದೆ ಹೋದರೆಂದುಕೊಂಡಳು. ಕುತ್ತಿಗೆಗೆ ಜಡೆಯನ್ನು ಒಂದು ಸುತ್ತು ಹಾಕಿಕೊಂಡಳು. ಇನ್ನು ಮರದ ಕೊಂಬೆಗೆ ಎಳೆದು ಕಟ್ಟಬೇಕು; ಇದ್ದಕ್ಕಿದ್ದಂತೆಯೆ ಹಲವು ಶುಭಸೂಚನೆಗಳು ಕಾಣಬಂದುವು. ಆಕೆಯ ಎಡಗಣ್ಣು ಮೀನು ಕದಲಿಸಿದ ಕಮಲದಂತೆ ಅಲುಗಾಡಿತು. ಒಮ್ಮೆ ಶ್ರೀರಾಮನ ಆಲಿಂಗನ ಸುಖದಿಂದ ಪವಿತ್ರವಾಗಿದ್ದ ವಾಮಭುಜ ಅದುರಿತು. ಎಡತೊಡೆಯೂ ಅದುರಿತು. ಸೀತೆಗೆ ಈ ನಿಮಿತ್ತಗಳಲ್ಲಿ ಬಹು ನಂಬಿಕೆ. ಎಷ್ಟೋ ವೇಳೆ ಆಕೆಗೆ ಇವುಗಳಿಂದ ಬರುವ ಫಲ ಅನುಭವಕ್ಕೆ ಬಂದಿತ್ತು. ಆದ್ದರಿಂದ ತನ್ನ ಆತ್ಮಹತ್ಯದ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಿದಳು. ಬಿಸಿಲಿನಿಂದ ಕೂಡಿ ಬೆಂಡಾಗಿರುವ ಬೆಳೆಗೆ ಮಳೆ ಸುರಿದಂತಾಯಿತು ಆಕೆಯ ಜೀವಕ್ಕೆ. ಶ್ರೀರಾಮಚಂದ್ರನನ್ನು ಬಹುಬೇಗ ಕಾಣುವೆನೆಂದು ಆಕೆಯ ಮನಸ್ಸಿಗೆ ಬೋಧೆಯಾಯಿತು. ಆ ಸಂಕಟಕರವಾದ ಸನ್ನಿವೇಶದಲ್ಲಿಯೂ ಆಕೆಗೆ ದುಃಖವೆಲ್ಲ ಮರೆತುಹೋಗಿ ಮುಖದ ಮೇಲೆ ಒಂದು ಮುಗುಳ್ನಗೆ ಅಲೆಸೂಸಿತು. ರಾಹುಮುಕ್ತವಾದ ಚಂದ್ರನಂತೆ ಆಕೆಯ ಮುಖ ಕಾಂತಿಯಿಂದ ಮಿಂಚಿತು.

ಶಿಂಶುಪವೃಕ್ಷದ ಮೇಲೆ ಕುಳಿತಿದ್ದ ಹನುಮಂತನು ನಂದವನದಲ್ಲಿನ ವನದೇವತೆಯಂತೆ ಕಾಣುತ್ತಿದ್ದ ಸೀತಾಮಾತೆಯನ್ನು ಕಂಡು ಹೀಗೆ ಆಲೋಚಿಸಿದನು—"ಯಾವ ಸುಚರಿತ್ರೆಯನ್ನು ಹುಡುಕುವುದಕ್ಕಾಗಿ ಅಸಂಖ್ಯಾತ ಕಪಿಸೈನ್ಯವು ದಿಕ್ಕು ದಿಕ್ಕುಗಳನ್ನೂ ಭೇದಿಸುತ್ತಾ ಹೊರಟಿರುವುದೋ ಆ ದೇವಿ ಇಲ್ಲಿ, ಗೋಚರಿಸಿದಳು. ನಾನು ಈಕೆಗಾಗಿ ಊರನ್ನೆಲ್ಲಾ ತಿರುಗಿದುದು ವ್ಯರ್ಥವಾಗಲಿಲ್ಲ; ಶತ್ರುವಿನ ಚಲನವಲನಗಳೆಲ್ಲಾ ಗೋಚರವಾದಂತಾಯಿತು. ಇನ್ನು ನಾನು ಈಕೆಗೆ ಕಾಣಿಸಿಕೊಂಡು ಶ್ರೀರಾಮನ ಪ್ರಿಯವಾರ್ತೆಯನ್ನು ಅರುಹಿ, ಕುದಿವ ಮನಸ್ಸಿಗೆ ಸಮಾಧಾನವನ್ನುಂಟು ಮಾಡಬೇಕು. ಇಲ್ಲದಿದ್ದರೆ ರಕ್ಷಕರಿಲ್ಲದೆ ತಳಮಳಿಸುತ್ತಿರುವ ಈಕೆ ಪ್ರಾಣವನ್ನು

ತ್ಯಜಿಸಬಹುದು. ಅತ್ತ ಶ್ರೀರಾಮನು ಆಕೆಯ ಸಮಾಚಾರವನ್ನು ಕೇಳಲು ಅತ್ಯಂತ ಕಾತರನಾಗಿರುವುದರಿಂದ ಬೇಗ ಹಿಂದಿರುಗುವುದೂ ಅಗತ್ಯ. ಆದರೆ ಈಗಲೇ ಆ ದೇವಿಯನ್ನು ಮಾತನಾಡಿಸುವುದು ಹೇಗೆ? ರಾಕ್ಷಸರು ಎಲ್ಲಿಯಾದರೂ ಎಚ್ಚರಗೊಂಡರೆ? ಮಾತನಾಡಿಸದೆ ಹಾಗೆಯೆ ಹಿಂತಿರುಗುವುದೂ ಅಸಾಧ್ಯ. ಇನ್ನೇನು ಬೆಳಕು ಹರಿಯುತ್ತಾ ಇದೆ. ಬೆಳಗಾಗುವುದರೊಳಗಾಗಿ ನಾನು ಈಕೆಯನ್ನು ಮಾತನಾಡಿಸಲೇಬೇಕು. ಇಲ್ಲದೆ ಹೋದರೆ ಹಿಂದಿರುಗಿದಾಗ ಶ್ರೀರಾಮನು 'ಸೀತೆ ನನಗೆ ಏನು ಹೇಳಿ ಕಳುಹಿಸಿದಳು' ಎಂದರೆ ಏನುತ್ತರ ಹೇಳುವುದು? ಇಲ್ಲ, ಇಲ್ಲ. ಸೀತಾದೇವಿಗೆ ಶ್ರೀರಾಮನ ಸಮಾಚಾರ ಕೂಡಲೇ ತಿಳಿಸಬೇಕು. ಹೇಗಿದ್ದರೂ ಮೊದಲೇ ನಾನು ಸೂಕ್ಷ್ಮದೇಹಿಯಾಗಿರುವೆನು. ಇದರ ಮೇಲೆ ವಾನರ ಬೇರೆ. ಆದ್ದರಿಂದ ಶ್ರೀರಾಮದೂತನೆಂದು ಈ ರಾಕ್ಷಸರಿಗೆ ಹೇಗೂ ಗೊತ್ತಾಗುವಂತಿಲ್ಲ. ಅದಿರಲಿ, ಈಗ ಈಕೆಯೊಡನೆ ಯಾವ ಭಾಷೆಯಲ್ಲಿ ಮಾತನಾಡುವುದು? ಸಂಸ್ಕೃತದಲ್ಲಿ ಮಾತನಾಡಿದರೆ 'ಕೋತಿಗೆ ಸಂಸ್ಕೃತವೆಂದರೇನು? ಎಲ್ಲಿಯೋ ಇದು ರಾವಣನ ಮಾಯೆ' ಎಂದುಕೊಂಡಾಳು. ಆದ್ದರಿಂದ ಕೋಸಲ ದೇಶದ ಜನರು ಆಡುವ ಭಾಷೆಯನ್ನು ಬಳಸುತ್ತೇನೆ. ಆದರೆ ನನ್ನ ವೇಷವನ್ನು ನೋಡಿ, ಭಾಷೆಯನ್ನು ಕೇಳಿ ಈಕೆ ಗಾಬರಿಗೊಂಡು ಗಟ್ಟಿಯಾಗಿ ಕೂಗಿಬಿಟ್ಟರೆ? ರಾಕ್ಷಸಿಯರೆಲ್ಲರೂ ನನ್ನ ಸುತ್ತಲೂ ಮುತ್ತಿಕೊಂಡು ನನ್ನನ್ನು ಕೊಲ್ಲಲು ಯತ್ನಿಸಬಹುದು. ಆಗ ನಾನೇನಾದರೂ ಆತ್ಮರಕ್ಷಣೆಗೆ ಅವರ ಮೇಲೆ ಕೈ ಮಾಡಿದರೆ ದೊಡ್ಡ ರಗಳೆಯಾಗಿಬಿಡುತ್ತದೆ. ಈ ರಗಳೆಯಲ್ಲಿ ರಾಕ್ಷಸರೊಡನೆ ಹೋರಾಡುವುದರಲ್ಲಿಯೇ ನನ್ನ ಕಾಲವೆಲ್ಲಾ ವ್ಯರ್ಥವಾಗಬಹುದು. ಹೀಗಾದರೆ ನನ್ನ ಉದ್ದೇಶ ನೆರವೇರಿದ ಹಾಗಾಯಿತೆ? ರಾಕ್ಷಸರನ್ನೇನೋ ಅವರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬಂದರೂ ನಾನು ಧ್ವಂಸ ಮಾಡಬಲ್ಲೆ. ಆದರೆ ಅವರೊಡನೆ ಹೋರಾಡಿ ಬಳಲಿದ ಮೇಲೆ ಸಮುದ್ರವನ್ನು ಹಾರಿ ಹಿಂದಿರುಗುವುದೆಲ್ಲಿ ಬಂದಿತು? ಏಕೋ ಕೆಲಸ ಬಹು ಕಠಿಣವಾಗಿ ಕಾಣುತ್ತಿದೆ. ಈಗ ನಾನು ಯಾವ ದಾರಿಯನ್ನು ಹಿಡಿಯಲಿ? ಸ್ವಾಮಿಕಾರ್ಯವೂ ಕೆಡಬಾರದು; ನಾನು ಅವಿವೇಕಿ ಎನಿಸಿಕೊಳ್ಳಬಾರದು; ಬಂದ ಕಾರ್ಯವೂ ವ್ಯರ್ಥವಾಗಬಾರದು; ಜಾನಕಿದೇವಿ ನನ್ನನ್ನು ಕಂಡು ಭಯಪಡಬಾರದು; ನಾನು ಹೇಳುವ ಮಾತನ್ನು ಆಕೆ ಲಾಲಿಸಬೇಕು. ಇದಕ್ಕೆಲ್ಲಾ ಏನು ಉಪಾಯಮಾಡಲಿ!"

ಸ್ವಲ್ಪ ಹೊತ್ತು ಗಾಢಾಲೋಚನೆಯಲ್ಲಿ ಮುಳುಗಿದ ಮೇಲೆ ಆತನಿಗೆ ಒಂದು ಉಪಾಯ ಹೊಳೆಯಿತು: ಶ್ರೀರಾಮನು ಕಳುಹಿದ ಸಂದೇಶವನ್ನು ಕುಳಿತಲ್ಲಿಯೇ ಹೇಳಿ ಸೀತಾದೇವಿಯ ಕಿವಿಗೆ ಬೀಳುವಂತೆ ಮಾಡುವುದು. ಈ ಇಂಪಾದ ನುಡಿಗಳಿಂದ ಆಕೆಯ ಮನಸ್ಸು ಪ್ರಸನ್ನವಾದಾಗ ಆಕೆಗೆ ಕಾಣಿಸಿಕೊಳ್ಳುವುದು.

ಹನುಮಂತನು ತನ್ನ ನಿರ್ಧಾರವನ್ನು ಕಾರ್ಯರೂಪಕ್ಕೆ ತಂದನು. ಸೀತಾದೇವಿಗೆ ಮಾತ್ರ ಕೇಳುವಂತೆ ಇಂಪಾದ ಧ್ವನಿಯಲ್ಲಿ ಇಂತು ಮಾತನಾಡಲು ಮೊದಲು ಮಾಡಿ

ದನು :—ದಶರಥನೆಂಬ ಪುಣ್ಯಶೀಲನು ರಥ ಗಜತುರಗಾದಿ ಚತುರಂಗಬಲ ಸಮೇತನಾಗಿ ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಆತನು ಬಲದಲ್ಲಿ ದೇವೇಂದ್ರನಿಗೆ ಸಮಾನನಾದವನು. ಬಹು ಉದಾರಿ, ನಿಷ್ಕಪಟಿ. ಕೇವಲ ದಯಾಶಾಲಿ. ಆತನ ಮಗನೇ ಧನುರ್ಧಾರಿಗಳಲ್ಲಿ ಅತ್ಯಂತ ಶ್ರೇಷ್ಠನಾದ ಶ್ರೀರಾಮಚಂದ್ರ. ಧರ್ಮಜ್ಞನೂ ಸತ್ಯಪ್ರತಿಜ್ಞನೂ ಆದ ಆತ ತಂದೆಯ ಸತ್ಯವಾಕ್ಯವನ್ನು ಕಾಪಾಡುವುದಕ್ಕಾಗಿ ಹೆಂಡತಿಯೊಡನೆಯೂ ತಮ್ಮನೊಡನೆಯೂ ವನವಾಸವನ್ನು ಕೈಕೊಂಡನು. ಮಹಾರಣ್ಯದಲ್ಲಿ ಬೇಟೆಯಾಡುತ್ತಿರುವಾಗ ಕಾಮರೂಪಿಗಳಾದ ರಾಕ್ಷಸರೊಡನೆ ದ್ವೇಷವನ್ನು ಕಟ್ಟಿಕೊಂಡನು. ಖರದೂಷಣರೇ ಮೊದಲಾದ ಮಹಾ ಮಹಾ ರಾಕ್ಷಸರು ಆತನಿಂದ ಹತರಾದರು. ಇದರಿಂದ ಕುಪಿತನಾದ ಲಂಕೇಶ್ವರ ರಾವಣನು ಮಾಯಾಮೃಗದ ನೆಪದಿಂದ ರಾಮನನ್ನು ಮೋಸಗೊಳಿಸಿ, ಆತನ ಧರ್ಮಪತ್ನಿಯಾದ ಸೀತಾದೇವಿಯನ್ನು ಕದ್ದೊಯ್ದನು. ಅತ್ತ ಶ್ರೀರಾಮನು ಪ್ರಿಯಪತ್ನಿಯನ್ನು ಕಾಣದೆ ಕೊರಗುತ್ತಾ ಅಡವಿಯಲ್ಲಿ ಅಲೆಯುತ್ತಿರುವಾಗ ಕಪಿರಾಜನಾದ ಸುಗ್ರೀವನ ಸ್ನೇಹ ಆತನಿಗೆ ದೊರೆಯಿತು. ಶತ್ರುಭಯಂಕರನಾದ ಶ್ರೀರಾಮಚಂದ್ರನು ಸುಗ್ರೀವ ಶತ್ರುವಾದ ವಾಲಿಯನ್ನು ಸಂಹರಿಸಿ, ಕಪಿರಾಜ್ಯವನ್ನು ಸುಗ್ರೀವನಿಗೆ ಕೊಟ್ಟನು. ಆ ಸುಗ್ರೀವರಾಜನ ಆಜ್ಞೆಯಿಂದ ಸಾವಿರಾರು ಕಪಿಗಳು ಸೀತಾಮಾತೆಯನ್ನು ಅರಸುತ್ತಾ ದಿಕ್ಕುದಿಕ್ಕುಗಳಿಗೂ ಹೊರಟಿರುವುವು. ನಾನೂ ಆ ಕಾರ್ಯಕ್ಕಾಗಿಯೇ ಬಂದವನು. ಸಂಪಾತಿಯ ಮಾತಿನಂತೆ ಈ ಸಹಸ್ರಯೋಜನ ವಿಸ್ತೀರ್ಣದ ಸಮುದ್ರವನ್ನು ದಾಟಿ ಇಲ್ಲಿಗೆ ಬಂದೆನು. ಶ್ರೀರಾಮನು ಹೇಳಿದ ರೂಪವರ್ಣಗಳು ಈ ದೇವಿಯ ದೇಹದಲ್ಲಿ ಕಾಣುತ್ತಾ ಇವೆ. ಆದ್ದರಿಂದ ಈಕೆಯೆ ಸೀತಾಮಾತೆ ಇರಬೇಕು." ಹೀಗೆಂದು ಹನುಮಂತನು ತನಗೆ ತಾನೆ ಹೇಳಿಕೊಳ್ಳುವಂತೆ ನುಡಿದು ಸುಮ್ಮನಾದನು. ಸೀತಾದೇವಿಯ ಕಿವಿಗೆ ಈ ಮಾತುಗಳು ಬಿದ್ದುವು. ಆಕೆಗೆ ಅತ್ಯಾಶ್ಚರ್ಯವುಂಟಾಯಿತು. ಆಕೆ ತಲೆಯೆತ್ತಿ ಮರದ ಮೇಲೆ ನೋಡಿದಳು. ಏನೂ ಕಾಣದು. ಶ್ರೀರಾಮನ ಗುಣಕೀರ್ತನೆಯನ್ನು ಕೇಳಿ ಮನಸ್ಸಿಗೆ ಬಹು ಹರ್ಷವಾಗಿತ್ತು. ಆದರೆ ಮಾತನಾಡಿದವರು ಯಾರು? ಪಕ್ಕದಲ್ಲಿ ನೋಡಿದಳು, ಮೇಲೆ ನೋಡಿದಳು, ಬಾಗಿ ನೋಡಿದಳು, ಹಣೆಯ ಮೇಲೆ ಕೈ ಅಡ್ಡ ಇಟ್ಟುಕೊಂಡು ನೋಡಿದಳು, ಮೆಟ್ಟುಂಗಾಲಿಕ್ಕಿ ಇಣುಕಿ ನೋಡಿದಳು. ಕೊನೆಗೆ ಉದಯಪರ್ವತದಲ್ಲಿನ ಸೂರ್ಯನಂತೆ ತೇಜಃಪುಂಜನಾಗಿದ್ದ ಹನುಮಂತದೇವ ಆಕೆಯ ಕಣ್ಣಿಗೆ ಕಾಣಿಸಿದ.

ಮಿಂಚಿನ ಬಳ್ಳಿಯಂತೆ ಮಿನುಗುತ್ತಿದ್ದ ಹನುಮಂತನನ್ನು ಕಂಡೊಡನೆ ಸೀತೆಯ ಹೃದಯ ನಡುಗಿಹೋಯಿತು. "ಅಬ್ಬಾ! ಇದೇನು ಕಪಿಯ ರೂಪ! ಕಣ್ಣಿನಿಂದ ನಿಟ್ಟಿಸಿ ನೋಡುವುದಕ್ಕೂ ಸಾಧ್ಯವಿಲ್ಲದಂತಿದೆಯಲ್ಲಾ" ಎಂದುಕೊಂಡಳು. ಒಂದುಕಡೆ ಈ ಘೋರತನದ ರೀತಿಯ ವಾನರನ ಭೀತಿ, ಮತ್ತೊಂದು ಕಡೆ ರಾಕ್ಷಸಿಯರ ಭೀತಿ. ಇದರಿಂದ ಆಕೆಯ ದನಿ ಉಡುಗಿ ಹೋಗಿ ದೀನಸ್ವರದಿಂದ "ಹಾ ರಾಮ! ಹಾ ಲಕ್ಷ್ಮಣ!" ಎಂದುಕೊಂಡಳು. "ಇದು ಕನಸಿರಬಹುದೆ? ಕನಸಿನಲ್ಲಿ ವಾನರರನ್ನು ಕಂಡರೆ ಅಶುಭವೆನ್ನು

ತ್ತಾರೆ. ನನಗಿನ್ನಾವ ಅಶುಭ ಕಾದಿದೆಯೊ! ಭಗವಂತಾ! ನನ್ನ ಪ್ರಿಯ ವಲ್ಲಭನಾದ ರಾಮಚಂದ್ರನಿಗೂ ಆತನ ತಮ್ಮನಾದ ಲಕ್ಷ್ಮಣನಿಗೂ ಮಂಗಳವುಂಟಾಗಲಿ! ನನ್ನ ತಂದೆಯಾದ ಜನಕನಿಗೆ ಶುಭವಾಗಲಿ. ಛೆ, ನನ್ನ ಭಯವೆ! ನನಗೆಲ್ಲಿಯ ನಿದ್ರೆ? ರಾಮ ವಿಯೋಗದಿಂದ ಪರಿತಪಿಸುತ್ತಿರುವ ನನಗೆ ಈ ರಾಕ್ಷಸಿಯರ ಮಧ್ಯೆ ನಿದ್ರೆಯೆ ಇಲ್ಲದ ಮೇಲೆ ಸ್ವಪ್ನವೆಲ್ಲಿಯದು? ಸದಾ ರಾಮಧ್ಯಾನದಲ್ಲಿಯೆ ತಲ್ಲೀನಳಾಗಿರುವ ನನಗೆ ಯಾರೋ ಬಂದು ಶ್ರೀರಾಮಚಾರಿತ್ರ್ಯವನ್ನು ಹೇಳುವಂತೆ ಭ್ರಾಂತಿಯಾಗಿದೆಯೆಂದು ತೋರುತ್ತದೆ. ಉಹೂ, ಹಾಗೂ ಅಲ್ಲ. ಆಗೋ ವಾನರಾಕಾರ ಸ್ಪಷ್ಟವಾಗಿ ಗೋಚರಿಸು ತ್ತಲೇ ಇದೆ. ಆದರೆ ಈ ವಾನರ ನನ್ನ ಬಳಿ ಕುಳಿತು ಈ ರಾಮವಾರ್ತೆಯನ್ನು ಹೇಳುವುದಕ್ಕೆ ಕಾರಣವೇನಿರಬಹುದು. ಕಾರಣವೇನಾದರೂ ಇರಲಿ. ದೇವರೇ, ನನ್ನ ಮುಂದೆ ಈ ವಾನರ ಹೇಳಿದುದೆಲ್ಲಾ ಯಥಾರ್ಥವಾಗಲಿ" ಎಂದು ಹೇಳಿ ದೈವಕ್ಕೆ ಕೈಮುಗಿದಳು.

ಸೀತಾದೇವಿ ಕೂಗಿಕೊಳ್ಳದೆ ಸುಮ್ಮನಿದ್ದುದನ್ನು ಕಂಡು ಮಾರುತಿ ಮರದಿಂದ ಕೆಳಕ್ಕಿಳಿದನು. ಅನಂತರ ಆತನು ದೈನ್ಯದಿಂದ ಬಹು ವಿನಯವಾಗಿ ಆಕೆಗೆ ನಮಸ್ಕರಿಸಿ ದನು. ಮನೋಹರವಾದ ನುಡಿಗಳಿಂದ ಆಕೆಯನ್ನು ಮಾತನಾಡಿಸಿದನು—"ತಾಯಿ, ಮಲಿನವಸ್ತ್ರವನ್ನುಟ್ಟು ಈ ಮರದ ರೆಂಬೆಯನ್ನು ಒರಗಿಕೊಂಡು ನಿಂತಿರುವ ನೀನು ಯಾರು? ಏಕೆ ಹಾಗೆ ನಿಂತಿರುವೆ? ಕಮಲದಳದಲ್ಲಿ ಬಿದ್ದ ಜಲಬಿಂದು ಗಾಳಿಯಿಂದ ಚಲಿಸಿ ಕೆಳಗೆ ಬೀಳುವಂತೆ ಒಂದೇ ಸಮನಾಗಿ ಕಣ್ಣೀರು ಸುರಿಯುತ್ತಿರುವುದೇಕೆ? ನೀನೇನು ದೇವಕನ್ಯೆಯೊ ನಾಗಕನ್ಯೆಯೊ ಗಂಧರ್ವ ಕನ್ಯೆಯೊ? ದೇವಿ, ನಿನ್ನ ತಂದೆ ಯಾರು? ಭರ್ತನಾರು? ನೀನು ಏಕೆ ದುಃಖಿಸುತ್ತಿರುವೆ? ನಿನ್ನ ಚರ್ಯೆಯಿಂದ ನೀನು ದೇವತಾ ಸ್ತ್ರೀಯಲ್ಲವೆಂದೂ ರಾಜಪುತ್ರಿಯಿರಬೇಕೆಂದು ಕಾಣಬರುತ್ತಿದೆ. ನಿನ್ನ ಅಂಗ ಸೌಷ್ಠವವನ್ನೂ ಸಾಮುದ್ರಿಕ ಲಕ್ಷಣವನ್ನೂ ನೋಡಿದರೆ ನೀನು ಭೂಮಿಪಾಲನೊಬ್ಬನ ಪಟ್ಟಮಹಿಷಿಯಂತೆ ತೋರಿಬರುತ್ತಿರುವೆ. ತಾಯಿ ಜನಸ್ಥಾನದಿಂದ ರಾವಣನು ಕದ್ದು ತಂದ ಸೀತಾದೇವಿಯೆ ನೀನು? ಹಾಗಿದ್ದರೆ ನಿನಗೆ ಮಂಗಳವಾಗಲಿ! ಅಮ್ಮಾ, ನಿನ್ನ ವ್ಯಸನವನ್ನೂ ರೂಪರಾಶಿಯನ್ನೂ ಈ ತಾಪಸ ವೇಷವನ್ನೂ ನೋಡಿದರೆ ಶ್ರೀರಾಮಚಂದ್ರನ ಭಾರ್ಯೆಯೆಂದೇ ಊಹಿಸಬೇಕಾಗುತ್ತದೆ. ಇರುವ ಸಂಗತಿಯನ್ನು ನನ್ನಲ್ಲಿ ಹೇಳು" ಎಂದನು.

ಹನುಮಂತನ ಮಾತುಗಳನ್ನು ಕೇಳಿ ಸೀತೆಯ ಮನಸ್ಸಿಗೆ ಸ್ವಲ್ಪ ಧೈರ್ಯ ಬಂದಂ- ತಾಯಿತು. ಆಕೆ ಹೇಳಿದಳು—"ಅಯ್ಯಾ, ನಾನು ರಾಜರ್ಷಿಯಾದ ದಶರಥನ ಸೊಸೆ. ವಿದೇಹಾಧಿಪತಿಯಾದ ಜನಕನ ಮಗಳು. ನನ್ನ ಹೆಸರು 'ಸೀತೆ' ಎಂದು. ಧೀಮಂತ ನಾದ ಶ್ರೀರಾಮಚಂದ್ರನು ನನ್ನ ಪತಿ. ಹನ್ನೆರಡು ವರ್ಷಗಳ ಕಾಲ ನನ್ನ ಗಂಡನೊಡನೆ ಮಾವನ ಮನೆಯಲ್ಲಿ ಸುಖವಾಗಿದ್ದೆ. ನಮ್ಮ ಮಾವ ತನ್ನ ಜ್ಯೇಷ್ಠಪುತ್ರನಾದ ರಘು ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಹವಣಿಸುತ್ತಿದ್ದನು. ಆಗ ಆತನ ಕಿರಿಯ

ಹೆಂಡತಿಯಾದ ಕೈಕೆ ಹಿಂದೆ ರಾಜನು ತನಗೆ ಕೊಟ್ಟಿದ್ದ ವರಗಳನ್ನು ಮುಂದುಮಾಡಿ ರಘು ರಾಮನನ್ನು ಅಡವಿಗೆ ಕಳುಹಿಸುವಂತೆ ಗಂಡನಲ್ಲಿ ಹಟ ಹಿಡಿದಳು. ಆ ಮಾತನ್ನು ನಡಸಿ ಕೊಡಲಾರದೆ ದಶರಥ ಮಹಾರಾಜನು ವ್ಯಸನೋನ್ಮಾದಿತನಾಗಿರುವಾಗ ರಘುರಾಮನು ತನ್ನ ತಂದೆಯ ಮಾತನ್ನು ಉಳಿಸುವುದಕ್ಕಾಗಿ ಅರಣ್ಯಕ್ಕೆ ಹೊರಟನು. ನಾನು ಆತ ನನ್ನು ಅಗಲಿರಲಾರದೆ ಆತನನ್ನು ಹಿಂಬಾಲಿಸಿದೆ. ಶ್ರೀರಾಮನ ತಮ್ಮನಾದ ಲಕ್ಷ್ಮಣನೂ ನಮ್ಮನ್ನೇ ಅನುಸರಿಸಿದನು. ನಾವು ಮೂವರೂ ಅಡವಿಯಲ್ಲಿರುವಾಗ ದುಷ್ಟರಾವಣನು ನನ್ನನ್ನು ಕದ್ದು ತಂದನು. ಆ ನೀಚನು ನನಗೆ ಇನ್ನೂ ಎರಡು ತಿಂಗಳು ಅವಧಿಯನ್ನು ಕೊಟ್ಟಿರುವನು. ಅದು ಕಳೆದ ಬಳಿಕ ನಾನು ಜೀವಿಸುವುದೇ ಅಸಾಧ್ಯ" ಎಂದಳು.

ಶೋಕಸಂತಪ್ತೆಯಾದ ಜಾನಕಿಯ ನುಡಿಗಳನ್ನು ಕೇಳಿ ಹನುಮಂತನಿಗೆ ಬಹು ಕನಿಕರವಾಯಿತು. ಆಕೆಯನ್ನು ಸಮಾಧಾನಪಡಿಸುತ್ತಾ "ತಾಯಿ, ನಾನು ಶ್ರೀರಾಮ ದೂತ. ಆತನ ಅಪ್ಪಣೆಯಿಂದಲೆ ನಾನೀಗ ನಿನ್ನನ್ನು ಅರಸುತ್ತಾ ಬಂದಿದ್ದೇನೆ. ದೇವಿ, ಶ್ರೀರಾಮನು ಕುಶಲದಿಂದಿರುತ್ತಾನೆ. ಆ ವಿಚಾರವನ್ನು ನಿನಗೆ ತಿಳಿಸುವಂತೆ ಆತನು ಆಜ್ಞಾಪಿಸಿರುವನು. ನಿನ್ನ ಪತಿಯನ್ನು ನೆರಳಿನಂತೆ ಅನುಸರಿಸುತ್ತಿರುವ ಲಕ್ಷ್ಮಣ ಸ್ವಾಮಿಯೂ ತನ್ನ ಕುಶಲವನ್ನು ಅರುಹಿ, ತನ್ನ ನಮಸ್ಕಾರಗಳನ್ನು ಸಲ್ಲಿಸುವಂತೆ ನನಗೆ ಆಜ್ಞಾಪಿಸಿದ್ದಾನೆ" ಎಂದು ಹೇಳಿದನು. ಆ ಮಾತನ್ನು ಕೇಳಿ ಸೀತಾದೇವಿಗೆ ಅಮೃತಪಾನಮಾಡಿದಷ್ಟು ಆನಂದವಾಯಿತು. "ಅಯ್ಯಾ ವಾನರೋತ್ತಮ, 'ಮನುಷ್ಯ ಬದುಕಿದ್ದರೆ ನೂರು ವರ್ಷಕ್ಕಾದರೂ ಒಮ್ಮೆ ಸುಖಸಮಾಚಾರವನ್ನು ಕೇಳುತ್ತಾನೆ' ಎಂದು ಆರ್ಯೋಕ್ತಿಯುಂಟು. ಅದು ನಿಜ. ಆಃ! ನನಗೀಗ ನಿಜವಾಗಿಯೂ ಆನಂದ ವಾಗಿದೆ" ಎಂದಳು. ಹೀಗೆ ಪರಸ್ಪರ ನಂಬುಗೆಗೊಂಡವರಾಗಿ ಮಾತಾಡುತ್ತಿರುವಾಗ ಹನುಮಂತನು ಸ್ವಲ್ಪ ಸ್ವಲ್ಪವಾಗಿ ಸೀತೆಯ ಹತ್ತಿರ ಹತ್ತಿರಕ್ಕೆ ಬರುತ್ತಿದ್ದನು. "ಇವನು ರಾವಣನೇ ಇರಬಹುದೋ? ಛೀ, ನಾನು ತಪ್ಪುಮಾಡಿದೆ. ಇವನು ರಾವಣನೇ ನಿಜ. ಹೀಗೆಂದುಕೊಂಡು ಆಕೆ ನಿಂದಿರಲಾರದೆ ನೆಮ್ಮಿದ್ದ ಮರದ ಕೊಂಬೆಯನ್ನು ಬಿಟ್ಟು ನೆಲಕ್ಕೆ ಕುಸಿದಳು. ಹನುಮಂತನಿಗೆ ಆಕೆಯ ಭಯ ಅರಿವಾಯಿತು. ಆದ್ದರಿಂದ ಆಕೆಯ ಇದಿರಿನಲ್ಲಿ ದೀರ್ಘದಂಡ ನಮಸ್ಕಾರ ಮಾಡಿದನು. ಆದರೂ ಆಕೆಗೆ ಧೈರ್ಯ ಬರದು. ಅದರಿಂದ ಆತನನ್ನು ಕುರಿತು, "ಎಲೈ ರಾಕ್ಷಸಾಧಮ, ನೀನು ಬಹಳ ಮಾಯಾವಿ. ಅಂದು ಜನಸ್ಥಾನದಲ್ಲಿದ್ದಾಗ ಸನ್ಯಾಸಿಯ ರೂಪದಲ್ಲಿ ಬಂದೆ. ಇಂದು ವಾನರ ರೂಪದಿಂದ ಬಂದಿರುವೆ. ನನ್ನನ್ನು ಇನ್ನೆಷ್ಟು ಸಂಕಟಪಡಿಸಬೇಕೆಂದು ಕೊಂಡಿರುವೆ? ಉಪವಾಸದಿಂದ ಕೃಶಳಾಗಿ ದೀನಳಾಗಿರುವ ನನ್ನನ್ನು ಗೋಳಾಡಿಸು ವುದು ನಿನಗೆ ಶ್ರೇಯಸ್ಕರವಲ್ಲ" ಎಂದಳು. ಅಷ್ಟರಲ್ಲಿ ಆಕೆಗೆ ತಾನಾಡುತ್ತಿರುವುದು ಕಾರಣವಿಲ್ಲದ ಶಂಕೆ ಎನ್ನಿಸಿತು. ಆದ್ದರಿಂದ ಮಾತನ್ನು ಬದಲಿಸಿ, "ಅಯ್ಯಾ ನಾನು ಆಡಿದುದು ಅಯುಕ್ತವೆಂದು ತೋರುತ್ತದೆ. ನೀನು ಶ್ರೀರಾಮದೂತನೆ ಆಗಿದ್ದರೆ ನಿನಗೆ ಮಂಗಳವಾಗಲಿ. ಶ್ರೀರಾಮನ ಕಥೆಯನ್ನು ಕೇಳುವುದೆಂದರೆ ನನಗೆ ಬಹಳ ಆನಂದ.

ಆತನ ಗುಣಗಳನ್ನು ನೀನು ಹಾಡು; ನಾನು ಕೇಳಿ ಸಂತೋಷ ಪಡುತ್ತೇನೆ" ಎಂದಳು. ಮತ್ತೆ "ಇವನು ರಾವಣನಾಗಿದ್ದರೆ ಗತಿ?" ಎಂದುಕೊಂಡಳು. ಹೀಗೆ ಆಕೆಯ ಮನಸ್ಸಿನಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ವೀಕ್ಷಿಸಿದ ಇಂಗಿತಜ್ಞನಾದ ಹನುಮಂತನು ಆಕೆಯನ್ನು ಕುರಿತು "ತಾಯೆ, ಜಾನಕಿ! ಶ್ರೀರಾಮನು ಸೂರ್ಯನಂತೆ ತೇಜಸ್ವಿ; ಚಂದ್ರನಂತೆ ಮನೋಹರ; ಕುಬೇರನಂತೆ ರಾಜಾಧಿರಾಜ; ದೇವಗುರುವಿನಂತೆ ಪ್ರಜಾ ಶಾಲಿ; ಸಾಕ್ಷಾತ್ ವಿಷ್ಣುವಿನಂತೆ ಪರಾಕ್ರಮಶಾಲಿ. ಆತನು ಸತ್ಯವಾದಿ; ಮನ್ಮಥ ಸದೃಶವಾದ ರೂಪವಂತ; ಲೋಕೋತ್ತರವಾದ ಗುಣಗಳುಳ್ಳವನು. ಆ ಮಹಾತ್ಮನ ಬಾಹುಚ್ಛಾಯೆಯನ್ನು ಆಶ್ರಯಿಸಿ ಪ್ರಪಂಚವೆಲ್ಲವೂ ಜೀವಿಸುತ್ತಿದೆ. ಅಂತಹ ಮಹಾತ್ಮನಿಗೆ ಅಪಕಾರ ಮಾಡಬಯಸಿ, ಈ ಪಾಪಿ ರಾವಣ ನಿನ್ನನ್ನು ಅಪಹರಿಸಿ ತಂದಿದ್ದಾನೆ. ಅವನಿಗೆ ಆಗುವ ಫಲವನ್ನು ನೀನೇ ಕಣ್ಣಾರೆ ಕಾಣುವೆ. ಯಾವನು ಇಷ್ಟರಲ್ಲೆ ತನ್ನ ಕಾಲಾಗ್ನಿ ಸದೃಶವಾದ ಬಾಣಗಳಿಂದ ರಾವಣನ ಪ್ರಾಣಗಳನ್ನು ಅಪಹಾರ ಮಾಡುವನೊ ಆ ಶ್ರೀರಾಮನ ದೂತನು ನಾನು. ರಾಕ್ಷಸ ಸ್ತ್ರೀಯರ ವಶವಾಗಿದ್ದರೂ ಪುಣ್ಯಕ್ಕೆ ನೀನಿನ್ನೂ ಜೀವಂತಳಾಗಿರುವೆ. ರಾಮಲಕ್ಷ್ಮಣರನ್ನೂ ವಾನರ ಸಮೂಹವನ್ನೂ ನಮ್ಮ ರಾಜನಾದ ಸುಗ್ರೀವನನ್ನೂ ಇನ್ನು ಕೆಲವೇ ದಿನಗಳಲ್ಲಿ ನೀನು ಕಾಣುವೆಯಂತೆ. ನಾನು ಸುಗ್ರೀವ ರಾಜನ ಮುಖ್ಯಮಂತ್ರಿ. ನನ್ನ ಹೆಸರು ಹನುಮಂತ. ನಾನು ನಿನಗಾಗಿ ಈ ಮಹಾಸಾಗರವನ್ನು ದಾಟಿ ಈ ಲಂಕೆಯನ್ನು ಪ್ರವೇಶಿಸಿದ್ದೇನೆ. ನನ್ನನ್ನು ಕಾಮರೂಪಿಯಾದ ರಾವಣನೆಂದು ಶಂಕಿಸಬೇಡ. ನನ್ನ ಮಾತನ್ನು ನಂಬು" ಎಂದನು.

ಮಾರುತಿಯಾಡಿದ ಮಾತುಗಳನ್ನು ಕೇಳಿ ಸೀತಾದೇವಿಗೆ ಬಹಳ ಸಂತೋಷವಾಯಿತು. ಆತನನ್ನು ಕೇಳಿದಳು—"ಎಲೈ ವಾನರಪುಂಗವನೆ, ನಿನಗೂ ಶ್ರೀರಾಮನಿಗೂ ಸ್ನೇಹವಾದುದು ಹೇಗೆ? ವಾನರರಿಗೂ ನರರಿಗೂ ಈ ಬಗೆಯಾದ ಸಂಬಂಧ ಫಲಿಸಿದುದು ಹೇಗೆ? ನಾನು ನನ್ನ ಮನಶ್ಶಾಂತಿಗಾಗಿ ಈ ಮಾತುಗಳನ್ನು ಕೇಳುತ್ತಿದ್ದೇನೆ. ಜೊತೆಗೆ ನನ್ನ ಸಂದೇಹವೂ ನಿವಾರಣೆಯಾದಂತಾಗುತ್ತದೆ. ಹಾಗೆಯೆ ರಾಮಲಕ್ಷ್ಮಣರ ಆಕಾರಾದಿಗಳನ್ನು ವಿವರಿಸಿ ಹೇಳು" ಎಂದಳು. ಹನುಮಂತನು ಮೊದಲು ಶ್ರೀರಾಮನ ಅಂಗಾಂಗಗಳನ್ನು ವರ್ಣಿಸಿ ಹೇಳಿದನು. "ಆತನು ಸರ್ವಾಂಗ ಸುಂದರ. ಕಮಲಪತ್ರದಂತೆ ವಿಶಾಲವಾದ ನೇತ್ರಗಳು, ವಿಶಾಲವಾದ ಹೆಗಲು, ನೀಳವಾದ ತೋಳುಗಳು, ಶಂಖದಂತಹ ಕಂಠ, ಕಾಂತಿಯುಕ್ತವಾದ ಮುಖ. ಆತನ ಧ್ವನಿ ಭೇರಿಯ ಧ್ವನಿಯಂತೆ ಗಂಭೀರವಾದುದು. ಆತನ ನಡಿಗೆ ಸಿಂಹದ ನಡಿಗೆಯಂತೆ ಚುರುಕಾದುದು. ಬಹಳ ಉದ್ದವೂ ಅಲ್ಲದ ಗಿಡ್ಡವೂ ಅಲ್ಲದ ಆತನ ದೇಹದಲ್ಲಿರುವ ಅವಯವಗಳಲ್ಲಿ ಇನ್ನೂ ಕೆಲವು ವಿಶೇಷಗಳನ್ನು ಹೇಳಬಹುದು. ಎದೆ, ಮಣಿಬಂಧ, ಹಿಡಿಗಳು ಇವು ಮೂರೂ ಬಲಿಷ್ಠವಾಗಿವೆ. ಹೊಟ್ಟೆ, ಹೊಕ್ಕಳು, ಎದೆ ಇವು ಮೂರು ಉಬ್ಬಿವೆ. ಕಡೆಗಣ್ಣು, ಉಗುರು, ಅಂಗೈ ಇವು ಕೆಂಪಗಿವೆ. ಆತನ ಶಿರಸ್ಸಿನಲ್ಲಿ ಶುಭಸೂಚಕಗಳಾದ ಮೂರು ಸುಳಿಗಳಿವೆ;

ಅಂಗುಷ್ಠ ಮೂಲದಲ್ಲಿ ನಾಲ್ಕು ವೇದ ರೇಖೆಗಳಿವೆ. ಆತನ ಅಂಗೈ, ಅಂಗಾಲುಗಳಲ್ಲಿ ವಜ್ರ, ಧ್ವಜ, ಶಂಖ, ಅಂಕುಶ ಇವುಗಳ ರೇಖೆಗಳಿವೆ. ಆತನು ಸತ್ಯ ಧರ್ಮಗಳಲ್ಲಿ ಸದಾ ಆಸಕ್ತನಾದವನು. ಆತನ ಮಾತು ಮನೋಹರ. ಧರ್ಮವೇದದಲ್ಲಿಯೂ ಇತರ ವೇದಗಳಲ್ಲಿಯೂ ಆತನು ಪಾರಂಗತ. ಬ್ರಹ್ಮಚರ್ಯ ವ್ರತವುಳ್ಳವನು, ವಿನಯ ಸಂಪನ್ನನು. ಆತನ ತಮ್ಮನಾದ ಲಕ್ಷ್ಮಣನೂ ರೂಪದಲ್ಲಿಯೂ ಗುಣದಲ್ಲಿಯೂ ಅಣ್ಣನನ್ನೇ ಹೋಲುತ್ತಾನೆ. ಪುರುಷೋತ್ತಮರಾದ ಆ ಸೋದರರಿರ್ವರೂ ನಿನ್ನನ್ನು ಅರಸುತ್ತಾ ತಿರುಗುತ್ತಿರುವಾಗ ನಮಗೂ ಅವರಿಗೂ ಪರಸ್ಪರ ಸಮಾಗಮವಾಗಿ ಸ್ನೇಹ ಬೆಳೆಯಿತು.

"ಇನ್ನು ಅವರಿಗೂ ನಮಗೂ ಸ್ನೇಹ ಬೆಳೆದ ರೀತಿಯನ್ನು ಕೇಳು. ನಮ್ಮ ರಾಜನಾದ ಸುಗ್ರೀವನು ತನ್ನ ಅಣ್ಣನಾದ ವಾಲಿಯಿಂದ ರಾಜ್ಯ ಭ್ರಷ್ಟನಾಗಿ ಋಷ್ಯಮೂಕ ಪರ್ವತದ ಬಳಿಯಲ್ಲಿ ಬಚ್ಚಿಟ್ಟುಕೊಂಡಿದ್ದನು. ಅಲ್ಲಿಗೆ ನಾರುಮಡಿಗಳನ್ನುಟ್ಟು ಧನುರ್ಧಾರಿಗಳಾಗಿದ್ದ ರಾಮಲಕ್ಷ್ಮಣರಿರ್ವರೂ ಬಂದರು. ಸುಗ್ರೀವನು ಅವರು ವಾಲಿಯ ಕಡೆಯಿಂದ ತನ್ನ ವಧೆಗಾಗಿ ಕಳುಹಲ್ಪಟ್ಟ ದೂತರೆಂದು ಭ್ರಮಿಸಿ ಪರ್ವತ ಶಿಖರಕ್ಕೆ ಓಡಿಹೋದನು. ಆಗ ಸಮೀಪದಲ್ಲಿಯೆ ಇದ್ದ ನನ್ನನ್ನು ಸುಗ್ರೀವನು ಹೊಸದಾಗಿ ಬಂದವರ ಸಮಾಚಾರವನ್ನು ಅರಿತು ಬರುವಂತೆ ಹೇಳಿಕಳುಹಿಸಿದನು. ನಾನು ಅವರ ಬಳಿಗೆ ಹೋಗಿ ನಮ್ಮ ಸಮಾಚಾರವನ್ನು ತಿಳಿಸಲು ಅವರು ಸುಗ್ರೀವನಿಗೆ ಸಹಾಯಮಾಡಲು ಒಪ್ಪಿದರು. ನಾನು ರಾಮಲಕ್ಷ್ಮಣರನ್ನು ಹೆಗಲಮೇಲೆ ಕೂರಿಸಿಕೊಂಡು ನಮ್ಮ ದೊರೆಯ ಬಳಿಗೆ ಕರೆದೊಯ್ದೆ. ಅವರು ಪರಸ್ಪರ ಕಲೆತು ಒಬ್ಬರಿಗೊಬ್ಬರು ಸಹಾಯ ಮಾಡುವುದಾಗಿ ಅಗ್ನಿಸಾಕ್ಷಿಯಾಗಿ ಸ್ನೇಹಮಾಡಿಕೊಂಡರು. ಅವರಿಗೆ ಸ್ನೇಹ ಬೆಳೆದುದು ಹೀಗೆ. ವಾಲಿ ಸುಗ್ರೀವನ ಪತ್ನಿಯನ್ನು ಪರಿಗ್ರಹಿಸಿದ ಸುದ್ದಿಯನ್ನು ಕೇಳಿ ಧರ್ಮಪರನಾದ ರಾಮಚಂದ್ರನು ಆತನನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದನು. ಆತನ ಪ್ರತಿಜ್ಞೆಯಂತೆ ಕಾರ್ಯ ನಡೆಯಿತು. ಸುಗ್ರೀವನಿಗೆ ರಾಜ್ಯ ದೊರೆಯಿತು. ಅನಂತರ ಸುಗ್ರೀವನು ಶ್ರೀರಾಮಚಂದ್ರನಿಗೆ ಮಾತು ಕೊಟ್ಟಿದ್ದಂತೆ ನಿನ್ನನ್ನು ಅರಸಲು ತನ್ನ ದೂತರನ್ನು ದಿಕ್ಕುದಿಕ್ಕಿಗೆ ಕಳುಹಿಸಿಕೊಟ್ಟನು.

"ಶ್ರೀರಾಮಚಂದ್ರನ ಭಾರ್ಯಾಪಹರಣ ವೃತ್ತಾಂತವನ್ನು ಕೇಳಿದ ವಾನರರು ತಮಗೆ ದೊರೆತಿದ್ದ ಆಭರಣಗಳನ್ನು ರಾಮಚಂದ್ರನ ಮುಂದಿಟ್ಟು 'ಆಕಾಶಮಾರ್ಗದಲ್ಲಿ ಅಳುತ್ತಾ ಹೋಗುತ್ತಿದ್ದ ದಿವ್ಯಸುಂದರಿಯೊಬ್ಬಳು ಇವುಗಳನ್ನು ಕೆಳಕ್ಕೆ ಬಿಸಾಡಿದಳು' ಎಂದು ಹೇಳಿದರು. ಶ್ರೀರಾಮನು ಅವುಗಳನ್ನು ಸಂಭ್ರಮದಿಂದ ಕೈಗೆ ತೆಗೆದುಕೊಂಡು ಬಹುಕಾಲ ಅಳುತ್ತಿದ್ದನು. ಅನಂತರ ಸುಗ್ರೀವ ಲಕ್ಷ್ಮಣರು ಆತನನ್ನು ಸಮಾಧಾನಗೊಳಿಸಿದರು. ಆದರೂ ಆತನು ಭೂಕಂಪದಿಂದ ನಡುಗುವ ಪರ್ವತದಂತೆ ಅಡಿಗಡಿಗೂ ವ್ಯಥೆಗೊಳ್ಳುತ್ತಾ ಕಾಲಯಾಪನ ಮಾಡುತ್ತಿರುವನು. ತಾಯಿ, ನೀನಿರುವ ಸ್ಥಳವನ್ನು ತಿಳಿದ ನಾನು ತಿರುಗಿ ಹೋಗಿ ಆತನಿಗೆ ತಿಳಿಸುತ್ತಲೇ ಆತನು ಇಲ್ಲಿಗೆ ಬಂದು ರಾವಣನನ್ನು

ಅವನ ಬಂಧುಮಿತ್ರಸಹಿತ ಸಂಹರಿಸಿ ನಿನ್ನ ಮನಸ್ಸನ್ನು ಸಂತೋಷಗೊಳಿಸುವನು" ಎಂದು ಹೇಳಿದನು. ಮಹಾಬಲಶಾಲಿಗಳಾದ ವಾನರರು ಸುಗ್ರೀವನ ಆಜ್ಞೆಯಂತೆ ಅಂಗದನ ಮುಂದಾಳುತನದಲ್ಲಿ ದಕ್ಷಿಣಕ್ಕೆ ಹೊರಟುದನ್ನೂ, ಸಂಪಾತಿಯಿಂದ ತಮಗೆ ಸೀತಾಮಾತೆಯ ಸುದ್ದಿ ಗೊತ್ತಾದುದನ್ನೂ, ಅವರಲ್ಲಿ ಒಬ್ಬನಾದ ತಾನು ಸಮುದ್ರವನ್ನು ಹಾರಿ ಬಂದುದನ್ನೂ, ದಾರಿಯಲ್ಲಿ ತನಗೆ ಬಂದ ತೊಂದರೆಗಳನ್ನೂ ಹನುಮಂತನು ಸೀತಾದೇವಿಗೆ ವಿವರಿಸಿ ಹೇಳಿದನು. ಅಲ್ಲದೆ ತಾನು ರಾತ್ರಿಯೆಲ್ಲಾ ಲಂಕಾನಗರಿಯನ್ನು ಶೋಧಿಸಿದುದನ್ನು ವಿವರಿಸಿ, ಕಡೆಗೆ ತನ್ನ ಪುಣ್ಯದಿಂದ ಸೀತಾದೇವಿಯನ್ನು ಕಂಡುದಾಗಿ ತಿಳಿಯಹೇಳಿದನು. ಈ ಮಾತುಗಳನ್ನೆಲ್ಲಾ ಕೇಳಿದಮೇಲೆ ಸೀತಾದೇವಿಗೆ ಎಷ್ಟೋ ನಂಬಿಕೆ ಹುಟ್ಟಿ, ಇವನು ರಾವಣನಿರಬಹುದೆಂಬ ಸಂದೇಹ ನಿವಾರಣೆಯಾಯಿತು.

---

## ೧೨

# ಮುದ್ರಿಕಾ ಪ್ರಧಾನ

ಸೀತಾದೇವಿಯ ಮುಖ ಸುಪ್ರಸನ್ನವಾಯಿತು. ಆಕೆಯ ಭಯ ಶಂಕೆ ದೂರ ವಾದುವು. ಇದನ್ನು ಕಂಡು ಹನುಮಂತನು ಸಂತೋಷಿತನಾಗಿ ತಾನು ರಾಮ ನಿಂದ ತಂದಿದ್ದ ಮುದ್ರಿಕೆಯನ್ನು ಆಕೆಯ ಕೈಗೆ ಕೊಡುತ್ತಾ "ಎಲೌ ಮಹಾಭಾಗೆ, ನಾನು ನಿಜವಾಗಿಯೂ ವಾನರನೆಂದು, ರಾಮದೂತನೆಂದು ನಿನಗೆ ನಂಬುಗೆಯಾಯಿ ತಷ್ಟೆ! ಇಗೋ ಇನ್ನೇನಾದರೂ ಸಂದೇಹವಿದ್ದರೆ ಅದೂ ನಿವಾರಣೆಯಾಗಲಿ.



ಹನುಮಂತನು ಸಂತೋಷಿತನಾಗಿ ತಾನು ರಾಮನಿಂದ ತಂದಿದ್ದ ಮುದ್ರೆಯುಂಗರವನ್ನು ಆಕೆಯ ಕೈಗೆ ಕೊಟ್ಟನು.

ಈ ಶ್ರೀರಾಮ ನಾಮಾಂಕಿತವಾದ ಮುದ್ರೆಯುಂಗುರವನ್ನು ತೆಗೆದುಕೊ. ಇದನ್ನು ನಿನಗೆ ನಂಬುಗೆಯನ್ನುಂಟು ಮಾಡುವುದಕ್ಕಾಗಿಯೇ ತಂದಿರುವೆನು. ಮಹಾತ್ಮನಾದ ಶ್ರೀರಾಮನೆ ಇದನ್ನು ಕೊಟ್ಟು ಕಳುಹಿಸಿರುವನು. ಇದನ್ನು ಕಂಡ ಮೇಲೆ ಇನ್ನು ಯಾವ ಭಯಕ್ಕೂ ಕಾರಣವಿಲ್ಲವಷ್ಟೆ. ತೆಗೆದುಕೊ. ನಿನಗೆ ಮಂಗಳವಾಗಲಿ!" ಎಂದನು.

ಸೀತಾದೇವಿಗೆ ಶ್ರೀರಾಮಮುದ್ರಿಕೆಯನ್ನು ಕಂಡು ಶ್ರೀರಾಮಚಂದ್ರನನ್ನೇ ಕಂಡಷ್ಟು ಸಂತೋಷವಾಯಿತು. ಆಕೆಯ ಮುಖಚಂದ್ರ ರಾಹುಮುಕ್ತವಾಯಿತು. ಪುಳಕಿತ ಗಾತ್ರಿಯಾದ ಆಕೆಗೆ ಲಜ್ಜೆಯುದಿಸಿತು. ಮನಸ್ಸಿನ ಹಿಗ್ಗು ಹೆಚ್ಚಿ ಹನುಮಂತನ ಸ್ತೋತ್ರ ಬಾಯಿಂದ ಉಕ್ಕಿತು. "ಎಲೈ ಮಹನೀಯನಾದ ಆಂಜನೇಯನೇ, ನಿರ್ಭಯ ವಾಗಿ ಈ ಲಂಕಾನಗರಿಯನ್ನು ಪ್ರವೇಶಿಸಿದ ನಿನ್ನ ಶೌರ್ಯ ಧೈರ್ಯಗಳು ಅಸದೃಶ ವಾದುವು. ನಿನ್ನ ಬುದ್ಧಿ ಅಪಾರವಾದುದು. ಮಹಾಸಮುದ್ರ ನಿನಗೊಂದು ಗೋಷ್ಪದ ಜಲದಂತಾಯಿತಲ್ಲವೆ? ರಾವಣನ ಭಯವೇ ಸ್ವಲ್ಪವೂ ಇಲ್ಲದಿರುವ ನೀನು ಸಾಮಾನ್ಯನೆ? ಶ್ರೀರಾಮದೂತನಾದ ನಿನ್ನೊಡನೆ ಮಾತನಾಡಬೇಕೆಂದರೆ ನನಗೆ ಬಹಳ ಆನಂದ. ಶ್ರೀರಾಮ ಲಕ್ಷ್ಮಣರ ಕುಶಲವಾರ್ತೆಯನ್ನು ತಂದ ಪುಣ್ಯಸ್ವರೂಪಿಯಾದ ಮಾರುತಿ, ಶ್ರೀರಾಮಚಂದ್ರನು ದುಃಖದಲ್ಲಿ ಮುಳುಗಿ ಮುಂಗಾಣದೆ ಕುಳಿತಿಲ್ಲವಷ್ಟೆ? ತನ್ನ ಕಾರ್ಯದಲ್ಲಿ ಆತನು ಜಾಗರೂಕನಾಗಿರುವನಷ್ಟೇ? ಆತನು ಬಹುಬೇಗ ಬಂದು ನನ್ನನ್ನು ಈ ದುಃಖದಿಂದ ಬಿಡಿಸುವನಷ್ಟೆ? ದುಃಖದಿಂದ ಆ ನನ್ನ ಪ್ರಿಯನು ಬಹಳ ಕೃಶವಾಗಿಹೋಗಿರುವನೆ? ನನಗೋಸ್ಕರ ಆತನು ಬಹುವಾಗಿ ಪರಿತಪಿಸುತ್ತಿದ್ದಾನೆಯೆ? ಆತನು ನನ್ನಲ್ಲಿ ಕುಪಿತನಾಗಿಲ್ಲವಷ್ಟೆ?ನನ್ನಲ್ಲಿಯೇ ನಟ್ಟಪ್ರಾಣಗಳುಳ್ಳವನಾಗಿದ್ದಾನೆಯೆ, ಆ ಕರುಣಾಕರ? ವೀರಮಾರುತಿ ಶ್ರೀರಾಮನಿಗೆ ನನ್ನಲ್ಲಿ ಎಷ್ಟು ಪ್ರೇಮ! ತಾಯಿ ತಂದೆಗಳಲ್ಲಾಗಲಿ ಬಂಧು ಬಾಂಧವರಲ್ಲಾಗಲಿ ಆತನಿಗೆ ನನ್ನಷ್ಟು ಪ್ರೀತಿಪಾತ್ರರಾದ ವರು ಯಾರೂ ಇಲ್ಲ. ನನಗಂತೂ ಆತನೇ ಜೀವ. ಆದ್ದರಿಂದ ಆತನು ಬಂದು ನನ್ನನ್ನು ಬಂಧಮುಕ್ತಳನ್ನಾಗಿ ಮಾಡುವವರೆಗೂ ಜೀವವನ್ನು ಹಿಡಿದುಕೊಂಡಿರುತ್ತೇನೆ" ಎಂದಳು. ಆಕೆಯ ಮಧುರವಾದ ಮಾತುಗಳನ್ನು ಕೇಳಿ ಹನುಮಂತನಿಗೆ ಆಕೆಯಲ್ಲಿದ್ದ ಭಕ್ತಿ ಹೆಚ್ಚಾಯಿತು. ಮತ್ತೊಮ್ಮೆ ಆಕೆಗೆ ತಲೆಬಾಗಿ ವಂದಿಸಿ, "ತಾಯೆ, ಏನೂ ಸಂದೇಹಪಡಬೇಡ. ಶ್ರೀರಾಮಚಂದ್ರನಿಗೆ ನೀನಿರುವ ಎಡೆ ತಿಳಿಯದು. ಈಗ ನಾನು ಹೋಗಿ ಹೇಳಿದೊಡನೆಯೆ ಅಪಾರವಾದ ಸೈನ್ಯದೊಡನೆ ಇಲ್ಲಿಗೆ ಹೊರಟುಬರುವನು. ಆತನು ಬಾಣಪರಂಪರೆಯಿಂದ ಈ ಸಮುದ್ರವನ್ನು ಸ್ತಂಭಿಸಿ ಲಂಕೆಯನ್ನು ಪ್ರವೇಶಿಸು ವನು. ಒಡನೆಯೆ ರಾಕ್ಷಸರೆಲ್ಲರೂ ನಾಶವಾಗಿ ಹೋಗುವರು. ಪ್ರತ್ಯಕ್ಷ ಯಮನೆ ಎದ್ದು ಬಂದರೂ ಶ್ರೀರಾಮನನ್ನು ತಡೆಯಲಾರನು. ಆದ್ದರಿಂದ ಕ್ಷಿಪ್ರದಲ್ಲಿಯೆ ನೀನು ಶ್ರೀರಾಮಚಂದ್ರನ ಮುಖಕಮಲವನ್ನು ಕಾಣುತ್ತೀಯೆ. ದೇವಿ, ನಿನ್ನನ್ನು ಅಗಲಿದ ಮೇಲೆ ಇಂದಿನವರೆಗೆ ಆತನು ಮಾಂಸವನ್ನು ಭಕ್ಷಿಸಿಲ್ಲ. ಮಧುವನ್ನು ಸೇವಿಸಿಲ್ಲ. ಕೇವಲ ಕಂದಮೂಲಗಳನ್ನು ಭಕ್ಷಿಸುತ್ತಾ ಋಷಿಜೀವನವನ್ನು ನಡೆಸುತ್ತಿರುವನು. ಆತನಿಗೆ ನಿದ್ರೆಯೆಂಬುದೆ ಇಲ್ಲ. ಆಕಸ್ಮಾತ್ತಾಗಿ ಕಣ್ಣು ಮುಚ್ಚಿದರೂ 'ಸೀತೆ! ಸೀತೆ!' ಎಂದು ಕನವರಿಸುತ್ತಾ ಮೇಲಕ್ಕೇಳುತ್ತಾನೆ. ಸುಂದರವಾದ ಪುಷ್ಪವನ್ನೊ ಫಲವನ್ನೊ ಕಾಣುತ್ತಲೆ 'ಹಾ ಪ್ರಿಯೆ, ಈ ವಸ್ತುವನ್ನು ಅನುಭವಿಸಲು ನೀನಿಲ್ಲವಲ್ಲಾ!' ಎಂದು ಕಣ್ಣೀರಿಡುತ್ತಾನೆ" ಎಂದು ಹೇಳಿದನು. ಇದನ್ನು ಕೇಳಿ ಸೀತೆಗೆ ಒಂದು

ಬಗೆಯಿಂದ ಮನಸ್ಸಿಗೆ ಹರ್ಷವುಂಟಾದರೂ ತನಗಾಗಿ ರಾಮಚಂದ್ರನು ಸಂಕಟಪಡು ತ್ತಿರುವುದನ್ನು ಕೇಳಿ ಮನಸ್ಸು ಮರುಟಿ, ಮುಖ ಬಾಡಿತು. ಆತನು ಪಡುತ್ತಿರ ಬಹುದಾದ ಸಂಕಟವನ್ನು ಆಕೆಯ ಹೃದಯವೂ ಆ ಮುಹೂರ್ತದಲ್ಲಿ ಸಾಕ್ಷಾತ್ತಾಗಿ ಅನುಭವಿಸಿತು.

---

## ೧೩

# ಹನುಮಂತ ಸೀತಾದೇವಿಯರ ಸಂವಾದ

ಗಂಡನ ಮನೋವ್ಯಥೆಯಿಂದ ಕಳವಳಗೊಂಡ ಸೀತಾದೇವಿ ಹನುಮಂತನನ್ನು ಕುರಿತು "ಮಾರುತಿ, ನಿನ್ನ ಮಾತುಗಳು ನನ್ನ ಕಿವಿಗೆ ಅಮೃತದಂತಿವೆಯಾದರೂ ಅವು ವಿಷಮಿಶ್ರವಾಗಿವೆ. ಶ್ರೀರಾಮನು ವ್ಯಸನಗೊಂಡಿರುವನೆಂಬುದೇ ಆ ವಿಷ. ದೈವದ ಮುಂದೆ ಮನುಷ್ಯರ ಆಟ ಏನು ನಡೆಯಬಲ್ಲದು? ರಾಮಲಕ್ಷ್ಮಣರೂ ನಾನೂ ಸಂಕಟಕ್ಕೆ ಸಿಲುಕಿರುವುದು ವಿಧಿವಿಲಾಸವಲ್ಲದೆ ಮತ್ತೇನು? ಸಮುದ್ರ ಮಧ್ಯದಲ್ಲಿ ಹಡಗೊಡೆದು ಆಧಾರವಿಲ್ಲದವನಂತೆ ದುಃಖದಲ್ಲಿ ಮುಳುಗಿಹೋದ ರಾಮಚಂದ್ರನು ದಡವನ್ನು ಸೇರುವುದೆಂದು? ಆತನು ಈ ಲಂಕೆಗೆ ಯಾವಾಗ ಬರುವನೊ, ಈ ರಾಕ್ಷಸರ ನೆಲ್ಲಾ ಯಾವಾಗ ಒಕ್ಕಲಿಕ್ಕುವನೊ! ರಾವಣಸಂಹಾರ ನಡೆಯುವುದೆಂದೋ! ನಾನು ಆತನನ್ನು ಕಾಣುವುದೆಂದೊ! ಅವಧಿ ಮುಗಿಯುವುದರೊಳಗಾಗಿ ನೀನು ಆತನನ್ನು ಇಲ್ಲಿಗೆ ಕರೆದುಕೊಂಡು ಬಾ. ಇಲ್ಲದಿದ್ದರೆ ಅನ್ಯಾಯವಾಗಿ ನಾನು ಈ ರಾಕ್ಷಸರಿಗೆ ತುತ್ತಾಗಿ ಹೋಗುತ್ತೇನೆ. ಆತನ ಬಾಣಾಗ್ನಿಯಿಂದ ಈ ರಾಕ್ಷಸಬಲ ಜಲವೆಲ್ಲವೂ ಬತ್ತುವುದೇನೊ ನಿಜ. ಆದರೆ ಅದಾಗುವುದು ಎಂದಿಗೋ?" ಎಂದಳು. ಆಕೆಯ ಆತುರವನ್ನು ಕಂಡು ಹನುಮಂತನಿಗೆ ಹೇಗೆ ಸಮಾಧಾನ ಹೇಳಬೇಕೊ ತಿಳಿಯು ದಾಯಿತು. "ತಾಯಿ, ಶ್ರೀರಾಮನು ಶೀಘ್ರವಾಗಿಯೇ ಇಲ್ಲಿಗೆ ಬರುತ್ತಾನೆ. ನೀನು ಅಲ್ಲಿಯವರೆಗೆ ತಡೆಯಲಾರೆಯಾದರೆ, ಇಗೋ ಈಗಲೇ ನಿನ್ನ ಇಷ್ಟಾರ್ಥವನ್ನು ನೆರವೇರಿಸುತ್ತೇನೆ, ಬಾ. ನನ್ನ ಬೆನ್ನಮೇಲೆ ಏರು. ನಿನ್ನನ್ನು ಕರೆದುಕೊಂಡು ಕ್ಷಣಮಾತ್ರದಲ್ಲಿ ಈ ಸಮುದ್ರವನ್ನು ದಾಟುತ್ತೇನೆ. ನನ್ನ ಶಕ್ತಿಯ ವಿಚಾರದಲ್ಲಿ ನೀನು ಸಂದೇಹಪಡಬೇಕಾದುದಿಲ್ಲ. ಆಕಾಶದಲ್ಲಿ ಬಹು ಎತ್ತರಕ್ಕೆ ನಿನ್ನೊಡನೆ ಹಾರಿ ಹೋಗುತ್ತಿರುವಾಗ ಚಂದ್ರನೊಡನೆಯೂ ಸೂರ್ಯನೊಡನೆಯೂ ಸಂಭಾಷಿಸುವವ ಳಂತೆ ನೀನು ಸಮುದ್ರ ಆಕಾಶಗಳೆರಡನ್ನೂ ಕ್ಷಣಮಾತ್ರದಲ್ಲಿ ದಾಟುವೆ. ನನ್ನ ವೇಗ ವನ್ನು ತಡೆಯಲು ಈ ಲಂಕೆಯಲ್ಲಿ ಇರುವವರಾರಿಗೂ ಸಾಧ್ಯವಿಲ್ಲ" ಎಂದನು.

ಹನುಮಂತನ ಅದ್ಭುತವಾದ ಮಾತುಗಳನ್ನು ಕೇಳಿ ಸೀತಾದೇವಿಗೆ ನಗು ಬಂದಿತು. "ಅಯ್ಯಾ ಹನುಮಂತ, ನೀನು ಅತ್ಯಲ್ಪ ಶರೀರಿ. ಇಂತಹ ನೀನು ನನ್ನನ್ನು ಹೊತ್ತು ಕೊಂಡು ಹೋಗುವುದೆಂತು? ನೀನು ನಿನ್ನ ಕಪಿತ್ವವನ್ನು ತೋರಿಸಿಕೊಂಡೆಯಲ್ಲಾ!" ಎಂದಳು. ಆಕೆಯ ನಗೆನುಡಿಗಳನ್ನು ಕೇಳಿ ಹನುಮಂತನಿಗೆ ತನ್ನ ಸ್ವರೂಪವನ್ನು ಆಕೆಗೆ ಪರಿಚಯ ಮಾಡಿಕೊಡಬೇಕೆನ್ನಿಸಿತು. ತಾನು ನಿಂತಲ್ಲಿಂದ ಸ್ವಲ್ಪ ದೂರಕ್ಕೆ ಹಾರಿನಿಂತು ತನ್ನ ದೇಹವನ್ನು ಬೆಳೆಯಿಸಲು ಉಪಕ್ರಮಿಸಿದನು. ನೋಡು ನೋಡುತ್ತಿದ್ದಂತೆ ಆತನು

ಒಂದು ಪ್ರಜ್ವಲಿಸುವ ಬೆಟ್ಟದಂತೆ ಉಜ್ವಲವಾದ ರೂಪದಿಂದ ಬೆಳೆದು ನಿಂತನು. ಕೆಂಪಾದ ಮುಖ; ವಜ್ರಕ್ಕೆ ಸಮಾನವಾದ ಕೋರೆ ಹಲ್ಲುಗಳು, ದಾಡೆಗಳು. ಬಿಟ್ಟ ಕಣ್ಣರಳಿ ತನ್ನನ್ನು ನೋಡುತ್ತಿದ್ದ ಸೀತಾದೇವಿಯನ್ನು ಕುರಿತು ಆತನು "ತಾಯಿ, ಸೀತಾದೇವಿ, ನೋಡು ನನ್ನ ಈ ರೂಪವನ್ನು. ನಿನ್ನನ್ನು ಮಾತ್ರವೆ ಅಲ್ಲ; ಕೋಟೆಕೊತ್ತಲಗಳಿಂದ ಸಹಿತವಾದ ಈ ಲಂಕೆಯನ್ನೆ ನಾನು ಕಿತ್ತುಎತ್ತಿಕೊಂಡು ಹೋಗಬಲ್ಲೆ. ಆದ್ದರಿಂದ ಧೈರ್ಯವಾಗಿ ನನ್ನೊಡನೆ ಬರುವವಳಾಗು" ಎಂದನು.

ಹನುಮಂತನ ಪರಾಕ್ರಮದ ವಿಷಯದಲ್ಲಿ ಈಗ ಸಂದೇಹವೇನೂ ಉಳಿಯಲಿಲ್ಲ ವಾದರೂ ಸೀತಾದೇವಿ, ಆತನೊಡನೆ ಹಾಗೆ ಹೋಗಲು ಒಪ್ಪಲಿಲ್ಲ. ಆತನನ್ನು ಕುರಿತು "ಎಲೈ ಮಾರುತಿಯೆ, ನೀನು ಶಕ್ತನಾದರೂ ನಾನು ನಿನ್ನೊಡನೆ ಬರುವುದು ಯುಕ್ತವಲ್ಲ. ನೀನು ವಾಯುವೇಗದಿಂದ ಆಕಾಶಮಾರ್ಗದಲ್ಲಿ ಹೋಗುವಾಗ ನಾನು ಭಯದಿಂದ ಕೆಳಕ್ಕೆ ಬಿದ್ದುಹೋಗಬಹುದು. ಹಾಗಾದಲ್ಲಿ ಸಮುದ್ರದ ಪ್ರಾಣಿಗಳಿಗೆ ಆಹಾರವಾಗಿ ಹೋದೇನು! ಇದೂ ಅಲ್ಲದೆ ನೀನು ನನ್ನನ್ನು ಎತ್ತಿಕೊಂಡು ಹೊರಟೊಡನೆಯೆ ರಾಕ್ಷಸರು ನಿನ್ನನ್ನು ಬೆನ್ನಟ್ಟುವುದು ನಿಶ್ಚಯ. ಆಗ ನೀನು ನನ್ನನ್ನು ರಕ್ಷಿಸಿಕೊಂಡು ಅವರೊಡನೆ ಯುದ್ಧ ಮಾಡುವುದೆಂದರೆ ಬಹುಕಷ್ಟವಾದ ಕೆಲಸ. ಅದನ್ನು ನೋಡಲಾರದೆ ನಾನು ದಿಗ್ಭ್ರಾಂತಳಾಗಿ ಕೆಳಕ್ಕೆ ಬಿದ್ದರೂ ಸರಿಯೆ! ಆದ್ದರಿಂದ ಆ ಕಾರ್ಯ ಬೇಡ. ನೀನೇನೋ ಮಹಾ ಶೂರನೇ ಸರಿ; ಎದುರಾದ ರಾಕ್ಷಸರನ್ನೆಲ್ಲಾ ನೀನು ಸಂಹರಿಸುವ ವಿಚಾರದಲ್ಲಿ ನನಗೆ ಸಂದೇಹವೇ ಇಲ್ಲ. ಆದರೇನು? ನೀನೇ ಅವರ ನ್ನೆಲ್ಲಾ ಸಂಹರಿಸಿದರೆ ಶ್ರೀರಾಮನ ಕೀರ್ತಿಗೆ ಕಳಂಕ ಬರುವುದಿಲ್ಲವೆ? ಆದ್ದರಿಂದ ನೀನು ಈಗ ಇಲ್ಲಿಂದ ಆದಷ್ಟು ಬೇಗ ಹೊರಟುಹೋಗಿ ಶ್ರೀರಾಮನನ್ನು ಇಲ್ಲಿಗೆ ಕರೆತರುವ ಪ್ರಯತ್ನ ಮಾಡು. ನೀನು ನನ್ನನ್ನು ಕರೆದುಕೊಂಡು ಹೋಗಲು ಪ್ರಯತ್ನ ಪಟ್ಟು, ಅದರಿಂದ ಏನಾದರೂ ಅಪಾಯ ಸಂಭವಿಸಿದರೆ ರಾಮ–ಲಕ್ಷ್ಮಣರು ಬಹಳವಾಗಿ ಪರಿತಾಪ ಪಡುವುದಿಲ್ಲವೆ? ಈ ಎಲ್ಲ ಕಾರಣಗಳಿಗಿಂತಲೂ ಹೆಚ್ಚಾಗಿ ಪತಿಪರಾಯಣೆ ಯಾದ ನಾನು ಪರಪುರುಷರ ದೇಹವನ್ನು ಮುಟ್ಟುವುದು ಕೇವಲ ನಿಷಿದ್ಧ. 'ರಾವಣನು ಮುಟ್ಟಲಿಲ್ಲವೆ?' ಎಂದು ಕೇಳಬಹುದು. ಆದರೆ ಅದು ಅನಿವಾರ್ಯವಾಗಿತ್ತು. ನಾನು ಪರಾಧೀನೆಯಾಗಿದ್ದೆ. ರಾಮಲಕ್ಷ್ಮಣರು ಅಗ್ನಿ ವಾಯುಗಳಂತೆ ಸೇರಿಕೊಂಡು ಈ ರಾಕ್ಷಸರನ್ನೆಲ್ಲಾ ದಹಿಸಲಿ. ಆ ವೀರರನ್ನು ಬೇಗನೆ ಇಲ್ಲಿಗೆ ಕರೆದು ತಂದು ನನ್ನ ಮನಸ್ಸನ್ನು ಸಂತೋಷಪಡಿಸುವ ಕಾರ್ಯಭಾರ ನಿನ್ನ ಮೇಲೆ ಬಿದ್ದಿದೆ. ಹಾಗೆ ಮಾಡಿ ನನ್ನನ್ನು ಸಂತೋಷಪಡಿಸುವ ಹೊಣೆ ನಿನ್ನನ್ನು ಸೇರಿದುದು" ಎಂದಳು.

ಸೀತಾದೇವಿಯ ಮಾತುಗಳನ್ನು ಕೇಳಿ ಮಾರುತಿ 'ಅದು ಸರಿ' ಎಂದು ಒಪ್ಪಿಕೊಂಡನು. "ನನ್ನ ಭುಜವನ್ನೇರಿ ಶತಯೋಜನ ವಿಸ್ತೀರ್ಣವಾದ ಸಾಗರ ವನ್ನು ದಾಟುವುದು ಕೋಮಲೆಯಾದ ನಿನಗೆ ಕಷ್ಟಸಾಧ್ಯವಾದ ಕೆಲಸ. ಅಲ್ಲದೆ, 'ಶ್ರೀರಾಮನನ್ನುಳಿದು ಇತರರಾರನ್ನೂ ನಾನು ಮುಟ್ಟುವುದಿಲ್ಲ' ಎಂಬ ನಿನ್ನ ಮಾತೂ

ಸಾಧ್ವಿಯಾದ ನಿನ್ನ ನಡತೆಗೆ ತಕ್ಕುದೇ ಸರಿ. ನಾನು ಒಡನೆಯೆ ಶ್ರೀರಾಮನ ಬಳಿಗೈದಿ ಇಲ್ಲಿನ ಸಮಸ್ತವನ್ನೂ ಆತನಿಗೆ ವಿಸ್ತಾರವಾಗಿ ತಿಳಿಯಹೇಳುವನು. ನಿನ್ನನ್ನು ಕೊಂಡೊಯ್ಯುವೆನೆಂದು ನಾನು ಆಡಿದ ಅಪಚಾರದ ವಾಕ್ಯಗಳನ್ನು ಮನ್ನಿಸು. ಕೇವಲ ಶ್ರೀರಾಮನನ್ನು ಸಂತೋಷಗೊಳಿಸಬೇಕೆಂಬ ಉತ್ಸಾಹದಲ್ಲಿ ಮುಂದನ್ನರಿಯದೆ ಹಾಗೆ ಮಾತನಾಡಿದೆ. ಆದರೆ, ತಾಯಿ, ನಾನು ನಿನ್ನನ್ನು ಕಂಡೆನೆಂದು ಶ್ರೀರಾಮನಿಗೆ ಕುರುಹುದೋರುವಂತೆ ಯಾವುದಾದರೊಂದು ಗುರುತನ್ನು ದಯಪಾಲಿಸು" ಎಂದನು.

ಹನುಮಂತನ ಮಾತುಗಳನ್ನು ಕೇಳಿ ಜಾನಕಿಗೆ ಹಿಂದೆ ತಾನು ಶ್ರೀರಾಮನ ಬಳಿಯಲ್ಲಿ ಏಕಾಂತವಾಗಿದ್ದಾಗ ನಡೆದ ಒಂದು ಸಂಗತಿ ಸ್ಮರಣೆಗೆ ಬಂದಿತು. ಆ ನೆನಪಿನೊಡನೆ ಕಣ್ಣೀರೂ ಹೊರಗುಕ್ಕಿತು. ಗದ್ಗದ ಸ್ವರದಿಂದ ಹನುಮಂತನಿಗೆ ಹೇಳಿದಳು— "ಮಾರುತಿ, ಬಹು ಒಳ್ಳೆಯ ಒಂದು ಗುರುತನ್ನು ಹೇಳುತ್ತೇನೆ ಕೇಳು—ಚಿತ್ರಕೂಟ ಪರ್ವತದ ಸಮೀಪದಲ್ಲಿರುವ ಮಂದಾಕಿನೀ ತೀರದಲ್ಲಿ ಒಂದು ಸುಂದರವಾದ ಉಪವನವಿದೆ. ನಾನು ಒಮ್ಮೆ ಶ್ರೀರಾಮನೊಡನೆ ಅದರಲ್ಲಿ ವಿಹರಿಸುತ್ತಾ ಆಯಾಸಗೊಂಡು ಒಂದು ವೃಕ್ಷ ಮೂಲದಲ್ಲಿ ಶ್ರೀರಾಮನ ತೊಡೆಯ ಮೇಲೆ ವಿಶ್ರಾಂತಿಗೊಳ್ಳುತ್ತಿದ್ದೆನು. ಆಗ ಒಂದು ಕಾಗೆ ಮಾಂಸದಾಸೆಯಿಂದ ನನ್ನ ಎದೆಯನ್ನು ಕುಕ್ಕಿತು. ನಾನು ಆಗ ಒಂದು ಮಣ್ಣಿ ಹೆಂಟೆಯಿಂದ ಆ ಕಾಗೆಯನ್ನು ಹೊಡೆದು ಅದನ್ನು ಅಟ್ಟಲು ಪ್ರಯತ್ನಿಸಿದೆನು. ಆದರೆ ಅದು ಬಹು ಮೊಂಡು ಕಾಗೆ. ಎಷ್ಟು ಹೊಡೆದರೂ ದೂರ ಹೋಗದೆ ಸಮೀಪದಲ್ಲಿಯೇ ಕುಳಿತು, ಮೇಲಿಂದ ಮೇಲೆ ನನ್ನ ಸ್ತನತಟವನ್ನು ಕುಕ್ಕುವುದಕ್ಕೆ ಮೊದಲು ಮಾಡಿತು. ನಾನು ಎಷ್ಟು ಪ್ರಯತ್ನಿಸಿದರೂ ಆ ಕಾಗೆ ಓಡಿಹೋಗದುದನ್ನು ಕಂಡು ಶ್ರೀರಾಮನು ನನ್ನನ್ನು ಹಾಸ್ಯಮಾಡಿದನು. ನಾನು ಲಜ್ಜೆಯಿಂದ ತಲೆಬಾಗಿ ನಿಂತಿದ್ದೆ. ಅಷ್ಟರಲ್ಲಿ ಆ ಕಾಗೆ ಪುನಃ ಬಂದು ನನ್ನನ್ನು ಕುಕ್ಕಿತು. ಆಗ ನಾನು ನೋವಿನಿಂದಲೂ ವ್ಯಥೆಯಿಂದಲೂ ಕೂಡಿ ಪುನಃ ಶ್ರೀರಾಮನ ತೊಡೆಯ ಮೇಲೇ ಕುಳಿತುಕೊಂಡೆನು. ಆಗ ಶ್ರೀರಾಮನು ಮೃದುನುಡಿಗಳಿಂದ ನನ್ನನ್ನು ಸಮಾಧಾನಗೊಳಿಸಿ ಕಾಗೆಯನ್ನು ಓಡಿಸಿದನು. ಕಾಗೆಯನ್ನು ಓಡಿಸಲು ನಾನು ಮಾಡಿದ ಪ್ರಯತ್ನಗಳಿಂದ ಬಳಲಿದವಳಾಗಿ ಹಾಗೆಯೆ ಶ್ರೀರಾಮನ ತೊಡೆಗಳ ಮೇಲೆ ಒರಗಿಕೊಂಡು ನಿದ್ರೆಮಾಡಿದೆನು. ನಾನು ಎದ್ದ ಮೇಲೆ ಶ್ರೀರಾಮನು ನನ್ನ ತೊಡೆಯ ಮೇಲೆ ತಲೆಯಿಟ್ಟುಕೊಂಡು ಮಲಗಿ ನಿದ್ದೆ ಹೋದನು. ಆ ಸಮಯವನ್ನು ಸಾಧಿಸಿ ಪುನಃ ಆ ಪಾಪಿ ಕಾಗೆ ಬಂದು ನನ್ನನ್ನು ಹಿಂಸಿಸಲು ಮೊದಲು ಮಾಡಿತು. ಸ್ತನಾಗ್ರವೆಲ್ಲವೂ ಗಾಯವಾದ ರಕ್ತದ ತೊಟ್ಟುಗಳೆರಡು ಮಲಗಿದ್ದ ನನ್ನ ಪ್ರಿಯನ ಮೇಲೆ ಬಿದ್ದುವು. ನಾನು ಗತ್ಯಂತರವನ್ನು ಕಾಣದೆ ನಾಥನನ್ನು ಎಬ್ಬಿಸಿದೆ. ಆತನು ನನ್ನ ದೇಹದಲ್ಲಿನ ಗಾಯವನ್ನು ಕಾಣುತ್ತಲೆ ಕನಲಿ ಕಾಳಸರ್ಪದಂತೆ ನಿಟ್ಟುಸಿರಿಡುತ್ತಾ—"ಯಾವನು ಈ ಅಕಾರ್ಯ ಮಾಡಿದವನು?" ಎಂದನು. ಅಲ್ಲಿಯೆ ಸಮೀಪದಲ್ಲಿದ್ದ ಕಾಗೆ ಆತನಿಗೆ ಕಾಣಿಸಿತು. ಅದನ್ನು ಕಾಣುತ್ತಲೆ ರಾಮಚಂದ್ರನ ಕಣ್ಣಾಲಿಗಳು ಕೆಂಡವನ್ನು ಕಾರಿದುವು. ತಾನು ಕುಳಿತಿದ್ದ ದರ್ಭಾಸನ

ದಿಂದ ಒಂದು ದರ್ಬೆಯನ್ನು ಎಳೆದುಕೊಂಡು ಬ್ರಹ್ಮಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ ಕಾಗೆಯ ಮೇಲೆ ಪ್ರಯೋಗಿಸಿದನು. ಅದು ಕಾಗೆಯನ್ನು ಬೆನ್ನಟ್ಟಿ ಹೊರಟಿತು. ಆ ಕಾಗೆ ಬರಿಯ ಕಾಗೆಯಲ್ಲ; ಇಂದ್ರಪುತ್ರನೆ ಆ ವೇಷದಿಂದ ಬಂದಿದ್ದನಂತೆ! ಆ ಅವಿಚಾರಿ ತನ್ನನ್ನು ಯಾರಾದರೂ ರಕ್ಷಿಸಿಯಾರೆ ಎಂದು ಆರ್ತನಾಗಿ ಲೋಕವನ್ನೆಲ್ಲಾ ತೊಳಲಿದ. ಶ್ರೀರಾಮನ ಬಾಣದಿಂದ ಅವನನ್ನು ಸಂರಕ್ಷಿಸುವರಾರು? ಅದು ಎಲ್ಲೆಲ್ಲಿಯೂ ರಕ್ಷಣೆ ಕಾಣದೆ ಕಡೆಗೆ ಶ್ರೀರಾಮನ ಬಳಿಗೇ ಹಾರಿ ಬಂದು, ಆತನ ಕಾಲಮೇಲೆ ಬಿದ್ದು ಮರೆಹೊಕ್ಕಿತು. ಶರಣಾಗತವತ್ಸಲನಾದ ನನ್ನ ಪ್ರಿಯನು ಅದಕ್ಕೆ ಜೀವದಾನವನ್ನೇನೊ ಮಾಡಿದನು. ಆದರೆ ಆತನ ಬಾಣ ವ್ಯರ್ಥವಾಗತಕ್ಕುದಲ್ಲ. ಆದ್ದರಿಂದ ಅದರ ಬಲಗಣ್ಣು ಆ ಬಾಣಕ್ಕೆ ಆಹುತಿಯಾಗಬೇಕಾಯಿತು. ಈ ಕಥೆ ಶ್ರೀರಾಮನಿಗೆ ಮತ್ತು ನನಗೆ ಮಾತ್ರ ಗೊತ್ತು. ನನ್ನನ್ನು ನೀನು ಕಂಡುದಕ್ಕೆ ಈ ಕಥೆಯೇ ಗುರುತು. ನಾನು ಹೇಳಿದೆನೆಂಬುದಾಗಿ ಈ ಕಥೆಯನ್ನು ತಿಳಿಸಿ 'ಪ್ರಭೂ, ನನಗಾಗಿ ಕಾಗೆಯ ಮೇಲೆ ಬ್ರಹ್ಮಾಸ್ತ್ರವನ್ನೆ ಪ್ರಯೋಗಿಸಿದ ನೀನು ಈ ರಾವಣನನ್ನು ಹೇಗೆ ಕ್ಷಮಿಸುತ್ತಾ ಕುಳಿತಿರುವೆ? ಪ್ರಿಯಸತಿಯಾದ ನನ್ನಲ್ಲಿ ಕನಿಕರವನ್ನು ತೋರಿ ನನ್ನನ್ನು ಉದ್ಧರಿಸ ಬಾರದೆ?' ಎಂದು ನಾನು ಆರ್ತಳಾಗಿ ಬೇಡಿದೆನೆಂದು ಶ್ರೀರಾಮನಲ್ಲಿ ನಿವೇದಿಸು" ಎಂದು ಹೇಳಿ, "ನನ್ನಲ್ಲಿ ಆತನೂ ಲಕ್ಷ್ಮಣನೂ ನಿರ್ದಯರಾಗಿರುವುದರಿಂದ ನಾನು ಏನು ಅಪರಾಧಮಾಡಿರುವೆನೊ ಎಂದು ನನ್ನ ಮನಸ್ಸು ತಳಮಳಿಸುತ್ತಿದೆ" ಎಂದು ಮತ್ತೊಮ್ಮೆ ಕಂಬನಿದುಂಬಿದಳು.

ಮತ್ತೆ ಮತ್ತೆ ಹೀಗೆ ದುಃಖ ಮರುಕಳಿಸುತ್ತಿರುವ ಸೀತಾದೇವಿಯನ್ನು ಕಂಡು ಹನುಮಂತನಿಗೆ ಮನಸ್ಸು ಕರಗಿತು. ಆಕೆಯನ್ನು ಕುರಿತು "ಅಮ್ಮಾ ನನ್ನ ಮಾತನ್ನು ನಂಬು, ಆಣೆಯಿಟ್ಟು ಹೇಳುತ್ತೇನೆ—ಶ್ರೀರಾಮನಿಗೆ ನಿನ್ನಲ್ಲಿ ಅಪಾರವಾದ ಪ್ರೀತಿಯಿದೆ. ನಿನಗಾಗಿ ಆತನು ಹಗಲಿರುಳೂ ಹಲುಬಿ ಹಂಬಲಿಸುತ್ತಿದ್ದಾನೆ. ನಿನ್ನಲ್ಲಿ ಎಂದಿಗೂ ನಿರ್ದಯನಾಗಿಲ್ಲ. ಲಕ್ಷ್ಮಣಸ್ವಾಮಿಯೂ ನಿನಗಾಗಿ ಪರಿತಪಿಸುತ್ತಿದ್ದಾನೆ. ನಿನ್ನ ನಡವಳಿಕೆ ನಿರ್ದುಷ್ಟವಾದುದು. ಅದನ್ನು ಯಾರು ಶಂಕಿಸಿಯಾರು? ಇನ್ನು ಕ್ಷಿಪ್ರದಲ್ಲಿಯೆ ಅವರು ಇಲ್ಲಿಗೆ ಬರುವರು. ನಿನ್ನ ಉದ್ಧಾರವಾಗುವುದು. ನೀನು ಇನ್ನು ವ್ಯಥೆಯನ್ನು ಬಿಡು. ನೀನು ಸಂತೋಷಪಡಬೇಕಾದ ಕಾಲ ಸನ್ನಿಹಿತವಾಗಿದೆ. ಶ್ರೀರಾಮಚಂದ್ರನಿಗೆ ನೀನು ಏನು ಸಂದೇಶವನ್ನು ಕೊಡಬೇಕೆಂದಿರುವೆಯೊ ಅದನ್ನು ತಿಳಿಸು. ನಾನು ಹೊರಡಬೇಕು" ಎಂದನು. ಅದಕ್ಕೆ ಸೀತಾದೇವಿ "ಅಪ್ಪಾ ಮಾರುತಿ, ಲೋಕನಾಥನೂ ಕೌಸಲ್ಯಾ ಪುತ್ರನೂ ಆಗಿರುವ ನನ್ನ ನಾಥನಿಗೆ ನನ್ನ ಕುಶಲವನ್ನು ತಿಳಿಸು. ನನ್ನ ನಮಸ್ಕಾರವನ್ನು ಆತನಿಗೆ ಅರ್ಪಿಸು. ಅಣ್ಣನನ್ನು ನೆರಳಿನಂತೆ ಅನುಸರಿಸಿ ಅರಣ್ಯವಾಸವನ್ನು ಕೈಕೊಂಡ ಲಕ್ಷ್ಮಣನು ಸಹ ನನ್ನನ್ನು ತಾಯಿಯಂತೆಯೇ ಕಾಣುತ್ತಿದ್ದನು. ಆತನಿಗೆ ನನ್ನ ದುರವಸ್ಥೆಯನ್ನು ತಿಳಿಸು. ನನ್ನನ್ನು ಉದ್ಧಾರಮಾಡುವಂತೆ ಶ್ರೀರಾಮನನ್ನು ಪ್ರಚೋದನಗೊಳಿಸುವ ಕಾರ್ಯ ನಿನ್ನದು. ಅದಕ್ಕೆ ಏನೇನು ಮಾಡಬಹುದೊ

ಅದೆಲ್ಲವನ್ನೂ ನೀನು ನಡೆಸಬೇಕು. ಇನ್ನು ಒಂದು ತಿಂಗಳೊಳಗಾಗಿ ಶ್ರೀರಾಮನು ಇಲ್ಲಿಗೆ ಬರದಿದ್ದಲ್ಲಿ ನಾನು ಜೀವಂತಳಾಗಿರುವುದಿಲ್ಲವೆಂದು ಆತನಿಗೆ ನಿವೇದಿಸು. ಇಂದ್ರನ ಸಂಪತ್ತು ಪಾತಾಳಕ್ಕೆ ಇಳಿದುಹೋಗಿರಲು ಮಹಾ ವಿಷ್ಣುವು ಅದನ್ನು ಪುನಃ ಸಂಪಾದಿಸಿ ಇಂದ್ರನಿಗೆ ಕೊಟ್ಟಂತೆ ಶ್ರೀರಾಮಚಂದ್ರನು ರಾಕ್ಷಸವಶವಾಗಿರುವ ಈ ಪ್ರಾಣವನ್ನು ಉದ್ಧರಿಸಿ ನನ್ನನ್ನು ಕಾಪಾಡಲಿ. ಈ ಮಾತನ್ನು ರಾಮಚಂದ್ರನಿಗೆ ಮೇಲಿಂದ ಮೇಲೆ ತಿಳಿಸು." ಇಷ್ಟು ಹೇಳಿ ಆಕೆ ತನ್ನ ಸೆರಗಿನಲ್ಲಿ ಗಂಟುಹಾಕಿಕೊಂಡಿದ್ದ ಚೂಡಾರತ್ನವನ್ನು ಹನುಮಂತನ ಕೈಗೆ ಕೊಟ್ಟಳು. "ಮಾರುತಿ, ಇದನ್ನು ಶ್ರೀರಾಮನಿಗೆ ಕೊಡು" ಎಂದಳು. ಆ ವೇಳೆಗೆ ಸೂಕ್ಷ್ಮರೂಪವನ್ನು ಧರಿಸಿದ್ದ ಮಾರುತಿ ಅದನ್ನು ತನ್ನ ಅಂಗುಲಿಯಲ್ಲಿ ಯೋಜಿಸಿದನು. ಅನಂತರ ಸೀತಾದೇವಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಬಹಳ ನಮ್ರತೆಯಿಂದ ತಲೆಬಾಗಿ ನಿಂತನು. ಆತನ ದೇಹ ಅಲ್ಲಿ ನಿಂತಿತ್ತು; ಆದರೆ ಮನಸ್ಸು ಆಗಲೆ ಶ್ರೀರಾಮನ ಪಾದಾರವಿಂದಗಳನ್ನು ಸೇರಿತ್ತು.

ತಲೆಬಾಗಿ ತನ್ನೆದುರಿಗೆ ನಿಂತಿದ್ದ ಹನುಮಂತನನ್ನು ಕುರಿತು ಸೀತಾದೇವಿ "ಮಗು ಮಾರುತಿ, ನಾನೀಗ ಕೊಟ್ಟಿರುವ ಚೂಡಾಮಣಿಯನ್ನು ಕಾಣುತ್ತಲೆ ರಾಮಚಂದ್ರನು ತನ್ನ ತಾಯಿಯನ್ನೂ ತಂದೆಯನ್ನೂ ನನ್ನನ್ನೂ ಸ್ಮರಿಸಿಕೊಳ್ಳುವನು, ಆತನನ್ನು ಆದಷ್ಟು ಬೇಗ ಇಲ್ಲಿಗೆ ಕರೆತರುವ ಭಾರ ನಿನ್ನದು. ನಾನು ನಿನ್ನನ್ನೆ ನೆರೆನಂಬಿದ್ದೇನೆ" ಎಂದು ಹೇಳಿದಳು. ಹನುಮಂತನು ಮತ್ತೊಮ್ಮೆ "ತಾಯಿ, ನೀನು ಚಿಂತಿಸಬೇಡ. ನಾನು ಅಗತ್ಯವಾಗಿಯೂ ಈ ಕಾರ್ಯವನ್ನು ನೆರವೇರಿಸುತ್ತೇನೆ" ಎಂದು ನಂಬುಗೆ ಕೊಟ್ಟು ಅಲ್ಲಿಂದ ಹೊರಡಲು ಸಿದ್ಧನಾದನು. ಆತನು ಇನ್ನು ಹೊರಡುವನಲ್ಲಾ ಎಂದು ಸೀತಾ ದೇವಿಗೆ ದುಃಖ ಒತ್ತರಿಸಿ ಬಂತು. ಗದ್ಗದ ಸ್ವರದಿಂದ ಆಕೆ ಅವನನ್ನು ಕುರಿತು, "ಆಂಜನೇಯ, ರಾಮಲಕ್ಷ್ಮಣರಿಗೆ ನನ್ನ ಕುಶಲವನ್ನು ತಿಳಿಸು. ಕಪಿರಾಜನಾದ ಸುಗ್ರೀವ ನಿಗೆ ಆತನ ಕುಶಲವನ್ನು ಕೇಳಿರುವೆನೆಂದು ಹೇಳು. ಅಲ್ಲಿರುವ ಕಪಿವೀರರಿಗೆಲ್ಲಾ ನಾನು ಕುಶಲವನ್ನು ಕೇಳಿದನೆಂದು ತಿಳಿಸು. ಮತ್ತೊಮ್ಮೆ ನಿನ್ನನ್ನು ಕೇಳಿಕೊಳ್ಳುತ್ತೇನೆ ಶ್ರೀರಾಮನನ್ನು ಇಲ್ಲಿಗೆ ಕರೆತಂದು ಪುಣ್ಯವನ್ನು ಕಟ್ಟಿಕೋ" ಎಂದಳು. ಮತ್ತೆ ಮತ್ತೆ ಆಕೆಯ ಬಾಯಿಂದ ಬಂದ ಆ ಪ್ರಾರ್ಥನಾ ವಾಕ್ಯಗಳಿಗೆ ಹನುಮಂತನೂ ಮತ್ತೆ ಮತ್ತೆ ಸಮಾಧಾನ ಹೇಳಿದನು. ಕಡೆಗೆ ಸೀತಾದೇವಿ "ಮಗೂ, ನೀನು ಇಂದುತಾನೆ ಇಲ್ಲಿಗೆ ಬಂದಿರುವೆ. ಪ್ರಯಾಣದಿಂದ ಬಹು ಆಯಾಸಗೊಂಡಿರಬೇಕು. ನಿನ್ನ ಇಷ್ಟಬಂದರೆ ಈ ದಿನ ಇಲ್ಲಿಯೇ ಇದ್ದು ವಿಶ್ರಮಿಸಿಕೊಂಡು ನಾಳೆ ಹೊರಡಬಹುದು! ಅಲ್ಪಭಾಗ್ಯಳಾದ ನಾನು ನಿನ್ನ ಸಾನ್ನಿಧ್ಯದಲ್ಲಿ ಈ ಅಪಾರ ದುಃಖವನ್ನು ಕ್ಷಣಕಾಲ ಮರೆತಿರಬಹುದು. ನಿನ್ನನ್ನು ಅಗಲುವುದೆಂದರೆ, ನಿನ್ನನ್ನು ಕಾಣುವುದಕ್ಕಿಂತಲೂ ಮೊದಲಿದ್ದ ದುಃಖ ಕ್ಕಿಂತಲೂ ಅತಿಶಯ ದುಃಖಪ್ರಸಂಗವಾಗಿರುವಂತೆ ತೋರುತ್ತದೆ. ಇನ್ನೊಂದು ಮುಹೂರ್ತ ಹೀಗೆಯೇ ಮಾತನಾಡುತ್ತಿರೋಣ. ಹೇಳು, ನೀನೇನೊ ಅಸಹಾಯ ಶೂರ. ಆದ್ದರಿಂದ ಈ ಸಮುದ್ರವನ್ನು ದಾಟಿ ಬಂದೆ. ವಾನರ ಸೈನ್ಯದಲ್ಲಿ ಉಳಿದವರಿಗೆ

ಈ ಶಕ್ತಿಯೆಲ್ಲಿಯದು? ಅವರು ಈ ಅಪಾರವಾದ ಸಾಗರವನ್ನು ದಾಟಿಬರುವುದೆಂತು? ನೀನು ಪೂರ್ವಾಪರಗಳನ್ನು ಯೋಚಿಸಿರುವವನು. ಇದಕ್ಕೆ ಏನು ಹೇಳುವೆ?" ಎಂದಳು. ಹನುಮಂತನು ಆಕೆಯ ಮನಸ್ಸಿಗೆ ಆಪ್ಯಾಯಮಾನವಾಗುವಂತೆ "ತಾಯೆ, ಸುಗ್ರೀವ ರಾಜನ ಬಳಿಯಲ್ಲಿ ಇರುವವರೆಲ್ಲರೂ ಮಹಾ ಶೂರರೆ. ನಾನೆ ಎಲ್ಲರಿಗಿಂತಲೂ ಕೀಳು. ಉಳಿದವರೆಲ್ಲರೂ ನನಗಿಂತಲೂ ಹೆಚ್ಚು ಬಲಶಾಲಿಗಳು. ನಾನೇ ಇಲ್ಲಿಗೆ ಬಂದಿರುವಾಗ ಉಳಿದವರು ಬರುವುದೇನಾಶ್ಚರ್ಯ! ಇನ್ನು ರಾಮಲಕ್ಷ್ಮಣರು. ಅವರು ನನ್ನ ಹೆಗಲ ಮೇಲೆ ಕುಳಿತು ಇಲ್ಲಿಗೆ ಬರುವರು. ಇದರ ವಿಚಾರದಲ್ಲಿ ನೀನು ಯಾವ ಚಿಂತೆಯನ್ನೂ ಹಚ್ಚಿಕೊಳ್ಳಬೇಕಾದುದಿಲ್ಲ. ಯಾವುದಕ್ಕೂ ಕಾಲ ಬರಬೇಕು; ಬರುತ್ತದೆ. ನೀನು ಅದನ್ನು ಇದಿರುನೋಡುತ್ತಿರು. ಪ್ರಜ್ವಲಿಸುವ ಅಗ್ನಿಹೋತ್ರದಂತೆ ಪ್ರಕಾಶಿಸುವ ಶ್ರೀರಾಮಚಂದ್ರನನ್ನು ಕ್ಷಿಪ್ರದಲ್ಲಿಯೆ ನೀನು ಕಾಣುವೆ. ನಿನಗೆ ಮಂಗಳವಾಗಲಿ!" ಎಂದನು.

ಹನುಮಂತನ ಮಾತುಗಳಿಂದ ಸೀತೆಯ ಮನಸ್ಸಿಗೆ ಬಹು ಸಂತೋಷವಾಯಿತು. ಹೋಗುವ ಅವನನ್ನು ಕ್ಷಣಕಾಲ ಕರೆದು ನಿಲ್ಲಿಸುವುದಕ್ಕಾಗಿ ಆತನನ್ನು ಕುರಿತು, "ಮಾರುತಿ, ಶ್ರೀರಾಮನು ಕಾಗೆಯ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಕಥೆಯನ್ನು ಶ್ರೀರಾಮನಿಗೆ ಮರೆಯದಂತೆ ತಿಳಿಸು. ಹಾಗೆಯೇ ಶ್ರೀರಾಮನು ಒಂದು ದಿನ ನನಗೆ ಮಣಿಶಿಲೆಯನ್ನು ತಿಲಕವಾಗಿ ಮಾಡಿ ಹಣೆಗಿಟ್ಟಿದ್ದನು. ಅದನ್ನೂ ಆತನಿಗೆ ಜ್ಞಾಪಿಸು. ರಾಮನಿಗೆ ನನ್ನ ಪ್ರಣಾಮಗಳನ್ನು ಅರ್ಪಿಸು. ಲಕ್ಷ್ಮಣ ಸುಗ್ರೀವರಿಗೆ ನನ್ನ ಪ್ರಾರ್ಥನೆಯನ್ನು ಸಲ್ಲಿಸು. ನಿನಗೆ ಮಾರ್ಗದಲ್ಲಿ ವಿಘ್ನಗಳಾವುವೂ ಸಂಭವಿಸದಿರಲಿ. ನಿನಗೆ ಮಂಗಳವಾಗಲಿ!" ಎಂದು ಹರಸಿದಳು. ಅನಂತರ ಹನುಮಂತನು, ಮತ್ತೊಮ್ಮೆ ಆಕೆಗೆ ಮನಸಾ ವಂದಿಸಿ ಅಲ್ಲಿಂದ ಬೀಳ್ಕೊಂಡನು.

---

೧೪

## ರಾಕ್ಷಸ ಬಲಾಬಲ ಪರೀಕ್ಷೆ ೧

ಸೀತಾದೇವಿಯಿಂದ ಬೀಳ್ಕೊಂಡು ಸ್ವಲ್ಪದೂರ ಹೊರಟುಬಂದೊಡನೆಯೆ ಹನುಮಂತನ ಮನಸ್ಸಿನಲ್ಲಿ ಒಂದು ಹೊಸ ಯೋಚನೆ ಹುಟ್ಟಿತು. "ಸೀತಾದೇವಿಯ ನ್ನೇನೊ ಕಂಡುದಾಯಿತು. ಆದರೆ ರಾವಣನ ಬಲಾಬಲಗಳನ್ನು ಅರಿತುಕೊಂಡು ಮಹಾರಾಜನಾದ ಸುಗ್ರೀವನಿಗೆ ಅರಿಕೆಮಾಡಿದರೆ ಆಗ ನಾನು ಬಂದುದಕ್ಕೂ ಸಾರ್ಥಕ ವಾಗುತ್ತದೆ. ಆದರೆ ಅದನ್ನು ಸಾಧಿಸಬೇಕಾದರೆ ಈ ರಾಕ್ಷಸರಲ್ಲಿ ದಂಡೋಪಾಯ ವೊಂದೇ ದಾರಿ. ಈ ರಾಕ್ಷಸರೊಡನೆ ಹೋರಾಡಿ ಕೆಲವರನ್ನಾದರೂ ಸಂಹರಿಸಿದರೆ ಇವರು ಸ್ವಲ್ಪ ಹದಕ್ಕೆ ಬರುತ್ತಾರೆ. ಆದರೆ ಇವರೊಡನೆ ಯುದ್ಧಕ್ಕೆ ನೆಪವಾವುದನ್ನು ಹುಡುಕಲಿ? ಯುದ್ಧವಾಗದ ಹೊರತು ಈ ರಾವಣನ ಬಲಾಬಲ ಸ್ವರೂಪ ಗೊತ್ತಾಗು ವಂತಿಲ್ಲವಲ್ಲಾ" ಎಂದು ಆತನು ಕ್ಷಣಕಾಲ ಮನಸ್ಸಿನಲ್ಲೆ ಗುಣಿಸಿ ನೋಡಿದನು. ಉಪಾಯ ಹೊಳೆಯಿತು. "ಹೌದು! ರಾವಣನ ಬಹಿಃಪ್ರಾಣದಂತಿರುವ ಈ ಅಶೋಕ ವನವನ್ನು ಧ್ವಂಸಮಾಡುತ್ತೇನೆ! ಈ ವನವೆಂದರೆ ಕಣ್ಣಿಗೆ ಆನಂದ, ಮನಸ್ಸಿಗೆ ಇಂಪು. ಅಮೂಲ್ಯವಾದ ಪುಷ್ಪವೃಕ್ಷಗಳಿಂದಲೂ ಲತಾವಿತಾನಗಳಿಂದಲೂ ಇಂದ್ರನ ನಂದನವನ ವನ್ನೂ ಮೀರಿಸುವಂತಿದೆ. ಕಾಡ್ಗಿಚ್ಚು ಒಣಗಿನಿಂತಿರುವ ಕಾಡನ್ನು ಸುಟ್ಟು ಬೂದಿ ಮಾಡುವಂತೆ ಇವನ್ನು ತೊತ್ತಳದುಳಿದು ಹಾಳುಮಾಡುತ್ತೇನೆ. ಆಗ ರಾವಣನು ತನ್ನ ಸೈನ್ಯವನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸುತ್ತಾನೆ. ಅವನ ಸತ್ವಪರೀಕ್ಷೆಯನ್ನು ಮಾಡಿ ನಾನು ಕಿಷ್ಕಿಂಧೆಗೆ ಹಿಂದಿರುಗುತ್ತೇನೆ" ಎಂದು ಹನುಮಂತನು ನಿಶ್ಚಯಿಸಿದನು.

ಹೇಗಿದ್ದರೂ ಹನುಮಂತನು ಹಿಂದಿರುಗುವುದಕ್ಕಾಗಿ ಬೃಹದಾಕಾರವನ್ನು ತಾಳಿದ್ದನು. ಆ ಆಕಾರ ಈ ಕಾರ್ಯಕ್ಕೆ ಅನುಕೂಲವಾಯಿತು. ಪ್ರಚಂಡ ಪರಾಕ್ರಮಿ ಯಾದ ಆತನು ಮರಗಳನ್ನೆಲ್ಲಾ ಮುರಿಮುರಿದು ಬೀಸಾಡಿದನು. ತಿಳಿಗೊಳಗಳನ್ನೆಲ್ಲಾ ಕಲಕಿಹಾಕಿದನು. ಕೃತಕಪರ್ವತಗಳನ್ನೆಲ್ಲಾ ಪುಡಿಪುಡಿಮಾಡಿದನು. ಲತಾವಿತಾನ ಗಳನ್ನು ಧ್ವಂಸಮಾಡಿದನು. ಎಲ್ಲಿ ನೋಡಿದರೂ ಬಿಸಿಲಿನಲ್ಲಿ ಬಾಡಿ ಹಾಳು ಹಾಳು ಸುರಿಯುತ್ತಿರುವ ಗಿಡ ಮರ ಬಳ್ಳಿಗಳಾದುವು. ಅಲ್ಲಿ ವಾಸವಾಗಿದ್ದ ಹಕ್ಕಿಗಳೆಲ್ಲಾ ಕಿಟ್ಟನೆ ಕಿರಿಚಿಕೊಳ್ಳುತ್ತಾ ಹಾರಿಹೋದುವು. ಲತಾಗೃಹಗಳೆಲ್ಲವೂ ಬಟ್ಟಬಯ ಲಾದುವು. ಚಿತ್ರಗೃಹಗಳು ಹಾರಿಹೋದುವು; ಅಲ್ಲಲ್ಲಿದ್ದ ಕಲ್ಲಿನ ಮಂಟಪಗಳು ನೆಲಸಮ ವಾದುವು. ಉದ್ಯಾನವನವೆಲ್ಲವೂ ಹಾಳುಬಿಟ್ಟ ಬೆಂಗಾಡಾಯಿತು; "ಕುಂಬಾರನಿಗೆ ಒಂದು ವರ್ಷ, ದೊಣ್ಣೆಗೆ ಒಂದು ನಿಮಿಷ" ಎಂಬಂತಾಯಿತು. ಹೀಗೆ ಅಶೋಕವನದ ಸರ್ವನಾಶವನ್ನು ಮಾಡಿ ಆ ತೋಟದ ಹೊರಬಾಗಿಲಿನಲ್ಲಿ ಬಂದು ನಿಂತನು.

ಅಶೋಕವನದಲ್ಲಿದ್ದ ಹಕ್ಕಿಗಳ ಶೋಕಧ್ವನಿಯೂ ಮರಗಳು ಮುರಿದ ಶಬ್ದವೂ ಲಂಕಾನಗರಿಗೆಲ್ಲಾ ಕೇಳಿಸಿತು. ಆ ವನದಲ್ಲಿದ್ದ ಮೃಗಪಕ್ಷಿಗಳೆಲ್ಲವೂ ದಿಕ್ಕುದಿಕ್ಕಿಗೆ ಪಲಾಯನಮಾಡುತ್ತಿರುವುದು ಅವರಿಗೆ ಕಾಣಿಸಿತು. ಆ ವೇಳೆಗೆ ಸರಿಯಾಗಿ ರಾಕ್ಷಸ ನಾಶವನ್ನು ಸೂಚಿಸುವ ಅನೇಕ ದುರ್ನಿಮಿತ್ತಗಳಾದುವು. ಇದರಿಂದ ರಾಕ್ಷಸರೆಲ್ಲರಿಗೂ ಗಾಬರಿಯಾಯಿತು. ಆ ವೇಳೆಗೆ ಅಶೋಕವನದಲ್ಲಿ ಕಾವಲು ಕಾಯುತ್ತಿದ್ದ ರಾಕ್ಷಸಿಯರಿಗೆ ಎಚ್ಚರವಾಯಿತು. ಅವರು ಎದ್ದು ನೋಡುತ್ತಾರೆ: ಎಲ್ಲೆಲ್ಲಿಯೂ ಸರ್ವನಾಶ! ಇದಿರಿಗೆ ಬೆಟ್ಟದಂತೆ ಭಯಂಕರಾಕಾರವುಳ್ಳ ವಾನರ ಬೇರೆ; ಅವರಿಗೆ ಅವನನ್ನು ಕಂಡು ಬಲು ಭಯವಾಯಿತು. ಅವರೆಲ್ಲರೂ ಸೀತೆಯ ಬಳಿಗೆ ಓಡಿಹೋಗಿ, "ಅಮ್ಮಾ! ಇದೇನು? ಇವನು ಯಾರು? ಯಾರ ಮಗ? ಎಲ್ಲಿಂದ ಬಂದಿರುವನು? ಏತಕ್ಕೋಸ್ಕರ ಇಲ್ಲಿಗೆ ಬಂದಿದ್ದಾನೆ?" ಎಂದು ಕೇಳಿದರು. ಸೀತಾದೇವಿ "ಚೆನ್ನಾಯಿತು, ನಾನೇನು ಬಲ್ಲೆ? ರಾಕ್ಷಸರು ಮಾಯಾರೂಪಿಗಳು. ಹಾವಿನ ಹೆಜ್ಜೆಯನ್ನು ಹಾವೇ ಬಲ್ಲುದೆಂಬಂತೆ ಈ ಮಾಯಾಸ್ವರೂಪಿಯ ವಿಷಯವನ್ನು ನೀವು ಬಲ್ಲಿರಿ, ಅಷ್ಟೆ. ಇವನನ್ನು ನೋಡಿ ನನಗೂ ಭಯವಾಗುತ್ತದೆ. ಇವನಾರೋ ನೀವೇ ಹೇಳಿರಿ; ನಿಮ್ಮಲ್ಲಿಯೆ ಯಾವನೋ ಒಬ್ಬನಿರಬೇಕು" ಎಂದಳು. ಈ ನುಡಿಯಿಂದ ಆ ರಾಕ್ಷಸರಿಗೆ ದಿಕ್ಕೇ ತೋಚದಂತಾಯಿತು. ಅವರಲ್ಲಿ ಕೆಲವರು ಅಲ್ಲಿಯೆ ಸೀತಾದೇವಿಯ ಬಳಿಯಲ್ಲಿ ಅಡಗಿಕೊಂಡರು. ಕೆಲವರು ಒಂದೇ ಉಸಿರಿಗೆ ಓಡಿಹೋಗಿ ರಾವಣನಿಗೆ ಸುದ್ದಿ ಮುಟ್ಟಿಸಿದರು—"ಮಹಾರಾಜ, ಸರ್ವನಾಶವಾಯಿತು! ಭಯಂಕರಾಕಾರದ ವಾನರನು ಅಶೋಕವನಕ್ಕೆ ಬಂದಿದ್ದಾನೆ. ಕ್ಷಣಕಾಲ ಅವನು ಸೀತೆಯೊಡನೆ ಮಾತನಾಡುತ್ತಿದ್ದು ಈಗ ಅಲ್ಲಿಯೆ ವನಮಧ್ಯದಲ್ಲಿದ್ದಾನೆ. ಅವನು ಸಾಮಾನ್ಯನಂತೂ ಅಲ್ಲ. ಅವನ ಆಕಾರವನ್ನು ನೋಡಿದರೆ ಜೀವ ಝಲ್ಲೆನ್ನುತ್ತದೆ. ಆತನು ಯಾರೆಂದು ಸೀತಾದೇವಿಯನ್ನು ಕೇಳಿದರೆ ತನಗೇನೂ ತಿಳಿಯದೆಂದು ಹೇಳಿದಳು. ಅವನು ಎಲ್ಲೋ ದೇವೇಂದ್ರನ ದೂತನೋ ಕುಬೇರನ ದೂತನೋ ಇರಬೇಕೆಂದು ತೋರುತ್ತದೆ. ಅಥವಾ ಶ್ರೀರಾಮನೆ ಸೀತೆಯನ್ನು ಹುಡುಕುವುದಕ್ಕಾಗಿ ಅವನನ್ನು ಕಳುಹಿಸಿದ್ದರೂ ಕಳುಹಿಸಿರಬಹುದು. ಆ ಘೋರ ವಾನರನು ಮನೋಹರವಾದ ನಮ್ಮ ಅಶೋಕವನವನ್ನೆಲ್ಲಾ ನಾಶಮಾಡಿ ಬಿಟ್ಟಿದ್ದಾನೆ. ಸೀತಾದೇವಿ ಇರುವ ಪ್ರದೇಶವನ್ನು ಬಿಟ್ಟು ಉಳಿದ ವನವೆಲ್ಲವೂ ಹೇಳ ಹೆಸರಿಲ್ಲದಂತಾಗಿದೆ. ಮಹಾರಾಜ, ಆ ಪಾಪಿಯನ್ನು ಹಿಡಿದು ಚೆನ್ನಾಗಿ ಶಿಕ್ಷಿಸಬೇಕು. ನೀನು ಬಯಸಿರುವ ಆ ಸೀತಾದೇವಿಯೊಡನೆ ಆ ನೀಚನು ಮಾತನಾಡುವುದೆಂದರೇನು? ಜೀವದ ಮೇಲೆ ಆಶೆ ಇಲ್ಲವೆಂದು ತೋರುತ್ತದೆ!" ಎಂದರು.

ರಾಕ್ಷಸಿಯರ ನುಡಿಗಳು ಕಿವಿಯಲ್ಲಿ ಬೀಳುತ್ತಾ ಹೋದಂತೆ ರಾವಣೇಶ್ವರನು ಕೋಪದಿಂದ ಕಾಯುತ್ತಾ ಹೋಗಿ ರೋಷಪಾವಕನಾದನು. ಹಲ್ಲುಗಳನ್ನು ಕಟಕಟ ಕಡಿಯುತ್ತಾ, ಯುದ್ಧವೀರರಾದ 'ಕಿಂಕರ'ರೆಂಬ ರಾಕ್ಷಸರನ್ನು ಕರೆದು "ಈಗಲೇ ಹೋಗಿ ಆ ಕೋತಿಯನ್ನು ಬಲಿಹಾಕಿರಿ!" ಎಂದು ಅಪ್ಪಣೆ ಮಾಡಿದನು. ಮಹಾಬಲ

ಶಾಲಿಗಳಾದ ಐವತ್ತು ಸಹಸ್ರಜನ 'ಕಿಂಕರ'ರು ಶೂಲ ಮುದ್ಗರಾದಿ ಆಯುಧಗಳನ್ನು ಹಿಡಿದು 'ಜೀವಸಹಿತವಾಗಿಯೆ ಆ ಕೋತಿಯನ್ನು ಹಿಡಿದುತರೋಣ' ಎಂದುಕೊಂಡು ಹೊರಟರು. ಅಶೋಕವನದ ಬಾಗಿಲಿನಲ್ಲಿಯೆ ನಿಂತಿದ್ದ ಹನುಮಂತನನ್ನು ಕಾಣುತ್ತಲೆ ಅವರೆಲ್ಲರೂ ಒಂದೇ ಸಲ ಆತನ ಮೇಲೆ ಎರಗಿದರು. ಆದರೇನು ? ಕಾಳ್ಗಿಚ್ಚಿನ ಮೇಲೆ ಮಿಡತೆಗಳು ಬಂದು ಬಿದ್ದಂತಾಯಿತು. ಹನುಮಂತನು ಅವರ ಪ್ರಹಾರಗಳನ್ನು ಲೆಕ್ಕಿಸದೆ ಒಮ್ಮೆ ಬಾಲವನ್ನು ನೆಲಕ್ಕೆ ಬಡಿದು ಸಿಂಹನಾದ ಮಾಡಿದನು. ಅನಂತರ ಒಂದು ಸಲ ಭುಜಾಸ್ಫಾಲನಮಾಡಿದನು. ಅದರಿಂದ ಹೊರಟ ಶಬ್ದ ದಿಕ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಯಿತು ; ಆಕಾಶದಲ್ಲಿ ಹಾರುತ್ತಿದ್ದ ಹಕ್ಕಿಗಳು ಗಿರಗಿರನೆ ತಿರುಗಿ ನೆಲಕ್ಕೆ ಬಿದ್ದುವು. ಆಗ ಹನುಮಂತನು ಗಟ್ಟಿಯಾಗಿ "ಅತಿಬಲನಾದ ಶ್ರೀರಾಮನಿಗೆ ಜಯವಾಗಲಿ ! ಶೂರನಾದ ಲಕ್ಷ್ಮಣನಿಗೆ ಜಯವಾಗಲಿ ! ರಘುರಾಮನಿಂದ ಪಾಲಿತನಾದ ಸುಗ್ರೀವ ಮಹಾರಾಜನಿಗೆ ಜಯವಾಗಲಿ ! ದುಸ್ಸಾಧ್ಯವಾದ ಕಾರ್ಯಗಳನ್ನು ಸುಲಭವಾಗಿಯೆ ಸಾಧಿಸಬಲ್ಲ ಶ್ರೀರಾಮಚಂದ್ರನ ದೂತನು ನಾನು. ನನ್ನ ಹೆಸರು ಹನುಮಂತ. ವಾಯುಪುತ್ರನಾದ ನಾನು ಶತ್ರುಗಳನ್ನು ಲೆಕ್ಕಿಸತಕ್ಕವನಲ್ಲ. ಸಹಸ್ರಮಂದಿ ರಾವಣರು ನನ್ನೆದುರಿಗೆ ಯುದ್ಧಕ್ಕೆ ಬಂದರೂ ನನಗೆ ಸಮಾನವಾಗಲಾರರು. ಕಲ್ಲು ಮರಗಳೇ ನನ್ನ ಆಯುಧ. ಅವುಗಳಿಂದ ಎಷ್ಟು ಸಹಸ್ರ ರಾಕ್ಷಸರನ್ನಾದರೂ ನಾನು ಸಂಹರಿಸಬಲ್ಲೆ. ಇಗೋ, ಹೀಗೆಯೆ ನೋಡುನೋಡುತ್ತಿರುವಂತೆ ಈ ಲಂಕಾ ಪಟ್ಟಣವನ್ನೆಲ್ಲಾ ಧ್ವಂಸಮಾಡಿ ನನ್ನ ಪ್ರಭುಪತ್ನಿಯಾದ ಮೈಥಿಲಿಗೆ ಮಣಿದು ನನ್ನ ಸ್ವಾಮಿಯ ಬಳಿಗೆ ಹಿಂದಿರುಗುವೆನು" ಎಂದು ಕೂಗಿ ಹೇಳಿದನು.

ಹನುಮಂತನ ಸಿಂಹಗರ್ಜನೆಯನ್ನು ಕೇಳಿಯೇ ಕಿಂಕರರಿಗೆ ಧೈರ್ಯ ಉಡುಗಿತ್ತು. ಆದರೂ ತಮ್ಮ ಪ್ರಭುವಿನ ಅಪ್ಪಣೆಯನ್ನು ಮೀರಲಾರದೆ ತಾವು ಧರಿಸಿದ್ದ ನಾನಾವಿಧವಾದ ಆಯುಧಗಳಿಂದ ಮಾರುತಿಯನ್ನು ಪ್ರಹರಿಸಲು ಮೊದಲು ಮಾಡಿದರು. ಹನುಮಂತನು ಅವರನ್ನು ಸದೆಬಡಿಯುವುದಕ್ಕಾಗಿ ಆಯುಧವೊಂದನ್ನು ಪಡೆಯಲು ಸುತ್ತಲೂ ನೋಡಿದನು. ವನದ ಹೆಬ್ಬಾಗಿಲಿಗೆ ಹಾಕುವ ದೊಡ್ಡ ಕಬ್ಬಿಣದ ಅಗುಳಿ ಕಾಣಿಸಿತು. ಅದನ್ನೆ ತೆಗೆದುಕೊಂಡು ರಾಕ್ಷಸರನ್ನು ಪ್ರಹರಿಸಲು ಮೊದಲು ಮಾಡಿದನು. ಕ್ಷಣಮಾತ್ರದಲ್ಲಿ 'ಕಿಂಕರ'ರೆಲ್ಲರೂ ನಾಮಾವಶೇಷವಾಗಿ ಹೋದರು. ಮತ್ತಾರು ಬರುವರೊ ನೋಡೋಣವೆಂದು ಆತನು ತನ್ನ ಆಯುಧದೊಡನೆ ಹೊರಬಾಗಿಲಿನಲ್ಲಿ ಕಾದುನಿಂತನು. ಆತನ ಹೊಡೆತಕ್ಕೆ ಸಿಕ್ಕದೆ ಓಡಿ ಹೋದ ಒಬ್ಬಿಬ್ಬರು ರಾಕ್ಷಸರು ರಾವಣನ ಬಳಿಗೆ ಹೋಗಿ 'ಕಿಂಕರ'ರೆಲ್ಲರೂ ನಿಶ್ಶೇಷವಾಗಿ ಹತವಾದ ಸುದ್ದಿಯನ್ನು ಅರಿಕೆಮಾಡಿದರು. ಅದನ್ನು ಕೇಳಿ ರಾವಣನು ಕೋಪದಿಂದ ಕಿಡಿಕಿಡಿಯಾಗುತ್ತಾ ತನ್ನ ಮಂತ್ರಿಯಾದ ಪ್ರಹಸ್ತನ ಮಗ ಜಂಬುಮಾಲಿಯನ್ನು ಆ ಘೋರ ಕಪಿಯ ಮೇಲೆ ಯುದ್ಧಕ್ಕಟ್ಟಿದನು.

ತೋಟದ ಹೆಬ್ಬಾಗಿಲಿನಲ್ಲಿ ಕೆಲಸವಿಲ್ಲದೆ ನಿಂತಿದ್ದ ಹನುಮಂತನಿಗೆ ತೋಟದಲ್ಲಿದ್ದ ಚೈತ್ಯಪ್ರಾಸಾದ ಕಾಣಿಸಿತು. ಅದು ರಾಕ್ಷಸರ ದೇವತೆಯ ಗುಡಿ; ಬಹು ಭಯಂಕರ ವಾದುದು. ಹನುಮಂತನು ಆ ಗುಡಿಯ ಶಿಖರಕ್ಕೆ ಏರಿಹೋಗಿ ಉದಿಸುವ ಸೂರ್ಯ ನಂತೆ ಅಲ್ಲಿ ಕುಳಿತು ಭುಜಾಸ್ಫಾಲನೆ ಮಾಡುತ್ತಾ ಮತ್ತೊಮ್ಮೆ ಗಟ್ಟಿಯಾಗಿ ಘೋಷಿಸಿ ದನು: "ಬಾಹುಶಾಲಿಯಾದ ಶ್ರೀರಾಮನಿಗೆ ಜಯವಾಗಲಿ! ಲಕ್ಷ್ಮಣಸ್ವಾಮಿಗೆ ಜಯ ವಾಗಲಿ! ರಾಮಸಹಾಯಕನಾದ ರಾಜಾ ಸುಗ್ರೀವನಿಗೆ ಜಯವಾಗಲಿ! ನಾನು ಕೋಶಲ ದೇಶದ ಶ್ರೀರಾಮನ ದೂತ! ನನ್ನ ಹೆಸರು ಹನುಮಂತ! ವಾಯುಪುತ್ರನಾದ ನಾನು ಮಹಾ ಬಲಶಾಲಿ! ಒಬ್ಬ ರಾವಣನಲ್ಲ, ಸಹಸ್ರ ರಾವಣರು ಬಂದರೂ ಅವರನ್ನು ಯುದ್ಧದಲ್ಲಿ ಸಂಹರಿಸಬಲ್ಲೆ. ನಾನು ಈಗ ಈ ಲಂಕಾನಗರವನ್ನೆಲ್ಲಾ ನಾಶಮಾಡಿ ನನ್ನ ಸ್ವಾಮಿ ಪತ್ನಿಯಾದ ಮೈಥಿಲಿಗೆ ನಮಸ್ಕರಿಸಿ ನನ್ನ ಪ್ರಭುವಿನ ಬಳಿಗೆ ಹಿಂದಿರುಗು ತ್ತೇನೆ." ಆತನ ಘೋಷಣೆಯನ್ನು ಕೇಳಿ, ಆ ಚೈತ್ಯದ ನೂರು ಜನ ಕಾವಲುಗಾರರು ಈಟಿ ಭಲ್ಲೆ ಗಂಡುಗೊಡಲಿಗಳನ್ನು ಹಿಡಿದು ಆತನ ಮೇಲೆ ಯುದ್ಧಕ್ಕೆ ಬಂದರು. ಅವರೆಲ್ಲರೂ ಏಕಕಾಲದಲ್ಲಿಯೆ ಮೇಲೆ ಕುಳಿತಿದ್ದ ಹನುಮಂತನಿಗೆ ಅಂಬಿನ ಮಳೆಯನ್ನು ಕರೆದರು. ಇದನ್ನು ಕಂಡು ಹನುಮಂತನಿಗೆ ಕೋಪವುಕ್ಕಿತು. ಕುಳಿತಲ್ಲಿಂದಲೆ ಆ ಚೈತ್ಯ ಪ್ರಾಸಾದದ ಕಂಭವೊಂದನ್ನು ಕಿತ್ತುಕೊಂಡು ಅದನ್ನು ಗರಗರ ತಿರುಗಿಸಿದನು. ಆ ವೇಗಕ್ಕೆ ಬೆಂಕಿಹುಟ್ಟಿ ಅದರಿಂದ ಆ ಪ್ರಾಸಾದವೆಲ್ಲಾ ಸುಟ್ಟುಹೋಯಿತು. ಅನಂತರ ಆತನು ಅದೇ ಕಂಭದಿಂದಲೆ ಆ ನೂರು ಮಂದಿಯನ್ನೂ ಹೊಡೆದು ಕೊಂದುಹಾಕಿದನು. ಹೀಗೆ ಆ ರಾಕ್ಷಸರನ್ನೆಲ್ಲಾ ಸಂಹರಿಸಿದ ಮೇಲೆ ಆಕಾಶದಲ್ಲಿ ನೆಗೆದು ನಿಂತು ಲಂಕೆಯ ರಾಕ್ಷಸರಿಗೆಲ್ಲಾ ಕೂಗಿ ಹೇಳಿದನು: "ಎಲೈ ರಾಕ್ಷಸಾಧಮರಿರಾ, ನನ್ನಂತೆಯೆ ಮಹಾ ಪರಾಕ್ರಮಿಗಳೂ ಮಹಾಕಾಯರೂ ಆದ ಸಾವಿರಾರು ಮಂದಿ ನಮ್ಮ ರಾಜನ ಬಳಿ ಇದ್ದಾರೆ. ಅವರೆಲ್ಲರೂ ಸೀತಾಮಾತೆಯನ್ನು ಅರಸುತ್ತಾ ದಿಕ್ಕುದಿಕ್ಕಿಗೆ ಹೋಗಿರುವರು. ನಮ್ಮ ಮಹಾರಾಜನು ಇಷ್ಟರಲ್ಲಿಯೆ ಅವರೆಲ್ಲರನ್ನೂ ಕರೆದುಕೊಂಡು ಬಂದು ಈ ಲಂಕೆಯನ್ನು ಮುತ್ತುತ್ತಾನೆ. ನಿಮಗೆಲ್ಲರಿಗೂ ಮೃತ್ಯು ಹತ್ತಿರಕ್ಕೆ ಬಂದಿದೆ. ಮಹಾತ್ಮ ನಾದ ಶ್ರೀರಾಮನಲ್ಲಿ ದ್ವೇಷ ಬೆಳಸಿದ ನೀವೂ ನಿಮ್ಮ ಲಂಕಾನಗರವೂ ಆತನ ಬಾಣದ ಬೆಂಕಿಯಲ್ಲಿ ದಗ್ಧವಾಗಿ ಹೋಗುವುದು ಖಂಡಿತ. ಆಗ ನಿಮ್ಮ ದೊರೆಯಾದ ರಾವಣ ನಿಗೂ ಮೃತ್ಯು ತಪ್ಪಿದುದಲ್ಲ."

ಹನುಮಂತನ ಘೋಷಣೆ ಮುಗಿವವೇಳೆಗೆ ರಾವಣನು ಕಳುಹಿಸಿದ ಜಂಬುಮಾಲಿ ಅಲ್ಲಿಗೆ ಬಂದನು. ಜಂಬುಮಾಲಿಯೇನೂ ಸಾಮಾನ್ಯನಲ್ಲ; ಮಹಾಪರಾಕ್ರಮಿಯೆಂದು ಆತನು ಪ್ರಸಿದ್ಧನಾಗಿದ್ದನು. ಆತನ ದೊಡ್ಡ ದೇಹವೂ ಚಕ್ರದಂತಿದ್ದ ದುಂಡುಕಣ್ಣು ಗಳೂ ಭಯಂಕರವಾಗಿದ್ದುವು. ರಾಕ್ಷಸವೀರನು ಇಂದ್ರನ ಧನುಸ್ಸಿಗೆ ಸಮಾನವಾದ ದೊಡ್ಡ ಬಿಲ್ಲನ್ನು ಹಿಡಿದು ಟಂಕಾರಮಾಡುತ್ತಾ ತನ್ನ ಹೇಸರಕತ್ತೆಗಳ ರಥದಲ್ಲಿ ಕುಳಿತು ಹನುಮಂತನ ಬಳಿಗೆ ಧಾವಿಸಿದನು. ಅವನನ್ನು ಕಾಣುತ್ತಲೆ ಹನುಮಂತನು ಸಿಂಹನಾದ

ಮಾಡಿದನು. ಜಂಬುಮಾಲಿ ಅವನ ಸೊಕ್ಕನ್ನು ಅಡಗಿಸುವೆನೆಂದುಕೊಂಡು ಭಯಂಕರ ವಾದ ಬಾಣಗಳನ್ನು ಹೂಡಿ ಹನುಮಂತನ ಮೇಲೆ ಪ್ರಯೋಗಿಸಿದನು. ಹನುಮಂತನ ದೇಹವೆಲ್ಲವೂ ಬಾಣಗಳ ಮಳೆಯಲ್ಲಿ ಮುಳುಗಿಹೋಯಿತು. ಆತನ ಹಣೆಗೆ ಗಾಯವಾಗಿ ಮುಖದ ಮೇಲೆಲ್ಲಾ ರಕ್ತ ಹರಿಯಿತು. ಇದರಿಂದ ಕನಲಿದ ವಾನರವೀರನು ಸುತ್ತಲೂ ನೋಡಿ ಸಮೀಪದಲ್ಲಿದ್ದ ಒಂದು ದೊಡ್ಡ ಬಂಡೆಯನ್ನು ಎತ್ತಿ ತನ್ನ ಎದುರಾಳಿಯ ಮೇಲೆ ಒಗೆದನು. ಆದರೆ ಆ ಬಂಡೆ ಜಂಬುಮಾಲಿಯ ಬಾಣಾಘಾತಕ್ಕೆ ಸಿಕ್ಕಿ ಚೂರು ಚೂರಾಯಿತು. ಇದನ್ನು ಕಂಡು ಮಾರುತಿಯ ಕೋಪ ಮತ್ತಷ್ಟು ಹೆಚ್ಚಿತು. ಸಮೀಪದಲ್ಲಿಯೆ ಇದ್ದ ಸಾಲವೃಕ್ಷವೊಂದನ್ನು ಕಿತ್ತು ಅದರಿಂದ ತನ್ನ ಶತ್ರುವನ್ನು ಅಪ್ಪಳಿಸ ಹೊರಟನು. ಆದರೆ ವೀರನಾದ ಜಂಬುಮಾಲಿ ಅದನ್ನು ತನ್ನ ಬಾಣಪರಂಪರೆ ಯಿಂದ ನಿವಾರಿಸಿ ಹನುಮಂತನನ್ನು ತನ್ನ ಬಾಣಗಳಲ್ಲಿ ಹೂಳಿದನು. ಬಾಣಾಘಾತದಿಂದ ನೊಂದಿದ್ದ ಮಾರುತಿ ತನ್ನ ಮೊದಲ ಆಯುಧವಾದ ಕಬ್ಬಿಣದ ಅಗುಳಿಯನ್ನೇ ತೆಗೆದುಕೊಂಡು ಗರಗರ ತಿರುಗಿಸಿ ಜಂಬುಮಾಲಿಯ ಕಡೆ ಎಸೆದನು. ಅಲ್ಲಿಗೆ ಮುಗಿಯಿತು ಯುದ್ಧ. ಜಂಬುಮಾಲಿಯಾಗಲಿ ಅವನ ರಥವಾಗಲಿ ಅದಕ್ಕೆ ಕಟ್ಟಿದ್ದ ಹೇಸರಕತ್ತೆ ಗಳಾಗಲಿ ಗುರುತಿಸಲಾರದಷ್ಟು ರೂಪುಗೆಟ್ಟು ನೆಲಕ್ಕೆ ಬಿದ್ದುಹೋದುವು.

---

# ೧೫

## ಬಲಾಬಲ ಪರೀಕ್ಷೆ ೨

ಜಂಬುಮಾಲಿ ಹತನಾದ ಸುದ್ದಿ ರಾವಣನಿಗೆ ಗೊತ್ತಾದೊಡನೆಯೆ ಆತನು ಕೋಪ ದಿಂದ ಕಣ್ಣುಗಳಲ್ಲಿ ಕೆಂಡವನ್ನು ಕೆದರುತ್ತಾ ಜಂಬುಮಾಲಿಗೆ ಸಮಾನ ಬಲರಾದ ಏಳು ಜನ ಮಂತ್ರಿಪುತ್ರರನ್ನು ಕರೆದು "ನೀವು ಈಗಲೆ ಹೋಗಿ ಆ ಕಪಿಯನ್ನು ಹಿಡಿದು ತನ್ನಿರಿ" ಎಂದು ಅಪ್ಪಣೆಮಾಡಿದನು. ಅವರು ಆತನ ಆಜ್ಞೆಗೆ ವಿಧೇಯರಾಗಿ ದೊಡ್ಡ ಸೈನ್ಯ ದೊಡನೆ ಹನುಮಂತನನ್ನು ಹಿಡಿದುತರಲು ಹೊರಟರು. ದಿವ್ಯಮಾರ್ಗಣಗಳನ್ನು ಧರಿಸಿ, ಪ್ರತ್ಯೇಕ ಪ್ರತ್ಯೇಕವಾದ ದೊಡ್ಡ ರಥಗಳಲ್ಲಿ ಕುಳಿತು ಗರ್ವದಿಂದ ಬೀಗಿ ಬಿರಿಯುತ್ತಾ ಬರುತ್ತಿರುವ ಆ ರಾಕ್ಷಸರನ್ನು ಹನುಮಂತನು ದೂರದಿಂದಲೆ ನೋಡಿದನು. ನೋಡು ನೋಡುವಷ್ಟರಲ್ಲಿ ಆ ರಾಕ್ಷಸರು ಆತನನ್ನು ಸಮೀಪಿಸಿ ಬಾಣಗಳ ಮಳೆಯನ್ನು ಕರೆಯಲು ಮೊದಲುಮಾಡಿದರು. ಆದರಿಂದ ತಪ್ಪಿಸುಕೊಳ್ಳುವುದಕ್ಕಾಗಿ ಆತನು ಅಂತರಿಕ್ಷಕ್ಕೆ ಹಾರಿದನು. ಆ ರಾಕ್ಷಸರೇನು ಸಾಮಾನ್ಯರೆ? ತಾವೂ ಅಂತರಿಕ್ಷಕ್ಕೆ ಹಾರಿ ಅವನನ್ನು ಘಾತಿಸಲು ಮೊದಲುಮಾಡಿದರು. ಇದನ್ನು ಕಂಡು ಮಾರುತಿ ಒಮ್ಮೆ ಸಿಂಹ ನಾದಮಾಡಿ ಅವರ ಮೇಲೆ ಕವಿದುಬಿದ್ದನು. ಅವರಲ್ಲಿ ಒಬ್ಬನನ್ನು ಆತ ತನ್ನ ಅಂಗೈ ಯಿಂದ ಅಪ್ಪಳಿಸಿ ಕೆಡಹಿದನು. ಮತ್ತೊಬ್ಬನು ಕಾಲ ತುಳಿತಕ್ಕೆ ಸಿಕ್ಕಿ ಜಜ್ಜಿಹೋದನು. ಇನ್ನೊಬ್ಬನು ಮುಷ್ಟಿಯ ಹೊಡೆತದಿಂದ ಮೃತಿಹೊಂದಿದನು. ಬೇರೊಬ್ಬನನ್ನು ಆತನು ತನ್ನ ಉಗುರಿನಿಂದ ಸಿಗಿದು ಹಾಕಿದನು. ಆತನು ಮೇಲೆ ಬಿದ್ದ ರಭಸಕ್ಕೆ ಮತ್ತೊಬ್ಬನು ಸತ್ತನು. ಉಳಿದವರು ಆತನ ಸಿಂಹನಾದವನ್ನು ಕೇಳಿಯೆ ಸತ್ತರು. ತಮ್ಮ ನಾಯಕರಿಗೆ ಆದ ಗತಿಯನ್ನು ಕಂಡು ಕಳೆದುಳಿದಿದ್ದ ಸೈನ್ಯದವರು ಓಡಿಹೋಗಿ ಆ ಸಂಗತಿಯನ್ನು ರಾವಣಾಸುರನಲ್ಲಿ ಬಿನ್ನವಿಸಿದರು.

ಮಂತ್ರಿಪುತ್ರ ಸಪ್ತಕವು ಒಮ್ಮೆಗೇ ಮಡಿದುದನ್ನು ಕೇಳಿ ರಾವಣನ ಮನಸ್ಸಿಗೆ ಬಹು ಆತಂಕ ತಟ್ಟಿತು. ಆದರೂ ಅದನ್ನು ಹೊರದೋರದೆ ವಿರೂಪಾಕ್ಷ ಯೂಪಾಕ್ಷ ದುರ್ಧರ ಪ್ರಘಸ ಭಾಸಕರ್ಣ ಎಂಬ ಐವರು ಸೇನಾಪತಿಗಳನ್ನು ಕರೆದು "ಎಲೈ, ಶೂರ ರಾದ ಸೇನಾಪತಿಗಳೇ, ನೀವು ನಿಮ್ಮ ನಿಮ್ಮ ಚತುರಂಗ ಸೈನ್ಯಗಳೊಡನೆ ಹೊರಟು ನಮ್ಮ ಅಶೋಕವನಕ್ಕೆ ಬಂದಿರುವ ಆ ಘೋರಕಪಿಯನ್ನು ಹೇಗಾದರೂ ಮಾಡಿ ಸಂಹರಿಸಿ ಬರತಕ್ಕುದು. ಅವನನ್ನು ಸಾಮಾನ್ಯ ಕಪಿಯೆಂದು ಭಾವಿಸಿ ಮೋಸಹೋದೀರಿ. ಬಹುಶಃ ದೇವೇಂದ್ರನು ದೊಡ್ಡ ತಪಸ್ಸನ್ನು ಮಾಡಿ ನಮ್ಮ ನಿಗ್ರಹಕ್ಕಾಗಿ ಈ ಭೂತವನ್ನು ಸೃಷ್ಟಿ ಮಾಡಿದ್ದರೂ ಮಾಡಿರಬಹುದು. ವಾಲಿ ಸುಗ್ರೀವ ಜಾಂಬವಂತ ಮೊದಲಾದ ಕಪಿ ವೀರರನ್ನೆಲ್ಲಾ ನಾನು ಬಲ್ಲೆ; ಅವರಾರೂ ಇಂತಹ ಬಲಶಾಲಿಗಳಲ್ಲ. ಈ ವಾನರನು

ಮಾಯಾರೂಪಿಯಾಗಿರುವಂತೆ ತೋರುತ್ತದೆ. ಆದುದರಿಂದ ಬಹು ಎಚ್ಚರಿಕೆಯಿಂದ ಕಣ್ಣಾಗಿ ವ್ಯವಹರಿಸಬೇಕು" ಎಂದು ಎಚ್ಚರಿಸಿ, ಅವರನ್ನು ಹನುಮಂತನ ಮೇಲೆ ಯುದ್ಧಕ್ಕೆ ಅಟ್ಟಿದನು. ಅವರೆಲ್ಲರೂ ಮಹಾ ಸಡಗರದಿಂದ ತಮ್ಮ ತಮ್ಮ ಸೈನ್ಯಗಳನ್ನು ಸಜ್ಜುಗೊಳಿಸಿಕೊಂಡು ಭಯಂಕರವಾದ ಆಯುಧಕೋಟಿಗಳನ್ನು ತಮ್ಮ ರಥಗಳಲ್ಲಿ ತುಂಬಿಕೊಂಡು ಆ ವಾನರ ವೀರನ ಮೇಲೆ ಯುದ್ಧಕ್ಕೆ ಹೊರಟರು. ಉಪವನದ ಬಾಗಿಲಿನಲ್ಲಿ ಅವರ ಪಾಲಿನ ಯಮನಂತೆ ಕುಳಿತಿದ್ದ ಹನುಮಂತನನ್ನು ಕಾಣುತ್ತಲೆ ದುರ್ಧರನು ಹರಿತವಾದ ಐದು ಬಾಣಗಳನ್ನು ಹನುಮಂತನ ಮೇಲೆ ಪ್ರಯೋಗಿಸಿದನು. ಅವು ತನುವನ್ನು ತಾಕುತ್ತಲೆ ಆತನು ಸಿಂಹನಾದ ಮಾಡುತ್ತಾ ಆಕಾಶಕ್ಕೆ ಹಾರಿದನು. ದುರ್ಧರನೂ ಆತನ ಹಿಂದೆಯೆ ರಥದೊಡನೆ ಹಾರಿ ಆತನ ಮೇಲೆ ಬಾಣದ ಮಳೆಯನ್ನು ಕರೆಯಲು ಮೊದಲು ಮಾಡಿದನು ; ಆಗ ಆ ವಾಯುಪುತ್ರನು ತನ್ನ ದೇಹವನ್ನು ಮತ್ತಷ್ಟು ಪರ್ವತೋಪಮವಾಗಿ ಬೆಳಸಿಕೊಂಡು ಅವನ ರಥದ ಮೇಲೆ ಬಿದ್ದನು. ಒಡನೆಯೆ ರಥಕ್ಕೆ ಕಟ್ಟಿದ್ದ ಎಂಟು ಕುದುರೆಗಳೂ ಸತ್ತುಹೋದುವು. ರಥ ನೆಲಕ್ಕೆ ಬಿದ್ದು ಪುಡಿಪುಡಿಯಾಯಿತು. ಅದರೊಳಗೆ ಕುಳಿತಿದ್ದ ದುರ್ಧರನೂ ಸತ್ತು ನೆಲಕ್ಕುರುಳಿದನು.

ದುರ್ಧರ ಸತ್ತುದನ್ನು ಕಂಡು ವಿರೂಪಾಕ್ಷ ಯೂಪಾಕ್ಷರಿಬ್ಬರೂ ಕೋಪೋದ್ದೀಪಿತರಾಗಿ ಕಣ್ಣುಗಳಿಂದ ಕೆಂಡವನ್ನು ಕಾರುತ್ತಾ ಹಲ್ಲುಗಳನ್ನು ಕಟಕಟ ಕಡಿಯುತ್ತಾ ಆಕಾಶಕ್ಕೆ ಹಾರಿ ಮುಸಲಾಯುಧಗಳಿಂದ ಹನುಮಂತನ ಎದೆಗೆ ಹೊಡೆದರು. ಬರಿಗೈಲಿದ್ದ ಹನುಮಂತನು ಭೂಮಿಗೆ ಅವತರಿಸಿ ಸಮೀಪದಲ್ಲಿದ್ದ ಸಾಲವೃಕ್ಷವೊಂದನ್ನು ಕಿತ್ತು ಅದರಿಂದ ಅವರಿಬ್ಬರನ್ನೂ ಒಟ್ಟಿಗೆ ಅಪ್ಪಳಿಸಿದನು. ಇಬ್ಬರೂ ರಕ್ತಕಾರಿಕೊಂಡು ನೆಲಕ್ಕುರುಳಿ ಸತ್ತರು. ಇದನ್ನು ಕಂಡು ಪ್ರಘಸನು ಹನುಮಂತನಿಗೆ ಇದಿರಾದನು. ಅವರಿಬ್ಬರೂ ಯುದ್ಧಕ್ಕೆ ತೊಡಗಿರುವಾಗ ಭಾಸಕರ್ಣನು ಬಂದು ಪ್ರಘಸನಿಗೆ ಸಹಾಯವಾಗಿ ನಿಂತನು. ಒಬ್ಬನು ಕತ್ತಿಯಿಂದ ಹೊಡೆಯುತ್ತಿದ್ದಾನೆ, ಮತ್ತೊಬ್ಬನು ಶೂಲದಿಂದ ತಿವಿಯುತ್ತಿದ್ದಾನೆ. ಹನುಮಂತನ ದೇಹವೆಲ್ಲಾ ರಕ್ತಮಯವಾಯಿತು. ಕೂಡಲೆ ಹನುಮಂತನು ಅಲ್ಲಿಯೆ ಸಮೀಪದಲ್ಲಿದ್ದ ಕೃತಕಪರ್ವತವೊಂದರ ಶಿಖರವನ್ನು ಕಿತ್ತುಕೊಂಡು ಅದರಿಂದ ಆ ಇಬ್ಬರನ್ನೂ ಅಪ್ಪಳಿಸಿದನು. ಇಬ್ಬರೂ ಸತ್ತು ನೆಲಕ್ಕುರುಳಿದರು. ಅವರ ಜೊತೆಯಲ್ಲಿ ಬಂದಿದ್ದ ಸೈನ್ಯವೆಲ್ಲವೂ ಬಿರುಗಾಳಿಗೆ ಸಿಕ್ಕ ತರಗೆಲೆಯಂತೆ ಹನುಮಂತನ ಹೊಡೆತಕ್ಕೆ ಸಿಕ್ಕಿ ನಾಶವಾಗಿ ಹೋಯಿತು. ಎತ್ತ ನೋಡಿದರೂ ಸತ್ತ ಆನೆ, ಮುರಿದ ರಥ, ಮಡಿದ ಕುದುರೆ, ಗತಜೀವಿಗಳಾದ ರಾಕ್ಷಸರು. ಹನುಮಂತನೊ ಯಥಾಪ್ರಕಾರ ತೋಟದ ಬಾಗಿಲಿನಲ್ಲಿ ! ಪುನರಾಯಾನ್ ಮಹಾ ಕಪಿಃ !

ತನ್ನ ಶೂರ ಸೇನಾನಿಗಳೈವರೂ ಮಡಿದ ಸುದ್ದಿಯನ್ನು ಕೇಳಿ ರಾವಣೇಶ್ವರನು ಚಿಂತಾಮಗ್ನನಾಗಿ ತನ್ನ ಇದಿರಿಗೆ ಕುಳಿತಿದ್ದ ಅಕ್ಷಕುಮಾರನನ್ನು ನೋಡಿದನು. ಇಂಗಿತಜ್ಞನಾದ ಅಕ್ಷಕುಮಾರನು ತನ್ನ ತಂದೆಯ ಅಭಿಪ್ರಾಯವನ್ನು ಅರಿತವನಾಗಿ ಹವಿಸ್ಸಿನಿಂದ ಅಗ್ನಿ ಜ್ವಲಿಸುವಂತೆ ಧಿಗ್ಗನೆ ಮೇಲಕ್ಕೆದ್ದು ಹನುಮಂತನ ಮೇಲೆ

ಯುದ್ಧಕ್ಕೆ ಹೊರಡಲು ಸಿದ್ಧನಾದನು. ಸುವರ್ಣಾಲಂಕೃತವಾದ ಆತನ ರಥ ತತ್‌ಕ್ಷಣವೇ ಸಿದ್ಧವಾಯಿತು. ಮನೋವೇಗದಿಂದ ಕೂಡಿದ ಎಂಟು ಉತ್ತಮಾಶ್ವಗಳಿಂದ ಕೂಡಿದ ಆ ರಥದಲ್ಲಿ ಬಾಣಗಳಿಂದ ಕೂಡಿದ ಬತ್ತಳಿಕೆಗಳೂ ಎಂಟು ಮೂಲೆಗಳಲ್ಲಿ ಎಂಟು ಕತ್ತಿಗಳೂ ನೇತಾಡುತ್ತಿದ್ದುವು. ಬೇರೆ ಬೇರೆ ಕವಚಗಳೂ ಧನುಸ್ಸುಗಳೂ ಅದರಲ್ಲಿ ಅಣಮಾಡಿ ಇಡಲ್ಪಟ್ಟಿದ್ದುವು. ಭೂಮ್ಯಾಕಾಶಗಳಲ್ಲಿ ಸಮಾನವಾಗಿಯೆ ಸಂಚರಿಸಬಲ್ಲ ಆ ರಥವನ್ನು ಅಕ್ಷಕುಮಾರನು ಆರೋಹಿಸಿ ಅಶೋಕವನದ ಕಡೆಗೆ ಹೊರಟನು. ಪ್ರಜಾಕ್ಷಯಕ್ಕಾಗಿ ಹೊರಟ ಪ್ರಳಯ ರುದ್ರನಂತೆ ದೇದಿಪ್ಯಮಾನವಾಗಿ ಬೆಳಗುತ್ತಿದ್ದ ಆ ರಾಜಕುಮಾರನು ಹನುಮಂತನನ್ನು ಕಾಣುತ್ತಲೆ ಆತನ ಅದ್ಭುತಾಕಾರವನ್ನು ಕಂಡು ಆಶ್ಚರ್ಯಪಡುತ್ತಾ ತನ್ನ ಪರಾಕ್ರಮಕ್ಕೆ ತಕ್ಕ ಪ್ರತಿದ್ವಂದ್ವಿ ದೊರೆತನೆಂದು ಸಂತೋಷಿಸಿದನು.

ತಾನು ಸಮೀಪಿಸಿದರೂ ಸ್ವಲ್ಪವೂ ಲಕ್ಷ್ಯವೆ ಇಲ್ಲದೆ ಕುಳಿತಿದ್ದ ಹನುಮಂತನನ್ನು ಕಂಡು ಅಕ್ಷಕುಮಾರನಿಗೆ ಅಚ್ಚರಿಯಾಯಿತು. ಆತನು ಆ ಮಹಾಕಪಿಯನ್ನು ಕೆರಳಿಸುವುದಕ್ಕಾಗಿ ಮೂರು ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಕೂಡಲೆ ಹನುಮಂತನು ಕೆರಳಿ ಮೇಲಕ್ಕೆದ್ದನು. ಅದನ್ನು ಕಂಡು ಅಕ್ಷಕುಮಾರನು ಅಮೋಘವಾದ ಬಾಣಗಳ ಮಳೆಯನ್ನೆ ಸುರಿಸಿದನು. ಅಕ್ಷಕುಮಾರನ ದೊಡ್ಡ ನೀಲ ದೇಹ, ಆತನು ಕೈಲಿ ಹಿಡಿದಿದ್ದ ಇಂದ್ರಧನುಸ್ಸಿನಂತಹ ವಿಚಿತ್ರ ಕಾರ್ಮುಕ, ಆತನು ಸುರಿಸುತ್ತಿದ್ದ ಶರವರ್ಷ, ಪರ್ವತಾಕಾರದ ಹನುಮಂತ—ಇವನ್ನು ನೋಡಿದರೆ ಮೇಘವು ಬೆಟ್ಟದ ಮೇಲೆ ಮಳೆಸುರಿಸುವಂತೆ ಕಾಣುತ್ತಿತ್ತು. ಇಬ್ಬರೂ ತಮ್ಮ ಇದಿರಾಳಿಗಳನ್ನು ಕಂಡು ಮನಸ್ಸಿನಲ್ಲೇ ಮೆಚ್ಚಿಕೊಂಡರು. ಹನುಮಂತನು ತನ್ನ ಸಂತೋಷವನ್ನು ದೊಡ್ಡದೊಂದು ಸಿಂಹನಾದದ ಮೂಲಕ ಹೊರದೋರಿದನು. ಅಕ್ಷಕುಮಾರನು ವೀರ್ಯದ ಕೊಬ್ಬಿನಿಂದ ಮುಂದೆ ನುಗ್ಗಿದನು, ಹುಲ್ಲುಮುಚ್ಚಿದ ಹಳೆಯ ಬಾವಿಯ ಮೇಲೆ ಅವಿವೇಕದಿಂದ ಕಾಡಾನೆ ನುಗ್ಗುವಂತೆ! ಇದನ್ನು ಕಂಡು ಹನುಮಂತನು ಮೇಘವು ಗುಡುಗುವಂತೆ ಒಮ್ಮೆ ಸಿಂಹನಾದ ಮಾಡಿ ತೋಳುಗಳನ್ನೂ ತೊಡೆಗಳನ್ನೂ ಬೀಸುತ್ತಾ ಆಕಾಶಕ್ಕೆ ಹಾರಿದನು. ಅಕ್ಷಕುಮಾರನೂ ಹಿಂದೆಯೆ ಹಾರಿ ಅವನ ಮೇಲೆ ಬಾಣಗಳನ್ನು ಸುರಿಸಿದನು. ವಾಯುಪುತ್ರನಾದರೋ ಆ ಬಾಣಗಳ ಮಧ್ಯದಲ್ಲಿಯೆ ಗಾಳಿಯಂತೆ ತೂರುತ್ತಾ ಅವುಗಳಿಂದ ತಪ್ಪಿಸಿಕೊಳ್ಳುತ್ತಿದ್ದನು. ಆದರೆ ಬಹುಕಾಲ ಹಾಗೆ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲವೆನಿಸಿತು, ಆತನಿಗೆ. "ಈ ರಾಜಕುಮಾರನ ಬಾಣಗಳಿಂದ ತಪ್ಪಿಸಿಕೊಳ್ಳುವುದು ಹೇಗೆ?" ಎಂಬ ಚಿಂತೆಯೂ ಆಂಜನೇಯನ ಮನಸ್ಸಿನಲ್ಲಿ ಉದಿಸಿತು. ಬಾಲನಾದರೂ ಅಕ್ಷಕುಮಾರನು ಅತುಲ ಸಾಹಸಿ; ಅಮಿತ ಧೈರ್ಯಶಾಲಿ; ಯುದ್ಧವಿದ್ಯಾವಿಶಾರದ. ಆತನ ಉತ್ಸಾಹವು ಕ್ಷಣಕ್ಷಣಕ್ಕೂ ಹೆಚ್ಚುತ್ತಿದ್ದಿತು. ಇದನ್ನು ಕಂಡು ಹನುಮಂತನು "ಓಹೋ, ಉರಿಯುವ ಬೆಂಕಿಯನ್ನು ಆರಿಸದೆ ಬಿಡುವುದು ಕ್ಷೇಮವಲ್ಲ" ಎಂದುಕೊಂಡನು. ಹೀಗೆಂದುಕೊಂಡು ಆತನು ಆ ರಾಕ್ಷಸನ ರಥಾಶ್ವಗಳೆಂಟನ್ನೂ

ಒಂದು ಅಂಗೈಯಿಂದ ಹೊಡೆದು ಕೆಳಕ್ಕೆ ಕೆಡವಿದನು; ಮತ್ತೊಂದು ಕೈಯಿಂದ ರಥವನ್ನು ಅಪ್ಪಳಿಸಿದನು. ರಥವೂ ಪುಡಿಪುಡಿಯಾಗಿ ಕುದುರೆಗಳೊಡನೆಯೆ ನೆಲಕ್ಕುದುರಿತು. ಒಡನೆಯೆ ಅಕ್ಷಕುಮಾರನು ರಥದಿಂದ ಕೆಳಕ್ಕೆ ಹಾರಿ ತಪೋಮಹಿಮೆಯಿಂದ ದೇವಲೋಕವನ್ನು ಅಡರುವ ಮಹರ್ಷಿಯಂತೆ ಆಕಾಶಕ್ಕೆ ಹಾರಿದನು. ಹೀಗೆ ಹಾರಿ ತನ್ನ ಬಳಿಗೆ ಬರುತ್ತಿರುವ ಅವನನ್ನು ಹನುಮಂತನು ಥಟ್ಟನೆ ಸಮೀಪಿಸಿ ಅವನ ಕಾಲುಗಳೆರಡನ್ನೂ ಭದ್ರವಾಗಿ ಹಿಡಿದುಕೊಂಡನು. ಅನಂತರ ಗರುಡನು ಮಹಾಸರ್ಪವನ್ನು ಎಳೆಯುವಂತೆ ಆ ರಾಕ್ಷಸನ ಕಾಲುಗಳನ್ನು ಹಿಡಿದೆಳೆದು ಅಂತರಿಕ್ಷದಲ್ಲಿ ಗಿರಗಿರನೆ ತಿರುಗಿಸಿ ನೆಲಕ್ಕೆ ಕುಕ್ಕಿದನು. ಇದರಿಂದ ಆ ರಾಕ್ಷಸನ ತಲೆಯೊಡೆದು ಅವಯವಗಳೆಲ್ಲವೂ ಸಿಡಿದುಬಿದ್ದುವು. ಹನುಮಂತನು ಆ ಶವವನ್ನು ನೆಲಕ್ಕೆ ತಿಕ್ಕಿ ಮಾಂಸದ ಒಂದು ಉಂಡೆಯನ್ನಾಗಿ ಮಾಡಿಬಿಟ್ಟನು. ಇಷ್ಟಾದ ಮೇಲೆ ಮತ್ತೆ ಮೊದಲಿನಂತೆ ಬಂದು ನಿಂತನು, ತೋರಣದ್ವಾರದಲ್ಲಿ!

---

೧೬

# ದಶಾನನ ದರ್ಶನ

ಅಕ್ಷಕುಮಾರನ ಮರಣವಾರ್ತೆಯನ್ನು ಕೇಳಿ ರಾವಣನಿಗೆ ಬಹು ದುಃಖ ವಾಯಿತು. ಆದರೂ ಅವನ್ನು ನುಂಗಿಕೊಂಡು ತನ್ನ ಹಿರಿಯ ಮಗನಾದ ಇಂದ್ರಜಿತ್ತನ್ನು ಕರೆದು "ಮಗು, ನೀನು ಅಸ್ತ್ರವಿದ್ಯೆಯಲ್ಲಿ ನಿಪುಣನಾದವನು. ಶಸ್ತ್ರವಿದ್ಯೆಯಲ್ಲಿಯೂ ನಿನಗೆ ಸಮಾನರು ಇಲ್ಲ. ನಿನ್ನನ್ನು ಕಂಡರೆ ದೇವಾಸುರರೆಲ್ಲರೂ ತಲ್ಲಣಿಸುವರು. ಸ್ವತಃ ದೇವೇಂದ್ರನನ್ನೆ ನೀನು ಗೆದ್ದವನು. ಅಲ್ಲದೆ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅನೇಕ ಅಮೋಘವಾದ ದಿವ್ಯಾಸ್ತ್ರಗಳನ್ನು ಪಡೆದಿರುವೆ. ಮಹಾಬುದ್ಧಿಶಾಲಿ ಯಾದ ನಿನಗೆ ಯುದ್ಧಕಾರ್ಯದಲ್ಲಿ ಅಸಾಧ್ಯವೆಂಬುದೆ ಇಲ್ಲ. ಆದ್ದರಿಂದ ನನಗೆ ಯುದ್ಧ ವಿಷಯವಾದ ಯಾವುದಾದರೂ ಸಂಕಟ ಪ್ರಾಪ್ತವಾದಾಗ ನಿನ್ನನ್ನು ಸ್ಮರಿಸಿ ಕೊಂಡರೇ ನನಗೆ ಎಷ್ಟೋ ಸಮಾಧಾನವಾಗುತ್ತದೆ. ವತ್ಸ, ನನಗೆ ಈಗ ಅಂತಹ ಸಂಕಟ ಒದಗಿದೆ. ಮಹಾಪರಾಕ್ರಮಿಗಳಾದ ಕಿಂಕರರು ಮಡಿದರು; ಜಂಬುಮಾಲಿ ಹತನಾದ; ಏಳುಮಂದಿ ಮಂತ್ರಿಪುತ್ರರೂ ಸಂಹೃತರಾದರು; ಸೇನಾಪತಿಗಳೈವರೂ ಸತ್ತರು; ಅಸಂಖ್ಯಾತ ಸೇನೆ ನಾಶವಾಯಿತು. ಎಲ್ಲಕ್ಕಿಂತಲೂ ಹೆಚ್ಚಾಗಿ, ನಿನ್ನ ಪ್ರಿಯಸಹೋದರನಾದ ಅಕ್ಷಕುಮಾರನು ಹತನಾದನು. ಇವರೆಲ್ಲರ ಸಾವಿಗೂ ನನ್ನ ದುರಂತ ದುಃಖಕ್ಕೂ ಆ ಮಹಾಬಲಶಾಲಿಯಾದ ವಾನರನು ಕಾರಣನಾದನು. ನೀನು ಚತುರೋಪಾಯಗಳನ್ನೂ ಪ್ರಯೋಗಿಸಿ ಆ ವಾನರನನ್ನು ಸಂಹರಿಸಬೇಕು. ಅವನು ಸಾಮಾನ್ಯನಲ್ಲವೆಂಬುದು ವಿದಿತವಾಗಿಯೆ ಇದೆ. ಆದ್ದರಿಂದ ಜಾಗರೂಕನಾಗಿರಬೇಕಾ ದುದು ಅತ್ಯಗತ್ಯ. ಬಾಲಕನಾದ ನಿನ್ನನ್ನು ಯುದ್ಧಕ್ಕೆ ಕಳುಹಿಸಲು ಮನಸ್ಸು ಹಿಂಜರಿಯುತ್ತಿರುವುದಾದರೂ ರಾಜಧರ್ಮವನ್ನು ಅನುಸರಿಸಿ ನಾನೇ ಈ ಕಾರ್ಯವನ್ನು ನಿನಗೆ ವಹಿಸಲೇಬೇಕಾಗಿದೆ. ನಿನಗೆ ಸಮಾನನಾದ ವೀರನು ಈ ಲಂಕೆಯಲ್ಲಿ ಮತ್ತಾರೂ ಇಲ್ಲ. ನೀನು ಅವಶ್ಯವಾಗಿ ಯುದ್ಧಕ್ಕೆ ಹೋಗಲೇಬೇಕು; ಯಾವ ವಿಧದಿಂದಲಾದರೂ ವಿಜಯಿಯಾಗಿ ಬರಲೇಬೇಕು. ಇಷ್ಟಸಿದ್ಧಿಗಾಗಿ ನೀನು ಸಮಸ್ತ ಮಂತ್ರಾಸ್ತ್ರಗಳನ್ನೂ ಪ್ರಯೋಗಿಸಬೇಕು" ಎಂದು ಹೇಳಿದನು.

ತಂದೆಯ ಅಪ್ಪಣೆಯಾದೊಡನೆಯೆ ಇಂದ್ರಜಿತ್ತು ಆತನಿಗೆ ಪ್ರದಕ್ಷಿಣ ನಮಸ್ಕಾರ ಮಾಡಿ ಪ್ರಯಾಣಸನ್ನದ್ಧನಾದನು. ಆತನ ಇಷ್ಟಮಿತ್ರರೆಲ್ಲರೂ ಆತನನ್ನು ಸ್ತುತಿಸು ತ್ತಿರಲು, ಕಮಲಪತ್ರದಂತೆ ನೇತ್ರವುಳ್ಳ ಆ ರಾಜಕುಮಾರನು ರಣಲೀಲಾ ಉತ್ಸಾಹ ದಿಂದ ರಥವನ್ನೇರಿ ಯುದ್ಧಕ್ಕೆ ಹೊರಟನು. ಬಿಳಿಯ ಕೋರೆದಾಡೆಗಳುಳ್ಳ ನಾಲ್ಕು ಹುಲಿಗಳು ಆ ರಥವನ್ನು ಎಳೆದುಕೊಂಡು ಹೊರಟುವು. ಆತನ ರಥಧ್ವನಿಯೂ

ಧನುಷ್ಟಂಕಾರವೂ ದಿಕ್ಕುಗಳಲ್ಲಿ ಪ್ರತಿಧ್ವನಿತವಾಗುತ್ತಿರಲು, ಅದನ್ನು ಕೇಳಿದ ಹನುಮಂತನು ಮತ್ತೊಮ್ಮೆ ಯುದ್ಧವಾಗುವುದೆಂದರಿತು ಸಂತಸಗೊಂಡನು. ಇಂದ್ರಜಿತ್ತು ತನ್ನ ಬಿಲ್ಲುಬಾಣಗಳನ್ನು ಸಜ್ಜುಗೊಳಿಸುತ್ತಾ ಬರುತ್ತಿರಲು ದಶದಿಶೆಗಳಲ್ಲಿಯೂ ಕತ್ತಲು ಮುಸುಕಿತು; ಕ್ರೂರ ಮೃಗಗಳು ವಿಕಟಧ್ವನಿಯಲ್ಲಿ ಕಿರಿಚಿಕೊಂಡುವು; ಆಕಾಶಗಾಮಿಗಳಾದ ಯಕ್ಷಪನ್ನಗಾದಿಗಳು ಇಂದ್ರಜಿತುವಿನ ಯುದ್ಧ ಕೌಶಲವನ್ನು ನೋಡುವುದಕ್ಕಾಗಿ ಆಕಾಶದಲ್ಲಿ ನೆರೆದರು; ಆಕಾಶದಲ್ಲಿ ಪಕ್ಷಿಗಳು ಹಿಂಡು ಹಿಂಡಾಗಿ ಸೇರಿ ಹರುಷದಿಂದ ಕುಕಿಲಿಟ್ಟುವು. ಇಂದ್ರಜಿತ್ತು ಚಿತ್ರಮಯವಾದ ಬಿಲ್ಲನ್ನು ಕೈಲಿ ಹಿಡಿದು ಸಿಡಿಲು ಹೊಡೆದಂತೆ ಅದನ್ನು ಮಿಡಿಯುತ್ತಾ ಅಶೋಕವನದ ಬಾಗಿಲಿಗೆ ಬಂದನು. ಇಂದ್ರಜಿತ್ತನ್ನು ಕಂಡೊಡನೆಯೆ ಹನುಮಂತನು ಸಿಂಹನಾದವನ್ನು ಮಾಡಿ ಬೆಳೆಯಲು ತೊಡಗಿದನು. ಇಬ್ಬರೂ ಕದನಕ್ಕಾಗಿ ಪರಸ್ಪರ ಇದಿರಾದರು. ಇಬ್ಬರೂ ಪ್ರಚಂಡ ವೇಗವುಳ್ಳವರು; ಇಬ್ಬರೂ ಮಹಾ ಪರಾಕ್ರಮಿಗಳು. ಇಬ್ಬರೂ ಯುದ್ಧದಲ್ಲಿ ಹಿಂಜರಿಯದ ಉತ್ಸಾಹಿಗಳು. ಸಮಾನಬಲರಾದ ಆ ಇಬ್ಬರೂ ಸಂಧಿಸಿ, ದೇವೇಂದ್ರನೂ ದಾನವೇಂದ್ರನೂ ಪರಸ್ಪರ ಯುದ್ಧಕ್ಕೆ ನಿಂತಂತೆ ಒಬ್ಬರನೊಬ್ಬರು ಇದಿರಿಸಿ ನಿಂತರು.

ಇಂದ್ರಜಿತ್ತು ತನ್ನ ಶಸ್ತ್ರಾಸ್ತ್ರಗಳ ಕಲೆಯನ್ನು ಮೆರೆಯತೊಡಗಿದನು. ಹನುಮಂತನು ಆಕಾಶದಲ್ಲಿ ಚಿತ್ರಗತಿಯಿಂದ ತಿರುಗುತ್ತಾ ಆ ಬಾಣಗಳ ಪೆಟ್ಟಿನಿಂದ ತಪ್ಪಿಸಿಕೊಳ್ಳುತ್ತಿದ್ದನು. ಇಂದ್ರಜಿತ್ತು ಗುರಿಹಿಡಿದು ಹೊಡೆಯುವುದರಲ್ಲಿ ಕುಶಲಿ. ಹನುಮಂತನು ತನ್ನ ಗತಿಚಾತುರ್ಯದಿಂದ ಅವುಗಳನ್ನು ವ್ಯರ್ಥಮಾಡುವುದರಲ್ಲಿ ನಿಪುಣ. ಹಾರಿ ಬರುತ್ತಿದ್ದ ಕೆಲವು ಬಾಣಗಳನ್ನು ಹನುಮಂತನು ಕೈಯಿಂದ ಹಿಡಿದು ಅತ್ತ ಒಗೆಯುತ್ತಿದ್ದನು. ಇವನನ್ನು ನಿಗ್ರಹಿಸುವ ಉಪಾಯವೇನೆಂದು ಇಂದ್ರಜಿತ್ತಿಗೆ ಹೊಳೆಯಲಿಲ್ಲ. ಇಂದ್ರಜಿತ್ತನ್ನು ನಿಗ್ರಹಿಸುವುದಕ್ಕೆ ಹನುಮಂತನಿಗೂ ಅವಕಾಶ ದೊರೆಯಲೊಲ್ಲದು. ಇಬ್ಬರೂ ತಂತಮ್ಮ ಸಂರಕ್ಷಣೆಯ ಕರ್ತವ್ಯದಲ್ಲಿಯೆ ತೊಡಗಿರಬೇಕಾಗಿದ್ದುದರಿಂದ ಪರಸ್ಪರ ಘಾತಿಸಲು ಅವಕಾಶವೆ ಸಿಕ್ಕದು. ಬಹುಕಾಲ ಹೀಗೆಯೆ ಯುದ್ಧ ನಡೆಯಿತು. ಕಡೆಗೆ ಇಂದ್ರಜಿತ್ತು ಹನುಮಂತನನ್ನು ಬಾಣದಿಂದ ಹೊಡೆದು ಕೊಲ್ಲುವುದು ಅಸಾಧ್ಯವೆಂಬುದನ್ನು ಮನಗಂಡನು. ಕೊನೆಗೆ ಆ ಕೋತಿಯನ್ನು ಹಿಡಿದು ಕಟ್ಟುವುದಕ್ಕಾದರೂ ಉಪಾಯ ದೊರೆತರೆ ಸಾಕೆಂದು ಚಿಂತಿಸಿದನು. ಆತನಿಗೆ ಒಂದು ಉಪಾಯ ಹೊಳೆಯಿತು. ಬ್ರಹ್ಮಾಸ್ತ್ರವನ್ನು ಅನುಸಂಧಾನಮಾಡಿ ಅದನ್ನು ಹನುಮಂತನ ಮೇಲೆ ಪ್ರಯೋಗಿಸಿದನು. ಇದರಿಂದ ಇಂದ್ರಜಿತ್ತುವಿನ ಅಭೀಷ್ಟ ನೆರವೇರಿತು. ಹನುಮಂತನು ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದು ನೆಲಕ್ಕುರುಳಿದನು. ಆದರೂ ಮನಸ್ಸಿನಲ್ಲಿ "ಹಿಂದೆ ಬ್ರಹ್ಮದೇವರು ನನಗೆ ವರವನ್ನು ಕೊಟ್ಟಿದ್ದಾನೆ; ಒಂದು ಮುಹೂರ್ತಕಾಲವಾದರೆ ಇದರಿಂದ ನಾನು ಮುಕ್ತನಾಗಬಲ್ಲೆ; ಮಹಾತ್ಮನಾದ ಬ್ರಹ್ಮನಿಗೆ ಸಂಬಂಧಪಟ್ಟ ಈ ಅಸ್ತ್ರಕ್ಕೆ ಗೌರವ ಕೊಡಬೇಕಾದುದು ನನ್ನ ಕರ್ತವ್ಯ.

ಇದಕ್ಕೆ ಕಟ್ಟುಬಿದ್ದಿರುವ ನನ್ನನ್ನು ಈ ರಾಕ್ಷಸರು ಇಲ್ಲಿಂದ ರಾವಣನ ಬಳಿಗೆ ಹಿಡಿದು ಕೊಂಡು ಹೋಗಬಹುದು. ಅದೂ ಒಂದು ಗುಣವೇ. ರಾಕ್ಷಸೇಶ್ವರನಾದ ರಾವಣ ನೊಡನೆ ಸ್ವಲ್ಪ ಮಾತನಾಡುವ ಅವಕಾಶ ದೊರೆಯುತ್ತದೆ ನನಗೆ" ಎಂದುಕೊಂಡು ಕೈಕಾಲು ಉಡುಗಿದವನಂತೆ ನಿಶ್ಚೇಷ್ಟಿತನಾಗಿದ್ದನು.

ಮಾರುತಿ ಬಿದ್ದುದನ್ನು ಕಾಣುತ್ತಲೆ ರಾಕ್ಷಸರೆಲ್ಲರೂ ಅವನನ್ನು ಸುತ್ತಿ ಮುತ್ತಿದರು. ಅತನನ್ನು ಪರಿಪರಿಯಾಗಿ ಗದರಿಸಿ ಬೈಯುತ್ತಾ ಅವರು ಬಲವಾದ ಹಗ್ಗಗಳನ್ನು ತಂದು ಆ ಘೋರರೂಪಿಯ ಕೈಕಾಲುಗಳನ್ನು ಬಲವಾಗಿ ಬಿಗಿದು ಕಟ್ಟಿದರು. ಆ ವೇಳೆಗೆ ಬ್ರಹ್ಮಾಸ್ತ್ರದ ಕಟ್ಟು ಬಿಟ್ಟುಹೋಯಿತು. ಇದು ಹನುಮಂತ ನಿಗೆ ಗೊತ್ತಾಗದಿದ್ದರೂ ಇಂದ್ರಜಿತ್ತುವಿಗೆ ಕಾಣಿಸಿತು. ಬ್ರಹ್ಮಾಸ್ತ್ರದಿಂದ ಬಿಗಿದವನನ್ನು ಬೇರೆಯ ಕಟ್ಟುಗಳಿಂದ ಬಿಗಿದರೆ ಅದು ಬಿಟ್ಟುಹೋಗುವುದು. ಇದನ್ನರಿಯದೆ ಅವಿವೇಕಿ ಗಳಾದ ರಾಕ್ಷಸರು ಮಾಡಿದ ಅಕಾರ್ಯವನ್ನು ಕಂಡು ಇಂದ್ರಜಿತ್ತು ಮನಸ್ಸಿನಲ್ಲಿಯೆ ಮಿಡುಕಿಕೊಂಡನು. ಆದರೆ ಕಾರ್ಯ ಮಿಂಚಿಹೋಗಿತ್ತು. ಆದ್ದರಿಂದ ಹಗ್ಗಗಳಿಂದ ಕಟ್ಟಿಹಾಕಿದ ಹನುಮಂತನನ್ನು ರಾಕ್ಷಸರಿಂದ ಎಳೆಸಿಕೊಂಡು ಹೊರಟನು. ಅವರು ಅವನನ್ನು ದೊಣ್ಣೆಗಳಿಂದ ಹೊಡೆಯುತ್ತಾ ಸಭೆಯಲ್ಲಿ ಕುಳಿತಿದ್ದ ರಾವಣನ ಬಳಿಗೆ ಎಳೆದೊಯ್ದರು. ಇಂದ್ರಜಿತು ಅವನನ್ನು ರಾವಣನ ಇದಿರಿಗೆ ನಿಲ್ಲಿಸಿ "ಇಗೋ ಇವನೇ ಆ ವಾನರ!" ಎಂದನು. ಸಭೆಯಲ್ಲಿದ್ದ ರಾಕ್ಷಸರೆಲ್ಲರೂ ಆ ಮಹಾಕಪಿಯನ್ನು ಕಂಡು, "ಇವನು ಯಾರೊ? ಯಾರ ಸಂಬಂಧಿಯೊ? ಇಲ್ಲಿಗೇಕೆ ಬಂದನೊ? ಯಾವ ಕೆಲಸ ಕ್ಕಾಗಿ ಯಾವನು ಕಳುಹಿಸಿದ್ದಾನೊ?" ಎಂದು ತಮ್ಮತಮ್ಮಲ್ಲಿಯೆ ಮಾತನಾಡಿ ಕೊಳ್ಳುತ್ತಿದ್ದರು. ಮತ್ತೆ ಕೆಲವರು "ಇವನನ್ನು ಈಗಲೆ ಕೊಂದುಬಿಡಿರಿ; ಜೀವಸಹಿತ ಸುಟ್ಟುಹಾಕಿಬಿಡಿ; ಕೊಂದು ತಿಂದುಹಾಕಿಬಿಡಿರಿ" ಎಂದು ಕೂಗಿಕೊಂಡರು.

ಮಧ್ಯಾಹ್ನದ ಸೂರ್ಯನಂತೆ ತೇಜೋಮೂರ್ತಿಯಾಗಿ ಬೆಳಗುತ್ತಿದ್ದ ರಾವಣ ನನ್ನೂ ಅತನ ಪಾದಮೂಲದಲ್ಲಿ ನಿಂತಿದ್ದ ಮಂತ್ರಿ ಮಹತ್ತರನ್ನೂ ಅನರ್ಘ್ಯರತ್ನ ಗಳಿಂದ ಅಲಂಕೃತವಾದ ಆ ರಾಜಸಭೆಯನ್ನೂ ಹನುಮಂತನು ಒಮ್ಮೆ ದೃಷ್ಟಿಸಿ ನೋಡಿದನು. ಅಷ್ಟರಲ್ಲಿ ರಾವಣನು ಆ ಘೋರ ವಾನರನನ್ನು ಒಮ್ಮೆ ಕಿಡಿಗಾರುವ ಕಣ್ಣುಗಳಿಂದ ನೋಡಿ, ಅವನ ಸಂಗತಿಯನ್ನು ವಿಚಾರಿಸುವಂತೆ ತನ್ನ ಪ್ರಧಾನಮಂತ್ರಿಗೆ ತಿಳಿಸಿದನು. ಅವರು ಹನುಮಂತನನ್ನು ಕುರಿತು "ನೀನು ಯಾರು? ಇಲ್ಲಿಗೇಕೆ ಬಂದೆ? ನಿನ್ನನ್ನು ಕಳುಹಿಸಿದವರು ಯಾರು?" ಎಂದು ಕೇಳಿದರು. ಅತನು ನೇರವಾಗಿ ಉತ್ತರ ಕೊಟ್ಟನು—"ನಾನು ವಾನರೇಶ್ವರನಾದ ಸುಗ್ರೀವನ ದೂತ. ಅತನ ಆಜ್ಞೆಯಂತೆ ಇಲ್ಲಿಗೆ ಬಂದಿದ್ದೇನೆ" ಇಷ್ಟು ಹೇಳಿ, ಹನುಮಂತನು ಮತ್ತೊಮ್ಮೆ ರಾವಣನನ್ನು ಅಪಾದಮಸ್ತಕವೂ ನಿಟ್ಟಿಸಿ ನೋಡಿದನು. ಆ ರಾಕ್ಷಸರಾಜನು ಸ್ವಭಾವದಿಂದಲೇ ತೇಜಸ್ವಿಯಾದವನು. ಅತನ ತಲೆಯ ಮೇಲೆ ಮುತ್ತಿನ ಕಿರೀಟವೂ ಮೈಯಲ್ಲಿ ಧರಿಸಿದ ವಜ್ರಖಚಿತವಾದ ಸ್ವರ್ಣಾಭರಣಗಳೂ ಅತನ ತೇಜಸ್ಸನ್ನು ಮತ್ತಷ್ಟು ಹೆಚ್ಚಿಸು

ತ್ತಿದ್ದುವು. ಉಟ್ಟಿದ್ದ ಪಟ್ಟೆಮಡಿಯೂ ಮೈಗೆಲ್ಲಾ ಲೇಪಿಸಿಕೊಂಡಿದ್ದ ರಕ್ತಚಂದನ ಕಸ್ತೂರಿಗಳೂ ಆತನ ಆಕಾರಕ್ಕೆ ಕಳೆಗೊಡುವಂತಿದ್ದುವು. ಆತನ ಆ ಹತ್ತು ತಲೆಗಳೂ ಕಿರೀಟಾದಿ ಆಭರಣಗಳಿಂದ ಅಲಂಕೃತವಾಗಿವೆ. ನೀಲಪರ್ವತದಂತೆ ಬೆಳಗುತ್ತಿರುವ ಆತನ ವಿಸ್ತಾರವಾದ ಎದೆಯಲ್ಲಿ ಪೂರ್ಣಚಂದ್ರನಂತೆ ಬೆಳಗುತ್ತಿರುವ ಪದಕದಿಂದ ಕೂಡಿದ ಮುತ್ತಿನ ಹಾರ, ತೋಳ್ಬಳೆಗಳಿಂದಲೂ ಕಡಗಗಳಿಂದಲೂ ಅಲಂಕೃತವಾಗಿರುವ ಇಪ್ಪತ್ತು ತೋಳುಗಳು, ಆ ಕೆಂಪೇರಿದ ಕಣ್ಣುಗಳು, ಅರೆತೆರೆದ ಬಾಯಿಗಳು, ಪ್ರಜ್ವಲಿಸುತ್ತಿರುವ ಕೋರೆದಾಡೆಗಳು, ಜೋಲಾಡುವ ತುಟಿಗಳು—ನೋಡಿದೊಡನೆಯೆ ಎಂತಹವರಲ್ಲಿಯೂ ಭಯವನ್ನು ಕೆರಳಿಸುವ ಭಯಂಕರ ರೂಪವದು. ಆ ರಾಕ್ಷಸರಾಜನು ದಿವ್ಯವಾದ ರತ್ನಗಂಬಳಿಯನ್ನು ಹಾಸಿರುವ ಸ್ಫಟಿಕದ ಸಿಂಹಾಸನದ ಮೇಲೆ ಕುಳಿತಿದ್ದನು. ಸರ್ವಾಲಂಕಾರಭೂಷಿತೆಯರಾದ ರಮಣಿಯರು ಆತನಿಗೆ ಚಾಮರಸೇವೆ ಸಲ್ಲಿಸುತ್ತಿದ್ದರು. ಮಂತ್ರಾಲೋಚನೆಯಲ್ಲಿ ಪ್ರವೀಣರಾದ ಪ್ರಹಸ್ತ, ಮಹಾಪಾರ್ಶ್ವ ಮೊದಲಾದ ಮಂತ್ರಿಗಳು ಆತನ ಬಳಿಯಲ್ಲಿಯೆ ಆಸನಾಸೀನರಾಗಿದ್ದರು. ಮಂದರಗಿರಿ ಶಿಖರದ ಮೇಲೆ ಮಂಡಿಸಿರುವ ಮಹಾಮೇಘದಂತೆ ಉನ್ನತಾಸನದಲ್ಲಿ ಬೆಳಗುತ್ತಿದ್ದ ಆ ರಾವಣನ ಅಸಮಾನ ತೇಜಸ್ಸನ್ನೂ ವೈಭವವನ್ನೂ ಕಂಡು ಹನುಮಂತನು "ಅಯ್ಯೋ! ಇವನ ರೂಪವೇನು, ಧೈರ್ಯವೇನು, ಸತ್ವವೆಂತಹುದು, ದಿವ್ಯಕಾಂತಿ ಹೇಗಿದೆ! ಇವನಲ್ಲಿ ಅಧರ್ಮ ಬುದ್ಧಿಯೊಂದು ಪ್ರಬಲಿಸದೆ ಇದ್ದಿದ್ದರೆ ಈತನು ದೇವಲೋಕವನ್ನೆ ಆಳಲು ಅರ್ಹನಾಗುತ್ತಿದ್ದನಲ್ಲಾ! ಏನು ಮಾಡುವುದು? ಕ್ರೂರನಾದ ಈ ನೃಶಂಸನ ನಿಂದಿತ ಕಾರ್ಯಗಳನ್ನು ಕಂಡು ಲೋಕವೆಲ್ಲವೂ ಹೆದರಿ ತತ್ತರಗುಟ್ಟುತ್ತಿದೆ. ಈ ಪಾಪಿಯೋ ಕ್ರುದ್ಧನಾದರೆ ಈ ಪ್ರಪಂಚವನ್ನೆ ಏಕಾರ್ಣವವನ್ನಾಗಿ ಮಾಡಬಲ್ಲ ಶಕ್ತನಾಗಿದ್ದಾನೆ" ಎಂದುಕೊಂಡನು.

---

# ೧೭

# ರಾವಣನಿಗೆ ಹಿತೋಪದೇಶ

ಹನುಮಂತನನ್ನು ನೋಡಿ ರಾವಣನ ಮನಸ್ಸಿನಲ್ಲಿ ಏನೇನೋ ಭಾವನೆಗಳು ಉದಿಸಿದುವು. "ಪೂರ್ವದಲ್ಲಿ ನಾನು ಕೈಲಾಸಪರ್ವತವನ್ನು ಕದಲಿಸಿದಾಗ ಕ್ರುದ್ಧನಾಗಿ ಶಪಿಸಿದ ನಂದಿಕೇಶ್ವರನೆ ಈ ವಾನರ ರೂಪದಿಂದ ಬಂದಿರಬಹುದೆ? ಅಥವಾ ರಾಕ್ಷಸಾಗ್ರೇಸರ ಚಕ್ರವರ್ತಿಯಾದ ಬಾಣಾಸುರನು ಈ ಕೋತಿಯ ವೇಷವನ್ನು ಧರಿಸಿ ಬಂದಿರಬಹುದೊ! ಇದೇನು ಭಯಂಕರ ರೂಪು" ಎನ್ನಿಸಿತು ಆತನಿಗೆ. ಆದರೂ ಆ ಘೋರ ವಾನರನು ಮಾಡಿದ್ದ ಹಾವಳಿಯನ್ನು ನೆನಸಿಕೊಂಡೊಡನೆಯೆ ಆತನಿಗೆ ಬಹುಕೋಪ ಬಂದಿತು. ಹಲ್ಲುಗಳನ್ನು ಕಟಕಟ ಕಡಿಯುತ್ತಾ ಪ್ರಹಸ್ತನನ್ನು ಕುರಿತು "ಎಲೈ ಮಂತ್ರಿಯೆ, ಈ ವಾನರನಾರು? ಎಲ್ಲಿಂದ ಬಂದನು? ಏಕೆ ಬಂದನು? ಎಲ್ಲವನ್ನೂ ವಿಸ್ತಾರವಾಗಿ ವಿಚಾರಿಸು" ಎಂದನು. ಪ್ರಹಸ್ತನು ಹನುಮಂತನನ್ನು ಕೇಳಿದನು— "ಎಲೈ ವಾನರನೆ, ನಿನಗೆ ಮಂಗಳವಾಗಲಿ! ನೀನು ಸ್ವಲ್ಪವೂ ಭಯಪಡದೆ ಸಮಾಧಾನದಿಂದ ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಕೊಡು. ನೀನಾರು? ನಿನ್ನನ್ನು ಇಲ್ಲಿಗೆ ಕಳುಹಿಸಿದವರಾರು? ಏನು ದೇವೇಂದ್ರನೆ? ಅಥವಾ ಕುಬೇರನೆ? ಅಥವಾ ಮಹಾವಿಷ್ಣುವೆ ನಿನ್ನನ್ನು ಈ ರೂಪದಿಂದ ಇಲ್ಲಿಗೆ ಕಳುಹಿಸಿರುವನೊ? ಇದ್ದುದನ್ನು ಇದ್ದಂತೆ ಹೇಳಿದರೆ ನಿನ್ನನ್ನು ಬಿಡುಗಡೆ ಮಾಡುತ್ತೇವೆ. ನೋಡುವುದಕ್ಕೆ ನೀನು ವಾನರನಂತೆ ಕಂಡರೂ ನಿಜವಾಗಿಯೂ ನೀನು ವಾನರನಲ್ಲ. ನಿಜವನ್ನು ಹೇಳಿಬಿಡು. ಸುಳ್ಳನ್ನು ಏನಾದರೂ ಆಡಿದೆಯೊ ನಿನ್ನ ಪ್ರಾಣ ಉಳಿಯುವುದಿಲ್ಲ. ಈ ನಗರಕ್ಕೆ ಏತಕ್ಕಾಗಿ ಬಂದೆ? ಯಾರು ಕಳುಹಿಸದೆ ನೀನಾಗಿಯೆ ಬಂದಿದ್ದರೆ ಬಂದುದಕ್ಕೆ ಏನಾದರೂ ಕಾರಣವಿದ್ದಿರಬೇಕಲ್ಲವೆ? ಎಲ್ಲಿ, ಎಲ್ಲವನ್ನೂ ವಿಸ್ತಾರವಾಗಿ ಹೇಳು" ಎಂದನು.

ಹನುಮಂತನಿಗೆ ರಾವಣನೊಡನೆಯೆ ನೇರವಾಗಿ ಮಾತನಾಡಬೇಕೆಂದು ಆಸೆ. ಆದ್ದರಿಂದ ಪ್ರಹಸ್ತನಿಗೆ ಪ್ರತ್ಯುತ್ತರ ಕೊಡದೆ ರಾವಣನನ್ನೇ ಕುರಿತು, "ಅಯ್ಯಾ ರಾಕ್ಷಸಾಧಿಪತಿ, ನನ್ನನ್ನು ಇಂದ್ರ, ಯಮ, ವರುಣ, ಕುಬೇರ ಯಾರೂ ಕಳುಹಿಸಲಿಲ್ಲ. ವಿಷ್ಣು ಕಳಿಸಿದ್ದರಿಂದ ಈ ವೇಷ ಹಾಕಿಕೊಂಡು ಬಂದಿರಬೇಕೆಂಬ ನಿನ್ನ ತರ್ಕವೂ ತಪ್ಪು. ಈ ವಾನರ ರೂಪ ನನಗೆ ಸ್ವಭಾವ ಸಿದ್ಧವಾದುದು; ವೇಷವಲ್ಲ. ನಾನು ಜಾತ್ಯಾ ವಾನರನೆ. ರಾಕ್ಷಸೇಶ್ವರನಾದ ನಿನ್ನ ದರ್ಶನ ಸುಲಭಸಾಧ್ಯವಲ್ಲವಾದುದರಿಂದ ಅಸಾಧ್ಯಕಾರ್ಯಕ್ಕೆ ಕೈಯಿಡಬೇಕಾಯಿತು. ನಿನ್ನ ಸಂದರ್ಶನಾಪೇಕ್ಷೆಯಿಂದಲೆ ಅಶೋಕವನವನ್ನು ನಾಶಮಾಡಿದುದು. ಆಗ ರಾಕ್ಷಸರು ನನ್ನ ಮೇಲೆ ಯುದ್ಧಕ್ಕೆ ಬಂದರು. ನಾನು ಆತ್ಮಸಂರಕ್ಷಣಾರ್ಥವಾಗಿ ಅವರನ್ನು ಕೊಂದೆ. ಯಾವ ಅಸ್ತ್ರವಾಗಲಿ ಯಾವ

ಪಾಶವಾಗಲಿ ನನ್ನನ್ನು ಏನೂ ಮಾಡಲಾರದು. ದೇವದಾನವರಲ್ಲಿ ಯಾರೂ ನನ್ನನ್ನು ಘಾತಿಸಲಾರರು. ನಿನ್ನನ್ನು ನೋಡುವ ಉದ್ದೇಶದಿಂದಲೆ ಇಂದ್ರಜಿತ್ತುವಿನ ಬ್ರಹ್ಮಾಸ್ತ್ರಕ್ಕೆ ನಾನು ವಶನಾದೆ. ನನ್ನನ್ನು ರಾಕ್ಷಸರು ಹಗ್ಗದಿಂದ ಬಿಗಿದಾಗಲೆ ಬ್ರಹ್ಮಾಸ್ತ್ರದ ಕಟ್ಟು ಕಳಚಿಹೋಯಿತು. ಆದರೂ ನಾನು ಈ ರಾಕ್ಷಸರ ವಶವಾಗಿ ಬಂದುದು ನಿನ್ನನ್ನು ಕಾಣುವುದಕ್ಕಾಗಿಯೆ. ನಾನು ನಿನ್ನ ಬಳಿಗೆ ಒಂದು ರಾಜಕಾರ್ಯಕ್ಕಾಗಿ ಬಂದಿರುತ್ತೇನೆ. ಅದನ್ನು ವಿಸ್ತಾರವಾಗಿ ತಿಳಿಸುವೆನು. ಸಾವಧಾನದಿಂದ ಕೇಳು" ಎಂದು ತಾನು ಬಂದ ಸಮಾಚಾರವನ್ನೆಲ್ಲಾ ವಿಸ್ತಾರವಾಗಿ ತಿಳಿಸಿದನು.

"ರಾಕ್ಷಸ ಸಾರ್ವಭೌಮ, ಸುಗ್ರೀವ ಮಹಾರಾಜನ ಆಜ್ಞೆಯಂತೆ ನಾನು ಇಲ್ಲಿಗೆ ಬಂದಿದ್ದೇನೆ. ನಿನ್ನ ಸೋದರ ಸಮಾನನಾದ ಆತನು ನಿನ್ನ ಕುಶಲವನ್ನು ಕೇಳಿ, ಈ ಮುಂದೆ ಹೇಳುವ ವಿಚಾರವನ್ನು ನಿನಗೆ ತಿಳಿಸುವಂತೆ ನನಗೆ ಅಪ್ಪಣೆ ಮಾಡಿದ್ದಾನೆ– ಸಮಸ್ತ ಲೋಕಕ್ಕೂ ತಂದೆಯಂತಿರುವ ದಶರಥನೆಂಬ ಮಹಾರಾಜನಿದ್ದನು. ಆತನ ಹಿರಿಯ ಮಗನೆ ಲೋಕಾನಂದಕರನಾದ ಶ್ರೀರಾಮಚಂದ್ರ. ಆತನು ತನ್ನ ತಂದೆಯ ಸತ್ಯ ಪ್ರತಿಜ್ಞೆಗಾಗಿ ಮಡದಿಯಾದ ಜಾನಕಿಯನ್ನೂ ತಮ್ಮನಾದ ಲಕ್ಷ್ಮಣನನ್ನೂ ಕರೆದುಕೊಂಡು ವನವಾಸವನ್ನು ಕೈಕೊಂಡನು. ಅವನು ದಂಡಕಾರಣ್ಯದಲ್ಲಿರುವಾಗ ಜಾನಕಿಯ ಅಪಹಾರವಾಯಿತು. ಅರಿಭಯಂಕರರಾದ ರಾಮಲಕ್ಷ್ಮಣರು ಆಕೆಯನ್ನು ಅರಸುತ್ತಾ ಋಶ್ಯಮೂಕಪರ್ವತಕ್ಕೆ ಬರಲು ಅಲ್ಲಿ ಸುಗ್ರೀವ ಮಹಾರಾಜನೊಡನೆ ಅವರಿಗೆ ಸ್ನೇಹವಾಯಿತು. ಶ್ರೀರಾಮನು ಸುಗ್ರೀವನನ್ನು ವಾನರ ರಾಜ್ಯಕ್ಕೆ ದೊರೆಯಾಗಿ ಮಾಡುವುದಾಗಿಯೂ, ಅದಕ್ಕೆ ಪ್ರತಿಯಾಗಿ ಆತನು ಸೀತಾದೇವಿಯನ್ನು ಹುಡುಕಿಕೊಡುವುದಾಗಿಯೂ ಪರಸ್ಪರ ಪ್ರತಿಜ್ಞೆ ಮಾಡಿದರು. ಅದರಂತೆ ಶ್ರೀರಾಮನು ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹರಿಸಿ ಆತನಿಗೆ ವಾನರ ರಾಜ್ಯದ ಪಟ್ಟವನ್ನು ಕಟ್ಟಿದನು. ಎಲೈ ರಾಕ್ಷಸೇಶ್ವರ, ನಿನಗೆ ವಾಲಿಯ ಪರಿಚಯವಿದೆ. ಆ ಮಹಾಪರಾಕ್ರಮಿಯನ್ನು ಶ್ರೀರಾಮನು ಒಂದೇ ಬಾಣದಿಂದ ಸಂಹಾರಮಾಡಿದನು. ಅನಂತರ ಸುಗ್ರೀವ ಮಹಾರಾಜನು ಜಾನಕಿಯನ್ನು ಹುಡುಕುವುದಕ್ಕಾಗಿ ಸಮರ್ಥರಾದ ವಾನರರನ್ನು ದಶದಿಕ್ಕುಗಳಿಗೂ ಅಟ್ಟಿದನು. ಆ ವಾನರರು ಸಾಮಾನ್ಯರಲ್ಲ. ಕೆಲವರು ಗರುಡನಿಗೆ ಸಮಾನರಾದವರು ; ಮತ್ತೆ ಕೆಲವರು ವಾಯುವೇಗವುಳ್ಳವರು. ಅಂತಹ ವಾನರರಲ್ಲಿ ನಾನೂ ಒಬ್ಬನು. ಶತಯೋಜನ ವಿಸ್ತೀರ್ಣವುಳ್ಳ ಸಾಗರವನ್ನು ದಾಟಿ ಇಲ್ಲಿಗೆ ಬಂದಿದ್ದೇನೆ. ವಾಯುದೇವನ ಔರಸಪುತ್ರನಾದ ನನ್ನ ಹೆಸರು ಹನುಮಂತನೆಂದು. ನಾನು ಈ ಲಂಕೆಯಲ್ಲಿ ಸೀತಾಮಾತೆಯನ್ನು ಅರಸುತ್ತಿರಲು ಆಕೆ ನಿನ್ನ ಮನೆಯಲ್ಲಿ ಕಾಣಿಸಿದಳು. ಮಹಾರಾಜ, ನನ್ನ ಹಿತೋಕ್ತಿಗಳಿಗೆ ಕಿವಿಗೊಡು. ನೀನು ಸಕಲ ಧರ್ಮಾರ್ಥಮರ್ಮಗಳನ್ನು ಬಲ್ಲವನು. ಮಹತ್ತಾದ ತಪಸ್ಸನ್ನೆ ಮಾಡಿ ಮಹಾಮಹಿಮನಾಗಿರುವವನು. ಪ್ರಾಜ್ಞನಾದ ನೀನು ಪರಸ್ತ್ರೀಯನ್ನು ಎಳೆತಂದು ಹೀಗೆ ನಿರ್ಬಂಧದಲ್ಲಿಡುವುದು ಸರ್ವಾತ್ಮನಾ ಸರಿಯಲ್ಲ. ಪರದಾರಾಪಹರಣವು ಮಹಾಪಾತಕವೆಂಬುದೂ

ಸರ್ವನಾಶಕ್ಕೂ ಕಾರಣವಾಗುವುದೆಂಬುದೂ ನಿನಗೆ ತಿಳಿಯದ ವಿಷಯವಲ್ಲ. ರಾಕ್ಷಸ ಸಾರ್ವಭೌಮ, ನಿನ್ನ ಮಹಾ ಪರಾಕ್ರಮವನ್ನು ನಂಬಿ ಅಧರ್ಮದಲ್ಲಿ ಪ್ರವರ್ತಿಸ ಬೇಡ. ಶ್ರೀರಾಮಲಕ್ಷ್ಮಣರ ಎದುರಿಗೆ ನಿಂತು ಯುದ್ಧಮಾಡಬಲ್ಲ ವೀರರು ಮೂರು ಲೋಕಗಳಲ್ಲಿಯೂ ಯಾರೂ ಇಲ್ಲ. ಆದ್ದರಿಂದ ನಮ್ಮ ರಾಜನಾದ ಸುಗ್ರೀವನು ನಿನ್ನನ್ನು ಕುರಿತು "ಜಾನಕಿಯನ್ನು ಶ್ರೀರಾಮನಿಗೆ ತಂದೊಪ್ಪಿಸು"ವಂತೆ ತಿಳಿಸಿರು ತ್ತಾನೆ. ಹಾಗೆ ಮಾಡುವುದು ನಿನಗೂ ಶ್ರೇಯಸ್ಕರ. ಪತಿವ್ರತೆಯಾದ ಸೀತಾದೇವಿ ಪಂಚಾಸ್ಯ ಪನ್ನಗಿಯಿದ್ದಂತೆ. ಆಕೆಯನ್ನು ಕೆಣಕಿ ನಿನ್ನ ಪ್ರಾಣಗಳನ್ನು ಕಳೆದುಕೊಳ್ಳ ಬೇಡ. ನೀನು ಗಳಿಸಿರುವ ಪುಣ್ಯವೆಲ್ಲವೂ ಈ ಪರಸ್ತ್ರೀವ್ಯಾಮೋಹದಿಂದ ನಾಶವಾಗಿ ಹೋಗುತ್ತದೆ. ಬ್ರಹ್ಮನು ನಿನಗೆ ಸರ್ವಾವಧ್ಯತ್ವವನ್ನು ಕರುಣಿಸಿರುವನಾದರೂ ಈ ಪಾಪವು ಆ ವರದ ಬೇರನ್ನು ಕೊಯ್ದು ಹಾಕಿಬಿಡುತ್ತದೆ. ಶ್ರೀರಾಮನು ಸಾಮಾನ್ಯ ಮಾನವನಲ್ಲವೆಂಬುದು ನಿನಗೆ ವಿದಿತವಾಗಿಯೆ ಇದೆ. ಜನಸ್ಥಾನದಲ್ಲಿ ಆತನನ್ನು ಇದಿರಿಸಿದ ಖರದೂಷಣಾದಿ ಹದಿನಾಲ್ಕು ಸಹಸ್ರ ರಕ್ಕಸರನ್ನೂ ಒಬ್ಬನೆ ಕೊಂದನೆಂದರೆ ಅದು ಸಾಮಾನ್ಯ ಮನುಷ್ಯನಿಂದ ಸಾಧ್ಯವಾದ ಕಾರ್ಯವೆ? ನಿನ್ನಂತಹ ಶೂರರನ್ನು ಸಪ್ತ ಸಮುದ್ರಗಳಲ್ಲಿಯೂ ಅದ್ದಿತಂದ ವಾಲಿಯನ್ನು ಶ್ರೀರಾಮನ ಒಂದೇ ಬಾಣ ಆಹುತಿ ತೆಗೆದುಕೊಂಡಿತೆಂದರೆ ಅದು ಸಾಮಾನ್ಯ ಬಲವೆ? ಆದ್ದರಿಂದ ಬಲವದ್ವಿರೋಧ ಬೇಡ. ನಿನ್ನ ಶಕ್ತಿ ಸಾಮರ್ಥ್ಯಗಳು ನನ್ನಂತಹನ ಮುಂದೆ ಸಹ ನಡೆಯಲಾರದು. ನಾನು ಮನಸ್ಸು ಮಾಡಿದರೆ ನಿನ್ನೊಡನೆ ಈ ಸಮಸ್ತ ಲಂಕೆಯನ್ನೂ ಭಸ್ಮಮಾಡಿಬಿಡಬಲ್ಲೆ. ಆದರೆ ಸೀತೆಯ ಚೋರನನ್ನು ತಾನೇ ಸಂಹರಿಸುವುದಾಗಿ ಶ್ರೀರಾಮನು ಪ್ರತಿಜ್ಞೆ ಮಾಡಿರುವುದರಿಂದ ನಾನು ಆ ಕಾರ್ಯಕ್ಕೆ ಕೈಹಾಕುವಂತಿಲ್ಲ. ರಾಕ್ಷಸ ರಾಜೇಂದ್ರ, ಸಮಸ್ತ ಭೋಗಭಾಗ್ಯಗಳಿಗೂ ನೆಲೆಮನೆಯಂತಿರುವ ಈ ಲಂಕೆಯನ್ನು ನರಕಕ್ಕೆ ತಳ್ಳಬೇಡ. ಶ್ರೀರಾಮನೊಡನೆ ದ್ವೇಷವನ್ನು ಕಟ್ಟಿಕೊಳ್ಳಬೇಡ. ಇಹಪರಗಳೆರಡನ್ನೂ ನಾಶಮಾಡಿಕೊಳ್ಳುವುದು ವಿವೇಕವಲ್ಲ."

---

## ೧೮

# ದೂತನಿಗೆ ವಿರೂಪಕ್ರಿಯೆ

ಕಡ್ಡಿಮುರಿದು ಕೈಗೆ ಕೊಟ್ಟಂತೆ ಸ್ಪಷ್ಟವಾದ ಮಾತುಗಳಿಂದ ತನ್ನ ಅಭಿಪ್ರಾಯವನ್ನು ಸೂಚಿಸಿದ ಹನುಮಂತನ ಮಾತುಗಳನ್ನು ಕೇಳಿ ರಾವಣನ ಕೋಪ ಕಡು ಗಿಚ್ಚಾಯಿತು ; ಹೃದಯ ಕುದಿಯಿತು ; ಕಣ್ಣು ಕೆಂಡದುಂಡೆಯಾಯಿತು. "ಈ ನೀಚ ಕೋತಿಯನ್ನು ವಧಿಸಿಬಿಡಿ !" ಎಂದು ಆತನು ಅಬ್ಬರಿಸಿದನು. ಅಲ್ಲಿಯೆ ಕುಳಿತಿದ್ದ ಆತನ ತಮ್ಮ ವಿಭೀಷಣನು ಆ ಅಪ್ಪಣೆಯನ್ನು ವಿರೋಧಿಸಿದನು. ವಿಭೀಷಣನು ರಾಕ್ಷಸನಾದರೂ ಉಚಿತಾನುಚಿತಗಳನ್ನು ಧರ್ಮಾಧರ್ಮಗಳನ್ನು ಅರಿತವನು. ಆದ್ದರಿಂದ ರಾವಣನನ್ನು ಕುರಿತು "ಅಣ್ಣಾ, ಪ್ರಸನ್ನನಾಗು, ದೂತನಾದವನಿಗೆ ಮರಣದಂಡನೆಯನ್ನು ವಿಧಿಸುವುದು ಸೂಕ್ತವಲ್ಲ. ಅದು ರಾಜಧರ್ಮಕ್ಕೆ ವಿರುದ್ಧ. ನಿನ್ನಂತಹ ಜ್ಞಾನಿಯೂ ಮಹಾತ್ಮನೂ ಕೋಪಕ್ಕೆ ವಶನಾಗಿ ಇಂತಹ ಅಕಾರ್ಯಕ್ಕೆ ಮನಕೊಡಬಾರದು. ಯುಕ್ತಾಯುಕ್ತಗಳನ್ನು ಆಲೋಚಿಸಿ, ದೂತನಾದ ಇವನಿಗೆ ಯೋಗ್ಯವಾದ ಶಿಕ್ಷೆಯನ್ನು ವಿಧಿಸು" ಎಂದನು.

ಕೋಪದಿಂದ ವೈಮರೆತಿದ್ದ ರಾವಣೇಶ್ವರನಿಗೆ ತಮ್ಮನ ಮಾತು ಹಿಡಿಸಲಿಲ್ಲ. "ಅಯ್ಯಾ ವಿಭೀಷಣ, ಪಾಪಚಾರಿಗಳನ್ನು ವಧಿಸುವುದು ಪಾಪವಲ್ಲ. ಆದ್ದರಿಂದ ಈ ಪಾಪಿಯಾದ ವಾನರನನ್ನು ವಧಿಸುವುದೇ ಸರಿ" ಎಂದನು. ಅದನ್ನು ಕೇಳಿ ವಿಭೀಷಣನು "ಅಣ್ಣಾ ಲಂಕೇಶ್ವರ, ಪ್ರಸನ್ನನಾಗು. ಎಲ್ಲಿಯೆ ಆಗಲಿ, ಯಾವಾಗಲೆ ಆಗಲಿ ದೂತವಧೆಯೆಂಬುದು ನಿಷಿದ್ಧವೆಂದು ಹಿರಿಯರು ಹೇಳುತ್ತಾರೆ. ಈ ವಾನರ ನಮಗೆ ಶತ್ರು ; ಅಕ್ಷಕುಮಾರನೇ ಮೊದಲಾದ ನಮ್ಮ ಬಂಧುಗಳನ್ನು ಸಂಹರಿಸಿ ನಮಗೆ ಅಪಕಾರ ಮಾಡಿದ್ದಾನೆ. ಆದರೂ ದೂತನಾದ ಇವನು ಅವಧ್ಯನೆ. ದಂಡನೀತಿ ಶಾಸ್ತ್ರದಲ್ಲಿ ದೂತರಿಗೆ ಅನೇಕ ದಂಡನೆಗಳನ್ನು ವಿಧಿಸಿದೆ. ವಿರೂಪಗೊಳಿಸಬಹುದು, ಕೊರಡೆಯಿಂದ ಹೊಡೆಯಬಹುದು, ತಲೆ ಬೋಳಿಸಬಹುದು. ಶಾಶ್ವತವಾದ ಗುರುತಿರುವಂತೆ ಮುದ್ರೆಯೊತ್ತಬಹುದು. ಆದರೆ ವಧೆಯನ್ನು ಮಾತ್ರ ವಿಧಿಸಲಿಲ್ಲ. ದೂತವಧೆಯೆಂಬುದನ್ನು ನಾವು ಇದುವರೆಗೆ ಎಲ್ಲಿಯೂ ಕಂಡಿಲ್ಲ, ಕೇಳಿಲ್ಲ. ಆದ್ದರಿಂದ ಈ ವಾನರನನ್ನು ಕೊಲ್ಲುವುದು ಸರ್ವಥಾ ಆಗಬಾರದ ಕೆಲಸ. ಇವನು ಕಿಡುನುಡಿಗಳನ್ನು ಆಡಿದ್ದರೆ ಆ ತಪ್ಪು ಇವನನ್ನು ಕಳುಹಿಸಿದವರದು ; ಅವರನ್ನು ಶಿಕ್ಷಿಸಬೇಕು, ಅಷ್ಟೆ. ದೂತರಿಗೆ ಸ್ವಂತ ಮಾತೆಲ್ಲಿ ಬಂತು ? ನೀನು ಇವನನ್ನು ಕೊಂದುಹಾಕಿದರೆ ರಾಮಲಕ್ಷ್ಮಣರಿಗೆ ಇಲ್ಲಿಂದ ಸುದ್ದಿಯನ್ನು ಕೊಂಡೊಯ್ಯುವವರು ಯಾರು? ಸುದ್ದಿಯನ್ನು ಕೊಂಡೊಯ್ಯದ ಮೇಲೆ ಅವರು ಇಲ್ಲಿಗೆ ಬರುವುದೆಂತು ? ಅವರು ಬರದಮೇಲೆ ನೀನು ನಿನ್ನ ಶತ್ರುಗಳನ್ನು

ಸಂಹರಿಸುವುದು ಹೇಗೆ? ನೀನು ಯುದ್ಧ ಪ್ರಿಯ; ಶೂರರಾದ ರಾಮಲಕ್ಷ್ಮಣರೊಡನೆ ಯುದ್ಧಮಾಡುವ ಸದವಕಾಶವನ್ನು ಕಳೆದುಕೊಳ್ಳುವೆಯಾ?"

ವಿಭೀಷಣನ ನುಡಿಗಳು ರಾವಣನ ಆತ್ಮಗೌರವವನ್ನು ಎಚ್ಚರಿಸಿದುವು. ಆತನು ಕ್ಷಣಕಾಲ ಮೌನವಾಗಿದ್ದು, ಅನಂತರ "ತಮ್ಮಾ, ವಿಭೀಷಣ, ನಿನ್ನ ಮಾತು ನಿಜ. ಇವನನ್ನು ಸಂಹರಿಸುವುದು ಬೇಡ. ಇವನಿಗೆ ಯಾವುದಾದರೂ ಒಂದು ಶಿಕ್ಷೆಯನ್ನು ವಿಧಿಸೋಣ. ಕಪಿಗಳಿಗೆ ಬಾಲವೇ ಪರಮ ಭೂಷಣವಾದ ಒಂದು ಅಂಗ. ಅದನ್ನು ಸುಟ್ಟು ಇವನನ್ನು ವಿರೂಪಗೊಳಿಸಿ ಬಿಡಲಿ. ಸುಟ್ಟ ಬಾಲದೊಡನೆ ಈ ಕೋತಿ ತನ್ನ ಪ್ರಭುವಾದ ಸುಗ್ರೀವನಲ್ಲಿಗೆ ಹೋಗಲಿ!" ಎಂದು ಹೇಳಿ ತನ್ನ ಭಟನನ್ನು ಕುರಿತು "ಎಲೈ ಭಟರೆ, ಈ



"ಈ ನೀಚ ಕೋತಿಯನ್ನು ವಧಿಸಿಬಿಡಿ!" ಎಂದು ಆತನು ಅಬ್ಬರಿಸಿದನು.

ಕೋತಿಯ ಬಾಲಕ್ಕೆ ಬೆಂಕಿ ಹಚ್ಚಿ, ನಮ್ಮ ಪಟ್ಟಣದ ಚೌಕಗಳಲ್ಲಿಯೂ ರಾಜಮಾರ್ಗ ಗಳಲ್ಲಿಯೂ ಮೆರವಣಿಗೆ ಮಾಡಿ ಆಮೇಲೆ ಓಡಿಸಿಬಿಡಿ!" ಎಂದು ಅಪ್ಪಣೆಮಾಡಿದನು. ರಾಜನ ಅಪ್ಪಣೆಯೊಂದೆ ತಡ, ರಾಕ್ಷಸರು ನಾನು ತಾನೆಂದು ಮುಂದೆ ಬಂದು ಹಳೆಯ ಬಟ್ಟೆಯ ಚಿಂದಿಗಳನ್ನು ಹನುಮಂತನ ಬಾಲಕ್ಕೆ ಸುತ್ತಿದರು. ಅನಂತರ ಅದಕ್ಕೆ ಎಣ್ಣೆ ಯನ್ನು ಹೊಯ್ದು ಬೆಂಕಿಯನ್ನು ಹೊತ್ತಿಸಿದರು. ಅದನ್ನು ಕಂಡು ಹನುಮಂತನ ಕೆಂಪ ಗಿದ್ದ ಮುಖ ಕೋಪದಿಂದ ಮತ್ತೂ ಕೆಂಪಾಯಿತು. ಬಾಲಸೂರ್ಯನಂತೆ ಪ್ರಕಾಶಿಸು ತ್ತಿದ್ದ ಆತನು ಉರಿಯುವ ಬಾಲದಿಂದ ಸುತ್ತಮುತ್ತಲಿದ್ದ ರಾಕ್ಷಸರನ್ನೆಲ್ಲಾ ಸದೆಬಡಿ ದನು. ಅಷ್ಟುಹೊತ್ತಿಗೆ ಊರಿನವರೆಲ್ಲರೂ ಒಟ್ಟಾಗಿ ಸೇರಿಕೊಂಡು ಬಂದರು–ಆ ಘೋರ ವಾನರನ ಬಾಲ ಸುಡುವುದನ್ನು ನೋಡುವುದಕ್ಕೆಂದು. ಹೀಗೆ ಗುಂಪು ಸೇರಿದ್ದ ಜನ ಮತ್ತೆ ಹನುಮಂತನನ್ನು ಹಿಡಿದು ಬಂಧಿಸಿದರು. ಹನುಮಂತನು ಅವರೆಲ್ಲರನ್ನೂ ಸದೆಬಡಿಯ ಬಲ್ಲವನಾಗಿದ್ದರೂ ತಾನಾಗಿಯೆ ಅವರ ವಶನಾದನು. ಅವರು ಆಡುತ್ತಿದ್ದ ಮೂದಲೆಯ ಮಾತುಗಳನ್ನೂ ಆಗಾಗ ಕೊಡುತ್ತಿದ್ದ ಕಿರುಕುಳಗಳನ್ನೂ ಸಹಿಸುತ್ತಾ ಅವರು ಎಳೆದತ್ತ ಹೊರಟನು. ತಾನು ಲಂಕಾಪಟ್ಟಣವನ್ನು ನೋಡಿದ್ದುದು ರಾತ್ರಿಯ ಹೊತ್ತಿನಲ್ಲಿ. ಈಗ ಮತ್ತೊಮ್ಮೆ ಹಚ್ಚ ಹಗಲಿನಲ್ಲಿ ಊರಲ್ಲೆಲ್ಲಾ ಸುತ್ತುತ್ತಾ ದುರ್ಗ ರಹಸ್ಯಾದಿಗಳನ್ನು ಅರಿತುಕೊಳ್ಳಲು ಸುಸಂದರ್ಭ ದೊರೆತಿರುವಾಗ ಆ ಜಾಣ ಅದನ್ನು ನಿವಾರಿಸಿಯಾನೆ? ಅವರು ಕೊಡುತ್ತಿದ್ದ ಹಿಂಸೆಗಳೊಂದು ಆತನ ಲಕ್ಷ್ಯಕ್ಕೆ ಸುಳಿಯಲೂ ಇಲ್ಲ.

ಹೊತ್ತಿ ಉರಿಯುತ್ತಿದ್ದ ಬಾಲವನ್ನು ನೋಡಿ ಚಪ್ಪಾಳೆ ತಟ್ಟಿಕೊಂಡು ಕುಣಿ ಯುತ್ತಾ ಶಂಖ ಭೇರಿ ಮೊದಲಾದ ವಾದ್ಯಗಳನ್ನು ಬಾರಿಸುತ್ತಾ ಲಂಕಾನಗರದ ಬೀದಿಬೀದಿ ಯಲ್ಲಿಯೂ ಹನುಮಂತನನ್ನು ಕರೆದುಕೊಂಡು ಮೆರವಣಿಗೆ ಹೊರಟರು, ಆ ರಾಕ್ಷಸರು. ಹನುಮಂತನು ದುರ್ಗಪ್ರದೇಶವನ್ನೆಲ್ಲಾ ಸೂಕ್ಷ್ಮವಾಗಿ ನೋಡುತ್ತಾ ಹೊರಟನು. ಅವ ನನ್ನು ಕರೆದುಕೊಂಡು ಹೋಗುತ್ತಿದ್ದವರು ಅಲ್ಲಲ್ಲಿಯೆ ಅವನನ್ನು ನಿಲ್ಲಿಸಿ "ಇಗೋ ಇವನೆ ಆ ರಾಮದೂತ!" ಎಂದು ಕೂಗಿ ಹೇಳುತ್ತಿದ್ದರು. ಅದನ್ನು ಕೇಳಿದೊಡನೆಯೆ ಮನೆ ಯೊಳಗಿದ್ದ ಹೆಂಗಸರು ಮಕ್ಕಳೆಲ್ಲಾ ಸಂಭ್ರಮದಿಂದ ಹೊರಗೆ ಬಂದು ಅವನನ್ನು ನೋಡಿ ನಲಿಯುವರು. ಅವರಲ್ಲಿ ಕೆಲವರು ಸೀತೆಯ ಬಳಿಗೆ ಓಡಿಹೋಗಿ, "ಎಲೆ ಸೀತೆ, ನಿನ್ನೊ ಡನೆ ಮಾತನಾಡಿ ಹೋಯಿತಂತಲ್ಲಾ ಆ ಕೆಂಪುಮೂತಿಯ ಕೋತಿ, ಅದರ ಬಾಲಕ್ಕೆ ಬೆಂಕಿ ಹಚ್ಚಿ ಊರಲ್ಲೆಲ್ಲಾ ಮೆರವಣಿಗೆ ಮಾಡುತ್ತಿದ್ದಾರೆ" ಎಂದು ಹೇಳಿದರು. ಆ ಕ್ರೂರ ವಾಕ್ಯಗಳನ್ನು ಕೇಳುತ್ತಲೆ ಸೀತಾದೇವಿ ಮಹಾದುಃಖಿತೆಯಾಗಿ ಯಜ್ಞೇಶ್ವರನಲ್ಲಿ ಪ್ರಾರ್ಥನೆ ಸಲ್ಲಿಸಿದಳು. "ಹೇ ದೇವ, ಯಜ್ಞೇಶ್ವರಾ, ನಾನು ಪತಿವ್ರತೆಯಾಗಿ ಪತಿ ಶುಶ್ರೂಷೆಯನ್ನು ಕಾಯಾ ವಾಚಾ ಮನಸಾ ಮಾಡಿದುದಕ್ಕೆ ಫಲವೇನಾದರೂ ಇದ್ದರೆ ಅದರ ಫಲವಾಗಿ ನೀನು ಈ ಮಾರುತಿಯನ್ನು ಸಂರಕ್ಷಿಸು; ಆತನ ವಿಷಯದಲ್ಲಿ ನೀನು ಶಾಂತನಾಗು. ನಾನು ಈ ನಾಯಕ ನರಕದಿಂದ ಉದ್ಧಾರವಾಗುವುದೆ ಸತ್ಯವಾದಲ್ಲಿ ನೀನು ಶಾಂತನಾಗು!"

ಸೀತಾದೇವಿಯ ಪ್ರಾರ್ಥನೆ ಸಫಲವಾಯಿತು. ಹನುಮಂತನ ಬಾಲ ಹೊರಗಡೆ ಹೊತ್ತಿ ಉರಿಯುತ್ತಿದ್ದರೂ ಸ್ವಲ್ಪವೂ ಸುಡುತ್ತಿರಲಿಲ್ಲ. ಜ್ವಾಲೆಗಳು ಧಗಧಗನೆ ಉರಿಯುತ್ತಿವೆ; ಬಾಧೆಯೇನೂ ಇಲ್ಲ. "ಹೀಗೆ ಅಗ್ನಿ ಶೀತಳವಾಗಿರುವುದು ಶ್ರೀರಾಮಚಂದ್ರಮೂರ್ತಿಯ ಪ್ರಭಾವದಿಂದಲೆ ಸರಿ" ಎಂದುಕೊಂಡ ಹನುಮಂತ. ರಾಕ್ಷಸರು ನೋಡು ನೋಡುತ್ತಿರುವಂತೆಯೆ "ಜಯ ರಘುವೀರ ಸಮರ್ಥ" ಎಂದು ಆಕಾಶಕ್ಕೆ ಹಾರಿ ಪುರದ್ವಾರದ ಮೇಲೆ ಕುಳಿತನು. ಅಲ್ಲಿ ದೇಹವನ್ನು ಕುಗ್ಗಿಸಿದೊಡನೆಯೆ ಕಟ್ಟಿದ ಹಗ್ಗಗಳೆಲ್ಲವೂ ಸಡಿಲಿ ಕಳಚಿಬಿದ್ದುವು. ಪುನಃ ದೇಹವನ್ನು ಬೆಳಸಿಕೊಂಡು ದ್ವಾರದಲ್ಲಿದ್ದ ಕಬ್ಬಿಣದ ದೊಡ್ಡ ಅಗುಳಿಯನ್ನು ಕೈಗೆ ತೆಗೆದುಕೊಂಡನು. ಅವನ ಹಿಂದೆ ಮುಂದೆ ಮುತ್ತಿಕೊಂಡು ಬಂದಿದ್ದ ರಾಕ್ಷಸರಿಗೆಲ್ಲಾ ಆ ಅಗುಳಿಯೆ ಯಮದಂಡ ವಾಯಿತು. ಪಿಳ್ಳೆ ಹೆಸರಿಲ್ಲದಾದರು.

---

೧೯

# ಲಂಕಾದಹನ

ರಾಕ್ಷಸ ವಧಾನಂತರ ಹನುಮಂತನು ಅಲ್ಲಿಯೆ ಕ್ಷಣಕಾಲ ನಿಂತು ಲಂಕಾನಗರ ವನ್ನೆಲ್ಲಾ ಒಮ್ಮೆ ಕಣ್ತುಂಬ ನೋಡಿದನು. ಬಾಲದಲ್ಲಿ ಅಗ್ನಿ ಇನ್ನೂ ಜ್ವಲಿಸುತ್ತಲೆ ಇತ್ತು. ಹನುಮಂತನಿಗೆ ಒಂದು ಆಲೋಚನೆ ಹೊಳೆಯಿತು. "ಈ ಯಜ್ಞೇಶ್ವರ ಇಷ್ಟು ತಂಪಾಗಿದ್ದುಕೊಂಡು ನನಗೆ ಮಹೋಪಕಾರ ಮಾಡಿದ್ದಾನೆ. ನಾನೇಕೆ ಈತನಿಗೆ ಈ ಊರನ್ನೆಲ್ಲಾ ಆಹುತಿಯಾಗಿ ಕೊಡಬಾರದು? ನನಗೆ ಮಹದುಪಕಾರವಮಾಡಿದ ಈತ ನನ್ನು ಸಂತೋಷಪಡಿಸುವುದು ನನ್ನ ಕರ್ತವ್ಯವಲ್ಲವೆ?" ಹೀಗೆಂದುಕೊಂಡ ಹನುಮಂತನು ನಿಂತಲ್ಲಿಂದ ಒಮ್ಮೆ ಗಗನಕ್ಕೆ ಹಾರಿ ಅಲ್ಲಿಂದ ಪ್ರಹಸ್ತನ ಮನೆಯ ಮೇಲೆ ಇಳಿದನು. ರಾವಣನ ಮುಖ್ಯಮಂತ್ರಿಯ ಮನೆಗೇ ಮೊದಲು ಅಗ್ನಿಪ್ರವೇಶವಾಯಿತು. ಆ ಬಳಿಕ ಆತನು ಮಹಾಪಾರ್ಶ್ವನ ಮನೆಗೆ ಹಾರಿ ಅದಕ್ಕೆ ಬೆಂಕಿಯಿಟ್ಟನು. ತರುವಾಯ ಕ್ರಮ ವಾಗಿ ವಜ್ರದಂಷ್ಟ್ರ, ಶುಕಸಾರಣರು, ರಾಜಕುಮಾರನಾದ ಇಂದ್ರಜಿತು, ಜಂಬುಮಾಲಿ, ಸುಮಾಲಿ, ರಶಿಕೇತು, ಸೂರ್ಯಶತ್ರು, ಯುದ್ಧೋನ್ಮತ್ತ, ಧ್ವಜಗ್ರೀವ, ಕುಂಭಕರ್ಣ, ಬ್ರಹ್ಮಶತ್ರು, ನರಾಂತಕ—ಇತ್ಯಾದಿ ರಾಕ್ಷಸರ ಮನೆಗಳ ಮೇಲೆಲ್ಲಾ ಕುಪ್ಪಳಿಸಿ ಕುಪ್ಪಳಿಸಿ ಬೆಂಕಿ ಹೊತ್ತಿಸಿದ್ದಾಯಿತು. ವಿಭೀಷಣನ ಮನೆಯೊಂದನ್ನು ಬಿಟ್ಟು ಉಳಿದ ರಾಕ್ಷಸಗೃಹಗಳೆಲ್ಲಾ ಯಜ್ಞೇಶ್ವರನಿಗೆ ಆಹುತಿಯಾಗಿಹೋದುವು. ಸುಡುವ ಸರದಿಯಲ್ಲಿ ರಾವಣನದೇ ಕಡೆಯ ಮನೆ. ಅದುವರೆಗೂ ರಾವಣನಿಗೆ ಹೆದರಿ ಹಿಮ್ಮೆಟ್ಟಿದ ಗಾಳಿ ಬೆಂಕಿ ಗಳಿಗೆ ಹನುಮಂತನ ದಯೆಯಿಂದ ಈಗ ಧೈರ್ಯ ಬಂದಿತೆಂದು ತೋರುತ್ತದೆ. ಎರಡೂ ಒಟ್ಟಿಗೆ ಸೇರಿ ರಾವಣನ ಮೇಲೆ ಸೇಡು ತೀರಿಸಿಕೊಳ್ಳುವಂತೆ ತೋರುತ್ತಿತ್ತು. ಆ ಅರಮನೆ ಹೊತ್ತಿ ಉರಿಯುತ್ತಿದ್ದರೆ, ಬಂಗಾರದ ಕಿಟಕಿಗಳೂ ಮುತ್ತಿನ ಕುಸುರಿಗೆಲಸಗಳೂ ಕಲಾನೈಪುಣ್ಯಗಳೂ ಸುಟ್ಟು ಸುಟ್ಟು ಭಸ್ಮವಾಗಿ ಹೋದುವು. ಪುಣ್ಯವು ಕ್ಷಯಿಸಿದ ಮೇಲೆ ಭೂಮಿಗುರುಳುವ ಸಿದ್ಧಪುರುಷರ ವಿಮಾನಗಳಂತೆ ಅರಮನೆಗಳ ಉಪ್ಪರಿಗೆ ಗಳೆಲ್ಲವೂ ಕಳಚಿಬಿದ್ದುಹೋದುವು. ರಾಕ್ಷಸರೆಲ್ಲರೂ ಜೀವವನ್ನು ಉಳಿಸಿಕೊಳ್ಳುವುದ ಕ್ಕಾಗಿ ದಿಕ್ಕಾಪಾಲಾಗಿ ಓಡುತ್ತಿದ್ದರು. ಜನ "ಅಯ್ಯೋ ಇವನು ಕಪಿಯಲ್ಲ; ಸಾಕ್ಷಾತ್ ಅಗ್ನಿಯೆ ಕಪಿರೂಪದಿಂದ ಈ ಲಂಕೆಗೆ ಬಂದಿದ್ದಾನೆ" ಎಂದು ಮೊರೆಯಿಟ್ಟರು.

ಊರೆಲ್ಲವೂ ಹೊತ್ತಿ ಧಗಧಗ ಉರಿಯುತ್ತಿದ್ದರೆ ಹನುಮಂತನ ಕಣ್ಣಿಗೆ ಅದೊಂದು ವಿನೋದ. ಆದರೆ ಊರಲ್ಲಿ ಎಂತಹ ಹಾಹಾಕಾರ! ಹಾಲು ಕುಡಿಯುವ ಎಳೆಯ ಮಕ್ಕಳನ್ನು ಎತ್ತಿಕೊಂಡಿದ್ದ ರಾಕ್ಷಸಾಂಗನೆಯರು ಅವುಗಳನ್ನು ಎತ್ತಿಕೊಂಡಿದ್ದಂತೆಯೆ ಬಿರಿಹೊಯ್ದ ಕೂದಲುಗಳೊಡನೆ ಓಡಿಬರುತ್ತಾ ಬೆಂಕಿಗೆ ಸಿಕ್ಕಿ ಬೆಂದುಹೋಗುತ್ತಿದ್ದರು.

ಕೆಲವರು ಹೆಂಗಸರು ಬೆಂಕಿಯ ಜ್ವಾಲೆಯನ್ನು ಸಹಿಸಲಾರದೆ ಉಪ್ಪರಿಗೆಯ ಮೇಲಿನ ಕಿಟಕಿಗಳಿಂದ ಕೆಳಕ್ಕೆ ಹಾರಿ, ಮೇಘದಿಂದ ಬೀಳುವ ಮಿಂಚಿನಂತೆ ಅಲ್ಪಾಯುಗಳಾಗಿ ಹೋದರು. ರತ್ನ ಖಚಿತವಾದ ಬಂಗಾರದ ಕಿಟಕಿಗಳೆಲ್ಲವೂ ಕರಗಿ ಕೆಳಗಿಳಿಯುತ್ತಿದ್ದುವು. ಎಷ್ಟು ಜನ ರಾಕ್ಷಸರು ಆ ಬೆಂಕಿಯಲ್ಲಿ ಪತನವಾಗಿ ಹೋದರೊ ಯಾರು ಬಲ್ಲರು? ಜ್ವಾಲೆಗಳು ಮೇಘವನ್ನು ಮುಟ್ಟುತ್ತಿವೆ. ಗುಡುಗಿನಂತಹ ಧ್ವನಿಹುಟ್ಟಿ ಬ್ರಹ್ಮಾಂಡವೆ ಸಿಡಿದುಹೋಗುವುದೊ ಎಂಬಂತೆ ಭಾಸವಾಗುತ್ತಿದೆ. ಬೆಂಕಿಯ ಬೇಗೆಯಲ್ಲಿ ಸಿಕ್ಕಿ ರೋಧಿಸುತ್ತಿರುವ ಪ್ರಾಣಿ ಮಾತ್ರಗಳ ಧ್ವನಿಯಿಂದ ಲಂಕೆಯೆ 'ಗೋಳೋ' ಎಂದು ಅಳುವಂತೆ ಕೇಳಿಸುತ್ತಿದೆ—"ಹಾ, ಅಪ್ಪಾ! ಹಾ, ಅಮ್ಮಾ! ಅಯ್ಯೋ ಮಗನೆ! ಅಕಟಾ! ಪ್ರಾಣ



ರಾಕ್ಷಸರ ಮನೆಗಳ ಮೇಲೆಲ್ಲಾ ಕುಪ್ಪಳಿಸಿ ಕುಪ್ಪಳಿಸಿ ಬೆಂಕಿ ಹೊತ್ತಿಸಿದ್ದಾಯಿತು.

ಕಾಂತ! ಹಾ ಜೀವದ ಗೆಳೆಯ! ಅಯ್ಯೋ ಜೀವ ಹೋಗುತ್ತಿದೆ—ಏನುಮಾಡಲಿ? ಎಲ್ಲಿ ಹೋಗಲಿ? ಯಾರೂ ಕಾಯುವವರಿಲ್ಲವೆ? ಅಯ್ಯೋ ಅಯ್ಯೋ?" ಎಲ್ಲೆಲ್ಲಿಯೂ ಆಕ್ರಂದನ.

ಹನುಮಂತನು ತನ್ನ ಪ್ರಚಂಡ ಸಾಹಸದ ಫಲವನ್ನು ಕಣ್ದಣಿಯ ನೋಡಿದನು. ಬಂದ ಕಾರ್ಯ ಸಫಲವಾಯಿತೆಂದುಕೊಂಡನು. "ಅಶೋಕ ವನವನ್ನು ಧ್ವಂಸಮಾಡಿದೆ, ರಾಕ್ಷಸರನ್ನು ಸಂಹರಿಸಿದೆ, ಲಂಕಾನಗರಿಯನ್ನು ಬೂದಿಮಾಡಿದೆ; ಇನ್ನು ಹಿಂತಿರುಗಬೇಕು" ಎಂದು ಆತನು ನಿಶ್ಚಯಿಸಿದನು. ಅಷ್ಟರಲ್ಲಿ ಆತನ ಮನಸ್ಸಿನಲ್ಲಿ ಇನ್ನೊಂದು ದಿಗಿಲು ಹುಟ್ಟಿತು. "ಎಲಾ! ಎಂತಹ ಪ್ರಮಾದವಾಯಿತು! ಸ್ವಲ್ಪವೂ ಹಿಂದುಮುಂದನ್ನು ಆಲೋಚಿಸದೆ ಈ ಲಂಕಾಪಟ್ಟಣವನ್ನೆಲ್ಲಾ ಸುಟ್ಟುಹಾಕಿದೆನಲ್ಲಾ! ಶ್ರೀರಾಮ ಪತ್ನಿಯಾದ ಸೀತಾದೇವಿ ಇಲ್ಲಿಯೆ ಇರುವಳೆಂಬ ಪ್ರಜ್ಞೆಯಾದರೂ ನನಗೆ ಬೇಡವೆ? ನಾನು ಎಂತಹ ನೀಚಕಾರ್ಯ ಮಾಡಿದೆ? ಸೀತಾಮಾತೆಯೇನಾದರೂ ಅಗ್ನಿಗೆ ಆಹುತಿಯಾಗಿಹೋಗಿದ್ದರೆ! ಮತಿಗೇಡಿಯಾಗಿ ಸ್ವಾಮಿಕಾರ್ಯವನ್ನು ವ್ಯರ್ಥಗೊಳಿಸಿದಂತಾಗುವುದಿಲ್ಲವೆ? ನಾನು ಪಟ್ಟ ಕಷ್ಟವೆಲ್ಲವೂ ನಿರರ್ಥಕವಾದಂತಾಗುವುದಿಲ್ಲವೆ? ಎಷ್ಟೋ ಪ್ರಯಾಸದಿಂದ ಸಾಧಿಸಿದ ಮಹಾಕಾರ್ಯವನ್ನು ಸ್ವಲ್ಪ ಅಜಾಗರೂಕತೆಯಿಂದ ಅನ್ಯಾಯವಾಗಿ ಹಾಳುಮಾಡಿಬಿಟ್ಟೆನಲ್ಲಾ! ಈ ಲಂಕಾನಗರವೆಲ್ಲವೂ ಭಸ್ಮವಾಗಿ ಹೋಗಿರುವಾಗ ಸೀತಾದೇವಿಯೊಬ್ಬಳು ಮಾತ್ರ ಉಳಿಯಲು ಸಾಧ್ಯವೆ? ಆಕೆ ಹತಳಾಗಿರುವುದೆ ನಿಜ. ಈಗೇನು ಮಾಡಲಿ? ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ನೀಗಲೆ? ಸಮುದ್ರದಲ್ಲಿ ಬಿದ್ದು ಜಲಚರಗಳಿಗೆ ಆಹಾರವಾಗಲೆ? ಕೆಲಸವನ್ನು ಕೆಡಿಸಿ ಹಾಳುಮಾಡಿ ಇನ್ನು ಶ್ರೀರಾಮನಿಗೆ ಮುಖ ತೋರುವುದು ಹೇಗೆ? ಕಪಿಬುದ್ಧಿ ಬಹಳ ಚಪಲವೆಂಬಮಾತು ನನ್ನಿಂದ ಸಾರ್ಥಕವಾಯಿತು. ಸೀತಾದೇವಿ ಸತ್ತುಹೋದಳೆಂಬ ಸುದ್ದಿಯನ್ನು ಕೇಳಿದರೆ ಶ್ರೀರಾಮನು ಜೀವವನ್ನಿಟ್ಟುಕೊಂಡಾನೆ? ಲಕ್ಷ್ಮಣನು ಬದುಕಿಯಾನೆ? ಅವರಿಬ್ಬರೂ ಉಳಿಯದ ಮೇಲೆ ಸುಗ್ರೀವನು ಜೀವಿಸಿಯಾನೆ? ಬಂಧುಮಿತ್ರರೊಡನೆ ಆತನೂ ಸತ್ತು ಹೋಗುತ್ತಾನೆ. ಆ ಕಡೆ, ಈ ಸುದ್ದಿಯನ್ನು ಕೇಳಿ ಅಯೋಧ್ಯೆಯಲ್ಲಿರುವ ಭರತ ಶತ್ರುಘ್ನರೂ ಬಂಧುಬಾಂಧವರೊಡನೆ ಪ್ರಾಣತ್ಯಾಗ ಮಾಡುತ್ತಾರೆ. ಅತ್ತ ಇಕ್ಷ್ವಾಕು ವಂಶ, ಇತ್ತ ವಾನರ ವಂಶ—ಎರಡೂ ನಾಶವಾಗಲು ನಾನು ಕಾರಣನಾದೆ."

ಹನುಮಂತನು ಹೀಗೆ ಒಳಗುದಿಯಿಂದ ಅಸಹ್ಯ ವೇದನೆಗೆ ಒಳಗಾಗಿರಲು ಆತನ ಬಲಗಣ್ಣು ಬಲಭುಜಗಳು ಹಾರಿದುವು. ಈ ಶುಭನಿಮಿತ್ತವನ್ನು ಕಂಡು ಆತನ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. "ಸೀತಾದೇವಿ ಹೇಗೆ ಸತ್ತಾಳು! ಆಕೆ ಅಗ್ನಿಯಂತೆ ನಿರ್ಮಲಳಾದ ಪತಿವ್ರತೆ. ಅಗ್ನಿ ತಾನೆ ಆಕೆಯನ್ನು ಹೇಗೆ ಮುಟ್ಟಿಯಾನು? ಮಹಾತ್ಮನಾದ ಶ್ರೀರಾಮನ ಭಾರ್ಯೆಗೆ ಅಮಂಗಳವುಂಟೆ? ಶ್ರೀರಾಮನ ದಯೆಗೆ ಪಾತ್ರನಾದ ನನ್ನನ್ನೆ ಅಗ್ನಿ ಸುಡಲಿಲ್ಲ; ಇನ್ನು ಸೀತಾಮಾತೆಯನ್ನು ಸೋಕುವುದೆಂದರೇನು? ಆಕೆ ಖಂಡಿವಾಗಿಯೂ ದಗ್ಧಳಾಗಿಲ್ಲ"ಎಂದು ಆತನು ತನಗೆ ತಾನೆ ಸಮಾಧಾನ ಹೇಳಿಕೊಂಡನು.

ಅಷ್ಟರಲ್ಲಿ ಮೇಲ್ಗಡೆ ಆಕಾಶದಲ್ಲಿ ಚಾರಣರು ಪರಸ್ಪರ ಮಾತನಾಡಿಕೊಳ್ಳುತ್ತಿದ್ದುದು ಹನುಮಂತನಿಗೆ ಕೇಳಿಸಿತು. ಅವರು ಹನುಮಂತನನ್ನು ಹೊಗಳುತ್ತಾ "ಆಹಾ! ಆಂಜನೇಯನು ರಾಕ್ಷಸ ಗೃಹಗಳನ್ನೆಲ್ಲಾ ಸುಟ್ಟು ಬೂದಿಮಾಡಿದನು. ಎಂತಹ ಅಸಾಧ್ಯ ವಾದ ಕಾರ್ಯವನ್ನು ಆತನು ಸಾಧಿಸಿದನು! ಸ್ತ್ರೀಬಾಲವೃದ್ಧರಾದಿಯಾಗಿ ರಾಕ್ಷಸರೆಲ್ಲರೂ ಓಡಿಹೋಗುತ್ತಾ ಗೋಳಾಡುವ ಧ್ವನಿ ಪರ್ವತಕಂದರಗಳಲ್ಲೆಲ್ಲಾ ತುಂಬಿಹೋಗಿದೆ. ಇಂತಹ ಕ್ಷೋಭೆಯಲ್ಲಿಯೂ ಸೀತಾದೇವಿ ಕೂದಲೂ ಕೊಂಕದೆ ಸುಖವಾಗಿರುವಳಲ್ಲವೆ? ಇಂತಹ ಆಶ್ಚರ್ಯವನ್ನು ನಾವು ಹಿಂದೆ ಎಂದೂ ಕಂಡಿರಲಿಲ್ಲ" ಎಂದು ಮಾತನಾಡುತ್ತಿದ್ದರು. ಅವರ ಮಾತುಗಳನ್ನು ಕೇಳಿದಮೇಲಂತೂ ಹನುಮಂತನಿಗೆ ಸಂಪೂರ್ಣ ಧೈರ್ಯ ಬಂದಂತಾಯಿತು. ಆತನು ತಾನು ಹೊರಡುವ ಮುನ್ನ ಒಮ್ಮೆ ದೇವಿಯನ್ನು ಕಣ್ಣಾರೆ ಕಂಡೆ ಹೋಗಬೇಕೆಂದು ನಿಶ್ಚಯಿಸಿಕೊಂಡನು.

---

## ೨೦

# ವಾನರರ ಸಂತೋಷ

ಹನುಮಂತನು ತನ್ನ ನಿಶ್ಚಯದಂತೆ ಸೀತಾಮಾತೆಯ ಬಳಿಗೆ ಹೋಗಿ ಆಕೆಗೆ ನಮಸ್ಕರಿಸಿ "ಅಮ್ಮಾ, ಅಪಾಯ ಮಧ್ಯದಲ್ಲಿಯೂ ನೀನು ಕ್ಷೇಮದಿಂದಿರುವುದು ನನ್ನ ಪರಮಭಾಗ್ಯವೆ ಸರಿ" ಎಂದನು. ಪ್ರಯಾಣಸನ್ನದ್ಧನಾಗಿರುವ ಆತನನ್ನು ಕುರಿತು ಜಾನಕಿ "ಮಗು, ಮಾರುತಿ, ನೀನೆಂತಹ ಸಮರ್ಥನು! ನೀನು ಇಲ್ಲಿ ನಡೆಸಿದ ಅದ್ಭುತ ಕಾರ್ಯಗಳು ನಿನ್ನ ಪರಾಕ್ರಮಕ್ಕೆ ಕಳಶವಿಟ್ಟಂತಿವೆ! ಇಲ್ಲಿರುವ ರಾಕ್ಷಸರನ್ನೆಲ್ಲಾ ಸಂಹರಿಸಿ, ನನ್ನನ್ನು ಶ್ರೀರಾಮನ ಬಳಿಗೆ ಕರೆದೊಯ್ಯಲು ನೀನೊಬ್ಬನೆ ಸಾಕು. ನೀನು ಅಂತಹ ಸಮರ್ಥನೆ ಸರಿ. ನೀನೀಗ ಶ್ರೀರಾಮನನ್ನು ಕರತಂದು ಅವನಿಂದ ಈ ಶತ್ರು ಸೈನ್ಯವನ್ನೆಲ್ಲಾ ನಾಶಗೊಳಿಸಿ ನನ್ನನ್ನು ಉದ್ಧಾರಮಾಡಬೇಕು"ಎಂದಳು. ಹನುಮಂತನು "ಅಮ್ಮಾ, ನಿನ್ನ ದುಃಖವನ್ನು ಹೋಗಲಾಡಿಸಲು ಶ್ರೀರಾಮಚಂದ್ರಮೂರ್ತಿ ಮಹಾ ವಾನರ ಸೈನ್ಯದೊಡನೆ ಶೀಘ್ರವಾಗಿಯೆ ಇಲ್ಲಿ ಪ್ರತ್ಯಕ್ಷನಾಗುತ್ತಾನೆ. ನೀನು ಚಿಂತಿಸ ಬೇಡ" ಎಂದು ಆಕೆಗೆ ಸಮಾಧಾನ ಹೇಳಿ ಆಕೆಯಿಂದ ಆಶೀರ್ವಾದಪೂರ್ವಕವಾಗಿ ಬೀಳ್ಕೊಂಡು ಹಿಂದಕ್ಕೆ ಹೊರಡಲು ಸಿದ್ಧನಾದನು.

ಪ್ರಯಾಣೋನ್ಮುಖನಾದ ಹನುಮಂತನು ಲಂಕಾದ್ವೀಪದಲ್ಲಿದ್ದ 'ಅರಿಷ್ಟ'ವೆಂಬ ಪರ್ವತವನ್ನು ಹತ್ತಿನಿಂತು ಒಮ್ಮೆ ಸಮುದ್ರರಾಜನಿಗೆ ಸ್ತೋತ್ರವನ್ನು ಸಲ್ಲಿಸಿ, ದೇಹ ವನ್ನು ಮತ್ತಷ್ಟು ಎತ್ತರವಾಗಿ ಬೆಳೆಸಿಕೊಂಡನು. ಅನಂತರ ಒಮ್ಮೆ ಉಸಿರನ್ನು ಒಳಕ್ಕೆಳೆದುಕೊಂಡು ಆಕಾಶಕ್ಕೆ ಚಿಮ್ಮಿದನು. ಆ ರಭಸಕ್ಕೆ ಬೆಟ್ಟ ಅಲ್ಲಾಡಿಹೋಯಿತು. ಆಕಾಶವೆಂಬ ಸಮುದ್ರದಲ್ಲಿ ಯಾನಮಾಡುತ್ತಿರುವ ಹಡಗಿನಂತೆ ಆತನು ಗಗನಮಾರ್ಗ ದಲ್ಲಿ ಪ್ರಯಾಣ ಹೊರಟನು. ಮೇಘಗಳೆಲ್ಲವೂ ಅವನ ದೇಹಕಾಂತಿಯಿಂದ ಬಗೆಬಗೆಯ ಬಣ್ಣಗಳನ್ನು ತಾಳುತ್ತಿದ್ದುವು. ಒಮ್ಮೆ ಆತನು ಮೇಘಮಾರ್ಗದಲ್ಲಿ ಮರೆಯಾಗುವನು. ಮತ್ತೊಮ್ಮೆ ಪ್ರಕಾಶಮಾನವಾದ ಚಂದ್ರನಂತೆ ಮೇಘಗಳಿಂದ ಹೊರಗೆಬರುವನು. ಹೀಗೆ ಹಾರಿಹೋಗುತ್ತಿರುವಾಗ ದಾರಿಯಲ್ಲಿ ಮೈನಾಕಪರ್ವತ ಸಮುದ್ರದಿಂದ ಮೇಲಕ್ಕೆದ್ದು ನಿಂತಿರುವುದು ಕಾಣಿಸಿತು. ಅದನ್ನು ಸನ್ಮಾನ ಮಾಡುವುದಕ್ಕೋಸ್ಕರ ಒಮ್ಮೆ ಅದನ್ನು ಲಲ್ಲೆ ಸವರಿ, ಮತ್ತೆ ಬಿಲ್ಲಿನಿಂದ ಹಾರುವ ಅಂಬಿನಂತೆ ಮುಂದೆ ಹೋದನು. ಆ ಪರ್ವತ ವನ್ನು ಕಾಣುತ್ತಲೆ ಆತನ ಉತ್ಸಾಹ ಇಮ್ಮಡಿಸಿತ್ತು. ಈಗ ಮುಂದೆ ಮಹೇಂದ್ರ ಪರ್ವತ ಕಾಣಿಸಲು ಆತನ ಆನಂದ ಮತ್ತಷ್ಟು ವೃದ್ಧಿಯಾಗಿ ಒಮ್ಮೆ ಸಿಂಹನಾದ ಮಾಡಿದನು. ದಶದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಗಿ ಆ ಧ್ವನಿ ಸಮುದ್ರದ ಉತ್ತರ ದಂಡೆಯಲ್ಲಿ ತನಗಾಗಿ ಕಾದುಕುಳಿತಿದ್ದ ವಾನರವೀರರಿಗೆ ಕೇಳಿಸಿತು.

ಸುಗ್ರೀವನು ಕೊಟ್ಟ ಅವಧಿ ಮುಗಿದುಹೋಗಿತ್ತು. ಆದುದರಿಂದ ಅಂಗದ ಜಾಂಬವಾದಿಗಳು ಚಿಂತಿಸಿ ಚಿಂತಿಸಿ ದೀನರಾಗಿಹೋಗಿದ್ದರು. ಹನುಮಂತನ ಸಿಂಹ ಘರ್ಜನೆಯನ್ನು ಕೇಳಿದೊಡನೆಯೆ ಅವರಲ್ಲಿ ನೂತನ ಉತ್ಸಾಹವೊಂದು ಸಂಚರಿಸಿ ದಂತಾಯಿತು. ಅದು ಹನುಮಂತನ ಧ್ವನಿಯೆ ನಿಜ! ಜಾಂಬವನು ವಾನರರನ್ನೆಲ್ಲಾ ಕರೆದು, "ಎಲೈ ವೀರರೆ, ಹನುಮಂತನು ನಿಜವಾಗಿಯೂ ಕೃತಕಾರ್ಯನಾಗಿಯೆ ಬರುತ್ತಿರುವನು. ಆತನ ಕಂಠಧ್ವನಿಯೆ ಆತನ ವಿಜಯವನ್ನು ಸೂಚಿಸುತ್ತಿದೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ" ಎಂದು ಹೇಳಿದನು. ಅದನ್ನು ಕೇಳಿ ವಾನರರು ಕುಳಿತಲ್ಲಿಯೆ ನೆಗೆಯಲಾರಂಭಿಸಿದರು. ಹನುಮಂತನನ್ನು ಕಾಣುವೆನೆಂಬ ಸಂತೋಷದಿಂದ ಗಿಡದಿಂದ ಗಿಡಕ್ಕೆ, ಬಂಡೆಯಿಂದ ಬಂಡೆಗೆ ಹಾರಿ ಹಾರಿ ಕುಣಿದಾಡಿದರು. ಅದೋ ಗರುಡನಂತೆ ಹಾರಿಬರುತ್ತಿರುವ ಹನುಮಂತ! "ಜಯ ಹನುಮಂತನಿಗೆ, ಜಯ ಆಂಜನೇಯನಿಗೆ, ಜಯ ಮಾರುತಪುತ್ರನಿಗೆ" ಎಂದು ಎಲ್ಲರೂ ಮೇಲಕ್ಕೆ ಕೈಯೆತ್ತಿ ನಮಸ್ಕರಿಸುತ್ತಾ ಹನುಮಂತನನ್ನು ಪುರಸ್ಕರಿಸಿದರು. ಹಾರಿಬರುತ್ತಿದ್ದ ಆಂಜನೇಯನು ಆ ಪರ್ವತದ ಮಧ್ಯದಲ್ಲಿದ್ದ ಝರಿಯಲ್ಲಿ ದೊಡ್ಡ ಬೆಟ್ಟದಂತೆ ಧುಮ್ಮಿಕ್ಕಿದನು. ಕಪಿನಾಯಕರೆಲ್ಲರೂ ಆತನ ಸುತ್ತಲೂ ಮುತ್ತಿಕೊಂಡರು. ಹನುಮಂತನು ನೀರಿನಿಂದ ಮೇಲಕ್ಕೆದ್ದು ಹಿರಿಯನಾದ ಜಾಂಬವನಿಗೂ ಯುವರಾಜನಾದ ಅಂಗದನಿಗೂ ನಮಸ್ಕರಿಸಿದನು. ಆ ವೇಳೆಗೆ ಉಳಿದ ವಾನರರು ದಣಿದು ಬಂದಿದ್ದ ಆತನಿಗೆ ಫಲಾಹಾರಕ್ಕಾಗಿ ತಂದಿಕ್ಕಿದರು. "ಸೀತಾದೇವಿಯನ್ನು ಕಂಡೆ" ಎಂದು ಸಂಕ್ಷೇಪವಾಗಿ ಸೂಚಿಸಿ, ಆತನು ಒಂದು ರಮಣೀಯವಾದ ಪ್ರದೇಶದಲ್ಲಿ ವಿಶ್ರಮಿಸುತ್ತಾ ಕುಳಿತುಕೊಂಡನು.

ವಿಶ್ರಾಂತಿ ಫಲಹಾರಗಳಾದ ಮೇಲೆ ಹನುಮಂತನು ತಾನು ಹೋಗಿಬಂದ ಸಮಾಚಾರವನ್ನೆಲ್ಲಾ ವಿಸ್ತಾರವಾಗಿ ಅಂಗದಾದಿಗಳಿಗೆ ವಿವರಿಸಿ ಹೇಳಿದನು. "ಎಲೈ ವಾನರೋತ್ತಮರಿರಾ, ನಾನು ಲಂಕೆಯನ್ನು ಸೇರಿ ರಾವಣಾಸುರನ ಅಶೋಕವನ ದಲ್ಲಿದ್ದ ಸೀತಾದೇವಿಯನ್ನು ಕಂಡೆ. ಭಯಂಕರಾಕಾರದ ರಾಕ್ಷಸಿಯರು ಆಕೆಯನ್ನು ಅಹೋರಾತ್ರಿಯೂ ಕಾಯುತ್ತಿದ್ದಾರೆ. ಪಾಪ! ಆಕೆ ಪತಿವಿರಹದಿಂದ ಬಹು ದುಃಖಿತೆ ಯಾಗಿದ್ದಾಳೆ. ತಲೆಗೂದಲೆಲ್ಲವೂ ಜಡೆಗಟ್ಟಿಹೋಗಿದೆ; ಉಪವಾಸದಿಂದ ಮೈಯೆಲ್ಲಾ ಸೊರಗಿ ಹೋಗಿದೆ; ದೇಹವೆಲ್ಲವೂ ಮಲಿನವಾಗಿಹೋಗಿದೆ. ನಿರಂತರವೂ ಶ್ರೀರಾಮ ಚಂದ್ರನ ಧ್ಯಾನದಲ್ಲಿಯೆ ತಲ್ಲೀನಳಾಗಿದ್ದಾಳೆ" ಎಂದನು. "ಸೀತೆಯನ್ನು ಕಂಡೆ!" ಎಂಬ ಅಮೃತಸದೃಶವಾದ ಮಾತುಗಳನ್ನು ಕೇಳಿ ವಾನರರ ಆನಂದಕ್ಕೆ ಪಾರವೇ ಇಲ್ಲ. ಕೆಲವರು ಅದನ್ನು ಕೇಳುತ್ತಲೆ ಸಿಂಹನಾದವಮಾಡಿದರು, ಮತ್ತೆ ಕೆಲವರು ಸಿಳ್ಳು ಹೊಡೆದರು! ಇನ್ನು ಕೆಲವರು ಗೂಳಿಯಂತೆ ಗುಟುರುಹಾಕಿದರು. ಹಲವರು ತಮ್ಮ ಜಾತಿಗೆ ಸಹಜವಾದ ಕಿಲಕಿಲ ಧ್ವನಿಯನ್ನು ಮಾಡಿದರು! ಕೆಲವು ವಾನರರು ಸಂತೋಷ ದಿಂದ ತಮ್ಮ ಬಾಲಗಳನ್ನು ನೆಲದ ಮೇಲೆ ಬಡಿದರು. ಇನ್ನು ಕೆಲವರು ಸಂತೋಷ ವನ್ನು ತಡೆಯಲಾರದೆ ಓಡಿ ಬಂದು ಹನುಮಂತನನ್ನು ಆಲಿಂಗಿಸಿದರು. ಎಲ್ಲೆಲ್ಲಿಯೂ

ಸಂತೋಷ, ಸಂಭ್ರಮ! ಅಂಗದನು ಹನುಮಂತನನ್ನು ಕುರಿತು "ಮಾರುತಿ, ನೀನು ಈ ಮಹಾ ವಿಸ್ತಾರವಾದ ಸಾಗರವನ್ನು ದಾಟಿ ಹೋಗಿ ಪುನಃ ಹಿಂದಿರುಗಿದೆ. ನಿನ್ನ ಪರಾಕ್ರಮಕ್ಕೆ ಎಣೆಯುಂಟೆ? ನಿನ್ನ ಸ್ವಾಮಿಭಕ್ತಿಯಂತೂ ಅಸದೃಶವಾದುದು. ರಾಮಪತ್ನಿಯನ್ನು ಕಂಡುದು ಪರಮ ಭಾಗ್ಯವೆ ಸರಿ" ಎಂದನು. ಹನುಮಂತನು ತಾನು ನೋಡಿದ ದೃಶ್ಯಗಳು, ಮಾಡಿದ ಕಾರ್ಯಗಳು ಎಲ್ಲವನ್ನೂ ವಿಸ್ತಾರವಾಗಿ ತಿಳಿಸುತ್ತಾ ಹೋದನು. ವಾನರ ವೀರರೆಲ್ಲರೂ ಕೈಜೋಡಿಸಿಕೊಂಡು ಆತನು ಹೇಳುವುದನ್ನೆ ಕೇಳುತ್ತಾ ಕುಳಿತಿದ್ದರು. ಎಲ್ಲರ ಮುಖದಲ್ಲಿಯೂ ತಾಂಡವವಾಡುತ್ತಿದ್ದುದು ಆನಂದ, ಸಂಭ್ರಮ!

---

## ೨೧

# ಲಂಕಾಪ್ರಯಾಣದ ವಿವರ ವೃತ್ತಾಂತ

ಹನುಮಂತನು ಹೇಳಿದ ಸ್ಥೂಲ ವಿಚಾರದಿಂದ ವಾನರರಿಗೆ ತೃಪ್ತಿಯಾಗಲಿಲ್ಲ. ಅವರ ಪರವಾಗಿ ಜಾಂಬವಂತನು ವಾಯುಪುತ್ರನಿಗೆ ಪ್ರಾರ್ಥನೆ ಸಲ್ಲಿಸಿದನು–"ವತ್ಸ ಆಂಜನೇಯ! ನೀನು ಲಂಕೆಗೆ ಹೋಗಿ ಬಂದ ವೃತ್ತಾಂತವನ್ನು ಇನ್ನೂ ವಿವರವಾಗಿ ತಿಳಿಸು. ಸೀತಾದೇವಿಯನ್ನು ನೀನು ಹೇಗೆ ನೋಡಿದೆ? ಆಕೆ ಯಾವ ಸ್ಥಿತಿಯಲ್ಲಿದ್ದಾಳೆ? ಕ್ರೂರಕರ್ಮಿಯಾದ ರಾವಣ ಆ ಸಾಧ್ವಿಯ ವಿಚಾರದಲ್ಲಿ ಹೇಗೆ ನಡೆದುಕೊಳ್ಳುತ್ತಾನೆ? ಇದೆಲ್ಲವನ್ನೂ ಕೇಳಿದ ಮೇಲೆ ಶ್ರೀರಾಮಸನ್ನಿಧಿಯಲ್ಲಿ ಎಷ್ಟನ್ನು ಹೇಳಬಹುದು, ಯಾವುದನ್ನು ಹೇಳಬಾರದು, ಎಂಬುದನ್ನು ಈಗಲೆ ನಿರ್ಧರಿಸೋಣ" ಎಂದನು. ಸೀತಾದೇವಿಯ ವೃತ್ತಾಂತವನ್ನು ತಿಳಿಸುವುದೆಂದರೆ ಹನುಮಂತನಿಗೆ ಬಹು ಸಂತೋಷ. ಆಕೆಯನ್ನು ನೆನೆದರೆ ಆತನ ಮೈ ಭಕ್ತಿಯಿಂದ ರೋಮಾಂಚನಗೊಳ್ಳುತ್ತಿತ್ತು. ಆತನು ಮನಸ್ಸಿನಲ್ಲಿಯೆ ಆ ಸತೀಮಣಿಗೆ ನಮಸ್ಕರಿಸಿ, ತಾನು ಪ್ರಯಾಣಮಾಡಿ ಬಂದ ಸಮಾಚಾರವನ್ನು ವಿಸ್ತಾರವಾಗಿ ತಿಳಿಸಲು ಮೊದಲು ಮಾಡಿದನು.

"ಮಿತ್ರರೆ, ನಾನು ಇಲ್ಲಿಂದ ದಕ್ಷಿಣ ತೀರವನ್ನು ಸೇರುವುದಕ್ಕಾಗಿ ಗಗನಕ್ಕೆ ಹಾರಿದೆನಷ್ಟೆ? ನಾನು ಆಕಾಶಮಾರ್ಗದಲ್ಲಿ ಹಾರಿಹೋಗುತ್ತಿರುವಾಗ ಸುವರ್ಣಮಯ ವಾದ ಒಂದು ಪರ್ವತ ನನ್ನ ಗಮನಕ್ಕೆ ವಿಘ್ನವನ್ನಾಚರಿಸುವಂತೆ ಸಮುದ್ರದಿಂದ ಮೇಲಕ್ಕೆದ್ದಿತು. ನಾನು ಅದನ್ನು ನಿವಾರಿಸುವುದಕ್ಕಾಗಿ ಬಾಲದಿಂದ ಅಪ್ಪಳಿಸಿದೆ. ಅದ ರಿಂದ ಆ ಪರ್ವತದ ಶಿಖರ ಪುಡಿಪುಡಿಯಾಯಿತು. ಆಗ ಆ ಪರ್ವತವು ಮೃದುಮಧುರ ಧ್ವನಿಯಲ್ಲಿ ಮಗು! ಹನುಮಂತ! ನಾನು ನಿನ್ನ ತಂದೆಯಾದ ವಾಯುದೇವನ ಪರಮಮಿತ್ರ. ಹಿಂದೆ ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನೆಲ್ಲಾ ಕತ್ತರಿಸುತ್ತಿರಲು ಭಯದಿಂದ ತತ್ತರಿಸುತ್ತಿದ್ದ ನಾನು ನಿನ್ನ ತಂದೆಯ ಸಹಾಯದಿಂದ ಇಲ್ಲಿಗೆ ಹಾರಿ ಬಂದೆ. ಹೀಗೆ ಉಪಕೃತನಾದ ನಾನು ಈ ಸಮುದ್ರದಲ್ಲಿಯೆ ಬಚ್ಚಿಟ್ಟುಕೊಂಡಿದ್ದೇನೆ. ನನ್ನ ಹೆಸರು ಮೈನಾಕ. ನೀನು ಹೋಗುತ್ತಿರುವ ಶ್ರೀರಾಮ ಕಾರ್ಯಕ್ಕೆ ಸಹಾಯ ಮಾಡುವುದು ನನ್ನ ಕರ್ತವ್ಯ. ಮಹಾ ಧರ್ಮಾತ್ಮನಾದ ಆ ಶ್ರೀರಾಮಚಂದ್ರನು ದೇವೇಂದ್ರ ಸದೃಶನು. ಇಂತಹ ಶ್ರೀರಾಮನಿಗೆ ನೀನು ದೂತ; ಅಲ್ಲದೆ ವಾಯು ಪುತ್ರ. ಈ ಎರಡು ಕಾರಣಗಳಿಂದಲೂ ನಿನಗೆ ಸಹಾಯ ಮಾಡಬೇಕಾದುದು ನನ್ನ ಧರ್ಮ" ಎಂದು ಹೇಳಿತು. ನಾನು ನನ್ನ ಕಾರ್ಯಗೌರವವನ್ನಾತನಿಗೆ ತಿಳಿಸಿ ಆತನ ಅಪ್ಪಣೆಯನ್ನು ಪಡೆದು ಒಡನೆಯೆ ಮುಂದಕ್ಕೆ ಪ್ರಯಾಣ ಮಾಡಿದೆ. ಮಾರ್ಗಮಧ್ಯದಲ್ಲಿ ನಾಗಮಾತೆಯಾದ ಸುರಸೆ ನನ್ನನ್ನು ಕಂಡಳು. ಆಕೆ ನನ್ನನ್ನು

ಕುರಿತು "ಎಲೈ ಕಪಿವೀರ! ದೇವತೆಗಳು ನಿನ್ನನ್ನು ನನ್ನ ಆಹಾರಕ್ಕಾಗಿಯೇ ನಿಯೋಗಿಸಿರುವರು; ನಿನಗಾಗಿ ನಾನು ಬಹುಕಾಲದಿಂದಲೂ ಕಾಯುತ್ತಿದ್ದೆ. ಈಗ ಬಾ. ನಾನು ನಿನ್ನನ್ನು ತಿನ್ನಬೇಕಾಗಿದೆ" ಎಂದಳು. ನಾನು ಹೋಗುತ್ತಿರುವ ಕಾರ್ಯಗೌರವವನ್ನು ಅವಳಿಗೆ ತಿಳಿಸಿದೆ; ಆಕೆಯೂ ಶ್ರೀರಾಮನ ರಾಜ್ಯಾಧಿಪತ್ಯಕ್ಕೆ ಒಳಪಟ್ಟಿರುವುದರಿಂದ ರಾಮದೌತ್ಯಕ್ಕಾಗಿ ಹೊರಟ ನನಗೆ ಸಹಾಯ ಮಾಡಬೇಕಾದುದು ಅಗತ್ಯವೆಂದು ತಿಳಿಸಿದೆ; ಕೊನೆಗೆ ಸೀತಾಮಾತೆಯನ್ನು ಕಂಡು ಬಂದು ಶ್ರೀರಾಮನಿಗೆ ಸುದ್ದಿ ಕೊಟ್ಟು ಬರುವವರೆಗಾದರೂ ಕಾಲಾವಕಾಶ ಕೊಡುವಂತೆ ಬೇಡಿಕೊಂಡೆ. ಆದರೂ ಆಕೆ ಹಟವನ್ನು ಬಿಡದೆ ಆ ಕ್ಷಣವೆ ನನ್ನನ್ನು ಭಕ್ಷಿಸಬೇಕೆಂದು ನಿಂತಳು. ಆಕೆಯಿಂದ ತಪ್ಪಿಸಿಕೊಳ್ಳಬೇಕೆಂದು ನಾನು ಹತ್ತು ಯೋಜನಾ ವಿಸ್ತಾರವಾಗಿದ್ದ ನನ್ನ ದೇಹವನ್ನು ಮತ್ತೂ ದೊಡ್ಡದಾಗಿ ಬೆಳೆಸಿದನು. ಆದರೇನು? ಆಕೆಯ ಬಾಯಿ ಅದಕ್ಕೂ ದೊಡ್ಡದಾಗಿ ಅರಳಿತು. ಇದು ಪ್ರಯೋಜನವಿಲ್ಲವೆಂದುಕೊಂಡು ಅಣುಪ್ರಮಾಣಕ್ಕೆ ನನ್ನ ದೇಹವನ್ನು ಕುಗ್ಗಿಸಿಕೊಂಡು ಕ್ಷಣ ಮಾತ್ರದಲ್ಲಿ ಆಕೆಯ ಬಾಯನ್ನು ಹೊಕ್ಕು ಹೊರಕ್ಕೆ ಬಂದೆ. ಆಗ ಸುರಸಾದೇವಿ ಸುಪ್ರೀತಳಾಗಿ ನನ್ನನ್ನು ಹರಸಿ ಬೀಳ್ಕೊಟ್ಟಳು. ಅಲ್ಲಿಂದ ಸ್ವಲ್ಪ ದೂರ ಪ್ರಯಾಣ ಸಾಗುವಷ್ಟರಲ್ಲಿ ಮತ್ತೊಂದು ದೊಡ್ಡ ಕಂಟಕ ಬಂದಿತು. ಅಂತರಿಕ್ಷದಲ್ಲಿ ಹೋಗುತ್ತಿದ್ದ ನನ್ನ ಪ್ರಯಾಣವೆ ಜಗ್ಗನೆ ನಿಂತಿತು. ಕೆಳಗೆ ನೋಡುತ್ತೇನೆ: ಸಮುದ್ರದಲ್ಲಿ ಭಯಂಕರ ರಾಕ್ಷಸಿ ನನ್ನ ನೆರಳನ್ನು ಹಿಡಿದು ನನ್ನ ಗಮನವನ್ನು ತಡೆದಿದ್ದಾಳೆ! ನನ್ನನ್ನು ಹಿಡಿದು ಭಕ್ಷಿಸಲು ತವಕಪಡುತ್ತಿದ್ದ ಅವಳಲ್ಲಿ ಒಳ್ಳೆಯ ಮಾತುಗಳೇನೂ ನಡೆಯುವಂತಿರಲಿಲ್ಲ. ನಾನು ಅಣುರೂಪದಿಂದ ಆ ರಾಕ್ಷಸಿಯ ಹೊಟ್ಟೆಯನ್ನು ಪ್ರವೇಶಿಸಿ ಅಲ್ಲಿ ಪರ್ವತಾಕಾರವಾಗಿ ಬೆಳೆದು ಅಲ್ಲಿ ಅವಳ ಪಕ್ಕೆಲಬುಗಳನ್ನು ಸೀಳಿಕೊಂಡು ಹೊರಕ್ಕೆ ಬಂದೆ. ಈ ವಿಘ್ನಗಳನ್ನೆಲ್ಲಾ ನಿವಾರಿಸಿಕೊಂಡು ಅಂತೂ ದಕ್ಷಿಣ ಸಮುದ್ರ ತೀರವನ್ನು ಸೇರಿದೆ. ದೂರದಲ್ಲಿ ಲಂಕಾಪಟ್ಟಣ ಕಾಣುತ್ತಿತ್ತು.

"ರಾತ್ರಿ ಕತ್ತಲಾಗುವವರೆಗೂ ಸಮುದ್ರದ ಅಂಚಿನಲ್ಲಿ ಕಾಲಕಳೆದು ಆಮೇಲೆ ಯಾರಿಗೂ ಕಾಣದಂತೆ ಲಂಕಾಪಟ್ಟಣವನ್ನು ಪ್ರವೇಶಿಸಬೇಕೆಂದು ಹೊರಟೆ. ಆದರೆ, ಅಷ್ಟರಲ್ಲಿ ಘೋರರಾಕ್ಷಸಿಯೊಬ್ಬಳು ನನಗೆ ಇದಿರಾಗಿ ನನ್ನನ್ನು ಕೊಲ್ಲುವುದಕ್ಕೆಂದು ಮುಂದೆ ಬಂದಳು. ಆದರೆ ಒಮ್ಮೆ ಎಡಗೈಯಿಂದ ಗುದ್ದಿದೆನೊ ಇಲ್ಲವೊ ಅವಳು ನನಗೆ ಶರಣಾಗತಳಾಗಿ "ಎಲೈ ವೀರನೆ, ನಾನೇ ಲಂಕಾಧಿದೇವತೆ. ನನ್ನನ್ನೇ ಸೋಲಿಸಿದ ನೀನು ಇದರಲ್ಲಿರುವ ರಾಕ್ಷಸರನ್ನೆಲ್ಲಾ ಸೋಲಿಸುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿ, ನನ್ನನ್ನು ಮುಂದಕ್ಕೆ ಬಿಟ್ಟಳು. ನಾನು ಊರನ್ನು ಪ್ರವೇಶಿಸಿ ರಾತ್ರಿಯೆಲ್ಲಾ ಸೀತಾದೇವಿಗಾಗಿ ಅಲೆದೆ. ರಾವಣನ ಅಂತಃಪುರಕ್ಕೂ ಹೋದೆ. ಆಕೆ ಎಲ್ಲಿಯೂ ಕಾಣ ಬರಲಿಲ್ಲ. ನಾನು ಚಿಂತೆಯಲ್ಲಿ ಮುಳುಗಿರುವಾಗ ರಾವಣನ ಗೃಹೋದ್ಯಾನ ಕಣ್ಣಿಗೆ ಬಿತ್ತು. ಆ ಸುಂದರವಾದ ವನವನ್ನು ಪ್ರವೇಶಿಸಿ ಒಂದು ದೊಡ್ಡ ಶಿಂಶುಪವೃಕ್ಷವನ್ನು ಹತ್ತಿ ಸುತ್ತಲೂ ನೋಡುವಾಗ ಹತ್ತಿರದಲ್ಲೆ ಒಂದು ಬಾಳೆಯ ತೋಟ ಕಣ್ಣಿಗೆ ಬಿತ್ತು.

ನಾನು ಕುಳಿತಿದ್ದ ವೃಕ್ಷಕ್ಕೆ ಸ್ವಲ್ಪದೂರದಲ್ಲಿಯೆ ಕಮಲಮುಖಿಯಾದ ಸೀತಾದೇವಿ ಕಾಣಬಂದಳು. ಮುಖ ಬಾಡಿದೆ; ಮೈಯೆಲ್ಲಾ ಮಲಿನವಾಗಿದೆ; ಉಟ್ಟ ವಸ್ತ್ರ ಕೊಳಕಾಗಿದೆ. ತಲೆಯಕೂದಲೆಲ್ಲವೂ ಜಡೆಗಟ್ಟಿಹೋಗಿದೆ; ದುಃಖದಿಂದ ಆಕೆಯ ದೇಹ ಕೃಶವಾಗಿಹೋಗಿದೆ. ಆಕೆಯ ಸುತ್ತಲೂ ವಿಕೃತಾಕಾರದ ರಾಕ್ಷಸಿಯರು ಬೇರೆ. ಹೆಣ್ಣು ಜಿಂಕೆಯನ್ನು ಮುತ್ತಿದ ಹುಲಿಗಳ ತಂಡದಂತೆ ಆ ರಾಕ್ಷಸಿಯರು ಆಕೆಯನ್ನು ಮೇಲಿಂದ ಮೇಲೆ ಹೆದರಿಸುತ್ತಿದ್ದರು. ಇದನ್ನು ತಡೆಯಲಾರದ ಆಕೆ ಆತ್ಮಹತ್ಯೆಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದಳು. ದೈವವಶದಿಂದ ನಾನು ಆ ವೇಳೆಗೆ ಅಲ್ಲಿಗೆ ಹೋಗಿದ್ದೆ. ಆಕೆಯ ದುರ್ದಶೆಯನ್ನು ಕಂಡು ಸಂಕಟಪಡುತ್ತಾ ಮರದಲ್ಲಿಯೆ ಅಡಗಿಕೊಂಡಿದ್ದೆ. ಅಷ್ಟರಲ್ಲಿ ಆ ಹತ್ತು ತಲೆಯ ರಾಕ್ಷಸ ತನ್ನ ಸ್ತ್ರೀಪರಿವಾರದೊಡನೆ ಬಹು ಠೀವಿಯಿಂದ ಆಕೆಯ ಬಳಿಗೆ ಬಂದ. ಆ ರಾಕ್ಷಸನನ್ನು ಕಾಣುತ್ತಲೆ, ಪಾಪ ಸೀತಾಮಾತೆ ತನ್ನ ತೊಡೆಗಳನ್ನು ಉಡುಗಿಸಿಕೊಂಡು, ಉಬ್ಬಿದ ಎದೆಗಳನ್ನು ತೋಳಿನಿಂದ ಅವುಚಿಕೊಳ್ಳುತ್ತಾ ಸಂಕುಚಿತಗಾತ್ರೆಯಾಗಿ ಕುಳಿತಳು. ಆ ಪಾಪಿ ರಾವಣನಿಗೆ ಅವಳ ಸಂಕಟವೇನುಗೊತ್ತು? ಕಾಮದಿಂದ ಕಂಗೆಟ್ಟಿದ್ದ ಅವನು ಮೊದಲು ಆಕೆಯನ್ನು ದೀನನಂತೆ ಪ್ರಾರ್ಥಿಸುತ್ತಿದ್ದವನು ಕಡೆಗೆ, "ಎಲೆ, ಗರ್ವಿಷ್ಠೆ, ಎಷ್ಟು ಹೇಳಿದರೂ ನೀನು ನನ್ನ ಮಾತುಗಳನ್ನು ಧಿಕ್ಕರಿಸುತ್ತಿರುವೆಯಲ್ಲವೆ? ಇರಲಿ, ನಿನಗೆ ಕೊಟ್ಟಿರುವ ಅವಧಿಯಲ್ಲಿ ಇನ್ನು ಎರಡು ತಿಂಗಳು ಮಾತ್ರ ಉಳಿದಿವೆ. ಅಷ್ಟರಲ್ಲಿ ನೀನು ನನ್ನ ವಶಳಾಗದಿದ್ದರೆ ನಿನ್ನನ್ನು ತಿಂದುಬಿಡುವೆನು" ಎಂದು ಹೆದರಿಸಿದನು. ಅವನ ಹೆದರಿಕೆಗೆ ಜಾನಕಿದೇವಿ ಹೆದರಿಯಾಳೆ? ಆಕೆ "ಛೀ, ನೀಚ! ಧರ್ಮಾತ್ಮನಾದ ಶ್ರೀರಾಮನ ಪತ್ನಿ ನಾನು. ನನ್ನಲ್ಲಿ ಅವಾಚ್ಯಗಳನ್ನಾಡುವ ನಿನ್ನ ನಾಲಿಗೆ ಸೀಳಬಾರದೆ? ನನ್ನ ಪತಿಯನ್ನು ವಂಚಿಸಿ ನನ್ನನ್ನು ಕದ್ದು ತಂದ ಹೇಡಿ! ಆತನ ಇದಿರಿನಲ್ಲಿ ನಿಲ್ಲುವ ಯೋಗ್ಯತೆ ನಿನಗುಂಟೆ?" ಎಂದು ಬೈದಳು. ಇದರಿಂದ ಕುಪಿತನಾದ ಆ ರಾಕ್ಷಸನು ಮುಷ್ಟಿ ಎತ್ತಿಕೊಂಡು ದೇವಿಯನ್ನು ಕೊಲ್ಲುವುದಕ್ಕೆಂದೆ ಹೊರಟನು. ಆದರೆ ಅಷ್ಟರಲ್ಲಿ ಆತನ ರಾಣಿಯಾದ ಮಂಡೋದರಿ* ಅವನನ್ನು ತಡೆದು ಬುದ್ಧಿ ಹೇಳಿ ಕರೆದೊಯ್ದಳು.

"ರಾವಣ ಅತ್ತ ಹೊರಟುಹೋಗುತ್ತಲೆ ಇತ್ತ ರಾಕ್ಷಸಿಯರು ಸೀತಾದೇವಿಯನ್ನು ನಿರ್ಬಂಧಿಸಲು ಮೊದಲು ಮಾಡಿದರು. ಅವರ ಹೆದರಿಕೆಯನ್ನೂ ನಿರ್ಬಂಧವನ್ನೂ ಆಕೆ ಲಕ್ಷಿಸಿಯಾಳೆ! ಕೊನೆಗೆ ಅವರು ಸೀತೆಯನ್ನು ತಿಂದೇಬಿಡಬೇಕೆಂದು ಕೂಗಾಡುತ್ತಿದ್ದರು. ಆ ನೀಚರು ಬಾಯಿಂದ ಆಡಿದಂತೆಯೆ ಮಾಡಿಬಿಡುತ್ತಿದ್ದರೊ ಏನೊ! ಆದರೆ ಅವರ ಮಧ್ಯದಲ್ಲಿದ್ದ ತ್ರಿಜಟೆ ಎಂಬುವಳು ಅವರ ನೀಚಕಾರ್ಯವನ್ನು ತಡೆದು ನಿಲ್ಲಿಸಿದಳು. ಶ್ರೀರಾಮನ ವಿಜಯವನ್ನೂ ರಾಕ್ಷಸ ವಿನಾಶವನ್ನೂ ಸೂಚಿಸುತ್ತಿದ್ದ ತನ್ನ ಕನಸನ್ನು ಆ ರಾಕ್ಷಸಿಯರಿಗೆ ಹೇಳಿ 'ರಾಮನಿಂದ ನಾವು ಉಳಿಯಬೇಕಾದರೆ ಸೀತಾದೇವಿಯನ್ನೆ

---

*ಧಾನ್ಯಮಾಲಿನಿ ಎಂದು ಹಿಂದೆ ಹೇಳಿದೆ. ಆಂಜನೇಯನು ಅವಳೇ ಮಂಡೋದರಿ ಎಂದು ತಿಳಿದನೆಂದು ಊಹಿಸಬಹುದು.

ಮರೆಹೊಗಬೇಕು' ಎಂದಳು. ಈ ಮಾತನ್ನು ಕೇಳಿದ ಸೀತಾದೇವಿ ಅವರಿಗೆ ರಕ್ಷಣೆ ನೀಡುವುದಾಗಿ ಭರವಸೆಯಿತ್ತಳು. ಆದರೂ ಆಕೆ ಮನಸ್ಸಿನಲ್ಲಿ ಅನುಭವಿಸುತ್ತಿದ್ದ ಮೂಕವೇದನೆ ನನಗೆ ಗೋಚರವಾಯಿತು. ಆಕೆಯ ದುಃಸ್ಥಿತಿಯನ್ನು ಕಂಡು ಕರುಳು ಮರುಗಿಹೋಯಿತು. ನಾನು ಅಲ್ಪಸ್ವಲ್ಪಕ್ಕೆ ಎದೆಗುಂದುವವನಲ್ಲ. ಆದರೂ ಆಕೆಯನ್ನು ಕಂಡಾಗ ಮನಸ್ಸಿಗೆ ನೆಮ್ಮದಿ ತಂದುಕೊಳ್ಳಲಾಗಲಿಲ್ಲ. ಆಕೆಯನ್ನು ಮಾತನಾಡಿಸಿ ಸಮಾಧಾನ ಮಾಡಬೇಕೆಂದುಕೊಂಡು ಅದಕ್ಕೆ ಪೂರ್ವಭಾವಿಯಾಗಿ ಇಕ್ಷ್ವಾಕುವಂಶದವರ ಚರಿತ್ರೆಯನ್ನೂ ಶ್ರೀರಾಮನ ಗುಣಕಥನವನ್ನೂ ಹೇಳುವುದಕ್ಕೆ ತೊಡಗಿದೆ. ಅದನ್ನು ಕೇಳಿದೊಡನೆಯೆ ಆಕೆಯ ಕಣ್ಣುಗಳಲ್ಲಿ ಧಾರಾಕಾರವಾಗಿ ಕಣ್ಣೀರು ಹರಿಯಿತು. ಆಕೆ ನನ್ನನ್ನು ನೋಡಿ 'ನೀನು ಯಾರು? ಇಲ್ಲಿಗೆ ಏಕೆ ಬಂದೆ? ಹೇಗೆ ಬಂದೆ? ರಾಮನೊಡನೆ ನಿನಗೆ ಸ್ನೇಹವಾದುದು ಹೇಗೆ? ಎಂದು ಮುಂತಾಗಿ ಪ್ರಶ್ನಿಸಿದಳು. ಆಗ ನಾನು 'ತಾಯಿ, ನಾನು ರಾಮದೂತ. ನನ್ನ ಹೆಸರು ಹನುಮಂತ. ನಿನ್ನನ್ನು ಅರಸುವುದಕ್ಕಾಗಿ ಆತನು ನನ್ನನ್ನು ಕಳುಹಿಸಿದ್ದಾನೆ. ಇಗೋ ಈ ಉಂಗುರವನ್ನು ಗುರುತಿಗಾಗಿ ನಿನ್ನಲ್ಲಿಗೆ ಕಳುಹಿರುವನು. ಈಗ ನಿನ್ನ ಅಪ್ಪಣೆಯಾದಂತೆ ನಡೆಯುತ್ತೇನೆ. ಈಗಲೆ ನಿನ್ನನ್ನು ಕೊಂಡೊಯ್ದು ರಾಮಲಕ್ಷ್ಮಣರ ಬಳಿ ನಿನ್ನನ್ನು ಸೇರಿಸುವುದಕ್ಕೂ ನಾನು ಸಿದ್ಧ' ಎಂದೆ. ಆಕೆ 'ಶ್ರೀರಾಮನೆ ಇಲ್ಲಿಗೆ ಬಂದು ರಾವಣನನ್ನು ಕೊಂದು ನನ್ನನ್ನು ಕರೆದೊಯ್ಯಲಿ' ಎಂದಳು. ಆಗ ನಾನು ಆಕೆಗೆ ನಮಸ್ಕರಿಸಿ, 'ತಾಯಿ, ನಿನ್ನನ್ನು ಕಂಡೆನೆಂಬುದು ನಂಬುಗೆಯಾಗುವಂತೆ ಶ್ರೀರಾಮನಿಗೆ ಒಂದು ಗುರುತನ್ನು ಕೊಡು' ಎಂದು ಕೇಳಿದೆ. ಆಕೆ ಈ ಚೂಡಾಮಣಿಯನ್ನು ನನಗೆ ಕೊಟ್ಟು, ಶ್ರೀರಾಮನಿಗೆ ಮಾತ್ರವೇ ಗೊತ್ತಿರುವ ಕೆಲವು ಏಕಾಂತ ವೃತ್ತಾಂತಗಳನ್ನೂ ನನ್ನ ಕೈಲಿ ಹೇಳಿ ಕಳುಹಿಸಿದ್ದಾಳೆ. ನಾನು ಹೊರಡಲು ಸಿದ್ಧನಾಗುತ್ತಲೆ ಆಕೆ ಕಣ್ಣೀರುಗರೆಯುತ್ತಾ ಮೇಲಿಂದ ಮೇಲೆ 'ಇಲ್ಲಿನ ವೃತ್ತಾಂತವೆಲ್ಲವನ್ನೂ ಶ್ರೀರಾಮಚಂದ್ರನಿಗೆ ತಿಳಿಸು. ಆತನು ಲಕ್ಷ್ಮಣ ಸುಗ್ರೀವರೊಡನೆ ಶೀಘ್ರವಾಗಿ ಇಲ್ಲಿಗೆ ಬರುವಂತೆ ತಿಳಿಸು. ಇನ್ನೆರಡು ತಿಂಗಳೆ ನನಗೆ ಅವಧಿ. ಅಷ್ಟರೊಳಗೆ ಬಂದರೆ ಸರಿ, ಇಲ್ಲವಾದರೆ ಬಂದರೂ ವ್ಯರ್ಥವಾಗುವುದು' ಎಂದಳು.

"ಸೀತಾದೇವಿಯ ಸಂಕಟಕರವಾದ ಮಾತುಗಳನ್ನು ಕೇಳಿ ನನಗೆ ರಾಕ್ಷಸರ ಮೇಲೆ ಅಗಾಧವಾದ ಕೋಪ ಹುಟ್ಟಿತು. ಅವರಿಗೆ ಒಂದು ಕೈತೋರಿಸಿದ ಮೇಲೆಯೆ ಹಿಂದಿರುಗಬೇಕೆಂದು ನಿಶ್ಚಯಿಸಿಕೊಂಡು ರಾವಣನಿಗೆ ಪರಮ ಪ್ರಿಯವಾದ ಅಶೋಕವನವೆಲ್ಲವನ್ನೂ ತೊತ್ತಳದುಳಿದು ನಾಶಮಾಡಿದೆ. ಅದನ್ನು ಕಂಡ ವನಪಾಲಕರು ಓಡಿಹೋಗಿ ತಮ್ಮ ದೊರೆಯಾದ ರಾವಣನಿಗೆ ಈ ವಿಚಾರವನ್ನು ತಿಳಿಸಿದರು. ಆತನು ಕೋಪಗೊಂಡು 'ಕಿಂಕರ'ರೆಂಬ ರಾಕ್ಷಸರನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದ. ನಾನು ಆ ತೋಟದ ಹೆಬ್ಬಾಗಿಲ ಅಗುಳಿಯನ್ನೆ ಕೈಗೆತ್ತಿಕೊಂಡು ಯುದ್ಧಕ್ಕೆ ಬಂದ 'ಕಿಂಕರ'ರನ್ನೆಲ್ಲಾ ಸಮೂಲವಾಗಿ ನಾಶಮಾಡಿದೆ. ಅನಂತರ ಆ ತೋಟದ ಮಧ್ಯದಲ್ಲಿದ್ದ ಚೈತ್ಯಾಲಯದ ಒಂದು ಕಂಭವನ್ನು ಕಿತ್ತುಕೊಂಡು ವನಸಂರಕ್ಷಕರಾದ ನೂರ್ವರು ಘೋರರಾಕ್ಷಸರನ್ನು

ಬಡಿದುಹಾಕಿದೆ. ಈ ಸುದ್ದಿ ರಾವಣನಿಗೆ ತಿಳಿದು ಆತನು ಪ್ರಹಸ್ತಪುತ್ರನಾದ ಜಂಬು ಮಾಲಿ ಎಂಬುವನನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಕ್ಷಣಮಾತ್ರದಲ್ಲಿ ಅವನೂ ಅವನೊಡನಿದ್ದ ಸೈನ್ಯವೂ ಯಮರಾಯನ ಅತಿಥಿಗಳಾದರು. ಅವನಾದ ಮೇಲೆ ಏಳು ಜನ ಮಂತ್ರಿಪುತ್ರರು ಬಂದರು. ಅವರಿಗೂ ಅದೇ ಗತಿಯಾಯಿತು. ರಾವಣನ ಪ್ರಮುಖ ಸೇನಾನಿಗಳಲ್ಲಿ ಐವರು ತಮ್ಮ ಸೈನ್ಯದೊಡನೆ ನನ್ನ ಮೇಲೆ ಏರಿ ಬಂದರು. ಅವರು ಯಮಲೋಕಕ್ಕೆ ಯಾತ್ರೆ ಹೊರಡಬೇಕಾಯಿತು. ಆಗ ರಾವಣನು ಬಲಶಾಲಿಗಳಲ್ಲಿ ಬಲಶಾಲಿಯೆಂದು ಹೆಸರಾದ ತನ್ನ ಮಗ ಅಕ್ಷಕುಮಾರನನ್ನೆ ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಅವನು ರಾವಣನ ಪಟ್ಟಮಹಿಷಿಯಾದ ಮಂಡೋದರಿಯ ಪುತ್ರ. ಮಹಾಶೂರನೆಂದು ಪ್ರಸಿದ್ಧನಾದವನು. ನಾನು ಸ್ವಲ್ಪ ಹೊತ್ತು ಅವನೊಡನೆ ಹೆಣಗಾಡಿ ಕೊನೆಗೆ ಅವನ ಕಾಲುಗಳೆರಡನ್ನೂ ಹಿಡಿದು ಅಂತರಾಳದಲ್ಲಿ ಗಿರಗಿರನೆ ತಿರುಗಿಸಿ ನೆಲಕ್ಕೆ ಬಡಿದೆ. ಅವನ ದೇಹವೆಲ್ಲಾ ಮಾಂಸದ ಮುದ್ದೆಯಾಗಿ ಹೋಯಿತು. ಇದನ್ನು ಕೇಳಿ ರಾವಣನ ಕೋಪ ಮಿತಿಮೀರಿತು. ಆತನು ನನ್ನನ್ನು ಹಿಡಿದುಕೊಂಡು ಬರುವುದಕ್ಕಾಗಿ 'ಇಂದ್ರಜಿತು'ವೆಂಬ ತನ್ನ ಹಿರಿಯ ಮಗನನ್ನು ಕಳುಹಿಸಿದನು. ಅವನಿಗೂ ನನ್ನನ್ನು ಜಯಿಸುವುದು ಸಾಧ್ಯವಿರಲಿಲ್ಲ. ಆದ್ದರಿಂದ ನನ್ನನ್ನು ಬಂಧಿಸುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಬ್ರಹ್ಮದೇವರ ಮೇಲಿನ ಗೌರವದಿಂದ ನಾನು ಅದಕ್ಕೆ ಒಳಗಾಗಿರುವಾಗ ರಾಕ್ಷಸರು ನನ್ನನ್ನು ಹಗ್ಗಗಳಿಂದ ಬಿಗಿದು ರಾವಣನ ಬಳಿಗೆ ಕೊಂಡೊಯ್ದರು.

"ರಾವಣನು ನನ್ನನ್ನು ಕಾಣುತ್ತಲೆ ಕಣ್ಣುಗಳಿಂದ ಕೆಂಡವನ್ನು ಸುರಿಸುತ್ತಾ ನಾನು ಲಂಕೆಗೆ ಹೋದುದಕ್ಕೂ ರಾಕ್ಷಸರನ್ನು ಕೊಂದುದಕ್ಕೂ ಕಾರಣವನ್ನು ಕೇಳಿದನು. ನಾನು ಸ್ಪಷ್ಟವಾಗಿಯೆ ಪ್ರತ್ಯುತ್ತರ ಕೊಟ್ಟೆ. 'ಅಯ್ಯಾ ರಾಕ್ಷಸರಾಜ, ನಾನು ಸೀತಾದೇವಿಯನ್ನು ಕಾಣುವುದಕ್ಕಾಗಿ ಬಂದೆ. ಶ್ರೀರಾಮದೂತನು ನಾನು. ನನ್ನ ಹೆಸರು ಹನುಮಂತ. ನಾನು ಸುಗ್ರೀವನ ಮಂತ್ರಿ. ನಮ್ಮ ರಾಜನು ನಿನಗೆ ನನ್ನ ಮೂಲಕ ಬುದ್ಧಿವಾದವನ್ನು ಹೇಳಿ ಕಳುಹಿಸಿದ್ದಾನೆ. ನೀನು, ಜೀವದ ಮೇಲೆ ಆಸೆ ಇದ್ದರೆ, ಸೀತಾದೇವಿಯನ್ನು ಹಿಂದಕ್ಕೆ ತಂದು ಶ್ರೀರಾಮನಿಗೆ ಒಪ್ಪಿಸಿ ಆತನಿಗೆ ಶರಣಾಗತನಾಗು. ನೀಚಕಾರ್ಯ ರಾಜನಿಗೆ ಸಲ್ಲ' ಎಂದು. ಇದನ್ನು ಕೇಳಿ ರಾವಣನಿಗೆ ಕೋಪದಿಂದ ಪ್ರಜ್ಞೆ ತಪ್ಪಿ ನನ್ನನ್ನು ಹಿಡಿದು ಕೊಲ್ಲುವಂತೆ ತನ್ನ ದೂತನಿಗೆ ಆಜ್ಞೆ ಮಾಡಿದನು. ಆದರೆ ಆತನ ತಮ್ಮನಾದ ವಿಭೀಷಣನು ದೂತವಧೆ ನಿಷಿದ್ಧವೆಂದು ಹೇಳಿದ್ದರಿಂದ ನನ್ನ ಬಾಲಕ್ಕೆ ಬೆಂಕಿಯನ್ನು ಹಚ್ಚಿ, ವಿರೂಪಗೊಳಿಸಿ ಓಡಿಸಿಬಿಡುವಂತೆ ಆತನು ಆಜ್ಞಾಪಿಸಿದ. ಸುತ್ತಲಿದ್ದ ರಾಕ್ಷಸರು ನನ್ನ ಬಾಲಕ್ಕೆ ಚಿಂದಿ ಬಟ್ಟೆಗಳನ್ನು ಸುತ್ತಿ, ಎಣ್ಣೆ ಹೊಯ್ದು ಬೆಂಕಿಯಿಟ್ಟರು. ಇಷ್ಟೇ ಸಾಲದೆ, ದೊಣ್ಣೆಗಳಿಂದ ನನ್ನನ್ನು ಪ್ರಹರಿಸುತ್ತಾ ಪರಿಪರಿಯಾಗಿ ನಿಂದಿಸುತ್ತಾ, ಲಂಕಾ ಪಟ್ಟಣದ ಬೀದಿಗಳಲ್ಲಿ ಮೆರವಣಿಗೆ ಮಾಡಹೊರಟರು. ಊರನ್ನು ನೋಡಬೇಕೆಂಬ ಉತ್ಸಾಹದಲ್ಲಿ ನನಗೆ ಅದಾವುದೂ

ಲಕ್ಷ್ಯವಿರಲಿಲ್ಲ. ಮೆರವಣಿಗೆ ಊರಬಾಗಿಲಿಗೆ ಬರುತ್ತಲೆ ನಾನು ದೇಹವನ್ನು ಕುಗ್ಗಿಸಿ ಕೊಂಡು ಕಟ್ಟುಗಳನ್ನೆಲ್ಲಾ ಕಳಚಿಕೊಂಡೆ. ಪುನಃ ದೊಡ್ಡ ಆಕಾರವನ್ನು ತಾಳಿ ಹೆಬ್ಬಾಗಿಲಿಗೆ ಹಾಕಿದ್ದ ಭಾರಿ ಅಗುಳಿಯನ್ನು ಕಿತ್ತುಕೊಂಡು ಸುತ್ತಲಿದ್ದ ರಾಕ್ಷಸ ರನ್ನೆಲ್ಲಾ ಸಂಹಾರಮಾಡಿದೆ. ಅಷ್ಟು ಸಾಲದೆಂದುಕೊಂಡು ನನ್ನ ಬಾಲದಲ್ಲಿ ಉರಿಯು ತ್ತಿದ್ದ ಬೆಂಕಿಯಿಂದ ಲಂಕಾಪಟ್ಟಣವನ್ನು ಹೊತ್ತಿಸಿ ಬೂದಿಮಾಡಿಹಾಕಿದೆ. ಊರೆಲ್ಲವೂ ಸುಟ್ಟಮೇಲೆ ಸೀತೆ ಏನಾಗಿರುವಳೊ ಎಂಬ ಭಯ ಮನಸ್ಸಿಗೆ ಬಂತು. ಆದರೆ ಆಕೆ ಕ್ಷೇಮವಾಗಿರುವಳೆಂದು ಆಕಾಶದಲ್ಲಿ ಚಾರಣರು ಆಡುತ್ತಿದ್ದ ಮಾತುಗಳಿಂದ ಸಮಾಧಾನ ಹೊಂದಿ, ಮತ್ತೊಮ್ಮೆ ಆಕೆಯನ್ನು ಸಂದರ್ಶಿಸಿದೆ. ಆಮೇಲೆ ಆಕೆಯಿಂದ ಅನುಜ್ಞೆ ಪಡೆದು ಅಲ್ಲಿಂದ ಹಾರಿ ನಿಮ್ಮ ಬಳಿಗೆ ಹೊರಟುಬಂದೆ."

---

೨೨

# ವಾನರರ ಸಮಾಲೋಚನೆ

ಹನುಮಂತನು ತಾನು ಲಂಕೆಗೆ ಹೋಗಿಬಂದ ಸಮಾಚಾರವನ್ನು ವಿಸ್ತಾರವಾಗಿ ತಿಳಿಸಿ, ಮುಂದೇನು ಮಾಡಬೇಕು ಎಂಬುದನ್ನು ಸಮಾಲೋಚಿಸುವಂತೆ ಕಪಿವೀರರಲ್ಲಿ ಬಿನ್ನಯಿಸಿಕೊಂಡನು. ಇತರರು ಅಭಿಪ್ರಾಯ ಕೊಡುವುದಕ್ಕೆ ಮುನ್ನ ತನ್ನ ಅಭಿಪ್ರಾಯವನ್ನು ಆತ ತಿಳಿಸಿದನು. "ಮಿತ್ರರೆ, ಆ ರಾಕ್ಷಸೇಶ್ವರನಾದ ರಾವಣ ಸಾಮಾನ್ಯನಲ್ಲ. ಅವನ ತಪೋಬಲವೊಂದೆ ಸಾಕು, ಮೂರು ಲೋಕಗಳನ್ನೂ ನಡುಗಿಸುವುದಕ್ಕೆ. ಮಹಾ ಪತಿವ್ರತೆಯಾದ ಸೀತಾದೇವಿಯನ್ನು ಕೈಯಿಂದ ಮುಟ್ಟಿದರೂ ಭಸ್ಮವಾಗದೆ ಇರಬೇಕಾದರೆ ಅವನ ತಪೋಮಹಿಮೆಯನ್ನು ಎಷ್ಟೆಂದು ಹೇಳೋಣ ? ಸೀತಾಮಾತೆಯಾದರೊ ತನ್ನ ಪತಿಯ ಕೈಯಿಂದಲೇ ರಾವಣನನ್ನು ಕೊಲ್ಲಿಸಬೇಕೆಂಬ ವೀರಧರ್ಮವನ್ನು ಕೈಕೊಂಡಿರುವಂತೆ ತೋರುತ್ತದೆ. ಅಲ್ಲಿನ ಪರಿಸ್ಥಿತಿ ಹೀಗಿದೆ. ಆದರೆ ನನ್ನನ್ನು ಕೇಳಿದರೆ, ನಾವೆಲ್ಲರೂ ಒಟ್ಟಾಗಿ ಮತ್ತೊಮ್ಮೆ ಲಂಕೆಗೆ ಹೋಗಿ, ಸೀತಾದೇವಿಯನ್ನು ಕರೆದುಕೊಂಡೆ ಶ್ರೀರಾಮಚಂದ್ರನ ಬಳಿಗೆ ಹೋಗುವುದು ಯುಕ್ತವೆಂದೂ ತೋರುತ್ತದೆ. ನಾನೊಬ್ಬನೆ ಆ ಸಮಸ್ತ ರಾಕ್ಷಸರನ್ನೂ—ಆ ರಾವಣನನ್ನು ಸಹ—ಸಂಹರಿಸಬಲ್ಲೆ. ನೀವು ಜೊತೆಯಲ್ಲಿದ್ದರಂತೂ ಅದು ಲೀಲಾಜಾಲವಾಗಿ ನಡೆದುಹೋಗುತ್ತದೆ. ಮತ್ತೊಮ್ಮೆ ಆ ಇಂದ್ರಜಿತು ಬ್ರಹ್ಮಾಸ್ತ್ರ, ಐಂದ್ರಾಸ್ತ್ರ, ರೌದ್ರಾಸ್ತ್ರ—ಇನ್ನೂ ಯಾವಯಾವ ಘೋರಾಸ್ತ್ರಗಳು ಅವನ ಬಳಿಯಲ್ಲಿವೆಯೊ ಅವೆಲ್ಲವನ್ನೂ ತಂದು ನನ್ನ ಮೇಲೆ ಪ್ರಯೋಗಿಸಲಿ. ನಾನು ಅವುಗಳೆಲ್ಲವನ್ನೂ ವ್ಯರ್ಥಮಾಡಬಲ್ಲೆ. ನನ್ನ ವಿಚಾರ ಹಾಗಿರಲಿ. ಈ ಜಾಂಬವಂತನನ್ನು ಇದಿರಿಸಿ ಬದುಕಬಲ್ಲವನಾರು ? ವೀರಸೇನಾನಿಯಾದ ನಮ್ಮ ಅಂಗದ ರಾಜಕುಮಾರನೊಬ್ಬನೆ ಆ ರಾಕ್ಷಸರನ್ನೆಲ್ಲಾ ಆಪೋಶನ ತೆಗೆದುಕೊಳ್ಳಬಲ್ಲ. ಈ ಮೈಂದ ದ್ವಿವಿದರು ಅಶ್ವಿನೀ ದೇವತೆಗಳ ಅಂಶವುಳ್ಳವರು ; ಬ್ರಹ್ಮನ ವರದಿಂದ ಅಜೇಯರಾಗಿರುವವರು. ನಾವೆಲ್ಲರೂ ಒಟ್ಟಾಗಿ ಲಂಕೆಯಮೇಲೆ ಏಕೆ ಏರಿಹೋಗಬಾರದು ? ನಾನು ಹೇಗಿದ್ದರೂ ಆ ಲಂಕೆಯನ್ನು ಸುಟ್ಟು ಬೀದಿ ಬೀದಿಯಲ್ಲೂ ನಮ್ಮ ಖ್ಯಾತಿಯನ್ನು ಹರಡಿ ಬಂದಿದ್ದೇನೆ. ನನಗೆ ಅಶೋಕವನದಲ್ಲಿ ದುಃಖದಿಂದ ಕೊರಗುತ್ತಾ ಕುಳಿತಿರುವ ಸೀತಾಮಾತೆಯನ್ನು ನೆನೆದೊಡನೆಯೆ ಹಿಂದಕ್ಕೆ ಹೋಗಲು ಕಾಲುಗಳೇಳುವುದಿಲ್ಲ. ಎಡೆಬಿಡದೆ ರಾಮಧ್ಯಾನ ಮಾಡುತ್ತಾ ಏಕವಸ್ತ್ರಧಾರಿಣಿಯಾಗಿ ಮಂಜುಮುಸುಕಿದ ತಾವರೆಯಬಳ್ಳಿಯಂತೆ ಕಳೆಗೆಟ್ಟಿರುವಳು. ಆ ರಾವಣನ ಪ್ರಬಲ ಪ್ರಲೋಭನಗಳನ್ನು ತಳ್ಳಿಹಾಕಿ ಭೂಶಯ್ಯೆಯ ಸಂಕಟವನ್ನನುಭವಿಸುತ್ತಾ ಆತ್ಮಹತ್ಯೆಗೆ ಕೂಡ ಸಿದ್ಧಳಾಗಿದ್ದಾಳಲ್ಲಾ !

ಆಕೆಯ ಸದಾಚಾರವೂ ಪತಿಭಕ್ತಿಯೂ ಲೋಕೋತ್ತರವಾದುವು. ರಾವಣನ ವಧೆಗೆ ಶ್ರೀರಾಮನು ನಿಮಿತ್ತ ಮಾತ್ರಕ್ಕೆ ಬೇಕು, ಅಷ್ಟೆ; ಸೀತೆಯೆ ಆ ಪಾಪಿಯ ಮೃತ್ಯುವಿಗೆ ಪ್ರಧಾನ ಕಾರಣಳು. ಮಿತ್ರರೆ, ದಿನದಿನಕ್ಕೂ ಆಕೆ ಕರಗಿಹೋಗುತ್ತಿದ್ದಾಳೆ. ಇದಕ್ಕೆ ಹೇಗೆ ಪ್ರತೀಕಾರ ಮಾಡಬೇಕೊ ಅದನ್ನು ನೀವು ಸೂಚಿಸಿ. ನನ್ನ ಅಭಿಪ್ರಾಯವನ್ನು ನಾನು ತಿಳಿಸಿದ್ದೇನೆ" ಎಂದನು.

ವಾಲಿಪುತ್ರನಾದ ಅಂಗದನು ಹನುಮಂತನ ಅಭಿಪ್ರಾಯವನ್ನು ಸಂಪೂರ್ಣವಾಗಿ ಅನುಮೋದಿಸಿದನು. "ಮಿತ್ರರೆ, ಸೀತೆಯನ್ನು ಕರೆದುಕೊಂಡೆ ನಾವು ಹಿಂದಿರುಗಬೇಕು. ಶ್ರೀರಾಮನ ಮುಂದೆ ನಿಂತು 'ನಾವು ಸೀತೆಯನ್ನು ನೋಡಿಬಂದೆವೆ ಹೊರತು ಕರೆತರಲಿಲ್ಲ' ಎಂದು ಹೇಳುವುದು ನಮ್ಮ ಮರ್ಯಾದೆಗೆ ಉಚಿತವಲ್ಲದ ಮಾತು. ನಾವು ತ್ರಿಭುವನ ಪರಾಕ್ರಮಿಗಳೆಂದು ಪ್ರಖ್ಯಾತರಾದವರು. ಅಲ್ಲದೆ, ನಮ್ಮ ಮಿತ್ರನಾದ ಹನುಮಂತನು ಈಗಾಗಲೆ ಅನೇಕ ರಾಕ್ಷಸರನ್ನು ಸಂಹರಿಸಿ ಬಂದಿರುವನು. ಇನ್ನು ನಾವು ಮಾಡಬೇಕಾದ ಮಹತ್ಕಾರ್ಯ ತಾನೆ ಏನು? ಸೀತಾದೇವಿಯನ್ನು ಕರೆತಂದು ಶ್ರೀರಾಮಚಂದ್ರಮೂರ್ತಿಗೆ ಒಪ್ಪಿಸೋಣ" ಎಂದನು. ಎಲ್ಲ ವಾನರರಿಗೂ ಆ ಮಾತೇ ಸರಿಯೆಂದು ತೋರಿತು. ಆದರೆ ವಾನರಲ್ಲೆಲ್ಲಾ ಹಿರಿಯವನಾದ ಜಾಂಬವಂತನು ಅಂಗದನನ್ನು ಕುರಿತು "ಕುಮಾರ, ನಿನ್ನ ಆಲೋಚನೆ ಯುಕ್ತವೇ ಸರಿ. ನಾವು ಸಮರ್ಥರೆಂಬ ವಿಚಾರದಲ್ಲಿಯೂ ಸಂದೇಹವಿಲ್ಲ. ಆದರೆ ನಾವು ಶ್ರೀರಾಮನ ಆಜ್ಞೆಯನ್ನು ಅನುಸರಿಸಿಯಲ್ಲವೆ ಕಾರ್ಯವನ್ನು ಮಾಡಬೇಕಾದುದು? ಆದ್ದರಿಂದ ಮೊದಲು ಆತನ ಮನಸ್ಸಿನಲ್ಲಿ ಏನಿದೆಯೊ ಅದನ್ನು ತಿಳಿದುಕೊಳ್ಳೋಣ. ಆತನ ಅಭಿಪ್ರಾಯಕ್ಕೆ ತಕ್ಕಂತೆ ಮುಂದಿನ ಕಾರ್ಯವನ್ನು ಮಾಡೋಣ ಎಂದನು. ಆ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು. ಎಲ್ಲರೂ ಹನುಮಂತನನ್ನು ಮುಂದಿಟ್ಟುಕೊಂಡು ಕಿಷ್ಕಿಂಧೆಗೆ ಹಿಂದಿರುಗಿ ಹೊರಟರು.

---

## ೨೩

# ಮಧುಪಾನ

'ಶ್ರೀರಾಮಚಂದ್ರನನ್ನು ಕಾಣಬೇಕು; ಸೀತಾವೃತ್ತಾಂತವನ್ನು ನಿವೇದಿಸ ಬೇಕು'—ಈ ಉತ್ಸಾಹದಲ್ಲಿದ್ದ ವಾನರರಿಗೆ ಒಂದಕ್ಕೆ ಹತ್ತರಷ್ಟು ಬಲ ಬಂದಂತಾ ಗಿತ್ತು. ಆದ್ದರಿಂದ ಆಕಾಶವನ್ನು ಮುಚ್ಚಿಹಾಕುವ ದಟ್ಟ ಮೋಡಗಳಂತೆ ಅವರೆಲ್ಲರೂ ಗಗನಮಾರ್ಗದಲ್ಲಿ ಹಾರಿಬಂದು ಕಿಷ್ಕಿಂಧೆಗೆ ಬಹು ಸಮೀಪದಲ್ಲಿರುವ ಸುಗ್ರೀವನ ಮಧುವನದ ಬಳಿ ನೆಲಕ್ಕಿಳಿದರು. ಆ ವನವೆಂದರೆ ಸುಗ್ರೀವನಿಗೆ ಪಂಚಪ್ರಾಣ. ಅದನ್ನು ರಕ್ಷಿಸಲು ಆತನು ತನ್ನ ಸೋದರಮಾವನಾದ ದಧಿಮುಖನೆಂಬುವನನ್ನು ನೇಮಿಸಿದ್ದನು. ಆತನು ಅಲ್ಲಿಯೆ ವಾಸಮಾಡಿಕೊಂಡು ಸದಾ ಅದರ ಸಂರಕ್ಷಣೆಯಲ್ಲಿ ನಿರತನಾಗಿದ್ದನು. ಆ ವನ ಜೇನುತುಪ್ಪಕ್ಕೆ ಪ್ರಸಿದ್ಧವಾದುದು; ಅಲ್ಲಿ ಇಳಿದ ವಾನರರು ಮಧುಸೇವನೆಗೆ ಅಪ್ಪಣೆ ಕೊಡಬೇಕೆಂದು ಯುವರಾಜನನ್ನು ಪ್ರಾರ್ಥಿಸಿದರು. ಆತನು ಜಾಂಬವಂತನೊಡನೆ ಪರಾಮರ್ಶಿಸಿ ಆತನ ಆಲೋಚನೆಯಂತೆ ಅನುಜ್ಞೆಯಿತ್ತನು. ಅಪ್ಪಣೆ ದೊರೆತುದೆ ತಡ, ಆ ಕಪಿಗಳ ಹಾವಳಿ ಹೇಳತೀರದಂತಾಯಿತು. ಹಾಡುವವರು ಯಾರೊ, ಕುಣಿಯುವವರು ಯಾರೊ, ಲಾಗ ಹಾಕುವವರು ಯಾರೊ, ಗಟ್ಟಿಯಾಗಿ ಕೇಕೆ ಹಾಕಿಕೊಂಡು ನಗುವವರು ಯಾರೊ, ಅಮಲೇರಿದಂತೆ ತೂರಾಡುತ್ತಿರುವವರು ಯಾರೊ! ನೆಗೆಯುವುದು, ಕೂಗುವುದು, ಪರಸ್ಪರ ಆಲಿಂಗನ ಮಾಡಿಕೊಳ್ಳುವುದು, ಹುಚ್ಚು ಹುಚ್ಚಾಗಿ ಕುಣಿದಾಡುವುದು! ಕೆಲವರು ಗಿಡದಿಂದ ಗಿಡಕ್ಕೆ ಹಾರಿದರು; ಮತ್ತೆ ಕೆಲವರು ಮರದ ತುದಿಯಿಂದ ಕೆಳಕ್ಕೆ ಕುಪ್ಪಳಿಸಿದರು. ಒಬ್ಬ ವಾನರ ಹಾಡು ತ್ತಿದ್ದರೆ ಮತ್ತೊಬ್ಬ ಅವನ ಮೇಲೆ ನಗುತ್ತಾ ಕುಪ್ಪಳಿಸಿದ. ಅದನ್ನು ಕಂಡು ಮತ್ತೊಬ್ಬ ಅವನ ಮೇಲೆ ಅಳುತ್ತಾ ಕುಪ್ಪಳಿಸಿದ. ಆ ಅಳುವವನ ಮೇಲೆ ಮತ್ತೊಬ್ಬನು ಕೂಗುತ್ತಾ ಬಿದ್ದ. ಯಥೇಚ್ಛವಾಗಿ ಮಧುಪಾನ ಮಾಡಿತು, ಆ ಕಪಿಸೇನೆ. ಕುಡಿದು ಕುಡಿದು ಮೈಮೇಲೆ ಪ್ರಜ್ಞೆ ತಪ್ಪಿಹೋಯಿತು. ಫಲವೃಕ್ಷಗಳನ್ನೂ ಹೂ ಕಾಯಿ ಗಳನ್ನೂ ಕಿತ್ತುಹಾಕಲು ಮೊದಲು ಮಾಡಿದರು.

ಈ ಕಪಿಗಳ ಹಾವಳಿಯನ್ನು ದಧಿಮುಖ ನೋಡಿದ. "ಅಯ್ಯೋ! ಈ ವನವನ್ನು ಹೀಗೆ ಹಾಳುಮಾಡಕೂಡದು. ನೀವು ಈಗಲೆ ಇಲ್ಲಿಂದ ಹೊರಟು ಹೋಗಿರಿ" ಎಂದು ಆತನು ಆ ಕಪಿಗಳನ್ನೆಲ್ಲಾ ಗದರಿಸಿದ. ಅವನ ಮಾತು ಒಂದು ಕಪಿಗೂ ಕಿವಿಗೆ ಬಿದ್ದಂತೆ ಕಾಣಲಿಲ್ಲ. ತಮ್ಮ ಚೇಷ್ಟೆಗಳನ್ನು ಅವರು ಮುಂದುವರಿಸಿದರು. ದಧಿಮುಖನಿಗೆ ಕೋಪಬಂತು. ಒಬ್ಬರಿಬ್ಬರನ್ನು ಹಿಡಿದು ಗದರಿಸಿ ನಾಲ್ಕು ಒದೆಗಳನ್ನೂ ಕೊಟ್ಟ. ಆಗ ಆ ವಾನರರೆಲ್ಲಾ ಸೇರಿಕೊಂಡು ಅವನನ್ನು ಗೇಲಿಮಾಡುತ್ತಾ ಅತ್ತ ಇತ್ತ ಎಳೆದಾಡಿ

ದರು. ಕೆಲವರು ಉಗುರುಗಳಿಂದ ಪರಚಿದರು, ಕೆಲವರು ಹಲ್ಲುಗಳಿಂದ ಕಡಿದರು, ಇನ್ನು ಕೆಲವರು ಮುಷ್ಟಿಗಳಿಂದ ಗುದ್ದಿದರು, ಮತ್ತೆ ಕೆಲವರು ಕಾಲಿನಿಂದ ಒದ್ದರು. ವನದಲ್ಲಿದ್ದ ಮಧುವೆಲ್ಲಾ ನಿಶ್ಶೇಷವಾಯಿತು. ವನವೆಲ್ಲಾ ಹಾಳಾಯಿತು. ಆದರೂ ಅವರಲ್ಲಿ ಒಬ್ಬರಾದರೂ ಪಶ್ಚಾತ್ತಾಪ ಪಡಲಿಲ್ಲ. ಅವರಿಗೆ ಮುಂದಾಳಾಗಿದ್ದ ಹನುಮಂತನೇ ಕೂಗಿ ಹೇಳಿದ–"ಎಲೆ ವಾನರರಿರಾ, ನೀವೇನೂ ಹೆದರಬೇಡಿ, ಕುಡಿಯಿರಿ, ಚೆನ್ನಾಗಿ ಕುಡಿಯಿರಿ. ನಿಮ್ಮ ಮೇಲೆ ಕೈಮಾಡಲು ಯಾರು ಬಂದರೂ ನಾನು ನೋಡಿಕೊಳ್ಳುತ್ತೇನೆ." ಅಂಗದನು ಆ ಮಾತನ್ನು ಅನುಮೋದಿಸಿದನು. "ಹೌದು. ಅಂಜನೇಯ ಹೇಳಿದಂತೆ ಮಾಡಿರಿ. ಆತನು ಕಾರ್ಯವನ್ನು ಸಾಧಿಸಿಕೊಂಡು ಬಂದಿದ್ದಾನೆ, ಆದ್ದರಿಂದ ಆತನು ಹೇಳಿದ ಮೇಲೆ ಅದು ಅಕಾರ್ಯವಾದರೂ ಮಾಡಲೇಬೇಕು. ಕುಡಿಯಿರಿ, ಚೆನ್ನಾಗಿ ಕುಡಿಯಿರಿ ಮಧುವನ್ನು" ಎಂದನು. ಇಷ್ಟು ಪ್ರೋತ್ಸಾಹ ಸಿಕ್ಕ ಮೇಲೆ ಇನ್ನು ಕೇಳಬೇಕೇನು! ಮೊದಲೇ ಕಾರ್ಯಸಾಧನೆಯ ಉತ್ಸಾಹದಿಂದ ಕೊಬ್ಬಿಹೋಗಿದ್ದರು. ಈಗ ಮಧುವಿನ ಕೊಬ್ಬು ಜೊತೆಗೆ ಸೇರಿ, ಒಡೆಯರ ಆಜ್ಞೆಯೂ ಪ್ರೋತ್ಸಾಹವೂ ಸಿಕ್ಕ ಮೇಲೆ ಕೇಳಬೇಕಾದ್ದೇನು! ಅಲ್ಲಿದ್ದ ಕಾವಲುಗಾರರನ್ನೆಲ್ಲಾ ಹೊಡೆದೋಡಿಸಿಬಿಟ್ಟರು. ತೃಪ್ತಿಯಾಗುವವರೆಗೂ ಮಧುವನ್ನು ಕುಡಿದರು. ಅಲ್ಲಿದ್ದ ರಸಭರಿತವಾದ ಹಣ್ಣುಗಳನ್ನೆಲ್ಲಾ ತಿಂದುಹಾಕಿದರು. ಕುಣಿದು ಕುಪ್ಪಳಿಸಿದರು. ಕುಡಿದು ಹೆಚ್ಚಾದ ಮಧುವನ್ನು ನೆಲದ ಮೇಲೆಲ್ಲಾ ಚೆಲ್ಲಿದರು. ಮೇಣವನ್ನು ತೆಗೆದುಕೊಂಡು ಪರಸ್ಪರ ಪ್ರೇಮ ಕಲಹದಲ್ಲಿ ತೊಡಗಿದರು. ಅವರ ಕೂಗೂ ಅವರ ನಗುವೂ ಅವರ ಕುಣಿತವೂ ಕೊನೆಮೊದಲಿಲ್ಲವಾಯಿತು. ಅವರಲ್ಲಿ ಕೆಲವರು ದಧಿಮುಖನ ಸೇವಕರನ್ನು ಹಿಡಿದುಕೊಂಡು ವಿಚಿತ್ರವಾಗಿ ಹಿಂಸಿಸಿದರು. ಇದನ್ನು ತಾಳಲಾರದೆ ಅವರು ಓಡಿಹೋಗಿ ಒಡೆಯನಲ್ಲಿ ದೂರಿಕೊಂಡರು. ಆತನು ಕಾವಲುಗಾರರ ದೊಡ್ಡದೊಂದು ತಂಡವನ್ನೇ ಕರೆತಂದನು, ಆ ಕಪಿಗಳನ್ನು ಹೊಡೆದಟ್ಟಲು.

ಕಪಿಗಳಲ್ಲಿ ದೊಡ್ಡದೊಂದು ಕಾಳಗವೇ ಆರಂಭವಾಯಿತು. ಅಷ್ಟರಲ್ಲಿ ದೊಡ್ಡದೊಂದು ಮರವನ್ನು ಕೈಲಿ ಹಿಡಿದುಕೊಂಡು ವನಧ್ವಂಸಕರನ್ನು ಶಿಕ್ಷಿಸುವುದಕ್ಕಾಗಿ ಬರುತ್ತಿದ್ದ ದಧಿಮುಖನು ಅಂಗದನ ಕಣ್ಣಿಗೆ ಬಿದ್ದನು. ಆತನು ಮಧುಸೇವನೆಯಿಂದ ಮದಿಸಿ ಮೈಮೇಲೆ ಪ್ರಜ್ಞೆಯಿಲ್ಲದೆ, ದಧಿಮುಖನು ತನಗೆ ಹಿರಿಯನೆಂಬುದನ್ನೂ ಮರೆತು ಅವನನ್ನು ತನ್ನೆರಡು ಕೈಗಳಿಂದಲೂ ಅಪ್ಪಳಿಸಿದನು. ಆ ಹೊಡೆತಕ್ಕೆ, ಪಾಪ, ಆತನು ಪ್ರಜ್ಞೆ ತಪ್ಪಿ ನೆಲಕ್ಕೆ ಬಿದ್ದನು. ಸ್ವಲ್ಪ ಹೊತ್ತಿನ ಮೇಲೆ ಪ್ರಜ್ಞೆ ಬರಲು, ಆತನು ಈ ವಾನರರ ಕೈಯಿಂದ ತಪ್ಪಿಸಿಕೊಂಡು ಸ್ವಾಮಿಯಾದ ಸುಗ್ರೀವನ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲ ಆತನಿಗೆ ಅರುಹಬೇಕೆಂದು ನಿಶ್ಚಯಿಸಿದನು. "ಈ ಮಧುವನ ಸುಗ್ರೀವನ ತಾತ ಮುತ್ತಾತಂದಿರ ಕಾಲದಿಂದಲೂ ರಾಜಭೋಗದ ಕುರುಹಾಗಿ ಇದ್ದುದು. ಇದು ಹಾಳಾದುದನ್ನು ಕೇಳಿದೊಡನೆಯೆ ಆತನು ಅತ್ಯಂತ ರೋಷಾವಿಷ್ಟನಾಗುವನು. ಈ ಅಂಗದಾದಿಗಳಿಗೆ ಏನೋ ಕೇಡುಗಾಲ. ರಾಜಾಜ್ಞೆಯನ್ನು ಉಲ್ಲಂಘಿ

ಸಿರುವ ಈ ದುರ್ಮಾಗರು ವಧಾರ್ಹರೇ ಸರಿ" ಹೀಗೆಂದುಕೊಂಡು, ಆ ದಧಿಮುಖನು ಕೆಲವು ಆಳುಗಳೊಡನೆ ಸುಗ್ರೀವನ ಬಳಿಗೆ ಓಡಿಬಂದು ಆತನ ಪದತಲದಲ್ಲಿ ಅಡ್ಡ ಬಿದ್ದನು.

ದಧಿಮುಖನು ಬಂದು ಅಡ್ಡಬಿದ್ದಾಗ ಸುಗ್ರೀವನು ರಾಮಲಕ್ಷ್ಮಣರೊಡನೆ ಮಂತ್ರಾಲೋಚನೆಯಲ್ಲಿ ಮಗ್ನನಾಗಿದ್ದನು. ಆತನು ತನ್ನ ಸೋದರಮಾವನ ಕಂಗೆಟ್ಟ ಮುಖವನ್ನು ಕಂಡು "ಇದೇನು ವಾನರವೀರ, ನನ್ನ ಕಾಲುಗಳ ಮೇಲೆ ಬೀಳಲು ಕಾರಣವೇನು? ಇದೋ ಅಭಯವಿತ್ತಿದ್ದೇನೆ. ನಿನ್ನ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸು" ಎಂದನು ಆಗ ದಧಿಮುಖನು ಮೇಲಕ್ಕೆದ್ದು "ಮಹಾರಾಜ, ಪಿತೃಪಿತಾಮಹರ ಕಾಲದಿಂದಲೂ ರಾಜರಿಗೆ ಮಾತ್ರ ಮೀಸಲಾಗಿದ್ದ ಮಧುವನವನ್ನು ಇಂದು ಅಂಗದಾದಿಗಳು ಹಾಳುಮಾಡಿದರು. ಅವರು ವನಪಾಲಕರನ್ನೆಲ್ಲ ಬಡಿದೋಡಿಸಿದರು; ಹಣ್ಣು ಹಂಪಲುಗಳನ್ನೆಲ್ಲ ಯಥೇಚ್ಛವಾಗಿ ತಿಂದು ಜೇನನ್ನೆಲ್ಲಾ ಕುಡಿದುಬಿಟ್ಟಿದ್ದಾರೆ. ಅವರು ಕುಡಿದು ಉಳಿದುದೆಲ್ಲವೂ ನೆಲದ ಪಾಲಾಯಿತು. 'ಅಯ್ಯೋ ಬೇಡ' ಎಂದು ಕೇಳಿಕೊಂಡ ವನಪಾಲಕರನ್ನು ಪರಿಪರಿಯಾಗಿ ಹಿಂಸಿಸಿದುದು ಮಾತ್ರ ಅಲ್ಲದೆ, ಮಧುಪಾನಮತ್ತರಾಗಿ ವನವನ್ನೆಲ್ಲಾ ತುಳಿದು ಹಾಳುಮಾಡಿದರು" ಎಂದು ಕೈಜೋಡಿಸಿ ಅರಿಕೆ ಮಾಡಿಕೊಂಡನು.

---

೨೪

# ಚೂಡಾಮಣಿ ದರ್ಶನ

ದಧಿಮುಖನು ದೀನವದನದಿಂದ ಸುಗ್ರೀವನಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದು ದನ್ನು ಕಂಡ ಲಕ್ಷ್ಮಣನು "ಏನಿದು, ಸುಗ್ರೀವ ಮಹಾರಾಜ? ಇವನು ನಿನ್ನಲ್ಲಿ ಹೇಳುತ್ತಿರುವುದೇನು?" ಎಂದು ಕೇಳಿದನು. ಆಗ ಆತನು "ಪೂಜ್ಯನೆ, ನಾನು ಸೀತಾನ್ವೇಷಣಕ್ಕಾಗಿ ದಕ್ಷಿಣ ದಿಕ್ಕಿಗೆ ಕಳುಹಿಸಿದ್ದ ಅಂಗದಾದಿ ಮಹಾವೀರರು ಈಗ ಹಿಂದಿರುಗಿ ರಾಜೋದ್ಯಾನದ ಮಧುವನೆಲ್ಲಾ ಪಾನಮಾಡಿದರೆಂದು ಈತನು ತಿಳಿಸುತ್ತಾನೆ. ಇದನ್ನು ನೋಡಿದರೆ ಆ ವಾನರರು ಕೃತಕಾರ್ಯರಾಗಿ ಹಿಂದಿರುಗಿ ಬಂದಿರುವಂತೆ ತೋರುತ್ತಿದೆ. ಇಲ್ಲದಿದ್ದರೆ ಮಧುವನವನ್ನು ಪ್ರವೇಶಿಸಿ, ಮಧುವನ್ನು ಸೇವಿಸುವಷ್ಟು ಧೈರ್ಯವಿರುತ್ತಿರಲಿಲ್ಲ. ನನಗೆ ಮಧುವನ ಎಷ್ಟು ಪ್ರಿಯವೆಂಬುದೂ ನನ್ನ ಆಜ್ಞೆ ಎಷ್ಟು ಕಠಿನವೆಂಬುದೂ ಅವರಿಗೆ ಗೊತ್ತಿದೆ. ಆದ್ದರಿಂದ ಮಹಾಕಾರ್ಯವನ್ನು ಸಾಧಿಸಿದ್ದ ಹೊರತು ಈ ಧೈರ್ಯ ಅವರಲ್ಲಿ ಹುಟ್ಟಿರಲಾರದು. ಆ ಗುಂಪಿನಲ್ಲಿ ನಮ್ಮ ಆಂಜನೇಯ ಇದ್ದಾನೆ. ಆತ ಮಹಾ ಶೂರ, ಬಹು ಜಾಣ, ಆತ ಇದ್ದ ಕಡೆ ಕಾರ್ಯ ಸಿದ್ಧಿ ಸ್ವತಸ್ಸಿದ್ಧ. ಅಲ್ಲದೆ ಜಾಂಬವಂತ ನೇತೃವಾಗಿ, ಅಂಗದ ಸೇನಾನಾಯಕನಾಗಿ, ಆಂಜನೇಯ ಕಾರ್ಯನಿರ್ವಾಹಕನಾಗಿ ನಿಂತ ಮೇಲೆ ಹಿಡಿದ ಕಾರ್ಯ ಯಶಸ್ವಿಯಾಗದೆ ಇರಲು ಸಾಧ್ಯವೇ ಇಲ್ಲ. ಆದ್ದರಿಂದ ನಿಸ್ಸಂದೇಹವಾಗಿಯೂ ಆ ವಾನರವೀರರು ಸೀತಾದೇವಿಯನ್ನು ಸಂದರ್ಶಿಸಿಯೆ ಬಂದಿರಬೇಕು" ಎಂದನು.

ಸುಗ್ರೀವನ ಮಾತುಗಳನ್ನು ಕೇಳಿ ಲಕ್ಷ್ಮಣನಿಗೆ ಆನಂದವಾಯಿತು. ಆತನು ತನ್ನ ಅಣ್ಣನಿಗೆ ಆ ಸಮಾಚಾರವನ್ನು ತಿಳಿಸುತ್ತಿರಲು ಇತ್ತ ಸುಗ್ರೀವನು ದಧಿಮುಖನನ್ನು ಕುರಿತು "ಎಲೈ ವಾನರ ವೀರನೆ, ಅಂಗದನೇ ಮೊದಲಾದವರು ಕೃತಕಾರ್ಯರಾಗಿಯೇ ಹಿಂದಿರುಗಿ ಬಂದಿರಬೇಕು. ಇಲ್ಲದಿದ್ದರೆ ಎಷ್ಟು ಮಾತ್ರಕ್ಕೂ ಮಧುವನವಿನಾಶಕ್ಕೆ ಇಷ್ಟು ಧೈರ್ಯಮಾಡುತ್ತಿರಲಿಲ್ಲ. ಮಹಾಕಾರ್ಯವನ್ನು ಸಾಧಿಸಿ ಬಂದಿರುವ ಅವರನ್ನು ನಾನು ಕ್ಷಮಿಸಿದ್ದೇನೆ. ನಾನೂ ರಾಮಲಕ್ಷ್ಮಣರೂ ಅವರಿಂದ ಸೀತಾವೃತ್ತಾಂತವನ್ನು ಕೇಳಲು ಅತ್ಯಂತ ಕುತೂಹಲಿಗಳಾಗಿದ್ದೇವೆ. ಈ ವಿಚಾರವನ್ನು ಅವರಿಗೆ ತಿಳಿಸಿ ಈಗಲೆ ಅವರನ್ನು ಇಲ್ಲಿಗೆ ಕಳುಹಿಸು" ಎಂದು ಹೇಳಿದನು. ಆತನ ಮಾತುಗಳನ್ನು ಕೇಳಿ ದಧಿಮುಖನ ಕೋಪವೂ ಇಳಿದುಹೋಯಿತು. ಆತನು ಕೂಡಲೆ ತನ್ನ ಸ್ವಾಮಿಗೂ ರಾಮಲಕ್ಷ್ಮಣರಿಗೂ ನಮಸ್ಕರಿಸಿ ಮಧುವನಕ್ಕೆ ಹಿಂತಿರುಗಿದನು. ಆ ವೇಳೆಗೆ ಅಲ್ಲಿದ್ದ ವಾನರರಿಗೆಲ್ಲ ತಲೆಗೇರಿದ್ದ ಮತ್ತು ಬಹುಮಟ್ಟಿಗೆ ಇಳಿದುಹೋಗಿತ್ತು. ದಧಿಮುಖನು ಅಂಗದನ ಬಳಿಗೆ ಹೋಗಿ, "ಸೌಮ್ಯನಾದ ಅಂಗದನೆ, ನಿನ್ನನ್ನು ತಡೆದುದಕ್ಕಾಗಿ

ನನ್ನನ್ನು ಕ್ಷಮಿಸು. ನಿನ್ನ ಚಿಕ್ಕಪ್ಪನಾದ ಸುಗ್ರೀವನು ನಿಮ್ಮೆಲ್ಲರ ಆಗಮನ ವನ್ನು ಕೇಳಿ ಅತ್ಯಂತ ಸಂತೋಷದಿಂದ ಈಗಲೇ ನಿಮ್ಮನ್ನು ಕರೆತರುವಂತೆ ಆಜ್ಞಾಪಿಸಿ ದ್ದಾನೆ" ಎಂದು ಹೇಳಿದನು.

ಸುಗ್ರೀವನ ಅಪೇಕ್ಷೆಯಂತೆ ಹನುಮಂತಾದಿ ವಾನರ ವೀರರೆಲ್ಲರೂ ಅಂಗದನನ್ನು ಮುಂದಿಟ್ಟುಕೊಂಡು ಆತನ ಬಳಿಗೆ ಹೋದರು. ಅವರ ಮಹೋತ್ಸವವನ್ನು ನೋಡಿ ದೊಡನೆಯೆ ಅವರು ಕೃತಕಾರ್ಯರಾಗಿರುವರೆಂದು ಭಾವಿಸಬಹುದಾಗಿತ್ತು. ಅವರೆಲ್ಲರೂ ಜಯಜಯ ಶಬ್ದ ಮಾಡುತ್ತಾ ಶ್ರೀರಾಮನಿಗೂ ಸುಗ್ರೀವನಿಗೂ ನಮಸ್ಕರಿಸಿದರು. ಅನಂತರ ಹನುಮಂತನು ಮುಂದೆ ಬಂದು ಮತ್ತೊಮ್ಮೆ ಶ್ರೀರಾಮ ಸುಗ್ರೀವರಿಗೆ ನಮಸ್ಕರಿಸಿ "ಪ್ರಭು, ಸೀತಾದೇವಿ ಯಾವ ಅಪಾಯವೂ ಇಲ್ಲದೆ ಪತಿವ್ರತಾನಿಯಮ ದಿಂದ ಕ್ಷೇಮವಾಗಿದ್ದಾಳೆ!" ಎಂದು ಹೇಳಿದನು. ಕೇಳಿದವರ ಕಿವಿಯಲ್ಲಿ ಸೊದೆಯನ್ನು ಹುಯ್ದಂತಾಯಿತು. ಶ್ರೀರಾಮನಂತೂ, ಪ್ರೀತಿ ಗೌರವಗಳಿಂದ ತುಂಬಿದ ಸ್ನಿಗ್ಧದೃಷ್ಟಿ ಯಿಂದ ಆತನನ್ನು ನೋಡುತ್ತಾ ಕುಳಿತಿರಲು ಹನುಮಂತನು ತಾನು ಸಾಧಿಸಿಕೊಂಡು ಬಂದಿದ್ದ ಮಹತ್ಕಾರ್ಯವನ್ನು ಆತನಿಗೆ ಸೂಕ್ಷ್ಮವಾಗಿ ತಿಳಿಸಿದನು. "ಪ್ರಭು, ರಾಮಚಂದ್ರ, ಸೀತಾಮಾತೆಯನ್ನು ರಾವಣಾಸುರನು ಕದ್ದೊಯ್ದು ತನ್ನ ಅಂತಃಪುರಕ್ಕೆ ಸೇರಿದ ಅಶೋಕವನದಲ್ಲಿಟ್ಟಿರುವನು. ಭಯಂಕರ ರಾಕ್ಷಸಿಯರು ಆಕೆಗೆ ಕಾವಲಾಗಿರು ವರು. ಅವರು ನಿರಂತರವೂ ಆಕೆಯನ್ನು ಹೆದರಿಸುತ್ತಾ ರಾವಣನಲ್ಲಿ ಅನುರಾಗವನ್ನು ಹುಟ್ಟಿಸಲು ಪ್ರಯತ್ನಿಸುತ್ತಿರುವರು. ಆದರೆ ಪತಿವ್ರತಾ ಶಿರೋಮಣಿಯಾದ ಸೀತಾದೇವಿ ಅವರ ನಿರ್ಬಂಧಕ್ಕೆ ಒಳಗಾಗದೆ ನಿನ್ನಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿದ್ದಾಳೆ. ಆ ಪಾಪಿ ರಾವಣನು ಒಂದು ಗಡುವಿನೊಳಗಾಗಿ ತನ್ನನ್ನು ವರಿಸದಿದ್ದರೆ ಕೊಲ್ಲುವೆನೆಂದು ಆಕೆಗೆ ಹೇಳಿರುತ್ತಾನೆ" ಎಂದನು.

ಆ ಮಾತುಗಳನ್ನು ಕೇಳಿ ಶ್ರೀರಾಮನ ಕಣ್ಣುಗಳಲ್ಲಿ ನೀರು ಉಕ್ಕಿತು. ಗದ್ಗದ ಸ್ವರದಿಂದ ಹನುಮಂತನನ್ನು ಪ್ರಶ್ನಿಸಿದನು. "ಮಿತ್ರಶ್ರೇಷ್ಠ, ಸೀತೆ ಹೇಗಿದ್ದಾಳೆ? ಆಕೆ ನನಗೆ ಏನು ಹೇಳಿದಳು? ಆಕೆಯನ್ನು ನೀನು ಕಂಡುದು ಹೇಗೆ? ಎಲ್ಲವನ್ನೂ ವಿಸ್ತಾರ ವಾಗಿ ಹೇಳು." ಹನುಮಂತನು ತಾನು ಲಂಕೆಗೆ ಹೋಗಿಬಂದ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ತಿಳುಹತೊಡಗಿದನು. "ಪ್ರಭು, ನಾನು ಶತಯೋಜನ ವಿಸ್ತೀರ್ಣವಾದ ಸಮುದ್ರವನ್ನು ಹಾರಿ ದಕ್ಷಿಣ ಸಮುದ್ರತೀರದಲ್ಲಿರುವ ರಾವಣನ ಲಂಕೆಗೆ ಹೋದೆ. ಅಲ್ಲಿ ಸೀತಾದೇವಿಯನ್ನು ಅರಸುತ್ತಾ ಹೋಗಲು, ಆಕೆ ರಾವಣನ ಅಂತಃಪುರಕ್ಕೆ ಸೇರಿದ ಅಶೋಕ ವನದಲ್ಲಿ ಕಾಣಬಂದಳು. ಆಕೆ ಸದಾ ನಿನ್ನನ್ನೆ ಧ್ಯಾನಿಸುತ್ತಾ ಆ ನಾಮ ಮಹಿಮೆಯಿಂದಲೆ ಬದುಕಿರುತ್ತಾಳೆ. ಆಕೆಯ ಸುತ್ತಲೂ ಅನೇಕ ರಾಕ್ಷಸ ಸ್ತ್ರೀಯರು ಮುತ್ತಿಕೊಂಡು ಆಕೆಯನ್ನು ಸದಾ ಪೀಡಿಸುತ್ತಿರುವುದರಿಂದ ಆಕೆ ಚಿರದುಃಖಿನಿಯಾಗಿ ದ್ದಾಳೆ. ಕೇಶ ಸಂಸ್ಕಾರವೆ ಇಲ್ಲದೆ ಆಕೆಯ ಕೂದಲುಗಳೆಲ್ಲವೂ ಜಡೆಕಟ್ಟಿ ಹೋಗಿವೆ. ಭೂಶಯ್ಯೆಯಿಂದ ಆಕೆಯ ದೇಹವೂ ವಸನವೂ ಮಲಿನವಾಗಿ ಹೋಗಿವೆ. ಆಕೆ

ರಾಕ್ಷಸರ ಬಾಧೆಯನ್ನು ತಾಳಲಾರದೆ ಪ್ರಾಣವನ್ನು ನೀಗಲು ಸಿದ್ಧಳಾಗಿದ್ದಾಗ ನಾನು ಆಕೆಯನ್ನು ಕಂಡೆ. ಆಕೆಯೆ ಸೀತೆಯೆಂದು ನೀನು ಹೇಳಿದ್ದ ಗುರುತುಗಳ ಮೇಲೆ ನಿಶ್ಚಯಿಸಿ, ಆಕೆಗೆ ನನ್ನಲ್ಲಿ ನಂಬುಗೆ ಹುಟ್ಟುವುದಕ್ಕಾಗಿ ಇಕ್ಷ್ವಾಕುವಂಶವನ್ನು ವರ್ಣಿಸಿದೆ. ಅದರಿಂದ ಆಕೆಗೆ ವಿಶ್ವಾಸ ಹುಟ್ಟಿ ನನ್ನೊಡನೆ ಮಾತನಾಡಿದಳು. ನಾನು ಆಕೆಯೊಡನೆ ನಿನಗೂ ಸುಗ್ರೀವನಿಗೂ ಉಂಟಾಗಿರುವ ಸಖ್ಯವನ್ನು ಹೇಳಿ ಇಲ್ಲಿನ ವಿದ್ಯಮಾನಗಳನ್ನೆಲ್ಲಾ ವಿವರವಾಗಿ ತಿಳಿಸಿದೆ. ಅನಂತರ ಅಲ್ಲಿಂದ ಹಿಂತಿರುಗಲು ಸಿದ್ಧನಾಗಿ, ನಿನಗೆ ತೋರುವುದಕ್ಕಾಗಿ ಯಾವುದಾದರೊಂದು ಗುರುತನ್ನು ದಯಪಾಲಿಸುವಂತೆ ಬೇಡಿದೆ.



ಇಷ್ಟು ಹೇಳಿ ಅಂಜನಾತನಯನು ತಾನು ತಂದಿದ್ದ ಚೂಡಾಮಣಿಯನ್ನು ಶ್ರೀರಾಮನಿಗೆ ಕೊಟ್ಟನು.

ಆಕೆ ಚಿತ್ರಕೂಟಾಚಲದಲ್ಲಿ ನಿನ್ನೊಡನಿದ್ದಾಗ ನಡೆದ ಒಂದು ಕಾಗೆಯ ಕಥೆಯನ್ನು ನನಗೆ ಗುರುತಾಗಿ ತಿಳಿಸಿದಳು. ಅಲ್ಲದೆ ಒಂದು ದಿನ ಆಕೆಯ ಮುಖದಲ್ಲಿ ತಿಲಕ ಅಳಿಸಿ ಹೋಗಿದ್ದಾಗ ನೀನು ಮಣಿಶಿಲೆಯಿಂದ ತಿಲಕವನ್ನು ರಚಿಸಿದುದನ್ನು ಜ್ಞಾಪಿಸುವಂತೆ ಆಕೆ ನನಗೆ ತಿಳಿಸಿದ್ದಾಳೆ. ಅನಂತರ ಆಕೆ ತನ್ನಲ್ಲಿದ್ದ ಈ ಚೂಡಾಮಣಿಯನ್ನು ನನ್ನ ಕೈಗೆ ಕೊಟ್ಟು ಎಲೈ ಮಾರುತಿ, ನಾನು ಮಹಾಪ್ರಯತ್ನಪಟ್ಟು ಇಟ್ಟುಕೊಂಡಿದ್ದ ಈ ಮಣಿಯನ್ನು ಶ್ರೀರಾಮನಿಗೆ ಕೊಡು. ಈ ಮಹಾ ವ್ಯಸನದಲ್ಲಿಯೂ ನಾನು ಇದನ್ನು ನೋಡಿ ಶ್ರೀರಾಮಚಂದ್ರನನ್ನು ಕಂಡಂತೆಯೇ ಸಂತೋಷಿಸುತ್ತಿದ್ದೆ.' ಇಷ್ಟು ಹೇಳುವುದರೊಳಗಾಗಿ ಆಕೆಗೆ ತಡೆಯಲಾರದಷ್ಟು ದುಃಖವುಂಟಾಗಲು ಗಳ ಗಳ ಅಳುತ್ತಾ ಕಣ್ಣೀರುಗರೆದಳು. ಅನಂತರ ಸ್ವಲ್ಪ ಸಮಾಧಾನವನ್ನು ತಂದುಕೊಂಡು 'ನಾನು ಒಂದು ತಿಂಗಳು ಮಾತ್ರ ಜೀವಿಸಿರುವೆನು. ಆ ಬಳಿಕ ಖಂಡಿತ ಬದುಕಿರಲಾರೆ' ಎಂದು ಆಕೆ ನಿನಗೆ ತಿಳಿಸುವಂತೆ ಹೇಳಿದಳು." ಇಷ್ಟು ಹೇಳಿ ಅಂಜನಾತನಯನು ತಾನು ತಂದಿದ್ದ ಚೂಡಾಮಣಿಯನ್ನು ಶ್ರೀರಾಮನಿಗೆ ಕೊಟ್ಟನು.

ಶ್ರೀರಾಮನು ಸೀತಾದೇವಿಯ ಚೂಡಾಮಣಿಯನ್ನು ತೆಗೆದುಕೊಂಡು ತನ್ನ ವಕ್ಷಸ್ಥಳದಲ್ಲಿರಿಸಿಕೊಂಡು ಚಿಕ್ಕ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತನು. ಅನಂತರ ಸುಗ್ರೀವನಿಗೆ ಆ ರತ್ನವನ್ನು ಕೊಡುತ್ತಾ "ಎಲೈ ಸುಗ್ರೀವ, ಕರುವನ್ನು ಕಂಡೊಡನೆಯೆ ಆಕಳಿಗೆ ಕ್ಷೀರ ಸ್ರವಿಸುವಂತೆ, ಇದನ್ನು ಕಂಡೊಡನೆಯೆ ನನ್ನ ಮನಸ್ಸು ಸ್ರವಿಸುತ್ತಿದೆ. ನನ್ನ ಮಾವನಾದ ಜನಕಮಹಾರಾಜನು ಮಹಾಯಜ್ಞವೊಂದನ್ನು ಮಾಡಿದಾಗ ಅದರಿಂದ ಪ್ರೀತನಾದ ಇಂದ್ರನು ಇದನ್ನು ಆತನಿಗೆ ಕೊಟ್ಟನು. ಈ ಅಮೂಲ್ಯವಾದ ರತ್ನವನ್ನು ಕಾಣುತ್ತಲೆ ನನ್ನ ತಂದೆಯಾದ ದಶರಥ ಮಹಾರಾಜನೂ ಮಾವನಾದ ಜನಕಮಹಾರಾಜನೂ ಏಕಕಾಲದಲ್ಲಿಯೆ ಜ್ಞಾಪಕಕ್ಕೆ ಬರುತ್ತಾರೆ. ಅಲ್ಲದೆ ಅದನ್ನು ಧರಿಸುತ್ತಿದ್ದ ಸೀತಾದೇವಿಯ ಚಿತ್ರವೂ ಕಣ್ಣೆದುರಿಗೆ ಕಟ್ಟಿದಂತಾಗುತ್ತದೆ" ಎಂದು ಹೇಳಿ ಲಕ್ಷ್ಮಣನ ಕಡೆ ನೋಡುತ್ತಾ "ತಮ್ಮಾ, ಸೀತೆಯನ್ನು ಕಾಣುತ್ತಿಲ್ಲ; ಆಕೆ ಧರಿಸಿದ್ದ ರತ್ನವನ್ನು ಮಾತ್ರ ನೋಡುತ್ತಿದ್ದೇನೆ. ಇದೆಂತಹ ಸಂಕಟಕರವಾದ ವಿಷಯ! ಆ ಕಮಲನೇತ್ರೆಯನ್ನು ಕಾಣದೆ ನಾನು ಒಂದು ಕ್ಷಣವಾದರೂ ಜೀವಿಸಲಾರೆ" ಎಂದನು. ಅನಂತರ ಹನುಮಂತನನ್ನು ಕುರಿತು ಇಂತೆಂದನು; "ಎಲೈ ಮಾರುತಿ, ನೀನು ಈಗಲೆ ನನ್ನನ್ನು ಸೀತೆಯ ಬಳಿಗೆ ಕರೆದುಕೊಂಡು ಹೋಗು. ಆ ನನ್ನ ಪ್ರಿಯೆಯ ವೃತ್ತಾಂತವನ್ನು ಕೇಳಿದ ಮೇಲೆ ನಾನೊಂದು ಕ್ಷಣವೂ ಇಲ್ಲಿರಲಾರೆ. ಎಷ್ಟು ಕಾಂತಿಗುಂದಿರುವಳೋ ಆ ಭೀರು!"

---

## ೨೫

# ಸೀತಾ ವೃತ್ತಾಂತ

ಶ್ರೀರಾಮನಿಗೆ ಸೀತೆಯ ವೃತ್ತಾಂತವನ್ನು ಇನ್ನೂ ಕೇಳಬೇಕೆಂಬ ಆಶೆ. ಆದ್ದರಿಂದ ಹನುಮಂತನನ್ನು ಕುರಿತು, "ಅಯ್ಯಾ ಮಾರುತಿ, ಸೀತೆ ನಿನ್ನೊಡನೆ ಇನ್ನೂ ಏನೇನು ಹೇಳಿದಳು ? ಎಲ್ಲವನ್ನೂ ವಿವರವಾಗಿ ತಿಳಿಸು" ಎಂದನು. ಹನುಮಂತನು ಶ್ರೀರಾಮನಮನಸ್ತೃಪ್ತಿಗಾಗಿ ಮತ್ತೊಮ್ಮೆ ಸೀತಾದೇವಿಯವೃತ್ತಾಂತವನ್ನೆಲ್ಲಾ ತಿಳಿಸಿದುದಲ್ಲದೆ ಕಾಕಾಸುರನ ಕಥೆಯನ್ನೂ ಸೀತಾದೇವಿಯ ಮಾತುಗಳಲ್ಲಿಯೆ ಎಡೆಬಿಡದೆ ತಿಳಿಸಿದನು : "ನೀವು ಚಿತ್ರಕೂಟದಲ್ಲಿದ್ದಾಗ ಒಂದು ದಿನ ಸೀತಾದೇವಿ ನಿನ್ನೊಡನೆ ನಿದ್ರಿಸುತ್ತಿದ್ದು ನಿನಗಿಂತಲೂ ಮೊದಲೇ ಎಚ್ಚರಗೊಂಡಳಂತೆ. ನೀನು ಇನ್ನೂ ಮಲಗಿ ನಿದ್ರಿಸುತ್ತಿದ್ದೆಯಂತೆ. ಆಗ ಒಂದು ಕಾಗೆ ಆಕೆಯ ಸ್ತನಾಗ್ರವನ್ನು ಕುಕ್ಕಿತಂತೆ. ಕಣ್ದೆರೆದ ನೀನು ಅದನ್ನು ಕಂಡು ಹಾಸ್ಯಮಾಡಿದೆಯಂತೆ. ಆಕೆ ನಾಚಿಕೆಯಿಂದ ನಿನ್ನ ತೊಡೆಯ ಮೇಲೆ ಮಲಗಿ ನಿದ್ರಿಸಿದಳಂತೆ. ಆಕೆ ಎದ್ದ ಮೇಲೆ ನೀನು ಆಕೆಯ ತೊಡೆಯ ಮೇಲೆ ಮಲಗಿ ನಿದ್ರೆ ಹೋದೆಯಂತೆ. ಆಗ ಮತ್ತೊಮ್ಮೆ ಆ ಕಾಗೆ ಆಕೆಯನ್ನು ಪೀಡಿಸಲು ಮೊದಲುಮಾಡಿತಂತೆ. ಎಷ್ಟು ಓಡಿಸಿದರೂ ಹೋಗದೆ ಪದೇ ಪದೇ ಸ್ತನಾಗ್ರವನ್ನು ಕುಕ್ಕಿ ಕುಕ್ಕಿ ಗಾಯಗೊಳಿಸಿತಂತೆ. ಅದರಿಂದ ಸ್ರವಿಸಿದ ರಕ್ತಬಿಂದು ನಿನ್ನ ಮೇಲೆ ಬಿದ್ದು ನಿನಗೆ ನಿದ್ದೆ ಬಿಟ್ಟಿದಂತೆ. ಅಷ್ಟರಲ್ಲಿ ಆಕೆಯೂ ಬಾಧೆಯನ್ನು ತಾಳಲಾರದೆ ನಿನ್ನನ್ನು ಎಬ್ಬಿಸಿದಳಂತೆ. ನೀನು ಆಕೆಯ ಅವಸ್ಥೆಯನ್ನು ಕಂಡು ಕೋಪದಿಂದ ಘೋರ ಸರ್ಪದಂತೆ ನಿಟ್ಟುಸಿರುಬಿಡುತ್ತಾ 'ಪಂಚಫಣಾಹಿಯೊಡನೆ ಸರಸವಾಡಿದವರಾರು ? ನಿನ್ನ ಸ್ತನಾಂತವನ್ನು ಗಾಯಪಡಿಸಿದವರಾರು ?' ಎಂದು ಗರ್ಜಿಸಿ ಸಮೀಪದಲ್ಲಿಯೆ ಇದ್ದ ಆ ಕಾಗೆಯನ್ನು ಕಂಡೆಯಂತೆ. ಆ ಕಾಗೆ ಇಂದ್ರನ ಮಗನಂತೆ ; ಪಕ್ಷಿಗಳಲ್ಲೆಲ್ಲಾ ಶ್ರೇಷ್ಠವಾದುದಂತೆ. ನೀನು ದರ್ಭಾಸನದಿಂದ ಒಂದು ದರ್ಭೆಯನ್ನು ಕಿತ್ತು, ಅದನ್ನು ಬ್ರಹ್ಮಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ, ಆ ಕಾಗೆಯ ಮೇಲೆ ಬಿಟ್ಟೆಯಂತೆ. ಆಗ ಆ ಕಾಗೆ ಮೂರು ಲೋಕಗಳನ್ನೂ ಸುತ್ತಿ ಎಲ್ಲಿಯೂ ರಕ್ಷಕರನ್ನು ಕಾಣದೆ ನಿನ್ನನ್ನೆ ಶರಣು ಹೊಕ್ಕಿತಂತೆ. ವಧಾರ್ಹವಾದ ಆ ಕಾಗೆಯನ್ನು ನೀನು ಕ್ಷಮಿಸಿದೆಯಂತೆ. ಆದರೆ ಬ್ರಹ್ಮಾಸ್ತ್ರ ನಿರರ್ಥಕವಾಗಬಾರದಾಗಿ ಆ ಕಾಗೆಯ ಒಂದು ಕಣ್ಣನ್ನು ಆ ಅಸ್ತ್ರಕ್ಕೆ ಬಲಿ ಕೊಟ್ಟೆಯಂತೆ. ಅಂತಹ ನೀನು ಈಗ ರಾಕ್ಷಸರ ಮೇಲೆ ಏಕೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವುದಿಲ್ಲವೆಂದು ಆಕೆ ಕೇಳಿದಳು. 'ಸುರಾಸುರರಲ್ಲಿ ಯಾರೂ ಶ್ರೀರಾಮನೊಡನೆ ಯುದ್ಧ ಮಾಡಲಾರರು. ಆತನಿಗೆ ನನ್ನಲ್ಲಿ ಸ್ವಲ್ಪವಾದರೂ ಕರುಣವಿದ್ದರೆ ಕ್ಷಿಪ್ರದಲ್ಲಿಯೆ ಇಲ್ಲಿಗೆ ಬಂದು ರಾಕ್ಷಸರನ್ನು ಸಂಹರಿಸುವನು. ಲಕ್ಷ್ಮಣನಾದರೂ ಅಣ್ಣ

ನಿಂದ ಅಪ್ಪಣೆಯನ್ನು ಪಡೆದು ಇಲ್ಲಿಗೆ ಬಂದು ಈ ರಾಕ್ಷಸರನ್ನು ಧ್ವಂಸ ಮಾಡಬಾರದೆ? ಪುರುಷೋತ್ತಮರಾದ ಆ ಸೋದರರು ನನ್ನನ್ನೇಕೆ ರಕ್ಷಿಸುತ್ತಿಲ್ಲ?' ಎಂದು ಸೀತಾ ಮಾತೆ ಹಲುಬಿ ಹಂಬಲಿಸಿದಳು. ತನ್ನ ಅದೃಷ್ಟವನ್ನು ಪರಿಪರಿಯಾಗಿ ನಿಂದಿಸಿ ಕೊಂಡಳು. ಆಗ ನಾನು ಆ ಪೂಜ್ಯಳನ್ನು ಸಮಾಧಾನ ಮಾಡುತ್ತಾ 'ತಾಯಿ, ಶ್ರೀರಾಮಚಂದ್ರನು ನಿನಗಾಗಿ ಬಹು ಪರಿತಾಪಕ್ಕೆ ಒಳಗಾಗಿರುತ್ತಾನೆ. ನೀನು ಇರುವ ಸ್ಥಳ ಗೊತ್ತಾಗುತ್ತಲೆ ಇಲ್ಲಿಗೆ ಬರುತ್ತಾನೆ. ನಿನ್ನ ವ್ಯಸನವೆಲ್ಲವೂ ಶೀಘ್ರದಲ್ಲಿಯೆ ಕೊನೆಗೊಳ್ಳುತ್ತದೆ. ರಾಮಲಕ್ಷ್ಮಣರು ಈ ಲಂಕೆಯನ್ನು ಭಸ್ಮಮಾಡುತ್ತಾರೆ. ರಾವಣನನ್ನು ಸಂಹರಿಸುತ್ತಾರೆ. ನಿನ್ನನ್ನು ಇಲ್ಲಿಂದ ಕರೆದೊಯ್ಯುತ್ತಾರೆ' ಎಂದು ಮೇಲಿಂದ ಮೇಲೆ ಹೇಳಿ, ನಿನಗೆ ಗುರುತು ತೋರುವುದಕ್ಕಾಗಿ ಒಂದು ಅಭಿಜ್ಞಾನವನ್ನು ಕೊಡುವಂತೆ ಕೇಳಿದೆ. ಆಗ ಆಕೆ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಈ ಚೂಡಾರತ್ನವನ್ನು ತೆಗೆದು ನನ್ನ ಕೈಗಿತ್ತಳು. ನಾನು ಅವನ್ನು ತೆಗೆದುಕೊಂಡು ಆಕೆಗೆ ಪ್ರದಕ್ಷಿಣೆ ನಮಸ್ಕಾರ ಮಾಡಿ ಹೊರಡಲು ಸಿದ್ಧನಾದೆ. ಬೃಹದಾಕಾರವನ್ನು ತಾಳುತ್ತಿದ್ದ ನನ್ನನ್ನು ಕಂಡು ಆಕೆ ಕಣ್ಣೀರು ಸುರಿಸುತ್ತಾ 'ಸಿಂಹ ಪರಾಕ್ರಮಿಗಳಾದ ರಾಮ ಲಕ್ಷ್ಮಣರಿಗೆ ನನ್ನ ಕುಶಲವನ್ನು ತಿಳಿಸು. ನನ್ನನ್ನು ಈ ವ್ಯಸನ ಸಮುದ್ರದಿಂದ ಕಡೆಹಾಯಿಸುವಂತೆ ಶ್ರೀರಾಮಚಂದ್ರನಿಗೆ ನಿವೇದಿಸು. ಈ ರಾಕ್ಷಸಿಯರ ಮಧ್ಯದಲ್ಲಿ ನಾನು ಅನುಭವಿಸುತ್ತಿರುವ ನನ್ನ ಸಂಕಟವನ್ನು ಆತನಿಗೆ ತಿಳಿಯಹೇಳು. ನಿನಗೆ ಮಂಗಳವಾಗಲಿ!' ಎಂದು ಹೇಳಿದಳು. ಆಕೆ ಹೇಳಿರುವುದನ್ನೆಲ್ಲಾ ನಿನಗೆ ಹೇಳಿದ್ದೇನೆ. ಆಕೆ ಕ್ಷೇಮವಾಗಿರುವಳೆಂಬುದನ್ನು ನಂಬು" ಎಂದನು.

ಹನುಮಂತನ ಮಾತನ್ನು ನಂಬುವುದರಲ್ಲಿ ಶ್ರೀರಾಮ ಹಿಂದು ಮುಂದು ನೋಡುವಂತಿರಲಿಲ್ಲ; ಆತನಿಗೆ ಬೇಕಾದುದು ಸೀತೆಯ ವಿಚಾರವಾದ ಸುದ್ದಿಯಷ್ಟೆ. ಎಷ್ಟು ಆಲಿಸಿದರೂ ಆತನಿಗೆ ಸಮಾಧಾನವಿಲ್ಲ. ಆದ್ದರಿಂದ ಹನುಮಂತನು ತನ್ನ ಮಾತನ್ನು ಮುಂದುವರಿಸಿದನು. "ಪ್ರಭು, ಮಾತೆಯಾದ ಸೀತಾದೇವಿ ಪ್ರಯಾಣ ಸನ್ನದ್ಧನಾಗಿದ್ದ ನನ್ನನ್ನು ಕಂಡು ಕಣ್ಣೀರುಗರೆಯುತ್ತಾ 'ಮಾರುತಿ, ನೀನು ಯಾವ ರೀತಿ ಹೇಳಿದರೆ ನನ್ನ ಪತಿದೇವರು ಇಲ್ಲಿಗೆ ಸ್ವಂತವಾಗಿ ಹೊರಟುಬರುವನೊ ಆ ರೀತಿ ಆತನಿಗೆ ನನ್ನ ವಿಚಾರವನ್ನು ತಿಳಿಸು. ನಿನಗೆ ಇಷ್ಟಬಂದರೆ ನೀನು ಇಲ್ಲಿಯೆ ಒಂದುದಿನ ರಹಸ್ಯವಾಗಿದ್ದು ವಿಶ್ರಮಿಸಿಕೊಂಡು ಮಾರನೆಯ ದಿನ ಹೊರಡು. ನೀನು ಇಲ್ಲಿಯೆ ಒಂದು ದಿನವಿದ್ದರೆ ದುರದೃಷ್ಟಶಾಲಿಯಾದ ನಾನು ಎಷ್ಟೋ ಸಮಾಧಾನಪಟ್ಟು ಕೊಳ್ಳುತ್ತೇನೆ. ಶ್ರೀರಾಮನ ವಿಯೋಗದಿಂದ ಅತಿಶಯವಾದ ಪರಿತಾಪಕ್ಕೆ ಒಳಗಾಗಿರುವ ನಾನು ನೀನು ಹೊರಟುಹೋಗುವುದನ್ನು ಕಂಡು ಮತ್ತೂ ಮಹಾವ್ಯಸನಕ್ಕೆ ಒಳಗಾಗುವೆನು. ಅಗಾಧವಾದ ಈ ಸಮುದ್ರವನ್ನು ನಿನ್ನ ರಾಜನ ಕಪಿಸೇನೆಯಾಗಲಿ ರಾಮಲಕ್ಷ್ಮಣರಾಗಲಿ ದಾಟುವುದು ಹೇಗೆ? ಆದರೆ ನನ್ನನ್ನು ಕರೆದೊಯ್ಯಲು ಶ್ರೀರಾಮನು ಪ್ರತ್ಯಕ್ಷವಾಗಿ ಇಲ್ಲಿಗೆ ಬಂದು ಈ ರಾವಣನನ್ನು ಸಂಹರಿಸುವುದು

ಅನಿವಾರ್ಯವಲ್ಲವೆ? ಅದು ಹೇಗೆ ಸಾಧ್ಯ?' ಎಂದು ಕೇಳಿದಳು. ನಾನು ಆಕೆಗೆ 'ತಾಯಿ, ರಾಜನಾದ ಸುಗ್ರೀವನಲ್ಲಿ ಮಹಾಶೂರರಾದ ಅನೇಕ ವಾನರರಿದ್ದಾರೆ. ಅವರಿಗೆ ದಶದಿಕ್ಕುಗಳಲ್ಲಿಯೂ ಸಂಚರಿಸುವ ಶಕ್ತಿಯುಂಟು. ಅವರಲ್ಲೆಲ್ಲಾ ನಾನೇ ಕಿರಿಯ. ನನಗಿಂತಲೂ ಅಧಿಕ ಬಲಶಾಲಿಗಳು ಆತನ ಬಳಿ ಇದ್ದಾರೆ. ನಾನೇ ಇಲ್ಲಿಗೆ ಬಂದಿರುವಾಗ ಉಳಿದವರೂ ಇಲ್ಲಿಗೆ ಬರುವರೆಂಬುದರಲ್ಲಿ ಸಂದೇಹವೇಕೆ? ನೀನು ವ್ಯಸನವನ್ನು ತೊರೆ. ಸಮಾಧಾನವನ್ನು ಹೊಂದು; ವಾನರವೀರರೆಲ್ಲಾ ಲಂಕೆಗೆ ಬರುತ್ತಾರೆ. ಪುರುಷೋತ್ತಮರಾದ ರಾಮಲಕ್ಷ್ಮಣರು ನನ್ನ ಹೆಗಲ ಮೇಲೆ ಕುಳಿತು ಏಕಕಾಲದಲ್ಲಿ ಉದಯಿಸುವ ಸೂರ್ಯ ಚಂದ್ರರಂತೆ ನಿನ್ನ ಬಳಿಗೆ ಬರುತ್ತಾರೆ. ಸಿಂಹಸದೃಶನಾದ ಶ್ರೀರಾಮನನ್ನೂ ಧನುರ್ಧಾರಿಯಾಗಿ ಲಂಕಾದ್ವಾರದಲ್ಲಿ ನಿಂತಿರುವ ಲಕ್ಷ್ಮಣನನ್ನೂ ನೀನು ಶೀಘ್ರದಲ್ಲಿಯೇ ಕಾಣುವೆ. ಪರ್ವತದೇಹಿಗಳಾದ ವಾನರರ ಕೋಲಾಹಲ ಧ್ವನಿ ಕ್ಷಿಪ್ರದಲ್ಲಿಯೇ ನಿನ್ನ ಕಿವಿಗೆ ಸವಿಜೇನಾಗುತ್ತದೆ! ದೇವಿ, ಶ್ರೀರಾಮ ಚಂದ್ರನು ಶೀಘ್ರದಲ್ಲಿಯೇ ನಿನ್ನನ್ನು ಇಲ್ಲಿಂದ ಕರೆದೊಯ್ದು ಅಯೋಧ್ಯಾನಗರ ದಲ್ಲಿ ನಿನ್ನೊಡನೆ ಪಟ್ಟಾಭಿಷಿಕ್ತನಾಗುತ್ತಾನೆ!' ಎಂದು ಆಕೆಯ ವ್ಯಸನ ಇಂಗಿ ಹೋಗುವಂತೆ ಮಂಗಳಕರವಾದ ನುಡಿಗಳನ್ನು ಹೇಳಿರುತ್ತೇನೆ. ನನ್ನ ಮಾತುಗಳಿಂದ ಆಕೆಗೆ ಎಷ್ಟೋ ಶಾಂತಿ ಒದಗಿತು. ಅಷ್ಟಾದ ಮೇಲೆಯೇ ನಾನು ಅಲ್ಲಿಂದ ಹೊರಟು ಬಂದದ್ದು."

ಹನುಮಂತನ ಸಾಂತ್ವನ ವಚನಗಳನ್ನು ಆಲಿಸಿದ ಮೇಲೆ ಶ್ರೀರಾಮನ ಮನಸ್ಸು ಒಂದಿನಿತು ಸಮಾಧಾನಗೊಂಡಿತು.

---

# ಯುದ್ಧಕಾಂಡ

---

## ೧

## ಸೇನಾ ಪ್ರಯಾಣ

ಶ್ರೀರಾಮಚಂದ್ರನು ಸೀತೆಯ ವಿಷಯವಾಗಿ ಹನುಮಂತನು ಹೇಳಿದ ಮಾತುಗಳನ್ನು ಕೇಳಿ ಸಂತೋಷಗೊಂಡನು. ಆ ಬಳಿಕ ತನ್ನ ಸುತ್ತಲೂ ನೆರೆದಿದ್ದ ಸುಗ್ರೀವಾದಿಗಳನ್ನು ನೋಡಿ ಪ್ರೀತಿಯುಕ್ತವಾದ ಈ ಮಾತುಗಳನ್ನು ನುಡಿದನು: "ಈ ಲೋಕದಲ್ಲಿ ಯಾವನೊಬ್ಬನಿಂದಲೂ ಮನಸ್ಸಿನಲ್ಲಿಯೂ ಕೂಡ ಯೋಚಿಸಲಾಗದ ಸಮುದ್ರಲಂಘನ ಮತ್ತು ಸೀತಾದರ್ಶನ ಕಾರ್ಯಗಳನ್ನು ಹನುಮಂತನು ಸಾಧಿಸಿದ್ದಾನೆ. ವಾಯು ಗರುಡರನ್ನು ಬಿಟ್ಟರೆ ಈ ನೂರು ಯೋಜನಗಳ ಅಗಲವಾದ ಸಮುದ್ರವನ್ನು ದಾಟಲು ಹನುಮಂತನಲ್ಲದೆ ಇನ್ನಾರು ಸಮರ್ಥರು ? ದೇವದಾನವರಾಗಲಿ ಯಕ್ಷಗಂಧರ್ವರಾಗಲಿ ರಾವಣನಗರಿಯಾದ ಲಂಕೆಯನ್ನು ಕಣ್ಣೆತ್ತಿ ಕೂಡ ನೋಡಲು ಸಾಧ್ಯವಿಲ್ಲ. ಹೀಗಿರುವಲ್ಲಿ ಅದನ್ನು ಹೊಕ್ಕು, ನನ್ನ ಪ್ರಿಯೆಯಾದ ಸೀತೆಯನ್ನು ಕಂಡು ಮತ್ತೆ ಬದುಕಿ ಬರಲು ಸಾಧ್ಯವೆ ? ಈ ಮಹತ್ಕಾರ್ಯವನ್ನು ಸ್ವಾಮಿಗಾಗಿ ಪ್ರೀತಿಯಿಂದ ನೆರವೇರಿಸಿದ ಹನುಮಂತನೆ ಭೃತ್ಯೋತ್ತಮ! ಈತನು ಮಾಡಿರುವ ಕೆಲಸವನ್ನು ನೆನೆದು ನನ್ನ ಮನಸ್ಸು ಕರಗಿ ನೀರಾಗಿದೆ. ನನಗೆ ಅತ್ಯಂತ ಪ್ರಿಯತಮಳಾದ ಸೀತೆಯ ವೃತ್ತಾಂತವನ್ನು ತಂದು ಹೇಳಿರುವ ಈತನಿಗೆ ಉಚಿತವಾದ ಬಹುಮಾನವನ್ನು ಮಾಡಲಿಲ್ಲವೆಂದು ಮನಸ್ಸು ತಪಿಸುತ್ತಿದೆ. ಈ ಸಮಯದಲ್ಲಿ ನಾನು ಈತನಿಗೆ ಕೊಡುವ ಆಲಿಂಗನವೆ ಬಹುಮಾನ ಸರ್ವಸ್ವವಾಗಲಿ." ಹೀಗೆಂದು ಹೇಳಿ ಸೀತಾ ವೃತ್ತಾಂತವನ್ನು ಕೇಳಿ ಪುಳಕಿತನಾದ ಶ್ರೀರಾಮಚಂದ್ರನು ಮಹಾತ್ಮನಾದ ಹನುಮಂತನನ್ನು ಗಾಢವಾಗಿ ಆಲಿಂಗಿಸಿದನು.

ಇದಾದಮೇಲೆ ಶ್ರೀರಾಮನು ಸ್ವಲ್ಪಹೊತ್ತು ಸುಮ್ಮನಿದ್ದನು. ಆಗ ಅವನನ್ನು ಮತ್ತೊಂದು ಚಿಂತೆ ಬಾಧಿಸತೊಡಗಿತು. ಸುಗ್ರೀವನಿಗೆ ಕೇಳುವಂತೆ ಮತ್ತೆ ಹನುಮಂತನಿಗೆ ಈ ರೀತಿ ನುಡಿದನು: "ಸೀತೆಯನ್ನು ಹುಡುಕುವ ಕೆಲಸ ನಿನ್ನಿಂದ ಚೆನ್ನಾಗಿ ನೆರವೇರಿತು. ಆದರೆ ಈ ಸಮುದ್ರವನ್ನು ನೆನೆದೊಡನೆಯೆ ನನ್ನ ಧೈರ್ಯ ಕುಂದುತ್ತದೆ. ಇದನ್ನು ದಾಟಿ ಇದರ ದಕ್ಷಿಣ ತೀರವನ್ನು ಸೇರಲು ಹೇಗೆ ತಾನೆ ಸಾಧ್ಯ ? ಇದಕ್ಕೆ ಒಂದು ಉಪಾಯವನ್ನು ಸೂಚಿಸು."

ಚಿಂತೆಯಿಂದ ಕೂಡಿದ ಶ್ರೀರಾಮಚಂದ್ರನನ್ನು ಸಮಾಧಾನಗೊಳಿಸಿ, ಸುಗ್ರೀವನು ಹೇಳಿದನು: "ಶ್ರೀರಾಮಚಂದ್ರ, ಸಾಮಾನ್ಯ ಮನುಷ್ಯನಂತೆ ನೀನು ದುಃಖಿಸುವುದು

ತರವಲ್ಲ. ಮಾಡಿದ ಉಪಕಾರವನ್ನು ಮರೆತವನು ಸ್ನೇಹವನ್ನು ತೊರೆಯುವಂತೆ ಈ ದುಃಖವನ್ನು ದೂರಮಾಡು. ಸೀತೆಯ ವರ್ತಮಾನವೂ ಶತ್ರುಗಳ ನೆಲೆಯೂ ತಿಳಿದಿರುವಲ್ಲಿ ನಿನ್ನ ಈ ದುಃಖಕ್ಕೆ ಕಾರಣವೇನು? ನೀನು ಬುದ್ಧಿಶಾಲಿ, ಪಂಡಿತ, ಅಲ್ಲದೆ ಶಾಸ್ತ್ರಗಳನ್ನು ತಿಳಿದವನು. ಹೀಗಿರುವಲ್ಲಿ ಉತ್ಸಾಹಕ್ಕೆ ಭಂಗತರುವ ಈ ಬುದ್ಧಿಯನ್ನು ತೊರೆದುಬಿಡು. ಈ ಸಮುದ್ರವನ್ನು ದಾಟಿ ನಿನ್ನ ಶತ್ರುಗಳನ್ನು ನಾವು ನಾಶಮಾಡುತ್ತೇವೆ. ನಿರುತ್ಸಾಹದಿಂದ ಎಲ್ಲವೂ ನಾಶಹೊಂದುತ್ತದೆ. ನಿನಗೆ ಹಿತವನ್ನುಂಟುಮಾಡಲು ಅಗ್ನಿಯನ್ನು ಹೊಗಲೂ ಸಿದ್ಧರಾಗಿರುವ ಈ ವಾನರರ ಉತ್ಸಾಹವನ್ನು ನೋಡು. ಈ ಸಮುದ್ರಕ್ಕೆ ಸೇತುವೆಯನ್ನು ಕಟ್ಟುವ ಉಪಾಯವನ್ನು ಕುರಿತು ಯೋಚಿಸು. ಸೇತುವೆಯನ್ನು ಕಟ್ಟಿದೊಡನೆಯೆ ಸಮುದ್ರವನ್ನು ದಾಟಿ, ರಾವಣನನ್ನು ಇವರು ಕೊಂದರೆಂದೆ ತಿಳಿ. ಯುದ್ಧದಲ್ಲಿ ಬಿಲ್ಲನ್ನು ಹಿಡಿದ ನಿನ್ನನ್ನು ಇದಿರಿಸಲು ಯಾರಿಗೆ ತಾನೆ ಸಾಧ್ಯ? ಉದ್ಯೋಗಹೀನರಾಗಿ ಕ್ಷತ್ರಿಯರು ಕುಳಿತುಬಿಡುವುದು ಯೋಗ್ಯವಲ್ಲ. ಆದ್ದರಿಂದ ಈ ಕಡಲನ್ನು ದಾಟಲು ಉಪಾಯವನ್ನು ಚಿಂತಿಸು. ಆ ಬಳಿಕ ಎಲ್ಲವೂ ಸರಿಹೋಗುತ್ತದೆ. ಹೆಚ್ಚು ಹೇಳಿದುದರಿಂದ ಏನು ಪ್ರಯೋಜನ? ಈಗ ಶುಭಸೂಚನೆಗಳು ಸುತ್ತಲೂ ಕಾಣಬರುತ್ತಿವೆ. ನನ್ನ ಮನಸ್ಸು ಹರ್ಷಗೊಂಡಿದೆ."

ಸುಗ್ರೀವನ ಮಾತುಗಳು ಶ್ರೀರಾಮನಿಗೆ ಸಮಾಧಾನ ತಂದುವು. ರಾಮನು ತಪಸ್ಸನ್ನು ಮಾಡಿ ಇಲ್ಲವೆ ಸಮುದ್ರವನ್ನು ಶೋಷಿಸಿ ಸೇತುವೆಯನ್ನು ಕಟ್ಟುವ ಸಾಮರ್ಥ್ಯ ತನಗುಂಟೆಂದೂ, ಆದರೆ ತಾನು ಹಾಗೆ ಮಾಡುವುದಕ್ಕೆ ಮೊದಲು ಲಂಕಾನಗರದ ವಿಸ್ತಾರವನ್ನೂ ರಾವಣನ ಸೈನ್ಯದ ಬಲವನ್ನೂ ತನಗೆ ತಿಳಿಸಬೇಕೆಂದೂ ಹನುಮಂತನನ್ನು ತಿರುಗಿ ಕೇಳಿದನು. ಮಾತನಾಡುವುದರಲ್ಲಿ ಚತುರನಾದ ಹನುಮಂತನು ಶ್ರೀರಾಮನ ಪ್ರಶ್ನೆಗೆ ಈ ರೀತಿ ಉತ್ತರಕೊಟ್ಟನು. "ರಾಮಚಂದ್ರ, ನನಗೆ ತಿಳಿದಮಟ್ಟಿಗೆ ಈ ವಿಷಯವನ್ನು ನಿನ್ನಲ್ಲಿ ಬಿನ್ನೈಸುತ್ತೇನೆ; ಕೇಳು ಲಂಕೆಯ ಜನರು ನಿತ್ಯತೃಪ್ತರು. ಸಂತೋಷದಿಂದ ಇರತಕ್ಕವರು. ಮದಿಸಿದ ಆನೆ ಕುದುರೆಗಳಿಂದಲೂ ವಿಪುಲವಾದ ರಥಗಳಿಂದಲೂ ಕೂಡಿದ ಲಂಕೆಯನ್ನು ಹೊಗುವುದು ಅಸಾಧ್ಯ. ಆ ನಗರದ ನಾಲ್ಕು ಮಹಾದ್ವಾರಗಳನ್ನು ಶೂರರೂ ಭಯಂಕರರೂ ಆದ ರಾಕ್ಷಸರು ರಕ್ಷಿಸುತ್ತಿರುವರು. ವಜ್ರವೈಡೂರ್ಯದ ದೊಡ್ಡ ಪ್ರಾಕಾರ ಆ ನಗರಿಗುಂಟು. ಆ ಪ್ರಾಕಾರದ ಸುತ್ತಲೂ ದೊಡ್ಡದಾಗಿಯೂ ಆಳವಾಗಿಯೂ ಕಂದಕವುಂಟು. ಅವನ್ನು ದಾಟುವುದು ಅಸಾಧ್ಯ. ರಾವಣನಿಗೆ ಯುದ್ಧವೆಂದರೆ ತುಂಬ ಆಸಕ್ತಿ. ಆದ್ದರಿಂದ ಸೈನ್ಯಗಳ ವಿಚಾರವನ್ನು ತಾನೇ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾನೆ. ಅವನು ಪ್ರಮತ್ತನಲ್ಲ. ಲಂಕಾನಗರಿ ತ್ರಿಕೂಟಾಚಲದ ಮೇಲಿರುವುದರಿಂದ ಆ ಪರ್ವತವನ್ನು ಏರಿ ಲಂಕೆಯನ್ನು ಪ್ರವೇಶಿಸುವುದು ದೇವತೆಗಳಿಂದಲೂ ಆಗದ ಕೆಲಸ. ಮೇಲಾಗಿ ದಕ್ಷಿಣ ಸಮುದ್ರವೇ ಲಂಕಾನಗರಕ್ಕೆ ಒಂದು ಬಲವಾದ ರಕ್ಷಣೆಯಂತಿದೆ. ಇಂಥ ನಗರವನ್ನು ನಾನಾಗಲೆ ಸುಟ್ಟು ಬಂದಿದ್ದೇನೆ. ರಾವಣನ ಸೈನ್ಯದ ಮುಖ್ಯರಾದ ರಾಕ್ಷಸರನ್ನು ಕೊಂದು ಬಂದಿದ್ದೇನೆ. ಈ ಕಡಲನ್ನು ದಾಟಿದರೆ

ರಾವಣನು ಈ ವಾನರವೀರರಿಂದ ನಾಶನಾದನೆಂದೇ ತಿಳಿ. ಶುಭಮುಹೂರ್ತದಲ್ಲಿ ಜೈತ್ರ ಯಾತ್ರೆ ಹೊರಡಲು ಅಪ್ಪಣೆಮಾಡು."

ಹನುಮಂತನ ಮಾತುಗಳನ್ನು ಕೇಳಿ ತೇಜಸ್ವಿಯಾದ ಶ್ರೀರಾಮಚಂದ್ರನು ಸುಗ್ರೀವನನ್ನು ಕುರಿತು "ಎಲೈ ಸುಗ್ರೀವನೆ, ಈಗ ಸೂರ್ಯನು ಆಕಾಶದ ಮಧ್ಯದಲ್ಲಿದ್ದಾನೆ. ಜೈತ್ರಯಾತ್ರೆಗೆ ಪ್ರಯಾಣಮಾಡಲು ಇದೇ ಒಳ್ಳೆಯ ಮುಹೂರ್ತವಾಗಿದೆ. ಈ ಮುಹೂರ್ತದಲ್ಲಿ ಪ್ರಯಾಣಮಾಡಿದರೆ ನಮಗೆ ಜಯ ಸಿದ್ಧ. ಅಲ್ಲದೆ ಈಗ ಒಳ್ಳೆಯ ಶಕುನಗಳಾಗುತ್ತಿವೆ. ನನ್ನ ಬಲಗಣ್ಣು ಹಾರುತ್ತಿದೆ" ಎಂದು ನುಡಿದನು. ಆ ಬಳಿಕ ಮಹಾತ್ಮನಾದ ಶ್ರೀರಾಮನು ಗೆಡ್ಡೆ ಗೆಣಸುಗಳನ್ನೂ ಹಣ್ಣು ಹಂಪಲುಗಳನ್ನೂ ಸರೊವರಗಳನ್ನೂ ರಕ್ಷಿಸಲೂ ರಾಕ್ಷಸರ ಗುಟ್ಟನ್ನು ಅರಿಯಲೂ ಅನುಕೂಲವಾಗುವಂತೆ ಶೂರರಾದ ಲಕ್ಷಮಂದಿ ವಾನರರೊಡನೆ ಮಾರ್ಗಶೋಧನೆಗಾಗಿ ನೀಲನೆಂಬ ಸೇನಾಪತಿಯನ್ನು ಕಳುಹಿಸಿಕೊಟ್ಟನು. ಅನಂತರ ರಾಮಲಕ್ಷ್ಮಣರು ಸುಗ್ರೀವರೊಡನೆಯೂ ಬಲಿಷ್ಠ ವಾನರ ಸೈನ್ಯದೊಡನೆಯೂ ಕೂಡಿ ದಕ್ಷಿಣ ದಿಕ್ಕನ್ನು ಕುರಿತು ವಿಜಯಯಾತ್ರೆಗೆ ಹೊರಟರು.

ವಿಜಯಯಾತ್ರೆಗೆಂದು ಹೊರಟ ವಾನರಸೇನೆಯ ಉತ್ಸಾಹ ಮುಗಿಲನ್ನು ಮುಟ್ಟುವಂತಿತ್ತು. ಹಾರುತ್ತ, ನೆಗೆಯುತ್ತ, ಹಣ್ಣುಗಳನ್ನು ತಿನ್ನುತ್ತ, ವೀರಜನಕವಾದ ವಾಕ್ಯಗಳನ್ನಾಡುತ್ತ ವಾನರಸೇನೆ ಮುಂದೆ ನಡೆಯಿತು. ನೀಲನು ಸೇನಾಪ್ರಯಾಣಕ್ಕಾಗಿ ಮಾರ್ಗವನ್ನು ಸರಿಪಡಿಸಿದನು. ಹತ್ತು ಕೋಟಿ ವಾನರರಿಂದ ಸುತ್ತುವರಿದ ಶತಬಲಿ ವಾನರಸೇನೆಯ ರಕ್ಷಕನಾಗಿ ನಡೆದನು. ಗಜ, ಅರ್ಕ, ಜಾಂಬವ ಮುಂತಾದ ವೀರರು ಆ ಮಹಾಸೇನೆಯ ಒಂದೊಂದು ಭಾಗವನ್ನು ರಕ್ಷಿಸುತ್ತ ಮುಂದೆ ನಡೆದರು. ಐರಾವತವನ್ನು ಏರಿದ ದೇವೇಂದ್ರನಂತೆ ಶ್ರೀರಾಮ ಲಕ್ಷ್ಮಣರು ಹನುಮಂತ ಅಂಗದರ ಹೆಗಲನ್ನೇರಿ ಶುಕ್ರ ಬೃಹಸ್ಪತಿಗಳಿಂದ ಕೂಡಿದ ಸೂರ್ಯಚಂದ್ರರಂತೆ ಹೊಳೆಯುತ್ತ ಪ್ರಯಾಣ ಹೊರಟರು. ಸಮುದ್ರದ ಪ್ರವಾಹಕ್ಕೆ ಸಮಾನವಾದ ಈ ವಾನರ ಸೇನೆಯಿಂದ ನಗರಗಳಿಗಾಗಲಿ ಜನರಿಗಾಗಲಿ ತೊಂದರೆಯುಂಟಾಗಲಿಲ್ಲ. ಈ ವಿಜಯಯಾತ್ರೆಯ ಸಮಯದಲ್ಲಿ ದಿಕ್ಕುಗಳು ನಿರ್ಮಲವಾಗಿ ಬೆಳಗಿದುವು. ಗಾಳಿ ಹಿತಕರವಾಗಿ ಬೀಸಿತು. ಹಕ್ಕಿ ಇಂಪಾಗಿ ಹಾಡಿದುವು.

ಹೀಗೆ ಮಹತ್ತಾದ ವಾನರಸೇನೆಯಿಂದ ಕೂಡಿ ಶ್ರೀರಾಮನು ನಡೆದು ಮಹೇಂದ್ರ ಪರ್ವತವನ್ನು ಸೇರಿದನು. ಆ ಪರ್ವತದ ಶಿಖರವನ್ನೇರಿ ನೋಡಿದೊಡನೆಯೆ ವಿಸ್ತಾರವಾದ ಸಾಗರ ಅವನ ಕಣ್ಣನ್ನು ಸೆಳೆಯಿತು. ಸಮುದ್ರವನ್ನು ಕಂಡೊಡನೆಯೆ ಶ್ರೀರಾಮನಿಗೆ ಸಂತೋಷವಾಗಿ, ಸುಗ್ರೀವ ಲಕ್ಷ್ಮಣರೊಡಗೂಡಿ ಆ ಪರ್ವತ ಶಿಖರವನ್ನಿಳಿದು ಸಮುದ್ರ ತೀರಕ್ಕೆ ಬಂದನು. ಸಮುದ್ರ ತೀರದಲ್ಲಿ ನಿಂತು ಸುಗ್ರೀವನನ್ನು ಕುರಿತು "ಎಲೈ ಸುಗ್ರೀವನೆ, ನಾವು ಸಮುದ್ರತೀರವನ್ನೇನೊ ಸೇರಿದೆವು. ಇದರ ದಡವೇ ನನಗೆ ಕಾಣಿಸದು. ಈಗ ಇದನ್ನು ದಾಟುವ ಉಪಾಯವನ್ನು ಕಂಡುಕೊಳ್ಳಬೇಕಾಗಿದೆ. ನಮ್ಮ ಸೇನೆಯನ್ನು ಪಡದಲ್ಲಿಯೆ ಇಳಿಸು" ಎಂದನು. ಶ್ರೀರಾಮನ ಅಪ್ಪಣೆಯಂತೆ ಸಮುದ್ರದ

ತೀರದಲ್ಲಿ ವಾನರ ಸೈನ್ಯ ಬಿಡಾರ ಮಾಡಿತು. ಆಗ ವಾನರರು ಮಾಡಿದ ಉತ್ಸಾಹದ ಧ್ವನಿ ಎರಡನೆಯ ಸಮುದ್ರಘೋಷದಂತೆ ಕೇಳಿಬರುತ್ತಿತ್ತು. ಕ್ರೂರ ಜಂತುಗಳಿಂದ ಕೂಡಿ ಗರ್ಜಿಸುತ್ತಲೂ ಚಂದ್ರೋದಯಕಾಲದಲ್ಲಿ ನೊರೆಯಿಂದ ಕೂಡಿ ನಗುತ್ತಿರುವುದೊ ಎಂಬಂತೆಯೂ ಇದ್ದ ಆ ಸಮುದ್ರವನ್ನು ನೋಡಿ ವಾನರರು ಸಂತೋಷಗೊಂಡರು. ಹಾಗೆಯೆ ಈ ಆಳವಾದ ಜಲರಾಶಿಯನ್ನು ದಾಟುವುದು ಹೇಗೆಂಬ ಚಿಂತೆ ಅವರನ್ನು ಆವರಿಸಿತು. ಆಕಾಶದಂತೆ ಇದ್ದ ಅದರ ವಿಸ್ತಾರ, ವಾಯುವಿನ ಹೊಡೆತದಿಂದ ಎದ್ದು ಬಿದ್ದು ಬರುತ್ತಿದ್ದ ತರಂಗರಾಶಿಗಳ ಶಬ್ದ ಇವುಗಳಿಂದ ವಾನರರು ಆಶ್ಚರ್ಯಗೊಂಡು ಸಮುದ್ರವನ್ನೇ ನೋಡುತ್ತ ಕುಳಿತುಕೊಂಡರು. ಆಗ ದಳಪತಿಯಾದ ನೀಲನು ಆ ಮಹಾ ಸೈನ್ಯವನ್ನು ಸಮುದ್ರದ ಉತ್ತರತೀರದಲ್ಲಿ ಚೆನ್ನಾಗಿ ನಿಲ್ಲಿಸಿ, ಮೈಂದ ಮತ್ತು ದ್ವಿವಿದರೆಂಬ ವಾನರೋತ್ತಮರನ್ನು ಅವರ ರಕ್ಷಣೆಗಾಗಿ ನಿಯಮಿಸಿದನು. ನೀಲನ ಅಪ್ಪಣೆಯಂತೆ ಅವರು ಸುತ್ತ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸತೊಡಗಿದರು.

---

# ೨

## ವಿಭೀಷಣನ ಹಿತೋಪದೇಶ

ಇತ್ತ ಲಂಕಾನಗರದಲ್ಲಿ ಮಹಾತ್ಮನಾದ ಹನುಮಂತನು ನಡೆಸಿದ ಕಾರ್ಯಗಳನ್ನು ಕಂಡು ರಾವಣನು ನಾಚಿಕೆಯಿಂದ ತಲೆತಗ್ಗಿಸಿದನು. ತನ್ನ ಸುತ್ತಲೂ ನೆರೆದಿದ್ದ ರಾಕ್ಷಸ ವೀರರನ್ನು ಕಂಡು ರಾವಣನು "ರಾಕ್ಷಸವೀರರೆ, ನಿರಾಯುಧನಾದ ವಾನರನೊಬ್ಬನು ಲಂಕೆಯನ್ನು ಹೊಕ್ಕು ಅದನ್ನು ಹಾಳುಮಾಡಿದನು ; ಸೀತೆಯನ್ನು ನೋಡಿದನು ; ರಾಕ್ಷಸವೀರರನ್ನು ಕೊಂದನು ; ರಾಜಧಾನಿಯನ್ನು ಸುಟ್ಟನು. ಈಗ ನಾವು ಮಾಡ ಬೇಕಾದ ಕಾರ್ಯವೇನೆಂದು ತಿಳಿಸಿ. ವಿಜಯಕ್ಕೆ ಮಂತ್ರವೇ ಮೂಲವೆಂದು ಆರ್ಯರು ಹೇಳುತ್ತಾರೆ. ಆದ್ದರಿಂದ ಬುದ್ಧಿವಂತರಾದ ನೀವು ಚೆನ್ನಾಗಿ ಆಲೋಚಿಸಿ ನಾನು ಮಾಡಬೇಕಾದ ಕಾರ್ಯವನ್ನು ತಿಳಿಸಿ. ಸಾವಿರಾರು ಕಪಿಗಳಿಂದ ಕೂಡಿ ಶ್ರೀರಾಮನು ಲಂಕೆಯನ್ನು ಮುತ್ತಲು ಬರುವನು. ತನ್ನ ಪರಾಕ್ರಮದಿಂದ ನೀರನ್ನು ಶೋಷಿಸಿಯೊ ಇಲ್ಲವೆ ಬೇರೊಂದು ಕಾರ್ಯಮಾಡಿಯೊ ಈ ಕಡಲನ್ನು ದಾಟಿ ಬರಬಲ್ಲನೆಂಬ ಶಕ್ತಿ ಅವನಿಗುಂಟೆಂಬುದನ್ನು ನಾನು ಬಲ್ಲೆ. ಆ ಸಮಯದಲ್ಲಿ ನಗರವನ್ನೂ ಸೈನ್ಯವನ್ನೂ ರಕ್ಷಿಸುವ ಉಪಾಯವನ್ನು ತಿಳಿಸಿ" ಎಂದನು.

ರಾವಣನ ಮಾತುಗಳನ್ನು ಕೇಳಿ ಬುದ್ಧಿಹೀನರೂ ನೀತಿಬಾಹಿರರೂ ಆದ ರಾಕ್ಷಸ ವೀರರು ಕೈ ಮುಗಿದು ನಿಂತು ಈ ರೀತಿ ಹೇಳಿದರು. "ಎಲೈ ರಾಜನೆ, ಆಯುಧ ಸಹಿತ ವಾಗಿರುವ ದೊಡ್ಡ ಸೈನ್ಯ ನಮ್ಮಲ್ಲಿರುವಾಗ ನಿನಗೇಗೆ ಚಿಂತೆ? ನೀನೇನು ಸಾಮಾನ್ಯನೆ? ಪಾತಾಳವಾಸಿಗಳನ್ನೂ ಕುಬೇರನನ್ನೂ ಗೆದ್ದವನು. ಈಶ್ವರನ ಸ್ನೇಹ ನಿನಗುಂಟು. ಕುಬೇರನ ಪುಷ್ಪಕ ವಿಮಾನ ನಿನ್ನ ವಶದಲ್ಲಿದೆ. ಮಯನೆಂಬ ರಾಕ್ಷಸನು ನಿನ್ನ ಪರಾಕ್ರಮವನ್ನು ಕಂಡು ಹೆದರಿ ತನ್ನ ಮಗಳನ್ನು ನಿನಗೆ ಮದುವೆ ಮಾಡಿ ಕೊಟ್ಟನು. ಮಧು ಕಾಲಕೇಯ ಮುಂತಾದ ರಾಕ್ಷಸರು ನಿನ್ನ ಶಕ್ತಿಗೆ ಹೆದರಿ ವಶರಾದರು. ಹೀಗಿರುವಲ್ಲಿ ಶ್ರೀರಾಮನು ಬಲಪರಾಕ್ರಮಗಳಲ್ಲಿ ನಿನಗೆ ಸಮಜೋಡಿಯೆ? ಈ ಇಂದ್ರಜಿತುವೊಬ್ಬನೆ ಆ ಕಪಿಸೈನ್ಯವನ್ನು ನಾಶಗೊಳಿಸಲು ಸಾಕು. ಆದ್ದರಿಂದ ಆ ರಾಮನನ್ನು ಜಯಿಸಲು ಇಂದ್ರಜಿತುವನ್ನು ಕಳುಹಿಸು. ಸಾಮಾನ್ಯ ಮನುಷ್ಯನಿಗಾಗಿ ನೀನು ಅಷ್ಟು ಚಿಂತಿಸುವುದು ಯುಕ್ತವಲ್ಲ. ಶ್ರೀರಾಮನನ್ನು ಸಂಹರಿಸಲು ನೀನು ಸಮರ್ಥನಾಗಿರುವೆ."

ಆ ಬಳಿಕ ಪ್ರಹಸ್ತ, ದುರ್ಮುಖ, ವಜ್ರದಂಷ್ಟ್ರ ಮುಂತಾದ ರಾಕ್ಷಸ ವೀರರು ಉಳಿದ ರಾಕ್ಷಸವೀರರು ನುಡಿದ ಮಾತನ್ನೇ ಪುಷ್ಟೀಕರಿಸಿ ಮಾತನಾಡಿದರು. ಅಷ್ಟೇ ಅಲ್ಲದೆ ರಾಮಲಕ್ಷ್ಮಣರನ್ನು ಸಂಹರಿಸಿ ಬರುವೆನೆಂದು ಆಯುಧಪಾಣಿಗಳಾಗಿ

ಪ್ರಮಾಣಕ್ಕೆ ಸಿದ್ಧರಾದರು. ಆಗ ರಾವಣನ ತಮ್ಮನಾದ ವಿಭೀಷಣನು ಆ ರಾಕ್ಷಸ ವೀರರನ್ನು ತಡೆದು, ಅವರನ್ನು ಕೂಡಿಸಿ, ಕೈಮುಗಿದು ನಿಂತು ರಾವಣನಿಗೆ ಈ ರೀತಿ ನುಡಿದನು: "ಅಣ್ಣ, ಚತುರೋಪಾಯಗಳಲ್ಲಿ ಸಾಮ ದಾನ ಭೇದಗಳು ಉಪಯೋಗಕ್ಕೆ ಬಾರದಿದ್ದಲ್ಲಿ ದಂಡಕ್ಕೆ ಕೈಯಿಡಬೇಕೆಂದು ಬಲ್ಲವರು ಹೇಳುತ್ತಾರೆ. ಎಚ್ಚರ ತಪ್ಪಿದವರಲ್ಲಿ, ದೇವಬಲವಿಲ್ಲದಿದ್ದವರಲ್ಲಿ ದಂಡೋಪಾಯ ಸಿದ್ಧಿಸಬಹುದು. ಆದರೆ ಶ್ರೀರಾಮನಲ್ಲಿ ದಂಡೋಪಾಯ ಹೇಗೆತಾನೆ ಸಾಧ್ಯ? ಅವನು ಜಿತಕ್ರೋಧ ಮತ್ತು ಶೂರ. ಈ ವಿಸ್ತಾರವಾದ ಸಾಗರವನ್ನು ಹನುಮಂತನು ದಾಟಿದನು. ಹೀಗೆ ಸಮುದ್ರವನ್ನು ಅವನು ದಾಟುವನೆಂದು ಯಾರಾದರೂ ಊಹಿಸಲು ಕೂಡ ಸಾಧ್ಯವಿತ್ತೆ? ಅಲ್ಲದೆ ಶತ್ರುಸೈನ್ಯ ಅಪರಿಮಿತವಾಗಿದೆ. ಈಗ ನಾವು ದುಡುಕಬಾರದು. ನೀನು ರಾಮನ ಹೆಂಡತಿಯನ್ನು ಕದ್ದು ತಂದು ಅವನಿಗೆ ಅಪಕಾರ ಮಾಡಿರುವೆ. ದುಷ್ಟನಾದ ಖರನು ಮೇಲೆ ಬಂದು ಬೀಳಲು ಪ್ರಾಣರಕ್ಷಣೆಗಾಗಿ ಅವನನ್ನು ಶ್ರೀರಾಮನು ಕೊಂದುದು ತಪ್ಪೆ? ಪರಸ್ತ್ರೀಗಮನ ಬಹು ಘೋರವಾದ ಪಾಪ. ಅದರಿಂದ ಆಯುಷ್ಯ ಕ್ಷೀಣಿಸುತ್ತದೆ; ದ್ರವ್ಯನಾಶವಾಗುತ್ತದೆ; ಅಪಕೀರ್ತಿ ಸಂಭವಿಸುತ್ತದೆ. ಸೀತೆಯನ್ನು ನೀನು ಅಪಹರಿಸಿ ತಂದಿರುವುದರಿಂದ ನಮಗೆ ಈ ತೆರನಾದ ಭಯ ಉಂಟಾಗಿದೆ. ಆದ್ದರಿಂದ ಶ್ರೀರಾಮನಲ್ಲಿ ವೈರವನ್ನು ಬಿಟ್ಟು, ಅವನ ಬಾಣಗಳಿಂದ ಜನಧನಸಮೃದ್ಧವಾದ ಈ ನಗರ ನಾಶವಾಗುವುದಕ್ಕೆ ಮುಂಚೆ, ವಾನರರು ಲಂಕೆಯನ್ನು ಮುತ್ತುವುದಕ್ಕೆ ಮುಂಚೆ, ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು. ರಾಕ್ಷಸರು ಬದುಕಬೇಕೆಂದಿದ್ದರೆ, ಈ ನಿನ್ನ ಬಂಧುಗಳು ಬಾಳಬೇಕೆಂದಿದ್ದರೆ, ನನ್ನ ಈ ಹಿತವಾದ ಮಾತನ್ನು ಕೇಳಿ ಅದರಂತೆ ನಡೆ. ನಿನ್ನನ್ನು ಬೇಡಿಕೊಳ್ಳುತ್ತೇನೆ. ಸುಖವನ್ನೂ ಧರ್ಮವನ್ನೂ ನಾಶಗೊಳಿಸುವ ಈ ಕೋಪವನ್ನು ಬಿಡು. ನಿನ್ನ ಕೀರ್ತಿಯನ್ನು ಹೆಚ್ಚಿಸು. ಶ್ರೀರಾಮನಿಗೆ ಸೀತೆಯನ್ನೊಪ್ಪಿಸು. ಬಂಧು ಬಾಂಧವರೊಡಗೂಡಿ ಸುಖವಾಗಿ ಬಾಳೋಣ." ವಿಭೀಷಣನ ಹಿತನುಡಿ ರಾವಣನಿಗೆ ರುಚಿಸಲಿಲ್ಲ. ಸಭೆಯನ್ನು ವಿಸರ್ಜಿಸಿ ಅಂತಃಪುರಕ್ಕೆ ಹೊರಟುಹೋದನು.

ರಾವಣನ ನಡತೆಯನ್ನು ಕಂಡು ವಿಭೀಷಣನ ಮನಸ್ಸು ಸಮಾಧಾನ ಹೊಂದಲಿಲ್ಲ. ಅಣ್ಣನಿಗೆ ನೀತಿ ಹೇಳುವುದು ಭಯಂಕರವಾದ ಕೆಲಸವೆಂದು ಅವನಿಗೆ ತಿಳಿದಿತ್ತು. ಆದರೂ ಹೆದರದೆ ಮರುದಿನ ಪ್ರಾತಃಕಾಲದಲ್ಲಿ ವಿದ್ವಾಂಸರಿಂದಲೂ ಬುದ್ಧಿವಂತರಾದ ಮಂತ್ರಿಗಳಿಂದಲೂ ಸ್ವಾಮಿಭಕ್ತರಾದ ರಾಕ್ಷಸರಿಂದಲೂ ನಿಬಿಡವಾಗಿ ದೇವತೆಗಳ ಮನೆಯಂತೆ ಸಂಪತ್ ಸಮೃದ್ಧವಾದ ತನ್ನ ಅಣ್ಣನ ಮನೆಗೆ ವಿಭೀಷಣನು ಬಂದನು. ಅಲ್ಲಿ ವೇದವಿದರಾದ ಬ್ರಾಹ್ಮಣರು ರಾವಣನ ವಿಜಯಕ್ಕಾಗಿ ಮಂತ್ರಗಳನ್ನು ಪಠಿಸುತ್ತಿದ್ದರು. ಅವರ ಮುಂದೆ ಹಾಲು ತುಪ್ಪ ಮೊಸರು ಅಕ್ಷತೆ ಮುಂತಾದ ಪೂಜಾ ಸಾಮಗ್ರಿಗಳಿದ್ದುವು. ಅವರ ನಡುವೆ ತನ್ನ ತೇಜಸ್ಸಿನಿಂದಲೇ ಹೊಳೆಯುತ್ತ ಸಿಂಹಾಸನಾರೂಢನಾಗಿದ್ದ ಕುಬೇರನ ತಮ್ಮನಾದ ರಾವಣನನ್ನು

ಕಂಡು ನಮಸ್ಕರಿಸಿದನು. ಆ ಬಳಿಕ ಪೀಠದಲ್ಲಿ ಕುಳಿತುಕೊಂಡು ಮಂತ್ರಿಗಳ ಎದುರಿನಲ್ಲಿ ಮಹಾತ್ಮನಾದ ವಿಭೀಷಣನು ರಾವಣನಿಗೆ ಹಿತಕರವಾದ ಈ ಮಾತುಗಳನ್ನು ನುಡಿದನು.

"ಅಣ್ಣ, ಸೀತೆಯನ್ನು ನೀನು ಕದ್ದು ತಂದ ದಿನದಿಂದಲೂ ಲಂಕೆಯಲ್ಲಿ ಅಪಶಕುನ ಗಳು ತೋರುತ್ತಿವೆ. ಅಗ್ನಿ ಧೂಮದಿಂದ ಕೂಡಿ ವರ್ಧಿಸುತ್ತಿಲ್ಲ. ಅಡಿಗೆಯ ಮನೆಗಳಲ್ಲಿ ಅಗ್ನಿ ಹೋತ್ರಗೃಹಗಳಲ್ಲಿ ವೇದಘೋಷ ಸ್ಥಳಗಳಲ್ಲಿ ಸರ್ಪಗಳು ಕಾಣಿಸಿಕೊಳ್ಳುತ್ತಿವೆ. ಹಸುಗಳು ಚೆನ್ನಾಗಿ ಹಾಲು ಕೊಡುತ್ತಿಲ್ಲ. ಮದ್ದಾನೆಗಳು ಕುದುರೆಗಳು ದೀನವಾಗಿ ಕೂಗುತ್ತ ಹುಲ್ಲು ನೀರುಗಳನ್ನು ತೆಗೆದುಕೊಳ್ಳದಿವೆ. ಕತ್ತೆಗಳೂ ಒಂಟೆಗಳೂ ಕಣ್ಣೀರು ಬಿಡುತ್ತವೆ. ಪ್ರೈಗು ಬೆಳಗುಗಳಲ್ಲಿ ಪಟ್ಟಣಕ್ಕೆ ಸಮೀಪದಲ್ಲಿಯೆ ನರಿಗಳು ಅಮಂಗಳಕರ ವಾಗಿ ಊಳುತ್ತವೆ. ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸುವುದೆ ಇದಕ್ಕೆ ಪ್ರಾಯಶ್ಚಿತ್ತ. ನಾನು ಬದುಕಬೇಕೆಂಬ ಆಶೆಯಿಂದ ಈ ಮಾತನ್ನು ಹೇಳುತ್ತಿಲ್ಲ. ನಿನಗೂ ಮತ್ತು ಪಟ್ಟಣಿಗರಿಗೂ ಹಿತಕರವಾಗಿ ಈ ಮಾತನ್ನು ಹೇಳಲು ನಿನ್ನ ಮಂತ್ರಿಗಳು ಹಿಂದೆಗೆಯು ತ್ತಿದ್ದಾರೆ. ನನಗೆ ಕಂಡುದ್ದನ್ನೂ ಕೇಳಿದ್ದನ್ನೂ ನಾನು ನಿನಗೆ ತಿಳಿಸಿದ್ದೇನೆ. ನ್ಯಾಯ ವಾದುದನ್ನು ಕುರಿತು ಯೋಚಿಸಿ ಅದರಂತೆ ನಡೆ."

ವಿಭೀಷಣನ ಮಾತು ರಾವಣನಿಗೆ ಹಿತವೆನಿಸಲಿಲ್ಲ. ಹಟವಾದಿಯಾದ ಅವನು ಕೋಪದಿಂದ "ನನಗೆ ಯಾರ ದೆಸೆಯಿಂದಲೂ ಭಯವಿಲ್ಲ. ರಾಮನು ಸೀತೆಯನ್ನು ಮತ್ತೆ ಹೊಂದಲಾರನು. ದೇವತೆಗಳಿಂದ ಕೂಡಿದ ಇಂದ್ರನೊಡನೆ ಬಂದರೂ ರಾಮನು ಯುದ್ಧದಲ್ಲಿ ನನ್ನನ್ನು ಗೆಲ್ಲಲಾರನು" ಎಂದು ಹೇಳಿ ಚಂಡವಿಕ್ರಮಿಯಾದ ರಾವಣನು ಹಿತವಚನವನ್ನು ಹೇಳಿದ ವಿಭೀಷಣನನ್ನು ಕಳುಹಿಸಿಕೊಟ್ಟು ಸಭಾಭವನಕ್ಕೆಂದು ಹೊರಟನು.

ರಾವಣನ ಸ್ವರ್ಣಖಚಿತವಾದ ರಥಕ್ಕೆ ಉತ್ತಮವಾದ ಕುದುರೆಗಳನ್ನು ಕಟ್ಟ ಲಾಗಿತ್ತು. ಇಂಥ ರಥವನ್ನು ರಾವಣನು ಹತ್ತಿ ಹೊರಡಲು ಖಡ್ಗಧಾರಿಗಳಾದ ರಾಕ್ಷಸರು ಆ ರಥದ ಸುತ್ತಲೂ ಹೊರಟರು. ರಥದ ಹಿಂದೆ ಆನೆ ಕುದುರೆಗಳೂ ರಥಗಳೂ ಅನುಸರಿಸಿ ಹೊರಟವು. ಶಂಖ ದುಂದುಭಿಗಳ ಘೋಷ ಆಕಾಶವನ್ನೆಲ್ಲ ಆವರಿಸಿತು. ರಾವಣನಿಗೆ ಹಿಡಿದಿದ್ದ ಬೆಳ್ಗೊಡೆ ಪೂರ್ಣಚಂದ್ರಮಂಡಲದಂತೆ ಹೊಳೆಯುತ್ತಿತ್ತು. ಬಂಗಾರದ ಹಿಡಿಯುಳ್ಳ ಸ್ಫಟಿಕದಂತೆ ನಿರ್ಮಲವಾದ ಚಾಮರಗಳು ಅವನ ಎಡಬಲದಲ್ಲಿ ಹೊಳೆಯುತ್ತಿದ್ದುವು. ನೆಲದ ಮೇಲೆ ನಿಂತಿದ್ದ ರಾಕ್ಷಸರೆಲ್ಲರೂ ಅಂಜಲಿಬದ್ಧರಾಗಿ ತಲೆಬಾಗಿ ರಾವಣನಿಗೆ ವಂದಿಸಿದರು. ಹೀಗೆ ವೈಭವದಿಂದ ಯುಕ್ತನಾದ ರಾವಣನು ವಿಶ್ವಕರ್ಮ ನಿರ್ಮಿತವಾದ ಆ ಸಭೆಯನ್ನು ಹೊಕ್ಕು ಸಿಂಹಾಸನದಲ್ಲಿ ಕುಳಿತನು. ಆಗ ರಾವಣನ ಅಪ್ಪಣೆಯಂತೆ ಮುಖ್ಯರಾದ ಪೌರರು, ಅಮಾತ್ಯರು, ವಿಭೀಷಣ, ಕುಂಭಕರ್ಣ, ಇಂದ್ರಜಿತು ಮೊದಲಾದ ಬಂಧುಬಾಂಧವರೂ ಸಭೆಗೆ ಬಂದು ರಾವಣನಿಗೆ ನಮಸ್ಕರಿಸಿ ಉಚಿತವಾದ ಆಸನಗಳಲ್ಲಿ ಕುಳಿತುಕೊಂಡರು. ಸ್ವಲ್ಪವೂ ಸದ್ದು ಮಾಡದೆ ಆ ರಾಕ್ಷಸವೀರರು ರಾವಣನ ಮುಖವನ್ನೇ ನೋಡುತ್ತಿದ್ದರು.

ದೇವತೆಗಳ ನಡುವೆ ಶೋಭಿಸುವ ದೇವೇಂದ್ರನಂತೆ ರಾಕ್ಷಸರ ನಡುವೆ ರಾವಣನು ಪ್ರಹಸ್ತನ ಮೂಲಕ ನಗರ ರಕ್ಷಣೆಗೆ ತಕ್ಕ ಏರ್ಪಾಡುಗಳನ್ನು ಮಾಡಿ, ಆ ಬಳಿಕ ಸಭೆಯವರನ್ನು ಕುರಿತು ಈ ರೀತಿ ನುಡಿದನು—"ಸಭಾಸದರೆ, ನಿಮ್ಮ ಮಂತ್ರಬಲ ದಿಂದ ಇದುವರೆಗೆ ನಾನು ಯತ್ನಿಸಿದ ಕಾರ್ಯವೊಂದೂ ನಿಷ್ಫಲವಾಗಿಲ್ಲ. ನಿಮ್ಮ ಬಲದಿಂದ ನನಗೆ ಅತುಳವಾದ ಸಂಪತ್ತು ಕೈಸೇರಿದೆ. ನಿದ್ರೆಯಲ್ಲಿ ಮುಳುಗಿಹೋಗಿರುವ ಬಲಶಾಲಿಯಾದ ಕುಂಭಕರ್ಣನಿಗೆ ನಾನು ಈ ವಿಷಯವನ್ನು ತಿಳಿಸಲಾಗಲಿಲ್ಲ. ದಂಡಕಾರಣ್ಯದಿಂದ ಬಂದ ದಿನದಿಂದಲೂ ಸೀತೆ ನನ್ನ ಹಾಸಿಗೆಯನ್ನೇರಲು ಸಮ್ಮತಿಸ ಲಿಲ್ಲ. ಪರಮಸುಂದರಿಯಾದ ಆಕೆಯನ್ನು ಬಿಟ್ಟರೆ ಬೇರೊಬ್ಬರಲ್ಲಿ ನನ್ನ ಮನಸ್ಸೆ ಹೋಗುತ್ತಿಲ್ಲ. ರಾಮನನ್ನೇ ನೆನೆಯುತ್ತಿದ್ದರೂ ನನ್ನನ್ನು ಸೇರಲು ಒಂದು ವರ್ಷ ಅವಧಿ ಕೇಳಿದ್ದಾಳೆ. ದಾರಿನಡೆದ ಕುದುರೆಗಳಂತೆ, ಮನ್ಮಥ ಬಾಧೆಯಿಂದ ನಾನು ಬಳಲಿಹೋಗಿದ್ದೇನೆ. ಹಿಂದೆ ಬ್ರಹ್ಮನ ಬಳಿಗೆ ಹೋಗುತ್ತಿದ್ದ ಪುಂಜಿಕಸ್ಥಲೆಯೆಂಬ ಅಪ್ಸರೆಯನ್ನು ನಾನು ಬಲಾತ್ಕಾರದಿಂದ ಭೋಗಿಸಿದ ಕಾರಣ 'ಈ ದಿನ ಮೊದಲ್ಗೊಂಡು ಪರಸ್ತ್ರೀಯನ್ನು ನೀನು ಬಲಾತ್ಕಾರವಾಗಿ ಭೋಗಿಸಿದರೆ ನಿನ್ನ ತಲೆ ನೂರು ಹೋಳಾಗಲಿ' ಎಂದು ಶಪಿಸಿರುವ ಕಾರಣ, ಸೀತೆಯನ್ನು ಬಲಾತ್ಕರಿಸದವನಾಗಿದ್ದೇನೆ. ಈಗ ನೀವು ರಾಮಲಕ್ಷ್ಮಣರನ್ನು ವಧಿಸುವುದಕ್ಕೂ, ಸೀತೆಯನ್ನು ಒಪ್ಪಿಸುವುದಕ್ಕೂ ಉಪಾಯವನ್ನು ತಿಳಿಸಿ. ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆ, ಇಲ್ಲವೆ ಯುದ್ಧ ಮಾಡಬೇಕೆ ?"

ಕಾಮದಿಂದ ಕುರುಡನಾದ ರಾವಣನ ಅಪಲಾಪವನ್ನು ಕೇಳಿ ಕುಂಭಕರ್ಣನು ಕೋಪಗೊಂಡನು. "ಅಣ್ಣ, ರಾಮಲಕ್ಷ್ಮಣರಿಂದ ಕೂಡಿದ ಸೀತೆಯನ್ನು ಬಲಾತ್ಕಾರ ದಿಂದ ಕದ್ದು ತರುವುದಕ್ಕಿಂತ ಒಮ್ಮೆ ಆಲೋಚನೆ ಮಾಡಿದ್ದರೆ ನದಿ ಬೆಟ್ಟವನ್ನು ಕೊರೆಯುವಂತೆ ಚಿಂತೆ ನಿನ್ನ ಮನಸ್ಸನ್ನು ಕೊರೆಯುತ್ತಿರಲಿಲ್ಲ. ನ್ಯಾಯವಾದ ರೀತಿಯಲ್ಲಿ ರಾಜಕಾರ್ಯಗಳನ್ನು ನಡೆಸುವವನು ಸಂಕಟ ಪಡುವುದಿಲ್ಲ. ಅವಿಚಾರದಿಂದ ಸೀತಾಪಹರಣಕಾರ್ಯವನ್ನು ನೀನು ಮಾಡಿದೆ. ಅದೃಷ್ಟವಶದಿಂದ ಶ್ರೀರಾಮನು ನಿನ್ನನ್ನು ಹೊಡೆದುಹಾಕದೆ ಹೋದನು. ಈಗ ಆದುದಾಯಿತು. ನಿನ್ನ ಶತ್ರುವಾದ ರಾಮನನ್ನು ಕೊಂದು ಅವನ ರಕ್ತವನ್ನು ಕುಡಿಯುತ್ತೇನೆ. ಲಕ್ಷ್ಮಣನನ್ನು ಕೊಂದು ಉಳಿದ ವಾನರರನ್ನು ತಿಂದುಬಿಡುತ್ತೇನೆ. ಆ ಬಳಿಕ ನೀನು ಸೀತೆಯನ್ನು ಸ್ವಾಧೀನ ಪಡಿಸಿಕೊಂಡು, ಅವಳೊಡನೆ ಸುಖವನ್ನು ಅನುಭವಿಸು" ಎಂದನು.

ಕುಂಭಕರ್ಣನ ಮಾತುಗಳನ್ನು ಕೇಳಿ ವಿಭೀಷಣನು ರಾವಣನಿಗೆ ಹಿತಕರವಾದ ಮಾತುಗಳನ್ನು ಮತ್ತೆ ನುಡಿದನು. "ಅಣ್ಣ, ಮೊನಚಾದ ಉಗುರುಗಳನ್ನೂ ಕೋರೆದಾಡೆಗಳನ್ನೂ ಉಳ್ಳ ಕಪಿಸೈನ್ಯ ಲಂಕೆಯನ್ನು ಮುತ್ತುವುದರೊಳಗಾಗಿ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು. ವಜ್ರಾಯುಧಕ್ಕೆ ಸಮಾನವಾದ ವಾಯು ವೇಗವುಳ್ಳ ರಾಮಬಾಣಗಳು ರಾಕ್ಷಸ ಶ್ರೇಷ್ಠರನ್ನು ಕೊಲ್ಲುವುದರೊಳಗಾಗಿ ಸೀತೆ

ಯನ್ನು ಆತನಿಗೆ ಒಪ್ಪಿಸು. ಕುಂಭಕರ್ಣನಾಗಲಿ, ಇಂದ್ರಜಿತುವಾಗಲಿ, ಇತರ ರಾಕ್ಷಸ ವೀರರಾಗಲಿ ಯುದ್ಧದಲ್ಲಿ ಶ್ರೀರಾಮನ ಮುಂದೆ ನಿಲ್ಲಲು ಸಮರ್ಥರಲ್ಲ. ರಾಜನು ಒಂದು ವೇಳೆ ಅಧರ್ಮದಲ್ಲಿ ಕಾಲಿಟ್ಟರೆ, ಸ್ನೇಹಿತರು ಅವನನ್ನು ರಕ್ಷಿಸಬೇಕು. ಆದ್ದರಿಂದ ಶ್ರೀರಾಮನಿಗೆ ಅವನ ಹೆಂಡತಿಯಾದ ಸೀತೆಯನ್ನು ಒಪ್ಪಿಸಿಬಿಡೋಣ."

ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ ವಿಭೀಷಣನ ಮಾತನ್ನು ಕೇಳಿ ತೇಜಸ್ವಿಯಾದ ಇಂದ್ರಜಿತು ತಂದೆಯನ್ನು ಕುರಿತು "ಆರ್ಯ, ನಿನಗೆ ತಮ್ಮನಾದ ವಿಭೀಷಣನು ರಾಮನಿಗೆ ಹೆದರಿ ಅಯುಕ್ತವಾದ ಮಾತನ್ನಾಡಿದನು. ಪೌಲಸ್ತ್ಯವಂಶದಲ್ಲಿ ಹುಟ್ಟಿದ ಯಾವನೂ ಇಂತಹ ಮಾತುಗಳನ್ನಾಡನು. ರಾಕ್ಷಸರಾದ ನಮಗೆ ರಾಜಪುತ್ರರಾದ ರಾಮಲಕ್ಷ್ಮಣರು ಎಷ್ಟು ಮಾತ್ರದವರು ? ಹಿಂದೆ ನಾನು ಐರಾವತದಿಂದೊಡಗೂಡಿದ ಇಂದ್ರನನ್ನೇ ನೆಲಕ್ಕುರುಳಿಸಿದೆ. ದೇವತೆಗಳನ್ನು ಹೆದರಿಸಿದೆ. ಹೀಗಿರುವಲ್ಲಿ ಸಾಮಾನ್ಯರಾದ ಇಬ್ಬರು ಮನುಷ್ಯರಿಗಾಗಿ ನಾವೇಕೆ ಹೆದರಬೇಕು ?" ಎಂದನು.

ಕೊನೆಯ ಬಾರಿ ಶೂರನಾದ ವಿಭೀಷಣನು ಇಂದ್ರಜಿತ್ತನ್ನು ಕುರಿತು "ವತ್ಸ, ರಾಜಕಾರ್ಯದಲ್ಲಿ ನಿನ್ನ ಬುದ್ಧಿ ಇನ್ನೂ ಪಕ್ವವಾಗಿಲ್ಲ; ನೀನಿನ್ನೂ ಹುಡುಗ. ಆದ್ದರಿಂದ ಅಪ್ರಯೋಜಕವಾದ ಮಾತು ನಿನ್ನ ಬಾಯಿಂದ ಹೊರಟಿತು. ರಾವಣನಿಗೆ ಮಿತ್ರನಂತೆ ತೋರುವ ನೀನು ಶತ್ರುವಾಗಿರುವೆ. ಶ್ರೀರಾಮನಿಂದಾಗುವ ಕೇಡನ್ನು ಅರಿತೂ ಯುದ್ಧವನ್ನು ಬಯಸುವ ನೀನು ವಧಾರ್ಹ. ನೀನೇ ಪಂಡಿತನೆಂದು ತಿಳಿದು ಮಾತನಾಡುತ್ತಿರುವೆ. ಕಾಲಪಾಶಕ್ಕೆ ಸಮಾನವಾದ ರಾಮಬಾಣಗಳನ್ನು ಸಹಿಸುವುದು ಹೇಗೆ ತಾನೆ ಸಾಧ್ಯ ?" ಎಂದು ನುಡಿದು, ರಾವಣನ ಕಡೆ ತಿರುಗಿ ಈ ರೀತಿ ನುಡಿದನು: "ಅಣ್ಣ, ರತ್ನಾಭರಣವಸ್ತ್ರಾದಿಗಳ ಕಾಣಿಕೆಯೊಡನೆ ಸೀತೆಯನ್ನು ಕೊಂಡೊಯ್ದು ಶ್ರೀರಾಮನಿಗೆ ಒಪ್ಪಿಸು. ಆಗ ನಾವು ಶೋಕವನ್ನು ಬಿಟ್ಟು ಸುಖದಿಂದ ಇರಬಹುದು.

ವಿಧಿಯಿಂದ ಪ್ರೇರಿತನಾದ ರಾವಣನಿಗೆ ವಿಭೀಷಣನು ನುಡಿದ ಹಿತವಚನಗಳು ರುಚಿಸಲಿಲ್ಲ. ಕೋಪಗೊಂಡ ರಾವಣನು ತಮ್ಮನನ್ನು ಕುರಿತು ಈ ರೀತಿ ಕ್ರೂರವಾದ ಮಾತುಗಳನ್ನಾಡಿದನು: "ವಿಭೀಷಣ, ಶತ್ರುವಿನೊಡನೆ, ಇಲ್ಲವೆ ಕೆರಳಿದ ಕ್ರೂರ ಸರ್ಪದೊಡನೆ ವಾಸಮಾಡಬಹುದು. ಆದರೆ ಶತ್ರುಪಕ್ಷಪಾತಿಯಾದ ಮಿತ್ರನೊಡನೆ ವಾಸಮಾಡಕೂಡದು. ಲೋಕದಲ್ಲಿ ದಾಯಾದಿಗಳ ಸ್ವಭಾವವೇ ಹೀಗೆ. ತಮ್ಮ ದಾಯಾದಿಗಳಿಗೆ ವ್ಯಸನ ಬಂದಾಗ ಇವರು ಸಂತೋಷಪಡುತ್ತಾರೆ. ಸ್ವಜಾತಿಯಲ್ಲಿರುವ ಶೂರರನ್ನು ಕಂಡರೆ ಅವರಿಗೆ ತಿರಸ್ಕಾರ. ಆದ್ದರಿಂದ ಅವರ ವಿಷಯದಲ್ಲಿ ಭಯಪಡಬೇಕಾದುದು ಸಹಜವಾದುದೆ. ನನ್ನ ಏಳ್ಗೆ, ಐಶ್ವರ್ಯ, ಭೋಗ ಈ ಯಾವೊಂದನ್ನೂ ನೋಡಿ ಸಹಿಸುವುದಿಲ್ಲವೆಂದು ತೋರುತ್ತದೆ. ಎಲಾ ನೀಚ, ನೀನು ನುಡಿದಂತೆ ಬೇರೊಬ್ಬನು ನುಡಿದಿದ್ದರೆ ಅವನು ಈ ಭೂಮಿಯ ಮೇಲೆ ಇರುತ್ತಲೆ ಇರಲಿಲ್ಲ. ನೀನು ನನ್ನ ಸಹೋದರನಾದುದರಿಂದ ನಿನ್ನನ್ನು ಮನ್ನಿಸಿದ್ದೇನೆ. ಕುಲಗೇಡಿಯಾದ ನೀನು ನನ್ನೆದುರಿಗೆ ನಿಲ್ಲಬೇಡ ತೊಲಗು."

ಅಣ್ಣನ ಕ್ರೂರವಾದ ಈ ಮಾತುಗಳನ್ನು ಕೇಳಿ ನ್ಯಾಯವಾದಿಯಾದ ವಿಭೀಷಣನು ಗದಾಪಾಣಿಯಾಗಿ ತನ್ನ ನಾಲ್ವರು ಮಂತ್ರಿಗಳೊಡನೆ ಆಕಾಶಕ್ಕೆ ನೆಗೆದು ಬಿಟ್ಟನು. "ರಾಜನೆ, ನೀನು ನನ್ನ ಹಿರಿಯಣ್ಣ, ತಂದೆಗೆ ಸಮಾನ, ಹಾಗೂ ಪೂಜ್ಯ. ನೀನಾಡಿದ ಕ್ರೂರವಾದ ಮಾತು ನನಗೆ ಸಲ್ಲವು. ವಿಧಿಯಿಂದ ಪ್ರೇರಿತನಾದ ನೀನು ನನ್ನ ಹಿತವಾಕ್ಯಗಳನ್ನು ಗಮನಿಸುತ್ತಿಲ್ಲ. ಇವರೆಲ್ಲ ಈಗ ಪ್ರಿಯವಾದ ಮಾತುಗಳನ್ನು ನುಡಿಯುತ್ತಿದ್ದಾರೆ. ಶ್ರೀರಾಮನು ತನ್ನ ಕ್ರೂರವಾದ ಬಾಣಗಳಿಂದ ನಿನ್ನನ್ನು ಕೊಲ್ಲು ವುದನ್ನು ನೋಡಲಾರೆ. ಅಣ್ಣನೆಂಬ ಗೌರವದಿಂದ ನಿನಗೆ ಹಿತವಚನವನ್ನು ನುಡಿದೆ, ನಿನಗೆ ಮಂಗಳವಾಗಲಿ. ವಾನರರಿಂದ ರಾಮಲಕ್ಷ್ಮಣರಿಂದ ನಿನ್ನನ್ನೂ ನಿನ್ನ ಬಂಧು ಗಳನ್ನೂ ನಿನ್ನ ನಗರಿಯನ್ನೂ ರಕ್ಷಿಸಿಕೋ. ಇಗೋ ನಾನು ಹೊರಡುತ್ತೇನೆ. ಮೃತ್ಯು ಮುಖರಾದವರು ಮಿತ್ರರ ಹಿತವಚನವನ್ನು ಕೇಳರು." ಹೀಗೆಂದು ನುಡಿದು ತನ್ನ ಮಂತ್ರಿಗಳೊಡನೆ ರಾಮಲಕ್ಷ್ಮಣರಿರುವಲ್ಲಿಗೆ ಬಂದುಬಿಟ್ಟನು.

---

೩

# ವರುಣ ದರ್ಶನ

ಆಕಾಶಮಾರ್ಗದಲ್ಲಿ ತನ್ನ ಮಂತ್ರಿಗಳೊಡನೆ ತಮ್ಮೆಡೆಗೆ ಬರುತ್ತಿದ್ದ ವಿಭೀಷಣ ನನ್ನು ವಾನರರು ಕಂಡು ತಮ್ಮೊಡನೆ ಅವನು ಯುದ್ಧಕ್ಕಾಗಿ ಬರುತ್ತಿರುವನೆಂದು ಶಂಕಿಸಿ ಮರದ ಕೊಂಬೆಗಳನ್ನೂ ಬಂಡೆಗಳನ್ನೂ ಹಿಡಿದು ನಿಂತು ಯುದ್ಧಮಾಡಲು ಸುಗ್ರೀವನ ಅಪ್ಪಣೆಯನ್ನು ಬೇಡಿದರು. ಆಗ ವಿಭೀಷಣನು ಅವರನ್ನು ಕುರಿತು "ಅವಿವೇಕಿಯೂ ದುರ್ವೃತ್ತನೂ ಆದ ರಾವಣನ ಕಿರಿಯ ತಮ್ಮನೆ ನಾನು. ನನ್ನ ಹೆಸರು ವಿಭೀಷಣ ನೆಂದು. ಅದಿರಲಿ, ತಾನು ಕದ್ದು ತಂದ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಬೇಕೆಂದು ಹೇಳಿದರೂ ಕಾಲಚೋದಿತನಾದ ಅವನು ನನ್ನ ಹಿತವಚನವನ್ನು ಲಕ್ಷಿಸಲಿಲ್ಲ. ಆ ರಾವಣನಿಂದ ದಾಸನಂತೆ ಅವಮಾನ ಹೊಂದಿದ ನಾನು ಮಹಾತ್ಮನಾದ ಶ್ರೀರಾಮನನ್ನು ಶರಣುಹೋಗಲು ಬಂದಿದ್ದೇನೆ. ಈ ನನ್ನ ಮಾತನ್ನು ಜಾಗ್ರತೆಯಾಗಿ ಆತನಿಗೆ ತಿಳಿಸಿ" ಎಂದನು.

ವಿಭೀಷಣನು ತನ್ನ ನಾಲ್ವರು ಮಂತ್ರಿಗಳೊಡನೆ ಬಂದಿರುವುದನ್ನು ಸುಗ್ರೀವನು ಶ್ರೀರಾಮನಿಗೆ ತಿಳಿಸಿ, ಶತ್ರುವಿನ ತಮ್ಮನಾದ ಅವನು ಕಪಟಿಯಾಗಿರಬಹುದೆಂದೂ, ಅವನು ತಮ್ಮ ರಹಸ್ಯವನ್ನು ತಿಳಿಯುವ ಮುನ್ನ ಅವನನ್ನು ಸಂಹರಿಸುವುದು ಯೋಗ್ಯವೆಂದೂ ನುಡಿದನು. ಆಗ ಶ್ರೀರಾಮನ ಸಮೀಪದಲ್ಲಿದ್ದ ಹನುಮಂತನು ವಾನರವೀರರನ್ನು ಕುರಿತು ಈ ರೀತಿ ಹೇಳಿದನು: "ಶ್ರೀರಾಮಚಂದ್ರ, ನಾನು ದೊಡ್ಡವ ನೆಂಬ ಅಭಿಮಾನದಿಂದ ಈ ಮಾತುಗಳನ್ನು ಆಡುತ್ತಿಲ್ಲ. ನಾನು ಲಂಕೆಗೆ ಹೋಗಿದ್ದಾಗ ಕಂಡುದರಿಂದ ಹೇಳುತ್ತಿದ್ದೇನೆ. ವಿಭೀಷಣನನ್ನು ಪರಿಗ್ರಹಿಸುವ ವಿಷಯದಲ್ಲಿ ಉಳಿದ ಮಂತ್ರಿಗಳು ಆಡಿದ ಮಾತುಗಳನ್ನು ಕೇಳಿದ್ದೇನೆ. ವಿಭೀಷಣನಲ್ಲಿಗೆ ಗೂಢಚಾರರನ್ನು ಕಳುಹಿಸಿ ಅವನ ಗುಟ್ಟನ್ನು ಭೇದಿಸುವುದು ಯೋಗ್ಯವಲ್ಲ. ರಾವಣನಲ್ಲಿರುವ ದುಷ್ಟ ತನವನ್ನು ಕಂಡು ರೋಸಿ, ನಿನ್ನಲ್ಲಿರುವ ಸುಗುಣಗಳನ್ನೂ ಪರಾಕ್ರಮವನ್ನೂ ಕಂಡು ಮೆಚ್ಚಿ, ಇಲ್ಲಿಗೆ ವಿಭೀಷಣನು ಬಂದಿದ್ದಾನೆ. ಅವನ ಪ್ರಸನ್ನವಾದ ಮುಖವನ್ನು ನೋಡಿದರೆ ಅವನ ಮನಸ್ಸಿನಲ್ಲಿ ಯಾವ ಕೆಟ್ಟಭಾವವೂ ಇರುವಂತೆ ತೋರುವುದಿಲ್ಲ. ಅವನ ಮಾತು ಸ್ಪಷ್ಟವಾಗಿದೆ. ನಿನ್ನ ಯುದ್ಧೋದ್ಯೋಗವನ್ನೂ ರಾವಣನ ದುಷ್ಟ ನಡತೆಯನ್ನೂ ಕಂಡು, ವಾಲಿವಧೆ ಸುಗ್ರೀವಾಭಿಷೇಕವನ್ನು ಕೇಳಿ, ತಾನೂ ರಾಜ್ಯವನ್ನು ಬಯಸಿ ನಿನ್ನಲ್ಲಿಗೆ ಬಂದಿರಬಹುದೆಂದು ತಿಳಿಯುತ್ತೇನೆ. ಆದ್ದರಿಂದ ವಿಭೀಷಣನನ್ನು ಪರಿಗ್ರಹಿಸುವುದೇ ಲೇಸೆಂದು ನನಗೆ ತೋರುತ್ತದೆ."

ಆ ಬಳಿಕ ಶ್ರೀರಾಮನು ಸುಗ್ರೀವನನ್ನು ಕುರಿತು "ಸುಗ್ರೀವ ನನ್ನ ಬೆರಳ ತುದಿಯಿಂದಲೇ ಸಮಸ್ತಲೋಕವನ್ನೂ ನಾಶಮಾಡುವ ಶಕ್ತಿಯುಳ್ಳ ನನಗೆ ಯಾರಿಂದಲೂ ಹೆದರಿಕೆಯೆಂಬುದೇ ಇಲ್ಲ. ತನ್ನಲ್ಲಿಗೆ ಬಂದ, ತನಗೆ ಹಗೆಯಾದ ಬೇಡನಿಗೆ ತನ್ನ ಶರೀರಮಾಂಸವನ್ನು ಕೊಟ್ಟು ಕಪೋತವೂ ತೃಪ್ತಿಪಡಿಸಿತಂತೆ! ಹಾಗಿರುವಲ್ಲಿ ಶರಣಾಗತನಾಗಿ ಬಂದಿರುವವನನ್ನು ನಾನು ರಕ್ಷಿಸಬೇಡವೆ? ಒಮ್ಮೆ ನನಗೆ ಶರಣು ಬಂದಿರುವೆನೆಂದವನಿಗೆ ಅಭಯವನ್ನು ಕೊಡುವುದೆ ನನ್ನ ವ್ರತ. ಈಗ ರಾವಣನೆ ಬಂದರೂ ಅವನಿಗೆ ಅಭಯ ಕೊಡುತ್ತೇನೆ. ಹೀಗಿರುವಲ್ಲಿ ವಿಭೀಷಣನ ಮಾತೇನು? ಅವನನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ" ಎಂದನು.



ಶ್ರೀರಾಮನು ವಿಭೀಷಣನಿಗೆ ಅಭಯ ಕೊಟ್ಟೊಡನೆ, ಆ ರಾಕ್ಷಸಶ್ರೇಷ್ಠನು ತನ್ನ ಮಂತ್ರಿಗಳೊಡನೆ ಭೂಮಿಗೆ ಇಳಿದನು.

ಶ್ರೀರಾಮನು ವಿಭೀಷಣನಿಗೆ ಅಭಯವನ್ನು ಕೊಟ್ಟೊಡನೆಯೆ, ಆ ರಾಕ್ಷಸ ಶ್ರೇಷ್ಠನು ತನ್ನ ನಾಲ್ವರು ಮಂತ್ರಿಗಳೊಡನೆ ಭೂಮಿಗೆ ಇಳಿದು, ಶ್ರೀರಾಮನಲ್ಲಿಗೆ ಬಂದು ಅವನಿಗೆ ನಮಸ್ಕಾರ ಮಾಡಿದನು. "ನಾನು ರಾವಣನ ತಮ್ಮ. ಅಣ್ಣನಿಂದ ಅವಮಾನಿತ ನಾಗಿ ಈಗ ನಿನ್ನನ್ನು ಶರಣುಹೊಗಲು ಬಂದಿದ್ದೇನೆ. ಸ್ನೇಹಿತರು ಬಂಧುಬಾಂಧವರು ಧನ ಧಾನ್ಯ ಇವೆಲ್ಲವನ್ನೂ ತ್ಯಾಗಮಾಡಿ ಬಂದಿರುವ ನನ್ನ ಕ್ಷೇಮ ನಿನ್ನನ್ನೆ ಸೇರಿದೆ. ಅಲ್ಲದೆ ರಾಕ್ಷಸರನ್ನು ಸಂಹರಿಸುವ ಕಾರ್ಯದಲ್ಲಿ ನನ್ನ ಶಕ್ತಿಯಿರುವ ಮಟ್ಟಿಗೆ ನಿನಗೆ ಸಹಾಯ ಮಾಡುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು. ವಿಭೀಷಣನ ಮಾತನ್ನು ಕೇಳಿ ಪ್ರಸನ್ನ ಗೊಂಡ ಶ್ರೀರಾಮನು ಲಕ್ಷ್ಮಣನಿಂದ ಕಡಲ ನೀರನ್ನು ತರಿಸಿ, ಎಲ್ಲ ವಾನರರೆದುರಿಗೆ ಲಂಕಾ ರಾಜ್ಯದ ಪಟ್ಟವನ್ನು ವಿಭೀಷಣನಿಗೆ ಕಟ್ಟಿಸಿದನು. ಶ್ರೀರಾಮನ ಅನುಗ್ರಹವನ್ನು ಕಂಡು ವಾನರರು ಅವನ ಕಾರ್ಯವನ್ನು ಬಾಯಿತುಂಬ ಹೊಗಳಿದರು.

ಇಷ್ಟೆಲ್ಲ ಮುಗಿದ ಮೇಲೆ ಸಮುದ್ರವನ್ನು ದಾಟುವ ಚಿಂತೆ ವಾನರರಿಗೆ ಬಲವಾಯಿತು. ವರುಣನನ್ನು ಶ್ರೀರಾಮನು ಶರಣುಹೊಗುವುದೆ ಸಾಗರವನ್ನು ದಾಟಲು ಉಪಾಯವೆಂದು ವಿಭೀಷಣನು ಸೂಚಿಸಿದನು. ಬುದ್ಧಿವಂತನಾದ ವಿಭೀಷಣನ ಮಾತು ಶ್ರೀರಾಮನಿಗೂ ರುಚಿಸಿತು. ವೇದಿಯಲ್ಲಿರುವ ಅಗ್ನಿಯಂತೆ ದರ್ಭೆಯ ಹಾಸಿಗೆಯ ಮೇಲೆ ಸಮುದ್ರದ ತೀರದಲ್ಲಿ ವರುಣನನ್ನು ಪ್ರಾರ್ಥಿಸುವ ಸಲುವಾಗಿ ಕುಳಿತುಕೊಂಡನು.

ಹೀಗೆ ಶ್ರೀರಾಮನು ಪರಿಶುದ್ಧನಾಗಿ ತನ್ನ ತೋಳನ್ನೆ ತಲೆದಿಂಬನ್ನಾಗಿ ಮಾಡಿಕೊಂಡು 'ಸಾಯುತ್ತೇನೆ. ಇಲ್ಲ ಕಡಲನ್ನು ದಾಟುತ್ತೇನೆ!' ಎಂದು ನಿಶ್ಚಯಿಸಿ, ದರ್ಭೆಯ ಹಾಸಿಗೆಯಲ್ಲಿದ್ದು ಮೂರು ದಿನಗಳು ಹಗಲೆನ್ನದೆ ರಾತ್ರಿಯೆನ್ನದೆ ವರುಣನನ್ನು ಪ್ರಾರ್ಥಿಸಿದನು. ಇಷ್ಟಾದರೂ ವರುಣನು ಶ್ರೀರಾಮನ ವಿಷಯದಲ್ಲಿ ಪ್ರಸನ್ನನಾಗಲಿಲ್ಲ. ಇದನ್ನು ಕಂಡು ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ವರುಣನ ಈ ಗರ್ವವನ್ನು ನೋಡಿದೆಯಾ ? ಕೋಪವಿಲ್ಲದಿರುವಿಕೆ, ಸಹನೆ, ಒಳ್ಳೆಯ ಮಾತುಗಳನ್ನಾಡುವುದು ಇವೇ ಮೊದಲಾದ ಸತ್ಪುರುಷರ ಲಕ್ಷಣಗಳನ್ನು ದುಷ್ಟರಾದವರು ಶಕ್ತಿಹೀನತೆಯೆಂದು ತಿಳಿಯುತ್ತಾರೆ. ದುಷ್ಟನೂ ದಯಾಶೂನ್ಯನೂ ಆದವನನ್ನೆ ಸತ್ಪುರುಷನೆಂದು ಲೋಕ ಗೌರವಿಸುತ್ತದೆ. ಯಶಸ್ಸು, ರಣದಲ್ಲಿ ಜಯ ಇವುಗಳನ್ನು ಒಳ್ಳೆಯತನದಿಂದ ಹೊಂದಲು ಈ ಲೋಕದಲ್ಲಿ ಸಾಧ್ಯವಿಲ್ಲ. ಈಗ ನನ್ನ ಬಾಣಗಳಿಂದ ಈ ಸಮುದ್ರವನ್ನು ಶೋಷಿಸಿಬಿಟ್ಟು ದಾರಿ ಮಾಡುತ್ತೇನೆ. ಕಪಿಗಳು ಕಾಲು ನಡಿಗೆಯಿಂದಲೆ ಈ ಸಮುದ್ರವನ್ನು ದಾಟಿ ಹೋಗಲಿ. ನನ್ನನ್ನು ಶಕ್ತಿಹೀನನೆಂದು ತಿಳಿದಿರುವ ಈ ವರುಣನ ವಿಷಯದಲ್ಲಿ ಸಹನೆಯನ್ನು ತೋರಕೂಡದು. ನನ್ನ ಬಿಲ್ಲುಬಾಣಗಳನ್ನು ಜಾಗ್ರತೆಯಾಗಿ ತೆಗೆದುಕೊಂಡು ಬಾ" ಎಂದನು.

ಹೀಗೆಂದು ನುಡಿದು ಪ್ರಳಯಕಾಲದ ಅಗ್ನಿಯಂತೆ ಕೋಪಗೊಂಡ ಶ್ರೀರಾಮಚಂದ್ರನು ತನ್ನ ಬಿಲ್ಲಿನಲ್ಲಿ ಬ್ರಹ್ಮಾಸ್ತ್ರವನ್ನು ತೊಟ್ಟು, ಅಭಿಮಂತ್ರಿಸಿ, ಅದನ್ನು ಕಿವಿಯವರೆಗೂ ಸೆಳೆದನು. ಆಗ ಬೆಟ್ಟ ನಡುಗಿದುವು. ಭೂಮಿ ಆಕಾಶಗಳಲ್ಲಿ ಬಿರುಕು ಬಿಟ್ಟಂತಾಯಿತು. ಕತ್ತಲೆ ಲೋಕವನ್ನು ಮುಸುಕಿತು. ನದಿಗಳೂ ಸರೋವರಗಳೂ ಕ್ಷೋಭೆಗೊಂಡುವು. ಆಕಾಶದಿಂದ ಧೂಮಕೇತುಗಳು ನೆಲಕ್ಕುರುಳಿದುವು. ಬಿರುಗಾಳಿ ಮರಗಳನ್ನೂ ಬೆಟ್ಟದ ಶಿಖರಗಳನ್ನೂ ಉರುಳಿಸುತ್ತ ಬಲವಾಗಿ ಬೀಸಿತು. ಪ್ರಾಣಿಗಳು ಭಯಗೊಂಡು ಭಯಂಕರವಾಗಿ ಕೂಗಿದುವು. ಆಗ ಭೀಮಾಕಾರದ ಅಲೆಗಳಿಂದ ಕೂಡಿ ನೋಡುವವರಿಗೆ ಹೆದರಿಕೆಯನ್ನುಂಟುಮಾಡುತ್ತಿದ್ದ ಆ ಸಾಗರವು ತನ್ನ ಎಲ್ಲೆಯಿಂದ ಒಂದು ಗಾವುದ ದೂರ ಸರಿಯಿತು. ಆಗ ಸಾಗರದ ಮಧ್ಯದಲ್ಲಿ, ಮೇರುಪರ್ವತದ ತುದಿಯಲ್ಲಿ ಹುಟ್ಟುವ ಸೂರ್ಯನಂತೆ, ವರುಣನು ಕಾಣಿಸಿಕೊಂಡನು. ಸುಂದರವಾದ ದೇಹ, ಹೊಳೆಯುತ್ತಿರುವ ಮುಖ, ಅಗಲವಾದ ಕಣ್ಣುಗಳು ಇವುಗಳಿಂದ ನೋಡಲು ಮನೋಹರವಾದ ವರುಣನು ಕೆಂಪು ವಸ್ತ್ರ ಮತ್ತು ಹೂವುಗಳನ್ನು ಧರಿಸಿ ನಾನಾ ರತ್ನಗಳಿಂದ

ಅಲಂಕೃತನಾಗಿ, ಗೈರಿಕಾದಿಧಾತುಗಳಿಂದ ಶೋಭಿತನಾದ ಹಿಮವಂತನಂತೆ ಕಾಣಿಸಿಕೊಂಡನು. ಗಂಗಾ ಸಿಂಧೂ ನದಿಗಳಿಂದ ಸುತ್ತುವರಿದ ವರುಣನು ಶ್ರೀರಾಮನ ಬಳಿಗೆ ಬಂದು ಕೈಮುಗಿದು ಈ ಮಾತುಗಳನ್ನು ನುಡಿದನು : "ರಾಮಚಂದ್ರ, ನನ್ನಲ್ಲಿ ಪ್ರಸನ್ನನಾಗು. ಅಗಾಧವಾಗಿಯೂ ಅನೇಕ ಪ್ರಾಣಿಗಳಿಂದ ಕೂಡಿಯೂ ಇರುವ ಈ ನೀರನ್ನು ನಾನು ಹಿಡಿದು ನಿಲ್ಲಿಸಲಾರೆ. ಇದು ನನ್ನ ಸ್ವಭಾವ. ದಂಡನೆಯ ಭಯದಿಂದಲೂ ಹಾಗೆ ಮಾಡಲು ಸಾಧ್ಯವಿಲ್ಲ. ನಿನ್ನ ಸೈನ್ಯಗಳು ಈ ಸಾಗರವನ್ನು ದಾಟುವವರೆಗೆ



ಪ್ರಳಯಕಾಲದ ಅಗ್ನಿಯಂತೆ ಕೋಪಗೊಂಡ ಶ್ರೀರಾಮಚಂದ್ರನು ತನ್ನ ಬಿಲ್ಲಿನಲ್ಲಿ ಬ್ರಹ್ಮಾಸ್ತ್ರವನ್ನು ತೊಟ್ಟು ಅಭಿಮಂತ್ರಿಸಿ....ಆಗ ಸಾಗರದ ಮಧ್ಯದಲ್ಲಿ ವರುಣನು ಕಾಣಿಸಿಕೊಂಡನು.

ನನ್ನಿಂದಾಗಲಿ ನನ್ನಲ್ಲಿರುವ ಪ್ರಾಣಿಗಳಿಂದಾಗಲಿ ನಿನಗೆ ತೊಂದರೆ ಉಂಟಾಗುವುದಿಲ್ಲ. ತಂದೆಗೆ ಸಮನಾದ ಶಕ್ತಿಯುಳ್ಳ, ವಿಶ್ವಕರ್ಮನ ಮಗನಾದ ನಳನು ಈ ಸಮುದ್ರಕ್ಕೆ ಸೇತುವೆಯನ್ನು ಕಟ್ಟಲಿ. ನನಗೆ ಉತ್ತರದಲ್ಲಿ ದ್ರುಮಕುಲ್ಯವೆಂಬ ಪ್ರದೇಶವಿದೆ. ಪುಣ್ಯತಮವಾದ ಆ ಪ್ರದೇಶದಲ್ಲಿ ಅಭೀರರೆಂಬ ದಸ್ಯುಗಳು ನನ್ನ ನೀರನ್ನು ಕುಡಿದು ಭಯಂಕರವಾದ ಕೃತ್ಯಗಳಲ್ಲಿ ತೊಡಗಿದ್ದಾರೆ. ಅವರ ಸಂಪರ್ಕವನ್ನು ನಾನು ಸಹಿಸಲಾರೆ. ನಿನ್ನ ಈ ಅಸ್ತ್ರವನ್ನು ಅವರಲ್ಲಿ ಪ್ರಯೋಗಿಸಿ ನನಗೆ ಸುಖವನ್ನುಂಟುಮಾಡು" ಹೀಗೆಂದು ಹೇಳಿ ವರುಣನು ಅದೃಶ್ಯನಾದನು.

---

೪

## ಶುಕಸಾರಣ ಹಿತೋಪದೇಶ

ವರುಣನ ಮಾತಿನಂತೆ ದ್ರುಮಕುಲ್ಯವೆಂಬ ಪ್ರದೇಶದಲ್ಲಿ ದಸ್ಯುಗಳಿಲ್ಲದಂತೆ ಮಾಡಿದ ಮೇಲೆ ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟುವಂತೆ ವಾನರರಿಗೆ ಅಪ್ಪಣೆ ಮಾಡಿದನು. ಆಗ ವಾನರರು ಲಕ್ಷ ಸಂಖ್ಯೆಯಲ್ಲಿ ಹೊರಟು ನಾನಾವೃಕ್ಷಗಳನ್ನೂ ಬೆಟ್ಟಗಳನ್ನೂ ಮುರಿದು ಕಿತ್ತುತಂದರು. ತಾಳೆ ಮಾವು ಬಿಲ್ವ ಮುಂತಾಗಿ ಅವರು ತಂದ ಮರಗಳನ್ನೂ ದೊಡ್ಡ ಬಂಡೆಗಳನ್ನೂ ಎಣಿಸಲು ಅಸಾಧ್ಯವಾಗಿತ್ತು. ಕೆಲವರು ನೂರು ಗಾವುವಗಳವರೆಗೂ ದಾರವನ್ನು ಹಿಡಿದರು. ಮತ್ತೆ ಕೆಲವರು ಕಲ್ಲುಗಳನ್ನೂ ಪರೀಕ್ಷಿಸಿದರು. ಆಗ ನಳನನ್ನು ಮುಂದಿಟ್ಟುಕೊಂಡು ಪರ್ವತ ಶಿಖರಗಳಿಂದಲೂ ಹುಲ್ಲು ಕಟ್ಟಿಗೆಗಳಿಂದಲೂ ಸಮುದ್ರದ ನಡುವೆ ಸೇತುವೆಯನ್ನು ಕಟ್ಟಿದರು. ಮೊದಲನೆಯ ದಿನ ಹದಿನಾಲ್ಕು ಗಾವುದ, ಎರಡನೆಯದಿನ ಇಪ್ಪತ್ತು ಗಾವುದ, ಮೂರನೆಯ ದಿನ ಇಪ್ಪತ್ತೊಂದು ಯೋಜನ, ನಾಲ್ಕನೆಯ ದಿನ ಇಪ್ಪತ್ತೆರಡು, ಐದನೆಯ ದಿನ ಇಪ್ಪತ್ತು ಮೂರು ಹೀಗೆ ಐದು ದಿನಗಳಲ್ಲಿ ಸೀತೆಯನ್ನು ನೋಡಲು ಕಾತರರಾದ ವಾನರರಿಂದ ಸೇತುವೆ ಸಿದ್ಧವಾಯಿತು. ಈ ಅದ್ಭುತವಾದ ಸೇತು ನಿರ್ಮಾಣವನ್ನು ಕಂಡು ದೇವತೆಗಳೂ ಋಷಿಗಳೂ ಆಶ್ಚರ್ಯಗೊಂಡರು. ಕಪಿಗಳು ಸಂತೋಷದಿಂದ ನೀರಿನಲ್ಲಿ ತೇಲಾಟವಾಡಿದರು. ಕಡಲಿನ ಬೈತಲೆಯಂತೆ ಹೊಳೆಯುತ್ತಿದ್ದ ಸೇತುವೆಯ ಬಳಿ ವಿಭೀಷಣನು ತನ್ನ ಮಂತ್ರಿಗಳೊಡನೆ ಬಂದು ನಿಂತನು. ಆಗ ಸುಗ್ರೀವನು ರಾಮನಿಗೆ "ರಾಮಚಂದ್ರ, ನೀನು ಹನುಮಂತನ ಹೆಗಲನ್ನು ಏರು. ಲಕ್ಷ್ಮಣನು ಅಂಗದನ ಹೆಗಲನ್ನು ಏರಲಿ. ಆಕಾಶದಲ್ಲಿ ಹೋಗಲು ಸಾಮರ್ಥ್ಯವುಳ್ಳ ಇವರು, ನಿಮ್ಮನ್ನು ಈ ವಿಶಾಲವಾದ ಸಾಗರದಿಂದ ದಾಟಿಸುವರು" ಎಂದನು.

ಆಗ ಶ್ರೀರಾಮನು ಲಕ್ಷ್ಮಣನೊಡಗೂಡಿ, ಸುಗ್ರೀವನಿಂದ ಕೂಡಿ ಸೈನ್ಯದ ಮುಂಭಾಗದಲ್ಲಿ ನಡೆದನು. ಸಮುದ್ರವನ್ನು ದಾಟುವಾಗ ವಾನರರ ಉತ್ಸಾಹವನ್ನಂತೂ ಹೇಳತೀರದು. ಕೆಲವರು ಸೇತುವೆಯ ನಡುವೆ ನಡೆದರು. ಕೆಲವರು ಪಕ್ಕದಲ್ಲಿ ಹೋದರು. ಕೆಲವರಿಗೆ ಹೋಗಲು ದಾರಿ ಸಿಗದೆ ನೀರಿನಲ್ಲಿ ಬಿದ್ದರು. ಕೆಲವರು ಗರುಡನಂತೆ ಆಕಾಶದಲ್ಲಿ ಹಾರಾಡಿದರು. ಹೆಚ್ಚೇನು ? ಲಂಕೆಯನ್ನು ಕುರಿತು ತೆರಳುತ್ತಿದ್ದ ವಾನರ ಸೈನ್ಯದಲ್ಲಿ ಉತ್ಸಾಹದಿಂದ ಉಂಟಾದ ಧ್ವನಿ ಸಮುದ್ರಘೋಷವನ್ನೇ ಅಡಗಿಸಿತು. ಹೀಗೆ ಹೊರಟ ಸೈನ್ಯ ಸಮುದ್ರವನ್ನು ದಾಟಿ ನೀರು ನೆರಳು ಹಣ್ಣುಗಳಿಂದ ಸಮೃದ್ಧವಾದ ದಕ್ಷಿಣ ತೀರದಲ್ಲಿ ಬೀಡುಬಿಟ್ಟಿತು. ತಕ್ಷಣವೇ ಶ್ರೀರಾಮನು ಆಗ ಆದ ಶಕುನಗಳನ್ನು ಕಂಡು ವಿಭೀಷಣ ಸುಗ್ರೀವರೊಡನೆ ಲಂಕೆಗೆ ಅಭಿಮುಖವಾಗಿ ಹೊರಟನು.

ಲಂಕಾನಗರದ ಪ್ರಾಕಾರದ ಬಳಿ ಬೀಡು ಬಿಟ್ಟೊಡನೆಯೆ, ಸೈನ್ಯವನ್ನು ವ್ಯೂಹದ ರೀತಿಯಲ್ಲಿ ನಿಲ್ಲಿಸಲು ಅಪ್ಪಣೆ ಮಾಡಿದನು. "ಅಂಗದನು ತನ್ನ ಬಲವನ್ನು ತೆಗೆದು ಕೊಂಡು ನೀಲನೊಡನೆ ವಾನರ ಸೈನ್ಯದ ಮಧ್ಯೆ ನಿಲ್ಲಲಿ. ಋಷಭನು ಬಲಭಾಗದಲ್ಲಿ ನಿಲ್ಲಲಿ. ಗಂಧಮಾದನನು ಎಡಭಾಗದಲ್ಲಿ ನಿಲ್ಲಲಿ. ನಾನೂ ಮತ್ತು ಲಕ್ಷ್ಮಣನೂ ವಾನರ ಸೈನ್ಯದ ಅಗ್ರಭಾಗದಲ್ಲಿ ನಿಲ್ಲುತ್ತೇವೆ. ಜಾಂಬವಂತ, ಸುಷೇಣ, ವೇಗದರ್ಶಿ ಈ ಮೂವರು ಸೈನ್ಯದ ಮಧ್ಯಭಾಗವನ್ನು ಕಾಪಾಡಲಿ." ಹೀಗೆ ವಾನರ ಸೈನ್ಯವನ್ನು



ನಳನನ್ನು ಮುಂದಿಟ್ಟುಕೊಂಡು, ವಾನರರು ಪರ್ವತ ಶಿಖರಗಳಿಂದಲೂ ಹುಲ್ಲುಕಟ್ಟಿಗೆಗಳಿಂದಲೂ ಸಮುದ್ರದ ನಡುವೆ ಸೇತುವೆ ಕಟ್ಟಿದರು.

ಗರುಡವ್ಯೂಹದ ಆಕಾರದಲ್ಲಿ ನಿಲ್ಲಿಸಿದನು. ವಾನರರು ಬೆಟ್ಟಗುಡ್ಡವನ್ನು ಹಿಡಿದು, ರಾಕ್ಷಸರನ್ನು ಕೊಂದು ಲಂಕೆಯನ್ನು ಮುತ್ತಲು ಉತ್ಸಾಹಗೊಂಡಿ, ರಾಮನ ಅಪ್ಪಣೆ ಗಾಗಿ ಕಾಯುತ್ತಿದ್ದರು.

ಶ್ರೀರಾಮನು ವಾನರರಿಂದ ಕೂಡಿ, ಸಮುದ್ರವನ್ನು ದಾಟಿದನೆಂಬ ವರ್ತಮಾನ ರಾವಣನಿಗೆ ತಿಳಿಯಿತು. ಆಗ ಅವನು ಮಂತ್ರಿಗಳಾದ ಶುಕಸಾರಣರನ್ನು ತನ್ನಲ್ಲಿಗೆ ಕರೆಸಿಕೊಂಡು ಅವರಿಗೆ ಈ ರೀತಿ ನುಡಿದನು: "ರಾಮನು ಸಾಗರಕ್ಕೆ ಸೇತುವೆಯನ್ನು ಕಟ್ಟಿ, ಅದನ್ನು ದಾಟಿ ಲಂಕೆಯ ಬಳಿಗೆ ಬಂದನು. ಸಾಗರಕ್ಕೆ ಸೇತುಬಂಧನವೆಂಬ ಮಾತನ್ನು ನಾನು ನಂಬಲಾರೆ. ಆದರೂ ಈಗ ನಾನು ಶತ್ರುಬಲವೆಷ್ಟೆಂಬುದನ್ನು ತಿಳಿಯಬೇಕು. ಆದ್ದರಿಂದ ಗುಟ್ಟಾಗಿ ನೀವು ವಾನರ ಸೈನ್ಯವನ್ನು ಹೊಕ್ಕು, ವಾನರ ಸೈನ್ಯದ ಸಂಖ್ಯಾಬಲ, ರಾಮನಿಗೂ ಸುಗ್ರೀವನಿಗೂ ಬೇಕಾದ ಮಂತ್ರಿಗಳು, ಕಪಿಗಳ ಬೀಡಾರದ ವಿವರ, ರಾಮಲಕ್ಷ್ಮಣರ ಬಲಪರಾಕ್ರಮ, ಕಪಿಗಳಲ್ಲಿ ಪ್ರಧಾನರು ಮತ್ತು ಕಪಿ ಸೇನೆಯ ಸೇನಾಪತಿ–ಈ ವಿವರಗಳನ್ನು ಬೇಗ ತಿಳಿದು ಬನ್ನಿ" ಎಂದು ಅಪ್ಪಣೆಮಾಡಿದನು.

ರಾವಣನಿಂದ ಬೀಳ್ಕೊಂಡ ಶುಕಸಾರಣರು ವಾನರ ರೂಪವನ್ನು ಧರಿಸಿ ಕಪಿಸೈನ್ಯವನ್ನು ಹೊಕ್ಕರು. ಬೆಟ್ಟದ ತುದಿಯಲ್ಲಿ, ವನಗಳಲ್ಲಿ, ಸಮುದ್ರದ ತೀರದಲ್ಲಿ ಹಬ್ಬಿ ಹರಡಿ ಬೀಡುಬಿಟ್ಟಿದ್ದ ವಾನರ ಸೈನ್ಯವನ್ನೂ ಸೇತುವೆಯನ್ನು ಆಗತಾನೆ ದಾಟಿದ ಮತ್ತು ಇನ್ನೂ ದಾಟುತ್ತಿದ್ದ ಸೈನ್ಯಭಾಗಗಳನ್ನೂ ಕಂಡು ಶುಕಸಾರಣರಿಗೆ ಅದನ್ನು ಎಣಿಸುವುದಕ್ಕೆ ಸಾಧ್ಯವಾಗಲಿಲ್ಲ. ಆಗ ವಿಭೀಷಣನು ಮಾಯಾರೂಪವನ್ನು ಧರಿಸಿದ ಅವರನ್ನು ಹಿಡಿದು ರಾಮನ ಮುಂದೆ ತಂದು ನಿಲ್ಲಿಸಿ ಹೇಳಿದನು—"ಎಲೈ ಶತ್ರು ಸಂಹಾರಕನೆ, ರಾವಣನ ಮಂತ್ರಿಗಳಾದ ಈ ಶುಕಸಾರಣರು ಲಂಕೆಯಿಂದ ಬಂದಿದ್ದಾರೆ." ಅವರಿಬ್ಬರೂ ರಾಮನನ್ನು ನೋಡಿ ಕೈಮುಗಿದು, ವಾನರ ಸೈನ್ಯವನ್ನು ನೋಡಿಕೊಂಡು ಬರಲು ರಾವಣನಿಂದ ಕಳುಹಿಸಲ್ಪಟ್ಟವರು ತಾವೆಂದು ಒಪ್ಪಿಕೊಂಡರು. ದಯಾವಂತ ರಾಮನು ಅವರ ಮಾತನ್ನು ಕೇಳಿ ನಕ್ಕು ನುಡಿದನು. "ಅಯ್ಯಾ, ನೀವು ನಮ್ಮ ಸೈನ್ಯವನ್ನು ಚೆನ್ನಾಗಿ ಪರೀಕ್ಷಿಸಿದುದು ಮುಗಿದಿದ್ದರೆ ಇನ್ನು ಹೊರಡಬಹುದು. ಹಾಗೆ ಅದು ಮುಗಿಯದಿದ್ದರೆ, ವಿಭೀಷಣನು ನಿಮಗೆ ಎಲ್ಲವನ್ನು ಚೆನ್ನಾಗಿ ತೋರಿಸಿ ವಿವರಿಸುತ್ತಾನೆ. ನೀವು ನಿಮ್ಮ ಪ್ರಾಣಕ್ಕಾಗಿ ಹೆದರಬೇಡಿ. ಭಯಪಟ್ಟವರನ್ನೂ ಆಯುಧರಹಿತರನ್ನೂ ದೂತರನ್ನೂ ಬಂಧನಕ್ಕೊಳಗಾದವರನ್ನೂ ಕೊಲ್ಲುವುದು ಧರ್ಮವಲ್ಲ" ಎಂದು ವಿಭೀಷಣನ ಕಡೆ ತಿರುಗಿ "ವಿಭೀಷಣ, ಇವರು ಶತ್ರುಪಕ್ಷದ ಚಾರರಾದರೂ ನಮ್ಮಲ್ಲಿ ದಯೆಗಾಗಿ ಬೇಡುತ್ತಿರುವುದರಿಂದ ಇವರನ್ನು ಬಿಟ್ಟುಬಿಡು. ಅಯ್ಯಾ ಚಾರರೆ, ಕುಬೇರನ ತಮ್ಮನಾದ ರಾವಣನಿಗೆ ಈ ನನ್ನ ಮಾತುಗಳನ್ನು ತಿಳಿಸತಕ್ಕದ್ದು. 'ನಿನ್ನ ದೇಹಬಲವನ್ನೂ ಸೇನಾಬಲವನ್ನೂ ನಂಬಿ ಸೀತೆಯನ್ನು ಕದ್ದೊಯ್ದೆಯಲ್ಲವೆ? ಈಗ ಆ ಬಲವನ್ನು ತೋರಿಸಲು ತಕ್ಕ ಕಾಲವಾಗಿದೆ. ನಾಳೆ ಬೆಳಿಗ್ಗೆ ನನ್ನ ಬಾಣಗಳು ರಾಕ್ಷಸ ಬಲವನ್ನು ನಾಶಪಡಿಸುವುದನ್ನು ನೀನು ಕಣ್ಣಾರೆ ನೋಡುವೆ. ಆದ್ದರಿಂದ ನನ್ನ ಕೋಪವನ್ನು ಸಹಿಸಲು ನಿನ್ನ ಬಲದೊಡನೆ ಸಿದ್ಧನಾಗಿರು.' ಹೀಗೆ ರಾಮನಿಂದ ಬಿಡುಗಡೆ ಹೊಂದಿದ ಅವರು ಲಂಕೆಗೆ ತಿರುಗಿ ಬಂದು ರಾವಣನನ್ನು ಕಂಡರು.

ರಾವಣನನ್ನು ಕುರಿತು ಅವರಿಬ್ಬರೂ "ರಾಕ್ಷಸೇಂದ್ರ, ಮಾಯಾ ರೂಪವನ್ನು ಧರಿಸಿದ ನಮ್ಮನ್ನು ವಿಭೀಷಣನು ರಾಮನಲ್ಲಿಗೆ ಹಿಡಿದುಕೊಂಡು ಹೋದನು. ಧರ್ಮಾತ್ಮನಾದ ರಾಮನು ನಮ್ಮನ್ನು ಕೊಲ್ಲದೆ ಬಿಟ್ಟುಬಿಟ್ಟನು. ಪರಾಕ್ರಮಿಯಾದ ರಾಮ, ಕಾಂತಿಯುಕ್ತನಾದ ಲಕ್ಷ್ಮಣ, ವಿಭೀಷಣ ಮತ್ತು ಇಂದ್ರನಿಗೆ ಸಮಾನನಾದ ಸುಗ್ರೀವ ಈ ನಾಲ್ವರು ಐಕ್ಯಮತ್ಯದಿಂದಿದ್ದಾರೆ. ಈ ನಾಲ್ವರೆ ವಾನರಸೈನ್ಯವಿಲ್ಲದೆ ಲಂಕೆಯನ್ನು ನಾಶಮಾಡಲು ಸಾಕು. ಹೆಚ್ಚೇನು? ರಾಮನೊಬ್ಬನೇ ಈ ಕೆಲಸಕ್ಕೆ ಸಮರ್ಥನಾಗಿದ್ದಾನೆ. ಸುಗ್ರೀವನಿಂದ ರಕ್ಷಿತವಾಗಿರುವ ಆ ಸೈನ್ಯವನ್ನು ಇದಿರಿಸಲು ದೇವದಾನವರಿಂದಲೂ ಅಶಾಧ್ಯ. ಆದಕಾರಣ ಶ್ರೀರಾಮನೊಡನೆ ದ್ವೇಷ ಬಿಟ್ಟು, ಸೀತೆಯನ್ನು ಅವನಿಗೆ ಕೊಟ್ಟು ಸಂಧಿಮಾಡಿಕೊ" ಎಂದರು.

ಮಂತ್ರಿಗಳ ಮಾತನ್ನು ಕೇಳಿ, ಅವರು ರಾಮನಿಗೆ ಅಂಜಿ ಹಾಗೆ ನುಡಿಯುತ್ತಿರುವರೆಂದೂ, ತನ್ನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲವೆಂದೂ, ಆದಕಾರಣ ಸೀತೆಯನ್ನು ರಾಮನಿಗೆ ಎಂದಿಗೂ ಒಪ್ಪಿಸೆನೆಂದೂ ನುಡಿದು, ವಾನರ ಸೈನ್ಯವನ್ನು ನೋಡುವ ಬಯಕೆಯಿಂದ ಹಿಮವತ್ ಪರ್ವತದಂತೆ ಉನ್ನತವೂ ಶುಭ್ರವೂ ಆದ ಉಪ್ಪರಿಗೆಯನ್ನು ಏರಿದನು. ಕೋಪದಿಂದ ಕೆರಳಿದ ರಾವಣನು ಸಮುದ್ರದ ತೀರದಲ್ಲಿ ಪರ್ವತಗಳಲ್ಲಿ, ಕಾಡುಗಳಲ್ಲಿ ಬೀಡು ಬಿಟ್ಟಿದ್ದ ಅಪಾರವಾದ ವಾನರಸೇನೆಯನ್ನು ಕಂಡು ಬೆರಗಾದನು. ಆ ಬಳಿಕ ಶುಕಸಾರಣರನ್ನು ಕುರಿತು, ವಾನರ ಪ್ರಮುಖರನ್ನೂ ಸುಗ್ರೀವ ರಾಮಲಕ್ಷ್ಮಣರನ್ನೂ ತನಗೆ ತೋರಿಸುವಂತೆ ಅಪ್ಪಣೆ ಮಾಡಿದನು. ಅವರು ಕ್ರಮವಾಗಿ ಸೇನೆಯ ಮುಂದಿದ್ದ ನೀಲ, ಪರಾಕ್ರಮಿಯಾದ ಅಂಗದ, ಅವನ ಹಿಂದೆ ಕಾಳಗಕ್ಕಾಗಿ ಆತುರದಿಂದ ನಿಂತಿದ್ದ ನಳ, ಶರಭ, ಕುಮುದ, ಮಹಾ ತೇಜಸ್ವಿಯಾದ ಗವಯ, ಧೂಮ್ರ, ಋಕ್ಷವಂತ, ಕರಡಿಗಳಿಗೆ ಒಡೆಯನಾದ ಜಾಂಬವಂತ, ಹನುಮಂತನ ತಂದೆಯಾದ ಕೇಸರಿ, ಗವಾಕ್ಷ, ಶತಬಲಿ ಇವರೇ ಮೊದಲಾದ ವಾನರವೀರರನ್ನೂ ಅವನ ಸೈನ್ಯಗಳನ್ನೂ ತೋರಿದರು. ಆ ಬಳಿಕ ಶುಕನು ವಾನರರನ್ನು ಬೆಟ್ಟುಮಾಡಿ ತೋರಿಸುತ್ತ ರಾವಣನನ್ನು ಕುರಿತು ನುಡಿದನು. "ರಾಕ್ಷಸೇಂದ್ರ, ಗಂಗಾತೀರದ ಆಲದ ಮರಗಳಂತೆ, ಹಿಮವತ್ ಪರ್ವತದಲ್ಲಿ ಹುಟ್ಟಿದ ಸಾಲವೃಕ್ಷಗಳಂತೆ ನಿಂತಿರುವ ಈ ವಾನರರನ್ನು ನೋಡು. ಇವರು ಮಹಾ ಬಲಶಾಲಿಗಳು ಮತ್ತು ಕಾಮರೂಪಿಗಳು. ನಾವು ಮೇಲೆ ಹೇಳಿದ ವಾನರರಲ್ಲದೆ, ದೂರದಲ್ಲಿ ಆನೆಯಂತೆ ನಿಂತಿರುವ ಹನುಮಂತನನ್ನು ನೋಡು. ಹುಟ್ಟಿದೊಡನೆಯೆ ಸೂರ್ಯನನ್ನು ಹಣ್ಣೆಂದು ತಿನ್ನಬಯಸಿದ, ಸಾಗರವನ್ನು ದಾಟಿ ಸೀತೆಯನ್ನು ನೋಡಿ ಹೋದ ವೀರನೆ ಅವನು. ನಮ್ಮ ಈ ಲಂಕೆಯನ್ನು ನಾಶ ಮಾಡಲು ಇವನೊಬ್ಬನೆ ಸಾಕು. ಹನುಮಂತನ ಸಮೀಪದಲ್ಲಿ ನೀಲಮೇಘದ ಬಣ್ಣವುಳ್ಳವನೂ, ತಾವರೆಯಂತೆ ಕಣ್ಣುಳ್ಳವನೂ ಆದ ದಿವ್ಯ ಪುರುಷನೊಬ್ಬನು ನಿಂತಿರುವನು. ಆತನೇ ಧರ್ಮಾತ್ಮನೂ ಪರಾಕ್ರಮಿಯೂ ಆದ ಶ್ರೀರಾಮಚಂದ್ರ. ಇಂದ್ರನಂತೆ ಬಲಶಾಲಿಯಾದ ಈತನು ನಿನ್ನೊಡನೆ ಯುದ್ಧಮಾಡಲು ತವಕಗೊಳ್ಳುತ್ತಿದ್ದಾನೆ. ಇವನ ಬಲಭಾಗದಲ್ಲಿ ಹೊಂಬಣ್ಣದಂತೆ ಹೊಳೆಯುತ್ತಿರುವವನೆ ಯುದ್ಧದಲ್ಲಿ ಕುಶಲನಾದ ಅವನ ತಮ್ಮ ಲಕ್ಷ್ಮಣ. ಅಣ್ಣನಿಗೆ ಬಲಭುಜದಂತಿರುವ ಇವನನ್ನು ಗೆಲ್ಲುವುದು ಅಸಾಧ್ಯ. ರಾಮನ ಎಡಭಾಗದಲ್ಲಿರುವವನೆ ನಿನ್ನ ತಮ್ಮ ವಿಭೀಷಣ. ಲಂಕಾರಾಜ್ಯವನ್ನು ಇವನಿಗೆ ಕೊಡಿಸುವುದಾಗಿ ಶ್ರೀರಾಮನು ಭಾಷೆಕೊಟ್ಟಿದ್ದಾನೆ. ರಾಮ ವಿಭೀಷಣರ ನಡುವೆ ಬೆಟ್ಟದಂತೆ ನಿಂತಿರುವವನೆ ವಾನರಾಧಿಪತಿಯಾದ ಸುಗ್ರೀವ. ಮಹಾಬಲದಿಂದ ಸುತ್ತುವರಿದ ಇವರನ್ನು ಜಯಿಸುವುದಕ್ಕೆ ಪ್ರಯತ್ನಿಸು. ನಮಗೆ ಪರಾಜಯವಾಗದಂತೆ ನೋಡಿಕೋ."

ಶುಕನು ತೋರಿಸಿದ ರಾಮಲಕ್ಷ್ಮಣರನ್ನೂ ಅವರ ಬಳಿ ನಿಂತಿದ್ದ ತನ್ನ ತಮ್ಮನನ್ನೂ ಮತ್ತು ವಾನರ ವೀರರನ್ನೂ ಕಂಡು ರಾವಣನಿಗೆ ಭಯವೂ ಕೋಪವೂ

ಏಕಕಾಲದಲ್ಲಿ ಉಂಟಾದುವು. ತನ್ನ ಎದುರಿಗೇ ಶತ್ರುಗಳನ್ನು ಹೊಗಳುತ್ತಿರುವ ಅವರು ಅಯೋಗ್ಯರಾದ ಮಂತ್ರಿಗಳೆಂದೂ, ಕಾಡುಕಿಚ್ಚಿನೆದುರಿಗೆ ಗಿಡಗಳು ನಿಲ್ಲಲಾರದಂತೆ ತನ್ನ ಮುಂದೆ ಶತ್ರುಗಳು ನಿಲ್ಲರೆಂದೂ, ಹಿಂದೆ ಅವರು ಮಾಡಿರುವ ಉಪಕಾರಕ್ಕಾಗಿ ಅವರನ್ನು ತಾನು ಕೊಲ್ಲನೆಂದೂ, ಕೃತಘ್ನರಾದ ಅವರು ಅಲ್ಲಿಂದ ತೊಲಗಿಹೋಗಬೇಕೆಂದೂ ಗದರಿಸಿದನು. ಶುಕಸಾರಣರು ಹೊರಟುಹೋದ ಮೇಲೆ ರಾವಣನು ನೀತಿವಿಶಾರದರಾದ ಚಾರರನ್ನು ತನ್ನಲ್ಲಿಗೆ ಕರೆಯಿಸಿಕೊಂಡು ರಾಮನಲ್ಲಿಗೆ ಹೋಗಿ ಅವನ ಬಲಪರಾಕ್ರಮಗಳನ್ನು ಮತ್ತೊಮ್ಮೆ ತಿಳಿದುಬರುವಂತೆ ಅಪ್ಪಣೆ ಮಾಡಿದನು. ಶಾರ್ದೂಲನೆಂಬ ಚಾರನನ್ನು ಮುಂದುಮಾಡಿಕೊಂಡು ಹೊರಟ ಅವರು, ರಾವಣನಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ, ವೇಷ ಮರೆಯಿಸಿಕೊಂಡು ಸುವೇಲಪರ್ವತದ ಬಳಿ ಬೀಡುಬಿಟ್ಟಿದ್ದ ಶ್ರೀರಾಮನಲ್ಲಿಗೆ ಬಂದರು. ಶುಕಸಾರಣರಿಗುಂಟಾದ ಗತಿಯೆ ಅವರಿಗುಂಟಾಯಿತು. ಆದರೆ ಶ್ರೀರಾಮನ ದಯೆಯಿಂದ ವಾನರರ ಹೊಡೆತವನ್ನು ತಪ್ಪಿಸಿಕೊಂಡು ಬರುವುದರೊಳಗಾಗಿ ಅವರಿಗೆ ಸಾಕುಸಾಕಾಯಿತು. ರಾವಣನಲ್ಲಿಗೆ ಶಾರ್ದೂಲನು ಬಂದು ಶ್ರೀರಾಮನ ಪರಾಕ್ರಮಗಳನ್ನೂ ವಾನರ ಸೈನ್ಯಸಂಪತ್ತಿಯನ್ನೂ ಅವನಿಗೆ ವರ್ಣಿಸಿ ಹೇಳಿದನು. "ಶ್ರೀರಾಮನು ಗರುಡವ್ಯೂಹವನ್ನು ರಚಿಸಿ ಲಂಕೆಯನ್ನು ಮುತ್ತಲು ಬರುತ್ತಿರುವನು. ಗುದ್ದುತ್ತಿದ್ದ ವಾನರರಿಂದ ನನ್ನನ್ನು ಬಿಡಿಸಿದನು. ಈಗ ನೀನು ಮಹಾತ್ಮನಾದ ಆತನಿಗೆ ಸೀತೆಯನ್ನಾದರೂ ಕೊಡು, ಇಲ್ಲವಾದರೆ ಯುದ್ಧವನ್ನಾದರೂ ಮಾಡು." ಶಾರ್ದೂಲನ ಮಾತನ್ನು ಕೇಳಿ ರಾವಣನು ದೇವದಾನವರೆಲ್ಲರೂ ಒಟ್ಟಾಗಿ ತನ್ನೊಡನೆ ಯುದ್ಧಕ್ಕೆ ಬಂದರೂ ಸೀತೆಯನ್ನು ರಾಮನಿಗೆ ಒಪ್ಪಿಸೆನೆಂದು ಹೇಳಿ ಶಾರ್ದೂಲನನ್ನು ಕಳುಹಿಸಿಕೊಟ್ಟನು.

---

೫೧

# ಮಾಯಾಶಿರಸ್ಸು

ಶ್ರೀರಾಮನು ಸುವೇಲಪರ್ವತದ ಬಳಿ ಬೀಡುಬಿಟ್ಟಿರುವುದನ್ನು ಕೇಳಿ ರಾವಣನು ಭಯಗೊಂಡನು. ಬಳಿಕ ಮಂತ್ರಿಗಳನ್ನು ತನ್ನಲ್ಲಿಗೆ ಕರೆಸಿಕೊಂಡು ಮುಂದೆ ಮಾಡಬೇಕಾದ ಕಾರ್ಯವನ್ನು ನಿರ್ಧರಿಸಿ ಅವರನ್ನು ಬೀಳ್ಕೊಟ್ಟನು. ಸೀತೆಯಲ್ಲಿ ಮಾಯೆಯಿಂದ ಮೋಹವನ್ನುಂಟುಮಾಡಲು ವಿದ್ಯುತ್‌ಜಿಹ್ವನೆಂಬ ರಾಕ್ಷಸನಿಗೆ ಮಾಯೆಯಿಂದ ರಾಮನ ತಲೆಯನ್ನೂ ಬಿಲ್ಲನ್ನೂ ಮಾಡಿಕೊಂಡು ತನ್ನನ್ನು ಹಿಂಬಾಲಿಸುವಂತೆ ಅಪ್ಪಣೆ ಮಾಡಿದನು.

ಅನಂತರ ಸೀತೆಯನ್ನು ನೋಡುವ ಆತುರವುಳ್ಳ ರಾವಣನು ಅಶೋಕವನವನ್ನು ಹೊಕ್ಕನು. ಅಶೋಕವನದಲ್ಲಿ ರಾಕ್ಷಸಿಯರಿಂದ ಸುತ್ತುವರಿದ ಸೀತೆ ದೀನಳಾಗಿ ತಲೆತಗ್ಗಿಸಿಕೊಂಡು ಗಂಡನನ್ನೆ ಚಿಂತಿಸುತ್ತ ಕುಳಿತಿದ್ದಳು. ಆಕೆಯ ಬಳಿಗೆ ರಾವಣನು ಬಂದು ಸಂತೋಷದಿಂದ ಈ ರೀತಿಯಾಗಿ ಕ್ರೂರವಾಗಿ ನುಡಿದನು: "ಎಲೈ ಮಂಗಳಾಂಗಿ, ಖರನನ್ನು ಕೊಂದ ನಿನ್ನ ಗಂಡನು ಪ್ರಹಸ್ತನಿಂದ ಯುದ್ಧದಲ್ಲಿ ಹತನಾದನು. ನಿನ್ನ ಗರ್ವ ಈಗಲಾದರೂ ಮುರಿಯಿತಲ್ಲವೆ? ಈಗಲಾದರೂ ವ್ಯಸನವನ್ನು ಬಿಟ್ಟು, ನನ್ನ ಹೆಂಡತಿಯರಿಗೆಲ್ಲ ರಾಣಿಯಾಗು. ಸಮುದ್ರದ ಉತ್ತರ ತೀರದಲ್ಲಿ ಬೀಡು ಬಿಟ್ಟಿದ್ದ ರಾಮನು ಸಂಜೆಯಾಗುತ್ತಲೆ ಸೈನ್ಯದೊಡನೆ ಮಲಗಿದ್ದನು. ಆಗ ಪ್ರಹಸ್ತನಿಂದ ವಾನರಸೇನೆ ಧ್ವಂಸ ಮಾಡಲ್ಪಟ್ಟಿತು. ಮಲಗಿದ್ದ ರಾಮನ ತಲೆಯನ್ನು ಶೂರನಾದ ಪ್ರಹಸ್ತನು ಕತ್ತಿಹಿರಿದು ಕತ್ತರಿಸಿಬಿಟ್ಟನು. ಲಕ್ಷ್ಮಣನು ಕಪಿಗಳೊಡನೆ ಓಡಿಹೋದನು. ಸುಗ್ರೀವನ ತಲೆಯನ್ನು ಕತ್ತರಿಸಲಾಯಿತು. ಹನುಮಂತನು ದವಡೆಗಳು ಸೀಳಿಹೋಗಿ ನೆಲಕ್ಕುರುಳಿದನು. ಕೆಲವರು ವಾನರರು ಮರಣ ಹೊಂದಿದರು. ಮತ್ತೆ ಕೆಲವರು ನೀರಿನಲ್ಲಿ ಬಿದ್ದರು. ಉಳಿದವರು ಓಡಿಹೋಗಿ ಮರಗಳಲ್ಲಿಯೂ ಬೆಟ್ಟಗಳಲ್ಲಿಯೂ ಅಡಗಿಕೊಂಡರು. ಹೀಗೆ ಪರಾಜಿತನಾದ ನಿನ್ನ ಗಂಡನ ಶಿರಸ್ಸನ್ನು ಪ್ರಹಸ್ತನು ತಂದಿದ್ದಾನೆ."

ಹೀಗೆಂದು ಹೇಳಿ ರಾವಣನು ರಾಮನ ತಲೆಯನ್ನೂ ಬಿಲ್ಲನ್ನೂ ತರುವಂತೆ ವಿದ್ಯುಜ್ಜಿಹ್ವನಿಗೆ ಅಪ್ಪಣೆಮಾಡಿದನು. ಅದರಂತೆಯೆ ಅವನು ಶ್ರೀರಾಮನ ಮಾಯಾಶಿರಸ್ಸನ್ನೂ ಬಿಲ್ಲನ್ನೂ ರಾವಣನ ಮುಂದಿರಿಸಿ, ನಮಸ್ಕರಿಸಿ ನಿಂತನು. ರಾಕ್ಷಸೇಂದ್ರನು ಅವುಗಳನ್ನು ಸೀತೆಗೆ ತೋರಿಸುತ್ತ ಆಕೆ ತನ್ನವಳಾಗಬೇಕೆಂದು ಬೇಡಿಕೊಂಡನು.

ಆಗ ಸೀತಾದೇವಿ ಆ ಶಿರಸ್ಸನ್ನೂ ಬಿಲ್ಲನ್ನೂ ನೋಡಿ ಹೇಳಲಾರದಷ್ಟು ದುಃಖಿತೆಯಾದಳು, ಕುರರ ಪಕ್ಷಿಯಂತೆ ಗೋಳಿಡುತ್ತ "ಎಲೈ ಕೈಕೆ, ನನ್ನ ಗಂಡನು ಹತ

ಸಾದನು. ನಿನ್ನ ಬಯಕೆ ಕೈಗೂಡಿತಲ್ಲವೆ? ಅಯ್ಯೋ, ನಿನ್ನಿಂದ ವಂಶವೇ ನಾಶವಾಯಿತು. ಇದಕ್ಕಾಗಿಯೆ ನೀನು ರಾಮನನ್ನು ಕಾಡಿಗೆ ಕಳುಹಿಸಿದೆಯಾ? ಶ್ರೀರಾಮನು ನಿನಗಾವ ರೀತಿಯಲ್ಲಿ ಅಪಕಾರ ಮಾಡಿದನು?" ಎನ್ನುತ್ತಾ ದುಃಖವುಕ್ಕಿ ಮೂರ್ಛೆ ಹೊಂದಿದಳು. ಹಾಗೆಯೆ ಮತ್ತೆ ಎಚ್ಚೆತ್ತು ತನ್ನನ್ನು ತಾನೆ ಸಮಾಧಾನಪಡಿಸಿಕೊಂಡು "ಪ್ರಿಯನೆ, ಹೆಂಡತಿಗೆ ಮೊದಲು ಗಂಡನು ಮಡಿಯುವುದು ಯುಕ್ತವಲ್ಲ. ನನ್ನನ್ನು ದುಃಖದಿಂದ ಬಿಡಿಸಲು ಬಂದ ನಿನಗೆ ಈ ಗತಿಯುಂಟಾಯಿತು. ಕರುವಿಲ್ಲದ ತಾಯಿಯಂತೆ ಕೌಸಲ್ಯೆ ಪುತ್ರಹೀನೆಯಾದಳು. ಲಕ್ಷ್ಮಣನಿಂದ ನಿನ್ನ ಸಾವಿನ ಸಂಗತಿಯನ್ನು ಕೇಳಿ ಆಕೆ ಎದೆಯೊಡೆದು ಸಾಯುವಳು. ಈಗ ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ಸ್ವರ್ಗದಲ್ಲಿರುವ ನಿನ್ನ ತಂದೆಯನ್ನು ಸೇರಲು ನಿನಗೆ ಬಯಕೆಯಾಯಿತೆ? ನನ್ನೊಡನೆ ನೀನೇಕೆ ಮಾತನಾಡದಿರುವೆ? ನನಗಾಗಿ ನೀನು ಮೃತನಾದೆಯಲ್ಲವೆ? ನಿನ್ನ ಹೆಂಡತಿಯಾದ ನಾನೆ ಮೃತ್ಯುಸ್ವರೂಪಿಯಾದೆನು. ರಾಕ್ಷಸೇಂದ್ರ, ರಾಮನ ಶಿರಸ್ಸನ್ನು ದೇಹದೊಡನೆ ಸೇರಿಸು, ನಾನು ಗಂಡನನ್ನು ಅನುಸರಿಸುತ್ತೇನೆ" ಎಂದು ಕಮಲಲೋಚನೆಯಾದ ಸೀತೆ ಮತ್ತೆ ಮತ್ತೆ ಗೋಳಿಟ್ಟಳು. ಅಷ್ಟರಲ್ಲೆ ದ್ವಾರಪಾಲಕರು ಬಂದು, ರಾಜಕಾರ್ಯಕ್ಕಾಗಿ ಪ್ರಹಸ್ತನು ಮಂತ್ರಿಗಳೊಡನೆ ಬಂದಿರುವುದಾಗಿ ತಿಳಿಸಿದನು. ದೂತನ ಮಾತನ್ನು ಕೇಳಿ ರಾವಣನು ಅಲ್ಲಿಂದ ಹೊರಡಲು ಕೂಡಲೆ ರಾಮನ ಮಾಯಾಶಿರಸ್ಸೂ ಬಿಲ್ಲೂ ಅಲ್ಲಿಂದ ಮಾಯವಾದುವು.

ರಾವಣನು ಅಲ್ಲಿಂದ ಹೊರಟುಹೋದ ಮೇಲೆ ವಿಭೀಷಣನ ಹೆಂಡತಿಯಾದ ಸರಮೆ ಆಕೆಯನ್ನು ಸಮಾಧಾನಪಡಿಸಿದಳು: "ಪ್ರಿಯಸಖಿ, ರಾವಣನೊಂದಿಗೆ ನೀನಾಡಿದ ಮಾತುಗಳನ್ನೆಲ್ಲ ಕೇಳಿದೆ. ಮಲಗಿದ್ದ ಶ್ರೀರಾಮನನ್ನು ಸಂಹರಿಸುವುದೆಂದರೇನು? ಕಪಿಗಳಿಂದ ರಕ್ಷಿತನಾದ ರಾಮನ ವಿಷಯದಲ್ಲಿ ಅದು ಅಸಂಭವ. ಇದೆಲ್ಲ ರಾವಣನ ಮಾಯೆ. ಇನ್ನುಮುಂದೆ ನಿನ್ನ ವ್ಯಸನಕಾಲ ಕಳೆದುಹೋಯಿತು. ಶುಭ ಸಮೀಪಿಸುತ್ತಿದೆ. ಕಪಿಸೈನ್ಯದಿಂದ ಕೂಡಿ ಶ್ರೀರಾಮನು ಸಮುದ್ರತೀರದಲ್ಲಿ ಬೀಡು ಬಿಟ್ಟಿರುವುದನ್ನು ನಾನೆ ನೋಡಿದೆ. ಈ ವರ್ತಮಾನವನ್ನು ಕೇಳಿ ಭಯಗೊಂಡ ರಾವಣನು ಮಂತ್ರಿಗಳೊಡನೆ ಮುಂದಿನ ಕಾರ್ಯವನ್ನು ಕುರಿತು ಯೋಚಿಸುತ್ತಿದ್ದಾನೆ." ಸರಮೆ ಈ ರೀತಿ ಹೇಳುತ್ತಿರುವಂತೆಯೆ, ಯುದ್ಧ ಸನ್ನಾಹ ಸೂಚಕವಾದ ಭೇರಿ ಶಬ್ದ ಕೇಳಿ ಬಂತು. ಆಗ ಸರಮೆ ಮತ್ತೆ ಸೀತೆಯನ್ನು ಕುರಿತು "ಎಲೈ ಭೀರು, ಈ ಯುದ್ಧ ಸೂಚಕವಾದ ಭೇರೀಶಬ್ದವನ್ನು ಕೇಳಿದೆಯಾ? ನಿಮಗೆ ಕಲ್ಯಾಣವೂ ರಾಕ್ಷಸರಿಗೆ ಭಯವೂ ಉಂಟಾಗುವ ಕಾಲ ಸಮೀಪಿಸಿತು. ಶ್ರೀರಾಮನು ರಾವಣನನ್ನು ಕೊಂದು ನಿನ್ನ ಬಳಿಗೆ ಬರುವನು. ಬೇಗನೆ ನೀನು ರಾಮನ ತೊಡೆಯನ್ನೇರಿ ಪತಿವ್ರತೆಯಾಗಿ ಮೆರೆಯುವುದನ್ನು ನೋಡಲು ಬಯಸುತ್ತೇನೆ. ನಿನಗೆ ಬಹುಬೇಗ ಸುಖ ದೊರಕಲಿ!" ಎಂದು ಸಂತೈಸಿದಳು. ಅಷ್ಟರಲ್ಲಿಯೆ ವಾನರಸೇನೆಯ ಕಂಠಘೋಷ ಭೂಮಿಯನ್ನೇ ನಡುಗಿಸಿತು. ಆ ಶಬ್ದವನ್ನು ಕೇಳಿ ರಾಕ್ಷಸರು ಎದೆಗುಂದಿದರು.

ಶ್ರೀರಾಮನು ತನ್ನ ಬಲದೊಡನೆ ಲಂಕೆಯನ್ನು ಸಮೀಪಿಸಿದನೆಂಬ ಸುದ್ದಿಯನ್ನು ಕೇಳಿ, ರಾವಣನು ಕ್ಷಣಕಾಲ ಚಿಂತಿಸಿ ಮಂತ್ರಿಗಳನ್ನು ತನ್ನಲ್ಲಿಗೆ ಬರಮಾಡಿಕೊಂಡನು. ಮುಂದೆ ರಾಮನೊಡನೆ ಯುದ್ಧಮಾಡುವ ವಿಷಯದಲ್ಲಿ ಅವರ ಅಭಿಪ್ರಾಯವನ್ನು ಕೇಳಲು ರಾವಣನ ಮಾವನು ಎದ್ದು ನಿಂತು ಈ ರೀತಿ ನುಡಿದನು: "ಎಲೈ ರಾವಣೇಶ್ವರ, ಬಲಹೀನನಾದವನು ಬಲವಂತನೊಡನೆ ಸಂಧಿಮಾಡಿಕೊಳ್ಳುವುದು ಉತ್ತಮವಾದ ಮಾರ್ಗ. ಆದ್ದರಿಂದ ಹೀನಬಲನಾಗುತ್ತಿರುವ ನೀನು ಶ್ರೀರಾಮನೊಡನೆ ಸಂಧಿಮಾಡಿಕೊಳ್ಳುವುದು ಹಿತವೆಂದು ನನಗೆ ತೋರುತ್ತದೆ. ಸೀತೆಯಿಂದ ನಮಗೆ ಈ ವಿಪತ್ತು ಉಂಟಾಗಿದೆಯಷ್ಟೆ. ಅಂಥ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸು. ದೇವದಾನವರಿಂದಲೂ ಗೆಲ್ಲಲು ಅಸಾಧ್ಯನಾದ ಶ್ರೀರಾಮನೊಡನೆ ಹಗೆತನ ಬೇಡ. ಲಂಕೆಯಲ್ಲಿ ತೋರುತ್ತಿರುವ ಅಪಶಕುನಗಳಿಂದ ನಮಗೆ ಸೋಲು ಸಿದ್ಧ. ಆದ್ದರಿಂದ ಈಗ ನಡೆಯುತ್ತಿರುವ ವಿಷಯಗಳನ್ನು ಪರಿಶೀಲಿಸಿ, ಮುಂದಿನ ಕಾರ್ಯವನ್ನು ಕೈಕೊಳ್ಳು."

ಮಾವನಾದ ಮಾಲ್ಯವಂತನ ಮಾತು ರಾವಣನಿಗೆ ರುಚಿಸಲಿಲ್ಲ. ಕೋಪದಿಂದ ಹುಬ್ಬನ್ನು ಗಂಟಿಕ್ಕಿ ಸಭೆಯನ್ನು ನೋಡುತ್ತ ಮಾಲ್ಯವಂತನಿಗೆ ಈ ರೀತಿ ನುಡಿದನು: "ನೀನು ಹಿತವಚನವೆಂದು ಹೇಳಿದ ಅಪ್ರಿಯವಾದ ಮಾತುಗಳು ನನ್ನ ಕಿವಿಯ ಮೇಲೆ ಬೀಳಲೆ ಇಲ್ಲ. ಕಪಿಗಳಿಂದ ಒಡಗೂಡಿ, ಒಬ್ಬೊಂಟಿಗನಾದ ರಾಮನನ್ನು ಮಹಾ ಸಮರ್ಥನೆಂದು ತಿಳಿದೆಯೇನು? ಶತ್ರುಗಳಲ್ಲಿರುವ ಪಕ್ಷಪಾತದಿಂದ, ನಾನು ವೀರನೆಂಬ ಹೊಟ್ಟೆಯುರಿಯಿಂದ ನೀನು ಈ ತೆರನಾದ ಕಠಿಣೋಕ್ತಿಗಳನ್ನಾಡಿದೆಯೆಂದು ತಿಳಿಯುತ್ತೇನೆ. ರಾಮನಿಗೆ ಹೆದರಿ ಸೀತೆಯನ್ನು ಒಪ್ಪಿಸುವೆನೆಂದು ತಿಳಿದೆಯೇನು? ಸುಗ್ರೀವ ಲಕ್ಷ್ಮಣರಿಂದ ಪರಿವೃತನಾದ ರಾಮನನ್ನು ಇನ್ನು ಸ್ವಲ್ಪ ದಿನಗಳಲ್ಲಿ ನಾಶ ಮಾಡುವುದನ್ನು ನೀನೇ ನೋಡುವೆ. ನನ್ನನ್ನು ಎರಡು ತುಂಡಾಗಿಸಿದರೂ ನಾನು ಇನ್ನೊಬ್ಬರಿಗೆ ತಲೆ ಬಾಗೆನು. ಇದು ನನ್ನ ಸ್ವಭಾವ. ಸಮುದ್ರವನ್ನು ದಾಟಿ ಬಂದ ರಾಮನು ಹಿಂದಿರುಗಿ ಹೋಗಲಾರನು.

ಹೀಗೆಂದು ನುಡಿದು ರಾವಣನು ಮಂತ್ರಿಗಳೊಡನೆ ಆಲೋಚಿಸಿ ನಗರವನ್ನು ಭದ್ರಪಡಿಸುವ ಏರ್ಪಾಡು ಮಾಡಿದನು. ಪೂರ್ವ ದಿಕ್ಕಿನಲ್ಲಿ ಪ್ರಹಸ್ತನನ್ನೂ, ಪಶ್ಚಿಮದಲ್ಲಿ ಶೂರನಾದ ತನ್ನ ಮಗ ಇಂದ್ರಜಿತುವನ್ನೂ, ಉತ್ತರದಲ್ಲಿ ಶುಕಸಾರಣರನ್ನೂ, ದಕ್ಷಿಣದಲ್ಲಿ ಮಹಾಪಾರ್ಶ್ವ ಮಹೋದರರನ್ನೂ, ನಗರದ ಮಧ್ಯದಲ್ಲಿ ಪುರರಕ್ಷಣೆಗಾಗಿ ವಿರೂಪಾಕ್ಷನನ್ನೂ ನಿಯಮಿಸಿದನು. ಹೀಗೆ ವಿಧಿವಶನಾದ ರಾವಣನು ತಾನು ಮಾಡಿದ ಏರ್ಪಾಡಿಗೆ ತಾನೇ ಸಂತೋಷಗೊಂಡು ಅಂತಃಪುರವನ್ನು ಹೊಕ್ಕನು.

ಇತ್ತ ಸುಗ್ರೀವನು ವಿಭೀಷಣ ಜಾಂಬವಂತ ಆಂಜನೇಯ ಮುಂತಾದ ಕಪಿವೀರರೊಡನೆ ಲಂಕೆಯನ್ನು ಮುತ್ತುವ ವಿಷಯದಲ್ಲಿ ಆಲೋಚನೆ ನಡಸಿದನು. ಆ ವೇಳೆಗೆ ವಿಭೀಷಣನ ನಾಲ್ವರು ಮಂತ್ರಿಗಳು ಪಕ್ಷಿರೂಪವನ್ನು ಧರಿಸಿ ಲಂಕೆಯನ್ನು ಹೊಕ್ಕು ರಾವಣನು ನಡೆಸಿದ ಏರ್ಪಾಟನ್ನು ತಿಳಿದು ಬಂದಿದ್ದರು. ಇದನ್ನು ವಿಭೀಷಣನು ತಿಳಿಸಿ

"ಶೂರರಾದ ರಾಕ್ಷಸರು ಆಯುಧಪಾಣಿಗಳಾಗಿ ನಗರವನ್ನು ಕಾಯುತ್ತಿದ್ದಾರೆ. ಸಾವಿರಾರು ಶೂರರಿಂದ ಪರಿವೃತನಾದ ರಾವಣನೆ ಉತ್ತರದ್ವಾರವನ್ನು ರಕ್ಷಿಸುತ್ತಿದ್ದಾನೆ. ವಿರೂಪಾಕ್ಷನೆಂತೂ ಹೆಸರಾದ ಬಿಲ್ಲುಗಾರ. ಇವನು ನಗರದ ಮಧ್ಯದಲ್ಲಿದ್ದಾನೆ. ಲೆಕ್ಕವಿಲ್ಲದಷ್ಟು ರಾಕ್ಷಸರೂ ಆನೆ ಕುದುರೆ ತೇರುಗಳೂ ನಗರದ ರಕ್ಷಣೆಗೆ ಸಿದ್ಧವಾಗಿವೆ" ಎಂದನು. ಆ ಬಳಿಕ ಈ ವಿಷಯವನ್ನು ರಾಮನಿಗೆ ತಿಳಿಸಿ "ರಾಮಚಂದ್ರ, ಹಿಂದೆ ರಾವಣನು ಕುಬೇರನೊಡನೆ ಯುದ್ಧಮಾಡಿದನು. ವೀರ್ಯದಲ್ಲಿ ಅವನಿಗೆ ಸಮಾನರಾದ ಅರವತ್ತು ಲಕ್ಷ ಜನ ರಾಕ್ಷಸರು ಅವನನ್ನು ಹಿಂಬಾಲಿಸಿದ್ದರು. ಈ ರೀತಿಯ ಸೈನ್ಯ ಅವನ ಬಳಿ ಲೆಕ್ಕವಿಲ್ಲದಷ್ಟಿದೆ. ನಿನ್ನನ್ನು ಕೋಪಗೊಳಿಸುವುದಕ್ಕಾಗಲಿ ಹೆದರಿಸುವುದಕ್ಕಾಗಲಿ ನಾನು ಈ ರೀತಿ ಮಾತನಾಡುತ್ತಿಲ್ಲ. ದೇವತೆಗಳನ್ನೆ ಸಂಹರಿಸುವ ಶಕ್ತಿ ನಿನಗಿಲ್ಲವೆ? ಈಗ ರಾಕ್ಷಸ ಸೈನ್ಯಕ್ಕೆ ಇದಿರಾಗಿ ವಾನರ ಸೇನೆಯನ್ನು ವ್ಯೂಹರೂಪವಾಗಿ ನಿಲ್ಲಿಸು" ಎಂದನು. ವಿಭೀಷಣನ ಮಾತನ್ನು ಕೇಳಿ ಶ್ರೀರಾಮನು ಪ್ರಹಸ್ತನಿಗಿದಿರಾಗಿ ಯುದ್ಧ ನಡಸಲು ವಾನರಶ್ರೇಷ್ಠನಾದ ನೀಲನನ್ನು ಪೂರ್ವದಿಕ್ಕಿನಲ್ಲಿ, ಮಹಾಪಾರ್ಶ್ವ ಮಹೋದರರೊಡನೆ ಯುದ್ಧಮಾಡಲು ಅಂಗದನನ್ನು ದಕ್ಷಿಣ ದಿಕ್ಕಿನಲ್ಲಿ ನಿಲ್ಲಿಸಿದನು. ಇಂದ್ರಜಿತುವನ್ನು ಎದುರಿಸಲು ಹನುಮಂತನಿಗೆ ಅಪ್ಪಣೆಮಾಡಿದನು. ರಾವಣನನ್ನು ಎದುರಿಸಲು ಲಕ್ಷ್ಮಣನೊಡನೆ ತಾನೆ ಸಿದ್ಧನಾದನು. ವಿರೂಪಾಕ್ಷನನ್ನು ಎದುರಿಸಲು ಸುಗ್ರೀವ ವಿಭೀಷಣರನ್ನು ನಿಯಮಿಸಲಾಯಿತು. ವಾನರರು ಮನುಷ್ಯರೂಪವನ್ನು ಧರಿಸಕೂಡದೆಂದೂ, ಹಾಗೆ ಧರಿಸಿದ ಪಕ್ಷದಲ್ಲಿ, ರಾಕ್ಷಸರೂ ಧರಿಸಿದರೆ ತನಗೆ ಶತ್ರುಗಳನ್ನು ಕೊಲ್ಲುವುದು ಕಷ್ಟವಾಗುವುದೆಂದೂ ಶ್ರೀರಾಮನು ಅಪ್ಪಣೆಮಾಡಿದನು.

ಈ ರೀತಿಯಾಗಿ ಏರ್ಪಾಟನ್ನು ನಡಸಿದ ಮೇಲೆ ಶ್ರೀರಾಮನು ಲಂಕೆಯನ್ನು ನೋಡುವ ಉದ್ದೇಶದಿಂದ ಸುವೇಲಪರ್ವತವನ್ನು ಹತ್ತಿದನು. ಸುಗ್ರೀವ ವಿಭೀಷಣರೂ ಇತರ ವಾನರವೀರರೂ ಅವನನ್ನು ಹಿಂಬಾಲಿಸಿದರು. ಆ ಪರ್ವತದ ಶಿಖರವನ್ನೇರಿದ ಅವರಿಗೆ, ಪೂರ್ಣಚಂದ್ರನ ಬೆಳದಿಂಗಳಿನ ಆ ರಾತ್ರಿಯಲ್ಲಿ ಪ್ರಾಕಾರಗಳಿಂದ ಕೂಡಿ, ಅನೇಕ ದ್ವಾರಗಳಿಂದ ಅಲಂಕೃತವಾದ ಆ ಲಂಕಾನಗರ ಬಹು ಚೆನ್ನಾಗಿ ಕಾಣಿಸಿತು. ಆ ನಗರದ ಉದ್ಯಾನಗಳನ್ನು ಕಂಡು ವಾನರರು ಸೋಜಿಗಗೊಂಡರು. ಸಂಪಗೆ, ಅಶೋಕ, ಮಾವು, ಹಲಸು, ಪುನ್ನಾಗ ಮುಂತಾದ ಮರಗಳಿಂದ ಕೂಡಿದ ಆ ಉದ್ಯಾನಗಳು ಇಂದ್ರನ ನಂದನವನಗಳಂತೆ ಶೋಭಿಸುತ್ತಿದ್ದುವು. ಎಲ್ಲ ಋತುಗಳಲ್ಲಿಯೂ ಫಲಬಿಡುವ ವೃಕ್ಷಗಳು, ಗಾನಮಾಡುವ ಕೋಗಿಲೆಗಳು, ನರ್ತನಮಾಡುವ ನವಿಲುಗಳು, ಶಬ್ದ ಮಾಡುವ ದುಂಬಿಗಳು ವಾನರರನ್ನು ಸಂತೋಷಗೊಳಿಸಿದುವು. ಅಲ್ಲದೆ ನೂರು ಗಾವುದ ವಿಸ್ತೀರ್ಣವುಳ್ಳ ಮೂವತ್ತು ಗಾವುದ ಉದ್ದವುಳ್ಳ ಆ ಲಂಕಾನಗರಿ ಉನ್ನತವಾದ ಶಿಖರಗಳಿಂದಲೂ ಪ್ರಾಕಾರಗಳಿಂದಲೂ ವಿಮಾನಗಳಿಂದಲೂ ದೇವಸ್ಥಾನಗಳಿಂದಲೂ ಕೂಡಿ ಶಿಖರಗಳಿಂದ ಕೂಡಿದ ಕೈಲಾಸದಂತೆ ಶೋಭಿಸುತ್ತಿತ್ತು. ಇವುಗಳ ನಡುವೆ ಪಟ್ಟಣಕ್ಕೆ ಅಲಂಕಾರಪ್ರಾಯವಾಗಿದ್ದು, ಚಿತ್ರಗಳಿಂದಲೂ ಉದ್ಯಾನಗಳಿಂದಲೂ ಐಶ್ವರ್ಯದಿಂದಲೂ ಸಮೃದ್ಧವಾದ ರಾವಣನ ಅರಮನೆಯನ್ನು ಕಂಡು ರಾಮನು ಆಶ್ಚರ್ಯಹೊಂದಿದನು.

---

೬

# ಅಂಗದನ ರಾಯಭಾರ

ಶ್ರೀರಾಮನು ಸುಗ್ರೀವನೇ ಮೊದಲಾದ ಕಪಿವೀರರಿಂದ ಕೂಡಿ, ಆ ಪರ್ವತದ ತುತ್ತತುದಿಯ ಕೋಡುಗಲ್ಲನ್ನೇರಿ ಒಂದು ಕ್ಷಣಕಾಲ ನಿಂತು ವಿಶ್ವಕರ್ಮನಿಂದ ನಿರ್ಮಿತವಾದ ಆ ಲಂಕಾನಗರದ ಚೆಲುವನ್ನು ನೋಡಿದನು. ಆ ನಗರದ ಹೆಬ್ಬಾಗಿಲಿನಲ್ಲಿ ಕೆಂಪು ಗಂಧವನ್ನು ಲೇಪಿಸಿಕೊಂಡು, ರತ್ನಾಭರಣಗಳಿಂದ ಭೂಷಿತನಾಗಿ ಕೆಂಪುವಸ್ತ್ರವನ್ನುಟ್ಟು ಕೆಂಪುವಸ್ತ್ರವನ್ನು ಹೊದ್ದು, ಬೈಗುಗೆಂಪು ಅಂಚುಕಟ್ಟಿದ್ದ ಕರಿಮೋಡದಂತೆ ನಿಂತಿದ್ದ ಪರಾಕ್ರಮಿಯಾದ ರಾವಣನು ಕಾಣಿಸಿಕೊಂಡನು. ಐರಾವತದ ದಂತದ ಹೊಡೆತದಿಂದ ಅವನೆದೆಯಲ್ಲಿ ಉಂಟಾದ ಗಾಯದ ಗಂಟುಗಳು ಕಾಣಬರುತ್ತಿದ್ದುವು. ವಾನರಸೇನೆಯನ್ನು ನೋಡುತ್ತಿದ್ದ ರಾವಣನನ್ನು ಕಂಡು ರೋಷದಿಂದ ಸುಗ್ರೀವನು ರಾವಣನಿದ್ದ ಸ್ಥಳಕ್ಕೆ ಹಾರಿದನು. ಕ್ಷಣಮಾತ್ರದಲ್ಲಿಯೆ ಸುಗ್ರೀವನು ರಾವಣನನ್ನು ಕಂಡು ಭಯವಿಲ್ಲದೆ "ಎಲೈ ರಾಕ್ಷಸ, ನಾನು ಲೋಕನಾಥನಾದ ಶ್ರೀರಾಮನ ಸ್ನೇಹಿತ, ಹಾಗೂ ಭೃತ್ಯ. ಈಗ ನೀನು ನನ್ನ ಶಕ್ತಿಯಿಂದ ತಪ್ಪಿಸಿಕೊಂಡು ಹೋಗಲಾರೆ" ಎಂದು ಹೇಳಿ ಅವನ ಕಿರೀಟವನ್ನು ಸೆಳೆದು ಭೂಮಿಯಲ್ಲಿ ಕೆಡವಿ, ಅವನನ್ನೂ ಭೂಮಿಗೆ ಬೀಳಿಸಿದನು. ರಾವಣನಾದರೊ ಜಾಗ್ರತೆಯಾಗಿ ಮೇಲಕ್ಕೆ ಎದ್ದು ಸುಗ್ರೀವನಾದ ನಿನ್ನನ್ನು ಹೀನಗ್ರೀವನನ್ನಾಗಿ ಮಾಡುವೆನೆಂದು ಹೇಳಿ ತನ್ನೆರಡು ತೋಳುಗಳಿಂದ ಅವನನ್ನು ಅಪ್ಪಿಕೊಂಡು ಆ ಗೋಪುರದಿಂದ ನೂಕಿದನು. ಪುಟಹೊಡೆದ ಚೆಂಡಿನಂತಿದ್ದ ಸುಗ್ರೀವನು ಆ ರಾವಣನನ್ನು ಮತ್ತೆ ಎತ್ತಿಹಾಕಿದನು. ಹೀಗೆ ಒಬ್ಬರೊಡನೊಬ್ಬರು ಹೋರಾಡುತ್ತ ರಕ್ತದಿಂದ ಕೆಂಪಾದ ದೇಹವುಳ್ಳ ಅವರು ಹೂಬಿಟ್ಟಿರುವ ಬೂರುಗದ ಮರದಂತೆಯೂ ಮುತ್ತುಗದ ಮರದಂತೆಯೂ ತೋರಿಬರುತ್ತಿದ್ದರು. ಮುಷ್ಟಿ ಅಂಗೈಗಳಿಂದ ಹೊಡೆದಾಡುತ್ತ ಅವರು ಬಹುಕಾಲ ಕ್ರೂರವಾಗಿ ಹೋರಾಡಿದರು. ಗೋಪುರದಿಂದ ಕೆಳಗೆ ಬಿದ್ದು ಹೋರಾಡಿದರು. ನಿಂತು, ಒಬ್ಬರನ್ನೊಬ್ಬರು ಬಿಗಿಯಪ್ಪಿಕೊಂಡು, ಕ್ರೋಧದಿಂದ ಹುಲಿಸಿಂಹಗಳಂತೆ, ಆನೆಯ ಮರಿಗಳಂತೆ ಯುದ್ಧಮಾಡಿದರು. ಹೀಗೆ ಬಹುಕಾಲ ಒಬ್ಬರನ್ನೊಬ್ಬರು ಅಪ್ಪಳಿಸುತ್ತ ಯುದ್ಧಮಾಡಿದರೂ ಯಾರಿಗೂ ಆಯಾಸವಾಗಲಿಲ್ಲ. ಒಬ್ಬರನ್ನೊಬ್ಬರು ನುಂಗಲು, ಸಂಹರಿಸಲು ಮಾರ್ಜಾಲದಂತೆ ನಿಂತರು. ಹೀಗೆ ಇಬ್ಬರೂ ವಿಚಿತ್ರವಾಗಿ ತಿರುಗುತ್ತ ಒಬ್ಬರ ಹೊಡೆತವನ್ನು ಮತ್ತೊಬ್ಬರು ತಪ್ಪಿಸಿಕೊಳ್ಳುತ್ತ ಬಗ್ಗುತ್ತ ಹಿಂದಿರುಗುತ್ತ ವಂಚಿಸುತ್ತ ಕಾದಿದರು. ಈ ನಡುವೆ ರಾವಣನು ತನ್ನ ಮಾಯೆಯನ್ನು ತನ್ನ ಮೇಲೆ ಪ್ರಯೋಗಿಸಬೇಕೆಂದಿರುವುದನ್ನರಿತು ಸುಗ್ರೀವನು ಅಂತರಿಕ್ಷಕ್ಕೆ ಹಾರಿದನು. ಸುಗ್ರೀವನಿಂದ ವಂಚಿತನಾದ ರಾವಣನು ಗೋಪುರ ದ್ವಾರದ ಬಳಿಯಲ್ಲಿಯೆ ನಿಂತನು.

ರಾವಣನೊಡನೆ ಯುದ್ಧಮಾಡಿ ಬಂದ ಸುಗ್ರೀವನ ಗಾಯಗಳನ್ನು ನೋಡಿ, ಅವನನ್ನು ಅಪ್ಪಿಕೊಂಡು ಶ್ರೀರಾಮನು ಈ ರೀತಿ ನುಡಿದನು: "ಮಿತ್ರನೆ, ನನ್ನೊಡನೆ ಆಲೋಚಿಸದೆ ವಾನರೇಶ್ವರನಾದ ನೀನು ಈ ಸಾಹಸ ಮಾಡಬಹುದೆ? ನಿನ್ನ ಕೆಲಸದಿಂದ ನನ್ನನ್ನೂ ಈ ವಿಭೀಷಣನನ್ನೂ ದೊಡ್ಡ ಆಶಂಕೆಗೆ ಗುರಿಮಾಡಿದ್ದೆ. ನೀನು ಇಂದ್ರ ಸಮಾನನಾದ ಪರಾಕ್ರಮಿಯಾದರೂ ನಿನಗೆ ಆಪತ್ತು ಒದಗಿದ್ದರೆ ಸೀತೆಯಿಂದಾಗಲಿ ಭರತ ಶತ್ರುಘ್ನರಿಂದಾಗಲಿ ರಾಜ್ಯದಿಂದಾಗಲಿ ಏನು ಪ್ರಯೋಜನವಾಗುತ್ತಿತ್ತು? ಆಮೇಲೆ ನಾನು ಬದುಕಿದ್ದರೂ ಏನು ಉಪಯೋಗ?" ಆ ಮಾತನ್ನು ಕೇಳಿ "ನಿನ್ನ ಹೆಂಡತಿಯನ್ನು ಕದ್ದೊಯ್ದ ರಾವಣನನ್ನು ಕಂಡೊಡನೆಯೆ ನನಗೆ ರೋಷವುಕ್ಕಿತು, ಸಹಿಸಲಾಗಲಿಲ್ಲ" ಎಂದು ಸುಗ್ರೀವನು ರಾಮನ ಗೌರವಕ್ಕೆ ಪಾತ್ರನಾದನು.

ಆಗ ಉಂಟಾಗುತ್ತಿದ್ದ ಕೆಟ್ಟ ಶಕುನಗಳನ್ನು ಕಂಡು, ರಾಕ್ಷಸರ ನಾಶಕಾಲ ಹತ್ತಿರವಾಗುತ್ತಿರುವುದನ್ನರಿತು, ಲಂಕೆಯನ್ನು ಪ್ರವೇಶಿಸಲು ಸೈನ್ಯವನ್ನು ಗರುಡವ್ಯೂಹ ವನ್ನಾಗಿ ನಿಲ್ಲಿಸಬೇಕೆಂದು ಲಕ್ಷ್ಮಣನಿಗೆ ಅಪ್ಪಣೆಮಾಡಿ ರಾಮನು ಪರ್ವತದಿಂದ ಇಳಿದನು. ಹಾಗೆ ಇಳಿದು ವಾನರ ಸೇನೆಯನ್ನು ಯುದ್ಧಕ್ಕೆ ಹುರಿದುಂಬಿಸಿ, ವಾನರ ವೀರರೊಡನೆ ರಾಮನು ಧನುಸ್ಸನ್ನು ಧರಿಸಿ, ಲಂಕೆಗೆ ಎದುರಾಗಿ ಹೊರಟನು. ರಾಮನನ್ನು ಅನುಸರಿಸಿ ಹೋದ ಕಪಿಸೈನ್ಯದಿಂದ ಭೂಮಿಯೆಲ್ಲವೂ ಮುಚ್ಚಿ ಹೋಯಿತು. ಹೀಗೆ ಲಂಕೆಯನ್ನು ವಾನರಸೇನೆ ಸಮೀಪಿಸಿದೊಡನೆಯೆ, ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಲಂಕೆಯ ಉತ್ತರ ದ್ವಾರವನ್ನು ಅಡ್ಡಗಟ್ಟಿ ನಿಂತನು. ಆ ದ್ವಾರವನ್ನು ಆಯುಧಪಾಣಿಗಳಾದ ರಾಕ್ಷಸರಿಂದ ರಾವಣನೆ ರಕ್ಷಿಸುತ್ತಿದ್ದನು. ನೀಲನು ಪೂರ್ವದ್ವಾರದಲ್ಲಿಯೂ ಅಂಗದನು ದಕ್ಷಿಣದ್ವಾರದಲ್ಲಿಯೂ ಹನುಮಂತನು ಪಶ್ಚಿಮದ್ವಾರದಲ್ಲಿಯೂ ತಮ್ಮ ಸೇನೆಗಳೊಡನೆ ಹೋಗಿ ನಿಂತರು. ಪ್ರತಿಯೊಂದು ದ್ವಾರದಲ್ಲಿಯೂ ರಾಮನ ಅಪ್ಪಣೆಯಂತೆ ಲಕ್ಷ್ಮಣನು ಒಂದೊಂದು ಕೋಟಿ ವಾನ ರರನ್ನು ನಿಲ್ಲಿಸಿದನು. ಸೈನ್ಯದ ಮಧ್ಯಭಾಗದಲ್ಲಿ ಸುಗ್ರೀವನು ಜಾಂಬವಂತನೊಡನೆ ನಿಂತನು. ಮಿಡತೆಗಳಂತೆ ಲಂಕೆಯನ್ನು ಮುತ್ತಿದ ಈ ವೀರರನ್ನು ಕಂಡು ಲಂಕಾ ನಗರಿಯ ಜನರಿಗೆ ಆಶ್ಚರ್ಯವಾಯಿತು. ಭೂಮಿ ಆಕಾಶ ಬೆಟ್ಟ ಗಿಡ ಮರಗಳಲ್ಲಿ ಎಲ್ಲಿಲ್ಲಿ ನೋಡಿದರೂ ವಾನರರೇ ವಾನರರು! ರಾಮಲಕ್ಷ್ಮಣರಿಂದಲೂ ಸುಗ್ರೀವನಿಂದಲೂ ರಕ್ಷಿತವಾದ ಈ ಸೇನೆಯನ್ನು ದೇವತೆಗಳಾಗಲಿ ರಾಕ್ಷಸರಾಗಲಿ ಮನಸ್ಸಿನಿಂದಲೂ ಕೂಡ ಜಯಿಸಲು ಅಸಾಧ್ಯವಾಗಿತ್ತು.

ರಾವಣನೊಡನೆ ಯುದ್ಧಕ್ಕೆ ಸೈನ್ಯವನ್ನು ಸಿದ್ಧಗೊಳಿಸಿದಮೇಲೆ, ಶ್ರೀರಾಮನು ನೀತಿಶಾಸ್ತ್ರಕ್ಕೆ ಅನುಸಾರವಾಗಿ ಮಂತ್ರಿಗಳೊಡನೆ ಆಲೋಚಿಸಿ, ರಾವಣನಲ್ಲಿಗೆ ದೂತ ನೊಬ್ಬನನ್ನು ಕಳುಹಿಸಲು ನಿಶ್ಚೈಸಿದನು. ಇದಕ್ಕೆ ವಿಭೀಷಣನ ಅನುಮತಿ ದೊರೆಯಲು ವಾಲಿಪುತ್ರನಾದ ಅಂಗದನನ್ನು ಕುರಿತು ಈ ರೀತಿ ನುಡಿದನು: "ಅಂಗದ, ನೀನು ನಿರ್ಭಯನಾಗಿ ಲಂಕೆಗೆ ಹೋಗಿ ಈ ನನ್ನ ಮಾತನ್ನು ರಾವಣನಿಗೆ ತಿಳಿಸು—"ಸಾಯಲಿರು

ಬಯಸುವ ಎಲೈ ರಾವಣನೆ, ದೇವಗಂಧರ್ವರಿಗೆ ಋಷಿಗಳಿಗೆ ಅಪ್ಸರೆಯರಿಗೆ ತೊಂದರೆ ಕೊಟ್ಟು ಕೊಬ್ಬಿಹೋಗಿರುವ ನಿನಗೆ ಯಮನಂತೆ ನಾನು ಈ ಲಂಕಾನಗರದ ಹೆಬ್ಬಾಗಿಲಲ್ಲಿ ಬಂದು ನಿಂತಿದ್ದೇನೆ. ಬ್ರಹ್ಮನ ವರಬಲದಿಂದ ಕೊಬ್ಬಿದ ನಿನಗೆ ಕೊನೆಗಾಲ ಸಮೀಪಿಸಿದೆ. ಆದ್ದರಿಂದ ನೀನು ಸೀತೆಯನ್ನು ನನಗೆ ತಂದೊಪ್ಪಿಸಿ ಶರಣಾಗತನಾಗದಿದ್ದರೆ, ನನ್ನ ಹರಿತವಾದ ಬಾಣಗಳಿಂದ ನಿನ್ನನ್ನು ಕೊಂದು ನನ್ನ ಬಳಿಯಲ್ಲಿರುವ ವಿಭೀಷಣನಿಗೆ ಲಂಕೆಯ ಪಟ್ಟಗಟ್ಟುತ್ತೇನೆ. ಮೂರ್ಖರಿಂದ ಕೂಡಿ ಅಧರ್ಮದಿಂದ ರಾಜ್ಯವಾಳಲು ಇನ್ನು ಕ್ಷಣಕಾಲವೂ ನಿನಗೆ ಸಾಧ್ಯವಾಗದು. ಸೀತೆಯನ್ನು ಒಪ್ಪಿಸಲು ಇಷ್ಟವಿಲ್ಲದಿದ್ದರೆ ನನ್ನೊಡನೆ ಯುದ್ಧಮಾಡು; ನಿನ್ನ ಪ್ರಾಣ ನನ್ನ ವಶದಲ್ಲಿದೆ."

ಶ್ರೀರಾಮನ ಸಂದೇಶವನ್ನು ಸ್ವೀಕರಿಸಿ ತೇಜಸ್ವಿಯಾದ ಅಂಗದನು ಅಂತರಿಕ್ಷದಲ್ಲಿ ಹಾರಿ, ಕ್ಷಣಕಾಲದಲ್ಲಿ ಅರಮನೆಯನ್ನು ಹೊಕ್ಕು ಮಂತ್ರಿಗಳಿಂದ ಕೂಡಿದ ರಾವಣನನ್ನು ಕಂಡನು. ಹರಿಪುಂಗವನಾದ ಅಂಗದನು ರಾವಣನ ಸಮೀಪದಲ್ಲಿ ನಿಂತು ಅವನಿಗೆ ರಾಮ ಸಂದೇಶವನ್ನು ಹೆಚ್ಚುಕಡಿಮೆ ಮಾಡದೆ ಈ ರೀತಿ ನುಡಿದನು: "ಎಲೈ ನೀಚ, ನಾನು ಶ್ರೀರಾಮಚಂದ್ರನ ದೂತ. ವಾಲಿಪುತ್ರನಾದ ಅಂಗದನ ಹೆಸರನ್ನು ನೀನು ಕೇಳಿರ ಬಹುದು. ಅವನೇ ನಾನು. ಶ್ರೀರಾಮನು ನಿನಗೆ ಈ ರೀತಿ ಅಪ್ಪಣೆಮಾಡಿರುತ್ತಾನೆ— ನೀನು, ಗಂಡಸಾದರೆ ಊರಿನಿಂದ ಹೊರಗೆ ಬಂದು ಯುದ್ಧಮಾಡು. ನಿನ್ನನ್ನು ಬಂಧು ಬಾಂಧವರೊಡನೆ ಕೊಲ್ಲುತ್ತೇನೆ. ನೀನು ಸಾಯಲು ಮೂರು ಲೋಕಗಳಿಗೂ ಕ್ಷೇಮ ವುಂಟಾಗುವುದು. ಸೀತೆಯನ್ನೊಪ್ಪಿಸಿ ನನಗೆ ಶರಣಾಗತನಾಗದಿದ್ದರೆ, ನೀನು ಸತ್ತು ವಿಭೀಷಣನು ಲಂಕೆಗೆ ಪ್ರಭುವಾಗುವನು."

ಅಂಗದನು ನುಡಿದ ರಾಮಸಂದೇಶವನ್ನು ಕೇಳಿ ರೋಷಗೊಂಡ ರಾವಣನು ಅಂಗದ ನನ್ನು ಹಿಡಿದು ಕೊಲ್ಲುವಂತೆ ಮಂತ್ರಿಗಳಿಗೆ ಅಪ್ಪಣೆಮಾಡಿದನು. ರಾವಣನ ಅಪ್ಪಣೆ ಯಂತೆ ನಾಲ್ವರು ಅಂಗದನನ್ನು ಹಿಡಿದುಕೊಂಡರು. ರಾಕ್ಷಸರ ನಡುವೆ ತನ್ನ ಪರಾಕ್ರಮ ವನ್ನು ತೋರಬಯಸಿದ ಅಂಗದನು ತನ್ನೆರಡು ತೋಳುಗಳಲ್ಲಿ ಆ ರಾಕ್ಷಸರನ್ನು ಇರುಕಿ ಕೊಂಡು ಆಕಾಶಕ್ಕೆ ಹಾರಿ, ಅಲ್ಲಿಂದ ಅವರನ್ನು ಕೊಡವಿಬಿಟ್ಟನು. ಅನಂತರ ಅಂಗದನು ಪರ್ವತ ಶಿಖರದಂತೆ ಎತ್ತರವಾದ ರಾವಣನ ಅರಮನೆಯ ಶಿಖರವನ್ನು, ಹಿಂದೆ ದೇವೇಂದ್ರನು ಹಿಮವತ್‌ಪರ್ವತದ ಶಿಖರವನ್ನು ಸೀಳಿದಂತೆ, ಮುರಿದು ಬಿಟ್ಟನು. ಹೀಗೆ ರಾವಣನಿಗೆ ಸಂಕಟವನ್ನುಂಟುಮಾಡಿ, ಅಂತರಿಕ್ಷದಲ್ಲಿ ನಿಂತು ರಾಕ್ಷಸರೆಲ್ಲರಿಗೂ ಕೇಳುವಂತೆ ತನ್ನ ಹೆಸರನ್ನು ಗಟ್ಟಿಯಾಗಿ ಕೂಗಿ ಹೇಳಿ, ಶ್ರೀರಾಮನಲ್ಲಿಗೆ ಬಂದು ವಾನರರಿಗೆ ಹರ್ಷತಂದನು. ರಾವಣನು ತನ್ನ ನಾಶ ಸಮೀಪಿಸಿತೆಂದುಕೊಂಡು ಕೋಪ ದಿಂದ ನಿಟ್ಟುಸಿರುಬಿಟ್ಟನು. ಇತ್ತ ರಾಮನು ಸುಗ್ರೀವನ ಮಾತಿನಂತೆ ಲಂಕೆಯನ್ನು ನಾಲ್ಕು ದಿಕ್ಕಿನಿಂದಲೂ ಮುತ್ತಿದನು. ವಾನರಸೇನೆಯನ್ನು ಕಂಡು ದೀನರಾದ ರಾಕ್ಷಸರು ಭಯದಿಂದ ಕೂಗಿಕೊಂಡರು, ಗೋಳಿಟ್ಟರು.

---

## ೭

# ರಾಮ ರಾವಣರ ಯುದ್ಧಸನ್ನಾಹ—ಇಂದ್ರಜಿತ್ತುವಿನ ಯುದ್ಧ

ಶ್ರೀರಾಮನು ಲಂಕೆಯನ್ನು ಮುತ್ತಿದ ಸಮಾಚಾರವನ್ನು ರಾವಣನು ದೂತರಿಂದ ತಿಳಿದನು. ನಗರದ ರಕ್ಷಣೆಯನ್ನು ಮೊದಲಿಗಿಂತಲೂ ಇಮ್ಮಡಿಸಿ ಉಪ್ಪರಿಗೆಯನ್ನು ಏರಿ ಭೂಮಿಯೆಲ್ಲವೂ ವಾನರಮಯವಾಗಿರುವುದನ್ನು ಕಂಡನು. ನಗರವನ್ನು ಮುತ್ತಿದ್ದ ಕಪಿಗಳನ್ನು ಹೇಗೆ ನಾಶಪಡಿಸಬೇಕೆಂಬ ಯೋಚನೆ ಅವನಲ್ಲಿ ಬಲವಾಯಿತು. ಇತ್ತ ತನ್ನನ್ನೇ ನೆನೆಯುತ್ತ, ಶೋಕದಿಂದ ಬೆಂದು ಸಂಕಟಪಡುತ್ತಿರುವ ಸೀತೆಯನ್ನು ನೆನೆದು ರಾಮನು ಕ್ರೋಧಗೊಂಡು ಶತ್ರುಗಳನ್ನು ವಧಿಸಲು ವಾನರರಿಗೆ ಅಪ್ಪಣೆ ಮಾಡಿದನು. ಶ್ರೀರಾಮನ ಅಪ್ಪಣೆಯನ್ನು ಕೇಳಿದಕೂಡಲೆ ವಾನರರು ಸಿಂಹನಾದ ಮಾಡುತ್ತ, ಬೆಟ್ಟಗಳನ್ನೂ ಮರಗಳನ್ನೂ ಹೊತ್ತು ನಿಂತರು. ರಾಮನಿಗಾಗಿ ಪ್ರಾಣ ಬಿಡಲು ಸಿದ್ಧರಾದ ವಾನರರು ಕೋಟೆಯ ಗೋಡೆಗಳನ್ನೂ ಬಾಗಿಲುಗಳನ್ನೂ ಮುರಿಯುತ್ತ ಬಂದರು. ಮತ್ತೆ ಕೆಲವರು ಕೋಟೆಯ ಗೋಡೆಗಳನ್ನೇರಿ, ಗೋಪುರಗಳನ್ನೂ ಕಾಂಚನ ತೋರಣಗಳನ್ನೂ ಮುರಿದರು. "ಶ್ರೀರಾಮನಿಗೆ ಜಯವಾಗಲಿ! ಸುಗ್ರೀವನಿಗೆ ಜಯವಾಗಲಿ!" ಎಂದು ಘೋಷಿಸುತ್ತ ನಗರದಲ್ಲಿ ಸಂಚರಿಸಿದರು. ಕುಮುದನು ಪೂರ್ವದ್ವಾರದಲ್ಲಿ, ಶತಬಲಿ ದಕ್ಷಿಣ ದ್ವಾರದಲ್ಲಿ, ಸುಷೇಣನು ಪಶ್ಚಿಮ ದ್ವಾರದಲ್ಲಿ ರಾಕ್ಷಸರನ್ನು ಎದುರಿಸಿದರು. ಶ್ರೀರಾಮನಿಗೆ ಸಹಾಯಕನಾಗಿ ಗದಾಪಾಣಿಯಾದ ವಿಭೀಷಣನು ತನ್ನ ಮಂತ್ರಿಗಳೊಡನೆ ನಿಂತನು.

ಇತ್ತ ರಾವಣನ ಅಪ್ಪಣೆಯಂತೆ ರಾಕ್ಷಸಸೇನೆ ಯುದ್ಧಕ್ಕೆ ಹೊರಟಿತು. ಚಂದ್ರನಂತೆ ಬೆಳ್ಳಗಿರುವ ಮುಖವುಳ್ಳ ಭೇರಿಗಳನ್ನು ಬಂಗಾರದ ಕೋಲುಗಳಿಂದ ಬಾರಿಸಿದರು. ಇದರೊಡನೆ ರಾಕ್ಷಸರು ಶಂಖಗಳನ್ನು ಮೊಳಗಿಸಿದರು. ಚಂದ್ರೋದಯ ಕಾಲದಲ್ಲಿ ಉಬ್ಬಿದ ಸಮುದ್ರದಂತೆ ರಾಕ್ಷಸರು ತಂಡತಂಡವಾಗಿ ಹೊರಟರು. ಶಂಖದ ಘೋಷ, ಆನೆ ಕುದುರೆಗಳ ಗರ್ಜನೆ, ರಾಕ್ಷಸರ ಸಿಂಹನಾದ ಇವುಗಳಿಂದ ಭೂಮಿ ಆಕಾಶಗಳು ತುಂಬಿಹೋದುವು. ಈ ಕೋಲಾಹಲದ ನಡುವೆ ವಾನರರಿಗೂ ರಾಕ್ಷಸರಿಗೂ ಯುದ್ಧ ಮೊದಲಾಯಿತು. ರಾಕ್ಷಸಶ್ರೇಷ್ಠರು ಚಿನ್ನದ ಗಂಟೆಗಳನ್ನು ಕಟ್ಟಿದ ಕುದುರೆಗಳನ್ನು ಬಿಗಿದ ರಥಗಳಲ್ಲಿ ಕುಳಿತು ಕವಚಗಳನ್ನು ತೊಟ್ಟು 'ರಾಕ್ಷಸೇಶ್ವರನಿಗೆ ಜಯವಾಗಲಿ!' ಎಂದು ಸಿಂಹನಾದ ಮಾಡುತ್ತ ವಾನರಸೇನೆಯ ಮೇಲೆ ಬಿದ್ದರು. ಇತ್ತ ಶ್ರೀರಾಮನಿಗೆ ಜಯವನ್ನು ಕೋರಿ ರಾಕ್ಷಸಸೇನೆಯನ್ನು ಎದುರಿಸಿದ ವಾನರ ಸೇನೆಗೂ ರಾವಣಸೇನೆಗೂ

ದ್ವಂದ್ವಯುದ್ಧ ಮೊದಲಾಯಿತು. ಈಶ್ವರನೊಡನೆ ಯುದ್ಧಮಾಡುವ ಯಮನಂತೆ ಇಂದ್ರಜಿತು ಅಂಗದನೊಡನೆ ಹೋರಾಡಿದನು. ಹಾಗೆಯೇ ವಾನರರಲ್ಲಿ ಪ್ರಧಾನರಾದ ವೀರರಿಗೂ ರಾಕ್ಷಸ ವೀರರಿಗೂ ಘೋರಯುದ್ಧವಾಯಿತು. ಶ್ರೀರಾಮನನ್ನ ರಶ್ಮಿಕೇತು, ಅಗ್ನಿಕೇತು, ಸುಪ್ತಘ್ನ, ಯಜ್ಞಕೋಪರೆಂಬ ರಾಕ್ಷಸರು ಮುತ್ತಿ ಬಾಣ ಗಳಿಂದ ಹೊಡೆದರು. ಆದರೇನು ಶ್ರೀರಾಮನ ಬಾಣಗಳಿಂದ ಕ್ಷಣಮಾತ್ರದಲ್ಲಿ ಅವರು ಪ್ರಾಣಗಳನ್ನು ನೀಗಿದರು. ಇತ್ತ ವಾನರರು ಅನೇಕ ರಾಕ್ಷಸ ವೀರರನ್ನು ದ್ವಂದ್ವ ಯುದ್ಧದಲ್ಲಿ ಕೊಂದರು. ಮುರಿದ ಕತ್ತಿಗಳಿಂದ, ರಥಗಳಿಂದ, ಸತ್ತು ಬಿದ್ದ ವಾನರ ರಾಕ್ಷಸರಿಂದ, ಆನೆ ಕುದುರೆಗಳಿಂದ ರಣರಂಗ ತುಂಬಿಹೋಯಿತು. ತಲೆಯಿಲ್ಲದ ಮುಂಡಗಳು ದಿಕ್ಕುದಿಕ್ಕಿಗೆ ಹಾರಿದುವು. ರಕ್ತಪ್ರವಾಹರೂಪವಾಗಿ ಹರಿಯಿತು. ರಾಕ್ಷಸರಾದರೊ ಮೊದಲಿಗಿಂತಲೂ ದೊಡ್ಡ ಯುದ್ಧವನ್ನು ಮಾಡಲು ಸಂಜೆಯಾಗು ವುದನ್ನೆ ಕಾಯುತ್ತಿದ್ದರು.

ಹೀಗೆ ರಾಕ್ಷಸ ವಾನರರು ಯುದ್ಧಮಾಡುತ್ತಿರಲು ಸೂರ್ಯನು ಮುಳುಗಿ ಕತ್ತಲಾಯಿತು. ಬದ್ಧ ವೈರಿಗಳಾದ ಇವರು ಗೆಲ್ಲುವ ಬಯಕೆಯಿಂದ, ಒಬ್ಬರ ಗುರುತನ್ನು ಮತ್ತೊಬ್ಬರು ಅರಿಯದೆ ಹೊಡೆಯಲಾರಂಭಿಸಿದರು. ಈ ಕಗ್ಗತ್ತಲೆ ಯಲ್ಲಿ "ಹೊಡಿ, ಬಡಿ, ಕೊಲ್ಲು, ಎಲ್ಲಿಗೆ ಓಡಿಹೋಗುತ್ತಿರುವೆ?" ಎಂಬ ಶಬ್ದಗಳ ಸುತ್ತಲೂ ಕೇಳಿಬರುತ್ತಿತ್ತು. ಆ ಕಗ್ಗತ್ತಲೆಯಲ್ಲಿ ಕಪ್ಪಾದ ದೇಹವುಳ್ಳ ರಾಕ್ಷಸರು ತಮ್ಮ ಬಂಗಾರದ ಕವಚದ ಕಾಂತಿಯಿಂದ, ಜ್ಯೋತಿರ್ಲತೆಗಳನ್ನುಳ್ಳ ದೊಡ್ಡ ಪರ್ವತ ಗಳಂತೆ ಕಾಣಿಸಿದರು. ಆ ಕಗ್ಗತ್ತಲಲ್ಲಿ ವೇಗವಾಗಿ ಸಂಚರಿಸುತ್ತ ರಾಕ್ಷಸರು ಕಪಿಗಳನ್ನು ತಿಂದರು. ಕಪಿಗಳೂ ಕೂಡ ಕೋಪದಿಂದ ರಥದಿಂದ ರಥಕ್ಕೆ ಹಾರುತ್ತ ಆನೆ ಕುದುರೆ ಗಳನ್ನು ಸೀಳುತ್ತ ರಾಕ್ಷಸರನ್ನು ಸಂಕಟಗೊಳಿಸಿದರು. ಮಾವಟಿಗರನ್ನೂ ಸಾರಥಿ ಗಳನ್ನೂ ಕೆಳಕ್ಕೆ ನೂಕಿದರು. ಬಾವುಟದ ಬಟ್ಟೆಗಳನ್ನು ಹರಿದರು. ರಾಮಲಕ್ಷ್ಮಣರೂ ಸರ್ಪಕ್ಕೆ ಸಮಾನವಾದ ಬಾಣಗಳಿಂದ ರಾಕ್ಷಸವೀರರನ್ನು ತರಿದರು. ಹೊಡೆತ ತಿಂದು ಬೀಳುತ್ತಿರುವ ವಾನರ ರಾಕ್ಷಸರ ಕ್ರೂರವಾದ ಕೋಲಾಹಲಧ್ವನಿ ಹೃದಯವನ್ನು ಬಿರಿಯಿಸುತ್ತಿತ್ತು. ಹೀಗೆ ಭಯಂಕರವಾಗಿ ಪ್ರಳಯಕ್ಕೆ ಸಮಾನವಾದ ಯುದ್ಧ ವಾಗುತ್ತಿರಲು ರಾಕ್ಷಸರೆಲ್ಲರೂ ಬಾಣದ ಮಳೆ ಕರೆಯುತ್ತ ಶ್ರೀರಾಮನನ್ನು ಎದುರಿಸಿದರು. ಸಮುದ್ರ ಘೋಷದಂತೆ ಗರ್ಜಿಸುತ್ತ ಆರು ಮಂದಿ ರಾಕ್ಷಸವೀರರು ರಾಮನ ಮೇಲೆ ಶರ ವರ್ಷವನ್ನು ಕರೆಯಲು ರಾಮನು ಹರಿತವಾದ ಬಾಣಗಳಿಂದ ಅವರನ್ನೂ ಶುಕಸಾರಣರನ್ನೂ ಹೊಡೆದು ಓಡಿಸಿದನು. ಬೆಂಕಿಯಲ್ಲಿ ಬೀಳುವ ಹುಳು ಗಳಂತೆ ರಾಮಬಾಣಗಳಿಂದ ರಾಕ್ಷಸರು ಹತರಾಗುತ್ತಿದ್ದರು.

ಇತ್ತ ಅಂಗದನು ಇಂದ್ರಜಿತ್ತನ್ನು ಎದುರಿಸಿ ಅವನ ಸಾರಥಿಯನ್ನೂ ಕುದುರೆ ಯನ್ನೂ ಬಲವಾಗಿ ಹೊಡೆದನು. ಸಾರಥಿ ರಥ ಕುದುರೆಗಳು ನಾಶವಾದುದನ್ನು ಕಂಡು ಇಂದ್ರಜಿತು ಮರೆಯಾದನು. ಇಂದ್ರನನ್ನೆ ಗೆದ್ದ ಇಂದ್ರಜಿತುವನ್ನು ಭಂಗಪಡಿಸಿದ

ಅಂಗದನ ಕಾರ್ಯವನ್ನು ಕಂಡು ರಾಮಲಕ್ಷ್ಮಣರೂ ಸುಗ್ರೀವನೂ ಹರ್ಷಗೊಂಡರು. ಈ ನಡುವೆ ಕುಪಿತನಾದ ಇಂದ್ರಜಿತು ಅದೃಶ್ಯನಾಗಿಯೆ ಸಿಡಿಲಿಗೆ ಸಮಾನವಾದ ಬಾಣಗಳನ್ನು ಕಪಿಸೈನ್ಯದ ಮೇಲೆ ಪ್ರಯೋಗಿಸಿದನು. ಅವನು ಪ್ರಯೋಗಿಸಿದ ಬಾಣಗಳಿಂದ ರಾಮಲಕ್ಷ್ಮಣರ ಅಂಗಾಂಗಗಳಲ್ಲಿ ಗಾಯವುಂಟಾಯಿತು. ಆ ಕಗ್ಗತ್ತಲೆಯಲ್ಲಿ ಇಂದ್ರಜಿತುವನ್ನು ಹುಡುಕಲು ವಾನರವೀರರು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಆಗ ಇಂದ್ರಜಿತು ಕ್ರೂರವಾದ ಸರ್ಪ ಬಾಣಗಳಿಂದ ರಾಮ ಲಕ್ಷ್ಮಣರನ್ನು ಬಂಧಿಸಿದನು. ರಕ್ತದಿಂದ ಕೂಡಿದ ರಾಮ ಲಕ್ಷ್ಮಣರ ದೇಹ ಹೂಬಿಟ್ಟ ಮುತ್ತುಗದ ಮರದಂತೆ ಕಾಣಬರುತ್ತಿತ್ತು. ಆ ರಾಕ್ಷಸ ವೀರನ ಬಾಣಗಳ ವೇಗವನ್ನು ಸಹಿಸದೆ ರಾಮ ಲಕ್ಷ್ಮಣರು ತತ್ತರಿಸಿಹೋದರು. ಮಹಾ ಧನುರ್ಧಾರಿಗಳಾದ ಆ ಅಣ್ಣ ತಮ್ಮಂದಿರು ನಾಗಪಾಶದಿಂದ ಬಂಧಿತರಾಗಿ ಹಗ್ಗಕಿತ್ತ ಇಂದ್ರಧ್ವಜದಂತೆ ಭೂಮಿಯಲ್ಲಿ ಮಲಗಿದರು. ಅವರ ದೇಹದಲ್ಲಿ ಬಾಣಗಳ ಹೊರತು ಇನ್ನೇನೂ ಕಾಣಬರುತ್ತಿರಲಿಲ್ಲ. ಬಿಚ್ಚಿಹೋದ ಹೆದೆಯುಳ್ಳ ಬಿಲ್ಲನ್ನೆ ಹಿಡಿದು ಮೂರ್ಛೆಹೋದ ರಾಮನನ್ನು ಕಂಡು ಲಕ್ಷ್ಮಣನು ಬದುಕುವ ಆಶೆಯನ್ನೆ ಬಿಟ್ಟನು. ಕಪಿವೀರರೂ ರಾಮನನ್ನು ಸುತ್ತುವರಿದು ಅವನಿಗಾಗಿ ಗೋಳಿಟ್ಟರು.

ಮಳೆ ಸುರಿಸಿದ ಮೇಘದಂತೆ ಇಂದ್ರಜಿತು ಬಾಣಪ್ರಯೋಗವನ್ನು ನಿಲ್ಲಿಸಲು ವಿಭೀಷಣ ಸುಗ್ರೀವರು ರಾಮಲಕ್ಷ್ಮಣರು ಮೂರ್ಛೆಹೊಂದಿ ಮಲಗಿದ್ದ ಪ್ರದೇಶಕ್ಕೆ ಬಂದರು. ಹನುಮಂತನಿಗೆ ನೆಲದ ಮೇಲೆ ಮಲಗಿದ್ದ ಅಣ್ಣ ತಮ್ಮಂದಿರನ್ನು ಕಂಡು ದುಃಖ ಉಕ್ಕೇರಿತು. ಉಳಿದ ಎಲ್ಲ ವಾನರರು ನಿಟ್ಟುಸಿರುಬಿಡುತ್ತ ಸುತ್ತಲೂ ಸ್ತಬ್ಧರಾಗಿ ನಿಂತರು. ಇತ್ತ ಮಾಯಾವಿಯಾದ ಇಂದ್ರಜಿತು ಖರದೂಷಣಸಂಹಾರಕನಾದ ಶ್ರೀರಾಮನು ತಿರುಗಿ ಏಳಲಾರನೆಂದು, ವಾನರರ ಪ್ರಯತ್ನಗಳು ನಿಷ್ಫಲವಾದುವೆಂದೂ, ರಾಕ್ಷಸರು ಇನ್ನು ಮುಂದೆ ನಿರ್ಭೀತರಾಗಿರಬಹುದೆಂದೂ ಹೇಳಿ ನೀಲ, ನಳ ಜಾಂಬವಂತ, ಹನುಮಂತ ಮುಂತಾದ ವೀರರನ್ನು ಬಾಣಗಳಿಂದ ನೋಯಿಸಿದನು. ಇಂದ್ರಜಿತುವಿನ ಮಾತನ್ನು ಕೇಳಿ ಶ್ರೀರಾಮನು ಸತ್ತನೆಂದು ತಿಳಿದು ರಾಕ್ಷಸರು ಹರ್ಷಧ್ವನಿಮಾಡಿ ಲಂಕೆಯನ್ನು ಹೊಕ್ಕರು. ರಾಮ ಲಕ್ಷ್ಮಣರನ್ನು ಜಯಿಸಿ ತನಗೆ ಹರುಷವನ್ನು ತಂದ ಮಗನನ್ನು ರಾವಣನು ಗಾಢವಾಗಿ ಅಪ್ಪಿಕೊಂಡನು. ಇಂದ್ರಜಿತ್ತುವಿನ ಗೆಲುವಿನಿಂದ ಅವನ ಮನಸ್ಸಿಗೆ ನೆಮ್ಮದಿಯುಂಟಾಯಿತು.

ಇತ್ತ ರಾಮ ಲಕ್ಷ್ಮಣರ ಸ್ಥಿತಿಯನ್ನು ಕಂಡು ಸುಗ್ರೀವನು ಭಯಗೊಂಡು ಕಣ್ಣೀರು ಬಿಡುತ್ತ ನಿಂತುಕೊಂಡನು. ಇದನ್ನು ಕಂಡ ವಿಭೀಷಣನು "ಸುಗ್ರೀವ, ಹೆದರಿಕೆಯನ್ನು ಬಿಡು. ಕಣ್ಣೀರು ಬಿಡುವುದನ್ನು ತಡೆದುಕೊ. ಅದೃಷ್ಟವಿದ್ದರೆ ಈ ಇಬ್ಬರು ವೀರರು ಬಹುಬೇಗ ಮೂರ್ಛೆ ತಿಳಿದೇಳುತ್ತಾರೆ. ಈ ಸಂದರ್ಭದಲ್ಲಿ ನಿನ್ನ ಮನಸ್ಸನ್ನು ಸ್ಥಿರಪಡಿಸಿಕೊಂಡು, ನನ್ನನ್ನು ಕಾಪಾಡು. ಸತ್ಯವಂತರಿಗೆ ಅಪಮೃತ್ಯುವಿನ ಭಯವಿಲ್ಲ. ಇವರು ಮೂರ್ಛೆತಿಳಿದು ಏಳುವವರೆಗೆ ಪಲಾಯನಕ್ಕೆ ಸಿದ್ಧವಾಗಿರುವ ಈ

ವಾನರ ಸೇನೆಗೆ ಧೈರ್ಯ ಹೇಳಿ, ಇದನ್ನು ರಕ್ಷಿಸು" ಎಂದು ಸಮಾಧಾನಪಡಿಸಿ ಅವನ ಕಣ್ಣೀರನ್ನು ನೀರಿನಿಂದ ಒರಸಿದನು. ಅನಂತರ ಆಂಜನೇಯ, ಅಂಗದ, ನಳ, ನೀಲ ಮುಂತಾದ ವೀರರು ರಾಮಲಕ್ಷ್ಮಣರನ್ನು ಸುತ್ತುವರಿದು ದೀನರಾಗಿ, ಕೈಯಲ್ಲಿ ಮರಗಳನ್ನು ಹಿಡಿದು ನಿಂತು ಅವರನ್ನು ರಾಕ್ಷಸರಿಂದ ರಕ್ಷಿಸಿದರು.

---

೮

# ಸೀತಾ ಪ್ರಲಾಪ–ನಾಗಪಾಶ ವಿಮೋಚನೆ

ಇತ್ತ ರಾವಣನು ಇಂದ್ರಜಿತುವಿನಿಂದ ರಾಮಲಕ್ಷ್ಮಣರು ಮಡಿದರೆಂದು ತಿಳಿದು ಲಂಕೆಯನ್ನು ಧ್ವಜಗಳಿಂದ ಅಲಂಕರಿಸಿ, ರಾಮಲಕ್ಷ್ಮಣರ ಮರಣವನ್ನು ಸಾರುವಂತೆ ಅಪ್ಪಣೆಮಾಡಿದನು. ಅನಂತರ ಸೀತಾದೇವಿಯನ್ನು ಕಾಯುತ್ತಿದ್ದ ತ್ರಿಜಟೆ ಮುಂತಾದ ರಾಕ್ಷಸಿಯರನ್ನು ತನ್ನಲ್ಲಿಗೆ ಬರಮಾಡಿಕೊಂಡು, ಸಂತೋಷದಿಂದ ಹೇಳಿದನು : "ಇಂದ್ರಜಿತುವಿನಿಂದ ರಾಮಲಕ್ಷ್ಮಣರು ಮಡಿದರೆಂದು ಹೇಳಿ ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಅವರನ್ನು ತೋರಿಬನ್ನಿ. ರಣದಲ್ಲಿ ಮಲಗಿರುವ ಆ ಅಣ್ಣತಮ್ಮಂದಿರನ್ನು ಕಂಡು ವಿಶಾಲಾಕ್ಷಿಯಾದ ಸೀತೆ ಆಸೆಯೆಲ್ಲವನ್ನೂ ತೊರೆದು ನನ್ನನ್ನು ಸೇರುವಳು.

ರಾವಣನ ಅಪ್ಪಣೆಯಂತೆ ಆ ರಾಕ್ಷಸಸ್ತ್ರೀಯರು, ದುಃಖದಿಂದ ಸೋತಿದ್ದ ಸೀತೆಯಲ್ಲಿಗೆ ಬಂದು, ಪುಷ್ಪಕವಿಮಾನದಲ್ಲಿ ಆಕೆಯನ್ನು ಕೂರಿಸಿ, ರಾಮಲಕ್ಷ್ಮಣರನ್ನು ತೋರಿಸಲು ನಡೆದರು. ರಣಭೂಮಿಗೆ ಬಂದು ವಿಮಾನದಿಂದಲೆ ಸೀತೆ ಸತ್ತ ಕಪಿಸೇನೆಯನ್ನೂ ಬಾಣದ ಹಾಸಿಗೆಯಲ್ಲಿ ಎಚ್ಚರವಿಲ್ಲದೆ ಮಲಗಿ ಜಾರಿದ ಬಿಲ್ಲುಗಳನ್ನುಳ್ಳ ರಾಮಲಕ್ಷ್ಮಣರನ್ನೂ ಕಂಡಳು. ಪುರುಷಶ್ರೇಷ್ಠನಾದ ರಾಮನನ್ನೂ ಅವನ ಬಳಿ ಮಲಗಿದ್ದ ಲಕ್ಷ್ಮಣನನ್ನೂ ನೋಡಿ ಸೀತೆಗೆ ದುಃಖದ ಕಟ್ಟೆ ಒಡೆಯಿತು. ಅವರು ಮಡಿದರೆಂದು ಆಕೆ ಭಯಗೊಂಡಳು. "ಅಯ್ಯೋ, ನಾನು ಸುಮಂಗಲಿಯೆಂದೂ ಪುತ್ರವತಿಯಾಗುವೆನೆಂದೂ ಹೇಳಿದ ವಿದ್ವಾಂಸರ ಮಾತು ಸುಳ್ಳಾಯಿತು. ಇವರು ನನಗಾಗಿ ಕಡಲನ್ನು ದಾಟಿ ಇಲ್ಲಿಗೆ ಬಂದರಲ್ಲವೆ? ಆದರೇನು? ಅದೆಲ್ಲವೂ ನಿಷ್ಫಲವಾಯಿತು. ಬ್ರಹ್ಮಾಸ್ತ್ರಗಳೆ ಮೊದಲಾದ ಮಹಾಸ್ತ್ರಗಳನ್ನು ಪಡೆದು ವೀರರೆಂದು ಹೆಸರುಗೊಂಡ ನೀವು ಇಂದ್ರಜಿತುವಿನಿಂದ ಮಡಿದಿರಾ? ಯುದ್ಧದಲ್ಲಿ ನಿಮ್ಮನ್ನು ಇದಿರಿಸಿ ಯಮನೂ ಬದುಕಿಹೋಗಲಾರನೆಂದ ಮೇಲೆ ನೀವು ಮಡಿದಿರುವುದು ನನ್ನ ದೌರ್ಭಾಗ್ಯವೇ ಸರಿ. ನಾನು ರಾಮನಿಗಾಗಲಿ ಲಕ್ಷ್ಮಣನಿಗಾಗಲಿ ಶೋಕಪಡುತ್ತಿಲ್ಲ. ವನವಾಸವನ್ನು ಮುಗಿಸಿಕೊಂಡು ಬರುವ ಮಕ್ಕಳನ್ನು ಕಾಣಲು ತವಕಪಡುತ್ತಿರುವ ನಮ್ಮ ಅತ್ತೆಯಾದ ಕೌಸಲ್ಯೆಗಾಗಿ ದುಃಖಿಸುತ್ತೇನೆ" ಎಂದು ಸೀತೆ ಗೋಳಿಟ್ಟಳು. ಆಗ ತ್ರಿಜಟೆಯೆಂಬ ರಾಕ್ಷಸಿ ಸೀತೆಯನ್ನು ಸಮಾಧಾನ ಪಡಿಸುತ್ತ ನುಡಿದಳು : "ಎಲೈ ಸೀತೆ, ಅಣ್ಣತಮ್ಮಂದಿರಾದ ರಾಮಲಕ್ಷ್ಮಣರು ಸತ್ತಿಲ್ಲವೆಂದು ನಾನು ತಿಳಿಯುತ್ತೇನೆ. ರಾಮಲಕ್ಷ್ಮಣರು ಸತ್ತಿದ್ದರೆ ವಾನರರ ಮುಖಗಳು ಕ್ರೋಧದಿಂದಲೂ ಉತ್ಸಾಹದಿಂದಲೂ ಇರುತ್ತಿದ್ದುವೆ? ಹಾಗಿದ್ದರೆ ವಾನರ ಸೇನೆ ಧ್ವಜಪಟವಿಲ್ಲದ ನಾವೆಯಂತೆ ಉತ್ಸಾಹಹೀನವಾಗಿರುತ್ತಿತ್ತು. ಈ ರಘುವೀರರನ್ನು

ಯಾರೂ ಕೊಲ್ಲಲಾರರು. ನಾನು ಸುಳ್ಳನ್ನು ಹೇಳುತ್ತಿಲ್ಲ. ನಿನ್ನಲ್ಲಿರುವ ಸ್ನೇಹಭಾವದಿಂದ ಈ ಮಾತನ್ನು ನುಡಿಯುತ್ತಿದ್ದೇನೆ. ನಿನ್ನ ಪಾತಿವ್ರತ್ಯ ನನ್ನ ಮನಸ್ಸನ್ನು ಸೂರೆಗೊಂಡಿದೆ. ಇವರ ಮುಖಕಾಂತಿಯೆ ಇವರು ಮಡಿದಿಲ್ಲವೆಂಬುದನ್ನು ಸೂಚಿಸುತ್ತದೆ. ಆದ್ದರಿಂದ ಅವರು ಬದುಕುವುದಿಲ್ಲವೆಂದು ತಿಳಿಯಬೇಡ. ಶೋಕವನ್ನು ಬಿಡು." ತ್ರಿಜಟೆಯ ಮಾತನ್ನು ಕೇಳಿ ಸೀತೆಗೆ ಸಮಾಧಾನವಾಗಲು ಪುಷ್ಪಕವಿಮಾನವು ಆಕೆಯನ್ನು ಹೊತ್ತು ಅಶೋಕವನಕ್ಕೆ ಹಿಂದಿರುಗಿತು. ಆದರೆ ಸೀತೆ ರಾಮಲಕ್ಷ್ಮಣರ ಸ್ಥಿತಿಯನ್ನು ನೆನೆಸಿಕೊಂಡು ದುಃಖಿಸುತ್ತ ಅವರಿಗಾಗಿ ಚಿಂತಿಸತೊಡಗಿದಳು.

ಇತ್ತ ರಾಮಲಕ್ಷ್ಮಣರಿಗಾಗಿ ದುಃಖಿಸುತ್ತ ವಾನರವೀರರು ಅವರನ್ನು ಸುತ್ತುವರಿದು ನಿಂತಿರಲು, ಧೈರ್ಯವಂತನಾದ ರಾಮನು ಮೂರ್ಛೆ ತಿಳಿದೆದ್ದನು. ಪಕ್ಕದಲ್ಲಿಯೆ ರಕ್ತದಿಂದ ನೆನೆದ ದೇಹದಿಂದ ನೆಲದಮೇಲೆ ಮಲಗಿದ್ದ ಲಕ್ಷ್ಮಣನನ್ನು ನೋಡಿ ಕಣ್ಣೀರು ಸುರಿಸಿ ಗೋಳಿಟ್ಟನು. "ಅಯ್ಯೋ, ಯುದ್ಧದಲ್ಲಿ ಮಡಿದು ಬಿದ್ದಿರುವ ಲಕ್ಷ್ಮಣನನ್ನು ನೋಡಿದ ಮೇಲೆ ಸೀತೆಯಿಂದ ಏನು ಪ್ರಯೋಜನ? ನನ್ನ ಬದುಕಿನಿಂದೇನು? ಸೀತೆಯಂತಹ ಹೆಂಡತಿ ಹುಡುಕಿದರೆ ಈ ಲೋಕದಲ್ಲಿ ದೊರಕಬಹುದು. ಆದರೆ ಲಕ್ಷ್ಮಣನಂತಹ ತಮ್ಮ ಮಾತ್ರ ಎಲ್ಲಿ ದೊರಕಿಯಾನು? ಲಕ್ಷ್ಮಣನಿಲ್ಲದೆ ನಾನು ಜೀವದಿಂದಿರಲಾರೆ. ತಾಯಿಯಾದ ಕೌಸಲ್ಯೆಗೆ, ಕೈಕೆಗೆ, ಮಗನು ಬರುವನೆಂದು ಹಂಬಲಿಸುತ್ತಿರುವ ಸುಮಿತ್ರೆಗೆ ಹೇಗೆ ಮುಖ ತೋರಿಸಲಿ? ಏನೆಂದು ನುಡಿಯಲಿ? ಹೇಗೆ ಸಮಾಧಾನಪಡಿಸಲಿ? ಭರತ ಶತ್ರುಘ್ನರಿಗೆ ಏನೆಂದು ಉಸುರಲಿ? ನನಗಾಗಿ ಲಕ್ಷ್ಮಣನಿಗೆ ಈ ಅವಸ್ಥೆ ಬಂದುದಲ್ಲವೆ? ನನ್ನ ಬಾಳಿಗೆ ಧಿಕ್ಕಾರವಿರಲಿ. ಲಕ್ಷ್ಮಣ, ನಿತ್ಯವೂ ನನ್ನೊಡನೆ ಮಾತನಾಡುತ್ತಿದ್ದ ನೀನು ಈಗೇಕೆ ಮಾತನಾಡದಿರುವೆ? ನನ್ನನ್ನು ಲಕ್ಷ್ಮಣನು ಅನುಸರಿಸಿ ಬಂದಂತೆಯೆ ಈಗ ನಾನು ಅವನನ್ನು ಅನುಸರಿಸಿ ಹೋಗುತ್ತೇನೆ. ಸ್ವಭಾವದಿಂದ ಕೋಪಿಷ್ಠನಾದರೂ ನನ್ನ ವಿಷಯದಲ್ಲಿ ಒಂದು ದಿನವೂ ಅಪ್ರಿಯವಾದ ಮಾತನ್ನಾಡಲಿಲ್ಲ. ಸಾವಿರ ತೋಳುಗಳಿಂದ ಕಾರ್ತವೀರ್ಯಾರ್ಜುನನು ಸಾಧಿಸಿದ ಕೆಲಸವನ್ನು ಲಕ್ಷ್ಮಣನು ಎರಡೇ ತೋಳುಗಳಿಂದ ಸಾಧಿಸಿದನು. ವಿಭೀಷಣನಿಗೆ ನಾನು ಕೊಟ್ಟ ಮಾತು ಸುಳ್ಳಾಯಿತು. ಸುಗ್ರೀವ, ಅಂಗದನನ್ನು ಮುಂದಿಟ್ಟುಕೊಂಡು ವಾನರ ಸೇನೆಯೊಂದಿಗೆ ಕಿಷ್ಕಿಂಧೆಗೆ ಹಿಂದಿರುಗು. ಹನುಮಂತನು ನನಗಾಗಿ ಮಹತ್ಕಾರ್ಯವನ್ನು ಮಾಡಿದನು. ವಾನರರು ಪರಾಕ್ರಮವನ್ನು ಮೆರೆದರು. ಸ್ನೇಹಿತನು ಮಾಡಬೇಕಾದ ಕಾರ್ಯವನ್ನೂ ತೋರಬೇಕಾದ ಪ್ರೀತಿಯನ್ನೂ ನೀನು ಮಾಡಿ ಮೆರೆದೆ. ನೀವೆಲ್ಲರೂ ಹೋಗಬಹುದು." ರಾಮನ ದುಃಖಪೂರಿತವಾದ ಮಾತುಗಳನ್ನು ಕೇಳಿ ಕಪಿಗಳು ಕಣ್ಣೀರು ಸುರಿಸಿದರು.

ಈ ವೇಳೆಗೆ ಗದೆಯನ್ನು ಧರಿಸಿದ ವಿಭೀಷಣನು ರಾಮಲಕ್ಷ್ಮಣರಿದ್ದಲ್ಲಿಗೆ ಬಂದನು. ರಾಮಲಕ್ಷ್ಮಣರ ಮರಣದಿಂದ ತನ್ನ ಬಯಕೆಗಳೆಲ್ಲವೂ ಮುರಿದು ಬಿದ್ದುವೆಂದು ಅವನು ಬಹುವಾಗಿ ಶೋಕಿಸುತ್ತಿರಲು ಸುಗ್ರೀವನು ಅವನನ್ನು ಸಮಾಧಾನಪಡಿಸಿದನು. ಅಗ

ಸುಷೇಣನು "ಸುಗ್ರೀವ, ಹಿಂದೆ ದೇವಾಸುರರಿಗೆ ನಡೆದ ಯುದ್ಧದಲ್ಲಿ, ದೇವತೆಗಳನ್ನು ಬದುಕಿಸಲು ಬೃಹಸ್ಪತಿ ಉಪಯೋಗಿಸಿದ ಮೂಲಿಕೆಗಳು ಕ್ಷೀರಸಮುದ್ರದ ತಳದಲ್ಲಿವೆ. ಕ್ಷೀರಸಮುದ್ರದ ಬಳಿಯಿರುವ ಚಂದ್ರ ಮತ್ತು ದ್ರೋಣ ಪರ್ವತಗಳಲ್ಲಿ ವಿಶಲ್ಯವೆಂಬ ಮೂಲಿಕೆ ಇದೆ. ಹನುಮಂತನು ಅಲ್ಲಿಂದ ಆ ಮೂಲಿಕೆಯನ್ನು ತರಲಿ" ಎಂದನು. ಈ ನಡುವೆ ಮೇಘಗಳನ್ನು ಚೆದರಿಸುತ್ತ, ಸಮುದ್ರದ ನೀರನ್ನು ಎರಚುತ್ತ, ಭೂಮಿಯನ್ನು ನಡುಗಿಸುತ್ತ ಗಾಳಿಯೊಂದು ಬೀಸಿತು. ಆ ಗಾಳಿಯಿಂದ ಮರಗಳು ಬುಡಮೇಲಾದುವು. ಸರ್ಪಗಳು ಹೆದರಿ ಸಮುದ್ರವನ್ನು ಹೊಕ್ಕವು. ಅಷ್ಟರಲ್ಲೆ ವಾನರರು ಅಗ್ನಿಯಂತೆ ತೇಜಸ್ವಿಯಾದ ಗರುಡನು ಬರುತ್ತಿದ್ದುದನ್ನು ಕಂಡರು. ಗರುಡನನ್ನು ನೋಡಿದೊಡನೆಯೆ ರಾಮಲಕ್ಷ್ಮಣರನ್ನು ಬಂಧಿಸಿದ್ದ ಹಾವುಗಳು ಹೆದರಿ ಓಡಿಹೋದುವು. ಗರುಡನು ರಾಮಲಕ್ಷ್ಮಣರ ಬಳಿಗೆ ಬಂದು ಸಂತೋಷದಿಂದ ಅವರ ದೇಹವನ್ನು ತನ್ನ



"ರಾಮಚಂದ್ರ ನಾನು ನಿನ್ನ ಸ್ನೇಹಿತ, ನಿನ್ನ ಹೊರಗಿನ ಪ್ರಾಣ. ಗರುಡನಾದ ನಾನು ನಿನಗೆ ಉಂಟಾಗಿರುವ ವಿಪತ್ತನ್ನು ಕೇಳಿ ಇಲ್ಲಿಗೆ ಬಂದೆ."

ಕೈಗಳಿಂದ ಸವರಿದನು. ರಾಮಲಕ್ಷ್ಮಣರ ಗಾಯಗಳು ಮಾಯವಾಗಿ ಅವರ ತೇಜಸ್ಸೂ ವೀರ್ಯವೂ ಇಮ್ಮಡಿಯಾದುವು. ಹಾಗೆ ಎದ್ದು ಕುಳಿತ ರಾಮಲಕ್ಷ್ಮಣರನ್ನು ಅಪ್ಪಿಕೊಂಡು ಅವರಿಗೆ ಸಂತೋಷವನ್ನು ತಂದನು. ತಮ್ಮನ್ನು ಆ ಮಹತ್ತಾದ ಕಷ್ಟದಿಂದ ಬಿಡಿಸಿದ ಅವನಾರೆಂದು ಕೇಳಲು ಅವರ ಮಾತಿಗೆ ಗರುಡನು ಹೇಳಿದನು: "ರಾಮಚಂದ್ರ, ನಾನು ನಿನ್ನ ಸ್ನೇಹಿತ, ನಿನ್ನ ಹೊರಗಿನ ಪ್ರಾಣ. ಗರುಡನಾದ ನಾನು ನಿನಗೆ ಉಂಟಾಗಿರುವ ವಿಪತ್ತನ್ನು ಕೇಳಿ ಇಲ್ಲಿಗೆ ಬಂದೆ. ದೇವೇಂದ್ರನೆ ಬಂದರೂ ಇಂದ್ರಜಿತುವಿನ ಈ ನಾಗಪಾಶವನ್ನು ಬಿಡಿಸಲು ಸಾಧ್ಯವಿಲ್ಲ. ಈ ಕ್ರೂರಸರ್ಪಗಳೆಲ್ಲ ಕದ್ರುವಿನ ಮಕ್ಕಳು. ರಾಕ್ಷಸನ ಮಾಯೆಯಿಂದ ನಿಮ್ಮ ದೇಹವನ್ನು ಬಾಣರೂಪವಾಗಿ ಹೊಕ್ಕಿವೆ. ಈಗ ನಿಮಗೆ ಬಂದ ಈ ವಿಪತ್ತು ನಾಶವಾದರೂ ಮಾಯಾಯುದ್ಧವನ್ನು ಮಾಡುವ ಈ ರಾಕ್ಷಸರ ವಿಷಯದಲ್ಲಿ ಇನ್ನುಮುಂದೆ ಎಚ್ಚರಿಕೆಯಿಂದಿರಬೇಕು. ಪರಾಕ್ರಮಿಯಾದ ನೀನು ಬಹುಬೇಗ ರಾವಣನನ್ನು ಕೊಂದು ಸೀತೆಯನ್ನು ಪಡೆಯುವೆ. ನನಗೆ ಹೋಗಲು ಅಪ್ಪಣೆಕೊಡು." ಹೀಗೆಂದು ಹೇಳಿ ಗರುಡನು ರಾಮಲಕ್ಷ್ಮಣರನ್ನು ಬೀಳ್ಕೊಂಡು ಆಕಾಶಮಾರ್ಗವಾಗಿ ಹಾರಿಹೋದನು. ರಾಮಲಕ್ಷ್ಮಣರು ಮೂರ್ಛೆ ತಿಳಿದು ಮೊದಲಿನಂತಾದುದನ್ನು ಕಂಡು ವಾನರರು ಸಂತೋಷದಿಂದ ಭೇರಿಶಂಖಗಳನ್ನು ಶಬ್ದಮಾಡಿ ಯುದ್ಧಮಾಡಲು ಉತ್ಸಾಹದಿಂದ ಸಿದ್ಧರಾದರು.

---

೯

## ಧೂಮ್ರಾಕ್ಷ, ವಜ್ರದಂಷ್ಟ್ರ, ಅಕಂಪನ

ಇತ್ತ ವಾನರರ ಹರ್ಷಸೂಚಕ ಧ್ವನಿಯನ್ನು ಕೇಳಿ, ಮಂತ್ರಿಗಳನ್ನು ನೋಡಿ ರಾವಣನು ಈ ರೀತಿ ನುಡಿದನು: "ಮೇಘದಂತೆ ಧ್ವನಿಮಾಡುತ್ತಿರುವ ಈ ವಾನರರ ಸಂತೋಷ ಮೇರೆಯನ್ನು ಮೀರಿದಂತಿದೆ. ಇದರಲ್ಲಿ ಸಂಶಯವೇ ಇಲ್ಲ. ರಾಮಲಕ್ಷ್ಮಣರು ನಾಗಪಾಶದಿಂದ ಬಂಧಿತರಾಗಿದ್ದರೂ ವಾನರರ ಸಂತೋಷ ನನ್ನಲ್ಲಿ ಸಂಶಯವನ್ನುಂಟು ಮಾಡುತ್ತಿದೆ" ಹೀಗೆಂದು ನುಡಿದು, ಕಪಿಗಳ ಸಂತೋಷಕ್ಕೆ ಕಾರಣವನ್ನು ತಿಳಿದು ಬರಲು ದೂತನೊಬ್ಬನನ್ನು ಕಳುಹಿಸಿದನು. ಲಂಕಾನಗರದ ಪ್ರಾಕಾರವನ್ನು ಏರಿ, ವಾನರಸೇನೆಯ ನಿಜವಾದ ಸಮಾಚಾರವನ್ನು ತಿಳಿದು ಬಂದ ಚಾರನು, ರಾಮಲಕ್ಷ್ಮಣರು ನಾಗಪಾಶದಿಂದ ಬಿಡುಗಡೆ ಹೊಂದಿದುದನ್ನೂ ಅದಕ್ಕಾಗಿ ವಾನರರು ಹರ್ಷಗೊಂಡಿರುವ ರೆಂಬುದನ್ನೂ ತಿಳಿಸಿದನು. ದೂತನ ಮಾತನ್ನು ಕೇಳಿ ಚಿಂತೆಯಿಂದ ರಾವಣನ ಮುಖ ಕುಗ್ಗಿತು. ಇಂದ್ರಜಿತ್ತುವಿನ ನಾಗಪಾಶ ವ್ಯರ್ಥವಾದುದನ್ನು ಕೇಳಿ ರಾವಣನಿಗೆ ಒಂದೇ ಕಾಲದಲ್ಲಿ ಕೋಪವೂ ಆಶ್ಚರ್ಯವೂ ಉಂಟಾದುವು. ಕೋಪಗೊಂಡ ಹಾವಿನಂತೆ ನಿಟ್ಟುಸಿರು ಬಿಡುತ್ತ ವೀರನಾದ ಧೂಮ್ರಾಕ್ಷನೆಂಬ ರಾಕ್ಷಸನನ್ನು ಕುರಿತು ರಾಮನ ಮೇಲೆ ಯುದ್ಧಕ್ಕೆ ಹೊರಡುವಂತೆ ಅಪ್ಪಣೆಮಾಡಿದನು.

ಧೂಮ್ರಾಕ್ಷನ ಮಾತಿನಂತೆ ರಾಕ್ಷಸರ ಸೇನೆ ಯುದ್ಧಕ್ಕೆ ಹೊರಟಿತು. ದೇಹಕ್ಕೆ ಗಂಟೆಗಳನ್ನು ಕಟ್ಟಿಕೊಂಡು ಭಯಂಕರಾಕಾರದ ರಾಕ್ಷಸರು ಸೇನಾಪತಿಯ ಸುತ್ತಲೂ ನೆರೆದರು. ಗದೆ ಕತ್ತಿ ಈಟಿ ಖಡ್ಗ ಮುಂತಾದ ಆಯುಧಗಳನ್ನು ಧರಿಸಿ ರಾಕ್ಷಸವೀರರು ಮುಂದೆ ನುಗ್ಗಿದರು. ಕಪಿ ಮತ್ತು ಸಿಂಹದ ಮುಖಗಳಂತಿದ್ದ ಕತ್ತೆಗಳನ್ನು ಕಟ್ಟಿದ ಮನೋಹರವಾದ ಬಂಗಾರದ ತೇರನ್ನು ಏರಿ ಧೂಮ್ರಾಕ್ಷನು ಹೊರಟನು. ಆಗ ಹದ್ದುಗಳು ರಾಕ್ಷಸ ಸೇನೆಗೆ ಅಡ್ಡವಾಗಿ ಹಾರಿದುವು. ಸೇನಾಪತಿಯ ಸಮೀಪದಲ್ಲಿ ರಕ್ತದಿಂದ ನೆನೆದ ತಲೆಯಿಲ್ಲದ ಮುಂಡವು ವಿಕಾರವಾಗಿ ಕೂಗಿ ನೆಲಕ್ಕೆ ಬಿತ್ತು. ಮುಗಿಲು ರಕ್ತದ ಮಳೆಯನ್ನು ಸುರಿಸಿತು. ಭೂಮಿ ನಡುಗಿತು. ಬಿರುಗಾಳಿ ಬೀಸಿ ಕತ್ತಲೆ ಕವಿಯಿತು. ಈ ಅಪಶಕುನಗಳಿಂದ ಸೇನಾಪತಿಯ ಮನಸ್ಸು ಕಳವಳಗೊಂಡರೂ ತನ್ನ ಸೇನೆಯನ್ನು ಹನುಮಂತನಿದ್ದ ದಿಕ್ಕಿಗೆ ಇದಿರಾಗಿ ಒಯ್ದನು.

ಯುದ್ಧ ಮಾಡಲು ರಾಕ್ಷಸಸೇನೆ ಬರುತ್ತಿರುವುದನ್ನು ಕಂಡು ವಾನರರು ಉತ್ಸಾಹದಿಂದ ಸಿಂಹನಾದ ಮಾಡಿದರು. ರಾಕ್ಷಸರಿಗೂ ಕಪಿಗಳಿಗೂ ದ್ವಂದ್ವಯುದ್ಧ ಮೊದಲಾಯಿತು. ಬಂಡೆ ಗಿಡ ಇವುಗಳಿಂದ ವಾನರರು ರಾಕ್ಷಸರನ್ನು ಸೀಳಿದರು. ರಾಕ್ಷಸರೂ ವಾನರರನ್ನು ಗದೆಗಳಿಂದಲೂ ಕತ್ತಿಗಳಿಂದಲೂ ಸೀಳಿದರು. ಆ ಯುದ್ಧದಲ್ಲಿ

ಕೆಲವರು ರಕ್ತವನ್ನು ಕಾರಿದರು; ಕೆಲವರು ಅಂಗವಿಹೀನರಾದರು. ಅನೇಕಕುದುರೆಗಳು ಲೆಕ್ಕವಿಲ್ಲದಷ್ಟು ಮಡಿದುಬಿದ್ದುವು. ಕಪಿಗಳು ಮೇಲಕ್ಕೆ ಹಾರಿ ಉಗುರುಗಳಿಂದ ರಾಕ್ಷಸರನ್ನು ಗಾಯಗೊಳಿಸಿದರು. ವಾನರರ ಏಟನ್ನು ಸಹಿಸಲಾರದೆ ರಾಕ್ಷಸಸೇನೆ ಓಡತೊಡಗಿತು. ಓಡುತ್ತಿರುವ ರಾಕ್ಷಸಸೇನೆಯನ್ನು ಕಂಡು ಕೋಪಗೊಂಡ ಧೂಮ್ರಾಕ್ಷನು ಕಪಿಗಳನ್ನು ಎದುರಿಸಿದನು. ಅವನ ಹೊಡೆತವನ್ನು ಸಹಿಸದೆ ಕೆಲವರು ಕಪಿಗಳು ಭೂಮಿಯಲ್ಲಿ ಸತ್ತುಬಿದ್ದರು. ಮತ್ತೆ ಕೆಲವರು ಮೂರ್ಛೆಗೊಂಡರು. ಇನ್ನು ಕೆಲವರು ರಕ್ತದಲ್ಲಿ ನೆನೆದರು. ಉಳಿದವರು ಓಡತೊಡಗಿದರು. ಹೀಗೆ ಧನುರ್ಧಾರಿಯಾದ ಧೂಮ್ರಾಕ್ಷನು ನಗುತ್ತ, ವಾನರಸೇನೆಯನ್ನು ಮುರಿಯುತ್ತ ಯುದ್ಧಭೂಮಿಯಲ್ಲಿ ತಾನೇ ತಾನಾಗಿ ಸಂಚರಿಸಿದನು.

ವಾನರಸೇನೆ ಹೀಗೆ ನಾಶವಾಗುತ್ತಿದ್ದುದನ್ನು ನೋಡಿ ಹನುಮಂತನು ದೊಡ್ಡದೊಂದು ಬಂಡೆಯನ್ನು ಹಿಡಿದುಕೊಂಡು ಕೋಪದಿಂದ ಧೂಮ್ರಾಕ್ಷನನ್ನು ಎದುರಿಸಿ ಅವನ ರಥದ ಮೇಲೆ ಆ ಬಂಡೆಯನ್ನು ಎಸೆದನು. ಬೀಳುತ್ತಿರುವ ಬಂಡೆಯನ್ನು ಕಂಡು ರಾಕ್ಷಸನು ಸಂಭ್ರಮದಿಂದ ತೇರಿನಿಂದ ಧುಮುಕಿ ಗದೆಯನ್ನು ಹಿಡಿದು ನಿಂತನು. ಹನುಮಂತನು ಬೀಸಿದ ಬಂಡೆಯಿಂದ ರಾಕ್ಷಸನ ತೇರು ಕತ್ತೆಸಹಿತವಾಗಿ ಮುರಿದು ಬಿತ್ತು. ಅನಂತರ ಹನುಮಂತನು ವೃಕ್ಷಗಳನ್ನು ಹಿಡಿದು ರಾಕ್ಷಸರನ್ನು ಕೊಂದು ಅವರಿಗೆ ಭಯವನ್ನುಂಟುಮಾಡಿದನು. ಆ ಬಳಿಕ ಹನುಮಂತನು ಗದೆ ಹಿಡಿದು ಅಟ್ಟಿಬರುತ್ತಿರುವ ಧೂಮ್ರಾಕ್ಷನನ್ನು ಬೆಟ್ಟದಿಂದ ಹೊಡೆದನು. ಆ ಏಟನ್ನು ಸಹಿಸದೆ ಧೂಮ್ರಾಕ್ಷನು ಭೂಮಿಯಲ್ಲಿ ಮಲಗಲು, ರಾಕ್ಷಸರು ಹೆದರಿ ಲಂಕೆಯನ್ನು ಹೊಕ್ಕರು. ಧೂಮ್ರಾಕ್ಷನನ್ನು ಕೊಂದು ರಕ್ತದ ಹೊಳೆಯನ್ನು ಹರಿಯಿಸಿ ಹನುಮಂತನು ವಾನರರಿಗೆ ಸಂತೋಷವನ್ನು ತಂದನು.

ಧೂಮ್ರಾಕ್ಷನ ವಧೆಯನ್ನು ಕೇಳಿ ಕೋಪಗೊಂಡ ರಾವಣನು ರಾಮಲಕ್ಷ್ಮಣರನ್ನು ಜಯಿಸಲು ವಜ್ರದಂಷ್ಟ್ರನನ್ನು ಕಳುಹಿಸಿಕೊಟ್ಟನು. ಶೂರರಾದ ರಾಕ್ಷಸವೀರರು ಪರ್ವತಕ್ಕೆ ಸಮಾನವಾದ ಆನೆಗಳನ್ನು ಏರಿ, ಬಂಗಾರದ ತೇರನ್ನು ಏರಿ ಹೊರಟ ಮಾಯಾವಿಯಾದ ವಜ್ರದಂಷ್ಟ್ರನನ್ನು ಅನುಸರಿಸಿ ಹೊರಟರು. ಧೂಮ್ರಾಕ್ಷನಿಗುಂಟಾದ ಅಪಶಕುನಗಳೆ ವಜ್ರದಂಷ್ಟ್ರನಿಗೂ ಆದುವು. ಆದರೂ ಅವನು ಅವುಗಳನ್ನು ಲೆಕ್ಕಿಸದೆ ಧೈರ್ಯ ತಂದುಕೊಂಡು ಅಂಗದನಿದ್ದ ದಿಕ್ಕಿಗೆ ಹೊರಟನು. ರಾಕ್ಷಸರನ್ನು ನೋಡಿದೊಡನೆಯೆ ವಾನರರು ಹರ್ಷದಿಂದ ಹುರಿಗೊಂಡು ಬಾಹುಯುದ್ಧವನ್ನು ಪ್ರಾರಂಭಿಸಿದರು. ಮತ್ತೊಮ್ಮೆ ವಾನರರಿಗೂ ರಾಕ್ಷಸರಿಗೂ ಘೋರಯುದ್ಧವಾಯಿತು. ವಜ್ರದಂಷ್ಟ್ರನಾದರೂ ವಾನರರನ್ನು ಹೆದರಿಸುತ್ತ ಪ್ರಳಯಕಾಲದಲ್ಲಿ ಪಾಶವನ್ನು ಧರಿಸಿದ ಯಮನಂತೆ ಯುದ್ಧಭೂಮಿಯಲ್ಲಿ ಸಂಚರಿಸಿದನು. ರಾಕ್ಷಸರೂ ಮೈಮೇಲೆ ಎಚ್ಚರವಿಲ್ಲದವರಾಗಿ ಕಪಿಗಳನ್ನು ಹೊಡೆದರು. ರಾಕ್ಷಸರ ಈ ಕಾರ್ಯವನ್ನು ಕಂಡು ಇಮ್ಮಡಿ ಆವೇಶಹೊಂದಿದ ಅಂಗದನು ಕೋಪದಿಂದ ಸಿಂಹವು ಕ್ಷುದ್ರ

ಮೃಗಗಳನ್ನು ತರಿಯುವಂತೆ ರಾಕ್ಷಸರನ್ನು ಹೊಡೆದನು. ಅಂಗದನ ಹೊಡೆತವನ್ನು ತಾಳಲಾರದೆ, ವಾಯುವಿನಿಂದ ಚೆದರಿಸಲ್ಪಟ್ಟ ಮೇಘದಂತೆ ರಾಕ್ಷಸಸೇನೆ ತತ್ತರಿಸಿ ಹೋಯಿತು.

ಈ ಸಮಯದಲ್ಲಿ ವಜ್ರದಂಷ್ಟ್ರನು ಬಾಣದ ಮಳೆಯನ್ನೆ ಸುರಿಸುತ್ತ ಅಂಗದ ನನ್ನು ಎದುರಿಸಿದನು. ತನ್ನ ಮೇಲೆ ಬೀಳುತ್ತಿದ್ದ ಬಾಣಗಳನ್ನು ನಿವಾರಿಸಿಕೊಂಡು, ರಕ್ತದಿಂದ ತೊಯ್ದು ಹೋಗಿದ್ದ ಅಂಗದನು ವಜ್ರದಂಷ್ಟ್ರನನ್ನು ಮರದಿಂದ ಹೊಡೆದನು. ಆದರೆ ವಜ್ರದಂಷ್ಟ್ರನು ಆ ಮರವನ್ನು ಬಾಣದಿಂದ ಕತ್ತರಿಸಲು ಮತ್ತೆ ಬೆಟ್ಟದಿಂದ ಅಂಗದನು ಅವನ ರಥವನ್ನು ಹುಡಿಗುಟ್ಟಿದನು. ಆ ಬಳಿಕ ಅವರಿಬ್ಬರಿಗೂ ಗದೆ ಯಿಂದಲೂ, ಮುಷ್ಟಿಯಿಂದಲೂ ಯುದ್ಧ ಜರುಗಿತು. ಜಯವನ್ನು ಬಯಸಿ ಅಂಗದ ವಜ್ರದಂಷ್ಟ್ರರು ಬಹುಕಾಲ ಹೋರಾಡಿದರು. ಕೊನೆಗೆ ಅಂಗದನು ಹರಿತವಾದ ಖಡ್ಗ ವನ್ನು ಸೆಳೆದು ವಜ್ರದಂಷ್ಟ್ರನ ತಲೆಯನ್ನು ಕತ್ತರಿಸಿದನು. ವಜ್ರದಂಷ್ಟ್ರನ ಸಾವನ್ನು ಕಂಡು ರಾಕ್ಷಸರು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಲಂಕೆಗೆ ಓಡಿಹೋದರು.

ವಜ್ರದಂಷ್ಟ್ರನ ವಧೆಯನ್ನು ಕೇಳಿ ರಾವಣನು ಪರಾಕ್ರಮಿಯೂ ಯುದ್ಧ ಪ್ರಿಯನೂ ಆದ ಅಕಂಪನನನ್ನು ರಾಮಲಕ್ಷ್ಮಣರೊಡನೆ ಯುದ್ಧ ಮಾಡಲು ಕಳುಹಿಸಿ ಕೊಟ್ಟನು. ರಾವಣನ ಆಜ್ಞೆಯಂತೆ, ಮುಗಿಲಿನ ಬಣ್ಣವುಳ್ಳ ಆತನು ಚಿನ್ನದ ಕುಂಡಲು ಗಳಿಂದ ಶೋಭಿಸುತ್ತ ದೊಡ್ಡ ರಥವನ್ನೇರಿ ಭಯಂಕರರಾದ ರಾಕ್ಷಸರಿಂದ ಸುತ್ತುವರಿದು ಯುದ್ಧಕ್ಕೆ ನಡೆದನು. ದೇವತೆಗಳಿಗೂ ಹೆದರದ, ಹೆಸರಿಗೆ ತಕ್ಕಂತಿದ್ದ ಅಕಂಪನನು ರಾಕ್ಷಸರ ನಡುವೆ ಸೂರ್ಯನಂತೆ ಹೊಳೆಯುತ್ತಿದ್ದನು. ಯುದ್ಧಕ್ಕೆ ಹೊರಟ ಅಕಂಪನನ ಎಡಗಣ್ಣು ಅದುರಿತು. ಕತ್ತು ಬಿಗಿಯಿತು. ಮುಖದ ಕಾಂತಿ ಕುಗ್ಗಿತು. ಮೋಡಗಳು ಸೂರ್ಯನನ್ನು ಮುಚ್ಚಿ ಕತ್ತಲೆಯನ್ನುಂಟುಮಾಡಿದುವು. ರಥದ ಕುದುರೆಗಳು ಮುಗ್ಗರಿಸಿದುವು. ಆದರೆ ಈ ಶಕುನಗಳಿಗೆ ಹೆದರದೆ ರಾಕ್ಷಸವೀರನು ಮುಂದೆ ನುಗ್ಗಿದನು.

ವಾನರಸೇನೆಗೂ ರಾಕ್ಷಸಸೇನೆಗೂ ಯುದ್ಧ ಮೊದಲಾಯಿತು. ರಾಕ್ಷಸರ ಮತ್ತು ವಾನರರಕಾಲಿನ ಹೊಡೆತದಿಂದುಂಟಾದ ರೇಸಿಮೆಯಂತಹ ಧೂಳು ಭೂಮಿಆಕಾಶಗಳನ್ನು ವ್ಯಾಪಿಸಿತು.ಆಧೂಳಿನಿಂದ ಒಬ್ಬರನೊಬ್ಬರು ನೋಡಲಾಗಲಿಲ್ಲ. ರಥವಾಗಲಿ ಆನೆಕುದುರೆ ಗಳಾಗಲಿ ಬಾವುಟಗಳಾಗಲಿ ಕಾಣಿಸಲಿಲ್ಲ. ಈ ಧೂಳಿನ ಕೋಲಾಹಲದಲ್ಲಿ ರಾಕ್ಷಸರು ರಾಕ್ಷಸರನ್ನೇ ಹೊಡೆದರು. ವಾನರರು ವಾನರರನ್ನೇ ಹೊಡೆದರು. ಅಂತೂ ಇಬ್ಬರಿಗೂ ಭಯಂಕರವಾದ ಯುದ್ಧವಾಗಿ ರಣರಂಗವು ಶವಗಳಿಂದ ತುಂಬಿಹೋಯಿತು. ಆ ಸಮ ಯದಲ್ಲಿ ಅಕಂಪನನನ್ನು ರಾಕ್ಷಸರನ್ನು ಉತ್ಸಾಹಗೊಳಿಸಿದನು. ಹಾಗೆಯೇ ತಾನೂ ಮದಿಸಿ, ರಥದಲ್ಲಿ ಕುಳಿತು ಬಿಲ್ಲನ್ನು ಧ್ವನಿಮಾಡುತ್ತ, ವಾನರವೀರರ ಮೇಲೆ ಬಾಣದ ಮಳೆ ಕರೆದನು. ಅವನ ಬಾಣಗಳೆದುರಿಗೆ ಕಪಿಗಳು ನಿಲ್ಲದಾದರು. ಅಕಂಪನನಿಂದ ಕಪಿಗಳಿಗಾಗುತ್ತಿದ್ದ ಅವಸ್ಥೆಯನ್ನು ಕಂಡು ಹನುಮಂತನು ಅವನ ಮೇಲೆ ನುಗ್ಗಿ ಬಂದನು.

ಆಗ ವಾನರವೀರರು ಅಂಜನೇಯನನ್ನು ಸುತ್ತುವರಿದು ನಿಂತರು. ಅಕಂಪನನು ಆತನನ್ನು ಬಾಣಗಳಿಂದ ನೋಯಿಸಲು, ಆತನು ಆ ರಾಕ್ಷಸನನ್ನು ಕೊಲ್ಲಲು ನಿಶ್ಚೈಸಿ ಹೊಳೆಯುತ್ತಿರುವ ಅಗ್ನಿಯಂತೆ ಅವನ ಇದಿರಾಗಿ ಓಡಿಬಂದನು. ಬೆಟ್ಟವೊಂದನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತ ದೇವೇಂದ್ರನು ವಜ್ರಾಯುಧದಿಂದ ವೃತ್ರಾಸುರನನ್ನು ಹೊಡೆದಂತೆ ಹನುಮಂತನು ಅಕಂಪನನನ್ನು ಹೊಡೆದನು. ಆದರೆ ರಾಕ್ಷಸನ ಬಾಣಗಳಿಂದ ಅದು ಪುಡಿ ಪುಡಿಯಾಯಿತು. ಕ್ರೋಧದಿಂದ ತಪ್ತನಾದ ಮಾರುತಿ ವೃಕ್ಷವೊಂದನ್ನು ಕಿತ್ತು ಯಮನಂತೆ ರಾಕ್ಷಸರನ್ನು ಸಂಹರಿಸತೊಡಗಿದನು. ಅಲ್ಲದೆ ಶರದಿಂದ ತನ್ನನ್ನು ಹೊಡೆದ ಅಕಂಪನನನ್ನೂ ತಲೆಯ ಮೇಲೆ ಹೊಡೆದನು. ಆ ಹೊಡೆತದ ರಭಸವನ್ನು ತಾಳಲಾರದೆ ರಾಕ್ಷಸನು ಕೆಳಕ್ಕೆ ಬಿದ್ದು ಮರಣ ಹೊಂದಿದನು. ಸತ್ತ ರಾಕ್ಷಸವೀರನನ್ನು ಕಂಡು, ಉಳಿದವರು ಬೆಟ್ಟ ಮಂಡೆಗಳಿಂದ ಬಾರಿಬಾರಿಗೂ ಭಯದಿಂದ ತತ್ತರಿಸಿ ಹಿಂದು ಮುಂದು ನೋಡುತ್ತ ಲಂಕೆಗೆ ಓಡಿಹೋದರು. ಇತ್ತ ಗೆದ್ದ ವಾನರರು ಹನುಮಂತನನ್ನು ಕೊಂಡಾಡಿ ಸಿಂಹನಾದ ಮಾಡಿದರು.

---

## ೧೦

# ಪ್ರಹಸ್ತನ ಮರಣ

ಅಕಂಪನನ ಮರಣವನ್ನು ಕೇಳಿ ರಾವಣನ ಮುಖ ಕಂದಿಹೋಯಿತು. ಕ್ಷಣಕಾಲ ಚಿಂತಿಸಿ, ಮಂತ್ರಿಗಳೊಡನೆ ಮುಂದಿನ ಕಾರ್ಯವನ್ನು ಕುರಿತು ಆಲೋಚನೆಮಾಡಿ, ಆ ದಿನ ಮಧ್ಯಾಹ್ನದವರೆಗೂ ನಗರದ ಮುಖ್ಯವಾದ ಸೇನಾನಿವೇಶಗಳನ್ನು ಪರೀಕ್ಷೆಮಾಡಿದನು. ಆ ಬಳಿಕ ಯುದ್ಧದಲ್ಲಿ ನಿಪುಣನಾದ ಪ್ರಹಸ್ತನನ್ನು ಕುರಿತು "ಪ್ರಹಸ್ತ, ಶತ್ರುಗಳು ನಗರವನ್ನು ಮುತ್ತಿರುವ ವೇಳೆಯಲ್ಲಿ ಯುದ್ಧ ಮಾಡದೆ ಬೇರೆ ವಿಧಿಯಿಲ್ಲ. ನಾನು, ಕುಂಭಕರ್ಣ, ಇಂದ್ರಜಿತ್ತು ಮತ್ತು ನೀನು ಈಗ ಈ ಯುದ್ಧದ ಭಾರವನ್ನು ವಹಿಸಲೆ ಬೇಕಾಗಿದೆ. ಆದ್ದರಿಂದ ರಾಕ್ಷಸಸೇನೆಯೊಡನೆ ಈಗ ಯುದ್ಧಕ್ಕಾಗಿ ಹೊರಡು. ನಿನ್ನನ್ನು ಕಂಡು ವಾನರಸೇನೆ ಅಪಜಯದಿಂದ ಓಡಿಹೋಗುವುದರಲ್ಲಿ ಸಂದೇಹವಿಲ್ಲ. ಸಿಂಹವನ್ನು ಕಂಡ ಆನೆಗಳಂತೆ ವಾನರಸೇನೆ ಓಡಿ ಹೋಗಲು ರಾಮಲಕ್ಷ್ಮಣರು ಸುಲಭವಾಗಿಯೆ ನಿನ್ನ ವಶರಾಗುತ್ತಾರೆ. ಯುದ್ಧಕಾಲದಲ್ಲಿ ಮರಣವುಂಟಾದರೆ ಅದಕ್ಕಿಂತಲೂ ಮಿಗಿಲಾದ ಶ್ರೇಯಸ್ಸು ಮತ್ತೇನಿದೆ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?" ಎಂದನು.

ಶುಕ್ರಾಚಾರ್ಯರು ರಾಕ್ಷಸೇಂದ್ರನಿಗೆ ಬುದ್ಧಿ ಹೇಳುವಂತೆ, ಪ್ರಹಸ್ತನು ರಾವಣನಿಗೆ ಈ ರೀತಿ ನುಡಿದನು. "ಈ ವಿಷಯವನ್ನು ಮಂತ್ರಿಗಳೊಡನೆ ಆಲೋಚಿಸಿ ಈ ರೀತಿ ನಿಶ್ಚಯಕ್ಕೆ ಬಂದಿದ್ದೇನೆ. ಈ ಸಂದರ್ಭದಲ್ಲಿ ಸೀತೆಯನ್ನು ರಾಮನಿಗೊಪ್ಪಿಸುವುದೆ ಲೇಸು. ಹಾಗಲ್ಲದಿದ್ದರೆ ಯುದ್ಧ ಮಾಡದೆ ವಿಧಿಯಿಲ್ಲ. ನಿನ್ನಿಂದ ಇದುವರೆಗೂ ಸತ್ಕೃತನಾಗಿರುವ ನಾನು, ನಿನಗೆ ಹಿತವನ್ನೇ ಮಾಡಬಯಸುತ್ತೇನೆ. ಯುದ್ಧದಲ್ಲಿ ಪ್ರಾಣವನ್ನು ಒಪ್ಪಿಸಲೂ ಹಿಂಜರಿಯುವುದಿಲ್ಲ" ಹೀಗೆಂದು ನುಡಿದು ತನ್ನ ಸೇನೆಗೆ ಯುದ್ಧಕ್ಕೆ ಸಿದ್ಧವಾಗಲು ಅಪ್ಪಣೆ ಮಾಡಿದನು. ಕ್ಷಣಮಾತ್ರದಲ್ಲಿ ಲಂಕಾ ನಗರವೆಲ್ಲ ರಾಕ್ಷಸರಿಂದ ತುಂಬಿಹೋಯಿತು. ಅಗ್ನಿಯನ್ನು ಪೂಜಿಸಿ, ಬ್ರಾಹ್ಮಣರಿಗೆ ನಮಸ್ಕರಿಸಿ, ರಾವಣನ ಅಪ್ಪಣೆಯನ್ನು ಬೇಡಿ ಪ್ರಹಸ್ತನು ಯುದ್ಧಕ್ಕೆ ಹೊರಟನು. ಆಗ ರಣಭೇರಿಯನ್ನು ಭಯಂಕರವಾಗಿ ಹೊಡೆಯಲಾಯಿತು. ಬಂಗಾರದ ಒಡವೆಗಳಿಂದ ಅಲಂಕೃತವಾದ, ಸರ್ಪಧ್ವಜದಿಂದ ಶೋಭಿತವಾದ, ಎಲ್ಲ ಸಾಮಗ್ರಿಗಳಿಂದ ತುಂಬಿದ ರಥವನ್ನೇರಿ ಪ್ರಹಸ್ತನು ಹೊರಟನು. ಅವನ ಮುಂದೆ ರಾಕ್ಷಸವೀರರು ಶಂಖದುಂದುಭಿಗಳನ್ನು ಬಾರಿಸುತ್ತ, ಸಿಂಹನಾದಮಾಡುತ್ತ ಮುನ್ನುಗ್ಗಿದರು. ನಗರದ ಪೂರ್ವದ್ವಾರದಿಂದ ರಾಕ್ಷಸಸೇನೆ ರಣರಂಗಕ್ಕೆ ಹೊರಡಲು, ಮಾಂಸವನ್ನು ತಿನ್ನುವ ಪಕ್ಷಿಗಳು ಅಂತರಿಕ್ಷದಲ್ಲಿ ರಥಗಳನ್ನು ಅಪ್ರದಕ್ಷಿಣವಾಗಿ ಸುತ್ತಿದುವು. ನರಿಗಳು ಬೆಂಕಿಯನ್ನು ಉಗುಳುತ್ತ ಕೂಗಿದುವು. ಮುಗಿಲಿನಿಂದ ಉಲ್ಕೆಗಳು ಉದುರಿದುವು. ಪ್ರಹಸ್ತನ ರಥದ ಮೇಲೆ ರಕ್ತದ ಮಳೆ ಸುರಿಯಿತು. ಅವನ ಸಾರಥಿಯ ಚಾಟಿ ಇದ್ದಕ್ಕಿದ್ದಂತೆ ಬಿದ್ದುಹೋಯಿತು. ಕುದುರೆಗಳು ಮುಗ್ಗುರಿಸಿದುವು. ಆದರೆ ಪ್ರಹಸ್ತನು ಇವುಗಳನ್ನು ಲಕ್ಷಿಸದೆ ಜಯಪಡೆಯುವ ಆಸೆಯಿಂದ ವಾನರಸೇನೆಗೆ ಇದಿರಾಗಿ ಬಂದನು.

ಇತ್ತ ಶ್ರೀರಾಮನಿಗೆ ರಾವಣನ ಸೈನ್ಯದ ಮೂರನೆಯ ಒಂದು ಭಾಗಕ್ಕೆ ಪ್ರಹಸ್ತನೆ ಸೇನಾಪತಿ ಎಂಬ ವಿಷಯ ವಿಭೀಷಣನಿಂದ ತಿಳಿಯಿತು. ಪ್ರಹಸ್ತನು ವೀರ; ಅಸ್ತ್ರಗಳನ್ನು ಚೆನ್ನಾಗಿ ತಿಳಿದವನು; ಯುದ್ಧದಲ್ಲಿ ನಿಪುಣ ಎಂಬುದೂ ತಿಳಿಯಿತು. ಅಷ್ಟರಲ್ಲಿಯೆ ಕತ್ತಿ ಒನಕೆ ಮುಂತಾದ ನಾನಾ ಆಯುಧವನ್ನು ಧರಿಸಿದ ರಾಕ್ಷಸಸೇನೆ ಎದುರಾಯಿತು. ವಾನರರೂ ಯುದ್ಧಮಾಡಲು ಬಯಸಿ ಹೂಬಿಟ್ಟ ಮರಗಳನ್ನೂ ಅಗಲವೂ ಉದ್ದವೂ ಆದ ಕಲ್ಲುಗಳನ್ನೂ ಹಿಡಿದು ನಿಂತರು.

ರಾಕ್ಷಸರಿಗೂ ವಾನರರಿಗೂ ಮೊದಲಾದ ಅಂದಿನ ಯುದ್ಧದಲ್ಲಿ ರಾಕ್ಷಸರು ಬಾಣದ ಮಳೆಯನ್ನು ಕರೆದು ವಾನರರನ್ನು ನೋಯಿಸಿದರು. ವಾನರರೂ ಪ್ರತಿಯಾಗಿ ಕಲ್ಲುಗಳನ್ನಿಟ್ಟು, ರಾಕ್ಷಸರನ್ನು ಹೊಡೆದರು. ಎದೆ ಒಡೆದು ಬಿದ್ದ ರುಂಡಮುಂಡಗಳು ಬೇರೆಯಾದ ಎರಡೆರಡು ಸೀಳಾಗಿ ಬಿದ್ದ ವೀರರಿಗೆ ಲೆಕ್ಕವೆ ಇಲ್ಲ. ಮುಖದಿಂದ ರಕ್ತವನ್ನು ಕಾರುತ್ತ ಚೀರಿಡುತ್ತ ಒಬ್ಬರೊಬ್ಬರು ಹೋರಾಡಿದರು. ವಾನರರು ಹೋರಾಡಲು ತಂದ ಶೈಲ ವೃಕ್ಷಗಳೊಡನೆ ಸತ್ತುಬಿದ್ದ ವೀರರ ಹೆಣದ ರಾಶಿ ಪರ್ವತದಂತೆ ತೋರುತ್ತಿತ್ತು. ಪ್ರಹಸ್ತನ ಮಂತ್ರಿಗಳಾದ ನರಾಂತಕ, ಕುಂಭಹನು, ಮಹಾನಾದ ಮತ್ತು ಸಮುನ್ನತರು ಅನೇಕ ವಾನರರನ್ನು ಕೊಂದು ತಾವೂ ಪ್ರಾಣಬಿಟ್ಟರು. ತನ್ನ ಮಂತ್ರಿಗಳು ಸತ್ತುದನ್ನು ಕಂಡ ಪ್ರಹಸ್ತನು ಕೋಪದಿಂದ ಬಿಲ್ಲನ್ನು ಹಿಡಿದು ತಾನೆ ಯುದ್ಧಕ್ಕೆ ಬಂದನು. ಬಿಲ್ಲನ್ನು ಭಯಂಕರವಾಗಿ ಧ್ವನಿ ಮಾಡುತ್ತ, ವಾನರರನ್ನು ಕೊಲ್ಲುತ್ತಿದ್ದ ಪ್ರಹಸ್ತನನ್ನು ನೋಡಿ, ನೀಲನೆಂಬ ವಾನರವೀರನು ಅವನನ್ನು ಎದುರಿಸಿದನು. ಬಿಲ್ಲನ್ನು ಸೆಳೆದು ಬಿಟ್ಟೊಡನೆ ಸರ್ಪಗಳಿಗೆ ಸಮಾನವಾದ ಪ್ರಹಸ್ತನ ಬಾಣಗಳು ನೀಲನನ್ನು ನೋಯಿಸಿದುವು. ಆಗ ನೀಲನು ದೊಡ್ಡದೊಂದು ಮರವನ್ನು ಕಿತ್ತು ಪ್ರಹಸ್ತನನ್ನು ಹೊಡೆದನು. ಮತ್ತೆ ಪ್ರಹಸ್ತನು ಬಾಣಗಳನ್ನು ಬಿಡಲು, ಶರತ್ಕಾಲದಲ್ಲಿ ಬಂದ ಮಳೆಯನ್ನು ಗೂಳಿ ಕಣ್ಣು ಮುಚ್ಚಿಕೊಂಡು ಸಹಿಸುವಂತೆ, ನೀಲನು ಅವುಗಳನ್ನು ಸಹಿಸಿದನು. ಆ ಬಳಿಕ ನೀಲನು ಸಾಲವೃಕ್ಷದಿಂದ ಪ್ರಹಸ್ತನ ಕುದುರೆಗಳನ್ನು ಕೊಂದು, ಹಾರಿ ನೆಗೆದು ಅವನ ಕೈಯಿಂದ ಬಲಾತ್ಕಾರವಾಗಿ ಬಿಲ್ಲನ್ನು ಸೆಳೆದು ಮುರಿದುಹಾಕಿ ಸಿಂಹನಾದ ಮಾಡಿದನು. ಬಿಲ್ಲು ಮುರಿದು, ಕುದುರೆ ಸಾಯಲು, ರಥದಿಂದ ಪ್ರಹಸ್ತನು ಧುಮುಕಿ ಒನಕೆಯಂತಹ ಮುಸಲಾಯುಧವನ್ನು ಹಿಡಿದು ಯುದ್ಧಕ್ಕೆ ನಿಂತನು. ಹುಟ್ಟು ಹಗೆಗಳಾದ ಆನೆಗಳಂತೆ ಅವರಿಬ್ಬರೂ ಕಾಣಿಸಿಕೊಂಡರು. ರಕ್ತದಿಂದ ತೊಯ್ದ ದೇಹವುಳ್ಳ ಅವರಿಬ್ಬರೂ ಬಹುಕಾಲ ವೃತ್ರಾಸುರ ದೇವೇಂದ್ರರಂತೆ ಹೋರಾಡಿದರು. ಆಗ ಕೋಪದಿಂದ ಪ್ರಹಸ್ತನು ತನ್ನ ಒನಕೆಯನ್ನೆತ್ತಿ ನೀಲನಿಗೆ ಇದಿರಾಗಿ ಬಿರಲು, ದೊಡ್ಡದೊಂದು ಕಲ್ಲನ್ನೆತ್ತಿಕೊಂಡು ನೀಲನು ಅವನನ್ನು ಹೊಡೆದನು. ತಲೆಗೆ ತಗುಲಿದ ಆ ಕಲ್ಲಿನ ಹೊಡೆತದಿಂದ ಪ್ರಹಸ್ತನ ತಲೆ ಚೂರುಚೂರಾಗಿ ಅವನು ಪ್ರಾಣಬಿಟ್ಟನು. ಬುಡ ಕತ್ತರಿಸಲು ಬೀಳುವ ಮರದಂತೆ ರಕ್ತ ಸುರಿಯುತ್ತ ಸೇನಾಪತಿ ಸಾಯಲು ರಾಕ್ಷಸರು ಹೆದರಿ ಲಂಕೆಗೆ ಓಡಿಹೋದರು. ಕಟ್ಟೆಯೊಡೆದ ಕೆರೆಯ ನೀರಿನಂತೆ ಅವರು ಅಲ್ಲಿ ನಿಲ್ಲಲಾಗಲಿಲ್ಲ.

---

೧೧

# ರಾಮ ರಾವಣರ ಮೊದಲನೆಯ

# ಯುದ್ಧ—ರಾವಣನ ಪರಾಜಯ

ಯುದ್ಧದಲ್ಲಿ ಪ್ರಹಸ್ತನು ಮಡಿದನೆಂಬ ಸಮಾಚಾರವನ್ನು ಕೇಳಿ ಕ್ಷಣಕಾಲ ರಾವಣನು ದುಃಖಕ್ಕೀಡಾದನು. ಆ ಬಳಿಕ ಕೋಪದಿಂದ ಅವನು ರಾಕ್ಷಸವೀರರಿಗೆ "ಚತುರಂಗ ಸೇನೆಯೊಡಗೂಡಿ ಯುದ್ಧಕ್ಕೆ ಹೊರಟ ಪ್ರಹಸ್ತನು ವಾನರರಿಂದ ಮಡಿದನಲ್ಲವೆ ? ಹಗೆ ಪ್ರಬಲನಾಗಿರುವ ಕಾರಣ, ಅವನ ವಿಷಯದಲ್ಲಿ ನಾವು ಉದಾಸೀನರಾಗಿರಕೂಡದು. ಹಗೆಯನ್ನು ಗೆಲ್ಲುವುದಕ್ಕೆ ನಾನೇ ರಣರಂಗಕ್ಕೆ ಹೋಗುತ್ತೇನೆ. ಕಾಡುಕಿಚ್ಚು ವನವನ್ನು ಸುಡುವಂತೆ, ರಾಮಲಕ್ಷ್ಮಣರನ್ನೂ ಕಪಿಸೇನೆಯನ್ನೂ ನನ್ನ ಬಾಣಗಳಿಂದಲೇ ಸುಡುತ್ತೇನೆ" ಎಂದು ನುಡಿದು, ಅಗ್ನಿಯಂತೆ ಹೊಳೆಯುವ, ಉತ್ತಮವಾದ ಕುದುರೆಗಳನ್ನು ಕಟ್ಟಿದ ರಥವನ್ನು ಏರಿದನು. ಆಗ ಶಂಖದುಂದುಭಿಗಳನ್ನು ಬಾರಿಸಿದರು. ರಾವಣನ ಬಿರುದುಗಳನ್ನು ಹೊಗಳಿದರು. ರಾಕ್ಷಸರಿಂದ ಸುತ್ತುವರಿದ ರಾವಣನು ಭೂತಗಳಿಂದ ಸುತ್ತುವರಿದ ರುದ್ರನಂತೆ ಹೊಳೆಯುತ್ತ, ಸಮುದ್ರಕ್ಕೆ ಸಮಾನವಾದ ಕಪಿಸೇನೆಗೆ ಇದಿರಾಗಿ ನಡೆದನು.

ತನ್ನೆದುರಿಗೆ ಬರುತ್ತಿದ್ದ ಕ್ರೂರವಾದ ರಾಕ್ಷಸಸೇನೆಯನ್ನು ಕಂಡು ಅದು ಯಾರಸೇನೆಯೆಂದು ಶ್ರೀರಾಮನು ವಿಭೀಷಣನನ್ನು ಕೇಳಿದನು. ವಿಭೀಷಣನು ರಾವಣನ ಸೇನೆಯಲ್ಲಿ ಅಕಂಪನ, ಇಂದ್ರಜಿತ್ತು, ಅತಿಕಾಯ, ಮಹೋದರ, ತ್ರಿಶಿರ, ಕುಂಭ, ನಿಕುಂಭ ಮುಂತಾದ ವೀರರನ್ನು ತೋರಿಸಿ, ಶ್ವೇತಚ್ಛತ್ರದ ಕೆಳಗೆ ಬರುತ್ತಿದ್ದ ದೇವತೆಗಳನ್ನು ಗೆದ್ದ ಮಹಾನುಭಾವನಾದ ರಾವಣನನ್ನು ತೋರಿಸಿದನು. ರಾವಣನನ್ನು ನೋಡಿ ಶ್ರೀರಾಮ ವಿಭೀಷಣನಿಗೆ ಈ ರೀತಿ ನುಡಿದನು. "ರಾವಣನ ತೇಜಸ್ಸು ಆಶ್ಚರ್ಯವನ್ನುಂಟುಮಾಡುತ್ತಿದೆ. ಸೂರ್ಯನಂತಿರುವ ಇವನ ತೇಜಸ್ಸನ್ನು ನೋಡಲಸಾಧ್ಯ. ದೇವದಾನವರಲ್ಲಿಯೂ ಈ ತೆರನಾದ ರೂಪ ಇರಲಾರದು. ಪರ್ವತಾಕಾರರಾದ ಇವನ ಭಟರು ತೇಜಸ್ವಿಗಳಾಗಿದ್ದಾರೆ. ಇವರಿಂದ ಸುತ್ತುವರಿದ ಇವನು ಯಮನಂತೆ ಶೋಭಿಸುತ್ತಿದ್ದಾನೆ. ಸೀತಾಪಹರಣದಿಂದ ಉಂಟಾದ ಕ್ರೋಧವನ್ನು ನಾನು ಈಗ ಇವನಲ್ಲಿ ತೀರಿಸಿಕೊಳ್ಳುತ್ತೇನೆ" ಹೀಗೆಂದು ನುಡಿದು ಬಿಲ್ಲನ್ನು ಹಿಡಿದು ಯುದ್ಧಸನ್ನದ್ಧನಾಗಿ ನಿಂತನು.

ಇತ್ತ ರಾವಣನು ಬರಿದಾದ ಪಟ್ಟಣವನ್ನು ವಾನರರು ಹಾಳುಮಾಡಬಹುದೆಂದು ಶಂಕಿಸಿ, ನಗರವನ್ನು ಕಾಯಲು ರಾಕ್ಷಸವೀರರನ್ನು ಕಳುಹಿಸಿಕೊಟ್ಟನು. ಆ ಬಳಿಕ ಅವನು

ತಿಮಿಂಗಿಲವು ಸಮುದ್ರವನ್ನು ಸೀಳುವಂತೆ ವಾನರಸೇನೆಯನ್ನು ಭೇದಿಸಿದನು. ಆಗ ಸುಗ್ರೀವನು ದೊಡ್ಡದೊಂದು ಬೆಟ್ಟವನ್ನೆತ್ತಿಕೊಂಡು ರಾವಣನಿಗಿದಿರಾಗಲು ರಾವಣನು ಅದನ್ನು ಬಾಣಗಳಿಂದ ಪುಡಿಮಾಡಿ, ಹರಿತವಾದ ಬಾಣವೊಂದರಿಂದ ಸುಗ್ರೀವನನ್ನು ಭೇದಿಸಿದನು. ಆ ಬಾಣದ ಏಟನ್ನು ಸಹಿಸಲಾರದೆ ಚೀರುತ್ತ ಸುಗ್ರೀವನು ಎಚ್ಚರ ತಪ್ಪಿ ನೆಲಕ್ಕುರುಳಿದನು. ಇದನ್ನು ಕಂಡು ರಾಕ್ಷಸರು ಸಂತೋಷ ದಿಂದ ಸಿಂಹನಾದಮಾಡಿದರು. ಸುಗ್ರೀವನು ಬಿದ್ದುದನ್ನು ಕಂಡು, ಬೆಟ್ಟಗಳನ್ನೆತ್ತಿ ಕೊಂಡು ಮೇಲುವಾಯ್ದು ಬಂದ ಗವಯ ಗವಾಕ್ಷ ಮುಂತಾದ ವಾನರವೀರರ ಗತಿಯೂ ಸುಗ್ರೀವನ ಗತಿಯೆ ಆಯಿತು. ರಾವಣನು ಕಪಿಸೇನೆಯನ್ನು ಬಾಣಗಳಿಂದ ಮುಚ್ಚಿ ಹೆದರಿಸಲು ಅವನ ಏಟನ್ನು ತಡೆಯಲಾರದೆ ವಾನರರು ಶ್ರೀರಾಮನನ್ನು ಮರೆಹೊಕ್ಕರು.

ರಾವಣನಿಂದ ಕಪಿಗಳನ್ನು ಕಾಪಾಡಲು ಶ್ರೀರಾಮನು ಬಿಲ್ಲನ್ನು ಹಿಡಿದು ಯುದ್ಧಕ್ಕೆ ಸಿದ್ಧನಾಗಲು, ಲಕ್ಷ್ಮಣನು ರಾವಣನನ್ನು ವಧಿಸಲು ತನಗೆ ಅಪ್ಪಣೆ ಕೊಡಬೇಕೆಂದು ಅಣ್ಣನನ್ನು ಕೈಮುಗಿದು ಬೇಡಿಕೊಂಡನು. "ಲಕ್ಷ್ಮಣ, ರಾವಣನು ಕೋಪಗೊಂಡರೆ ಮೂರುಲೋಕಗಳಲ್ಲಿ ಯಾರೂ ಅವನನ್ನು ಇದಿರಿಸಲಾರರು. ಇದರಲ್ಲಿ ಅನುಮಾನವೆ ಇಲ್ಲ. ಆದ್ದರಿಂದ ನಿನ್ನ ರಕ್ಷಣೆಯ ವಿಷಯದಲ್ಲಿ ಎಚ್ಚರಿಕೆಯಿಂದಿದ್ದು ಯುದ್ಧಮಾಡು" ಹೀಗೆಂದು ನುಡಿದು ತಮ್ಮನನ್ನು ಅಪ್ಪಿಕೊಂಡು ಬೀಳ್ಕೊಟ್ಟನು.

ಬಿಲ್ಲನ್ನು ಹಿಡಿದು ಯುದ್ಧಕ್ಕೆ ಹೊರಟ ಲಕ್ಷ್ಮಣನೊಡನೆ ಹನುಮಂತನು ಹಿಂಬಾಲಿಸಿ, ರಾವಣನ ಬಾಣಗಳೆಲ್ಲವನ್ನೂ ನಿವಾರಿಸಿಕೊಳ್ಳುತ್ತ ಅವನ ಇದಿರಾಗಿ ಬಂದನು. "ರಾವಣ, ದೇವದಾನವ ಯಕ್ಷಗಂಧರ್ವರು ನಿನ್ನನ್ನು ಕೊಲ್ಲಲಾರರೆಂಬುದು ನಿಜ. ಆದರೆ ಕಪಿಗಳೆಂದರೆ ನಿನಗೆ ಭಯವಲ್ಲವೆ? ಇಗೊ ನನ್ನ ಬಲಗೈ ಮುಷ್ಟಿಯಿಂದ ನಿನ್ನ ಪ್ರಾಣವನ್ನು ತೆಗೆಯುತ್ತೇನೆ. ನಿನ್ನ ಮಗನಾದ ಅಕ್ಷಕುಮಾರನನ್ನು ಕೊಂದುದನ್ನು ನೆನೆದುಕೊ" ಹೀಗೆಂದು ನುಡಿದ ಹನುಮಂತನ ವಿಷಯದಲ್ಲಿ ಕೋಪಗೊಂಡು ರಾವಣನು ಅವನನ್ನು ತನ್ನ ಬಲಗೈ ಮುಷ್ಟಿಯಿಂದ ಹೊಡೆದನು. ಆ ಹೊಡೆತದಿಂದ ಕ್ಷಣಕಾಲ ತತ್ತರಿಸಿ ಹೋದ ಹನುಮಂತನು ಅಂಗೈಯಿಂದ ರಾವಣನನ್ನು ಹೊಡೆಯಲು ಸಿಡಿಲು ಬಡಿದ ಬೆಟ್ಟದಂತೆ ರಾವಣನು ತತ್ತರಿಸಿ ಹೋದನು. ಹನುಮಂತನನ್ನು ಅವನ ಪರಾಕ್ರಮಕ್ಕಾಗಿ ಹೊಗಳಿ, ಮತ್ತೊಮ್ಮೆ ಬಲಮುಷ್ಟಿಯಿಂದ ಹನುಮಂತನ ಎದೆಗೆ ಹೊಡೆದನು. ಆ ಹೊಡೆತದಿಂದ ಚೇತನ ತಪ್ಪಿದ ಹನುಮಂತನ ಸಹಾಯಕ್ಕಾಗಿ ನೀಲನು ಬರಬೇಕಾಯಿತು. ಅವರಿಬ್ಬರಿಗೂ ನಡೆದ ಭಯಂಕರವಾದ ಯುದ್ಧದಲ್ಲಿ ರಾವಣನು ನೀಲನನ್ನು ಆಗ್ನೇಯಾಸ್ತ್ರದಿಂದ ಗಾಯಗೊಳಿಸಿದನು.

ಸುಗ್ರೀವಾದಿಗಳನ್ನು ತಡೆದು ರಾವಣನು ಲಕ್ಷ್ಮಣನ ಕಡೆ ನುಗ್ಗಿ ಬಿಲ್ಲನ್ನು ಧ್ವನಿಮಾಡಿದನು. ರಾವಣನನ್ನು ನೋಡಿ ಲಕ್ಷ್ಮಣನು ಹೇಳಿದನು: "ರಾವಣ,

ಕಪಿಗಳೊಡನೆ ನಿನಗೆ ಯುದ್ಧ ಸಲ್ಲದು, ನನ್ನೊಡನೆ ಬಾ." ಲಕ್ಷ್ಮಣನ ಮಾತಿಗೆ ಪ್ರತ್ಯುತ್ತರವಾಗಿ ರಾವಣನು ಹೇಳಿದನು: "ಲಕ್ಷ್ಮಣಾ, ನಿನಗೆ ಕೊನೆಗಾಲ ಹತ್ತಿರವಾಗಿರುವುದರಿಂದ ನನ್ನ ಕಣ್ಣಿಗೆ ಬಿದ್ದಿರುವೆ. ನನ್ನ ಬಾಣಗಳಿಂದ ಬಹು ಬೇಗ ನೀನು ಮರಣಹೊಂದುವೆ." ವೀರರು ತಮ್ಮನ್ನು ತಾವೆ ಹೊಗಳಿಕೊಳ್ಳರೆಂದೂ ಅವನ ಪರಾಕ್ರಮ ಈ ಮೊದಲೆ ತಿಳಿದಿದೆಯೆಂದೂ ಹೇಳಿ ಲಕ್ಷ್ಮಣನು ಏಳು ಬಾಣಗಳನ್ನು ಬಿಟ್ಟನು. ಲಕ್ಷ್ಮಣನ ಬಾಣಗಳನ್ನು ಕತ್ತರಿಸಿ ರಾವಣನು ಮತ್ತೆ ಬಾಣಗಳನ್ನು ಬಿಟ್ಟನು. ಹೀಗೆ ಕೆಲವು ಕಾಲ ಇಬ್ಬರಿಗೂ ಯುದ್ಧ ನಡೆಯಲು, ಕೋಪಗೊಂಡ ರಾವಣನು ಶಕ್ತ್ಯಾಯುಧದಿಂದ ಲಕ್ಷ್ಮಣನನ್ನು ಹೊಡೆದನು. ಬಾಣಗಳಿಂದ ಅದನ್ನು ತಡೆದರೂ ಉಪಯೋಗವಾಗದೆ ಅದು ಲಕ್ಷ್ಮಣನ ಎದೆಗೆ ನಾಟಿ ಅವನ ಪ್ರಜ್ಞೆಯನ್ನು ತಪ್ಪಿಸಿತು. ರಾವಣನು ಅವನ ಬಳಿಗೆ ಬಂದು ಲಕ್ಷ್ಮಣನನ್ನು ತನ್ನೆರಡು ತೋಳುಗಳಿಂದ ಎತ್ತಲು ಯತ್ನಿಸಿದರೂ, ಕೈಲಾಸವನ್ನು ಎತ್ತಿದವನಿಗೆ ಲಕ್ಷ್ಮಣನನ್ನು ಎತ್ತಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿಯೆ ಹನುಮಂತನು ಲಕ್ಷ್ಮಣನ ಸ್ಥಿತಿಯನ್ನು ಕಂಡು ಅವನ ಸಹಾಯಕ್ಕೆ ಬಂದು ಬಾಯಿ ಮೂಗುಗಳಿಂದ ರಕ್ತಕಾರುವಂತೆ ರಾವಣನನ್ನು ಹೊಡೆದನು. ಈ ಹೊಡೆತದಿಂದ ರಾವಣನು ಮೂರ್ಛೆಹೊಂದಲು, ಹನುಮಂತನು ಲಕ್ಷ್ಮಣನನ್ನು ಎತ್ತಿತಂದು ರಾಮನ ಬಳಿ ಮಲಗಿಸಿದನು. ಕೂಡಲೆ ಆ ಶಕ್ತ್ಯಾಯುಧವು ಲಕ್ಷ್ಮಣನನ್ನು ಬಿಟ್ಟು ಹೋಯಿತು. ಇತ್ತ ಮೂರ್ಛೆ ತಿಳಿದ ರಾವಣನೂ ಯುದ್ಧಕ್ಕೆ ಸಿದ್ಧನಾದನು.

ಲಕ್ಷ್ಮಣನು ಗುಣಗೊಂಡ ಮೇಲೆ ಶ್ರೀರಾಮನು, ಮಹಾವಿಷ್ಣು ಗರುಡನನ್ನೇರುವಂತೆ ಹನುಮಂತನ ಭುಜಗಳ ಮೇಲೆ ಕುಳಿತು ರಾವಣನನ್ನು ಎದುರಿಸಿದನು. ಶ್ರೀರಾಮನು ತನ್ನ ಬಿಲ್ಲನ್ನು ಧ್ವನಿಮಾಡಿ ರಾವಣನನ್ನು ಕುರಿತು ನುಡಿದನು: "ಎಲೈ ರಾಕ್ಷಸ ಶ್ರೇಷ್ಠನೆ, ನನಗೆ ಈ ತೆರನಾದ ಅಪಕಾರ ಮಾಡಿ ನೀನೆಲ್ಲಿಗೆ ಹೋಗುವೆ? ಇಂದ್ರ ಯಮ ಸೂರ್ಯರನ್ನಾಗಲಿ ದಶದಿಕ್ಕುಗಳನ್ನಾಗಲಿ ಮರೆಹೊಕ್ಕರೂ ನೀನು ಬದುಕಿಹೋಗಲಾರೆ. ಹಿಂದೆ ಜನಸ್ಥಾನದಲ್ಲಿ ವೀರರಾದ ರಾಕ್ಷಸರನ್ನು ಕೊಂದಂತೆ ನಿನ್ನನ್ನು ಕೊಲ್ಲುತ್ತೇನೆ." ರಾಮನ ಮಾತನ್ನು ಕೇಳಿ ಕೋಪಗೊಂಡ ರಾವಣನು ಹನುಮಂತನನ್ನು ಅಗ್ನಿಜ್ವಾಲೆಗೆ ಸಮಾನವಾದ ಬಾಣಗಳಿಂದ ಹೊಡೆದನು. ಇದರಿಂದ ಹನುಮಂತನ ತೇಜಸ್ಸು ಇಮ್ಮಡಿಸಿತೆ ಹೊರತು ಅವನಿಗೆ ಗಾಯವಾಗಲಿಲ್ಲ. ರಾವಣನು ಹನುಮಂತನನ್ನು ಗಾಯಗೊಳಿಸಿದುದನ್ನು ಕಂಡು ಕೋಪಗೊಂಡ ರಾಮನು ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ರಾವಣನ ಸಾರಥಿಯನ್ನು ಕೊಂದು, ತೇರನ್ನು ಪುಡಿಗುಟ್ಟಿ, ಬಿಲ್ಲನ್ನು ಕತ್ತರಿಸಿದನು. ಆ ಬಳಿಕ ಅವನ ಎದೆಗೆ ಹೊಡೆದು ಅವನನ್ನು ಗಾಯಗೊಳಿಸಿದನು. ರಾಮನ ಏಟಿನಿಂದ ರಾವಣನು ನಡುಗಿದನು. ಕೈಯಲ್ಲಿದ್ದ ಬಿಲ್ಲು ಜಾರಿತು. ಇನ್ನೊಂದು ಅರ್ಧಚಂದ್ರಾಕಾರವಾದ ಬಾಣದಿಂದ ರಾಮನು ರಾವಣನ ಕಿರೀಟವನ್ನು ಕತ್ತರಿಸಿ ಬೀಳಿಸಿದನು. ವಿಷವಿಲ್ಲದ ಸರ್ಪದಂತೆ,

ಶಾಂತನಾದ ಸೂರ್ಯನಂತೆ ರಣದಲ್ಲಿ ನಿಂತ ರಾವಣನನ್ನು ನೋಡಿ ರಾಮನು ಮೂದಲಿಸಿದನು. “ರಾವಣ ಯುದ್ಧದಿಂದ ನೀನು ಬಳಲಿರುವೆ. ಈಗಲೆ ನಿನ್ನನ್ನು ಕೊಲ್ಲಲು ನನಗೆ ಇಷ್ಟವಿಲ್ಲ. ಲಂಕೆಗೆ ಹೋಗಿ ವಿಶ್ರಮಿಸಿಕೊಂಡು ಬಾ. ಆಗ ನಿನ್ನ ಬಲವನ್ನು ನೋಡುತ್ತೇನೆ.” ರಥಸಾರಥಿಗೆಟ್ಟು ಬಿಲ್ಲೂ ಮುರಿದ ರಾವಣನು ಮದ ಕುಗ್ಗಿ ಲಂಕೆಯನ್ನು ಹೊಕ್ಕನು.

---

೧೨

## ಕುಂಭಕರ್ಣ ಪ್ರಬೋಧನ

ಶ್ರೀರಾಮಬಾಣದ ಪೆಟ್ಟಿನಿಂದ ರಾವಣನ ಮದವುಡುಗಿತು ; ಪರಿತಪಿಸುತ್ತಾ ಆತನು ಲಂಕೆಯನ್ನು ಪ್ರವೇಶಿಸಿದನು. ಮಾನವನಿಂದ ತನಗೆ ಭಯವಡಸುವುದೆಂದು ಬ್ರಹ್ಮನು ಹಿಂದೆ ಹೇಳಿದ್ದ ಮಾತು ಈಗ ಆತನ ಜ್ಞಾಪಕಕ್ಕೆ ಬಂದಿತು. ಅಲ್ಲದೆ ಹಿಂದೆ ತಾನು ಜೈತ್ರಯಾತ್ರೆಗಾಗಿ ಹೋಗುತ್ತಿದ್ದಾಗ ತಪೋನಿರತಳಾಗಿದ್ದ ವೇದವತಿಯನ್ನು ಕೆಣಕಿ ಆಕೆಯಿಂದ ಶಪಿತನಾಗಿದ್ದುದೂ, ಮೇರುಪರ್ವತವನ್ನು ಅಲ್ಲಾಡಿಸಹೊರಟಾಗ ಉಮಾದೇವಿಯೂ ನಂದೀಶ್ವರನೂ ಶಾಪವಿತ್ತುದೂ ಜ್ಞಪ್ತಿಗೆ ಬಂದುವು. ಅನೇಕ ಋಷಿಗಳನ್ನು ಸಂಕಟಪಡಿಸಿ ಅವರ ಶಾಪಕ್ಕೆ ಪಾತ್ರನಾಗಿದ್ದುದೂ ನೆನಪಾಯಿತು. ಬಹು ಜನರನ್ನು ತನ್ನ ಔದ್ಧತ್ಯದಿಂದ ಸಂಕಟಕ್ಕೆ ಗುರಿಪಡಿಸಿದ್ದ ಪಾಪ ಈಗ ಫಲ ಕೊಡಲು ಆರಂಭವಾಯಿತೆಂದು ಎನಿಸಿತು, ಆತನಿಗೆ. ಪ್ರಹಸ್ತನ ಮರಣವೂ ತನ್ನ ಅಪಜಯವೂ ಮುಂದೆ ಕಾದಿರುವ ವಿಪತ್ತಿನ ಸೂಚನೆಗಳೆಂದು ಆತನು ಭಾವಿಸಿದನು. ಆದರೂ ಹಿಡಿದ ಕೆಲಸವನ್ನು ಕೊನೆಮುಟ್ಟಿಸದೆ ಬಿಡುವ ಸ್ವಭಾವವಲ್ಲ, ರಾವಣನದು. ಆದ್ದರಿಂದ ಆತನು ಪಟ್ಟಣದ ಕಾವಲನ್ನು ಭದ್ರಪಡಿಸುವಂತೆ ಅಧಿಕಾರಿಗಳನ್ನು ನೇಮಿಸಿ, ನಿದ್ರೆಯಲ್ಲಿ ಮುಳುಗಿದ್ದ ಕುಂಭಕರ್ಣನನ್ನು ಎಬ್ಬಿಸಿ ಕರೆತರುವಂತೆ ದೂತರನ್ನಟ್ಟಿದನು.

ಕುಂಭಕರ್ಣನೆಂದರೆ ಯುದ್ಧದಲ್ಲಿ ಧ್ವಜಪ್ರಾಯನಾದವನು. ದೇವ ದಾನವ ಮಾನವರಲ್ಲಿ ಅವನನ್ನು ಇದಿರಿಸುವವರೆ ಇರಲಿಲ್ಲ. ಆದರೆ ಅವನು ಕೀಳುಸುಖಗಳಲ್ಲಿ ಲೋಲುಪ್ತನಾಗಿ ಸದಾ ನಿದ್ರೆಮಾಡುವುದರಲ್ಲಿಯೇ ಮುಳುಗಿರುತ್ತಿದ್ದನು. ಒಮ್ಮೆ ಮಲಗಿದನೆಂದರೆ ಆರು ತಿಂಗಳೊ ಏಳು ತಿಂಗಳೊ ಎಂಟು ತಿಂಗಳೊ ಮೇಲಕ್ಕೇಳುವಂತಿರ ಲಿಲ್ಲ. ಈಗ ಅವನು ಮಲಗಿ ಕೇವಲ ಒಂಬತ್ತು ದಿನಗಳಾಗಿದ್ದುವು. ತನ್ನನ್ನು ಎಚ್ಚರ ಗೊಳಿಸಕೂಡದೆಂದು ಹೇಳಿ ಅವನು ನಿದ್ರೆಹೋಗಿದ್ದನು. ಆದರೆ ಆತನನ್ನು ಎಬ್ಬಿಸು ವುದು ಅನಿವಾರ್ಯವಾದುದರಿಂದ ರಾವಣಾಸುರನು ಆ ಕಾರ್ಯಕ್ಕಾಗಿ ದೂತರನ್ನು ಅಟ್ಟ ಬೇಕಾಯಿತು. ಅವರು ರಕ್ತಮಾಂಸಗಳ ಭಾಂಡಗಳನ್ನೂ ಭಕ್ಷ್ಯಭೋಜ್ಯಗಳ ಬುಟ್ಟಿ ಗಳನ್ನೂ ಹೊತ್ತುಕೊಂಡು ಕುಂಭಕರ್ಣನ ಅರಮನೆಯ ಬಳಿಗೆ ಬಂದರು. ಅವನು ಎದ್ದೊಡನೆಯೆ ಅವನ ಹಸಿವನ್ನು ನೀಗುವುದಕ್ಕಾಗಿ ಇವು ಅಗತ್ಯವಾಗಿದ್ದುವು.

ಕುಂಭಕರ್ಣನ ಅರಮನೆ ಒಂದು ಯೋಜನ ವಿಸ್ತಾರವಾಗಿತ್ತು. ಅದರಲ್ಲಿ ಬಹುಭಾಗ ಒಂದು ಗುಹೆಯಂತಿತ್ತು. ಅದೇ ಅವನ ಶಯನಗೃಹ. ತಿನಿಯನ್ನು ಹೊತ್ತು ಬಂದ ರಾಕ್ಷಸರಿಗೆ ಅವನ ಮನೆಯ ಹೆಬ್ಬಾಗಿನಲ್ಲಿಯೆ ಅವನ ನಿದ್ರೆಯ ಬಿಸಿ ತಾಕಿತು. ನಿದ್ರೆಯಲ್ಲಿ ಅವನು ಬಿಡುತ್ತಿದ್ದ ನಿಶ್ವಾಸದ ಉಸಿರು ಅವರನ್ನು ಒಳಗೆ ಪ್ರವೇಶಿಸದಂತೆ ದಬ್ಬುತ್ತಿತ್ತು. ಆದರೂ ಅವರು ಕಷ್ಟಪಟ್ಟುಕೊಂಡು ಒಳಗೆ ಪ್ರವೇಶಿಸಿ

ಹರು. ದೊಡ್ಡ ಪರ್ವತವೊಂದು ಅಡ್ಡ ಬಿದ್ದಂತೆ ಮಲಗಿದ್ದ ಆ ರಾಕ್ಷಸನ ದೇಹದ ರೋಮಗಳು ನಿಮಿರಿ ನೆಟ್ಟಗೆ ನಿಂತಿದ್ದುವು. ದೊಡ್ಡ ಗುಹೆಗಳಂತಿರುವ ಅವನ ಹೊಳ್ಳೆಗಳು, ಪ್ರಪಾತದಂತಿರುವ ಬಾಯಿ, ಗುಡುಗಿನಂತಿರುವ ಗೊರಕೆಗಳು—ಇವು ಗಳನ್ನು ಕಂಡವರು ಭಯದಿಂದ ನಡುಗಿಹೋಗುವುದೆ! ಆತನನ್ನು ಎಬ್ಬಿಸಬಂದ ರಾಕ್ಷಸರು ಆತನ ಸಮೀಪದಲ್ಲಿ ಮಾಂಸವನ್ನು ರಾಶಿರಾಶಿಯಾಗಿ ಸುರಿದರು; ಅಸಂಖ್ಯಾತ ವಾದ ಮದ್ಯದ ಮತ್ತು ನೆತ್ತರಿನ ಗಡಿಗೆಗಳನ್ನು ಸಾಲುಸಾಲಾಗಿ ಇರಿಸಿದರು. ಅನಂತರ ಆ ರಾಕ್ಷಸವೀರನನ್ನು ಎಬ್ಬಿಸುವ ಪ್ರಯತ್ನವನ್ನು ಆರಂಭಿಸಿದರು. ಸಹಸ್ರಜನ ರಾಕ್ಷಸರು ಏಕಕಾಲದಲ್ಲಿ ಭೇರಿ ಮೃದಂಗ ಮೊದಲಾದ ವಾದ್ಯ ವಿಶೇಷಗಳನ್ನು ಮೊಳಗಿಸಲಾರಂಭಿ ಸಿದರು; ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಎಲ್ಲರೂ ಸೇರಿ ಏಕಕಾಲದಲ್ಲಿ ಸಿಂಹನಾದ ಮಾಡಿದರು; ಕರತಾಡನ ಮಾಡಿದರು; ಆ ಧ್ವನಿ ಪ್ರತಿಧ್ವನಿತವಾಗಿ ಅರಮನೆಯ ಸುತ್ತಮುತ್ತಿನ ಮರಗಳಿಂದ ಗಾಬರಿಗೊಂಡ ಹಕ್ಕಿಗಳು ಹಾರಿಹೋದವೆ ಹೊರತು ಕುಂಭಕರ್ಣನಿಗೇನೂ ಎಚ್ಚರವಾಗಲಿಲ್ಲ. ಈ ಉಪಾಯ ಸರಿಹೋಗಲಿಲ್ಲ ವೆಂದು ಗದೆ ಮುಸಲ ಮೊದಲಾದ ಆಯುಧಗಳಿಂದಲೂ ಮುಷ್ಟಿಯಿಂದಲೂ ಪ್ರಹರಿಸಿ ದರು. ಆದರೂ ಆ ಮಹಾರಾಯ ಕದಲಲಿಲ್ಲ. ಆನೆ ಕುದುರೆ ಒಂಟೆ ಮೊದಲಾದ ವಾಹನಗಳನ್ನು ಅವನ ಮೇಲೆ ಹಾಯಿಸಿದರು, ಕೊರಡೆಗಳಿಂದ ಹೊಡೆದರು, ಅಂಕುಶ ದಿಂದ ತಿವಿದರು; ಆದರೂ ಏನೂ ಪ್ರಯೋಜನವಾಗಲಿಲ್ಲ. ಮುಂದೇನು ಮಾಡ ಬೇಕೆಂಬುದೇ ಆ ರಾಕ್ಷಸರಿಗೆ ತಿಳಿಯಲಿಲ್ಲ. ಅವರೆಲ್ಲರೂ ಸೇರಿ ಪರಿಪರಿಯಾಗಿ ಅವನನ್ನು ಹಿಂಸಿಸತೊಡಗಿದರು. ಬಿಂದಿಗೆಗಟ್ಟಲೆ ನೀರನ್ನು ಅವನ ಕಿವಿಗಳಲ್ಲಿ ಸುರಿದು, ಈಟಿಯಿಂದ ತಿವಿದು, ಆನೆಗಳಿಂದ ತುಳಿಸಿ, ವೃಕ್ಷಗಳಿಂದಲೂ ಕಲ್ಲುಬಂಡೆಗಳಿಂದಲೂ ಅವನನ್ನು ಪ್ರಹರಿಸಿ ಕೊನೆಗೂ ಅವನನ್ನು ನಿದ್ರೆಯಿಂದ ಎಬ್ಬಿಸಿದರು.

ಕುಂಭಕರ್ಣನು ಪಾತಾಳದಂತಿದ್ದ ಬಾಯನ್ನು ಒಮ್ಮೆ ತೆರೆದು ಆಕಳಿಸಿದನು. ಪರ್ವತಸಮಾನವಾದ ದೇಹವನ್ನು ಮುರಿದು ಮೇಲಕ್ಕೆದ್ದನು. ಕಿಡಿಗಾರುತ್ತಿದ್ದ ಕೆಂಗಣ್ಣುಗಳಿಂದ ಅವನು ಒಮ್ಮೆ ಸುತ್ತಲೂ ನೋಡಿದೊಡನೆಯೆ ರಾಕ್ಷಸರೆಲ್ಲರೂ ಬೆದರಿ, ಕಣ್ಣುಸನ್ನೆಯಿಂದಲೆ ಅಲ್ಲಿ ಸುರಿದಿದ್ದ ಆಹಾರದ ರಾಶಿಯನ್ನು ತೋರಿಸಿದರು. ಇದರಿಂದ ಕುಂಭಕರ್ಣನು ಸಂತೋಷಗೊಂಡು ಅದನ್ನೆಲ್ಲಾ ಭಕ್ಷಿಸಿ, ಅಲ್ಲಿದ್ದ ಮದ್ಯವನ್ನೂ ರಕ್ತವನ್ನೂ ನಿಶ್ಶೇಷವಾಗಿ ಹೀರಿದನು. ಅನಂತರ ತನ್ನನ್ನು ಏಕೆ ಎಬ್ಬಿಸಿರಬಹುದೆಂದು ಆಶ್ಚರ್ಯಪಡುತ್ತಾ ಸುತ್ತಲಿದ್ದ ರಾಕ್ಷಸರನ್ನು ಪ್ರಶ್ನಿಸಿದನು— "ಏನಯ್ಯಾ! ಈ ನಿದ್ರೆಯಲ್ಲಿ ನನ್ನನ್ನು ಎಬ್ಬಿಸುವ ಅವಸರವೇನಿತ್ತು? ಒಡೆಯನಾದ ರಾವಣಾಸುರನು ಸುಕ್ಷೇಮವಾಗಿರುವನಷ್ಟೆ! ಆತನಿಗೇನಾದರೂ ತೊಂದರೆಯಾಗಿದ್ದರೆ ತಿಳಿಸು; ಹಾಗೆ ತೊಂದರೆಗೊಳಿಸಿದವನು ಸ್ವತಃ ದೇವೇಂದ್ರನಾಗಿದ್ದರೂ ಅವನನ್ನು ಕ್ರೂರವಾಗಿ ಶಿಕ್ಷಿಸುತ್ತೇನೆ" ಎಂದನು. ಆಗ ರಾಕ್ಷಸರು ತಮ್ಮ ಒಡೆಯನಿಗೆ ಒದಗಿದ್ದ ಸಂಕಟವನ್ನು ವಿವರಿಸಿ ಹೇಳಿದರು—"ಪ್ರಭು ದೇವೇಂದ್ರನಿಂದ ನಮಗೇನೂ ತೊಂದರೆ ಯೊದಗಿಲ್ಲ. ಆದರೆ ಪರ್ವತಾಕಾರರಾದ ವಾನರರು ಲಂಕೆಯನ್ನೇ ವ್ಯಾಪಿಸಿ, ಅಗಾಧವಾದ

ಹಾವಳಿಯನ್ನು ಮಾಡುತ್ತಿದ್ದಾರೆ. ಈ ಮೊದಲೆ ಒಬ್ಬ ವಾನರ ಇಲ್ಲಿಗೆ ಬಂದು ಊರನ್ನೆಲ್ಲಾ ಸುಟ್ಟುಹೋದನಷ್ಟೆ. ಅದೇ ವಾನರನೆ ಈಗ ಪುನಃ ಬಂದಿದ್ದಾನೆ. ಅವನ ಜೊತೆಯಲ್ಲಿ ಬಂದಿರುವ ಶ್ರೀರಾಮನೆಂಬ ಮಾನವನು ಭಯಂಕರವಾಗಿ ಯುದ್ಧ ಮಾಡುತ್ತಾ ರಾವಣೇಶ್ವರನಿಗೆ ಪದೇ ಪದೇ ಭಂಗವನ್ನುಂಟುಮಾಡುತ್ತಿದ್ದಾನೆ. ಅವನಿಂದಲೂ ಅವನ ತಮ್ಮನಾದ ಲಕ್ಷ್ಮಣನಿಂದಲೂ ಮಹತ್ತಾದ ಭಯವು ಪ್ರಾಪ್ತ ವಾಗಿದೆ" ಎಂದರು.

ತನ್ನ ಅಣ್ಣನಿಗೆ ಅಪಜಯವಾಯಿತೆಂದು ಕೇಳುತ್ತಲೆ ಕುಂಭಕರ್ಣನು ಕೋಪ ದಿಂದ ಕಾಯ್ದು ಕೆಂಗೆಂಡವಾದನು; ಕಣ್ಣಾಲಿಗಳು ರಥಚಕ್ರದಂತೆ ಗಿರಿಗಿರಿ ತಿರುಗಿ ದುವು. ಸಿಡಿಲಿನಂತಹ ಧ್ವನಿಯಿಂದ "ಎಲೈ ರಾಕ್ಷಸರೆ, ಈ ಕ್ಷಣದಲ್ಲಿಯೇ ಆ ರಾಮನನ್ನು ಸಂಹರಿಸಿ, ವಾನರರ ರಕ್ತದಿಂದ ರಾಕ್ಷಸರನ್ನೆಲ್ಲಾ ತೃಪ್ತಿಪಡಿಸುತ್ತೇನೆ. ಆ ರಾಮಲಕ್ಷ್ಮಣರ ರಕ್ತವನ್ನು ನಾನೇ ಕುಡಿಯುತ್ತೇನೆ" ಎಂದು ಗರ್ಜಿಸಿದನು. ಇದನ್ನು ಕೇಳಿ, ರಾಕ್ಷಸರು ಕೃತಕಾರ್ಯರಾದೆವೆಂದು ಸಂತೋಷಪಡುತ್ತಾ ಓಡಿ ಬಂದು ರಾವಣೇಶ್ವರನಲ್ಲಿ ನಡೆದುದುನ್ನೆಲ್ಲಾ ನಿವೇದಿಸಿದರು. ಆತನಿಗೆ ಅದನ್ನು ಕೇಳಿ ಬಹು ಸಂತೋಷವಾಯಿತು; ತಮ್ಮನನ್ನು ತನ್ನಲ್ಲಿಗೆ ಕರೆತರುವಂತೆ ದೂತರನ್ನಟ್ಟಿದನು. ಅವರು ಕುಂಭಕರ್ಣನಿಗೆ ಮದ್ಯದ ಕಾಣಿಕೆಯನ್ನು ಕೊಟ್ಟು ಕಾಣಿಸಿಕೊಂಡು ಆತನನ್ನು ರಾವಣೇಶ್ವರನಲ್ಲಿಗೆ ಕರೆತಂದರು. ಆತನು ನಡೆದು ಬರುತ್ತಿರುವಾಗ ಹೆಜ್ಜೆ ಹೆಜ್ಜೆಗೂ ಭೂಮಿ ನಡುಗಿಹೋಗುತ್ತಿತ್ತು. ಬೀದಿಯಲ್ಲಿ ಕಂಡ ರಾಕ್ಷಸರೆಲ್ಲರೂ ಆತನಿಗೆ ನಮಸ್ಕರಿಸಿ ಗೌರವಿಸುತ್ತಿದ್ದರು. ಹೊರಗಿನ ಪ್ರಾಕಾರದಲ್ಲಿ ಸಂಚರಿಸುತ್ತಿದ್ದ ವಾನರರಿಗೆ ಈ ಜಂಗಮ ಪರ್ವತ ಕಾಣಿಸಿತು. ನೋಡಿ, ಅವರು ಭಯದಿಂದ ತತ್ತರಿಸಿಹೋದರು. ಕೆಲವರು ಶ್ರೀರಾಮನ ಬಳಿಗೆ ಓಡಿಹೋಗಿ ಆತನಿಗೆ ಆ ಸುದ್ದಿಯನ್ನು ತಿಳಿಸಿದರು. ಮತ್ತೆ ಕೆಲವರು ಭಯದಿಂದ ನಡುಗುತ್ತಾ ಅಲ್ಲಿಯೇ ನೆಲಕ್ಕೆ ಬಿದ್ದರು. ಉಳಿದವರು ದಿಕ್ಕುದಿಕ್ಕಿಗೆ ಪಲಾಯನ ಮಾಡಿದರು. ಶ್ರೀರಾಮನೂ ದೂರದಿಂದಲೆ ಆ ವ್ಯಕ್ತಿಯನ್ನು ಕಂಡು ವಿಸ್ಮಿತನಾದನು. ತಾನು ಅಂತಹ ಭೂತಸ್ವರೂಪವನ್ನು ಎಂದೂ ಕಂಡಿರಲಿಲ್ಲ ವೆಂದುಕೊಂಡು ಅವನಾರೆಂದು ವಿಭೀಷಣನನ್ನು ವಿಚಾರಿಸಿದನು. ಆತನು "ಈ ಕುಂಭಕರ್ಣನು ತನ್ನ ಬಾಹುಬಲದಿಂದ ಸಾಕ್ಷಾತ್ ಯಮನನ್ನೆ ಸೋಲಿಸಿದ ಮಹಾ ಪರಾಕ್ರಮಿ. ದಿನ ದಿನವೂ ಅವನಿಂದ ಆಗುತ್ತಿದ್ದ ಪ್ರಾಣಹತ್ಯೆಯನ್ನು ಕಂಡು ದೇವತೆಗಳು ಬ್ರಹ್ಮನಲ್ಲಿ ಮೊರೆಯಿಡಲು ಆತನು ಅವನಿಗೆ ಸದಾ ನಿದ್ರೆ ಅಡಸಿರುವಂತೆ ಶಾಪಕೊಟ್ಟನು. ಆದರೆ ರಾವಣನು ಬ್ರಹ್ಮನಲ್ಲಿ ಬೇಡಿಕೊಂಡು ಆರು ತಿಂಗಳು ನಿದ್ದೆ ಯಾದಮೇಲೆ ಒಂದು ದಿನ ಮಾತ್ರ ಅವನು ಎಚ್ಚತ್ತಿರುವಂತೆಯೂ ಆ ದಿನ ಅವನನ್ನು ಇದಿರಿಸುವವರೆ ಇರದಿರುವಂತೆಯೂ ವರ ಪಡೆದಿದ್ದಾನೆ. ಇವನು ರಾವಣನ ಅಚ್ಚು ಮೆಚ್ಚಿನ ತಮ್ಮ. ಈ ದಿನ ಆತನ ಅಪ್ಪಣೆಯಂತೆ ಅವನನ್ನು ಎಬ್ಬಿಸಿದ್ದಾರೆ. ಇವನನ್ನು ನಮ್ಮ ಕಪಿಸೇನೆ ಇದಿರಿಸುವುದು ಬಹು ಕಷ್ಟಸಾಧ್ಯವೆ ಸರಿ" ಎಂದನು.

---

## ೧೩

# ರಣಭಯಂಕರ ಕುಂಭಕರ್ಣ

ತನ್ನ ಹೆಜ್ಜೆಗಳಿಂದ ಭೂಮಿಯನ್ನು ನಡುಗಿಸುತ್ತಾ ನಡೆತಂದ ಕುಂಭಕರ್ಣನು ಅಣ್ಣನ ಅರಮನೆಯನ್ನು ಪ್ರವೇಶಿಸಿದನು. ಆತನನ್ನು ಕಾಣುತ್ತಲೆ ರಾವಣೇಶ್ವರನು ಪರಮಾನಂದದಿಂದ ಮೇಲಕ್ಕೆದ್ದು ಬಂದು ಆತನನ್ನು ಆಲಿಂಗಿಸಿದನು ; ಕೈಹಿಡಿದು ಕರೆದೊಯ್ದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಕುಂಭಕರ್ಣನು ಅಣ್ಣನಿಗೆ ಭಕ್ತಿಯಿಂದ ನಮಸ್ಕರಿಸಿ "ಅಣ್ಣಾ, ನನ್ನನ್ನು ಏಕೆ ಇಷ್ಟು ಆತುರವಾಗಿ ಕರೆಸಿದೆ? ನಿನಗೆ ಯಾರಿಂದ ತೊಂದರೆ ಸಂಭವಿಸಿದೆ? ಯಾವ ಪಾಪಿಗೆ ಮೃತ್ಯುವಿನಲ್ಲಿ ಆಸೆ ಹುಟ್ಟಿತು?" ಎಂದು ಕೇಳಿದನು. ತಮ್ಮನ ಮಾತುಗಳನ್ನು ಕೇಳಿ ರಾವಣೇಶ್ವರನು "ತಮ್ಮಾ ಕುಂಭಕರ್ಣ, ಸುಖನಿದ್ರೆಯಲ್ಲಿದ್ದ ನಿನಗೆ ನಡೆದಿರುವ ಕಾರ್ಯಗಳೊಂದೂ ಅರಿವಾಗಿಲ್ಲ. ಸೋದರನೆ ಕೇಳು! ದಶರಥಸುತನಾದ ಆ ರಾಮನು ಸುಗ್ರೀವನ ವಾನರ ಸೈನ್ಯದೊಡನೆ ಸಾಗರವನ್ನು ದಾಟಿ ಬಂದು ನಮ್ಮ ರಾಜಧಾನಿಯನ್ನೆಲ್ಲ ಸಮೂಲವಾಗಿ ನಾಶಮಾಡುತ್ತಿದ್ದಾನೆ. ನಗರದಲ್ಲಿನ ಉಪವನಗಳೂ ರಾಜೋದ್ಯಾನಗಳೂ ಹಾಳಾಗಿವೆ. ಅವರೊಡನೆ ಯುದ್ಧಕ್ಕೆ ಹೋದ ರಾಕ್ಷಸ ಪ್ರಮುಖರೆಲ್ಲರೂ ರಣರಂಗದಲ್ಲಿ ಮೃತ್ಯುಮುಖರಾದರು ಈ ವಾನರರಿಂದ ನನಗೆ ಈಗ ಮಹದ್ಭಯ ಪ್ರಾಪ್ತವಾಗಿದೆ. ನೀನೀಗ ಅವರಿಂದ ನನ್ನನ್ನು ರಕ್ಷಿಸಬೇಕಾಗಿದೆ. ಲಂಕೆಯಲ್ಲಿ ಅಳಿದುಳಿದಿರುವ ಸ್ತ್ರೀಬಾಲರನ್ನಾದರೂ ನೀನು ಸಂರಕ್ಷಿಸು. ನೀನು ಶತ್ರುಭಯಂಕರನೆಂಬ ಕೀರ್ತಿಗೆ ಪಾತ್ರನಾದವನು. ಆ ಕೀರ್ತಿ ಅಳಿಯದೆ ಉಳಿಯುವಂತೆ ಹೋರಾಡಿ ನಿನ್ನ ಪರಾಕ್ರಮವನ್ನು ಪ್ರದರ್ಶಿಸು. ನಿನ್ನ ದೆಸೆಯಿಂದ ಚಂಡಮಾರುತಕ್ಕೆ ಸಿಕ್ಕ ಮೋಡಗಳಂತೆ ಶತ್ರು ಸೈನ್ಯವೆಲ್ಲವೂ ಪಲಾಯನವಾಗಿ ಹೋಗಲಿ" ಎಂದನು.

ಅಣ್ಣನ ಮಾತುಗಳನ್ನು ಕೇಳಿ ಕುಂಭಕರ್ಣನಿಗೆ ನಗು ಬಂದಿತು. ಹಿಂದೆ ತುಂಬಿದ ಸಭೆಯಲ್ಲಿ ಹಿತಬೋಧೆ ಮಾಡಿದವರನ್ನೆಲ್ಲಾ ಆತನು ಅಪಮಾನಗೊಳಿಸಿ, ಅವರ ಮಾತುಗಳನ್ನು ತಳ್ಳಿಹಾಕಿದ ವಿಷಯವನ್ನು ಆತನಿಗೆ ಜ್ಞಾಪಿಸುತ್ತಾ "ಅಣ್ಣಾ, ಹಿತಬೋಧಕರ ನುಡಿಗೆ ಕಿವಿಗೊಡದೆ ನೀನು ಆಪತ್ತನ್ನು ತಂದುಕೊಂಡೆ. ಸೀತಾಪಹರಣರೂಪವಾದ ಪಾಪಕ್ಕೆ ಈ ಫಲ ದೊರೆಯಿತು. ನಾನು ಹೇಳುವ ಮಾತುಗಳನ್ನು ನಿನಗೆ ಅವಮಾನ ಮಾಡುವ ಉದ್ದೇಶದಿಂದ ಹೇಳುತ್ತಿರುವೆನೆಂದು ಭಾವಿಸಬೇಡ. ವಿಭೀಷಣನು ಹಿಂದೆ ನಿನಗೆ ಹೇಳಿದ ಹಿತನುಡಿಗಳನ್ನು ಈಗಲಾದರೂ ಸ್ವೀಕರಿಸು. ಅದೇ ಹಿತವೆಂದು ನನಗೂ ತೋರುತ್ತಿದೆ. ನಿನ್ನ ಒಡಹುಟ್ಟಿದವನೆಂಬ ಸಲಿಗೆಯಿಂದ ಇಷ್ಟು ಸ್ಪಷ್ಟವಾಗಿ ಹೇಳಿದುದಕ್ಕಾಗಿ ಕ್ಷಮಿಸು" ಎಂದನು. ತಮ್ಮನ ಈ ಸ್ಪಷ್ಟವಾದ ನುಡಿಗಳನ್ನು ಕೇಳಿ ರಾವಣೇಶ್ವರನಿಗೆ ಕೋಪ ಬಂದಿತು. ಆತನು ಹುಬ್ಬು ಗಂಟುಹಾಕಿಕೊಂಡು "ಎಲಾ ಕುಂಭಕರ್ಣ

ಪೂಜ್ಯನಾದ ಗುರು ಶಿಷ್ಯನಿಗೆ ಉಪದೇಶಮಾಡಿ ಶಿಕ್ಷಿಸುವಂತೆ ನನ್ನನ್ನು ಶಿಕ್ಷಿಸಹೊರಟಿರುವೆ. ಇದು ನಿನಗೆ ಉಚಿತವಲ್ಲ. ನಾನು ತಿಳಿದೊ ತಿಳಿಯದೆಯೊ ಕಾರ್ಯವನ್ನು ಆಚರಿಸಿ ದೆನು. ಅದನ್ನು ಈಗ ವಿಮರ್ಶಿಸಿ ಪ್ರಯೋಜನವಿಲ್ಲ. ಈಗ ಒದಗಿರುವ ವಿಷಮ ಸನ್ನಿವೇಶ ದಲ್ಲಿ ಏನುಮಾಡಬೇಕೆಂಬುದನ್ನು ಕುರಿತು ಆಲೋಚಿಸುವುದೆಷ್ಟೊ ಅಷ್ಟೆ ಈಗ ನೀನು ಮಾಡಬೇಕಾಗಿರುವುದು. ನಾನು ಅವಿವೇಕದಿಂದ ಅಕಾರ್ಯವನ್ನು ಮಾಡಿದ್ದರೆ ನೀನು ಪರಾಕ್ರಮದಿಂದ ಅದನ್ನು ಸರಿಪಡಿಸು. ನನ್ನಲ್ಲಿ ನಿನಗೆ ಪ್ರೀತಿವಿಶ್ವಾಸಗಳಿದ್ದರೆ ನಿನ್ನ ಪರಾಕ್ರಮವನ್ನು ಶತ್ರುಮರ್ದನದಲ್ಲಿ ಪ್ರಯೋಗಿಸು. ಇಲ್ಲವಾದರೆ ನಿನ್ನ ಮನ ಬಂದಂತೆ ಮಾಡು. ಆಪತ್ಕಾಲದಲ್ಲಿ ಆದವನೆ ನೆಂಟನಷ್ಟೆ" ಎಂದನು.

ಗಂಭೀರವಾದರೂ ದಾರುಣವಾಗಿದ್ದ ಅಣ್ಣನ ನುಡಿಗಳನ್ನು ಕೇಳಿ ಕುಂಭಕರ್ಣನು "ರಾಕ್ಷಸರಾಜ, ಸಂತಾಪಬೇಡ. ರೋಷವನ್ನು ತೊರೆ. ನಿನ್ನ ತಮ್ಮನಾದ ನಾನು ಇರು ವಾಗ ನಿನಗೆ ಅನುತಾಪವೆಂದರೇನು ? ಇದುವರೆಗೆ ನಾನು ಹೇಳಿದ ಮಾತುಗಳನ್ನೆಲ್ಲಾ ಮರೆತು ನನ್ನನ್ನು ಕ್ಷಮಿಸು. ನಿನ್ನನ್ನು ಪರಿತಾಪಕ್ಕೆ ಒಳಗುಮಾಡಿದ ಆ ರಾಮನನ್ನು ಹೇಳಹೆಸರಿಲ್ಲದಂತೆ ಮಾಡುತ್ತೇನೆ. ನನ್ನ ಮಾತನ್ನು ನಂಬು. ಯುದ್ಧದಲ್ಲಿ ಆ ರಾಮನನ್ನು ಕೊಂದು, ಅವನ ತಲೆಯನ್ನು ನಿನ್ನ ಪಾದಗಳಿಗೆ ಒಪ್ಪಿಸುವೆನೆಂದು, ಇಗೊ ಪ್ರಮಾಣ ಮಾಡಿ ಹೇಳುತ್ತೇನೆ. ಇದುವರೆಗೆ ವಾನರರಿಂದ ಮಡಿದ ವೀರರ ಪತ್ನಿಯರೂ ಇನ್ನು ತಮ್ಮ ಕಣ್ಣೀರನ್ನು ಒರಸಿಕೊಳ್ಳಲಿ. ಅವರ ದುಃಖಕ್ಕೆ ಕಾರಣರಾದ ವಾನರರನ್ನೆಲ್ಲಾ ಸಮೂಲವಾಗಿ ನಾಶಮಾಡುತ್ತೇನೆ. ನಾನು ಕೆರಳಿ ಯುದ್ಧಕ್ಕೆ ನಿಂತರೆ ಎದುರಾಗಬಲ್ಲ ಶೂರರು ಯಾರಿರುವರು ? ನೀನಿನ್ನು ನಿನ್ನ ಚಿಂತೆಯನ್ನು ಬಿಟ್ಟು, ಮನೋಹರವಾದ ಮದ್ಯಪಾನ ಮಾಡುತ್ತಾ ಯಥೇಚ್ಛೆಯಾಗಿ ವಿಹರಿಸು. ನಾನು ಅತ್ತ ರಾಮನನ್ನು ಕೊಲ್ಲುತ್ತಲೆ ಇತ್ತ ಹಟಗಾತಿಯಾದ ಸೀತೆ ನಿನ್ನ ವಶವಾಗಿಹೋಗುತ್ತಾಳೆ" ಎಂದನು.

ಕುಂಭಕರ್ಣನ ವೀರವಾಕ್ಯಗಳನ್ನು ಕೇಳಿ ರಾವಣನ ಬಳಿಯಲ್ಲಿದ್ದ ಅತಿಕಾಯನೆಂಬ ರಾಕ್ಷಸನಿಗೆ ಕೋಪಬಂದಿತು. ಅವನು ಕುಂಭಕರ್ಣನನ್ನು ಕುರಿತು "ಅಯ್ಯಾ, ಕುಂಭ ಕರ್ಣ, ನೀನೇ ಸರ್ವಜ್ಞನೆಂಬಂತೆ ಮೊದಲು ರಾವಣೇಶ್ವರನಿಗೆ ಬುದ್ಧಿವಾದ ಹೇಳಹೊರಟೆ. ಈಗ ನಾನೇ ಸರ್ವಶಕ್ತನೆಂಬಂತೆ ಏಕಾಂಗಿಯಾಗಿ ಯುದ್ಧಕ್ಕೆ ಹೋಗುವೆನೆಂದು ಹೇಳು ತ್ತಿರುವೆ. ಕಾರ್ಯವು ಬಾಯಿಂದ ಆಡುವಷ್ಟು ಸುಲಭವಲ್ಲ. ನಿನ್ನ ದುಡುಕುತನ ರಾಮ ಲಕ್ಷ್ಮಣರ ಬಳಿಯಲ್ಲಿ ಕೆಲಸಕ್ಕೆ ಬಾರದು. ದೇವೇಂದ್ರನೊಡನೆಯೂ ಯಮನೊಡನೆಯೂ ಏಕಕಾಲದಲ್ಲಿ ಯುದ್ಧಕ್ಕೆ ನಿಲ್ಲುವುದು ಎಂತಹ ಜಾಣತನ ?" ಎಂದು ಗದರಿದನು. ಅನಂತರ ಅವನು ರಾವಣೇಶ್ವರನ ಕಡೆ ತಿರುಗಿ "ಪ್ರಭು, ನಿನ್ನ ಇಷ್ಟಾರ್ಥ ನೆರವೇರುವ ಉಪಾಯವನ್ನು ನಾನು ಸೂಚಿಸುತ್ತೇನೆ. ಅದರಂತೆ ನಡೆದರೆ ಶತ್ರುಸಂಹಾರವಾಗಿ ಸೀತೆ ನಿನ್ನ ವಶಳಾಗುತ್ತಾಳೆ. ಈ ಕುಂಭಕರ್ಣನ ಜೊತೆಯಲ್ಲಿ ನನ್ನನ್ನೂ ದ್ವಿಜಿಹ್ವ, ಸಂಹ್ರಾದಿ, ವಿತರ್ದನರನ್ನೂ ಯುದ್ಧಕ್ಕೆ ಕಳುಹಿಸು. ನಾವು ಐವರೂ ಸೇರಿ ಯುದ್ಧ ಮಾಡಿದರೆ ಶತ್ರುಗಳು ನಿಶ್ಶೇಷವಾಗಿ ಹತರಾಗುತ್ತಾರೆ. ಅವರು ಹತರಾದ ಮೇಲೆ ಸೀತೆ

ನಿನ್ನ ವಶಳಾದಂತೆಯೆ. ಒಂದು ಪಕ್ಷ ಹಾಗೆ ಹತರಾಗದೆ ನಾವೇ ಯುದ್ಧದಲ್ಲಿ ಸೋತು ಹೋದರೆ, ಅದನ್ನು ಬಹಿರಂಗಪಡಿಸಬೇಡ. ನಾವೇ ಗೆದ್ದೆವೆಂದು ಊರಿನಲ್ಲೆಲ್ಲಾ ಡಂಗುರ ಹಾಕಿಸು. ರಾಮಲಕ್ಷ್ಮಣರು ಸತ್ತುಹೋದರೆಂದು ಸುಳ್ಳುಪ್ರವಾದವನ್ನು ಊರಿನಲ್ಲೆಲ್ಲಾ ಹರಡು. ಅದನ್ನು ಕೇಳಿ ನಿರಾಶಳಾಡ ಸೀತೆ ಗತ್ಯಂತರವಿಲ್ಲದೆ ನಿನ್ನನ್ನು ವರಿಸುತ್ತಾಳೆ" ಎಂದನು.

ಅತಿಕಾಯನ ಮಾತುಗಳು ರಾವಣೇಶ್ವರನಿಗೆ ರುಚಿಸಲಿಲ್ಲ. ಹೇಡಿಯೆಂದು ಅವನನ್ನು ಹೀಯಾಳಿಸಿ, ಕುಂಭಕರ್ಣನನ್ನು ಒಡನೆಯೆ ಯುದ್ಧಕ್ಕೆ ಹೊರಡುವಂತೆ ಪ್ರೋತ್ಸಾಹಿಸಿ, ಅಮೂಲ್ಯವಾದ ರತ್ನಹಾರವನ್ನು ಆತನ ಕೊರಳಲ್ಲಿ ಹಾಕಿದನು. ಇದರಿಂದ ಉತ್ಸಾಹಿತನಾದ ಕುಂಭಕರ್ಣನು ಅಣ್ಣನಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದು, ಒಡನೆಯೆ ಯುದ್ಧಕ್ಕೆ ಹೊರಡಲು ಸಿದ್ಧವಾದನು. ಕವಚವನ್ನು ಧರಿಸಿ ನಿಂತ ಆ ರಾಕ್ಷಸನು ಮೋಡವನ್ನು ಹೊದ್ದ ಪರ್ವತದಂತೆ ಶೋಭಿಸುತ್ತಾ, ತನ್ನ ಶೂಲಾಯುಧವನ್ನು ಕೈಯಲ್ಲಿ ಹಿಡಿದು ಯುದ್ಧಕ್ಕೆ ಹೊರಡುತ್ತಲೆ ರಾಕ್ಷಸರ ದೊಡ್ಡ ಸೇನೆಯೊಂದು ನಿರ್ಭಯವಾಗಿ ಆತ ನನ್ನು ಹಿಂಬಾಲಿಸಿತು. ಶಂಖ ದುಂದುಭಿಗಳು ದಿಕ್ಕುಗಳೆಲ್ಲ ಒಡೆದುಹೋಗುವಂತೆ ಮೊಳಗಿ ದುವು. ನೂರು ಧನುಸ್ಸುಗಳಅಡ್ಡಳತೆ, ಆರುನೂರು ಧನುಸ್ಸುಗಳಉದ್ದಳತೆ ಇದ್ದ ಆ ಕುಂಭ ಕರ್ಣನು ತನ್ನ ಅನುಯಾಯಿಗಳನ್ನು ಕುರಿತು "ಎಲೈ ರಾಕ್ಷಸರೆ, ಇಲ್ಲಿಗೆ ಬಂದಿರುವ ಕೋತಿ ಗಳೆಲ್ಲ ನಮ್ಮ ವನದಲ್ಲಿ ಸದ್ಯಕ್ಕೆ ಉಳಿದುಕೊಂಡಿರಲಿ; ಮೊದಲು ಆ ರಾಮಲಕ್ಷ್ಮಣರನ್ನು ಸಂಹಾರಮಾಡಿಬಿಡುತ್ತೇನೆ. ಅವರು ಸತ್ತರೆ ಎಲ್ಲವೂ ಮುಗಿದಂತೆಯೆ" ಎಂದು ಅವರನ್ನು ಹುರಿದುಂಬಿಸಿದನು. ಆ ಮಾತನ್ನು ಕೇಳಿ ಅವರು ಸಂತೋಷದಿಂದ ಸಿಂಹನಾದಮಾಡಿದರು.

ತನ್ನ ಹಿಂಬಾಲಕರೊಡನೆ ರಣಭೂಮಿಗೆ ಬಂದು ನಿಂತ ಕುಂಭಕರ್ಣನು ಒಮ್ಮೆ ಸುತ್ತಲೂ ನೋಡಿ ಸಿಂಹನಾದಮಾಡಿದನು. ಪರ್ವತಗಳು ಸೀಳಿಹೋಗುವಂತಹ ಆ ಭಯಂಕರ ಧ್ವನಿಯನ್ನು ಕೇಳಿ, ಆ ಧ್ವನಿಗೆ ತಕ್ಕ ಬೃಹದಾಕಾರವನ್ನು ನೋಡಿ, ರಣ ಭೂಮಿಯಲ್ಲಿದ್ದ ವಾನರರೆಲ್ಲರೂ ಭಯದಿಂದ ತತ್ತರಿಸಿ ಹೋದರು. ಮಹಾಬಲಾಢ್ಯರಾದ ನಳ ನೀಲ ಗವಾಕ್ಷ ಕುಮುದ ಮೊದಲಾದ ಸೇನಾಪತಿಗಳು ಕೂಡ ಪಲಾಯನಮಾಡಿದರು. ಇದನ್ನು ಕಂಡು ರಾಜಕುಮಾರನಾದ ಅಂಗದನು "ಅಯ್ಯಾ, ಹೆದರಬೇಡಿ. ಈ ವ್ಯಕ್ತಿ ರಾಕ್ಷಸನಲ್ಲ. ನಮ್ಮನ್ನು ಭಯಗೊಳಿಸುವುದಕ್ಕಾಗಿ ಶತ್ರುವು ನಿರ್ಮಿಸಿ ಕಳುಹಿಸಿರುವ ಒಂದು ಬೆಚ್ಚಲು ಭೂತವೆಂದು ತಿಳಿಯಿರಿ. ನಮ್ಮ ಪರಾಕ್ರಮದಿಂದ ಇದನ್ನು ಭೇದಿಸಿ ಬಿಡೋಣ. ಹೆದರದೆ ಹಿಂದಿರುಗಿ" ಎಂದು ಅವರನ್ನು ಹಿಂದಕ್ಕೆ ಕರೆದನು. ಅದನ್ನು ಕೇಳಿ ಆ ವಾನರ ಮುಖ್ಯರೆಲ್ಲರೂ ಹೇಗೋ ಧೈರ್ಯ ತಾಳಿ ವೃಕ್ಷಗಳನ್ನೂ ಪರ್ವತ ಗಳನ್ನೂ ಕೈಲಿ ಹಿಡಿದು ಯುದ್ಧರಂಗಕ್ಕೆ ಹಿಂದಿರುಗಿದರು. ಅಂಗದನ ಮಾತನ್ನು ನಂಬಿ ಅವರು ತಮ್ಮ ಕೈಯಲ್ಲಿದ್ದ ವೃಕ್ಷಗಳಿಂದಲೂ ಪರ್ವತಗಳಿಂದಲೂ ಕುಂಭಕರ್ಣ ನನ್ನು ಮರ್ದಿಸಿನೋಡಿದರು. ಮರಗಳು ಮುರಿದುವು ; ಪರ್ವತಗಳು ಪುಡಿಯಾದುವು. ಆದರೆ ಆ ರಾಕ್ಷಸನ ಕೂದಲು ಕೊಂಕಲಿಲ್ಲ.



ಉತ್ಸಾಹಿತನಾದ ಕುಂಭಕರ್ಣನು ಅಣ್ಣನಿಗೆ ನಮಸ್ಕರಿಸಿ ಒಡನೆಯೆ
ಯುದ್ಧಕ್ಕೆ ಹೊರಡಲು ಸಿದ್ಧನಾದನು.

ಕೋತಿಗಳ ಉಪಟಳವನ್ನು ಕಂಡು ಕುಂಭಕರ್ಣನಿಗೆ ಕೋಪ ಬಂದಿತು. ಅಗ್ನಿ ದೇವನು ವನವನ್ನು ಸುಡುವಂತೆ ಆ ವಾನರ ಸಮುದಾಯವನ್ನೆಲ್ಲಾ ಮರ್ದಿಸಿ ನೆಲಕ್ಕು

ರುಳಿಸಿದನು. ರಕ್ತದಲ್ಲಿ ಮುಳುಗಿದ ವಾನರರೆಲ್ಲರೂ ಹೂತ ಮುತ್ತುಗದ ಮರಗಳಂತೆ ಭೂಮಿಯ ಮೇಲೆ ಕೆಡೆದು ಬಿದ್ದರು. ಮುಂದೆ ಬಿದ್ದವರಿಗೆ ಆದ ಈ ದುರ್ಗತಿಯನ್ನು ಕಂಡು ಉಳಿದವರು ಕಾಲೆಳೆದತ್ತ ಓಡಿಹೋದರು. ಹಿಂದಕ್ಕೆ ತಿರುಗಿ ಕೂಡ ನೋಡದೆ ಸಮುದ್ರದಲ್ಲಿ ಬಿದ್ದವರು ಯಾರೊ, ಮರಗಳನ್ನು ಏರಿದವರು ಯಾರೊ, ತಗ್ಗುಗಳಲ್ಲಿ ಬಚ್ಚಿಟ್ಟುಕೊಂಡವರಾರೊ, ಭೂಮಿಯಮೇಲೆ ಸತ್ತವರಂತೆ ನಟಿಸುತ್ತಾ ಮಲಗಿದವ ರಾರೋ! ಹೀಗೆ ಕ್ಷಣಮಾತ್ರದಲ್ಲಿ ರಣರಂಗವೆಲ್ಲ ಬಯಲಾಯಿತು. ಅಂಗದನು ಕೂಗಿ ಕೂಗಿ ಧೈರ್ಯ ಹೇಳುತ್ತಿದ್ದರೂ ಅದರ ಲಕ್ಷ್ಯವೇ ಇಲ್ಲ. ಅವರಿಗೆ ಮರ್ಯಾದೆಗಿಂತಲೂ ಪ್ರಾಣವೇ ಹೆಚ್ಚು ಪ್ರಿಯಕರವಾಗಿ ತೋರಿತು. ಅಷ್ಟರಲ್ಲಿ ಆಂಜನೇಯನು ರಣರಂಗ ವನ್ನು ಪ್ರವೇಶಿಸಿದನು. ಆತನನ್ನು ಕಾಣುತ್ತಲೆ ಓಡುತ್ತಿದ್ದವರೆಲ್ಲರೂ ಹಿಂದಿರುಗಿ ಹನುಮಂತನ ಸುತ್ತಲೂ ನೆರೆದರು. ಪ್ರಾಣದ ಮೇಲೆ ಹಂಗುದೊರೆದು ಮತ್ತೊಮ್ಮೆ ಆ ಕೋಟೆಯಂತಿದ್ದ ರಾಕ್ಷಸನ ಮೇಲೆ ಲಗ್ಗೆಯೇರಲು ಆರಂಭಿಸಿದರು.

ಕುಂಭಕರ್ಣನಿಗೆ ವಾನರರೆಂದರೆ ನೊಣಗಳಿದ್ದ ಹಾಗೆ. ಒಂದು ಸಾರಿ ಗದೆಯನ್ನು ತಿರುಗಿಸಿ ಅವರ ಮೇಲೆ ಪ್ರಯೋಗಿಸಲು ಎಂಟು ಸಹಸ್ರ ಮಂದಿ ವಾನರರು ಅಪ್ಪಚ್ಚಿ ಯಾದರು. ಉಳಿದವರನ್ನು ಒಂದೊಂದು ಬಾರಿಗೆ ಹತ್ತರಂತೆ ಇಪ್ಪತ್ತರಂತೆ ಹಿಡಿದು ಗುಳಕ್ಕನೆ ಕಬಳಿಸಲು ಮೊದಲು ಮಾಡಿದನು. ಆದರೂ ವಾನವೀರರು ಧೃತಿಗೆಡದೆ ಕೋಡುಗಲ್ಲುಗಳಿಂದಲೂ ದೊಡ್ಡದೊಡ್ಡ ವೃಕ್ಷಗಳಿಂದಲೂ ಆ ರಾಕ್ಷಸನನ್ನು ಪ್ರಹರಿಸು ತ್ತಿದ್ದರು. ಅವನ ಮೇಲೆ ತಮ್ಮ ಕೈಸಾಗದುದನ್ನು ಕಂಡು ಅವರು ಆತನ ಬೆನ್ನ ಹಿಂದೆ ಬಂದಿದ್ದ ರಾಕ್ಷಸರನ್ನೆಲ್ಲ ಬಡಿದು ಸಾಯಿಸಿದರು. ಅಷ್ಟರಲ್ಲಿ ಮಾರುತಿ ದೊಡ್ಡದೊಂದು ಪರ್ವತ ಶಿಖರವನ್ನು ತಂದು ಅವನ ಮೇಲೆ ಎಸೆದನು. ಕುಂಭಕರ್ಣನು ಅದನ್ನು ಮುಷ್ಟಿಯಿಂದ ಗುದ್ದಿದನು ; ಆ ಪರ್ವತ ಶಿಖರ ಚೂರುಚೂರಾಯಿತು. ಮತ್ತೊಮ್ಮೆ ಆ ಭಯಂಕರ ರಾಕ್ಷಸನು ವಾನರರನ್ನೆಲ್ಲ ಕಬಳಿಸಲು ಪ್ರಾರಂಭಿಸಿದನು. ಆದರೆ ಅವನು ಗಬಗಬ ನುಂಗಿದ ವಾನರರೆಲ್ಲರೂ ಮತ್ತೆ ಬಾಯಿಂದಲೂ ಮೂಗಿನಿಂದಲೂ ಗುಹೆಯ ಹೊಗರುಗಳಿಂದ ಹತ್ತಿಬರುವಂತೆ ಹೊರಬರಲು ಆರಂಭಿಸಿದರು. ಇದನ್ನು ಕಂಡು ಕುಪಿತನಾದ ಕುಂಭಕರ್ಣನು ಅವರನ್ನೆಲ್ಲ ಮತ್ತೆ ಮತ್ತೆ ಮುರಿದು ತಿನ್ನಲು ಪ್ರಾರಂಭಿದನು. ಇದನ್ನು ಕಂಡ ವಾನರರೆಲ್ಲರೂ ಓಡಿಹೋಗಿ ಶ್ರೀರಾಮನ ಬೆನ್ನ ಮರೆಹೊಕ್ಕರು.

ವಾನರ ಸೈನ್ಯವೆಲ್ಲವೂ ಪಲಾಯನ ಮಾಡಿದುದನ್ನು ಕಂಡು ಅಂಗದನು ರೋಷ ದಿಂದ ದೊಡ್ಡದೊಂದು ಪರ್ವತವನ್ನು ಎತ್ತಿತಂದು ಕುಂಭಕರ್ಣನ ತಲೆಯಮೇಲೆ ಎಸೆದನು. ಆ ಪೆಟ್ಟಿನಿಂದ ನೊಂದ ರಾಕ್ಷಸನು ಖತಿಯಿಂದ ತನ್ನ ಶೂಲವನ್ನು ಅಂಗದನ ಮೇಲೆ ಪ್ರಯೋಗಿಸಿದನು. ಅಂಗದನು ಉಪಾಯದಿಂದ ಆ ಹೊಡೆತವನ್ನು ತಪ್ಪಿಸಿ ಕೊಂಡು ಆಕಾಶಕ್ಕೆ ನೆಗೆದು ಕುಂಭಕರ್ಣನ ವಕ್ಷಸ್ಥಳವನ್ನು ಕಾಲಿನಿಂದ ಬಲವಾಗಿ ಒದೆದನು. ಆ ಹೊಡೆತಕ್ಕೆ ಕ್ಷಣಕಾಲ ಮೂರ್ಛಿತನಾಗಿ ಮೈಮರೆತು ಬಿದ್ದಿದ್ದು ಮರ್‍

ಕ್ಷಣದಲ್ಲಿಯೆ ಸುಧಾರಿಸಿಕೊಂಡವನಾಗಿ ಮುಷ್ಟಿಯಿಂದ ಆ ವಾನರವೀರನನ್ನು ಪ್ರಹರಿಸಿದನು. ಕೂಡಲೆ ಅಂಗದನು ಜ್ಞಾನತಪ್ಪಿ ನೆಲಕ್ಕುರುಳಿದನು. ಇದನ್ನು ಕಂಡು ಸುಗ್ರೀವನು ತಾನೇ ಸ್ವತಃ ಆ ಘೋರ ರಕ್ಕಸನಿಗೆ ಇದಿರಾದನು. ಇಬ್ಬರು ಒಬ್ಬರನೊಬ್ಬರು ಮೂದಲಿಸುತ್ತಾ ಸಮವಾಗಿ ಕ್ಷಣಕಾಲ ಯುದ್ಧ ಮಾಡಿದರು. ಸುಗ್ರೀವನು ಒಗೆದ ಪರ್ವತ ರಾಕ್ಷಸನ ಎದೆಗೆ ತಗುಲಿ ಚೂರುಚೂರಾಗಿ ಕೆಳಗೆ ಬಿತ್ತು. ರಾಕ್ಷಸನು ತನ್ನ ಶೂಲವನ್ನು ಎದುರಾಳಿಯ ಮೇಲೆ ಪ್ರಯೋಗಿಸಿದನು. ಕಾಲಾಗ್ನಿಯಂತೆ ಬರುತ್ತಿದ್ದ ಆ ಆಯುಧವನ್ನು ಆಂಜನೇಯನು ಮಧ್ಯಮಾರ್ಗದಲ್ಲಿಯೆ ಹಾರಿ ಹಿಡಿದು ಮುರಿದುಹಾಕಿದನು. ಸರ್ವಕಾಲಾಯಸ ನಿರ್ಮಿತವಾದ ಆ ಆಯುಧ ಮುರಿದುಹೋದುದರಿಂದ ರಕ್ಕಸನಿಗೆ ವ್ಯಥೆಯಾಯಿತು. ಆತನು ಪರ್ವತದ ಕೋಡುಗಲ್ಲೊಂದನ್ನು ತೆಗೆದುಕೊಂಡು ಸುಗ್ರೀವನನ್ನು ಹೊಡೆದನು. ಆ ಪೆಟ್ಟನ್ನು ತಾಳಲಾರದೆ ಆ ಕಪಿವೀರನು ನೆಲಕ್ಕುರುಳಿದನು. ಒಡನೆಯೆ ಕುಂಭಕರ್ಣನು ಕೆಳಗೆ ಬಿದ್ದ ಅವನನ್ನು ಎತ್ತಿಕೊಂಡು ಲಂಕೆಯ ಕಡೆ ಹೊರಟನು.

ಕುಂಭಕರ್ಣನ ಕ್ರೂರಕರ್ಮವನ್ನು ಕಂಡು ವಾನರರೆಲ್ಲರೂ ಭಯದಿಂದ ತಳಮಳಿಸುತ್ತಿರಲು ರಾಕ್ಷಸರು ಆನಂದದಿಂದ ನಲಿದು ನರ್ತಿಸಿದರು. ಬೀದಿಗಳಲ್ಲಿ ಬರುತ್ತಿದ್ದ ಆತನ ಮೇಲೆ ರಾಕ್ಷಸಾಂಗನೆಯರು ಹೂಮಳೆ ಸುರಿಸಿದರು; ಗಂಧ ಪನ್ನೀರುಗಳನ್ನು ಆತನ ಮೇಲೆ ಚೆಲ್ಲಿದರು. ಅದೇ ಶೈತ್ಯೋಪಚಾರವಾಗಿ ಸುಗ್ರೀವನ ಮೂರ್ಛೆ ತಿಳಿಯಿತು. ಎಚ್ಚತ್ತವನೆ ಆತನು ಕುಂಭಕರ್ಣನ ಮೈಯನ್ನೆಲ್ಲ ಪರಚಿ, ಅವನ ಕಿವಿ ಮೂಗುಗಳನ್ನು ಕಚ್ಚಿಬಿಟ್ಟನು. ರಾಕ್ಷಸನ ವೇಷವೆಲ್ಲವೂ ರಕ್ತದಿಂದ ತೊಯ್ದು ಹೋಯಿತು. ಆತನು ಆ ಸುಗ್ರೀವನನ್ನು ನೆಲಕ್ಕೆತ್ತಿಹಾಕಿ ಕಾಲಿನಿಂದ ತುಳಿದನು. ಸುತ್ತಮುತ್ತಲ್ಲಿದ್ದ ರಾಕ್ಷಸರೆಲ್ಲರೂ ಆ ಕಪಿವೀರನನ್ನು ಚೆನ್ನಾಗಿ ಪ್ರಹರಿಸಿದರು. ಸುಗ್ರೀವನು ಅದನ್ನೆಲ್ಲ ಸಹಿಸುತ್ತಾ ಹೇಗೊ ಅವರ ಕೈಯಿಂದ ನುಣುಚಿಕೊಂಡು ಶ್ರೀರಾಮನ ಬಳಿಗೆ ಹಾರಿಬಂದನು.

ಕೈಗೆ ಸಿಕ್ಕ ತುತ್ತು ಬಾಯಿಗಿಲ್ಲದಂತಾದುದನ್ನು ಕಂಡು ಕುಂಭಕರ್ಣನಿಗೆ ರೇಗಿಹೋಯಿತು. ಕೈಗೆಸಿಕ್ಕಿದ ಪರಿಘವೊಂದನ್ನು ಮುಷ್ಟಿಯಲ್ಲಿ ಹಿಡಿದು ಅವನು ಸುಗ್ರೀವನ ಹಿಂದೆಯೆ ರಣಭೂಮಿಗೆ ಧಾವಿಸಿದನು. ಕೋಪದಿಂದ ಮೈಮರೆತಿದ್ದ ಅವನಿಗೆ ಇವರು ವಾನರರು ಇವರು ರಾಕ್ಷಸರು ಎಂಬ ಪ್ರಜ್ಞೆಯೆ ಇಲ್ಲದೆ ಕೈಗೆ ಸಿಕ್ಕಿದವರನ್ನೆಲ್ಲಾ ಭಕ್ಷಿಸುತ್ತಾ ಹೊರಟನು. ಪ್ರಳಯಕಾಲದ ಮೃತ್ಯುವಿನಂತೆ ಇವನ ಕೃತ್ಯವನ್ನು ಕಂಡು ವಾನರರು ಓಡಿ ಬಂದು ಶ್ರೀರಾಮನಲ್ಲಿ ಮೊರೆಯಿಟ್ಟರು. ಅವರ ಆರ್ತನಾದವನ್ನು ಕೇಳಿ ಲಕ್ಷ್ಮಣನು ಆ ರಾಕ್ಷಸನಿಗೆ ಇದಿರಾದನು. ಆತನು ಏಳು ಕೂರಂಬುಗಳನ್ನು ಏಕಕಾಲದಲ್ಲಿ ಹೂಡಿ ಆ ರಾಕ್ಷಸನ ಮೇಲೆ ಪ್ರಯೋಗಿಸಿದನು. ಆದರೆ ಆ ಭಯಂಕರ ರಾಕ್ಷಸನು ಆ ಬಾಣಗಳನ್ನು ಲೆಕ್ಕಿಸದೆ ಶ್ರೀರಾಮನನ್ನು ಹಿಡಿದು ತಿನ್ನುವುದಕ್ಕಾಗಿ ಆತನ ಕಡೆಗೆ ಓಡಿದನು. ಇದನ್ನು ಕಂಡು ಶ್ರೀರಾಮಚಂದ್ರನು ಭಯಂಕರವಾದ ಬಾಣಗಳನ್ನು ಅವನ ಮೇಲೆ ಸುರಿಸಿದನು. ಅವುಗಳಿಂದ ಗಾಸಿಗೊಂಡು ಉಬ್ಬಸಪಡುತ್ತಿದ್ದರೂ ಆ ರಾಕ್ಷಸನು ನಿಲ್ಲಲಿಲ್ಲ. ಕೈಗೆ ಸಿಕ್ಕ ವಾನರರನ್ನು ಭಕ್ಷಿಸುತ್ತಾ ಶ್ರೀರಾಮನ ಕಡೆಗೆ ಧಾವಿಸುತ್ತಲೆ ಬಂದನು.

ತನ್ನ ಕಣ್ಣಿದಿರಿನಲ್ಲಿಯೆ ವಾನರ ಭಕ್ಷಣೆಯಾಗುತ್ತಿರುವುದನ್ನು ಕಂಡು ಕನಲಿದ ರಾಮಚಂದ್ರನು ಮತ್ತೊಂದು ಮಹಾಸ್ತ್ರವನ್ನು ಆ ರಾಕ್ಷಸನ ಎದೆಗೆ ಗುರಿಯಿಟ್ಟು ಹೊಡೆದನು. ಆ ಬಾಣ ತಾಕುತ್ತಲೆ ರಾಕ್ಷಸನ ಕೈಯಲ್ಲಿದ್ದ ಪರಿಘ ಕೆಳಕ್ಕೆ ಜಾರಿಬಿತ್ತು; ಅವನು ನಿರಾಯುಧನಾದನು.

ಕುಂಭಕರ್ಣನಿಗೆ ಆಯುಧ ಬಿದ್ದುಹೋದುದರಿಂದ ಯಾವ ನಷ್ಟವೂ ಆಗಲಿಲ್ಲ. ದೊಡ್ಡದಾದ ಒಂದು ಪರ್ವತವನ್ನು ಎತ್ತಿ ಶ್ರೀರಾಮನ ಮೇಲೆ ಒಗೆದನು. ಆತನು ಬಾಣವೊಂದರಿಂದ ಆ ಪರ್ವತವನ್ನು ನಿವಾರಿಸಿಕೊಂಡು ಎದುರಾಳಿಯ ಮೇಲೆ ಬಾಣದ ಮಳೆಯನ್ನು ಕರೆದನು. "ಎಲವೊ ರಾಕ್ಷಸಾ, ನೋಡು ಶ್ರೀರಾಮನ ಬಾಣಗಳ ರುಚಿಯನ್ನು!" ಎಂದು ಆತನು ಹೇಳಿದರೆ, ಆ ರಾಕ್ಷಸನು ಪಕಪಕನೆ ನಗುತ್ತ "ಎಲವೋ ರಾಮ, ನಾನೇನು ವಿರಾಧನಲ್ಲ, ಕಬಂಧನಲ್ಲ, ಖರನಲ್ಲ, ವಾಲಿಯಂತೂ ಮೊದಲೇ ಅಲ್ಲ. ನಾನು ಕುಂಭಕರ್ಣ. ನಿನ್ನ ಪರಾಕ್ರಮವನ್ನೆಲ್ಲಾ ಪ್ರದರ್ಶಿಸಿಬಿಡು. ಅದನ್ನು ನೋಡಿ ಆಮೇಲೆ ನಿನ್ನನ್ನು ಭಕ್ಷಿಸುತ್ತೇನೆ" ಎಂದು ಹೇಳಿ, ಇದಿರಾಳಿ ಸುರಿಸಿದ ಬಾಣಗಳನ್ನು ನಿರ್ಲಕ್ಷಿಸಿ ವಿಫಲಗೊಳಿಸುತ್ತಾ ಬಂದನು. ಬರಬರುತ್ತಾ ಶ್ರೀರಾಮನ ಬತ್ತಳಿಕೆ ಬರಿದಾಗುವ ಸ್ಥಿತಿಗೆ ಬಂತು. ಆತನು ಕನಲಿ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ಒಡನೆಯೆ ರಾಕ್ಷಸನ ತೋಳು ಹಾರಿಹೋಯಿತು. ಅದು ಕೆಳಕ್ಕೆ ಬಿದ್ದ ಕಡೆ ಹಲವಾರು ವಾನರರು ಅದರಡಿಸಿಕ್ಕಿ ಸತ್ತುಹೋದರು. ಆದರೂ ಒಂದೇ ತೋಳಿನಿಂದ ಯುದ್ಧಮಾಡುತ್ತಿದ್ದ ಆ ರಾಕ್ಷಸನ ಮತ್ತೊಂದುತೋಳೂ ಶ್ರೀರಾಮನ ಐಂದ್ರಾಸ್ತ್ರದಿಂದ ಕತ್ತರಿಸಿಹೋಯಿತು. ಮತ್ತೆರಡು ಬಾಣಗಳಿಂದ ಕುಂಭಕರ್ಣನ ಎರಡು ಕಾಲುಗಳೂ ಕತ್ತರಿಸಿಹೋದುವು. ಇಷ್ಟಾದರೂ ಆ ರಾಕ್ಷಸನ ಆಟೋಪ ಕಡಿಮೆಯಾಗಲೊಲ್ಲದು. ಬಡಬಾಗ್ನಿ ಸಮನಾದ ತನ್ನ ಬಾಯನ್ನು ತೆರೆದುಕೊಂಡು ಆಕಾಶದಲ್ಲಿ ಚಂದ್ರನನ್ನು ನುಂಗಬರುವ ರಾಹುವಿನಂತೆ ಶ್ರೀರಾಮನನ್ನು ನುಂಗಬಯಸಿ ಕುಪ್ಪಳಿಸಿ ಬರುತ್ತಿದ್ದನು. ಶ್ರೀರಾಮನು ಅವನ ಸಾಹಸವನ್ನು ಕಂಡು ಆಶ್ಚರ್ಯಪಡುತ್ತಾ ಸಹಸ್ರಾರು ಬಾಣಗಳನ್ನು ಕರೆದು ಅವನ ಬಾಯನ್ನೆಲ್ಲ ಬಾಣಗಳಿಂದ ಗಿಡಿದನು. ಅನಂತರ ಆತನು ಮತ್ತೊಮ್ಮೆ ಐಂದ್ರಾಸ್ತ್ರವನ್ನು ಪ್ರಯೋಗಿಸಿ, ಆ ರಾಕ್ಷಸನ ರುಂಡವನ್ನು ಮುಂಡದಿಂದ ಬೇರ್ಪಡಿಸಿದನು. ಮುಂಡರುಂಡಗಳು ಬೇರೆಬೇರೆಯಾಗಿ ಭೂಮಿಯ ಮೇಲೆ ಬಿದ್ದ ರಭಸಕ್ಕೆ ಭೂಮಿ ಅದುರಿತು. ಆಕಾಶದಲ್ಲಿದ್ದ ದೇವತೆಗಳೆಲ್ಲರೂ ಘೋರ ರಾಕ್ಷಸನ ಮರಣವನ್ನು ಕಂಡು ಆನಂದದಿಂದ ಪುಷ್ಪವೃಷ್ಟಿ ಕರೆದರು. ವಾನರರೆಲ್ಲರೂ ಕುಕಿಲಿರಿಯುತ್ತಾ ಬಾಲಗಳನ್ನು ಎತ್ತಿಕೊಂಡು ಕುಣಿದಾಡಿದರು. ಶ್ರೀರಾಮನು ರಣಭಯಂಕರನಾದ ಆ ರಕ್ಕಸನನ್ನು ಕೊಂದು ಸಂತುಷ್ಟನಾಗಿ ಒಮ್ಮೆ ಮುಗುಳ್ನಗೆ ನಕ್ಕನು.

---

೧೪

## ದೇವಾಂತಕ ನರಾಂತಕಾದಿ ರಾಕ್ಷಸವೀರರ ಹನನ

ಕುಂಭಕರ್ಣನ ಮರಣವೃತ್ತಾಂತವನ್ನು ಕೇಳಿ ರಾವಣೇಶ್ವರನು ದುಃಖದಿಂದ ಮೈಗಾಣದವನಾದನು. "ಅಯ್ಯೋ ! ನಿನ್ನಂತಹ ಅಸಹಾಯ ಶೂರನಾದ ತಮ್ಮನನ್ನು ಕಳೆದುಕೊಂಡೂ ನಾನಿನ್ನೂ ಬಾಳಬೇಕೆ! ನನಗಿನ್ನು ಈ ರಾಜ್ಯದಿಂದ ಏನು ಪ್ರಯೋಜನ? ಸೀತೆಯಿಂದ ಏನು ಪ್ರಯೋಜನ ? ನಾನೀಗಲೇ ಆ ನನ್ನ ಅಣುಗುದಮ್ಮನನ್ನು ಅನುಸರಿಸಿ ಹೊರಡುತ್ತೇನೆ. ಆತನನ್ನು ಅಗಲಿ ನಾನು ಕ್ಷಣಕಾಲವೂ ಜೀವಿಸಿರಲಾರೆ" ಎಂದು ಆತನು ಪ್ರಲಾಪಿಸುತ್ತಾ ಮೂರ್ಛೆಹೋಗಿ ನೆಲಕ್ಕೆ ಬಿದ್ದನು.

ತನ್ನ ಸ್ವಾಮಿ ದುಃಖದಲ್ಲಿ ಮುಳುಗಿರುವುದನ್ನು ಕಂಡು ತ್ರಿಶಿರಸ್ಕನೆಂಬ ರಾಕ್ಷಸನು ಆತನನ್ನು ಸಂತೈಸಿದನು. ತ್ರಿಭುವನ ಶೂರನಾದ ಆತನು ಹೆಣ್ಣಿನಂತೆ ಅಳುತ್ತಾ ಕೂಡುವುದು ಅಯೋಗ್ಯವೆಂದು ಹೇಳಿದನು. ತಾನು ರಣರಂಗಕ್ಕೆ ಹೋಗಿ ರಾಮಲಕ್ಷ್ಮಣರ ಹುಟ್ಟಡಗಿಸುವುದಾಗಿ ಭರವಸೆಯಿತ್ತನು. ದೇವಾಂತಕ ನರಾಂತಕ ಅತಿಕಾಯರೆಂಬ ಮಹಾಶೂರರಾದ ರಾಕ್ಷಸ ರಾಜಪುತ್ರರೂ ಯುದ್ಧಕ್ಕೆ ಸಿದ್ಧರಾಗಿ ರಾವಣೇಶ್ವರನ ಅಪ್ಪಣೆಯನ್ನು ಕೋರಿದರು. ಇವರ ಉತ್ಸಾಹವನ್ನು ಕಂಡು ದಾನವೇಶ್ವರನು ತನ್ನ ದುಃಖವನ್ನು ಹಾಗೆಯೆ ನುಂಗಿಕೊಂಡನು. ಯುದ್ಧಕ್ಕೆ ಹೊರಟ ನಾಲ್ವರಲ್ಲಿ ಒಬ್ಬೊಬ್ಬರೂ ವಿಶಾಲಕೀರ್ತಿಶಾಲಿಗಳು ; ಮಹಾ ಮಾಯಾವಿಗಳು ; ಯುದ್ಧದಲ್ಲಿ ಹಿಮ್ಮೆಟ್ಟದ ಕಡುಗಲಿಗಳು. ರಾವಣೇಶ್ವರನು ಅವರನ್ನು ಅನರ್ಘ್ಯವಾದ ರತ್ನಾಭರಣಗಳಿಂದ ಪುರಸ್ಕರಿಸಿ, ಆಶೀರ್ವಾದಪೂರ್ವಕವಾಗಿ ಯುದ್ಧಕ್ಕೆ ಬೀಳ್ಕೊಟ್ಟನು.

ತ್ರಿಶಿರಸ್ಕನಿಗೆ ಅವನ ಹೆಸರೇ ಸೂಚಿಸುವಂತೆ ಮೂರು ತಲೆಗಳು. ಒಂದೊಂದು ತಲೆಯೂ ರತ್ನಖಚಿತವಾದ ಕಿರೀಟಗಳಿಂದ ಅಲಂಕೃತವಾಗಿತ್ತು. ಮೂರು ಶಿಖರಗಳಿಂದ ಬೆಳಗುವ ಬೆಟ್ಟದಂತೆ ಬೆಳಗುತ್ತಾ ಆತನು ದಿವ್ಯ ರಥವೊಂದನ್ನೇರಿ ಯುದ್ಧಕ್ಕೆ ಹೊರಟನು. ಆತನ ರಥದ ಹಿಂದೆ ಅತಿಕಾಯನ ರಥ ಹೊರಟಿತು. ನರಾಂತಕನು ಬೆಂಕಿಯಂತೆ ಬೆಳಗುವ ಆಯುಧಗಳನ್ನು ಧರಿಸಿ, ಉಚ್ಚೈಃಶ್ರವಸ್ಸಿನಂತಹ ಉತ್ತಮಾಶ್ವವನ್ನೇರಿ ಅಸಂಖ್ಯಾತವಾದ ರಾಕ್ಷಸರ ಪರಿವಾರದೊಡನೆ ರಣರಂಗಕ್ಕೆ ಹೊರಟನು. ದೇವಾಂತಕ ಮಹಾಪಾರ್ಶ್ವರು ಪರಿಘವನ್ನೂ ಗದೆಯನ್ನೂ ಧರಿಸಿ, ತಮ್ಮ ನೋಟಗಳಿಂದ ಗರ್ವ ಪ್ರವಾಹವನ್ನು ಪಸರಿಸುತ್ತಾ ಯುದ್ಧಕ್ಕೆ ಹೊರಟರು. "ರಣರಂಗದಲ್ಲಿ ಸಾಯಬೇಕು, ಇಲ್ಲವೆ ಗೆಲ್ಲಬೇಕು" ಎಂಬ ನಿಶ್ಚಯ ಅವರ ಮುಖಗಳಲ್ಲಿ ಮುದ್ರಿತವಾಗಿತ್ತು. ಈ ರಾಕ್ಷಸನಾಯಕರೆಲ್ಲರೂ ಅಪಾರ ಸೈನ್ಯದೊಡನೆ ಯುದ್ಧರಂಗವನ್ನು ಪ್ರವೇಶಿಸಿ, ಏಕಕಾಲದಲ್ಲಿ ಭಯಂಕರವಾಗಿ ಸಿಂಹನಾದ ಮಾಡಿದರು. ಆ ಶಬ್ದದಿಂದ ಅಂತರಿಕ್ಷವೇ ಒಡೆದುಹೋಗುವಂತಾಯಿತು.

ರಾಕ್ಷಸರ ಸಿಂಹನಾದವನ್ನು ಕೇಳಿ ವಾನರರೂ ಸಿಂಹನಾದ ಮಾಡಿದರು. ಕ್ಷಣ ಮಾತ್ರದಲ್ಲಿ ಇಬ್ಬಣದವರೆಗೂ ಕೈಗೆ ಕೈ ಕಲೆಯಿತು. ರಾಕ್ಷಸರ ಬಾಣಗಳ ಸುರಿಮಳೆ ವಾನರರ ಕಲ್ಗುಂಡುಗಳ ಪ್ರವಾಹ—ಇವು ಅಂತರಿಕ್ಷವನ್ನೆ ತುಂಬಿಬಿಟ್ಟವು. ಎರಡು ಗುಂಪುಗಳಲ್ಲಿಯೂ ಸಹಸ್ರಾರು ಜನ ಮಡಿದುರುಳಿ ರಕ್ತಪ್ರವಾಹ ಹರಿಯಿತು. ರಾಕ್ಷಸರ ಕಡೆ ನರಾಂತಕನು ಯಮನಂತೆ ವಿಜೃಂಭಿಸುತ್ತಾ ಸಹಸ್ರಾರು ವಾನರರ ಮರಣಕ್ಕೆ ಕಾರಣನಾದನು. ಇದನ್ನು ಕಂಡು ಸುಗ್ರೀವನು ಆ ರಾಕ್ಷಸನನ್ನು ಬಲಿಯಿಕ್ಕುವಂತೆ ಅಂಗದ ಕುಮಾರನಿಗೆ ಆಜ್ಞಾಪಿಸಿದನು. ಒಡನೆಯೆ ಆ ವಾನರವೀರನು ಮುಗಿಲ ಮಧ್ಯ ದಿಂದ ಹೊರಬಂದ ಸೂರ್ಯನಂತೆ ವಾನರ ಸೈನ್ಯದಿಂದ ಹೊರಹೊರಟು ನರಾಂತಕನನ್ನು ಇದಿರಿಸಿದನು. ತನ್ನ ಸಂಹಾರಕಾರ್ಯಕ್ಕೆ ಅಡ್ಡಿಯಾದ ಈ ವಾನರನನ್ನು ಆ ರಾಕ್ಷಸ ವೀರನು ತನ್ನ ಪ್ರಾಸಾಯುಧದಿಂದ ಪ್ರಹರಿಸಿದನು; ಆ ಆಯುಧ ಪುಡಿಪುಡಿ ಯಾಯಿತು. ಕೋಪಗೊಂಡ ಅಂಗದನು ಒಂದು ಗುದ್ದಿನಿಂದ ಆ ರಾಕ್ಷಸನೇರಿದ್ದ ಕುದುರೆಯನ್ನು ಶತ ಖಂಡವಾಗಿ ಭಗ್ನಮಾಡಿದನು. ಮತ್ತೊಂದು ಗುದ್ದಿಗೆ ನರಾಂತಕನು ರಕ್ತವನ್ನು ಕಾರುತ್ತಾ ನರಕದ ದಾರಿ ಹಿಡಿದನು. ಇದನ್ನು ಕಂಡು ಕಪಿಯೋಧರೆಲ್ಲರೂ ಪರಮಾನಂದಭರಿತರಾಗಿ ಕುಣಿದಾಡಿದರು.

ನರಾಂತಕನ ತಮ್ಮನಾದ ಮಹೋದರನು ಅಣ್ಣನಿಗಾದ ದುರಂತವನ್ನು ಕಂಡು ಕೋಪದಿಂದ ಕಿಡಿಕಿಡಿಯಾಗಿ ಅಂಗದನ ಮೇಲೆ ಏರಿಬಂದನು. ಅದೇ ವೇಳೆಗೆ ದೇವಾಂತ ಕನೂ ಆತನ ಮೇಲೆ ಏರಿಬಂದನು; ಮತ್ತೊಂದು ಕಡೆಯಿಂದ ತ್ರಿಶಿರಸ್ಕನೂ ಅವರಿಬ್ಬ ರೊಡನೆ ಬಂದು ಸೇರಿದನು. ಅಂಗದನೊಬ್ಬನೇ ಮೂವರೊಡನೆಯೂ ಹೋರಾಡ ಬೇಕಾಯಿತು. ಆದರೂ ಎದೆಗೆಡಲಿಲ್ಲ. ಸುಂಟರಗಾಳಿಯಂತೆ ಗಿರಿಗಿರನೆ ತಿರುಗುತ್ತಾ, ಅವರು ಪ್ರಯೋಗಿಸುತ್ತಿದ್ದ ಕೂರಂಬುಗಳಿಂದ ತಪ್ಪಿಸಿಕೊಂಡು, ಅವರೊಡನೆ ಸೆಣಸು ತ್ತಿದ್ದನು. ಒಮ್ಮೆ ಆತನು ಮಹೋದರನೇರಿದ್ದ ಆನೆಯ ಕುಂಭ ಸ್ಥಳಕ್ಕೆ ತನ್ನ ವಜ್ರ ಮುಷ್ಟಿಯಿಂದ ಗುದ್ದಿದನು. ಆ ಪೆಟ್ಟಿಗೆ ಆನೆಯ ಕಣ್ಣುಗಳು ಕಳಚಿಬಿದ್ದುವು. ಅದು ಘೀಳಿಡುತ್ತಾ ಸೊಂಡಿಲನ್ನು ಎತ್ತುವಷ್ಟರಲ್ಲಿ ಆ ವಾನರವೀರನು ಅದರ ದಂತವನ್ನು ಕಿತ್ತು ಅದರಿಂದಲೆ ದೇವಾಂತಕನನ್ನು ಮೋದಿದನು. ಪರಿಘದಿಂದ ತನ್ನನ್ನು ಹೊಡೆಯ ಬಂದ ತ್ರಿಶಿರಸ್ಕನ ತಲೆಯನ್ನು ಮೆಟ್ಟಿದನು. ಹೀಗೆ ಅತುಲ ಸಾಹಸವನ್ನು ಪ್ರದರ್ಶಿಸು ತ್ತಿದ್ದರೂ ಒಬ್ಬನೆ ಮೂವರೊಡನೆ ಸರಿಸಮನಾಗಿ ಕೊನೆಯವರೆಗೂ ಹೋರಾಡು ವುದು ಸಾಧ್ಯವಿರಲಿಲ್ಲ. ಕ್ರಮಕ್ರಮೇಣ ಆತನ ಶಕ್ತಿ ಕುಗ್ಗಿಹೋಗುವುದರಲ್ಲಿತ್ತು. ಅಷ್ಟರಲ್ಲಿ ಹನುಮಂತನೂ ನೀಲನೂ ಆ ವಾನರನ ಸಹಾಯಕ್ಕಾಗಿ ನುಗ್ಗಿಬಂದರು. ನೀಲನು ತ್ರಿಶಿಸ್ಕರನನ್ನು ಎದುರಿಸಿದನು. ಹನುಮಂತನ ವಜ್ರಮುಷ್ಟಿಗೆ ಸಿಕ್ಕಿದ ದೇವಾಂತಕನ ತಲೆ ಜಜ್ಜಿಹೋಗಿ ಅದರಲ್ಲಿದ್ದ ಕಣ್ಣುಗುಡ್ಡೆಗಳೂ ಹಲ್ಲುಗಳೂ ನಾಲಗೆಯೂ ಕಳಚಿ ಕೆಳಗೆ ಬಿದ್ದುವು. ಅಸುದೊರೆದ ಆ ರಾಕ್ಷಸನ ದೇಹ ದೊಪ್ಪನೆ ನೆಲಕ್ಕುರುಳಿತು.

ತ್ರಿಶಿರಸ್ಕನೊಡನೆ ಹೋರಾಡುತ್ತಿದ್ದ ನಳನನ್ನು ಕಂಡು ಮಹೋದರನು ಮೊನಚಾದ ಬಾಣವೊಂದನ್ನು ಗುರಿಯಿಟ್ಟು ಅವನೆದೆಗೆ ಹೊಡೆದನು. ಆ ಬಾಣದ ಹೊಡೆತಕ್ಕೆ ನಳನು ಕ್ಷಣಕಾಲ ತತ್ತರಿಸಿಹೋದನು. ಮರುಕ್ಷಣದಲ್ಲಿಯೆ ಆತನು ಅತ್ಯಂತ ಕೋಪಾವಿಷ್ಟನಾಗಿ ಮರವೊಂದರ ಬುಡದಿಂದ ಮಹೋದರನ ತಲೆಯ ಮೇಲೆ ಹೊಡೆದನು. ಆ ಪೆಟ್ಟಿಗೆ ರಾಕ್ಷಸನ ತಲೆಯೊಡೆದು ಅವನು ಸತ್ತುಹೋದನು. ಅಷ್ಟರಲ್ಲಿ ಹನುಮಂತನು ತ್ರಿಶಿರಸ್ಕರನ ಮೇಲೆ ಹೆಮ್ಮರಗಳ ಮಳೆಯನ್ನು ಸುರಿಸಲು ಮೊದಲು ಮಾಡಿದನು. ಶೂರನಾದ ತ್ರಿಶಿರಸ್ಕರನು ಆ ಮರಗಳನ್ನೆಲ್ಲಾ ತನ್ನ ಬಾಣಗಳಿಂದ ನಿವಾರಿಸಿಕೊಳ್ಳುತ್ತಾ ತನ್ನಲ್ಲಿದ್ದ ಶಕ್ತ್ಯಾಯುಧವನ್ನು ಎದುರಾಳಿಯ ಮೇಲೆ ಪ್ರಯೋಗಿಸಿದನು. ಉಲ್ಕಾಪಾತವಾದಂತೆ ಉರಿಯುತ್ತಾ ಬರುತ್ತಿದ್ದ ಆ ಶಕ್ತಿಯನ್ನು ಹನುಮಂತನು ಕೈಲಿ ಹಿಡಿದು ಮುರಿದುಹಾಕಿದನು. ಇದರಿಂದ ಕುಪಿತನಾದ ಆ ರಾಕ್ಷಸನು ತನ್ನ ಖಡ್ಗದಿಂದ ಮಾರುತಿಯ ವಕ್ಷಸ್ಥಳಕ್ಕೆ ಹೊಡೆದನು. ಅದನ್ನು ಲಕ್ಷಿಸದೆ ಮಾರುತಿ ಅವನ ನೆತ್ತಿಯ ಮೇಲೆ ಗುದ್ದಿ ಅವನ ಕೈಲಿದ್ದ ಖಡ್ಗವನ್ನು ಕಿತ್ತುಕೊಂಡನು. ಆತನ ಈ ಸಾಹಸವನ್ನು ಕಂಡು ವಾನರರೆಲ್ಲರೂ ಸಂತೋಷದಿಂದ ಬೊಬ್ಬಿರಿದರು. ಇದನ್ನು ಕಂಡ ತ್ರಿಶಿರಸ್ಕರನು ಕ್ರೋಧಾಂಧನಾದನು. ಓಡಿಬಂದು ತನ್ನ ಮುಷ್ಟಿಯಿಂದ ಮಾರುತಿಯನ್ನು ಪ್ರಹರಿಸಿದನು. ಹನುಮಂತನು ಅವನ ಈ ಅವಿನಯವನ್ನು ಕಂಡು ಕೋಪದಿಂದ ಅವನ ಕಿರೀಟಗಳನ್ನು ಹಿಡಿದುಕೊಂಡು ಶಿರಸ್ಸು ಗಳನ್ನು ಛೇದಿಸಿಹಾಕಿದನು.

ರಾವಣನಿಂದ ಅನುಜ್ಞೆ ಪಡೆದು ಹೊರಟುಬಂದವರಲ್ಲಿ ಮಹಾಪಾರ್ಶ್ವನೊಬ್ಬನು ಉಳಿದಿದ್ದನು. ಋಷಭನೆಂಬ ವಾನರವೀರನು ಅವನೊಡನೆ ಹೋರಾಡುತ್ತಿದ್ದನು. ಆ ರಾಕ್ಷಸನ ಗದಾಘಾತದಿಂದ ವಾನರನ ತಲೆಯೊಡೆದು ರಕ್ತ ಸುರಿಯಿತು. ಕುಪಿತನಾದ ಋಷಭನು ವೇಗದಿಂದ ಆ ರಾಕ್ಷಸನ ಮೇಲೆ ಬಿದ್ದು, ಅವನ ಕೈಲಿದ್ದ ಗದೆಯನ್ನು ಕಿತ್ತುಕೊಂಡು, ಅದನ್ನು ಗರಗರ ತಿರುಗಿಸಿ ಅವನ ತಲೆಯ ಮೇಲೆ ಹೊಡೆದನು. ಆ ಪೆಟ್ಟಿಗೆ ಆ ರಾಕ್ಷಸನ ತಲೆಯೊಡೆದು ಅವನು ಸತ್ತುಬಿದ್ದನು. ತಮ್ಮ ಕಡೆಯ ಪ್ರಮುಖರೆಲ್ಲರೂ ಮಡಿದುರುಳಿದುದನ್ನು ಕಂಡು, ರಾಕ್ಷಸರು ದಿಕ್ಕೆಟ್ಟು ಪಲಾಯನ ಮಾಡಿದರು.

---

೧೫

# ಅತಿಕಾಯ ಸಂಹಾರ

ದಿಕ್ಕಾಪಾಲಾಗಿ ಚದುರಿ ಓಡಿಬರುತ್ತಿದ್ದ ರಾಕ್ಷಸ ಸೈನ್ಯವು ರಾವಣನ ಮಗನಾದ ಅತಿಕಾಯನಿಗೆ ಕಾಣಿಸಿತು. ಅತಿಕಾಯನೆಂದರೆ ಸಾಮಾನ್ಯನಲ್ಲ. ಅವನ ಹೆಸರಿಗೆ ತಕ್ಕಂತೆ ಭಯಂಕರವಾದ ಆಕಾರವುಳ್ಳವನು. ಯುದ್ಧದಲ್ಲಿ ದುರ್ಜಯನಾಗುವಂತೆ ಬ್ರಹ್ಮನಿಂದ ವರವನ್ನು ಪಡೆದಿದ್ದವನು. ದೇವದಾನವ ಮಾನವರಲ್ಲಿ ಯಾರೂ ಆತನನ್ನು ಇದಿರಿಸುವವರಿಲ್ಲವೆಂಬ ಕೀರ್ತಿಯನ್ನು ತಾಳಿದ್ದನು. ಇಂತಹ ಆತನು, ಓಡಿಬರುತ್ತಿದ್ದ ರಾಕ್ಷಸ ಯೋಧರನ್ನು ನಿಲ್ಲಿಸಿ, ರಣರಂಗದ ಸಮಾಚಾರವನ್ನೆಲ್ಲ ತಿಳಿದುಕೊಂಡನು. ತನ್ನ ತಮ್ಮಂದಿರೂ ಚಿಕ್ಕಪ್ಪನಾದ ಮಹಾಪಾರ್ಶ್ವನೂ ಮಡಿದುದನ್ನು ಕೇಳಿ ಆತನಿಗೆ ಕೋಪವುಕ್ಕಿತು. ಓಡಿಬರುತ್ತಿದ್ದ ಸೈನ್ಯವನ್ನೆಲ್ಲ ಒಟ್ಟುಗೂಡಿಸಿಕೊಂಡು, ತನ್ನ ದಿವ್ಯ ರಥವನ್ನೇರಿ ಹಾಗಿಂದ ಹಾಗೆಯೇ ರಣರಂಗಕ್ಕೆ ಹೊರಟನು.

ದೂರದಿಂದ ಬರುತ್ತಿದ್ದ ಅತಿಕಾಯನನ್ನು ಕಂಡು ವಾನರರೆಲ್ಲರೂ ಕುಂಭಕರ್ಣನೆ ಮತ್ತೊಮ್ಮೆ ಯುದ್ಧಕ್ಕೆ ಎದ್ದು ಬಂದಿರುವನೆಂದು ಭಾವಿಸಿ, ಓಡಿ ಹೋಗಿ ಶ್ರೀರಾಮನ ಮರೆಹೊಕ್ಕರು. ಆ ಅತಿಕಾಯನ ಆಕಾರವನ್ನು ಕಂಡು ಶ್ರೀರಾಮನಿಗೂ ಭ್ರಾಂತಿ ಹುಟ್ಟಿತು. ಪಕ್ಕದಲ್ಲಿದ್ದ ವಿಭೀಷಣನನ್ನು ಕುರಿತು "ಏನಯ್ಯಾ ವಿಭೀಷಣ? ಈ ಮಹಾಕಾಯನಾರು?" ಎಂದು ಕೇಳಿದನು. ಆತನು "ಪ್ರಭು, ರಾಮಚಂದ್ರ, ಇವನು ರಾವಣನ ಮಗನು. ಅತಿಕಾಯನೆಂದು ಇವನ ಹೆಸರು. ಯುದ್ಧ ವಿದ್ಯೆಯಲ್ಲಿ ಇವನು ಮಹಾ ಚತುರ. ಸಕಲ ಶಸ್ತ್ರಾಸ್ತ್ರ ಶಾಸ್ತ್ರಗಳಲ್ಲಿಯೂ ಪಾರಂಗತನಾದವನು. ಯುದ್ಧದಲ್ಲಿ ಅಜೇಯನಾಗುವಂತೆ ಬ್ರಹ್ಮನಿಂದ ಇವನು ವರ ಪಡೆದಿರುವನು. ಇವನ ರಥ ಕವಚಗಳೆರಡೂ ದಿವ್ಯವಾದುವು. ಇವನು ತನ್ನ ಬಾಣಗಳಿಂದ ವಾನರ ಸೇನೆಯನ್ನೆಲ್ಲಾ ನಾಶ ಮಾಡುವುದರೊಳಗಾಗಿ ನೀನು ಈತನೊಡನೆ ಯುದ್ಧ ಮಾಡಿ ಈತನನ್ನು ಗೆಲ್ಲಬೇಕು" ಎಂದನು. ಅಷ್ಟರಲ್ಲಿ ಅತಿಕಾಯನು ರಣಾಂಗಣವನ್ನು ಪ್ರವೇಶಿಸಿ, ಒಮ್ಮೆ ಸಿಂಹನಾದ ಮಾಡಿದನು.

ಅತಿಕಾಯನ ಸಿಂಹನಾದಕ್ಕೆ ಪ್ರತ್ಯುತ್ತರವಾಗಿ ಕುಮುದ, ದ್ವಿವಿದ, ಮೈಂದ, ನೀಲ, ಶರಭ ಎಂಬ ಐವರು ವಾನರ ಸೇನಾನಿಗಳು ಮರಗಳನ್ನೂ, ಪರ್ವತಶಿಖರಗಳನ್ನೂ ಹಿಡಿದು ಆತನಿಗೆ ಇದಿರಾದರು. ಆದರೇನು? ಬಿರುಗಾಳಿಗೆ ಇದಿರಾದ ಮೋಡಗಳಂತೆ ಇವರು ಕ್ಷಣಮಾತ್ರದಲ್ಲಿ ಧ್ವಂಸವಾಗಿ ಹೋದರು. ಧರ್ಮಯುದ್ಧವನ್ನು ಕೈಗೊಂಡಿದ್ದ ಅತಿಕಾಯನು ಯುದ್ಧಕ್ಕೆ ಇದಿರಾದವರನ್ನು ಮಾತ್ರ ಸಂಹರಿಸುತ್ತ ಹೊರಟನೆ ಹೊರತು ಓಡಿಹೋಗುತ್ತಿದ್ದವರನ್ನು ಘಾತಿಸಲಿಲ್ಲ. ಕ್ಷಣಮಾತ್ರದಲ್ಲಿ ವಾನರ ಸೇನೆಯೆಲ್ಲವೂ

ಬಯಲಾದುದನ್ನು ಕಂಡು ಆತನು ನೇರವಾಗಿ ಶ್ರೀರಾಮನ ಬಳಿಗೆ ಬಂದು "ಅಯ್ಯಾ ರಾಮ, ನಾನು ಅತಿಕಾಯನೆಂಬ ರಾಕ್ಷಸಯೋಧ, ನಿನ್ನೊಡನೆ ಕಾಳಗವನ್ನು ಬಯಸಿ ಬಂದಿದ್ದೇನೆ. ಸಾಮಾನ್ಯ ಯೋಧರೊಡನೆ ಯುದ್ಧ ಮಾಡಲು ನನಗೆ ಇಷ್ಟವಿಲ್ಲ. ನಿನ್ನ ಸೈನ್ಯದಲ್ಲೆಲ್ಲಾ ಅತ್ಯಂತ ಸಮರ್ಥನಾದವನನ್ನು ನನ್ನ ಮೇಲೆ ಯುದ್ಧಕ್ಕೆ ಕಳುಹಿಸು ಅಥವಾ ನೀನೇ ನನ್ನೊಡನೆ ಯುದ್ಧಕ್ಕೆ ನಿಲ್ಲು" ಎಂದನು.

ಗರ್ವದಿಂದ ತುಂಬಿದ್ದರೂ ಗಂಭೀರವಾಗಿದ್ದ ಅತಿಕಾಯನ ನುಡಿಗಳನ್ನು ಕೇಳಿ ಲಕ್ಷ್ಮಣನು ಅವನೊಡನೆ ಯುದ್ಧಕ್ಕೆ ನಿಂತನು. ಬಿಲ್ಲಿಗೆ ನಾರಿಯನ್ನು ಬಿಗಿದು ಒಮ್ಮೆ ಆತನು ಟಂಕಾರ ಮಾಡಿದೊಡನೆಯೆ ಆ ಧ್ವನಿಯಿಂದ ದಶದಿಕ್ಕುಗಳೂ ತುಂಬಿಹೋದುವು. ಆದರೂ ಅತಿಕಾಯನು ಆತನನ್ನು ಕುರಿತು "ಅಯ್ಯಾ, ನೀನಿನ್ನೂ ಬಾಲಕ. ಯಮ ಸದೃಶನಾದ ನನ್ನೊಡನೆ ನೀನೇನು ಯುದ್ಧ ಮಾಡಬಲ್ಲೆ? ಬಾಲಚಾಪಲ್ಯದಿಂದ ಕಾಲಾಗ್ನಿಯನ್ನೇಕೆ ಕೆರಳಿಸಲು ಬರುತ್ತಿರುವೆ? ಬಾಣವನ್ನು ಕೆಳಗಿಟ್ಟು ಹೊರಟು ಹೋಗು" ಎಂದನು. ಅವನ ಕೊಬ್ಬಿನ ನುಡಿ ಶೂರನಾದ ಲಕ್ಷ್ಮಣನಿಗೆ ಸಹಿಸಲಿಲ್ಲ. ಆತನು ಕೋಪದಿಂದ "ಎಲಾ! ಮಾತಿನ ಮಲ್ಲರು ಮಹನೀಯರಾಗುತ್ತಾರೆಯೇ? ಸುಮ್ಮನೆ ಕೂಗಾಡುವುದನ್ನು ಬಿಟ್ಟು ನಿನ್ನ ಪೌರುಷವೆಷ್ಟಿದೆಯೊ ಅಷ್ಟನ್ನು ಇಲ್ಲಿ ಪ್ರದರ್ಶಿಸು. ಅದನ್ನು ನೋಡಿದ ಮೇಲೆ, ಕಳಿತ ತಾಳೆಯ ಹಣ್ಣನ್ನು ತೊಟ್ಟಿನಿಂದ ಕೆಡಹುವಂತೆ, ನಿನ್ನ ತಲೆಯನ್ನು ನೆಲಕ್ಕುರುಳಿಸುತ್ತೇನೆ. ನಾನು ನಿನ್ನ ಪಾಲಿನ ಮೃತ್ಯುವೆಂಬುದನ್ನು ಮರೆಯಬೇಡ" ಎಂದನು.

ಮೂದಲಿಕೆಯ ಮಾತುಗಳ ಹಿಂದುಗಡೆಯ ಬಾಣಗಳ ಸುರಿಮಳೆಗೂ ಆರಂಭವಾಯಿತು. ಅತಿಕಾಯನು ಪ್ರಯೋಗಿಸಿದ ದಿವ್ಯವಾದ ಬಾಣವನ್ನು ಲಕ್ಷ್ಮಣನು ಅರ್ಧಚಂದ್ರಾಕಾರದ ಬಾಣದಿಂದ ಮಧ್ಯಮಾರ್ಗದಲ್ಲಿಯೆ ಕತ್ತರಿಸಿ ಹಾಕಿದನು. ರಾಕ್ಷಸ ವೀರನು ಮತ್ತೈದು ಬಾಣಗಳನ್ನು ಬಿಟ್ಟನು. ಅವುಗಳಿಗೂ ಅದೇ ಗತಿಯಾಯಿತು. ಆತನು ಮತ್ತೊಮ್ಮೆ ಬಾಣವನ್ನು ಹೂಡುವುದರೊಳಗಾಗಿ ಲಕ್ಷ್ಮಣನು ದಿವ್ಯವಾದ ಒಂದು ಬಾಣವನ್ನು ಎದುರಾಳಿಯ ಮೇಲೆ ಪ್ರಯೋಗಿಸಿದನು. ಅದು ನೇರವಾಗಿ ಬಂದು ರಾಕ್ಷಸನ ಹಣೆಯಲ್ಲಿ ನಾಟಿಕೊಂಡಿತು. ಒಡನೆಯೇ ಛಿಲ್ಲೆಂದು ನೆತ್ತರು ಸುರಿದು ಆ ರಾಕ್ಷಸನ ದೇಹವೆಲ್ಲವೂ ರಕ್ತಮಯವಾಯಿತು. ಕುಪಿತನಾದ ರಾಕ್ಷಸನು ತನ್ನ ರಥವನ್ನು ಲಕ್ಷ್ಮಣನ ಸಮೀಪಕ್ಕೆ ನಡೆಸಿಕೊಂಡು ಬಂದು ಬಾಣಗಳ ಮಳೆಯನ್ನೆ ಸುರಿಸುತ್ತಾ ಕ್ರೂರವಾದ ಒಂದು ಬಾಣವನ್ನು ಎದುರಾಳಿಯ ಎದೆಗೆ ಗುರಿಯಿಟ್ಟು ಹೊಡೆದನು. ಆ ಪೆಟ್ಟು ತಾಕಿದೊಡನೆಯೆ ಲಕ್ಷ್ಮಣನು ಕ್ಷಣಕಾಲ ತತ್ತರಿಸಿ ಮೈಮರೆತನು. ನೋವಿನಿಂದ ಆತನ ಕೋಪ ಕೆರಳಿತು. ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ರಾಕ್ಷಸನ ಮೇಲೆ ಪ್ರಯೋಗಿಸಿದನು. ಆದರೇನು? ಅತಿಕಾಯನು ಸೌರಾಸ್ತ್ರವನ್ನು ಪ್ರಯೋಗಿಸಿ, ಆ ಅಸ್ತ್ರವನ್ನು ವ್ಯರ್ಥಮಾಡಿದನು. ಅತಿಕಾಯನು ಪ್ರಯೋಗಿಸಿದ ಐಷೀಕಾಸ್ತ್ರವು ಲಕ್ಷ್ಮಣನ ಐಂದ್ರಾಸ್ತ್ರದಿಂದ ಭಗ್ನವಾಯಿತು. ಹೀಗೆಯೇ ವಾರುಣಾಸ್ತ್ರ, ವಾಯವ್ಯಾಸ್ತ್ರ, ಸರ್ಪಾಸ್ತ್ರ

ಗರುಡಾಸ್ತ್ರ ಮೊದಲಾದ ಅಸ್ತ್ರಗಳನ್ನೆಲ್ಲಾ ಪ್ರಯೋಗಿಸಿದರೂ ಒಬ್ಬರಿಗೊಬ್ಬರು ಸೋಲಲಿಲ್ಲ.

ಅತಿಕಾಯ ಲಕ್ಷ್ಮಣರಿಬ್ಬರೂ ಸರಿಸಮಾನಸ್ಕಂಧರಾಗಿ ಹೋರಾಡುತ್ತಾ ಬಹು ಕಾಲ ಕಳೆಯಿತು. ಆಗ ವಾಯುದೇವನು ಪ್ರತ್ಯಕ್ಷನಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವಂತೆ ಲಕ್ಷ್ಮಣನಿಗೆ ಸೂಚಿಸಿದನು. ಬ್ರಹ್ಮನ ವರಪ್ರಸಾದದಿಂದ ಅಜೇಯನಾಗಿರುವ ಆ ರಾಕ್ಷಸನನ್ನು ಕೊಲ್ಲಲು ಅದೊಂದೇ ಮಾರ್ಗವೆಂದು ಆತನು ತಿಳಿಸಿದನು. ಆ ಸೂಚನೆಯಂತೆ ಲಕ್ಷ್ಮಣನು ದಿವ್ಯವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಕಂಡು ಅತಿಕಾಯನು ಕಂಗೆಟ್ಟು ಸಹಸ್ರಾರು ಬಾಣಗಳಿಂದ ಆ ಅಸ್ತ್ರವನ್ನು ನಿವಾರಿಸಲು ಪ್ರಯತ್ನಿಸಿದನು. ಆದರೆ ಅದೆಲ್ಲವೂ ವಿಫಲವಾಯಿತು. ಆ ಅಸ್ತ್ರವು ನೇರವಾಗಿ ಬಂದು ಅತಿಕಾಯನ ಶಿರಸ್ಸನ್ನು ಹಾರಿಸಿಕೊಂಡೆ ಹೋಯಿತು. ಹಿಮವತ್ಪರ್ವತದ ಶಿಖರದಂತೆ ಅವನ ತಲೆ ಧರೆಗುರುಳಿತು. ಅದನ್ನು ಕಂಡ ರಾಕ್ಷಸರು ಯುದ್ಧದಲ್ಲಿ ಜುಗುಪ್ಸೆ ತಾಳಿ, ಭಯದಿಂದ ನಡುಗುತ್ತಾ ದಾರಿಸಿಕ್ಕತ್ತ ಓಡಿಹೋದರು. ವಾನರರೆಲ್ಲರೂ ಲಕ್ಷ್ಮಣನ ಸುತ್ತಲೂ ನೆರೆದು ಆನಂದದಿಂದ ಕುಣಿದಾಡಿದರು.

---

೧೬

# ಇಂದ್ರಜಿತ್ತು

ಅತಿಕಾಯನ ಮರಣದ ಅತಿದಾರುಣವಾರ್ತೆಯಿಂದ ರಾವಣೇಶ್ವರನು ಮುಂಗಾಣ ದಷ್ಟು ಕಂಗೆಟ್ಟು ಹೋದನು. ತನ್ನ ಬಲಭುಜದಂತಿದ್ದ ರಾಕ್ಷಸರೆಲ್ಲರೂ ರಾಮಲಕ್ಷ್ಮಣರ ಬಾಣಕ್ಕೆ ತುತ್ತಾಗಿ ಹೋದುದನ್ನು ಕಂಡು ಆತನಿಗೆ ನಿರಾಶೆ ಮುಸುಕಿದಂತಾಯಿತು. "ಆಹ! ಆಶ್ಚರ್ಯ ಆಶ್ಚರ್ಯ! ರಾಮನು ಮಹಾ ಬಲಾಢ್ಯ, ಆತನ ಅಸ್ತ್ರಬಲ ಪರ ಮಾಶ್ಚರ್ಯಕರ! ಆತನು ನಿಜವಾಗಿಯೂ ನಾರಾಯಣ ಸ್ವರೂಪಿಯೆಂದೆ ತೋರುತ್ತಿದೆ" ಎಂಬ ಉದ್ಗಾರಗಳು ಆತನ ಬಾಯಿಂದ ಹೊರಬಿದ್ದುವು. ಸತ್ತ ತನ್ನ ಪುತ್ರರನ್ನೆಲ್ಲ ನೆನೆ ನೆನೆದು ನಿಟ್ಟುಸಿರಿಡುತ್ತಾ, ಆತನು ಮೂರ್ಛೆ ಹೋದನು. ಇದನ್ನು ಕಂಡು ಆತನ ಹಿರಿಯ ಮಗನಾದ ಇಂದ್ರಜಿತ್ತು ಆತನನ್ನು ಕುರಿತು "ತಂದೆಯೇ, ನಾನು ಜೀವಂತ ನಾಗಿರುವಾಗ ನಿನಗೆ ದುಃಖವೆಂದರೇನು? ನನ್ನ ಬಾಣಹತಿಗೆ ತುತ್ತಾಗಿ ಉಳಿಯುವವ ರಾರು? ಆ ರಾಮ ಲಕ್ಷ್ಮಣರು ನನ್ನ ಅಮೋಘವಾದ ಬಾಣಗಳಿಗೆ ಪ್ರಾಣಗಳ ನ್ನೊಪ್ಪಿಸಿ ನೆಲಕ್ಕುರುಳುವುದನ್ನು ಕಂಡು ಸಂತೋಷಪಡುವವನಾಗು. ಇನ್ನು ನಿನ್ನ ಚಿಂತೆಯನ್ನು ಬಿಡು" ಎಂದು ಸಮಾಧಾನ ಮಾಡಿದನು. ತಂದೆಯ ಆಶೀರ್ವಾದದೊಡನೆ ಅನುಜ್ಞೆಯನ್ನು ಪಡೆದು ಉತ್ತಮವಾದ ಹೇಸರಕತ್ತೆಗಳನ್ನು ಹೂಡಿದ ರಥವನ್ನೇರಿ ರಣರಂಗಾಭಿಮುಖನಾದನು. ಅನೇಕ ರಾಕ್ಷಸರು ಧನುಷ್ಪಾಣಿಗಳಾಗಿ ಆತನನ್ನು ಅನುಸರಿಸಿ ಹೊರಟರು.

ಇಂದ್ರಜಿತ್ತು ರಣಭೂಮಿಯನ್ನು ಸಮೀಪಿಸುತ್ತಲೆ ತನ್ನ ಸೈನ್ಯವನ್ನೆಲ್ಲ ಉಚಿತ ಪ್ರದೇಶದಲ್ಲಿ ನಿಲ್ಲಿಸಿ, ರಥದಿಂದಿಳಿದು ವಿಧಿಪೂರ್ವಕವಾಗಿಯೂ ಮಂತ್ರವತ್ತಾಗಿಯೂ ಯಜ್ಞೇಶ್ವರನಲ್ಲಿ ಹೋಮಕರ್ಮವನ್ನು ಆಚರಿಸಿದನು. ಶಸ್ತ್ರಗಳೇ ಸಮಿತ್ತು, ಅಸ್ತ್ರಗಳೆ ದರ್ಭೆ, ಉಳಿದ ಆಯುಧಗಳೆ ಹೋಮ ಸಾಧನಗಳು; ಕಪ್ಪು ಮೇಕೆಯೊಂದನ್ನು ಹೊಗೆ ಯಿಲ್ಲದ ಅಗ್ನಿಯಲ್ಲಿ ಹೋಮಮಾಡಿ, ಆತನು ಅಗ್ನಿದೇವನನ್ನು ಮೆಚ್ಚಿಸಿದನು. ಯಜ್ಞೇಶ್ವರನು ಪ್ರತ್ಯಕ್ಷನಾಗಿ ಆತನಿಗೆ ಬ್ರಹ್ಮಾಸ್ತ್ರಾದಿ ಮಹಾಸ್ತ್ರಗಳನ್ನು ಕರುಣಿಸಿ ಕೊಟ್ಟನು. ಆ ಸಮಯದಲ್ಲಿ ಅಂತರಿಕ್ಷವೆಲ್ಲವೂ ಗಡಗಡ ನಡುಗಿತು. ದೈವದತ್ತವಾದ ಬಾಣಗಳನ್ನು ಧರಿಸಿ ಸೂರ್ಯನಂತೆ ಹೊಳೆಯುತ್ತ ಇಂದ್ರಜಿತ್ತು ಯುದ್ಧರಂಗವನ್ನು ಪ್ರವೇಶಿಸಿದನು. ಒಡನೆಯೇ ರಾಕ್ಷಸರಿಗೂ ವಾನರರಿಗೂ ಯುದ್ಧ ಆರಂಭವಾಯಿತು. ರಾಕ್ಷಸರ ರಾಜಕುಮಾರನು ತನ್ನವರನ್ನು ಕುರಿತು "ಎಲೈ ರಾಕ್ಷಸೋತ್ತಮರೆ, ನಿರಾತಂಕವಾಗಿ ಸಂತೋಷದಿಂದ ಯುದ್ಧಮಾಡಿ ನಿಮ್ಮ ಸೇಡನ್ನು ತೀರಿಸಿಕೊಳ್ಳಿರಿ" ಎಂದು ಪ್ರೋತ್ಸಾಹಿಸಿದನು.

ಇಂದ್ರಜಿತ್ತು ರಣರಂಗವನ್ನು ಮೆಟ್ಟಿದೊಡನೆಯೆ ವಾನರ ಮೃತ್ಯು ಮೂಡಿ ದಂತಾಯಿತು. ವಾನರ ಸಂಹಾರಕಾರ್ಯ ನಿರರ್ಗಳವಾಗಿ ನಡೆಯಲಾರಂಭಿಸಿತು. ಒಂದೊಂದು ಬಾಣದ ಏಟಿಗೂ ಹತ್ತಾರು ಜನ ವಾನರರು ನೆಲಕ್ಕುರುಳತೊಡಗಿದರು. ಅವರು ಪ್ರಯೋಗಿಸುತ್ತಿದ್ದ ಮರಗಳೂ ಬೆಟ್ಟದ ಕೋಡುಗಲ್ಲುಗಳೂ ರಾಕ್ಷಸವೀರನ ಬಾಣಕ್ಕೆ ಸಿಕ್ಕಿ ಪುಡಿಪುಡಿಯಾಗುತ್ತಿದ್ದುವು. ತಲೆತಲೆಯಾದ ವಾನರರೆಲ್ಲಾ ಒಬ್ಬೊಬ್ಬ ರಾಗಿ ಉರುಳುತ್ತಾ ಹೊರಟರು. ಅಗೊ ಗಂಧಮಾದನ ನೆಲಕ್ಕುರುಳಿದ ; ನಳ ಕೆಳಗೆ ಬಿದ್ದ ; ಗಜ, ಜಾಂಬವಂತ, ನೀಲ, ಋಷಭ, ಸುಗ್ರೀವ, ಅಂಗದ, ಹನುಮಂತ, ದಧಿಮುಖ, ಪಾವಕಾಕ್ಷ—ಎಲ್ಲರೂ ಪೆಟ್ಟು ತಿಂದು ನಿಶ್ಚೇಷ್ಟರಾದರು. ಸೈನ್ಯದಲ್ಲೆಲ್ಲಾ ವಿಕಾರವಾಗಿ ಕಿರುಚಿಕೊಳ್ಳುವ ಧ್ವನಿ ಎದ್ದಿತು. ಅಷ್ಟರಲ್ಲಿ ಇಂದ್ರಜಿತ್ತು ಆಕಾಶಕ್ಕೆ ಹಾರಿ ಮಾಯಾ ಯುದ್ಧಕ್ಕೆ ಮೊದಲಿಟ್ಟನು. ಅವನು ಪ್ರಯೋಗಿಸಿದ ಬಾಣಗಳು ರಾಮಲಕ್ಷ್ಮಣರನ್ನೂ ತಾಕಿದುವು. ಶ್ರೀರಾಮಚಂದ್ರನು ತಮ್ಮನನ್ನು ಕುರಿತು "ವತ್ಸ ಲಕ್ಷ್ಮಣ, ಈ ದೇವೇಂದ್ರ ಶತ್ರು ತನ್ನ ಬಾಣಪರಂಪರೆಯಿಂದ ಈ ವಾನರ ಸೈನ್ಯವನ್ನೆಲ್ಲಾ ಭಂಗಿಸಿರುವನು. ಬ್ರಹ್ಮಾಸ್ತ್ರದ ಪ್ರಭಾವದಿಂದ ಈತನು ಅಜೇಯ ನಾಗಿರುವಂತೆ ತೋರುತ್ತದೆ. ಆತನು ಪ್ರಯೋಗಿಸಿರುವ ಬಾಣವರ್ಷದಿಂದ ದಿಕ್ಕುಗಳೇ ತಿಳಿಯದಂತಾಗಿದೆ. ನಮ್ಮನ್ನು ಮೂರ್ಛೆಗೊಳಿಸಿದ ಹೊರತು ಈ ರಾಕ್ಷಸಕುಮಾರನು ಲಂಕೆಗೆ ಹಿಂದಿರುಗುವುದಿಲ್ಲವೆಂದು ತೋರುತ್ತದೆ" ಎಂದು ಹೇಳಿದನು.

ಶ್ರೀರಾಮನ ಮಾತುಗಳು ಮುಗಿಯುವಷ್ಟರಲ್ಲಿಯೇ ಇಂದ್ರಜಿತ್ತು ಪ್ರಯೋಗಿಸಿದ ಬಾಣಗಳು ಬಂದು ರಾಮಲಕ್ಷ್ಮಣರಿಬ್ಬರಿಗೂ ತಾಕಿದುವು ; ಇಬ್ಬರೂ ಪರವಶರಾಗಿ ನೆಲಕ್ಕುರುಳಿದರು.. ಇದನ್ನು ಕಂಡು ಇಂದ್ರಜಿತ್ತು ಪರಮಾನಂದಭರಿತನಾಗಿ ಸಿಂಹನಾದ ಮಾಡುತ್ತಾ ಲಂಕೆಗೆ ಹಿಂದಿರುಗಿದನು.

ರಾಮಲಕ್ಷ್ಮಣರು ಮೂರ್ಛಿತರಾಗಿ ಬಿದ್ದುದನ್ನು ಕಾಣುತ್ತಲೆ ವಾನರರೆಲ್ಲರೂ ಮತಿಗೆಟ್ಟು ಮುಂಗಾಣದವರಾದರು. ಅವರ ಜಂಘಾಬಲವೆ ಉಡುಗಿಹೋಯಿತು. ಹೀಗೆ ನಿಸ್ಸತ್ವವಾಗಿ ಕುಳಿತಿರುವ ವಾನರರನ್ನು ಕುರಿತು ವಿಭೀಷಣನು ಸಮಾಧಾನ ಮಾಡಿದನು ; "ಅಯ್ಯಾ, ಹೀಗೆ ಹೆದರಿ ಮುದುರಿಕೊಳ್ಳುವುದು ಸರಿಯಲ್ಲ. ಬ್ರಹ್ಮಾಸ್ತ್ರಕ್ಕೆ ಗೌರವ ತೋರುವುದಕ್ಕಾಗಿ ಶ್ರೀರಾಮ ಲಕ್ಷ್ಮಣರು ಆ ಅಸ್ತ್ರಕ್ಕೆ ಕಟ್ಟು ಬಿದ್ದು ಭೂಮಿಯಲ್ಲಿ ಪವಡಿಸಿರುವರೆ ಹೊರತು ಅವರು ಮೂರ್ಛಿತರಾಗಿಲ್ಲ. ವಿಭೀಷಣನು ಅಷ್ಟು ಮಾತನಾಡುವ ವೇಳೆಗೆ ಮುಹೂರ್ತ ಮಾತ್ರ ಬ್ರಹ್ಮಾಸ್ತ್ರಕ್ಕೆ ಒಳಗಾಗಿದ್ದ ಹನುಮಂತನು ಮೇಲಕ್ಕೆದ್ದು ಆತನ ಬಳಿಗೆ ಬಂದನು. ಇಬ್ಬರೂ ಸೇರಿ ರಣಭೂಮಿ ಯಲ್ಲಿ ಜೀವಂತರಾಗಿದ್ದ ವಾನರವೀರರೆಲ್ಲರಿಗೂ ಸಮಾಧಾನ ಹೇಳುತ್ತಾ ಹೊರಟರು. ಹೀಗೆ ಹೋಗುತ್ತಿರುವಾಗ ಜಾಂಬವಂತನು ಕಾಣಿಸಿದನು. ವಿಭೀಷಣನು ಆತನನ್ನು ಉಚಿತೋಕ್ತಿಗಳಿಂದ ಸಮಾಧಾನ ಪಡಿಸುತ್ತಿರಲು ಆತನು "ಅಯ್ಯಾ, ನಿನ್ನ ಧ್ವನಿ ಯಿಂದ ನೀನು ವಿಭೀಷಣನೆಂದು ಗೊತ್ತಾಯಿತು, ಹೇಳು ಹೇಳು, ಅಂಜನಾತನಯನಾದ

ಮಾರುತಿ ಜೀವಂತವಾಗಿರುವನೆ?" ಎಂದನು. ರಾಮಲಕ್ಷ್ಮಣರ ಹೆಸರನ್ನು ಕೂಡ ಎತ್ತದೆ ಹನುಮಂತನಿಗಾಗಿ ಹಂಬಲಿಸುತ್ತಿರುವ ಆ ಮುದುಕನನ್ನು ಕಂಡು ವಿಭೀಷಣನಿಗೆ ಆಶ್ಚರ್ಯವಾಯಿತು. ಆತನು "ಅಯ್ಯಾ, ವೃದ್ಧನೆ, ರಾಮಲಕ್ಷ್ಮಣರನ್ನು ಕೂಡ ವಿಚಾರಿಸದೆ ಮಾರುತಿಯ ಕ್ಷೇಮವನ್ನು ವಿಚಾರಿಸುತ್ತಿರುವೆ. ಮಾರುತಿಯ ಮೇಲಿನ ನಿನ್ನ ಮೈತ್ರಿ ಅಸದೃಶವಾದುದೆ ಸರಿ!" ಎಂದನು. ಒಡನೆಯೆ ಜಾಂಬವನು "ಅಯ್ಯಾ, ನನ್ನ ಅಭಿಪ್ರಾಯವನ್ನು ನೀನು ಅರಿಯೆ! ಒಬ್ಬ ಮಾರುತಿ ಬದುಕಿದ್ದರೆ ಉಳಿದವ ರೆಲ್ಲರೂ ಜೀವಿಸಿದಂತೆಯೆ; ಆತನು ಅಸುದೊರೆದಿದ್ದರೆ ನಾವೆಲ್ಲರೂ ಸತ್ತಂತೆಯೆ ಸರಿ" ಎಂದನು.

ಜಾಂಬವನ ಮಾತು ವಿಭೀಷಣನಿಗೆ ಅರ್ಥವಾಗಲಿಲ್ಲ. ಅಷ್ಟರಲ್ಲಿ ಹನುಮಂತನೆ ತನ್ನ ಹೆಸರನ್ನು ಹೇಳಿಕೊಂಡು ಆತನ ಪಾದ ಮುಟ್ಟಿ ನಮಸ್ಕರಿಸಿದನು. ಮಾರುತಿಯ ಧ್ವನಿ ಕಿವಿಗೆ ಬೀಳುತ್ತಿದ್ದಂತೆಯೆ ಕಳೆಗೆಟ್ಟಿದ್ದ ಜಾಂಬವಂತನ ಮುಖದ ಮೇಲೆ ಕಳೆ ಮೂಡಿದಂತಾಯಿತು. ಉತ್ಸಾಹ ತುಂಬಿದ ದನಿಯಲ್ಲಿ ಆತನನ್ನು ಕುರಿತು "ಮಾರುತಿ, ಬಾ ಬಾ! ಈಗ ನೀನೇ ಅಳಿದು ಬಿದ್ದಿರುವವರಿಗೆಲ್ಲಾ ಜೀವದಾನ ಮಾಡಬೇಕು. ಶ್ರೀರಾಮಲಕ್ಷ್ಮಣರನ್ನು ಬಂಧಮುಕ್ತರನ್ನಾಗಿ ಮಾಡುವ ಮಹಾಕಾರ್ಯವೂ ನಿನ್ನಿಂದಲೆ ನಡೆಯಬೇಕು. ನೀನೀಗಲೆ ಸಾಗರವನ್ನು ದಾಟಿ ಹಿಮವತ್ಪರ್ವತಕ್ಕೆ ಹೋಗಬೇಕು. ಅಲ್ಲಿ 'ವೃಷಭವೆಂಬ ಕಾಂಚನ ಪರ್ವತವೂ ಕೈಲಾಸ ಪರ್ವತವೂ ಕಾಣುತ್ತವೆ. ಅವೆರಡರ ಮಧ್ಯದಲ್ಲಿ ಓಷಧಿ ಪರ್ವತವೆಂಬ ಪರ್ವತವಿದೆ. ಆ ಪರ್ವತದಲ್ಲಿ ದಶದಿಕ್ಕುಗಳನ್ನು ಬೆಳಗುತ್ತಿರುವ ನಾಲ್ಕು ಮೂಲಿಕೆಗಳಿವೆ. ನೀನು ಆದಷ್ಟು ಬೇಗ ಆ ನಾಲ್ಕು ಮೂಲಿಕೆ ಗಳನ್ನೂ ತರುವವನಾಗು. ಅವುಗಳಿಂದ ಮರಣೋನ್ಮುಖರಾಗಿರುವ ಈ ವಾನರರೆಲ್ಲರೂ ಬದುಕುತ್ತಾರೆ" ಎಂದನು.

ಜಾಂಬವಂತನ ಮಾತಿನಂತೆ ಮಾರುತಿ ತ್ರಿಕೂಟಪರ್ವತವನ್ನೇರಿ ಅಲ್ಲಿಂದ ಮಹದಾ ಕಾರವನ್ನು ತಾಳಿ, ಸಮುದ್ರದ ಮೇಲೆ ಲಂಘಿಸಿದನು. ಮಹಾಸರ್ಪಗಳ ಹೆಡೆಗಳಂತಿದ್ದ ತನ್ನ ಹಸ್ತಗಳನ್ನು ಮುಂದಕ್ಕೆ ಚಾಚಿಕೊಂಡು ಆತನು ದಿಕ್ಕುಗಳನ್ನೆ ಹಿಡಿದು ಸೆಳೆಯುವವ ನಂತೆ ಅಂತರಿಕ್ಷದಲ್ಲಿ ತೇಲಿಕೊಂಡು ಮೇರುಪರ್ವತದ ಕಡೆ ಹೊರಟನು. "ವಾನರವೀರ ರನ್ನೂ ಶ್ರೀರಾಮಲಕ್ಷ್ಮಣರನ್ನೂ ರಕ್ಷಿಸು" ಎಂಬ ಜಾಂಬವಂತನ ಮಾತು ಆತನ ಕಿವಿ ಗಳಲ್ಲಿ ಅನುರಣಿತವಾಗುತ್ತಿರಲು, ಆತನು ವಾಯುವೇಗವನ್ನೂ ಮೀರಿದ ವೇಗದಿಂದ ಹಾರಿ ತನ್ನ ಗುರಿಯನ್ನು ಮುಟ್ಟಿದನು. ಓಷಧಿ ಪರ್ವತದಲ್ಲಿದ್ದ ಮಹೌಷಧಿಗಳು ಮಾತ್ರ ಎಷ್ಟು ಹುಡುಕಿದರೂ ಆತನಿಗೆ ಕಾಣಿಸಲಿಲ್ಲ. ಅರ್ಥಿಯಾಗಿ ಬಂದಿದ್ದ ಆತನಿಗೆ ಕಾಣದಂತೆ ಅವು ಮಾಯವಾಗಿದ್ದುವು. ಮಾರುತಿಗೆ ಹುಡುಕಿ ಹುಡುಕಿ ಬೇಸರವಾಯಿತು. ರೋಷದಿಂದ ಆತನು ಆ ಪರ್ವತವೆ ಸೀಳುವಂತೆ ಗರ್ಜಿಸುತ್ತಾ, ಶಿಖರ ಸಹಿತವಾದ ಆ ಪರ್ವತವನ್ನು ಬುಡಸಹಿತವಾಗಿ ಕಿತ್ತುಕೊಂಡು ಹಿಂದಿರುಗಿದನು. ದೊಡ್ಡ ಪರ್ವತ ವೊಂದನ್ನು ಹಿಡಿದುಕೊಂಡು ಹಾರಿಬರುತ್ತಿರುವ ಆತನನ್ನು ಕಾಣುತ್ತಲೆ ಪಾಸಲರೆಲ್ಲಉ



ಜಾಂಬವಂತನ ಮಾತಿನಂತೆ ಮಾರುತಿ ತ್ರಿಕೂಟಪರ್ವತವನ್ನೇರಿ ಅಲ್ಲಿಂದ ಮಹದಾಕಾರ ತಾಳಿ, ಸಮುದ್ರದ ಮೇಲೆ ಲಂಘಿಸಿದನು.

ಹೊಸಜೀವ ಮೂಡಿದಂತೆ ಆನಂದದಿಂದ ಸಿಂಹನಾದ ಮಾಡಿದರು. ಹನುಮಂತನು ಪರ್ವತದೊಡನೆ ತ್ರಿಕೂಟಾಚಲದ ಮೇಲೆ ಅವತರಿಸಿ, ರಾಮಲಕ್ಷ್ಮಣರ ಬಳಿಗೆ ಬಂದನು. ಓಷಧಿ ಪರ್ವತದಲ್ಲಿದ್ದ ಮೂಲಿಕೆಗಳ ವಾಸನೆಯಿಂದಲೆ ರಾಮಲಕ್ಷ್ಮಣರಿಗೆ ಎಚ್ಚರಿಕೆಯಾಯಿತು. ಅವರು ಏನೊಂದೂ ಬಾಧೆಯಿಲ್ಲದವರಂತೆ ಮೈಮುರಿದು ಮೇಲಕ್ಕೆದ್ದರು. ಅಷ್ಟೇ ಅಲ್ಲ, ಆ ಮೂಲಿಕೆಗಳ ಪ್ರಭಾವದಿಂದ ಆವರೆಗೆ ಯುದ್ಧದಲ್ಲಿ ಮಡಿದಿದ್ದ ವಾನರರೆಲ್ಲರೂ ಪುನಃ ಚೇತನಗೊಂಡರು. ಯುದ್ಧದಲ್ಲಿ ಮಡಿದಿದ್ದ ರಾಕ್ಷಸರನ್ನೆಲ್ಲಾ ರಾವಣನ ಆಜ್ಞೆಯಂತೆ ಸಮುದ್ರಕ್ಕೆ ಎಸೆದಿದ್ದುದರಿಂದ ಅವರು ಮತ್ತೆ ಬದುಕುವುದಕ್ಕಿಲ್ಲವಾಯಿತು.

ಇಷ್ಟಾದ ಮೇಲೆ ಹನುಮಂತನು ಆ ಓಷಧಿಪರ್ವತವನ್ನು ಮತ್ತೆ ಅದರ ಸ್ವಸ್ಥಾನಕೆ ಸೇರಿಸಿ ಬಂದನು.

---

# ೧೭

## ಕುಂಭ, ನಿಕುಂಭ, ಮಕರಾಕ್ಷಾದಿಗಳ ಮರಣ

ಹನುಮಂತನ ದಯೆಯಿಂದ ನವಚೇತನಗೊಂಡ ವಾನರರೆಲ್ಲರೂ ನೂತನವಾದ ಉತ್ಸಾಹದಿಂದ ವಿಜೃಂಭಿಸುತ್ತಾ ಸುಗ್ರೀವನ ಆಜ್ಞೆಯಂತೆ ಅಂದುರಾತ್ರಿ ಲಂಕಾ ಪಟ್ಟಣಕ್ಕೆ ಬೆಂಕಿಹೊತ್ತಿಸಿದರು. ಅಗ್ನಿಜ್ವಾಲೆಯಿಂದ ಮನೆಗಳೆಲ್ಲವೂ ಸುಟ್ಟುಹೋಗು ತ್ತಿರಲು, ಮುಪ್ಪಿನ ಮುದುಕರೂ ಸ್ತ್ರೀಯರೂ ಮಕ್ಕಳೂ ಗೋಳೋ ಎಂದು ಅಳುತ್ತಾ ಜೀವವುಳಿಸಿಕೊಳ್ಳುವುದಕ್ಕಾಗಿ ದಾರಿಸಿಕ್ಕತ್ತ ಓಡಹತ್ತಿದರು. ಯುವಕರೂ ವೀರರೂ ಆಯುಧಗಳನ್ನು ಹಿಡಿದು ವಾನರರ ಮೇಲೆ ಬೀಳಲು ಧಾವಿಸಿದರು. ಊರಿನ ಹೆಬ್ಬಾಗಿಲಿ ನಲ್ಲೆಲ್ಲಾ ಬರಿಯ ವಾನರರೆ ತುಂಬಿಕೊಂಡು ಅಲ್ಲಿಗೆ ಬಂದವರನ್ನೆಲ್ಲಾ ಸಂಹರಿಸಹತ್ತಿ ದರು. ನೆಲ ಬೆಸಲೆಯಾದಂತೆ ತುಂಬಿದ ಆ ಅಸಂಖ್ಯಾತರಾದ ವಾನರರನ್ನು ಕಂಡು ರಾಕ್ಷಸರಿಗೆ ದಿಕ್ಕೇ ತೋಚದಂತಾಯಿತು. ಮಾರಿಯ ಇದಿರಿನ ಕುರಿಗಳಂತೆ ಅವರೆಲ್ಲರೂ ಕ್ಷಣಮಾತ್ರದಲ್ಲಿ ಧ್ವಂಸರಾಗುತ್ತಾ ಹೋದರು. ಇದನ್ನು ಕಂಡು ಅಕಂಪನನೆಂಬ ರಾಕ್ಷಸ ವೀರನು ತನ್ನ ಗದೆಯನ್ನು ತಿರಿಗಿಸುತ್ತಾ ಪ್ರಳಯರುದ್ರನಂತೆ ವಾನರ ಸಮೂಹವನ್ನು ಹೊಕ್ಕನು. ಇದನ್ನು ಕಂಡು ಅಂಗದನು ದೊಡ್ಡದೊಂದು ಬೆಟ್ಟವನ್ನು ಎತ್ತಿ ಅವನ ತಲೆಯ ಮೇಲೆ ಎಸೆದನು. ಅದರಿಂದ ರಾಕ್ಷಸನ ತಲೆಯೊಡೆದು ಅವನು ಸತ್ತುಬಿದ್ದನು. ಅವನ ಪತನವನ್ನು ಕಂಡು ಶೋಣಿತಾಕ್ಷನೆಂಬ ರಾಕ್ಷಸನು ರಥವೇರಿ ಅಂಗದನ ಮೇಲೆ ಯುದ್ಧಕ್ಕೆ ಬಂದನು. ಅಂಗದಕುಮಾರನು ಅವನ ರಥದೊಳಕ್ಕೆ ನುಗ್ಗಿ ಆ ರಥವನ್ನು ಮುರಿದುಹಾಕಿದುದಲ್ಲದೆ ಅವನ ಕೈಲಿದ್ದ ಆಯುಧಗಳನ್ನೂ ಕಿತ್ತುಕೊಂಡು ಮುರಿದು ಹಾಕಿದನು. ಕೂಡಲೆ ಆ ರಾಕ್ಷಸನು ಹಿರಿದ ಕತ್ತಿಯೊಡನೆ ಆಕಾಶಕ್ಕೆ ನೆಗೆದನು. ಅಂಗದನೂ ಜೊತೆಯಲ್ಲಿಯೆ ನೆಗೆದು, ಅವನಕೈಲಿದ್ದ ಕತ್ತಿಯನ್ನು ಕಿತ್ತುಕೊಂಡು ಅವನನ್ನು ಘಾತಿಸಿ ಕೆಳಕ್ಕೆ ಕೆಡವಿದನು. ಅದನ್ನು ಕಂಡು ಯೂಪಾಕ್ಷನೆಂಬ ರಾಕ್ಷಸಯೋಧನು ಪ್ರಜಂಘಾ ಸುರನೆಂಬುವನೊಡನೆ ಅಂಗದನನ್ನು ತರುಬಿದನು. ಆ ವೇಳೆಗೆ ಶೋಣಿತಾಕ್ಷನೂ ತೆಪ್ಪರಿಸಿ ಕೊಂಡು ಮೇಲಕ್ಕೆದ್ದು ಬಂದನು. ಹೀಗೆ ಮೂವರೂ ಅಂಗದಕುಮಾರನ ಮೇಲೆ ಕೈ ಮಾಡ ಹೊರಟುದನ್ನು ಕಂಡು ಮೈಂದ ದ್ವಿವಿದರೆಂಬ ವಾನರವೀರರು ಆತನ ಸಹಾಯಕ್ಕೆ ಬಂದರು. ಮೂವರೂ ಸೇರಿ ಮೂವರು ರಾಕ್ಷಸ ವೀರರನ್ನೂ ಕೊಂದುಹಾಕಿದರು.

ತಮ್ಮ ಮೂವರು ಮುಂದಾಳುಗಳು ಮಡಿದುದನ್ನು ಕಂಡು ಅವರ ಸುತ್ತಲಿದ್ದ ರಾಕ್ಷಸರು ಓಡಿಹೋಗಿ ಕುಂಭಕರ್ಣನ ಮಗನಾದ ಕುಂಭನ ಮರೆಹೊಕ್ಕರು. ಧನುರ್ವಿದ್ಯೆ ಯಲ್ಲಿ ಚತುರನಾದ ಕುಂಭನು ತೀಕ್ಷ್ಣವಾದ ಬಾಣವೊಂದನ್ನು ಬಿಟ್ಟು ದ್ವಿವಿದನನ್ನು ನೆಲಕ್ಕುರುಳಿಸಿದನು. ಅಷ್ಟರಲ್ಲಿ ಮೈಂದನು ದೊಡ್ಡ ಬಂಡೆಯೊಂದನ್ನು ತನ್ನ ಮೇಲೆಸೆ

ಯಲು, ಕುಂಭನು ಐದು ಬಾಣಗಳಿಂದ ಅದನ್ನು ತುಂಡುತುಂಡಾಗಿ ಕತ್ತರಿಸಿಹಾಕಿ, ಮತ್ತೊಂದು ನಿಶಿತಶರದಿಂದ ವೈಂದನನ್ನು ನೆಲಕ್ಕುರುಳಿಸಿದನು. ಆ ವೇಳೆಗೆ ಸರಿಯಾಗಿ ಅಂಗದ ಕುಮಾರನು ಅಲ್ಲಿಗೆ ಬಂದು ದೊಡ್ಡದೊಂದು ವೃಕ್ಷದಿಂದ ಆ ರಾಕ್ಷಸನನ್ನು ಪ್ರಹರಿಸಲು ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನ ಸಾಗಲಿಲ್ಲ. ಅದಕ್ಕೆ ಬದಲಾಗಿ ಕುಂಭನು ಪ್ರಯೋಗಿಸಿದ ಬಾಣದಿಂದ ಆ ವಾನರ ವೀರನ ಹಣೆಯೊಡೆದು ಕೆನ್ನೀರು ಪ್ರವಾಹದಂತೆ ಹರಿಯಿತು. ಆ ಏಟನ್ನು ತಾಳಲಾರದೆ ಆತನು ತತ್ತರಿಸಿ ಸಮೀಪದಲ್ಲಿದ್ದ ದೊಡ್ಡದೊಂದು ಮರವನ್ನು ಒರಗಿ ನಿಂತನು. ಈ ವಿಚಾರವನ್ನು ವಾನರರು ಒಡನೆಯೆ ಶ್ರೀರಾಮಚಂದ್ರನಿಗೆ ಅರಿಕೆ ಮಾಡಿದರು. ಆತನು ಜಾಂಬವಂತನನ್ನು ಅಂಗದನ ಸಹಾಯಕ್ಕೆ ಅಟ್ಟಿದನು.

ಶ್ರೀರಾಮನಿಂದ ಆಜ್ಞಪ್ತನಾದ ಜಾಂಬವಂತನು ಸುಷೇಣ ವೇಗದರ್ಶಿಗಳೆಂಬ ಕಪಿವೀರರೊಡನೆ ಕುಂಭನನ್ನು ಇದಿರಿಸಿದನು. ಆದರೆ ಆ ರಾಕ್ಷಸನು ಕ್ಷಣಮಾತ್ರದಲ್ಲಿ ಆ ಮೂವರನ್ನೂ ತನ್ನ ಬಾಣಘಾತದಿಂದ ಹಿಂದಕಟ್ಟಿ ಬೊಬ್ಬಿರಿದನು. ದೂರದಲ್ಲಿ ನಿಂತು ಇದನ್ನು ನೋಡುತ್ತಿದ್ದ ಸುಗ್ರೀವನು ದೊಡ್ಡದೊಂದು ಬೆಟ್ಟವನ್ನು ಹೊತ್ತುಕೊಂಡು ಆ ರಾಕ್ಷಸನ ಮೇಲೆ ಯುದ್ಧಕ್ಕೆ ಬಂದನು. ಇಬ್ಬರಿಗೂ ಘೋರವಾದ ಯುದ್ಧ ಆರಂಭವಾಯಿತು. ಕುಂಭನು ಬಿಟ್ಟ ಬಾಣದಿಂದ ವಾನರರಾಜನ ಕಲ್ಮರಗಳ ಆಯುಧಗಳೆಲ್ಲವೂ ಬರಿದಾಗಲು, ಆತನು ಭರದಿಂದ ಆ ರಾಕ್ಷಸನ ಬಳಿಗೆ ನುಗ್ಗಿ ಅವನ ಕೈಲಿದ್ದ ಬಿಲ್ಲನ್ನು ಕಿತ್ತುಕೊಂಡು ಮುರಿದು ಹಾಕಿದನು. ಅನಂತರ ಇಬ್ಬರೂ ಮಲ್ಲಯುದ್ಧ ಮಾಡಲು ಮೊದಲು ಮಾಡಿದರು. ಒಮ್ಮೆ ಸುಗ್ರೀವನು ಕುಂಭನನ್ನು ಎತ್ತಿ ಸಮುದ್ರಕ್ಕೆ ಎಸೆದನು. ಆದರೆ ಕ್ಷಣಮಾತ್ರದಲ್ಲಿ ಅವನು ಅಲ್ಲಿಂದ ಎದ್ದು ಬಂದು, ಸುಗ್ರೀವನ ವಕ್ಷಸ್ಥಳಕ್ಕೆ ಗುದ್ದಿದನು. ಇದರಿಂದ ಕುಪಿತನಾದ ವಾನರವೀರನು ತನ್ನ ಬಲವನ್ನೆಲ್ಲ ಬಿಟ್ಟು ಕುಂಭನ ವಕ್ಷಸ್ಥಳವನ್ನು ವಜ್ರಮುಷ್ಟಿಯಿಂದ ಗುದ್ದಿದನು. ಆ ಪೆಟ್ಟಿಗೆ ರಾಕ್ಷಸನು ಉರಿಯುಡುಗಿದ ಬೆಂಕಿಯಂತಾಗಿ ನೆಲಕ್ಕುರುಳಿ ಪ್ರಾಣ ಬಿಟ್ಟನು. ಅದನ್ನು ಕಂಡು ರಾಕ್ಷಸರು ಭಯದಿಂದ ಹೌಹಾರಿದರು.

ಕುಂಭನು ಸುಗ್ರೀವನ ಮುಷ್ಟಿಪ್ರಹಾರದಿಂದ ಮರಣಹೊಂದಿದುದನ್ನು ಕೇಳಿ, ಅವನ ಅಣ್ಣನಾದ ನಿಕುಂಭನು ಕನಲಿ ಕೆಂಗೆಂಡವಾದನು. ಸುಗ್ರೀವನನ್ನು ತನ್ನ ಕಣ್ಣುಗಳಿಂದಲೆ ಸುಟ್ಟುಬಿಡುವನೆಂಬಂತೆ ಬಿರುಗಣ್ಣುಗಳಿಂದ ಕಿಡಿಗಳನ್ನು ಕಾರುತ್ತಾ, ತನ್ನ ಪರಿಘಾಯುಧದೊಡನೆ ಸುಗ್ರೀವನ ಮೇಲೆ ಏರಿಬಂದನು. ಆತನು ತನ್ನ ಆಯುಧವನ್ನು ಗರಗರ ತಿರುಗಿಸಿದ ರಭಸಕ್ಕೆ ಬೆಂಕಿಯುದಿಸಿ ವಾನರಸೈನ್ಯವೆಲ್ಲವೂ ತಲ್ಲಣಿಸಿದಂತಾಯಿತು. ಅದನ್ನು ಕಂಡು ಆಂಜನೇಯನು ರಾಕ್ಷಸನ ಬಳಿಗೆ ಧಾವಿಸಿದನು. ತನ್ನ ಗುರಿಗೆ ಅಡ್ಡಿಯಾದ ಆ ಮಾರುತಿಯನ್ನು ರಾಕ್ಷಸನು ತನ್ನ ಪರಿಘದಿಂದ ಪ್ರಹರಿಸಿದನು. ಆ ಏಟಿಗೆ ಮಹಾ ಪರಾಕ್ರಮಿಯಾದ ಮಾರುತಿಯು ಕ್ಷಣಕಾಲ ತತ್ತರಿಸಿ ಹೋದನು. ಮುಹೂರ್ತಕಾಲವಾದ ಮೇಲೆ ಮಾರುತಿ ಪ್ರಜ್ಞೆ ತಿಳಿದು ಆ ರಾಕ್ಷಸನ ಎದೆಗೆ ಬಲವಾಗಿ ಗುದ್ದಿದನು.

ಅಷ್ಟು ಸಾಲದೆಂದು ಹಿಡಿದೆಳೆದು ಅವನನ್ನು ನೆಲಕ್ಕೆ ಕೆಡವಿ ನಾದಿದನು. ಅವನ ತಲೆಗೂದಲನ್ನು ಹಿಡಿದು ತಿರಿವಿ, ತಲೆಯನ್ನು ಹಿಡಿದೆಳೆದು ಕಿತ್ತುಹಾಕಿದನು.

ಇತ್ತ ಮಾರುತಿ ನಿಕುಂಭ ಸಂಹಾರದಲ್ಲಿ, ಅತ್ತ ಶ್ರೀರಾಮಚಂದ್ರನು ಮಕರಾಕ್ಷನೆಂಬ ರಾಕ್ಷಸನೊಡನೆ, ಘೋರವಾದ ಯುದ್ಧದಲ್ಲಿ ತೊಡಗಿದ್ದರು. ಮಕರಾಕ್ಷನು ಖರನ ಮಗ. ಅವನು ಮೊದಲೆ ಮಹಾ ಗರ್ವಿಷ್ಠ. ಅವರೊಳಗೆ ರಾವಣನು ಬೇರೆ "ವತ್ಸ, ನೀನೀಗಲೆ ಸೇನೆಯೊಡನೆ ರಣರಂಗಕ್ಕೆ ಹೋಗಿ ರಾಮಲಕ್ಷ್ಮಣರನ್ನೂ ಕಪಿಸೇನೆಯನ್ನೂ ಒಕ್ಕಲಿಕ್ಕಿ ಬಾ" ಎಂದು ಪ್ರೋತ್ಸಾಹಿಸಿದ್ದನು. ಆದ್ದರಿಂದ ಆ ದುರಹಂಕಾರಿ ರಥವನ್ನೇರಿ ರಣಾಂಗಣಕ್ಕೆ ಹೋಗುತ್ತಾ, ಜೊತೆಯಲ್ಲಿದ್ದ ಸೈನಿಕರನ್ನು ಕುರಿತು "ಎಲೈ ರಾಕ್ಷಸರೆ, ನೀವೆಲ್ಲರೂ ನನ್ನ ಮುಂಗಡೆಯೆ ಆ ಕಪಿಗಳೊಡನೆ ಕಾದಾಡುತ್ತಿರಿ. ನಾನು ರಾಮಲಕ್ಷ್ಮಣರೊಡನೆ ಯುದ್ಧಮಾಡಿ ಅವರನ್ನು ಧ್ವಂಸಮಾಡಿಬಿಡುತ್ತೇನೆ" ಎಂದು ಹೇಳಿದನು. ದಾರಿಯಲ್ಲಿ ಬರುತ್ತಿರುವಾಗ ಹಲವು ದುಶ್ಶಕುನಗಳಾದುವಾದರೂ, ಆ ಉದ್ದಟನು ಅವುಗಳನ್ನು ಲಕ್ಷಿಸದೆ ರಣರಂಗವನ್ನು ಪ್ರವೇಶಿಸಿದ್ದನು. ರಣರಂಗದಲ್ಲಿ ರಾಕ್ಷಸರನ್ನು ಕಾಣುತ್ತಲೆ ವಾನರರು ಅವರನ್ನು ಸಂಹರಿಸಲು ಮೊದಲು ಮಾಡಿದರು. ಆದರೆ ಮಕರಾಕ್ಷನ ಬಾಣಾಹುತಿಯಿಂದ ಅವರೆಲ್ಲರೂ ಪಲಾಯನ ಪರರಾಗಲು ಶ್ರೀರಾಮನೆ ಸ್ವತಃ ಆ ರಾಕ್ಷಸನನ್ನು ಇದಿರಿಸಿ ನಿಂತನು.

ಶ್ರೀರಾಮನನ್ನು ಕಾಣುತ್ತಲೆ ರಾಕ್ಷಸನಿಗೆ ತನ್ನ ತಂದೆಯ ನೆನಪು ಬಂದಿತು. "ಎಲವೊ ರಾಮ, ನೀನು ದಂಡಕಾರಣ್ಯದಲ್ಲಿ ನನ್ನ ತಂದೆಯನ್ನು ಕೊಂದೆಯಲ್ಲವೆ? ನನ್ನ ಭಾಗ್ಯವಶದಿಂದ ನೀನೀಗ ನನ್ನ ಕೈಗೆ ಸಿಕ್ಕಿಬಿದ್ದಿರುವೆ. ನಿನ್ನನ್ನು ದಿಗ್ಬಲಿಕೊಟ್ಟು ಪಿತೃ ಋಣವನ್ನು ತೀರಿಸುತ್ತೇನೆ. ನಿನಗೆ ಇಷ್ಟವಾದ ಆಯುಧವನ್ನು ಧರಿಸಿ ಯುದ್ಧಕ್ಕೆ ಸಿದ್ಧನಾಗು" ಎಂದು ಗರ್ಜಿಸಿದನು. ಮಾತಿನ ಜೊತೆಗೆ ಮೊನಚಾದ ಬಾಣಗಳೂ ಶ್ರೀರಾಮನನ್ನು ಭೇದಿಸ ಹೊರಟುವು. ಶ್ರೀರಾಮನು ಸ್ವಲ್ಪಹೊತ್ತು ಅವನ ಬಾಣಗಳನ್ನೆಲ್ಲ ಮಧ್ಯ ಮಾರ್ಗದಲ್ಲಿಯೆ ಖಂಡಿಸುತ್ತಾ ಹೋದನು. ಬರಬರುತ್ತಾ ಯುದ್ಧ ಬಿರುಸಾಯಿತು. ಇಬ್ಬರೂ ಎಸೆದ ಬಾಣಗಳಿಂದ ಅಂತರಿಕ್ಷ ಮರೆಯಾಗಿ ಹೋಯಿತು. ಕಡೆಗೆ ಶ್ರೀರಾಮಚಂದ್ರನು ಪ್ರಯೋಗಿಸಿದ ಆಗ್ನೇಯಾಸ್ತ್ರ ಆ ರಾಕ್ಷಸನ ಪ್ರಾಣವನ್ನು ಹೀರಿ, ಅವನನ್ನು ಕೆಳಕ್ಕೆ ಕೆಡವಿತು. ಇದನ್ನು ಕಂಡು ವಾನರರು ಕುಣಿದಾಡಿದರು; ರಾಕ್ಷಸರು ಲಂಕೆಯತ್ತ ಪಲಾಯನ ಮಾಡಿದರು.

---

೧೮

# ಇಂದ್ರಜಿತ್ತುವಿನ ಮಾಯಾಯುದ್ಧ

ಮಕರಾಕ್ಷ ಮಡಿದ ಸುದ್ದಿಯನ್ನು ಕೇಳಿ ರಾವಣೇಶ್ವರನು ಮಹಾವ್ಯಸನದಿಂದ ಮತ್ತೊನ್ಮೆ ತನ್ನ ಮಗನಾದ ಇಂದ್ರಜಿತ್ತುವನ್ನು ರಾಮಲಕ್ಷ್ಮಣರ ಮೇಲೆ ಯುದ್ಧಕ್ಕೆ ಕಳುಹಿಸಿದನು. ಆತನು ಮೊದಲಿನಂತೆಯೇ ಯುದ್ಧರಂಗದ ಬಳಿ ಯಜ್ಞೇಶ್ವರನನ್ನು ಪೂಜಿಸಿ, ಕರಿಯ ಮೇಕೆಯೊಂದನ್ನು ಹೋಮ ಮಾಡಿದನು. ಇದರಿಂದ ತೃಪ್ತನಾದ ಯಜ್ಞಪುರುಷನು ಆತನಿಗೆ ಅನೇಕ ನಿಶಿತಾಸ್ತ್ರಗಳನ್ನು ಕೊಟ್ಟನು. ಇಂದ್ರಜಿತ್ತು ಆ ಆಯುಧಗಳನ್ನು ಧರಿಸಿ, ಮಾಯಾರಥವೊಂದನ್ನೇರಿ ಯುದ್ಧರಂಗವನ್ನು ಪ್ರವೇಶಿಸಿದನು. ಆ ರಥವಾಗಲಿ, ರಥಕ್ಕೆ ಕಟ್ಟಿದ್ದ ಅಶ್ವಚತುಷ್ಟಯವಾಗಲಿ ಯಾರಿಗೂ ಕಾಣಬರುತ್ತಿರಲಿಲ್ಲ. ಇಂತಹ ರಥವನ್ನೇರಿದ ಅವನು ರಾಮಲಕ್ಷ್ಮಣರನ್ನೂ ವಾನರರನ್ನೂ ನಿಶ್ಶೇಷವಾಗಿ ನಾಶಗೊಳಿಸುವುದಾಗಿ ಪ್ರತಿಜ್ಞೆಮಾಡಿ ಅಂತರಿಕ್ಷಕ್ಕೆ ತನ್ನ ರಥವನ್ನು ನಡೆಸಿದನು.

ಇದ್ದಕ್ಕಿದ್ದಂತೆ ಆಕಾಶದಿಂದ ರಾಮಲಕ್ಷ್ಮಣರ ಮೇಲೆ ಶರವರ್ಷ ಸುರಿಯಲು ಆರಂಭವಾಯಿತು. ಆ ಸೋದರರು ಕನಲಿ ಆಕಾಶವನ್ನೆಲ್ಲ ತಮ್ಮ ಬಾಣಗಳಿಂದ ತುಂಬಿದರು. ಆದರೆ ಅವುಗಳಿಂದ ಪ್ರಯೋಜನವೇನೂ ಆಗಲಿಲ್ಲ. ಮೇಲೆ ಮರೆಯಾಗಿದ್ದ ಇಂದ್ರಜಿತ್ತು ತನ್ನ ವಿದ್ಯಾಚಾತುರ್ಯದಿಂದ ಆಕಾಶದಲ್ಲೆಲ್ಲಾ ಅಂಧಕಾರ ಕವಿಯುವಂತೆ ಮಾಡಿದನು. ಅವನು ಮಾಡುತ್ತಿದ್ದ ಧನುಷ್ಟಂಕಾರ ಕೇಳಿಬರುತ್ತಿತ್ತೆ ಹೊರತು ಅವನು ಕಾಣುತ್ತಿರಲಿಲ್ಲ. ಅವನು ಪ್ರಯೋಗಿಸುವ ಬಾಣಗಳೆಲ್ಲವೂ ಗುರಿತಪ್ಪದೆ ಬಂದು ರಾಮಲಕ್ಷ್ಮಣರಿಗೆ ತಾಕುತ್ತಿದ್ದುವು. ಅವರು ಬಿಟ್ಟ ಪ್ರತಿಬಾಣಗಳೆಲ್ಲವೂ ಶೂನ್ಯವನ್ನು ಮುಟ್ಟಿ ಹಿಂದಿರುಗುತ್ತಿದ್ದುವು. ಇದನ್ನು ಕಂಡು ಲಕ್ಷ್ಮಣನಿಗೆ ರೇಗಿಹೋಯಿತು. ಆತನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವೆನೆಂದು ಅಣ್ಣನಿಗೆ ತಿಳಿಸಿದನು. ಆದರೆ ಅದರಿಂದ ನಿರಪರಾಧಿಗಳಾದ ರಾಕ್ಷಸರೂ ಮಡಿಯುವರಾದುದರಿಂದ ಅದನ್ನು ಪ್ರಯೋಗಿಸಬಾರದೆಂದು ಹೇಳಿ, ಶ್ರೀರಾಮನು ಆ ರಾಕ್ಷಸನ ಮಾಯಾವಿದ್ಯೆಯನ್ನು ತಾನು ಭೇದಿಸುವುದಾಗಿ ನುಡಿದನು. ಇದನ್ನು ಕೇಳಿದ ಇಂದ್ರಜಿತ್ತು ತನ್ನ ಉಪಾಯ ವಿಫಲವಾದೀತೆಂದು ಹೆದರಿ, ಯುದ್ಧಮಾಡುವುದನ್ನು ನಿಲ್ಲಿಸಿ, ಲಂಕೆಗೆ ಹಿಂದಿರುಗಿದನು.

ಲಂಕೆಯಲ್ಲಿ ಕ್ಷಣಕಾಲ ವಿಶ್ರಮಿಸಿಕೊಂಡ ಮೇಲೆ ಮಾಯಾವಿಯಾದ ಇಂದ್ರಜಿತ್ತು ರಾಮಲಕ್ಷ್ಮಣರಿಗೆ ದಿಗ್ಭ್ರಾಂತಿಯುಂಟಾಗುವಂತಹ ಉಪಾಯವೊಂದನ್ನು ಆಲೋಚಿಸಿದನು. ತನ್ನ ಮಾಯಾವಿದ್ಯೆಯಿಂದ ಅವನು ಸೀತೆಯ ಆಕಾರವೊಂದನ್ನು ಸೃಷ್ಟಿಸಿದನು. ಅದನ್ನು ರಥದಲ್ಲಿಟ್ಟುಕೊಂಡು ಯುದ್ಧರಂಗವನ್ನು

ಪ್ರವೇಶಿಸಿ, ವಾನರರ ಇದಿರಿನಲ್ಲಿಯೆ ಆ ಮಾಯಾ ಸೀತೆಯನ್ನು ವಧಿಸಲು ಉದ್ಯುಕ್ತನಾದನು. ವಾನರಸೇನೆಯ ಮುಂದುಗಡೆಯಲ್ಲಿಯೆ ಇದ್ದ ಆಂಜನೇಯನಿಗೆ ಆ ಕಪಟ ಸೀತೆಯ ಆಕಾರ ಕಾಣಿಸಿತು. ಆತನು ಆಕೆಯೆ ನಿಜವಾದ ಸೀತೆಯೆಂದು ಭ್ರಮಿಸಿ, ಆಕೆಯ ವಿಪತ್ತಿಗಾಗಿ ಕಣ್ಣೀರು ಸುರಿಸಿದನು. ವಾನರರನ್ನು ಕಾಣುತ್ತಲೇ ಇಂದ್ರಜಿತ್ತು ಹಿರಿದ ಖಡ್ಗವನ್ನು ಹಿಡಿದು ಕಪಟಸೀತೆಯ ಕೇಶರಾಶಿಯನ್ನು ಹಿಡಿದೆಳೆಯುತ್ತಾ ವಾನರರ ಮೇಲೆ ಬಾಣದ ಮಳೆಯನ್ನು ಸುರಿಸಿದನು. ರಥದಲ್ಲಿದ್ದ ಕಪಟದ ಹೆಣ್ಣು "ರಾಮ! ರಾಮ!" ಎಂದು ದುಃಖಭರದಿಂದ ಕೂಗಿಡುತ್ತಿದ್ದಳು. ಅದನ್ನು ಕಂಡು ಮಾರುತಿ ಕಣ್ಣೀರು ಸುರಿಸುತ್ತಾ "ಎಲವೊ ದುರ್ಮಾರ್ಗ, ನಿನ್ನ ಸರ್ವನಾಶಕ್ಕಾಗಿ ಆ ಜಗನ್ಮಾತೆಯ ಕೇಶರಾಶಿಯನ್ನು ಎಳೆದಾಡುತ್ತಿರುವೆ. ನಿನ್ನ ಪಾಪ ಮಿತಿಮೀರಿತು. ಸ್ತ್ರೀವಧೆಗೆ ನಿನ್ನ ಮನಸ್ಸು ಹೇಗೆ ಒಪ್ಪಿತು? ನೀನಿನ್ನು ಕ್ಷಣಕಾಲವೂ ಭೂಮಿಯ ಮೇಲೆ ಇರಬಾರದು" ಎಂದು ಹೇಳಿ ಅವನನ್ನು ಕೊಲ್ಲುವುದಕ್ಕಾಗಿ ಅವನ ಬಳಿಗೆ ನುಗ್ಗಿದನು. ಆಗ ಇಂದ್ರಜಿತ್ತು ಆತನನ್ನು ಕುರಿತು "ಎಲವೊ ವಾನರ, ನೀವು ಸೀತೆಗಾಗಿಯೆ ಅಲ್ಲವೆ ಇಲ್ಲಿಗೆ ಬಂದುದು? ಇಗೋ ಮೊದಲು ಇವಳನ್ನು ಕೊಲ್ಲುತ್ತೇನೆ. ಅನಂತರ ರಾಮಲಕ್ಷ್ಮಣರು ನನ್ನ ಬಾಣಕ್ಕೆ ಬಲಿಯಾಗುತ್ತಾರೆ. ಅವರಿಬ್ಬರಾದ ಮೇಲೆ ನಿನ್ನ ಮತ್ತು ಸುಗ್ರೀವನ ಸರದಿ. ನೀವೆಲ್ಲರೂ ತೀರಿದ ಮೇಲೆ ವಿಭೀಷಣನನ್ನು ವಿಚಾರಿಸಿಕೊಳ್ಳುತ್ತೇನೆ." ಹೀಗೆಂದು ಹೇಳುತ್ತಾ ಆ ರಾಕ್ಷಸನು ತನ್ನ ಕತ್ತಿಯಿಂದ ಮಾಯಾಸೀತೆಯ ತಲೆಯನ್ನು ಕತ್ತರಿಸಿ ನೆಲಕ್ಕೊಗೆದನು.

ಇಂದ್ರಜಿತ್ತುವಿನ ಕ್ರೂರಕಾರ್ಯವನ್ನು ಕಂಡು ಹನುಮಂತನು ರೋಷಾವೇಶದಿಂದ ರಾಕ್ಷಸರನ್ನೆಲ್ಲಾ ಹುಡಿಗಟ್ಟಿದನಾದರೂ ಆತನಿಗೆ ಯುದ್ಧದಲ್ಲಿ ಆಸಕ್ತಿ ಕಡಿಮೆಯಾಯಿತು. "ಯಾವ ದೇವಿಯ ನಿಮಿತ್ತವಾಗಿ ಈ ಯುದ್ಧ ಆರಂಭವಾಯಿತೊ ಆಕೆಯು ಮೃತಿಹೊಂದಿದ ಮೇಲೆ ಇನ್ನು ಯುದ್ಧದಿಂದ ಏನು ಪ್ರಯೋಜನ? ಈ ವೃತ್ತಾಂತವನ್ನು ಸುಗ್ರೀವನಿಗೂ ಶ್ರೀರಾಮಲಕ್ಷ್ಮಣರಿಗೂ ತಿಳಿಸುವುದೊಂದೇ ನಾನೀಗ ಮಾಡಬೇಕಾದ ಕಾರ್ಯ" ಎಂಬುದಾಗಿ ಯೋಚಿಸಿದ ಆ ಮಾರುತಿ ಕಪಿವೀರರೊಡನೆ ಹಿಂದಿರುಗಿದನು. ತನ್ನ ಉಪಾಯ ಫಲಿಸಿದುದಕ್ಕಾಗಿ ಇಂದ್ರಜಿತ್ತು ಅತ್ಯಂತ ಸಂತುಷ್ಟನಾಗಿ, ಚೈತ್ಯನಿಕುಂಭಿಲವೆಂಬ ದೇವಸ್ಥಾನವನ್ನು ಕುರಿತು ಹೊರಟವನಾದನು. ಅಲ್ಲಿ ಆತನು ದೊಡ್ಡ ಹೋಮವೊಂದನ್ನು ಮಾಡಲು ಉಪಕ್ರಮಿಸಿದನು.

ಮಾರುತಿ ತನ್ನ ಅನುಯಾಯಿಗಳೊಡನೆ ಉದ್ವಿಗ್ನಹೃದಯದಿಂದ ಶ್ರೀರಾಮಚಂದ್ರನ ಬಳಿಗೆ ಬಂದು ದಾರುಣದುಃಖದಿಂದ "ಪ್ರಭು, ಮಹಾ ಅನರ್ಥವಾಗಿ ಹೋಯಿತು. ರಾವಣನ ಮಗನಾದ ಇಂದ್ರಜಿತ್ತು ನಮ್ಮೊಡನೆ ಯುದ್ಧ ಮಾಡುತ್ತಿರುವಾಗ ನಮ್ಮೆದುರಿನಲ್ಲಿಯೆ ಸೀತಾಮಾತೆಯ ಶಿರಚ್ಛೇದ ಮಾಡಿದನು. ಆ ಭಯಂಕರ ಕೃತ್ಯವನ್ನು ಕಣ್ಣಾರೆ ಕಂಡು, ಇನ್ನು ಯುದ್ಧ ಮಾಡಲು ಮನಸ್ಸಾಗದೆ ನಿನಗೆ ಸುದ್ದಿಯನ್ನು ಕೊಡಲು ಹೊರಟು ಬಂದೆವು"

ಎಂದನು. ಆ ಮಾತುಗಳು ಕಿವಿಗೆ ತಾಕುತ್ತಿದ್ದಂತೆಯೆ ಶ್ರೀರಾಮನು ಮೂರ್ಛಿತನಾಗಿ ಬುಡಕಡಿದ ಮರದಂತೆ ಕೆಳಕ್ಕೆ ಬಿದ್ದನು. ಸುತ್ತಲೂ ನೆರೆದಿದ್ದ ವಾನರರು ಕಣ್ಣೀರು ಗರೆಯುತ್ತಾ ಆತನಿಗೆ ಶೈತ್ಯೋಪಚಾರ ಮಾಡಿದರು. ಅಣ್ಣನ ದುರವಸ್ಥೆಯನ್ನು ಕಂಡು ಲಕ್ಷ್ಮಣನೂ ಕಂಗಾಲಾದನು. ಅಣ್ಣನನ್ನು ಎತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಮಿತಿಯಿಲ್ಲದ ಚಿಂತೆಯಲ್ಲಿ ಮುಳುಗಿಹೋದನು. ಧರ್ಮದಮೂರ್ತಿಯಂತಿದ್ದ ಅಣ್ಣನಿಗೆ ಈ ದುರವಸ್ಥೆ ಪ್ರಾಪ್ತವಾದ ಮೇಲೆ, ಧರ್ಮವೆಂಬುದು ಕೇವಲ ಅರ್ಥವಿಲ್ಲದ ಮಾತು ಎನ್ನಿಸಿತು ಆತನಿಗೆ. ದುರ್ಮಾರ್ಗನಾದ ರಾವಣನು ವರ್ಧಿಸುತ್ತಾ, ಶ್ರೀರಾಮನಿಗೆ ಪತ್ನಿ ವಿಯೋಗದಂತಹ ದಾರುಣದುಃಖಪ್ರಾಪ್ತವಾದಮೇಲೆ ಲೋಕದಲ್ಲಿ ಪುಣ್ಯಪಾಪಗಳಿಗೆಬೆಲೆ ಯೆಲ್ಲಿಯದು ? ಆ ಕ್ಷಣದಲ್ಲಿ ರಾವಣನನ್ನೂ ಅವನ ಲಂಕೆಯನ್ನೂ ಸುಟ್ಟುಹಾಕಬೇಕೆ ನ್ನುವಷ್ಟು ರೋಷಹುಟ್ಟಿತು ಆತನಿಗೆ. ಅಣ್ಣನನ್ನು ಕುರಿತು "ಪೂಜ್ಯನೆ, ದುಃಖವನ್ನು ತೊರೆ. ಈ ನಿಮಿಷದಲ್ಲಿಯೆ ರಾಕ್ಷಸನ ವಂಶವೆಲ್ಲವನ್ನೂ ನಿರ್ಮೂಲಮಾಡಿ ನಿನ್ನ ದುಃಖಕ್ಕೆ ಪ್ರತೀಕಾರವಮಾಡುತ್ತೇನೆ" ಎಂದನು. ಅಷ್ಟರಲ್ಲಿ ಆತನಿಗೆ ತನ್ನ ಅಣ್ಣನು ಸಾಮಾನ್ಯ ಪುರುಷನಲ್ಲವೆಂಬ ವಿವೇಕವುದಿಸಿತು. ಆದ್ದರಿಂದ ಮಾತಿನ ಸರಣಿಯನ್ನು ಬದಲಾಯಿಸಿ "ಹೇ ಪುರುಷೋತ್ತಮ, ನೀನು ಪರಮಾತ್ಮಸ್ವರೂಪಿಯೆಂಬುದನ್ನು ಮರೆತೆಯಾ? ಹೇ ಅನಘನೆ, ಮಹಾಮಹಿಮೆಯುಳ್ಳ ನಿನ್ನ ಆತ್ಮವನ್ನು ನೀನು ಅರಿತವನಲ್ಲವೆ? ನಿನಗೆ ಈ ದುಃಖವೆಲ್ಲಿಯದು ? ಏಳು, ಅಣ್ಣ ! ಸೀತಾದೇವಿಯ ಮರಣವೃತ್ತಾಂತವನ್ನು ಕೇಳಿ ನಿನಗೆ ಪ್ರಿಯವಾಗಲೆಂದು ನಾನು ರೋಷಾವಿಷ್ಟನಾಗಿ ಮಾತನಾಡಿದೆನು. ಮಹಾಜ್ಞಾನಿಯಾದ ನೀನು ಮೇಲಕ್ಕೆದ್ದು ಮುಂದಿನ ಕಾರ್ಯವನ್ನು ಕೈಕೊಳ್ಳು" ಎಂದನು.

ಲಕ್ಷ್ಮಣನು ಶ್ರೀರಾಮಚಂದ್ರನನ್ನು ಸಮಾಧಾನಮಾಡುತ್ತಾ ಇರಲು, ವಿಭೀಷಣನು ವಾನರಸೇನೆಯನ್ನೆಲ್ಲ ರಣರಂಗದಲ್ಲಿ ಉಚಿತಸ್ಥಾನಗಳಲ್ಲಿ ನಿಲ್ಲಿಸಿ, ಅಲ್ಲಿಗೆ ಬಂದನು. ಶ್ರೀರಾಮಚಂದ್ರನು ಮೂರ್ಛಿತನಾಗಿ ಬಿದ್ದಿರುವುದನ್ನು ಲಕ್ಷ್ಮಣನು ಆತನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಕಣ್ಣೀರುಗರೆಯುತ್ತಿದ್ದುದನ್ನೂ ಕಂಡು ಆತನಿಗೆ ಆಶ್ಚರ್ಯವಾಯಿತು. ಆ ವೇಳೆಗೆ ಸುಗ್ರೀವನು ಅಲ್ಲಿಗೆ ಬಂದನು. ನಡೆದ ಸಮಾಚಾರವನ್ನು ಲಕ್ಷ್ಮಣನು ಅವರಿಬ್ಬರಿಗೂ ಬಿಕ್ಕಿ ಬಿಕ್ಕಿ ಅಳುತ್ತಾ ತಿಳಿಸಿದನು. ಅದನ್ನು ಕೇಳುತ್ತಲೆ ವಿಭೀಷಣನು ಅಳುವನ್ನು ನಿಲ್ಲಿಸುವಂತೆ ಆತನಿಗೆ ತಿಳಿಸಿ "ಅಯ್ಯಾ, ರಘುಕುಲೋತ್ತಮಾ, ನೀನು ಕೇಳಿರುವ ಸುದ್ದಿಯೆಲ್ಲವೂ ಸುಳ್ಳು ಸುದ್ದಿ. ಸೀತಾಹತ್ಯೆಯೆಂಬುದು ರಾಕ್ಷಸಮಾಯೆಯೆ ಹೊರತು ನಿಜವಲ್ಲ. ಸಮುದ್ರ ವನ್ನು ಬತ್ತಿಸುವುದು ಹೇಗೆ ಅಸಾಧ್ಯವೊ ಹಾಗೆ ಸೀತೆಯನ್ನು ವಧಿಸುವುದೆಂಬುದು ಆಗಹೋಗದ ಮಾತು. ಈ ಇಂದ್ರಜಿತ್ತು ನಿಕುಂಬಿಲಾ ಎಂಬ ದೇವಾಲಯದಲ್ಲಿ ಮಹಾಯಾಗವೊಂದನ್ನು ಆರಂಭಿಸಿದ್ದಾನೆ. ಆ ಯಾಗ ಸಂಪೂರ್ತಿಯಾದೊಡನೆಯೆ ಆತನು ದೇವದಾನವರಿಗೂ ಅಜೇಯನಾಗಿ ಹೋಗುತ್ತಾನೆ. ಆ ಕಾರ್ಯಕ್ಕೆ ನಿಮ್ಮಿಂದ ವಿಘ್ನಬಾರದಿರುವುದಕ್ಕಾಗಿಯೆ ಅವನು ಈ ಮಾಯೆಯಿಂದ ನಿಮ್ಮನ್ನು ಮೋಸಗೊಳಿಸಿ

ದ್ದಾನೆ. ಈಗ ಈ ವ್ಯರ್ಥವಾದ ವ್ಯಸನವನ್ನು ತ್ಯಜಿಸಿ, ಮೊದಲು ಆ ರಾಕ್ಷಸಕುಮಾರನನ್ನು ಸಂಹರಿಸುವ ಕಾರ್ಯವನ್ನು ಕೈಕೊಳ್ಳಿರಿ" ಎಂದನು.

ವಿಭೀಷಣನ ಮಾತುಗಳನ್ನು ಕೇಳಿ ಎಲ್ಲರಿಗೂ ಸಮಾಧಾನವಾಯಿತು. ಮೈ ತಿಳಿದೆದ್ದ ಶ್ರೀರಾಮಚಂದ್ರನು ಮತ್ತೊಮ್ಮೆ ವಿಭೀಷಣನಿಂದ ಸಮಾಚಾರವನ್ನೆಲ್ಲಾ ವಿವರವಾಗಿ ಅರಿತುಕೊಂಡು, ಆತನ ಸೂಚನೆಯಂತೆ ಲಕ್ಷ್ಮಣನನ್ನು ಇಂದ್ರಜಿತ್ತುವಿನ ಮೇಲೆ ಯುದ್ಧಕ್ಕೆ ಕಳುಹಿಸಲು ಸಿದ್ಧನಾದನು. ವಿಭೀಷಣನನ್ನು ಕುರಿತು ಆತನು "ಎಲೈ ರಾಕ್ಷಸರಾಜನೆ, ಇಂದ್ರಜಿತ್ತುವಿನ ಭಯಂಕರವಾದ ಮಾಯೆಯನ್ನು ನಾನು ಬಲ್ಲೆ. ರಣ ಪಂಡಿತನಾದ ಆ ರಾಕ್ಷಸಕುಮಾರನು ಬ್ರಹ್ಮಾಸ್ತ್ರದ ಮಹಿಮೆಯಿಂದ ಈಗಾಗಲೆ ದೇವದಾನವರಿಗೂ ಅಜೇಯನಾಗಿದ್ದಾನೆ. ಗಗನದಲ್ಲಿಯೆ ನಿಂತು ಮೋಡ ಮುಚ್ಚಿದ ದಿನಕರನಂತೆ, ಯಾರಿಗೂ ಕಾಣದಂತೆಯೆ ಶತ್ರುಗಳೊಡನೆ ಹೋರಾಡಬಲ್ಲನೆಂಬುದೂ ನನ್ನ ಅನುಭವಕ್ಕೆ ಬಂದಿದೆ" ಎಂದು ಹೇಳಿ ಲಕ್ಷ್ಮಣನ ಕಡೆ ತಿರುಗಿ "ವತ್ಸ, ಹನುಮಂತನನ್ನೂ ಜಾಂಬವಂತನನ್ನೂ ವಾನರಸೇನೆಯನ್ನೂ ನಿನ್ನೊಡನೆ ಕರೆದುಕೊಂಡು ಈಗಲೇ ಇಂದ್ರಜಿತ್ತುವಿನ ವಧೆಗಾಗಿ ಪ್ರಯಾಣಮಾಡು. ಮಹಾತ್ಮನಾದ ವಿಭೀಷಣನು ನಿನಗೆ ದಾರಿತೋರಿಸುತ್ತಾನೆ" ಎಂದು ಹೇಳಿದನು. ಲಕ್ಷ್ಮಣನು ಅಣ್ಣನ ಮಾತಿಗೆ 'ಮಹಾಪ್ರಸಾದ'ವೆಂದು ಹೇಳಿ, ದಿವ್ಯವಾದ ಕವಚವನ್ನು ತೊಟ್ಟು ದಿವ್ಯವಾದ ಧನುರ್ಬಾಣಗಳನ್ನು ಧರಿಸಿದನು. ಅನಂತರ ಅಣ್ಣನ ಪಾದಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಆತನಿಂದ ಆಶೀರ್ವಾದ ಪಡೆದು ಪ್ರಯಾಣೋನ್ಮುಖನಾದನು.

---

೧೯

# ಇಂದ್ರಜಿತ್ತು ವಧೆ

ರಾಕ್ಷಸವೀರನಾದ ವಿಭೀಷಣನ ಪರಾಮರ್ಶದಂತೆ ಲಕ್ಷ್ಮಣನು ಸೈನ್ಯ ಸಮೇತನಾಗಿ ನಿಕುಂಭಿಲಾ ದೇವಾಲಯದ ಬಳಿಗೆ ಬಂದನು. ಅದರ ದ್ವಾರದಲ್ಲಿ ಸರ್ವಸಜ್ಜಿತವಾದ ದೊಡ್ಡ ರಾಕ್ಷಸಸೇನೆ ಯುದ್ಧಕ್ಕೆ ಸಿದ್ಧವಾಗಿ ನಿಂತಿತ್ತು. ವಿಭೀಷಣನು ಆ ಸೇನೆಯೊಡನೆ ಹೋರಾಟವನ್ನು ಆರಂಭಿಸುವಂತೆ ವಾನರರ ಸೇನೆಗೆ ಹೇಳಿ ಲಕ್ಷ್ಮಣನನ್ನು ಕುರಿತು, "ರಘೋತ್ತಮಾ, ಶತ್ರುಸೈನ್ಯ ಚದುರುವವರೆಗೂ ನಮಗೆ ಇಂದ್ರಜಿತ್ತು ಕಾಣುವುದಿಲ್ಲ. ಆದ್ದರಿಂದ ದಿವ್ಯವಾದ ಬಾಣಗಳನ್ನು ಪ್ರಯೋಗಿಸಿ ಈ ರಾಕ್ಷಸ ಸೈನ್ಯವನ್ನೆಲ್ಲಾ ಭೇದಿಸುವವನಾಗು" ಎಂದನು. ಒಂದು ಕಡೆ ವಾನರರ ಕಲ್ಲುಮರಗಳ ಸುರಿಮಳೆ, ಮತ್ತೊಂದು ಕಡೆ ಲಕ್ಷ್ಮಣನ ಬಾಣಗಳ ಬಿರುಮಳೆ, ಇವುಗಳಿಗೆ ಸಿಕ್ಕಿ ರಾಕ್ಷಸ ಸೈನ್ಯವೆಲ್ಲವೂ ಧೂಳೆದ್ದು ಹೋಗುತ್ತಿರಲು, ಯಾಗಮಾಡುತ್ತಾ ಕುಳಿತಿದ್ದ ಇಂದ್ರಜಿತ್ತು ಇದನ್ನು ನೋಡಿ ಸಹಿಸಲಾರದೆ, ಯಾಗವನ್ನು ಮಧ್ಯಕ್ಕೇ ಬಿಟ್ಟು ಲಕ್ಷ್ಮಣನ ಮೇಲೆ ಯುದ್ಧಕ್ಕೆ ಹೊರಟುಬಂದನು. ಶತ್ರುದಮನಕ್ಕಾಗಿ ಆತನು ರಥವೇರಿದೊಡನೆಯೇ, ಕಂಗೆಟ್ಟಿದ್ದ ರಾಕ್ಷಸ ಸೇನೆಯೆಲ್ಲವೂ ಮತ್ತೊಮ್ಮೆ ಉತ್ಸಾಹಗೊಂಡು ಸಿಂಹನಾದ ಮಾಡಿತು.

ರಾಕ್ಷಸರ ಸಿಂಹನಾದವನ್ನು ಕೇಳಿ ವಾಯುಪುತ್ರನಿಗೆ ರೇಗಿತು. ಆತನು ಮಹಾ ವೃಕ್ಷವೊಂದನ್ನು ತೆಗೆದುಕೊಂಡು ರಾಕ್ಷಸರನ್ನೆಲ್ಲಾ ಸದೆಬಡಿಯಹತ್ತಿದನು. ಅದನ್ನು ಕಂಡು ಇಂದ್ರಜಿತ್ತು ತನ್ನ ರಥವನ್ನು ಅವನ ಬಳಿಗೆ ಹರಿಸುವಂತೆ ಸಾರಥಿಗೆ ಆಜ್ಞಾಪಿಸಿ ಅವನ ಸಮೀಪವನ್ನು ಸಾರುತ್ತಲೆ ಕ್ರೂರವಾದ ಆಯುಧಗಳಿಂದ ಮಾರುತಿಯನ್ನು ಪ್ರಹರಿಸಿದನು. ಆದರೆ ಮಾರುತಿ ಆ ಪ್ರಹಾರಗಳನ್ನು ಲೆಕ್ಕಿಸದೆ, ಶೂರನಾದರೆ ತನ್ನೊಡನೆ ಮಲ್ಲಕಾಳಗಕ್ಕೆ ನಿಲ್ಲುವಂತೆ ಎದುರಾಳಿಯನ್ನು ಮೂದಲಿಸಿದನು. ಅವನ ಮೂದಲಿಕೆಯಿಂದ ಕೆರಳಿದ ಇಂದ್ರಜಿತ್ತು ಆ ಕಪಿವೀರನನ್ನು ತೀರಿಸಿಬಿಡಬೇಕೆಂದು ದಿವ್ಯಾಸ್ತ್ರವೊಂದನ್ನು ಕೈಗೆ ತೆಗೆದುಕೊಂಡನು. ಇದು ವಿಭೀಷಣನಿಗೆ ಕಾಣಬರಲು, ಆತನು ಆ ವಾನರವೀರನನ್ನು ರಕ್ಷಿಸುವಂತೆ ಲಕ್ಷ್ಮಣನನ್ನು ಎಚ್ಚರಿಸಿದನು. ಇಷ್ಟೇ ಅಲ್ಲ, ತಾನೇ ಲಕ್ಷ್ಮಣನಿಗೆ ದಾರಿತೋರುತ್ತಾ ಆತನನ್ನು ಇಂದ್ರಜಿತ್ತುವಿನ ಬಳಿಗೆ ಕರೆತಂದನು.

ಇಂದ್ರಜಿತ್ತು ಯುದ್ಧಮಾಡುತ್ತಾ ನಿಂತಿದ್ದ ಎಡೆಯಲ್ಲಿಯೇ ಒಂದು ದೊಡ್ಡ ಆಲದಮರವಿತ್ತು. ಅದರ ಅಡಿಯಲ್ಲಿಯೆ ಆತನು ಯಜ್ಞ ಕಾರ್ಯವನ್ನು ನಡೆಸುತ್ತಾ ಇದ್ದುದು. ಭೂತ ಬಲಿಯನ್ನಿತ್ತು ಯಾಗವನ್ನು ಸಾಂಗಗೊಳಿಸಿದನೆಂದರೆ, ಆತನು

ಅದೃಶ್ಯನಾಗಿ ಅಜೇಯನಾಗಿ ಹೋಗಿಬಿಡುತ್ತಿದ್ದನು. ಆದ್ದರಿಂದ ಆ ಮೊದಲೇ ಅವನನ್ನು ಕೊಲ್ಲಬೇಕೆಂದುಕೊಂಡು ಲಕ್ಷ್ಮಣನು ಅವನನ್ನು ಇದಿರಿಸಿ, "ಎಲಾ, ರಾಕ್ಷಸ, ಇಗೋ ನಿನ್ನ ಯಮನಾದ ನಾನು ಇಲ್ಲಿ ನಿಂತಿದ್ದೇನೆ. ಸಾಧ್ಯವಿದ್ದರೆ ನನ್ನೊಡನೆ ಯುದ್ಧ ಮಾಡು" ಎಂದನು. ಇಂದ್ರಜಿತ್ತು ಅವನ ಕಡೆ ತಿರುಗಿ, ಬಳಿಯಲ್ಲೇ ನಿಂತಿದ್ದ ತನ್ನ ಚಿಕ್ಕಪ್ಪನನ್ನು ಕಂಡು ಅತ್ಯಂತ ಕ್ರೋಧದಿಂದ "ಎಲಾ ವಿಭೀಷಣಾ, ನೀನು ನನಗೆ ಚಿಕ್ಕತಂದೆ. ಆದರೂ ನನಗೆ ಪರಮ ದ್ರೋಹವನ್ನು ಬಗೆದು ಶತ್ರುವನ್ನು ಇಲ್ಲಿಗೆ ಕರೆತಂದಿರುವೆ. ಸ್ನೇಹ, ಕುಲ, ಬಾಂಧವ್ಯಗಳೊಂದನ್ನೂ ಗಮನಿಸದ ಬಾಹಿರ ನೀನು.. ಸ್ವಜನರನ್ನು ತ್ಯಜಿಸಿ ಶತ್ರುಗಳ ಸೇವಕನಾಗಿರುವ ನಿನಗೆ ಯುಕ್ತಾಯುಕ್ತ ವಿವೇಚನೆಯೇ ಇಲ್ಲದೆ ಹೋಯಿತಲ್ಲವೆ? ಈಗಲಾದರೂ ನಿನ್ನ ಹೀನಕಾರ್ಯಕ್ಕಾಗಿ ಪಶ್ಚಾತ್ತಾಪ ಪಟ್ಟು, ಶತ್ರುಗಳ ಆಶ್ರಯವನ್ನು ತ್ಯಜಿಸು. ಬಂಧುದ್ರೋಹಕ್ಕೆ ಮನಸ್ಸು ಮಾಡಬೇಡ" ಎಂದನು.

ಇಂದ್ರಜಿತ್ತುವಿನ ಕಟುನುಡಿಗಳಿಂದ ನೊಂದ ವಿಭೀಷಣನು ಅವನನ್ನು ಕುರಿತು "ಎಲವೊ ದುರಾತ್ಮ, ನಿನ್ನ ಸ್ತೋತ್ರಕ್ಕಾಗಲಿ ನಿಂದೆಗಾಗಲಿ ಏನೂ ಬೆಲೆಯಿಲ್ಲ. ರಾವಣಾಸುರನ ಮಗನಾದ ನಿನ್ನ ಬಾಯಲ್ಲಿ ಇನ್ನೆಂತಹ ಮಾತು ಹೊರಟೀತು? ನಾನು ರಾಕ್ಷಸ ವಂಶದಲ್ಲಿಯೆ ಹುಟ್ಟಿದರೂ ಪರಪೀಡನೆಗೆ ಹೇಸುತ್ತೇನೆ. ಸಮಸ್ತ ಭೂತಗಳ ಶ್ರೇಯಸ್ಸಿಗಾಗಿ ನಾನು ಶ್ರೀರಾಮಮೂರ್ತಿಯನ್ನು ಆಶ್ರಯಿಸಿದೆನೆ ಹೊರತು ನನ್ನ ಸ್ವಂತ ಸುಖವನ್ನು ಸಾಧಿಸುವುದಕ್ಕಲ್ಲ. ಪಾಪಕರ್ಮಗಳಿಗೆ ಹೇಸಿ, ಅವುಗಳಿಂದ ದೂರ ನಾಗುವುದಕ್ಕಾಗಿ ನಿಮ್ಮನ್ನು ತ್ಯಜಿಸಲೇಬೇಕಾಯಿತು. ಇನ್ನು ಆ ಮಾತನ್ನೆತ್ತಿ ಪ್ರಯೋಜನವಿಲ್ಲ. ಇಗೋ ನಿನ್ನ ಪಾಲಿನ ಮೃತ್ಯುವಿನಂತೆ ಲಕ್ಷ್ಮಣನು ನಿನ್ನ ಇದಿರಿಗೆ ನಿಂತಿದ್ದಾನೆ. ಆತನೊಡನೆ ಯುದ್ಧಕ್ಕೆ ನಿಲ್ಲು" ಎಂದನು.

ಚಿಕ್ಕಪ್ಪನ ಮಾತುಗಳಿಂದ ಇಂದ್ರಜಿತ್ತು ಕ್ರೋಧತಾಮ್ರಾಕ್ಷನಾಗಿ ನಿಶಿತವಾದ ಬಾಣಗಳನ್ನು ಬಿಲ್ಲಿನಲ್ಲಿ ಹೂಡುತ್ತಾ ಲಕ್ಷ್ಮಣನನ್ನು ಕುರಿತು "ಅಯ್ಯಾ ಲಕ್ಷ್ಮಣ, ಹತ್ತಿಯ ರಾಶಿಯನ್ನು ಸುಡುವ ಅಗ್ನಿಯಂತೆ ನಿನ್ನ ಅವಯವಗಳನ್ನೆಲ್ಲ ದಹಿಸಿಹಾಕುವ ಬಾಣಗಳು ನಿನ್ನ ಪ್ರಾಣಗಳನ್ನು ಹೀರಲು ಬರುತ್ತಿವೆ. ಯಮಾಲಯಕ್ಕೆ ಪ್ರಸ್ಥಾನ ಹೊರಡಲು ಸಿದ್ಧನಾಗು. ಹಿಂದೊಮ್ಮೆ ರಾತ್ರಿಯ ಯುದ್ಧದಲ್ಲಿ ನಿನ್ನನ್ನೂ ನಿನ್ನ ಅಣ್ಣ ನನ್ನೂ ನೆಲಕ್ಕೆ ಕೆಡವಿ ನೀವು ಸತ್ತೇಹೋದಿರೆಂದುಕೊಂಡಿದ್ದೆ. ಆದರೆ ನೀವಿನ್ನೂ ಬದುಕಿರುವಿರಲ್ಲವೆ? ಇದೀಗ ಈ ಕಾಳಸರ್ಪಗಳಿಗೆ ಸಮಾನವಾದ ಬಾಣಗಳು ನಿನ್ನನ್ನು ಕೊನೆಗಾಣಿಸುತ್ತವೆ" ಎಂದು ಹೇಳಿದನು. ಅವನ ಬೆದರಿಕೆಯ ಮಾತುಗಳಿಗೆ ಲಕ್ಷ್ಮಣನು ಹೆದರುವನೆ? ಅವನನ್ನು ಛೀಗುಟ್ಟುತ್ತಾ "ಎಲವೊ ರಾಕ್ಷಸಾಧಮ, ಅಗೋಚರನಾಗಿ ಕಳ್ಳನಂತೆ ನಮ್ಮಮೇಲೆ ಬಾಣಪ್ರಯೋಗ ಮಾಡಿದುದನ್ನು ಹೆಮ್ಮೆಯಿಂದ ಹೇಳಿಕೊಳ್ಳಲು ನಾಚಿಕೆಯಾಗುವುದಿಲ್ಲವೆ? ಈಗ ನಾನ ಪ್ರತ್ಯಕ್ಷ ವಾಗಿ ಎದುರಿಗೆ ನಿಂತಮೇಲೆ ನೀನು ಬದುಕಿ ಹಿಂದಿರುಗುವುದುಂಟೆ? ಇಗೋ,

ಇದೀಗ ಕೂರಂಬುಗಳಿಂದ ನಿನ್ನ ಇಹಜೀವನವನ್ನು ಸಮಾಪ್ತಿಗೊಳಿಸುತ್ತೇನೆ" ಎಂದನು.

ಪರಸ್ಪರ ಮೂದಲಿಕೆಯ ಮಾತುಗಳಿಂದ ಇಬ್ಬರ ಕ್ಷಾತ್ರವೂ ಕೆರಳಿತು. ಶೂರರಾದ ಆ ಯೋಧರಿಬ್ಬರೂ ತಮ್ಮ ಬಾಣಕೌಶಲವನ್ನು ಮೆರೆಯತೊಡಗಿದರು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಉತ್ಸಾಹದಿಂದ ಇಬ್ಬರೂ ವಿಜೃಂಭಿಸಿದರು. ಪರಸ್ಪರ ಬಾಣಾಘಾತದಿಂದ ಇಬ್ಬರ ದೇಹಗಳೂ ರಕ್ತದಲ್ಲಿ ತೊಯ್ದುವು. ಮೇಘಗಳಿಂದ ಸುರಿವ ಮಳೆಯಂತೆ ಇಬ್ಬರ ಧನುಸ್ಸುಗಳಿಂದಲೂ ಬಾಣಗಳು ಸುರಿಯುತ್ತಿದ್ದುವು. ನಡುನಡುವೆ ಮೂದಲೆಯ ಮಾತುಗಳಿಂದ ಎದುರಾಳಿಗಳನ್ನು ಕೆರಳಿಸುತ್ತಾ ಇಬ್ಬರೂ ಸಮಸಮವಾಗಿ ಕಾದುತ್ತಿದ್ದರು. ಬಾಣಗಳನ್ನು ಯಾವಾಗ ತೊಡುತ್ತಿದ್ದರೊ, ಯಾವಾಗ ಬಿಡುತ್ತಿದ್ದರೊ ತಿಳಿಯದಷ್ಟು ಕೈಚಳಕ ಇಬ್ಬರದೂ. ಹೀಗೆ ಬಹಳ ಹೊತ್ತು ಕಾದುತ್ತಿರಲು, ಬರಬರುತ್ತಾ ಇಂದ್ರಜಿತ್ತುವಿನ ಶಕ್ತಿ ಕುಗ್ಗುತ್ತಾ ಬಂತು. ಆತನ ಮುಖ ಕಳೆಗಟ್ಟಿತು. ಅದೇ ಸಮಯದಲ್ಲಿಯೆ ವಿಭೀಷಣನು ಲಕ್ಷ್ಮಣನನ್ನು "ಸೌಮಿತ್ರಿ, ಇನ್ನು ನಿನ್ನ ಶತ್ರು ನೆಲಕ್ಕೊರಗಿದಂತೆಯೇ ; ತೊಡು ದಿವ್ಯಾಸ್ತ್ರಗಳನ್ನು" ಎಂದು ಪ್ರೋತ್ಸಾಹಿಸಿದನು. ಇದರಿಂದ ಉತ್ತೇಜಿತನಾದ ಆತನು ತೀಕ್ಷ್ಣವಾದ ಬಾಣಗಳನ್ನು ಎದುರಾಳಿಯ ಮೇಲೆ ಎಸೆದನು. ವಜ್ರಾಯುಧದಂತಿದ್ದ ಆ ಬಾಣಗಳು ಸೋಕಿದೊಡನೆಯೆ ಪರ್ವತದಂತಿದ್ದ ಇಂದ್ರಜಿತ್ತುವಿನ ಇಂದ್ರಿಯಗಳೆಲ್ಲವೂ ಕಲಕಿದಂತಾಗಿ, ಕ್ಷಣಕಾಲ ಪ್ರಜ್ಞೆ ತಪ್ಪಿದಂತಾದನು. ಆದರೆ ಮರುಕ್ಷಣದಲ್ಲಿಯೆ ಚೇತರಿಸಿಕೊಂಡು, ಇಮ್ಮಡಿಯಾದ ಉತ್ಸಾಹದಿಂದ ಏಳು ಬಾಣಗಳಿಂದ ಲಕ್ಷ್ಮಣನನ್ನೂ ಹತ್ತು ಬಾಣಗಳಿಂದ ಹನುಮಂತನನ್ನೂ ನೂರು ಬಾಣಗಳಿಂದ ವಿಭೀಷಣನನ್ನೂ ಘಾತಿಸಿದನು.

ಇಂದ್ರಜಿತ್ತುವಿನ ಬಾಣಘಾತವನ್ನು ಸೈರಿಸಿಕೊಂಡು "ಎಲವೋ ರಾಕ್ಷಸ, ನಿನ್ನ ಬಾಣಗಳು ನನ್ನ ಶರೀರಕ್ಕೆ ಸುಖಸ್ಪರ್ಶಗಳಾಗಿವೆ. ಯುದ್ಧದಲ್ಲಿ ವಿಜಯ ಸಾಧಿಸಬೇಕೆನ್ನುವವನು ಇಂತಹ ದುರ್ಬಲ ಯುದ್ಧವನ್ನು ಮಾಡುವುದೆ ?" ಎಂದು ಹೇಳಿ ಲಕ್ಷ್ಮಣನು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿದನು. ಅದರಿಂದ ಇಂದ್ರಜಿತ್ತುವಿನ ಕವಚವು ಪುಡಿಪುಡಿಯಾಗಿ ಅಂತರಿಕ್ಷದಿಂದ ಉದುರುವ ನಕ್ಷತ್ರಗಳಂತೆ ಕೆಳಕ್ಕೆ ಬಿದ್ದಿತು. ಎದುರಾಳಿಯ ಮಾತುಗಳಿಂದಲೂ ಅವನ ಬಾಣಪ್ರಯೋಗದಿಂದಲೂ ಕನಲಿದ ಇಂದ್ರಜಿತ್ತು ಮಹಾಸ್ತ್ರವೊಂದನ್ನು ಪ್ರಯೋಗಿಸಿ ಲಕ್ಷ್ಮಣನ ಕವಚವನ್ನು ಕತ್ತರಿಸಿ ಹಾಕಿದುದಲ್ಲದೆ ವಾನರ ಸೈನ್ಯವನ್ನೆಲ್ಲ ಬಾಯ್ಕೇಳಿಸಿದನು. ರಕ್ತಸಿಕ್ತವಾದ ದೇಹದಿಂದ ಕೂಡಿದ ಲಕ್ಷ್ಮಣನು ಮಹಾಸರ್ಪದಂತೆ ಸಿಟ್ಟಿಸಿರುಬಿಡುತ್ತಾ ಬಾಣವರ್ಷದಿಂದ ದಿಕ್ಕುಗಳನ್ನೆಲ್ಲಾ ತುಂಬಿಬಿಟ್ಟನು.

ಲಕ್ಷ್ಮಣ ಇಂದ್ರಜಿತ್ತುಗಳಲ್ಲಿ ಒಬ್ಬರೂ ಹಿಮ್ಮೆಟ್ಟುವಂತಿರಲಿಲ್ಲ. ಇಬ್ಬರೂ ಸಮಾನಬಲರೆ ಸರಿ. ಇಬ್ಬರ ದೇಹಗಳೂ ರಕ್ತದಲ್ಲಿ ತೊಯ್ದು ಹೂತ ಮುತ್ತುಗದ ಮರದಂತಾಗಿದ್ದರೂ ಅದನ್ನು ಲಕ್ಷಿಸದೆಯೆ ಇಬ್ಬರೂ ಸಮರಕರ್ಮದಲ್ಲಿ ತೊಡಗಿದ್ದಾರೆ.

ಇಬ್ಬರಲ್ಲಿ ಒಬ್ಬರಾದರೂ ವಿಶ್ರಾಂತಿ ಬಯಸುವಂತಿಲ್ಲ. ನೋಡುವವರಿಗೆ ಯುದ್ಧ ಕೊನೆಗೊಳ್ಳುವುದೇ ಇಲ್ಲವೇನೋ ಎನ್ನಿಸಿತು. ಇದನ್ನು ಕಂಡು ವಿಭೀಷಣನು ಲಕ್ಷ್ಮಣನ ಸಹಾಯಕ್ಕಾಗಿ ಆತನ ಪಕ್ಕಕ್ಕೆ ಬಂದು ನಿಂತನು. ಆತನೂ ಆತನ ಅನುಚರರೂ ಇಂದ್ರಜಿತ್ತುವಿನ ಸಹಾಯಕರನ್ನು ಸಂಹರಿಸುವ ಕಾರ್ಯದಲ್ಲಿ ತೊಡಗಿದರು. ಅಲ್ಲದೆ ಆತನು ಕಪಿವೀರರನ್ನು ಕುರಿತು "ಎಲೈ ವಾನರವೀರರೇ, ರಾವಣನಿಗೆ ಬೆಂಬಲವಾಗಿ ಉಳಿದಿರುವವನು ಈ ಇಂದ್ರಜಿತ್ತು ಒಬ್ಬನೆ. ಇವನ ಸಂಹಾರದಲ್ಲಿ ಸ್ಥಿರಚಿತ್ತವುಳ್ಳವರಾಗಿ ಯುದ್ಧ ಮಾಡುವವರಾಗಿ. ಇವನೊಬ್ಬನು ಮಡಿದರೆ,ಇನ್ನು ಉಳಿಯುವವನು ರಾವಣನೊಬ್ಬನೆ. ಮಹಾಸಾಗರವನ್ನು ಗೋಷ್ಪಾದದಂತೆ ಭಾವಿಸಿ ದಾಟಿಬಂದಿರುವ ನಿಮಗೆ ಇನ್ನು ಉಳಿದಿರುವ ಕೆಲಸ ಗೋಷ್ಪಾದದಷ್ಟೆ. ಗರ್ವಾಂಧರಾದ ರಾಕ್ಷಸವೀರರನ್ನೆಲ್ಲಾ ಸಂಹರಿಸಿರುವಿರಿ. ಈ ಇಂದ್ರಜಿತುವೊಬ್ಬನನ್ನೂ ಅವರ ಹಿಂದೆ ಕಳುಹಿಸಿಬಿಡಿ. ನಾನೆ ಆ ಕಾರ್ಯವನ್ನು ಮಾಡುತ್ತಿದ್ದೆ. ಆದರೆ ನನ್ನ ಅಣ್ಣನ ಮಗನಾದುದರಿಂದ ಮನಸ್ಸು ಒಡಂಬಡದು. ಆ ಕಾರ್ಯವನ್ನು ಲಕ್ಷ್ಮಣಸ್ವಾಮಿಯೆ ನೆರವೇರಿಸಲಿ. ನೀವೆಲ್ಲರೂ ನನ್ನೊಡನೆ ಸೇರಿ ರಾಕ್ಷಸ ಯೋಧರನ್ನೆಲ್ಲಾ ವಧಿಸಿರಿ" ಎಂದು ಪ್ರೋತ್ಸಾಹಿಸಿದನು.

ವಿಭೀಷಣನ ಹಿತವಚನಗಳನ್ನು ಕೇಳಿವಾನರರೆಲ್ಲರೂ ಬಾಲವನ್ನು ನೆಲಕ್ಕೆ ಅಪ್ಪಳಿಸಿ ಕುಪ್ಪಳಿಸಿದರು. ಕಲ್ಲುಗಳೂ ಮರಗಳೂ ಆಕಾಶದಲ್ಲಿ ಹಾರಾಡಲು ಆರಂಭವಾಯಿತು. ರಾಕ್ಷಸರೂ ಹುರುಪಿನಿಂದ ಯುದ್ಧ ಮಾಡುತ್ತಿದ್ದರಾದರೂ ಹನುಮಂತನ ಕೈಲಿದ್ದ ಸಾಲವೃಕ್ಷ ಅವರನ್ನು ಒಂದು ಕಡೆಯಿಂದ ಸವರುತ್ತಾ ಬರುತ್ತಿರಲು, ಕ್ಷಣಕ್ಷಣಕ್ಕೂ ಅವರ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತಿತ್ತು. ಅತ್ತ ರಾಕ್ಷಸರ ತೊಂದರೆ ತಪ್ಪಿ, ತನ್ನ ಇದಿರಾಳಿಯೊಡನೆ ಮಾತ್ರ ಯುದ್ಧ ಮಾಡಲು ಅವಕಾಶ ಸಿಕ್ಕಿದುದಕ್ಕಾಗಿ ಲಕ್ಷ್ಮಣನು ಸಂತೋಷಿಸಿ, ನಾಲ್ಕು ನಿಶಿತವಾದ ಬಾಣಗಳನ್ನು ಪ್ರಯೋಗಿಸಿ,ಎದುರಾಳಿಯ ರಥಾಶ್ವಗಳನ್ನು ದಿಕ್ಕೆಡುವಂತೆ ಮಾಡಿದನು. ಅದರಿಂದ ಶತ್ರು ಚೇತರಿಸಿಕೊಳ್ಳುವಷ್ಟರಲ್ಲಿ ಆತನು ಮತ್ತೊಂದು ಕೂರಂಬಿನಿಂದ ಸಾರಥಿಯನ್ನು ಕಡಿದು ಕೆಳಕ್ಕೆ ಕೆಡವಿದನು. ಆದರೂ ಇಂದ್ರಜಿತ್ತು ಧೃತಿಗೆಡಲಿಲ್ಲ. ತಾನೇ ಸಾರಥ್ಯವನ್ನು ವಹಿಸಿ ಯುದ್ಧ ಮಾಡಲು ಆರಂಭಿಸಿದನು. ಆತನ ಯುದ್ಧ ಕೌಶಲವನ್ನು ಕಂಡು ಎಲ್ಲರೂ ಬೆರಗಾದರು. ನಾಲ್ವರು ವಾನರ ಯೋಧರು ಜೀವದ ಹಂಗುತೊರೆದು ಆ ರಾಕ್ಷಸಕುಮಾರನ ರಥಕ್ಕೆ ಇದಿರಾಗಿ ಹೋಗಿ ರಭಸದಿಂದ ರಥಾಶ್ವಗಳ ಮೇಲೆ ಎರಗಿದರು. ಆ ವೇಗಕ್ಕೆ ಅವು ರಕ್ತ ಕಾರಿಕೊಂಡು ಸತ್ತುಬಿದ್ದುವು. ಅನಂತರ ಆ ನಾಲ್ವರೂ ಸೇರಿ ರಥವನ್ನು ಪುಡಿಗುಟ್ಟಿ, ಶತ್ರುವಿನ ಬಾಣಾಘಾತಕ್ಕೆ ಸಿಕ್ಕದೆ ಲಕ್ಷ್ಮಣನ ಬಳಿಗೆ ಓಡಿ ಬಂದರು.

ಈಗ ಇಂದ್ರಜಿತ್ತು ನೆಲದಮೇಲೆಯೆ ನಿಂತು ಯುದ್ಧವನ್ನು ಮುಂದುವರಿಸಿದನು. ಆದರೆ ಹಾಗೆ ಬಹುಕಾಲ ಯುದ್ಧಮಾಡುವುದು ಸಾಧ್ಯವಿಲ್ಲವೆಂದು ತೋರಿದುದರಿಂದ ಆತನು ಶರವರ್ಷದಿಂದ ಕತ್ತಲೆಗವಿಯುವಂತೆ ಮಾಡಿ ಆ ಕತ್ತಲೆಯಲ್ಲಿ ಯಾರಿಗೂ ಕಾಣ

ದಂತೆ ಲಂಕೆಗೆ ಹಿಂದಿರುಗಿ, ಹೊಸ ರಥವನ್ನೇರಿ ಯುದ್ಧರಂಗಕ್ಕೆ ಹಿಂದಿರುಗಿದನು. ಅವನ ಸಾಹಸವನ್ನು ಕಂಡು ಲಕ್ಷ್ಮಣಸ್ವಾಮಿ ಆಶ್ಚರ್ಯಪಡುತ್ತಿರಲು, ಆ ರಾಕ್ಷಸನು ನಿಶಿತ ಶರವರ್ಷದಿಂದ ವಾನರಸೈನ್ಯವನ್ನೆಲ್ಲ ಧ್ವಂಸಮಾಡತೊಡಗಿದನು. ಆಗ ಲಕ್ಷ್ಮಣನು ತನ್ನ ಬಿಲ್ಲುವಿದ್ಯೆಯ ಜಾಣ್ಮೆಯಿಂದ ಎದುರಾಳಿಯ ಬಿಲ್ಲನ್ನೇ ಕತ್ತರಿಸಿ ಹಾಕಿದನು. ಆದರೇನು ? ಒಂದು ಹೋದರೆ ಮತ್ತೊಂದು ರಥದಲ್ಲಿ ಸಿದ್ಧವಾಗಿತ್ತು ; ಅದನ್ನು ಧರಿಸಿ, ಆತನು ವಾನರರ ಪಾಲಿನ ಯಮನಂತೆ ವ್ಯವಹರಿಸತೊಡಗಿದನು. ಅವನನ್ನು ಅಡಗಿಸುವುದಕ್ಕಾಗಿ ಲಕ್ಷ್ಮಣನು ಬಾಣವೊಂದನ್ನು ಇಂದ್ರಜಿತ್ತುವಿನ ಎದೆಯಲ್ಲಿ ಕೀಲಿಸಿ, ಅದರಿಂದ ಆತನು ಎಚ್ಚತ್ತುಕೊಳ್ಳುವುದರೊಳಗಾಗಿ ಅವನ ಸಾರಥಿಯನ್ನು ಸಂಹರಿಸಿದನು. ಆಗ ಮತ್ತೊಮ್ಮೆ ಇಂದ್ರಜಿತ್ತು ತಾನೇ ರಥವನ್ನು ನಡೆಸುತ್ತಾ ಯುದ್ಧಮಾಡಬೇಕಾಯಿತು. ಆದರೂ ಆತನು ಕುಗ್ಗದೆ ಶತ್ರುವಿನ ಬಾಣಗಳನ್ನೆಲ್ಲಾ ಕತ್ತರಿಸಿ ಹಾಕುತ್ತಾ ಮೂರು ಕೂರಂಬುಗಳಿಂದ ಎದುರಾಳಿಯ ಹಣೆಗೆ ಗುರಿಯಿಟ್ಟು ಹೊಡೆದನು. ಅವು ಆತನ ಹಣೆಯಲ್ಲಿ ಆಳವಾಗಿ ನಾಟಿಕೊಂಡುವು. ಕಣ್ಣು ಮುಚ್ಚಿ ತೆಗೆಯುವುದರಲ್ಲಿ ಮತ್ತೆ ಮೂರು ಬಾಣಗಳು ಬಂದು ವಿಭೀಷಣನ ಹಣೆಗೆ ನಾಟಿದುವು. ಆ ನೋವಿನಿಂದ ರೋಷಗೊಂಡ ಆ ರಾಕ್ಷಸರಾಜನು ಇಂದ್ರಜಿತ್ತುವಿನ ಬಳಿಗೆ ನುಗ್ಗಿ, ತನ್ನ ದೊಡ್ಡ ಗದೆಯಿಂದ ಅವನ ರಥವನ್ನು ಹುಡಿಗುಟ್ಟಿದನು.

ತನ್ನ ರಥ ಭಗ್ನವಾಗಲು ಇಂದ್ರಜಿತ್ತು ಧರಾತಲಕ್ಕೆ ಲಂಘಿಸಿ, ಉರಿಯುವ ಕೋಪದಿಂದ ಯಮನು ತನಗೆ ಕೊಟ್ಟಿದ್ದ ಮಹಾಸ್ತ್ರವನ್ನು ಚಿಕ್ಕಪ್ಪನಮೇಲೆ ಪ್ರಯೋಗಿಸಿದನು. ಇನ್ನೇನು ವಿಭೀಷಣನ ಕಥೆ ಮುಗಿದಂತೆಯೆ ಎಂಬಂತಿರುವಾಗ ಲಕ್ಷ್ಮಣನು ಕುಬೇರನು ತನಗೆ ಸ್ವಪ್ನದಲ್ಲಿ ಕರುಣಿಸಿದ್ದ ಮಹಾಸ್ತ್ರವನ್ನು ಅದಕ್ಕೆ ಇದಿರಾಗಿ ಪ್ರಯೋಗಿಸಿದನು. ಎರಡು ಬಾಣಗಳೂ ಅಂತರಿಕ್ಷದಲ್ಲಿ ಪರಸ್ಪರ ತಾಕಿ, ಭಯಂಕರಾಕಾರದಿಂದ ಉರಿದು ತಣ್ಣಗಾದುವು. ಅನಂತರ ಲಕ್ಷ್ಮಣನ ವಾರುಣಾಸ್ತ್ರ ಇಂದ್ರಜಿತ್ತುವಿನ ರೌದ್ರಾಸ್ತ್ರದಿಂದ ಭಿನ್ನವಾಯಿತು. ಆತನ ಆಗ್ನೇಯಾಸ್ತ್ರ ಈತನ ಸೌರಾಸ್ತ್ರದಿಂದ, ಒಬ್ಬನ ಆಸುರಾಸ್ತ್ರ, ಮತ್ತೊಬ್ಬನ ಮಹೇಶ್ವರಾಸ್ತ್ರದಿಂದ ಪರಸ್ಪರ ನಿವಾರಿತವಾದುವು. ಕಡೆಗೆ ಲಕ್ಷ್ಮಣನು ಐಂದ್ರಾಸ್ತ್ರವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ "ಎಲೈ ಬಾಣವೆ, ದಶರಥನಂದನನಾದ ಶ್ರೀರಾಮಮೂರ್ತಿ ಧರ್ಮಾತ್ಮನೂ, ಸತ್ಯಸಂಧನೂ, ಅಸಮಾನ ವೀರನೂ ಆಗಿರುವುದು ನಿಜವಾದರೆ ನೀನು ಇಂದ್ರಜಿತ್ತುವನ್ನು ವಧಿಸು" ಎಂದು ಹೇಳಿ ಆ ಬಾಣವನ್ನು ಕಿವಿಯವರೆಗೂ ಎಳೆದು ಪ್ರಯೋಗಿಸಿದನು. ಧಗಧಗನೆ ಉರಿಯುತ್ತಾ ಕಿಡಿಗಾರುತ್ತಿದ್ದ ಆ ಅಸ್ತ್ರ ನಿವಾರಿಸಲಸಾಧ್ಯವಾಗಿ ಇಂದ್ರಜಿತ್ತುವಿನ ರುಂಡವನ್ನು ಕತ್ತರಿಸಿ ದೇಹದಿಂದ ಬೇರ್ಪಡಿಸಿತು. ಆ ಮಹಾವೀರನ ದೇಹ ಭೂಮಿಯ ಮೇಲೆ ಕೆಡೆದುಬಿದ್ದಿತು. ಅಳಿದುಳಿದ ರಾಕ್ಷಸರೆಲ್ಲರೂ ಆಯುಧಗಳನ್ನು ಬಿಟ್ಟು ಪ್ರಾಣಭಯದಿಂದ ಓಡಿಹೋದರು. ಸೂರ್ಯ ಮುಳುಗಿದೊಡನೆಯೆ ಆತನ ಕಿರಣಗಳು ಮರೆಯಾಗುವಂತೆ ರಾಕ್ಷಸರೆಲ್ಲರೂ ರಣರಂಗದಿಂದ ಅಂತರ್ಹಿತರಾದರು.

ಪ್ರಬಲಶತ್ರು ಮಡಿದುಬಿದ್ದುದನ್ನು ಕಂಡು ವಾನರರೆಲ್ಲರೂ ವಿವಿಧ ರೀತಿಯಲ್ಲಿ ವಿನೋದಮಾಡುತ್ತಾ, ಕುಣಿಯುತ್ತಾ, ಕೂಗುತ್ತಾ ನಲಿದರು. ಗಗನದಲ್ಲಿದ್ದ ದೇವತೆಗಳು ಹೂಮಳೆಯನ್ನು ಸುರಿಸಿ, ಜಯಜಯಕಾರ ಮಾಡಿದರು. ದೇವದುಂದುಭಿಗಳು ಮೊಳಗಿದುವು. ಗಂಧರ್ವರು ಗಾಯನ ಮಾಡಿದರು. ದಿಕ್ಕುಗಳು ಪ್ರಸನ್ನವಾದುವು. ವಿಭೀಷಣನೂ ಹನುಮಂತನೆ ಮೊದಲಾದ ವಾನರ ಪ್ರಮುಖರೂ ಲಕ್ಷ್ಮಣಸ್ವಾಮಿಯನ್ನು ಬಾಯ್ತುಂಬ ಹೊಗಳಿ ಗೌರವಿಸಿದರು. ಆತನು ಆ ಪರಿವಾರದೊಡನೆ ಶ್ರೀರಾಮನ ಬಳಿಗೆ ಹಿಂದಿರುಗಿ ಆತನಿಗೆ ಮಣಿದು ಯುದ್ಧವಾರ್ತೆಯನ್ನೆಲ್ಲ ಅರುಹಿದನು. ವಿಜಯಶಾಲಿಯಾದ ತಮ್ಮನನ್ನು ಕಂಡು ಶ್ರೀರಾಮನು ಆನಂದಬಾಷ್ಪಗಳನ್ನು ಸುರಿಸುತ್ತಾ, ಆತನನ್ನು ಬಾಚಿ ತಬ್ಬಿಕೊಂಡು ತೊಡೆಯಮೇಲೆ ಕೂಡಿಸಿಕೊಂಡನು. ಅನಂತರ ಆತನು



ಧಗಧಗನೆ ಉರಿಯುತ್ತಾ ಕಿಡಿಗಾರುತ್ತಿದ್ದ ಐಂದ್ರಾಸ್ತ್ರವು ನಿವಾರಿಸಲಸಾಧ್ಯವಾಗಿ ಇಂದ್ರಜಿತ್ತುವನ್ನು ವಧಿಸಿತು.

ತಮ್ಮನ ಮೈಯನ್ನೆಲ್ಲಾ ಮೃದುವಾಗಿ ಸವರುತ್ತಾ, ಗದ್ಗದಕಂಠದಿಂದ "ವತ್ಸ, ಎಂತಹ ಮಹತ್ಕಾರ್ಯವನ್ನು ಸಾಧಿಸಿದೆ! ಇಂದ್ರಜಿತ್ತುವಿನ ವಧೆಯಿಂದ ನಮಗೆ ವಿಜಯ ಶತಸ್ಸಿದ್ಧವಾದಂತಾಯಿತು. ಇನ್ನು ರಾವಣಾಸುರನು ಸಂಹೃತನಾದಂತೆಯೆ. ಆತನ ಬಲತೋಳು ಆಗಲೆ ಕತ್ತರಿಸಿದಂತಾಗಿದೆ. ಇಂದ್ರಜಿತ್ತು ವಧೆಯಿಂದ ಈಗ ನೀನು ನನಗೆ ಸೀತೆಯನ್ನು ಸಂಪಾದಿಸಿಕೊಟ್ಟಂತಾಯಿತು" ಎಂದನು.

---

## ೨೦

# ರಾವಣೇಶ್ವರನ ಪುತ್ರಶೋಕ

ಲಂಕೇಶ್ವರನಾದ ದಶಕಂಠನು ತನ್ನ ಮಗನ ಮರಣವಾರ್ತೆಯನ್ನು ಕೇಳಿ, ತಳ ಕಾಣದ ದುಃಖದಲ್ಲಿ ಮುಳುಗಿ ಮೂರ್ಛಿತನಾದನು. ಕ್ಷಣಕಾಲದ ಮೇಲೆ ಆತನು ಎಚ್ಚತ್ತು ಕಲ್ಲುಮರಗಳು ಕೂಡ ಕರಗಿಹೋಗುವಂತೆ ದೈನ್ಯದಿಂದ ಗೋಳಿಟ್ಟನು: "ಅಯ್ಯೋ, ಮಗು! ಇಂದ್ರಜಿತ್ತು, ಮಹೇಂದ್ರನನ್ನೂ ಗೆದ್ದು ಜಗದ್ವಿಖ್ಯಾತನೆಂಬ ಕೀರ್ತಿಗೆ ಭಾಜನನಾದ ನೀನು ಆ ಪಾಪಿ ಲಕ್ಷ್ಮಣನಿಂದ ಮೃತನಾದೆಯಾ? ಯಮನನ್ನು ಕೂಡ ವಧಿಸಬಲ್ಲ ನಿನ್ನ ಬಾಣಗಳು ಮಾನವಮಾತ್ರನಲ್ಲಿ ವ್ಯರ್ಥವಾಗಿ ಹೋದುವೆ? ನೀನಿಲ್ಲದ ಮೇಲೆ ನನಗೆ ಈ ಬಾಳು ಹಾಳು ಹಾಳು. ನಾನಿನ್ನು ಜೀವಿಸಿರಲಾರೆ. ನೀನೀಗ ರಣಾಂಗಣದಲ್ಲಿ ಮಡಿದು ವೀರಸ್ವರ್ಗಕ್ಕೆ ಹೋಗುತ್ತಿರುವೆ. ನೀನಿಲ್ಲದ ಈ ನರಕದಲ್ಲಿ ನಾನು ಹೇಗೆ ಜೀವಿಸಲಿ? ಗತಾಸುವಾದೆಯೆಂಬುದನ್ನು ಕೇಳಿ ನನ್ನ ಶತ್ರುಗಳೆಲ್ಲರೂ ನನ್ನನ್ನು ಇನ್ನು ಧಿಕ್ಕರಿಸುವರು; ಅವರ ಹಾಸ್ಯ ಪರಿಹಾಸ್ಯಗಳಿಗೆ ಒಳಗಾಗಿ ನಾನು ಜೀವಿಸಿರಬೇಕೆ? ನೀನೊಬ್ಬನು ಇಲ್ಲದುದರಿಂದ ಈ ಲೋಕವೆಲ್ಲವೂ ನನಗೆ ಕತ್ತಲೆಗವಿದಿದೆ; ಜಗತ್ತೆಲ್ಲವೂ ಶೂನ್ಯವಾಗಿದೆ. ನಿನ್ನನ್ನು ಹೆತ್ತ ತಾಯಿಯನ್ನೂ ನನ್ನನ್ನೂ ಅನಾಥರನ್ನಾಗಿ ಮಾಡಿ ನೀನು ಹೇಗೆ ಹೊರಟುಹೋದೆ? ಕಂದಾ, ನನ್ನ ಹೊಟ್ಟೆ ಉರಿದುಹೋಗುತ್ತಿದೆ. ನಾನು ಮೃತಿಹೊಂದಿದ ಮೇಲೆ ನಿನ್ನಿಂದ ಪಿತೃಕಾರ್ಯಗಳನ್ನು ಪಡೆಯುವೆನೆಂದಿದ್ದೆ. ಈಗ ಇದೇನಾಯಿತು? ನಾನೇ ನಿನ್ನ ಪ್ರೇತಕಾರ್ಯಗಳನ್ನು ನಡೆಸಬೇಕಾಯಿತೆ! ಮಗು, ಇಂದ್ರಜಿತ್ತು ಇನ್ನಾರನ್ನು ಆ ಹೆಸರಿನಿಂದ ಕರೆಯಲಿ? ರಾಮಲಕ್ಷ್ಮಣರೂ ಸುಗ್ರೀವನೂ ಬದುಕಿರುವಾಗಲೆ ನೀನು ಮಡಿದು ಹೋದೆಯಾ?"

ರಾಕ್ಷಸೇಶ್ವರನ ಹೃದಯವೇದನೆ ಹಲುಬಿದಷ್ಟೂ ಹೆಚ್ಚಾಯಿತು. ಅದು ಹೆಚ್ಚಿದಷ್ಟೂ ಆತನ ರೋಷವು ಉಲ್ಬಣಗೊಂಡಿತು. ಲಲಾಟದಲ್ಲಿ ಹುಬ್ಬು ಗಂಟಿಕ್ಕಿದುವು. ಮೂಗುಬಾಯಿಗಳಿಂದ ನಿಶ್ವಾಸದೊಡನೆ ಬೆಂಕಿಯ ಜ್ವಾಲೆ ಹೊರಹೊರಟಿತು. ಕಿಡಿಗಾರುವ ಕಣ್ಣುಗಳಿಂದ ಆತನು ಒಮ್ಮೆ ಸುತ್ತಲೂ ನೋಡಿದನು. ಸಹಜ ಭಯಂಕರವಾದ ಆತನ ಆಕಾರ ಪ್ರಳಯಕಾಲದ ರುದ್ರನಂತೆ ಮತ್ತಷ್ಟು ಭಯಂಕರಾಕಾರವನ್ನು ತಾಳಿತು. ಪ್ರಜ್ವಲಿಸುವ ದೀಪದಿಂದ ತೈಲಬಿಂದುಗಳು ತೊಟ್ಟಿಡುವಂತೆ ಆತನ ಕಣ್ಣುಗಳಿಂದ ಉರಿಗಂಬನಿ ಉದುರಿದವು. ಘರಟ್ಟ ಯಂತ್ರದಂತೆ ಆತನ ಹಲ್ಲುಗಳು ಕಟಕಟ ಶಬ್ದ ಮಾಡಿದುವು. ಆತನ ಆ ಕ್ರೋಧಮೂರ್ತಿಯನ್ನು ಕಂಡು ಪರಿಚರರೆಲ್ಲರೂ ತತ್ತರಿಸುತ್ತಾ ದೂರ ಸರಿದರು. ಪ್ರಳಯಕಾಲದ

ಸಿಡಿಲಿನ ಧ್ವನಿಯಿಂದ ಆ ರಾಕ್ಷಸರಾಜನು ತನ್ನವರಿಗೆ ಕೂಗಿ ಹೇಳಿದನು—"ಎಲೈ ರಾಕ್ಷಸರೆ, ದಿವ್ಯಸಹಸ್ರ ವರ್ಷಗಳ ಕಾಲ ತಪಸ್ಸನ್ನಾಚರಿಸಿ ಬ್ರಹ್ಮನಿಂದ ನಾನು ಪಡೆದು ಕೊಂಡಿರುವ ಅಭೇದ್ಯವಾದ ಕವಚವನ್ನೂ ಧನುಸ್ಸನ್ನೂ ಯುದ್ಧಕ್ಕೆ ಸಿದ್ಧಪಡಿಸಿರಿ. ಈ ಕ್ಷಣವಲ್ಲಿಯೆ ಆ ರಾಮಲಕ್ಷ್ಮಣರನ್ನು ಸಂಹರಿಸಲು ನಾನು ರಣರಂಗಕ್ಕೆ ತೆರಳುತ್ತೇನೆ.

ಯುದ್ಧರಂಗಕ್ಕೆ ಹೊರಡಬೇಕೆಂದಿದ್ದ ರಾವಣನು ತನ್ನ ಮನಸ್ಸನ್ನು ಬದಲಾಯಿಸಿದನು. ಎಲ್ಲ ಅನರ್ಥಗಳಿಗೂ ಮೂಲ ಕಾರಣ ಆ ಜಾನಕಿ; ಆಕೆಯನ್ನು ಮೊದಲು ಸಂಹರಿಸಿಬಿಡಬೇಕೆನ್ನಿಸಿತು, ಆತನಿಗೆ. ಆದ್ದರಿಂದ ತನ್ನ ಹಿಂಬಾಲಕರನ್ನು ಕುರಿತು "ಎಲೈ ರಾಕ್ಷಸರೆ, ನನ್ನ ಮಗನಾದ ಇಂದ್ರಜಿತ್ತು ತನ್ನ ಮಾಯೆಯಿಂದ ಕಲ್ಪಿಸಿದ ಸೀತೆಯೆಂಬ ಒಂದು ಪದಾರ್ಥವನ್ನು ಯುದ್ಧಭೂಮಿಯಲ್ಲಿ ವಧಿಸಿದನು; ಅಷ್ಟರಿಂದಲೆ ಆತನಿಗೆ ತೃಪ್ತಿಯಾಯಿತು. ನಾನೀಗ ಯಥಾರ್ಥವಾದ ಸೀತೆಯನ್ನು ಸಂಹರಿಸಿ ಸಂತುಷ್ಟನಾಗುತ್ತೇನೆ. ತನ್ನ ಪ್ರಿಯ ಪತ್ನಿಯ ಮರಣದಿಂದ ರಾಮನಿಗೆ ಅಸಹ್ಯವೇದನೆಯನ್ನು ಕಲ್ಪಿಸಿ, ಅನಂತರ ಅವನನ್ನು ಸಂಹರಿಸುತ್ತೇನೆ" ಎಂದು ಹೇಳಿ ಒರೆಯುರ್ಚಿದ ಖಡ್ಗದೊಡನೆ ಅಶೋಕವನಕ್ಕೆ ಧಾವಿಸಿದನು. ಆತನ ಮಂತ್ರಿಗಳೂ ಹಿಂದೆಯೆ ಓಡಿದರು. ಅವರೆಷ್ಟು ಸಮಾಧಾನಮಾಡಲು ಪ್ರಯತ್ನಿಸಿದರೂ ಕ್ರೋಧಾಂಧನಾಗಿದ್ದ ಆತನಿಗೆ ಅವರ ಮಾತು ಹಿಡಿಸಲಿಲ್ಲ.

ಖಡ್ಗಧಾರಿಯಾಗಿ ತನ್ನ ಬಳಿಗೆ ಧಾವಿಸುತ್ತಿರುವ ರಾವಣನನ್ನು ಕಂಡು ಸೀತಾದೇವಿ ಭಯದಿಂದ ನಡುಗಿದಳು. ಆಕೆಯ ಮನಸ್ಸಿನಲ್ಲಿ ಪರಿಪರಿಯ ವಿಚಾರತರಂಗಗಳೆದ್ದುವು. "ಈ ದುರಾತ್ಮನು ರಾಮಲಕ್ಷ್ಮಣರನ್ನು ವಧಿಸಿ, ಆ ಬಳಿಕ ತನ್ನ ಬಳಿಗೆ ಬರುತ್ತಿರುವನೊ ಏನೊ? ಹಲವು ಬಾರಿ ತನ್ನ ಭಾರ್ಯೆಯಾಗುವಂತೆ ನನ್ನನ್ನು ಪೀಡಿಸಿದ್ದನು. ಆ ಸಮಯಗಳಲ್ಲೆಲ್ಲ ನಾನು ಅವನನ್ನು ತಿರಸ್ಕರಿಸಿದ್ದೆನು. ಈಗ ಇನ್ನೇನು ವಿಪತ್ತು ಕಾದಿದೆಯೊ! ರಾಮಲಕ್ಷ್ಮಣರನ್ನು ಜಯಿಸಲಾರದೆ ನನ್ನನ್ನು ಕೊಂದು ಅವರ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಹೊರಟಿರುವನೊ ಏನೋ! ನಾನೆಂತಹ ಅವಿವೇಕಿ? ಹನುಮಂತನು ಹಿಂದೆ ಇಲ್ಲಿಗೆ ಬಂದಿದ್ದಾಗ, ಆತನ ಬುದ್ಧಿವಾದದಂತೆ ಅವನ ಹೆಗಲ ಮೇಲೆ ಕುಳಿತು ಶ್ರೀರಾಮನ ಸನ್ನಿಧಿಯನ್ನು ಸೇರಿದ್ದರೆ ಈ ಅನರ್ಥಗಳೆಲ್ಲ ತಪ್ಪುತ್ತಿದ್ದುವಲ್ಲವೆ? ಈಗ ನಾನೇನು ಮಾಡಲಿ?" ಎಂದು ಆಕೆ ಅವಿರಳವಾಗಿ ಕಣ್ಣೀರುಗರೆಯುತ್ತಾ ಕುಳಿತಳು. ಆಕೆಯ ಕರುಣಾಜನಕ ಸ್ಥಿತಿಯನ್ನು ಕಂಡು ರಾವಣನ ಮಂತ್ರಿಯಾದ ಸುಪಾರ್ಶ್ವನಿಗೆ ಕರುಳು ಕರಗಿತು. ಆತನು ತನ್ನ ಸ್ವಾಮಿಯನ್ನು ಕುರಿತು "ಪ್ರಭು, ನೀನು ಕುಬೇರನ ತಮ್ಮ; ಧರ್ಮಾತ್ಮ, ಕೀರ್ತಿಶಾಲಿ; ನೀನು ಸ್ತ್ರೀಹತ್ಯೆಗೆ ಕೈಯಿಡುವುದು ಸರ್ವಥಾ ಅಯೋಗ್ಯ. ನಿನ್ನ ಕ್ರೋಧೋದ್ವೇಗವನ್ನು ನಿನ್ನ ಶತ್ರುವಾದ ರಾಮನ ಕಡೆ ತಿರುಗಿಸು. ಈ ದಿನ ಕೃಷ್ಣಪಕ್ಷದ ಚತುರ್ದಶಿ. ಈ ದಿನ ಯುದ್ಧವನ್ನು ಆರಂಭಿಸು. ನಾಳೆ ಅಮಾವಾಸ್ಯೆ. ನಾಳೆಯೆ ನಿನಗೆ ವಿಜಯ ದೊರೆಯುತ್ತದೆ.

ನಿನ್ನಂತಹ ತ್ರಿಭುವನ ಪರಾಕ್ರಮಿ ರಾಮನಂತಹ ಮಾನವನನ್ನು ಗೆಲ್ಲುವುದೂ ಕೊಲ್ಲುವುದೂ ಕಷ್ಟವಲ್ಲ; ಅದಾದಮೇಲೆ ಸೀತೆಯನ್ನು ಹೊಂದಿಯೆ ಹೊಂದುವೆ" ಎಂದನು.

ರಾವಣೇಶ್ವರನಿಗೆ ಮಂತ್ರಿಯ ಮಾತು ಸಂದರ್ಭೋಚಿತವಾದುದೆಂದು ತೋರಿತು. ಆತನು ಬಂದ ದಾರಿಯಿಂದಲೆ ಹಿಂದಿರುಗಿದನು. ಅರಮನೆಯನ್ನು ಸೇರುತ್ತಲೇ ಆತನು ತನ್ನ ಉಳಿದ ರಾಕ್ಷಸವೀರರೆಲ್ಲರನ್ನೂ ರಾಮಲಕ್ಷ್ಮಣರ ಮೇಲೆ ಯುದ್ಧಕ್ಕೆ ಹೊರಡುವಂತೆ ಪ್ರೇರೇಪಿಸಿದನು. ಒಂದು ವೇಳೆ ಅವರು ರಾಮನನ್ನು ಸಂಹರಿಸದಿದ್ದರೂ ಆತನನ್ನು ಚೆನ್ನಾಗಿ ಘಾತಿಸಬೇಕೆಂದೂ ತಾನು ಮರು ದಿನ ರಾಮನನ್ನು ವಧಿಸುವುದಾಗಿಯೂ ಅವರಿಗೆ ಭರವಸೆಯಿತ್ತನು. ಲಂಕೆಯ ರಕ್ಷಣೆಗಾಗಿ ನಿಯಮಿತವಾಗಿದ್ದ ಮೂಲ ಬಲವೆಲ್ಲವೂ ಆತನ ಅಪ್ಪಣೆಯಂತೆ ಯುದ್ಧರಂಗಕ್ಕೆ ತೆರಳಿ, ಜೀವದ ಹಂಗುದೊರೆದು ಕಾದುವುದಕ್ಕೆ ಮೊದಲು ಮಾಡಿತು. ತಮ್ಮ ಸ್ವಾಮಿಯ ಮನೋವ್ಯಥೆಯನ್ನು ಶಮನ ಮಾಡುವ ಮಹೋದ್ದೇಶದಿಂದ ಹೊಡೆದಾಡುತ್ತಿದ್ದ ಅವರ ಪೆಟ್ಟಿನಿಂದ ವಾನರ ಸೈನ್ಯವೆಲ್ಲವೂ ತಲ್ಲಣಿಸಿಹೋಯಿತು. ವೀರಾವೇಶದಿಂದ ಕಾದುತ್ತಿದ್ದ ಎರಡು ಕಡೆಯವರಲ್ಲಿಯೂ ಅಸಂಖ್ಯಾತರಾದ ಜನ ಸತ್ತು ರಕ್ತ ಕೋಡಿಗಟ್ಟಿ ಹರಿಯಿತು. ಹಣ್ಣು ಬಿಟ್ಟ ಮರಗಳಿಗೆ ಗುಂಪುಗುಂಪಾಗಿ ಹಾರಿ ಹೋಗುವ ಹಕ್ಕಿಗಳಂತೆ ಹಲವು ವಾನರರು ಒಟ್ಟಾಗಿ ಒಬ್ಬ ರಾಕ್ಷಸನನ್ನು ಮುತ್ತಿಕೊಂಡು, ತಮ್ಮ ಮೊನಚಾದ ಉಗುರುಗಳಿಂದಲೂ ಹಲ್ಲುಗಳಿಂದಲೂ ಅವನ ಕಿವಿ ಮೂಗುಗಳನ್ನೂ ಹಣೆಯನ್ನೂ ಕಚ್ಚಿ ಸಿಗಿದುಹಾಕುತ್ತಿದ್ದರು. ಆದರೂ ರಾಕ್ಷಸರ ಏಟನ್ನು ತಾಳುವುದು ವಾನರಿಗೆ ಸಾಧ್ಯವಾಗಲಿಲ್ಲ. ಅವರೆಲ್ಲರೂ ಓಡಿ ಹೋಗಿ ಶ್ರೀರಾಮನಲ್ಲಿ ದೂರಿಕೊಂಡರು. ಆದ್ದರಿಂದ ಆತನೆ ಸ್ವತಃ ಧನುರ್ಧಾರಿಯಾಗಿ ಆ ರಾವಣನ ಮೂಲ ಬಲವನ್ನು ಇದಿರಿಸಬೇಕಾಯಿತು. ಆತನು ಬಾಣಗಳ ಮಳೆಯನ್ನು ಸುರಿಸುವುದಕ್ಕೆ ಆರಂಭಿಸಿದೊಡನೆಯೆ ರಾಕ್ಷಸಬಲದ ವಿನಾಶ ಆರಂಭವಾಯಿತು. ಆ ದಿನ ಆತನು ಸಂಹರಿಸಿದ ರಾಕ್ಷದ ಸೈನ್ಯದ ಸಂಖ್ಯೆ ನೂರೆಪ್ಪತ್ತಾರು ಕೋಟಿಗೂ ಮೀರಿದ್ದಿತೆಂದ ಮೇಲೆ ಆತನ ರಣಕೌಶಲವನ್ನು ವರ್ಣಿಸುವುದೆಂತು? ಅಳಿದುಳಿದ ಅಲ್ಪಸ್ವಲ್ಪ ರಾಕ್ಷಸರು ಭಯಗ್ರಸ್ಥರಾಗಿ ಲಂಕೆಗೆ ಓಡಿಹೋದರು. ರಾವಣನ ಪುತ್ರವ್ಯಥೆ ಶಮನವಾಗುವುದಕ್ಕೆ ಬದಲಾಗಿ ಅದಿನ್ನೂ ಉಲ್ಬಣಗೊಂಡಿತು.

---

## ೨೧

# ರಣರಂಗಕ್ಕೆ ರಾಕ್ಷಸೇಶ್ವರ

ರಾವಣೇಶ್ವರನ ಮೂಲಬಲವೆಲ್ಲವೂ ಶ್ರೀರಾಮನ ಬಾಣದಿಂದ ಹತವಾದುದನ್ನು ಕೇಳಿ ಲಂಕಾನಿವಾಸಿಗಳೆಲ್ಲರೂ ಅತ್ಯಂತ ಶೋಕಸಂತಪ್ತರಾದರು. ಊರಲ್ಲಿ ಯಾವ ಮನೆಯಲ್ಲಿ ನೋಡಿದರೂ ಗಂಡನನ್ನು ಕಳೆದುಕೊಂಡವರೂ ಇತರ ಬಂಧುಬಾಂಧವರನ್ನು, ಅಗಲಿದವರೂ ರೋಡಿಸುವ ಧ್ವನಿ ಕೇಳಿ ಬರುತ್ತಿತ್ತು. ರಾಕ್ಷಸಾಂಗನೆಯರು ಅಲ್ಲಲ್ಲಿ ಗುಂಪು ಕೂಡಿ ಕಣ್ಣಿನಲ್ಲಿ ನೀರುಸುರಿಸುತ್ತಾ "ಹಾಳು ಈ ಶೂರ್ಪನಖಿ ಮನ್ಮಥಸದೃಶನಾದ ಆ ಶ್ರೀರಾಮನನ್ನು ಏಕಾದರೂ ಕಾಮಿಸಿದಳೋ! ಎಂತಹ ವಿಷಗಳಿಗೆಯಲ್ಲಿ ಈ ಪಾಪಿಯ ಕಣ್ಣಿಗೆ ಆ ಸುಕುಮಾರ ಕಾಣಿಸಿದನೊ! ಮಹಾ ನೀಚಳಾದ ಅವಳೊಬ್ಬಳ ದೆಸೆಯಿಂದ ಈ ರಾಕ್ಷಸ ವಂಶವೆಲ್ಲವೂ ನಿರ್ಮೂಲವಾಗುವಂತಾಯಿತು. ಆ ದುರ್ಮಾರ್ಗಳ ಮಾತುಗಳನ್ನು ಕೇಳಿಯೇ ನಮ್ಮ ರಾಕ್ಷಸರಾಜನು ಶ್ರೀರಾಮ ಪತ್ನಿಯನ್ನು ಕದ್ದು ತಂದನು. ಆಕೆಯೊಡನೆ ಲಂಕೆಯ ಸರ್ವನಾಶವನ್ನೂ ಆತನು ಕರೆತಂದನು. ಖರದೂಷಣರನ್ನೂ ಕಬಂಧನನ್ನೂ ವಾಲಿಯನ್ನೂ ಸಂಹರಿಸಿದಾಗಲೆ ಆ ಶ್ರೀರಾಮನ ಪರಾಕ್ರಮವನ್ನು ಅರಿತುಕೊಳ್ಳಬಾರದಾಗಿದ್ದಿತೆ? ಹೋಗಲಿ, ವಿಭೀಷಣನು ಬುದ್ಧಿ ಹೇಳಿದ ಮೇಲಾದರೂ ಲಂಕೇಶ್ವರನಿಗೆ ಸದ್ಬುದ್ಧಿ ಹುಟ್ಟಬಾರದಾಗಿತ್ತೆ? ಈಗ ಲಂಕೆಯೆಲ್ಲವೂ ಶ್ಮಶಾನಸದೃಶವಾಗುತ್ತಿದೆಯಲ್ಲ! ಎಲ್ಲಿ ನೋಡಿದರೂ 'ನನ್ನ ಮಗ ಮಡಿದ', 'ನಮ್ಮ ಅಣ್ಣ ಸತ್ತ' 'ಅಯ್ಯೋ ನನ್ನ ಗಂಡ ಗತಿಸಿದ'—ಈ ಮಾತುಗಳೇ ಕೇಳಿ ಬರುತ್ತಿವೆಯಲ್ಲಾ! ಅಳಿದುಳಿದವರಾದರೂ ಬದುಕಲು ಅವಕಾಶವಿದೆಯೇ? ಇಲ್ಲ, ಇಲ್ಲ. ರಾಕ್ಷಸಘಾತುಕೆಯಾದ ಈ ಸೀತೆ ರಾವಣನನ್ನೂ ಉಳಿದವರನ್ನೂ ನುಂಗುವ ಮಹಾಮಾರಿಯಾಗಿದ್ದಾಳೆ. ರಾಮಬಾಣದಿಂದ ರಾಕ್ಷಸರನ್ನು ರಕ್ಷಿಸುವವರು ಈ ಮೂರು ಲೋಕದಲ್ಲಿಯೂ ಯಾರನ್ನೂ ಕಾಣೆವಲ್ಲಾ!" ಎಂದು ಹಂಬಲಿಸುತ್ತಾ ಗಟ್ಟಿಯಾಗಿ ಗೋಳಿಡುತ್ತಿದ್ದರು.

ಮನೆಮನೆಯಿಂದಲೂ ಬರುತ್ತಿದ್ದ ಈ ವಿಲಾಪ ಧ್ವನಿ ರಾವಣನಿಗೆ ಕೇಳಿಸಿತು. ಆತನು ದೀರ್ಘವಾದ ಒಂದು ನಿಟ್ಟುಸಿರಿಟ್ಟು ಮಹೋದರ, ಮಹಾಪಾರ್ಶ್ವ, ವಿರೂಪಾಕ್ಷ ಎಂಬ ಮೂವರು ಸೇನಾಪತಿಗಳನ್ನು ಕರೆಸಿ ಅವರಿಗೆ "ಎಲೈ ವೀರರೆ, ನಾನೀಗಲೆ ರಾಮಲಕ್ಷ್ಮಣರನ್ನು ಧ್ವಂಸಮಾಡುವುದಕ್ಕಾಗಿ ರಣರಂಗಕ್ಕೆ ತೆರಳುವೆನು. ಇದುವರೆಗೆ ಯುದ್ಧದಲ್ಲಿ ಮರಣಹೊಂದಿದ ಖರ, ಪ್ರಹಸ್ತ, ಕುಂಭಕರ್ಣ, ಇಂದ್ರಜಿತ್ತು ಮೊದಲಾದವರ ಆತ್ಮಗಳೆಲ್ಲವೂ ಸಂತೃಪ್ತಿಗೊಳ್ಳುವಂತೆ ಆ ಇಬ್ಬರನ್ನೂ ಯಮಾಲಯಕ್ಕೆ ಅಟ್ಟುವೆನು. ವಾನರ ವಂಶವೆಂಬುದೆ ಇಂದು ನನ್ನ ಬಾಣವರ್ಷದಲ್ಲಿ ಮುಳುಗಿ ಹೆಸರಿಲ್ಲದಂತಾಗಿ ಹೋಗುವುವು. ಊರಿನಲ್ಲಿ ಯಾರು ಯಾರು ತಮ್ಮ ಬಂಧುಬಾಂಧವರ ಮರಣಕ್ಕಾಗಿ ಗೋಳಿಡು

ತ್ತಿರುವರೊ ಅವರೆಲ್ಲರ ಕಣ್ಣೀರು ಆರುವಂತೆ ಶತ್ರುಗಳನ್ನು ಮರ್ದಿಸುತ್ತೇನೆ. ಒಡನೆಯೆ ನನ್ನ ರಥವೂ ಧನುಸ್ಸೂ ಸಿದ್ಧವಾಗಲಿ. ಅಳಿದುಳಿದ ರಾಕ್ಷಸವೀರರು ನನ್ನನ್ನು ಹಿಂಬಾಲಿಸಲಿ" ಎಂದು ಆಜ್ಞಾಪಿಸಿದನು.

ರಾಜನ ಅಪ್ಪಣೆಯಂತೆ ಎಂಟು ಕುದುರೆಗಳನ್ನು ಹೂಡಿದ್ದ ಸುಸಜ್ಜಿತ ರಥವು ಆತನ ವಿಜಯಪ್ರಯಾಣಕ್ಕಾಗಿ ಸಿದ್ಧವಾಯಿತು. ರಾವಣೇಶ್ವರನು ಯುದ್ಧಕ್ಕೆ ತಕ್ಕ ಕವಚ ಆಯುಧಗಳನ್ನು ಧರಿಸಿ ರಥವೇರಿದನು. ಕಾಲ್ಕೆರೆಯುತ್ತಾ ನಿಂತಿದ್ದ ಕುದುರೆಗಳು ಸಾರಥಿ ಕಡಿವಾಣವನ್ನು ಸಡಿಲ ಬಿಡುತ್ತಲೆ ವೇಗವಾಗಿ ಹೊರಟುವು. ರಾಜನ ರಥದ ಹಿಂದೆ ಮೂರು ಸೇನಾಪತಿಗಳ ರಥಗಳೂ ವಾಯುವೇಗದಿಂದ ಹೊರಟುವು. ವಿವಿಧಾ ಯುಧಗಳನ್ನು ಧರಿಸಿ ಭಯಂಕರಾಕಾರರಾಗಿದ್ದ ರಾಕ್ಷಸ ಯೋಧರು ಭೂಮಿ ಬಿರಿಯು ವಂತೆ ಸಿಂಹನಾದ ಮಾಡುತ್ತಾ ಆ ರಥಗಳನ್ನು ಹಿಂಬಾಲಿಸಿದರು. ರಾಜನು ಲಂಕೆಯ ರಾಜಬೀದಿಗಳಲ್ಲಿ ಹೊರಟು ಹೆಬ್ಬಾಗಿಲನ್ನು ಹಾಯುತ್ತಿದ್ದಂತೆಯೆ ಸೂರ್ಯನು ಕಾಂತಿಗುಂದಿದನು. ದಿಕ್ಕುಗಳೆಲ್ಲ ಕತ್ತಲಿಂದ ತುಂಬಿಹೋದುವು ; ಹಕ್ಕಿಗಳೆಲ್ಲವೂ ಕರ್ಣ ಕಠೋರವಾಗಿ ಕಿರಿಚಿಕೊಂಡುವು ; ರಕ್ತದ ಮಳೆ ಸುರಿಯಿತು ; ಸಮಭೂಮಿಯಲ್ಲಿಯೆ ಹೋಗುತ್ತಿದ್ದರೂ ಕುದುರೆಗಳು ಮುಗ್ಗರಿಸಿದುವು. ರಥಾಗ್ರದ ಧ್ವಜವನ್ನು ರಣಹದ್ದು ಹೊಕ್ಕಿತು ; ನರಿಗಳು ಅಮಂಗಳವಾಗಿ ಕೂಗಿಕೊಂಡುವು. ರಾವಣೇಶ್ವರನ ಎಡಗಣ್ಣೂ ಎಡಭುಜವೂ ಅದುರಿದುವು. ಈ ಅಪಶಕುನಗಳೊಂದನ್ನೂ ಲಕ್ಷಿಸದೆ ಆ ಲಂಕೇಶ್ವರನು ಪ್ರಯಾಣವನ್ನು ಮುಂದುವರಿಸಿ ರಣರಂಗವನ್ನು ಸೇರಿದನು.

ರಾಕ್ಷಸರ ರಣಘೋಷವನ್ನು ಕೇಳುತ್ತಲೆ ವಾನರರು ಯುದ್ಧೋತ್ಸಾಹದಿಂದ ಓಡಿಬಂದರು. ಇಬ್ಬಣದವರಿಗೂ ಕೈಗೆ ಕೈಹತ್ತಿ ಯುದ್ಧ ಮೊದಲಾಯಿತು. ಸ್ವತಃ ದಶಗ್ರೀವನೆ ರಣರಂಗದಲ್ಲಿದ್ದುದರಿಂದ ರಾಕ್ಷಸರು ಅತೀವ ಉತ್ಸಾಹದಿಂದ ಯುದ್ಧ ಮಾಡುತ್ತಿದ್ದರು. ರಾಕ್ಷಸೇಶ್ವರನ ಬಾಣಗಳಂತೂ ವಾನರ ಸೇನೆಯಲ್ಲಿ ಭಯಂಕರವಾದ ಕೋಲಾಹಲವನ್ನು ಹುಟ್ಟಿಸಿದುವು. ಎದೆ ಭೇದಿಸಿ ನೆಲಕ್ಕೆ ಬಿದ್ದವರಾರೊ ! ತಲೆ ಕತ್ತರಿಸಿ ಸತ್ತು ಹೋದವರೆಷ್ಟೊ ! ಕೆಲವರಿಗೆ ಕಿವಿ ಹರಿದುಹೋದುವು ! ಕೆಲವರಿಗೆ ಪಕ್ಕೆ ಸೀಳಿದುವು ! ಕೆಲವರಿಗೆ ಕಣ್ಣುಗಳೆ ಕಳಚಿಹೋದುವು ! ವಾನರರು ಆತನ ಉಪಟಳವನ್ನು ಸಹಿಸಲಾರದೆ ಕಾಳ್ಕಿಚ್ಚಿಗೆ ಸಿಕ್ಕಿದ ಕಾಡಾನೆಗಳಂತೆ ದಿಕ್ಕೆಟ್ಟು ಕೂಗಿಕೊಳ್ಳುತ್ತಾ ಓಡಿ ಹೋದರು. ಇದನ್ನು ಕಂಡು ಸುಗ್ರೀವ ಮಹಾರಾಜನು ಓಡುತ್ತಿರುವ ವಾನರರಿಗೆಲ್ಲಾ ಧೈರ್ಯ ಹೇಳುತ್ತಾ ಹೆಮ್ಮರವನ್ನು ಕೈಲಿ ಹಿಡಿದು ರಾವಣನಿಗೆ ಇದಿರಾದನು.

ತನ್ನ ರಾಜನ ಮೇಲೆ ಸಾಗಿಬರುತ್ತಿರುವ ವಾನರ ವೀರನನ್ನು ಕಂಡು ರಾಕ್ಷಸವೀರ ನಾದ ವಿರೂಪಾಕ್ಷನು ತನ್ನ ಹೆಸರನ್ನು ಗಟ್ಟಿಯಾಗಿ ಕೂಗಿ ಹೇಳುತ್ತಾ ಆನೆಯ ಮೇಲೇರಿ ಅವನಿಗೆ ಇದಿರಾದನು. ವಾನರವೀರನು ಎತ್ತಿ ಹಿಡಿದಿದ್ದ ಮರವನ್ನು ಇದಿರಿಗೆ ಬಂದ ರಾಕ್ಷಸರ ಮೇಲೆಯೆ ಪ್ರಯೋಗಿಸಿದನು. ಆದರೆ ಆ ರಾಕ್ಷಸವೀರನು ಅದನ್ನು ತನ್ನ ಬಾಣದಿಂದ ಮಧ್ಯಮಾರ್ಗದಲ್ಲಿಯೆ ಭಂಗಿಸಿ, ಮತ್ತೊಂದು ನಿಶಿತವಾದ ಬಾಣದಿಂದ

ಸುಗ್ರೀವನನ್ನು ಬಲವಾಗಿ ಗಾಯಗೊಳಿಸಿದನು. ಇದರಿಂದ ಕೆರಳಿದ ವಾನರವೀರನು ದೊಡ್ಡದೊಂದು ಮರದ ಬುಡದಿಂದ ರಾಕ್ಷಸನು ಏರಿದ್ದ ಆನೆಯ ಕುಂಭ ಸ್ಥಳಕ್ಕೆ ಹೊಡೆದನು. ಆ ಪೆಟ್ಟಿಗೆ ಆ ಪ್ರಾಣಿ ಗಟ್ಟಿಯಾಗಿ ಘೀಳಿಡುತ್ತಾ ಕೆಳಕ್ಕೆ ಬಿದ್ದು ಸತ್ತಿತು. ಅದು ಕೆಳಕ್ಕುರುಳುವುದರೊಳಗಾಗಿ ವಿರೂಪಾಕ್ಷನು ನೆಲಕ್ಕೆ ಹಾರಿ ಖಡ್ಗದಿಂದ ಆ ವಾನರರಾಜನನ್ನು ಹೊಡೆದನು. ಕನಲಿ ಕೆಂಗೆಂಡವಾದ ಸುಗ್ರೀವನು ಮುಂದಕ್ಕೆ ನುಗ್ಗಿ ವಜ್ರಮುಷ್ಟಿಯಿಂದ ಎದುರಾಳಿಯ ಎದೆಗೆ ಗುದ್ದಿದನು. ಆದರೂ ಆ ರಾಕ್ಷಸನು ಅಚಲನಾಗಿ ನಿಂತು ಮತ್ತೊಮ್ಮೆ ಕತ್ತಿಯಿಂದ ಹೊಡೆಯಲು ವಾನರ ವೀರನ ದೇಹವು ರಕ್ತದಿಂದ ತೊಯ್ದು ಹೋಯಿತು. ಆತನು ತನ್ನ ಬಲವನ್ನೆಲ್ಲಾ ಬಿಟ್ಟು ರಾಕ್ಷಸನ ಹಣೆಗೆ ಗುದ್ದಿದನು. ಈ ಪೆಟ್ಟಿನಿಂದ ವಿರೂಪಾಕ್ಷನು ರಕ್ತವನ್ನು ಕಾರುತ್ತ ನೆಲಕ್ಕುರುಳಿ ಸತ್ತುಹೋದನು.

ವಿರೂಪಾಕ್ಷನು ಮಡಿದುದನ್ನು ಕಂಡು ರಾವಣೇಶ್ವರನು ಮನಸ್ಸಿನಲ್ಲೇ ಮಿಡುಕಿಕೊಳ್ಳುತ್ತಾ ಮಹೋದರನನ್ನು ಸುಗ್ರೀವನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಮಹಾರಾಜನಿಂದ ಆಜ್ಞಪ್ತನಾಗಿ ವಿಜೃಂಭಿಸುತ್ತಾ ಬರುತ್ತಿದ್ದ ಆತನ ಮೇಲೆ ಸುಗ್ರೀವನು ದೊಡ್ಡದೊಂದು ಬಂಡೆಯನ್ನು ಎತ್ತಿ ಎಸೆದನು. ಆದರೆ ಅದು ರಾಕ್ಷಸನ ಬಾಣಕ್ಕೆ ತುತ್ತಾಯಿತು. ವಾನರ ರಾಜನು ಸಾಲವೃಕ್ಷವೊಂದನ್ನು ಕಿತ್ತು ಅದನ್ನು ಎದುರಾಳಿಯ ಮೇಲೆ ಎಸೆದನು. ಅದಕ್ಕೂ ಅದೇ ಗತಿಯಾಯಿತು. ಆದರೆ ಈ ಅವಕಾಶದಲ್ಲಿ ರಾಕ್ಷಸನ ಪರಿಘ ಜಾರಿ ನೆಲದ ಮೇಲೆ ಬಿತ್ತು. ಸುಗ್ರೀವನು ಅದನ್ನು ತೆಗೆದುಕೊಂಡು ಮಹೋದರನ ರಥದ ಕುದುರೆಯನ್ನು ಚಚ್ಚಿಹಾಕಿದನು. ಇದರಿಂದ ಆ ರಾಕ್ಷಸವೀರನು ನೆಲಕ್ಕೆ ಹಾರಿ, ಕೆಳಗೆ ನಿಂತೇ ಯುದ್ಧಮಾಡಬೇಕಾಯಿತು. ಬಹಳ ಹೊತ್ತು ಇಬ್ಬರೂ ಸರಿಸಮವಾಗಿ ಹೋರಾಡಿದ ಮೇಲೆ ಸುಗ್ರೀವನು ಎದುರಾಳಿಯ ಕತ್ತಿಯನ್ನು ಕಿತ್ತುಕೊಂಡು ಅವನ ಶಿರಚ್ಛೇದನ ಮಾಡಿದನು.

ಇನ್ನು ರಾವಣನ ಸೇನಾಪತಿಗಳಲ್ಲಿ ಉಳಿದವನು ಮಹಾಪಾರ್ಶ್ವ. ಜಾಂಬವನೂ ಅಂಗದನೂ ಸೇರಿಕೊಂಡು ಆತನೊಡನೆ ಸ್ವಲ್ಪಹೊತ್ತು ಹೋರಾಡುತ್ತಿದ್ದ ಮೇಲೆ, ಅಂಗದಕುಮಾರನು ಆ ರಾಕ್ಷಸ ವೀರನನ್ನು ಸಂಹರಿಸಿದನು. ಇದನ್ನು ಕಂಡು ಕೆರಳಿದ ರಾವಣೇಶ್ವರನು ತನ್ನ ಸಾರಥಿಯನ್ನು ಕುರಿತು "ಎಲೈ ಸೂತನೆ, ಈಗಲೆ ರಥವನ್ನು ರಾಮನಿರುವೆಡೆಗೆ ಕೊಂಡೊಯ್ಯಿ!" ಎಂದನು. ಸಾರಥಿ ಅದೇ ರೀತಿ ರಥವನ್ನು ಶ್ರೀರಾಮಚಂದ್ರನ ಸಮೀಪಕ್ಕೆ ತಂದು ನಿಲ್ಲಿಸಿದನು.

---

೨೨

# ಲಕ್ಷ್ಮಣ ಸಂಜೀವನ

ಶ್ರೀರಾಮನನ್ನು ಕಾಣುತ್ತಿದ್ದಂತೆಯೆ ರಾವಣೇಶ್ವರನ ಕ್ರೋಧಾಗ್ನಿ ಹೊತ್ತಿ ಥಗ ಥಗ ಉರಿಯಿತು. ಆತನು ರಥಾರೋಹಣ ಮಾಡಿ ಬಂದ ರಭಸಕ್ಕೆ ಭೂಮಿ ಜಗ್ಗನೆ ನಡುಗಿತ್ತು. ಈಗ ತನ್ನ ಗರ್ಜನೆಯಿಂದ ದಶದಿಕ್ಕುಗಳನ್ನೂ ಮೊಳಗಿಸುತ್ತಾ ಆತನು ಶ್ರೀರಾಮನ ಸುತ್ತಲಿದ್ದ ಕಪಿಗಳನ್ನೆಲ್ಲಾ ಧ್ವಂಸಮಾಡತೊಡಗಿದನು. ಆತನ ಪೆಟ್ಟನ್ನು ತಾಳಲಾರದೆ ಪಲಾಯನ ಮಾಡುತ್ತಿದ್ದ ವಾನರ ವೀರರನ್ನೂ ತನ್ನನ್ನೆ ಲಕ್ಷ್ಯದಲ್ಲಿಟ್ಟು ಕೊಂಡು ಮುಂದುವರಿಯುತ್ತಿರುವರಾವಣನನ್ನೂ ಕಂಡು ಶ್ರೀರಾಮನು ಮಹೋತ್ಸಾಹ ದಿಂದ ತನ್ನ ದಿವ್ಯಧನುಸ್ಸನ್ನು ಒಮ್ಮೆ ಟಂಕಾರಮಾಡಿದನು. ಆ ಧ್ವನಿಗೆ ಭೂಮಿ ಅಂತ ರಿಕ್ಷಗಳು ಸ್ಪಂದಿಸಿದುವು. ಬಳಿಯಲ್ಲಿಯೆ ಇದ್ದ ಲಕ್ಷ್ಮಣದೇವನು ಅಣ್ಣನ ಉತ್ಸಾಹವನ್ನು ಕಂಡು, ತಾನೇ ಮೊದಲು ರಾವಣನೊಡನೆ ಯುದ್ಧಮಾಡಬೇಕೆಂಬ ಕುತೂಹಲದಿಂದ ಅಗ್ನಿಜ್ವಾಲೆಗೆ ಸಮಾನವಾದ ಅನೇಕ ಬಾಣಗಳನ್ನು ರಾವಣನ ಮೇಲೆ ಪ್ರಯೋಗಿಸಿದನು. ಆ ರಾಕ್ಷಸವೀರನು ಅವುಗಳನ್ನೆಲ್ಲಾ ಮಧ್ಯಮಾರ್ಗದಲ್ಲಿಯೆ ಕತ್ತರಿಸಿ, ಮತ್ತೆ ರಾಮನ ಕಡೆಗೆ ಮುಂದುವರಿದು, ಆತನ ಮೇಲೆ ಅಂಬುಗಳ ಮಳೆಯನ್ನು ಕರೆಯಲು ಆರಂಭಿಸಿ ದನು. ಶ್ರೀರಾಮನಾದರೊ ನಿರ್ಲಕ್ಷ್ಯಭಾವದಿಂದ ಬಾಣಪ್ರಯೋಗಮಾಡಿ ಅವುಗಳ ನ್ನೆಲ್ಲಾ ಮಧ್ಯಮಾರ್ಗದಲ್ಲಿಯೆ ಖಂಡಿಸಿದನು. ಬಹುದಿನಗಳ ಬಯಕೆ ಕೈಸಾರ್ದವರಂತೆ ಇಬ್ಬರೂ ಉತ್ಸಾಹಗೊಂಡು ಯುದ್ಧಮಾಡಲು ಆರಂಭಿಸಿದರು. ಒಬ್ಬರನ್ನೊಬ್ಬರು ಸಂಹರಿಸಬೇಕೆಂಬ ಆಕಾಂಕ್ಷೆಯಿಂದ ಇಬ್ಬರೂ ತುಂಬಿದವರು. ಇಬ್ಬರೂ ಶಸ್ತ್ರವಿದ್ಯಾ ವಿಶಾರದರು ; ಉತ್ತಮೋತ್ತಮವಾದ ಶಸ್ತ್ರಾಸ್ತ್ರಗಳನ್ನು ಧರಿಸಿರುವವರು.

ಬರಬರುತ್ತಾ ರಾಮರಾವಣರ ಯುದ್ಧ ಬಿಸಿಯೇರಿ ಬಿರುಸಾಗುತ್ತಾ ನಡೆಯಿತು. ಶ್ರೀರಾಮನು ಪ್ರಯೋಗಿಸಿದ ರೌದ್ರಾಸ್ತ್ರವನ್ನು ರಾವಣನು ತನ್ನ ಬಾಣದಿಂದ ಕತ್ತರಿಸಲು ಅದು ಐದು ಹೆಡೆಗಳ ಸರ್ಪದಂತೆ ಭೂಮಿಯನ್ನು ಭೇದಿಸಿಕೊಂಡು ಹೋಯಿತು. ಈಗ ರಾವಣನು ತನ್ನ ಎದುರಾಳಿಯ ಮೇಲೆ ಅಸುರಾಸ್ತ್ರವನ್ನು ಬಿಟ್ಟನು. ಅದು ಮಹಾ ಕ್ರೂರಮೃಗಗಳ ಆಕಾರವನ್ನು ಧರಿಸಿಕೊಂಡು ತೆರೆದ ಬಾಯಿಂದ ಕಿಡಿಗಳನ್ನುಗುಳುತ್ತಾ ಒಂದಕ್ಕೆ ಹತ್ತಾಗಿ ನೂರಾಗಿ ಹೊರಟುಬರುತ್ತಿತ್ತು. ಶ್ರೀರಾಮನು ಆಗ್ನೇಯಾಸ್ತ್ರದಿಂದ ಅದನ್ನು ನಿವಾರಿಸಲು, ರಾವಣನು ದ್ವಿಗುಣಿತ ವಾದ ಕೋಪದಿಂದ ರೌದ್ರಾಸ್ತ್ರವನ್ನು ಬಿಟ್ಟನು. ಅದರ ಪ್ರಭಾವದಿಂದ ಶೂಲಗಳು ಲಾಳವಿಂಡಿಗೆಗಳೂ ಕೊಳ್ಳಿಗಳೂ ಸೃಷ್ಟಿಯಾಗಿ ಎಲ್ಲೆಲ್ಲಿಯೂ ಸಂಚರಿಸಲಾರಂಭಿಸಿದುವು. ಶ್ರೀರಾಮನು ಗಾಂಧರ್ವಾಸ್ತ್ರದಿಂದ ಅದನ್ನು ನಾಶಮಾಡಿದನು. ಆಮೇಲೆ ಸೌರಾಸ್ತ್ರ

ಬಂದಿತು ; ಶ್ರೀರಾಮನು ಅದನ್ನೂ ಕತ್ತರಿಸಿದನು. ಹೀಗೆ ಅಣ್ಣನು ರಾಕ್ಷಸೇಶ್ವರ ನೊಡನೆ ಹೋರಾಡುತ್ತಿರುವುದನ್ನು ಕಂಡು ಲಕ್ಷ್ಮಣಸ್ವಾಮಿ ಆತನಿಗೆ ಸ್ವಲ್ಪ ವಿಶ್ರಾಂತಿ ಸಿಕ್ಕಲೆಂದು ಏಳು ಬಾಣಗಳನ್ನು ಪ್ರಯೋಗಿಸಿ ರಾಕ್ಷಸೇಶ್ವರನ ಧ್ವಜವನ್ನು ಕತ್ತರಿಸಿ ಸಾರಥಿಯನ್ನು ಸಂಹರಿಸಿದನು. ಮತ್ತೈದು ಬಾಣಗಳಿಂದ ಆ ಶೂರನು ರಾವಣನ ಧನುಸ್ಸನ್ನು ಕತ್ತರಿಸಿ ಹಾಕಿದನು. ಅದೇ ವೇಳೆಗೆ ವಿಭೀಷಣನು ಮುಂದಕ್ಕೆ ನುಗ್ಗಿ ಲಂಕೇಶ್ವರನ ರಥಕ್ಕೆ ಹೂಡಿದ್ದ ಕುದುರೆಗಳನ್ನು ಹೊಡೆದು ಕೆಡಹಿದನು.

ತನ್ನ ರಥದ ಕುದುರೆಗಳು ನೆಲಕ್ಕುರುಳುವಷ್ಟರಲ್ಲಿಯೆ ನೆಲಕ್ಕೆ ಲಂಘಿಸಿ ನಿಂತ ವೀರ ರಾವಣನು ಕೆಂಗಣ್ಣಿನಿಂದ ವಿಭೀಷಣನನ್ನು ದುರುಗುಟ್ಟಿಕೊಂಡು ನೋಡುತ್ತಾ ವಜ್ರಾಯುಧಕ್ಕೆ ಸಮಾನವಾದ ಶಕ್ತ್ಯಾಯುಧವನ್ನು ಅವನ ಮೇಲೆ ಪ್ರಯೋಗಿಸಿ ದನು. ಅದನ್ನು ಕಂಡು ಲಕ್ಷ್ಮಣನು ಮೂರು ಬಾಣಗಳನ್ನು ಬಿಟ್ಟು ಅದನ್ನು ಪುಡಿಪುಡಿ ಮಾಡಿದನು. ಈ ಉದ್ಧಟತನದಿಂದ ಕೋಪಗೊಂಡ ರಾವಣೇಶ್ವರನು ಮತ್ತೊಂದು ಶಕ್ತ್ಯಾಯುಧವನ್ನು ತೆಗೆದುಕೊಂಡು ಲಕ್ಷ್ಮಣನ ಮೇಲೆ ಪ್ರಯೋಗಿಸಿ ದನು. ಕಿಡಿಗಾರುತ್ತಾ ಬರುತ್ತಿರುವ ಆ ಶಕ್ತಿಯನ್ನು ಕಂಡು ಶ್ರೀರಾಮಚಂದ್ರನು "ಲಕ್ಷ್ಮಣನಿಗೆ ಕ್ಷೇಮವಾಗಲಿ!" ಎಂದು ಜಪಿಸಹತ್ತಿದನು. ಆದರೇನು ? ಅಮೋಘವಾದ ಆ ಶಕ್ತಿ ಕ್ರೋಧಗೊಂಡ ಸರ್ಪದಂತೆ ಮಹಾ ವೇಗದಿಂದ ಬಂದು ಲಕ್ಷ್ಮಣನ ವಕ್ಷ ಸ್ಥಳಕ್ಕೆ ಬಡಿಯಿತು. ಅದರಿಂದ ತರಹರಿಸಿಕೊಳ್ಳಲಾರದೆ ಆತನು ಮೂರ್ಛಿತನಾಗಿ ನೆಲಕ್ಕುರುಳಿದನು.

ಲಕ್ಷ್ಮಣನು ನೆಲಕ್ಕುರುಳಿದುದನ್ನು ಕಾಣುತ್ತಲೆ ಶ್ರೀರಾಮನ ಕಣ್ಣುಗಳು ಕಂಬನಿದುಂಬಿದುವು. ಆದರೆ ಮರುಕ್ಷಣದಲ್ಲಿಯೆ ಪ್ರಳಯ ಭೈರವನಂತೆ ವಿಜೃಂಭಿಸಿ, ರಾವಣನನ್ನು ನಿಶಿತ ಶರಗಳಿಂದ ಮುಚ್ಚಿ ಹಾಕಿದನು. ಅತ್ತ ರಾವಣೇಶ್ವರನು ಪ್ರಯೋಗಿಸಿದ ಶಕ್ತಿ ಲಕ್ಷ್ಮಣನ ಹೃದಯವನ್ನು ಭೇದಿಸಿಕೊಂಡು ಹೊರಬಂದಿತು. ಅದನ್ನು ಮುಟ್ಟಲು ವಾನರರಿಗೆಲ್ಲಾ ಹೆದರಿಕೆ. ಶ್ರೀರಾಮಚಂದ್ರನೇ ಅದನ್ನು ಕೈಲಿ ತೆಗೆದುಕೊಂಡು ಮುರಿದು ಹಾಕಿದನು. ಅಲ್ಲದೆ, ರಾವಣೇಶ್ವರನು ತನ್ನ ಮೇಲೆ ಸುರಿಸುತ್ತಿರುವ ಬಾಣ ವರ್ಷವನ್ನು ಸ್ವಲ್ಪವೂ ಲೆಕ್ಕಿಸದೆ ಲಕ್ಷ್ಮಣನನ್ನು ಎತ್ತಿಕೊಂಡು ಹನುಮಂತ ಸುಗ್ರೀವರ ವಶಕ್ಕೊಪ್ಪಿಸಿ, ಅನಂತರ ಶತ್ರುವನ್ನು ಮರ್ದಿಸಲು ಮೊದಲು ಮಾಡಿದನು. ಆತನ ಉರುಬನ್ನು ತಾಳಲಾರದೆ ರಾಕ್ಷಸರಾಜನು ಯುದ್ಧರಂಗದಿಂದ ಕಾಲ್ದೆಗೆದು ಲಂಕಾಭಿಮುಖವಾಗಿ ಓಡಬೇಕಾಯಿತು.

ಅತ್ತ ರಾವಣನು ಬೆನ್ನಿತ್ತು ಓಡುತ್ತಲೆ ಇತ್ತ ರಾಮಚಂದ್ರನು ತಮ್ಮನ ಯೋಗಕ್ಷೇಮದಲ್ಲಿ ತೊಡಗಿದನು. ನೆಲದ ಮೇಲೆ ಬಿದ್ದು ನೋವಿನಿಂದ ನರಳುತ್ತಿರುವ ತಮ್ಮನನ್ನು ಸುಷೇಣನಿಗೆ ತೋರಿಸಿ "ಅಯ್ಯಾ ವಾನರೋತ್ತಮನೆ, ರಕ್ತದಲ್ಲಿ ಮುಳುಗಿ ಬಿದ್ದಿರುವ ಈ ನನ್ನ ತಮ್ಮನನ್ನು ಕಾಣುತ್ತಲೆ ನನ್ನ ಶಕ್ತಿಯೆಲ್ಲವೂ ಉಡುಗಿದಂತಾಗಿ ಹೋಗಿದೆ. ನನಗೆ ಇನ್ನು ಯುದ್ಧಮಾಡುವ ಶಕ್ತಿ ಎಲ್ಲಿಯದು ? ಈ

ನನ್ನ ತಮ್ಮನಿಗೆ ಅಪಾಯವಾದ ಮೇಲೆ ನಾನು ಜೀವಿಸಿದ್ದು ತಾನೆ ಏನು ಪ್ರಯೋಜನ? ನನಗಿನ್ನು ಜೀವಿತದಲ್ಲಿ ಆಶೆಯಿಲ್ಲ. ಅಯ್ಯೊ, ಈ ನನ್ನ ವತ್ಸನು ಕ್ಷಣಕ್ಷಣಕ್ಕೂ ನಂದಿಹೋಗುತ್ತಿದ್ದಾನೆಯಲ್ಲಾ! ಇನ್ನು ಆ ಸೀತೆಯಿಂದ ತಾನೆ ಏನಾಗಬೇಕು? ಲೋಕದಲ್ಲಿ ಹೆಂಡತಿ ಹೋದರೆ ಮತ್ತೊಬ್ಬ ಹೆಂಡತಿ ದೊರೆತಾಳು. ಆದರೆ ತಮ್ಮ ಹೋದರೆ ಪುನಃ ತಮ್ಮ ದೊರೆತಾನೆ?" ಎಂದು ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ ಕಣ್ಣೀರುಗರೆದನು. ದುಃಖದಿಂದ ಆತನ ಇಂದ್ರಿಯಗಳೆಲ್ಲವೂ ಕದಡಿ ಹೋಗಿದ್ದುವು. ಇಂತಹ ಸ್ಥಿತಿಯಲ್ಲಿದ್ದ ಆ ರಘುವೀರನನ್ನು ಸುಷೇಣನು ಸಮಾಧಾನ ಪಡಿಸುತ್ತಾ "ಎಲೈ ಮಹಾಬಾಹು, ಲಕ್ಷ್ಮಣನೇನೂ ಮೃತಿಹೊಂದಿಲ್ಲ. ಆದ್ದರಿಂದ ನೀನು ಇಷ್ಟು ದುಃಖಿಸುವುದಕ್ಕೆ ಕಾರಣಗಳೇನೂ ಇಲ್ಲ" ಎಂದು ಹೇಳಿ ಹನುಮಂತನ ಕಡೆಗೆ ತಿರುಗಿ, "ಮಾರುತಿ, ನೀನೀಗಲೆ ಓಷಧಿಪರ್ವತಕ್ಕೆ ಹೋಗಿ ವಿಶಲ್ಯಕರಣಿ, ಸಾವರ್ಣಕರಣಿ, ಸಂಜೀವಿನಿ, ಸಂಧಾನಕರಣಿ ಎಂಬ ಮೂಲಿಕೆಗಳನ್ನು ತೆಗೆದುಕೊಂಡು ಬಾ! ಅವುಗಳನ್ನು ತಂದಲ್ಲಿ ಲಕ್ಷ್ಮಣದೇವ ಬದುಕುತ್ತಾನೆ" ಎಂದು ಹೇಳಿದನು.

ಸುಷೇಣನು ಹೇಳಿದುದೆ ತಡ, ಹನುಮಂತನು ಒಂದೇ ಉಸಿರಿಗೆ ಓಷಧಿ ಪರ್ವತಕ್ಕೆ ಹಾರಿದನು. ಆದರೆ ಓಷಧಿಗಳು ಆತನಿಗೆ ಕಾಣಿಸಲಿಲ್ಲ. ಆದ್ದರಿಂದ ಪರ್ವತದ ಶಿಖರವನ್ನೇ ಕಿತ್ತುಕೊಂಡು ಹಿಂದಿರುಗಿದನು. ಆ ಶಿಖರವನ್ನು ಸುಷೇಣನ ಮುಂದಿಟ್ಟು "ಅಯ್ಯಾ ವಾನರಶ್ರೇಷ್ಠನೆ, ಮೂಲಿಕೆ ಯಾವುದೆಂಬುದು ನನಗೆ ತಿಳಿಯಲಿಲ್ಲ. ಆದ್ದರಿಂದ ಶಿಖರವನ್ನೇ ತಂದಿದ್ದೇನೆ. ನಿನಗೆ ಬೇಕಾದುದನ್ನು ನೀನೆ ಹುಡುಕಿಕೊ" ಎಂದನು. ಸುಷೇಣನು ನಕ್ಕು ಅದರಲ್ಲಿದ್ದ ಮೂಲಿಕೆಗಳನ್ನು ತೆಗೆದುಕೊಂಡು ಲಕ್ಷ್ಮಣನ ಮೂಗಿನಲ್ಲಿ ಹಿಡಿದನು. ಅದರ ಗಂಧವನ್ನು ಆಘ್ರಾಣಿಸುತ್ತಿದ್ದಂತೆಯೆ ಲಕ್ಷ್ಮಣಸ್ವಾಮಿ ನಿರೋಗಿಯಾಗಿ ಎದ್ದು ಕುಳಿತನು. ವಾನರರೆಲ್ಲರೂ ಮಹದಾನಂದದಿಂದ ಸುಷೇಣ ನನ್ನೂ ಹನುಮಂತನನ್ನೂ ಬಾಯ್ತುಂಬ ಹೊಗಳಿದರು. ಶ್ರೀರಾಮಚಂದ್ರನು ಅಕ್ಷತನಾಗಿದ್ದ ತಮ್ಮನನ್ನು ಆಲಿಂಗಿಸಿ ಆನಂದಬಾಷ್ಪಗಳನ್ನು ಸುರಿಸಿದನು.

---

೨೩

# ರಾಮರಾವಣ ಯುದ್ಧ

ಲಕ್ಷ್ಮಣನು ಒಮ್ಮೆ ಅಪಾಯಕ್ಕೊಳಗಾದುದನ್ನು ಕಂಡು ಶ್ರೀರಾಮಚಂದ್ರನಿಗೆ ಯುದ್ಧವನ್ನು ಅಲ್ಲಿಗೆ ನಿಲ್ಲಿಸಿಬಿಡಬೇಕೆನ್ನಿಸಿತು. ಆದರೆ ಲಕ್ಷ್ಮಣನು ಆತನನ್ನು ಕುರಿತು "ಅಣ್ಣಾ, ರಾವಣನನ್ನು ಸಂಹರಿಸುವೆನೆಂಬ ನಿನ್ನ ಪ್ರತಿಜ್ಞೆ ಏನಾಯಿತು? ಸತ್ಪುರುಷರು ತಮ್ಮ ಪ್ರತಿಜ್ಞೆಯನ್ನು ಉಳಿಸಿಕೊಳ್ಳದೆ ಇರುತ್ತಾರೆಯೇ? ನೀನು ಆ ದುರಾತ್ಮನಾದ ರಾವಣನನ್ನು ಕೊಲ್ಲುವುದನ್ನೆ ಕಾಯುತ್ತಿರುವೆನು. ನನ್ನ ಕೋರಿಕೆಯನ್ನು ಸಲ್ಲಿಸು" ಎಂದನು. ತಮ್ಮನ ಮಾತಿನಂತೆ ಶ್ರೀರಾಮನು ಕೋದಂಡಪಾಣಿಯಾಗಿ ಯುದ್ಧರಂಗವನ್ನು ಪ್ರವೇಶಿಸಿ ಟಂಕಾರಮಾಡಿದನು. ಅದನ್ನು ಕೇಳಿದೊಡನೆಯೆ ರಾವಣನು ರಥವನ್ನು ಆತನ ಬಳಿಗೆ ಹರಿಯಿಸಿದನು. ಇಬ್ಬರು ಮಹಾಯೋಧರು ಪರಸ್ಪರ ಇದಿರಾಗಲು ಅವರ ರಣಕೌಶಲವನ್ನು ನೋಡುವುದಕ್ಕಾಗಿ ದೇವತೆಗಳು ಆಕಾಶದಲ್ಲಿ ನೆರೆದರು. ರಾವಣನು ರಥವನ್ನೇರಿ ಯುದ್ಧ ಮಾಡುತ್ತಿರಲು ಶ್ರೀರಾಮನು ನೆಲದ ಮೇಲೆ ನಿಂತು ಯುದ್ಧಮಾಡಬೇಕಾಗಿತ್ತು. ಇದನ್ನು ನೋಡಿ ದೇವೇಂದ್ರನು ತನ್ನ ಸಾರಥಿಯಾದ ಮಾತಲಿಯೊಡನೆ ತನ್ನ ರಥವನ್ನು ಆತನಿಗಾಗಿ ರಣರಂಗಕ್ಕೆ 'ಕಳುಹಿಸಿಕೊಟ್ಟನು. ಶ್ರೀರಾಮನು ಆ ರಥಕ್ಕೆ ಪ್ರದಕ್ಷಿಣೆ ಮಾಡಿ ಏರಿದನು.

ರಾಮರಾವಣ ಯುದ್ಧ ಆರಂಭವಾಯಿತು. ಗಂಧರ್ವಾಸ್ತ್ರವನ್ನು ಗಂಧರ್ವಾಸ್ತ್ರದಿಂದಲೂ, ದೈವಾಸ್ತ್ರವನ್ನು ದೈವಾಸ್ತ್ರದಿಂದಲೂ ಹೊಡೆದು ಕೆಡವಿದರು. ರಾವಣನ ಸರ್ಪಾಸ್ತ್ರ ಶ್ರೀರಾಮನ ಗರುಡಾಸ್ತ್ರದಿಂದ ನಾಶವಾಯಿತು. ಕುಪಿತನಾದ ಲಂಕೇಶ್ವರನು ಕೂರಂಬಿನಿಂದ ಇಂದ್ರರಥದ ಧ್ವಜವನ್ನು ಕೆಡವಿ, ಹಲವು ಬಾಣಗಳಿಂದ ಅಶ್ವಗಳನ್ನೂ ಸಾರಥಿಯನ್ನೂ ನೋಯಿಸಿದನು. ಅಷ್ಟೇ ಅಲ್ಲ, ಅವನ ಬಾಣವರ್ಷದಿಂದ ಶ್ರೀರಾಮನೂ ಗಾಸಿಯಾದನು. ಅದನ್ನು ಕಂಡು ದೇವತೆಗಳು ನಡುಗಿದರು. ಹೀಗೆ ಎದುರಾಳಿಯಿಂದ ಗಾಯಗೊಂಡ ಶ್ರೀರಾಮನು ಕೆಂಗಣ್ಣಿನಿಂದ ಅವನನ್ನು ದಿಟ್ಟಿಸುತ್ತಾ ಔಡುಗಚ್ಚಿದನು. ಆತನ ಕೋಪದಿಂದ ಜಗತ್ತಿನ ಸಮಸ್ತ ಜೀವರಾಶಿ ಭಯದಿಂದ ತಲ್ಲಣಗೊಂಡುವು. ಭೂಮಿ ನಡುಗಿ ಹೋಯಿತು. ಅನೇಕ ಉತ್ಪಾತಗಳು ಕಾಣಿಸಿಕೊಂಡುವು. ಇವುಗಳನ್ನು ಕಂಡು ಮಹಾವೀರನಾದ ದಶಶಿರನೂ ನಡುಗಿಹೋದನು. ತನಗೇನೊ ಕೇಡು ಸಂಭವಿಸುವುದೆಂದುಕೊಂಡು ಆತನು ತನ್ನ ಆಯುಧಗಳಲ್ಲೆಲ್ಲಾ ಕ್ರೂರವಾದ ಶೂಲಾಯುಧವನ್ನು ಶ್ರೀರಾಮನ ಮೇಲೆ ಪ್ರಯೋಗಿಸಿ, ಸಿಂಹನಾದ ಮಾಡಿದನು. ಎಂಟು ಘಂಟೆಗಳಿಂದ ಅಲಂಕೃತವಾದ ಆ ಶೂಲಾಯುಧವು ಕಿಡಿಗಾರುತ್ತಾ ರಾಮನ ಪ್ರಾಣಗಳನ್ನು ಹುಡುಕುತ್ತಾ ಹೊರಟಿತು. ಅದನ್ನು ನಾಶಮಾಡುವುದಕ್ಕಾಗಿ ರಾಘವನು

ಪ್ರಯೋಗಿಸಿದ ಬಾಣಗಳನ್ನೆಲ್ಲಾ ಆ ಶೂಲ ಸುಟ್ಟು ಭಸ್ಮಮಾಡಿತು. ಆದರಿಂದ ಆತನು ರೋಷಾವಿಷ್ಟನಾಗಿ ಇಂದ್ರನು ಕಳುಹಿಸಿದ್ದ ಶಕ್ತ್ಯಾಯುಧವನ್ನು ಅದರಮೇಲೆ ಪ್ರಯೋಗಿಸಿದನು. ಪ್ರಳಯಕಾಲದ ಮಹೋಲ್ಕೆಯಂತೆ ಹೊರಟ ಆ ಶಕ್ತಿ ರಾವಣನ ಶೂಲವನ್ನು ಸುಟ್ಟು ಹಾಕಿತು. ಹಿಂದೆಯೆ ಶ್ರೀರಾಮನು ಮೂರು ಬಾಣಗಳನ್ನು ರಾವಣನ ಹಣೆಗೆ ಗುರಿಯಿಟ್ಟು ಹೊಡೆದನು. ಅವು ಗುರಿಯನ್ನು ಮುಟ್ಟಿ ಎದುರಾಳಿಯ ರಕ್ತವನ್ನು ಕುಡಿದುವು. ಆ ಪೆಟ್ಟಿಗೆ ರಾವಣನು ತತ್ತರಿಸಿ ಹೋದನು.

ರಾಮಬಾಣದಿಂದ ಗಾಸಿಗೊಂಡ ರಾವಣೇಶ್ವರನು ಏಕಕಾಲದಲ್ಲಿಯೆ ಅಸಂಖ್ಯಾತವಾದ ಬಾಣಗಳನ್ನು ಆತನ ಮೇಲೆ ಸುರಿಸಿದನು. ಶ್ರೀರಾಮನು ಅವುಗಳನ್ನು ತಡೆಯಲು ಅಷ್ಟೇ ಬಾಣಗಳನ್ನು ಪ್ರಯೋಗಿಸಿದನು. ಇಬ್ಬರೂ ರಕ್ತದಿಂದ ನೆನೆದುಹೋಗಿ ಹೂಬಿಟ್ಟ ಮುತ್ತುಗದ ಮರಗಳಂತೆ ಕಾಣುತ್ತಿದ್ದರು. ದಿಕ್ಕುಗಳೆಲ್ಲವೂ ಬಾಣಗಳಿಂದ ತುಂಬಿಹೋಗಿ ಕತ್ತಲೆಗವಿಯಿತು. ಎದುರಾಳಿಗೆ ಶ್ರೀರಾಮನು ಕೂಗಿ ಹೇಳಿದನು—"ಎಲವೊ ರಾಕ್ಷಸಾಧಮ, ನಾನಿಲ್ಲದಾಗ ದೇಶಾಂತರದಿಂದ ಬಂದು ಜಾನಕಿಯನ್ನು ಕದ್ದು ತಂದೆ. ಪರಸ್ತ್ರೀಯನ್ನು ಕದ್ದು ತಂದ ಪರಮಪಾಪಿಯಾದ ನೀನು ವೀರನೆಂದು ಹೇಳಿಕೊಳ್ಳುವಿಯಲ್ಲವೆ? ನೀನು ಕದ್ದು ತಂದಾಗಲೇ ಸಿಕ್ಕಿದ್ದರೆ ಅಂದೇ ನಿನ್ನನ್ನು ಯಮಾಲಯಕ್ಕೆ ಕಳುಹಿಸುತ್ತಿದ್ದೆ. ಹೋಗಲಿ ಇಂದಾದರೂ ನನ್ನ ಕೈಗೆ ಸಿಕ್ಕಿಬಿದ್ದೆಯಲ್ಲವೆ? ಈಗ ನಿನಗಿನ್ನು ನಿಸ್ತಾರವಿಲ್ಲ. ನಿನ್ನ ಮಾಂಸವನ್ನು ಹದ್ದು ಕಾಗೆಗಳಿಗೆ ಉಣಿಸಾಗಿ ಮಾಡುತ್ತೇನೆ"

ಮಾತನಾಡುತ್ತಾ ಹೋದಂತೆ ಶ್ರೀರಾಮನ ರಕ್ತ ಕಾಯುತ್ತಾ ಹೋಯಿತು. ಆತನ ಉತ್ಸಾಹ ಸಂತೋಷಗಳೂ ಬಲಪರಾಕ್ರಮಗಳೂ ಇಮ್ಮಡಿಸಿದುವು. ಮಹಾತ್ಮನಾದ ಆತನಿಗೆ ಸಮಸ್ತ ಶಸ್ತ್ರಾಸ್ತ್ರಗಳೂ ಗೋಚರವಾದುವು. ಪರಮಾಶ್ಚರ್ಯಕರವಾಗಿ ಕರಲಾಘವವನ್ನು ತೋರಲು ಉಪಕ್ರಮಿಸಿದನು, ಆತ. ಇಂಥ ಶುಭಲಕ್ಷಣಗಳು ಕಾಣಬರುತ್ತಿರುವಾಗಲೆ ಶತ್ರುವನ್ನು ತೀರಿಸಿಬಿಡಬೇಕೆಂದು ಆತನು ನಿಶ್ಚಯಿಸಿದನು. ರಾಮಬಾಣಗಳ ಬಿರುಸನ್ನು ಕಂಡು ರಾವಣನಿಗೆ ಧನುರ್ಬಾಣಗಳನ್ನು ಹಿಡಿಯಲೂ ಶಕ್ತಿಯಿಲ್ಲದಂತಾಯಿತು. ತನಗಿನ್ನು ಮೃತ್ಯು ಸನ್ನಿಹಿತವಾಗಿದೆಯೆಂದುಕೊಂಡನು ಅವನು. ಆಗ ಅವನ ಸಾರಥಿ ತನ್ನ ಒಡೆಯನ ದುರವಸ್ಥೆಯನ್ನು ಕಂಡು ಆತನನ್ನು ಮೆಲ್ಲಮೆಲ್ಲನೆ ಯುದ್ಧರಂಗದಿಂದ ಹಿಂದಕ್ಕೆ ಕರೆದೊಯ್ದನು.

ಕೇವಲ ತನ್ನ ಮೇಲಿನ ಮೋಹದಿಂದ ತನ್ನನ್ನು ರಣರಂಗದಿಂದ ಹಿಂದಕ್ಕೆ ಕರೆತಂದ ಸಾರಥಿಯನ್ನು ಕಂಡು ರಾವಣೇಶ್ವರನಿಗೆ ರೇಗಿ ಹೋಯಿತು. ಆತನು ಅವನನ್ನು ಕುರಿತು "ಎಲವೊ ದುರಾತ್ಮ, ನನ್ನನ್ನು ಹೀನಬಲನೆಂದು ಭಾವಿಸಿಯಲ್ಲವೆ ನೀನು ರಣರಂಗದಿಂದ ರಥವನ್ನು ಹಿಮ್ಮೆಟ್ಟಿಸಿದುದು? ಇದು ಎಂತಹ ಅವಮಾನವೆಂದು ಅರಿತುಕೊಳ್ಳುವ ಶಕ್ತಿ ನಿನಗೆ ಇಲ್ಲದೆ ಹೋಯಿತಲ್ಲವೆ? ಶತ್ರುವಿನ ಇದಿರಿನಿಂದ ರಥವನ್ನು ಹಿಂದಿರುಗಿಸಿ ಬಹುಕಾಲದಿಂದ ಗಳಿಸಿದ್ದ ನನ್ನ ಕೀರ್ತಿಗೆ ಮಸಿಯನ್ನು ಮೆತ್ತಿರುವೆ. ನನಗೆ

ಹಿತವನ್ನು ಆಚರಿಸುವ ನೆಪದಲ್ಲಿ ಶತ್ರುವಿಗೆ ಸಂತೋಷವನ್ನುಂಟುಮಾಡಿದ ನೀನೂ ನನ್ನ ಶತ್ರುವಿನ ಕಡೆಯವನೆಂದೆ ಭಾವಿಸಬೇಕಾಗಿದೆ. ಇಷ್ಟುಕಾಲ ನನ್ನ ಸಾರಥಿಯಾಗಿದ್ದು ಕೊಂಡು ನನ್ನ ಗುಣ ಸ್ವಭಾವವನ್ನು ಅರಿತಿದ್ದರೂ ನೀನೀರೀತಿ ಹೇಯಕಾರ್ಯವನ್ನು ಆಚರಿಸಿದುದು ಆಶ್ಚರ್ಯಕರವಾಗಿದೆ. ಮೊದಲು ರಥವನ್ನು ಹಿಂದಿರುಗಿಸಿ, ರಣರಂಗಕ್ಕೆ ಚೋದಿಸು" ಎಂದನು. ಆ ಕಠಿಣ ನುಡಿಗಳಿಂದ ಮನನೊಂದ ಸಾರಥಿ ವಿನಯ ಪೂರ್ವಕವಾಗಿ ತನ್ನ ಸ್ವಾಮಿಯನ್ನು ಕುರಿತು "ಮಹಾರಾಜ, ನಾನು ಬುದ್ಧಿ ಹೀನನಾಗಿ ಹೀಗೆ ಮಾಡಿದೆನೆಂದಾಗಲಿ, ಶತ್ರುವಿನ ಬೋಧೆಗೊಳಗಾಗಿ ಹೀಗೆ ಮಾಡಿದೆನೆಂದಾಗಲಿ ತರ್ಕಿಸಬಾರದು, ಸ್ವಾಮಿ ! ನಿಮ್ಮ ಅಸಾರವಾದ ಪ್ರೇಮಕ್ಕೆ ಪಾತ್ರನಾದ ನನ್ನಲ್ಲಿ ಸದಾ ನಿಮ್ಮ ಶ್ರೇಯಸ್ಸಾಧನೆಯ ಹೊರತು ಬೇರೊಂದು ನೀಚಭಾವ ಉದಿಸಲು ಸಾಧ್ಯವಿಲ್ಲ. ನೀನು ಯುದ್ಧದಲ್ಲಿ ಬಹಳವಾಗಿ ದಣಿದಿದ್ದೆ ; ನಿಮ್ಮ ರಣೋತ್ಸಾಹ ಕುಗ್ಗುತ್ತಿತ್ತು ; ಯುದ್ಧವೂ ನಿಮಗೆ ಸುಮುಖವಾಗಿರಲಿಲ್ಲ. ಇದರ ಮೇಲೆ ಅಮಂಗಳಕರವಾದ ಅನೇಕ ಉತ್ಪಾತಗಳು ಬೇರೆ ಕಂಡುಬಂದುವು. ಆದ್ದರಿಂದ ನಿಮ್ಮ ಕೃಪೆಯಿಂದ ಉತ್ತಮವಾದ ಸಾರಥಿಯ ಲಕ್ಷಣಗಳೆಲ್ಲವನ್ನೂ ಚೆನ್ನಾಗಿ ಅರಿತುಕೊಂಡಿರುವ ನಾನು ನನ್ನ ಕರ್ತವ್ಯ ವನ್ನು ನೆರವೇರಿಸಿದೆ. ನಿಮ್ಮಲ್ಲಿ ರೂಢಮೂಲವಾಗಿರುವ ಪ್ರೇಮವೇ ನನ್ನಿಂದ ಈ ಕಾರ್ಯವನ್ನು ಮಾಡಿಸಿತು. ಈಗ ನೀವು ಅಪ್ಪಣೆ ಮಾಡಿದುದನ್ನು ತಲೆಯಲ್ಲಿ ಹೊತ್ತು ನಡಸಲು ಸಿದ್ಧನಾಗಿದ್ದೇನೆ" ಎಂದು ಹೇಳಿದನು.

ಸೂತನ ನುಡಿಗಳಿಂದ ಸಂತುಷ್ಟನಾದ ರಾವಣೇಶ್ವರನು ಆತನನ್ನು ಸಮಾಧಾನ ಪಡಿಸಿ, ಒಡನೆಯೆ ರಥವನ್ನು ರಣರಂಗಕ್ಕೆ ಕೊಂಡೊಯ್ಯುವಂತೆ ಅಪ್ಪಣೆ ಮಾಡಿದನು. ಸಾರಥಿ ಆತನ ಅಪ್ಪಣೆಯಂತೆ ಕುದುರೆಗಳನ್ನು ಚಪ್ಪರಿಸಿ ಕ್ಷಣಮಾತ್ರದಲ್ಲಿ ರಥವನ್ನು ಶ್ರೀರಾಮಮೂರ್ತಿಗೆ ಅಭಿಮುಖವಾಗಿ ತಂದು ನಿಲ್ಲಿಸಿದನು. ಶತ್ರುವನ್ನು ಕಾಣುತ್ತಲೆ ರಘುವೀರನು ಸಂತೋಷದಿಂದ ತನ್ನ ಧನುಸ್ಸನ್ನು ಟಂಕಾರಮಾಡಿ, ಸಾರಥಿಯಾದ ಮಾತಲಿಗೆ "ಎಲೈ ಪುರಂದರ ಸಾರಥಿ, ಈಗ ನಾನು ರಾವಣನನ್ನು ವಧಿಸಲು ನಿಶ್ಚಯಿಸಿ ದ್ದೇನೆ. ಬೆಂಕಿಯನ್ನು ಬಯಸಿಬರುವ ಪತಂಗದಂತೆ ಅವನೂ ನನ್ನನ್ನೆ ಅರಸುತ್ತಿದ್ದಾನೆ. ತನ್ನ ಮೃತ್ಯುವನ್ನು ತಾನೇ ಬಯಸುತ್ತಿರುವ ಅವನೆದುರಿಗೆ ರಥವನ್ನು ಹರಿಸು. ಮಹೇಂದ್ರನಿಗೆ ಸಾರಥ್ಯವನ್ನು ಮಾಡುವ ನಿನಗೆ ನಾನು ಹೇಳಿಕೊಡಬೇಕಾದುದೇನೂ ಇಲ್ಲ. ಆದರೂ ನನ್ನ ಯುದ್ಧಕ್ಕೆ ಉಚಿತವಾದ ರೀತಿಯಲ್ಲಿ ಚಿತ್ತೈಕಾಗ್ರತೆಯಿಂದ ರಥವನ್ನು ನಡಸೆಂದು ನಿನಗೆ ಜ್ಞಾಪಿಸುತ್ತೇನೆ" ಎಂದು ಹೇಳಿದನು. ವಿನಯದಿಂದ ತುಂಬಿದ ಆತನ ನುಡಿಗಳಿಂದ ಸುಪ್ರೀತನಾದ ಮಾತಲಿ ಬಹು ಜಾಣ್ಮೆಯಿಂದ ರಥವನ್ನು ನಡಸುತ್ತಾ ತನ್ನ ರಥದ ಧೂಳಿನಿಂದ ರಾವಣನ ರಥವೆಲ್ಲವೂ ಮುಚ್ಚಿಹೋಗುವಂತೆ ಮಾಡಿದನು. ಕಂಗಾಣದಂತಾದ ದೈತ್ಯೇಂದ್ರನು ತೋಚಿದತ್ತ ಬಾಣಗಳನ್ನು ಸುರಿಸುತ್ತಾ ಭಯಂಕರವಾದ ಹಾವಳಿಯನ್ನು ಉಂಟುಮಾಡಿದನು.

ರಾಮರಾವಣರ ಯುದ್ಧ ಕಾವೇರುತ್ತಾ ಹೋದಂತೆ ಮತ್ತೊಮ್ಮೆ ರಾವಣನಿಗೆ ಅಪಶಕುನಗಳು ಕಾಣಿಸಿಕೊಂಡುವು. ಆತನ ತಲೆಯ ಮೇಲೆ ರಕ್ತದಮಳೆ ಸುರಿಯಿತು.

ಆತನ ರಥ ಹೋಗುತ್ತಿದ್ದ ದಿಕ್ಕನ್ನೆಲ್ಲಾ ಹದ್ದುಗಳು ಹಿಂದಟ್ಟಿಹೋದುವು. ಹಗಲಿ ನಲ್ಲೆಲ್ಲಾ ಉಲ್ಕಾಪಾತಗಳಾದುವು. ಇದನ್ನು ಕಂಡು ರಾಕ್ಷಸರೆಲ್ಲರೂ ಚಿಂತಾಕ್ರಾಂತ ರಾದರು. ಸ್ವತಃ ರಾವಣೇಶ್ವರನೆ ನಡುಗಿದುದಲ್ಲದೆ ಭೂಮಿಯೇ ನಡುಗಿತು. ಯುದ್ಧ ಮಾಡುತ್ತಿದ್ದ ರಾಕ್ಷಸರ ಬಾಹುಗಳೆಲ್ಲವೂ ಸ್ತಬ್ಧವಾಗಿ ನಿಂತುವು. ಆತನು ಬದುಕಿರು ವಂತೆಯೆ ರಾವಣನ ಹತ್ತಿರ ಸುಳಿದಾಡುತ್ತಿದ್ದ ನರಿಗಳು ಕೆಟ್ಟ ಧ್ವನಿಯಲ್ಲಿ ಕೂಗಿ ಕೊಂಡುವು. ಗಾಳಿ ಕೂಡ ಆತನಿಗೆ ವ್ಯತಿರಿಕ್ತವಾಗಿ ಬೀಸಿ ಆತನ ಕಣ್ಣುಗಳಲ್ಲಿ ಧೂಳೆರ ಚಿತು. ರಥದ ಕುದುರೆಗಳು ಕಣ್ಣೀರುಗರೆಯುತ್ತಾ ಹೆಜ್ಜೆ ಹೆಜ್ಜೆಗೂ ಎಡವಿದುವು. ಅದೇ ಸಮಯದಲ್ಲಿಯೆ ಶ್ರೀರಾಮನಿಗೆ ಅನೇಕ ಶುಭ ಶಕುನಗಳಾದುವು ಅದರಿಂದ ಉತ್ಸಾಹಗೊಂಡ ಆತನು ಇನ್ನು ತನ್ನ ಶತ್ರುವಿಗೆ ಕಡೆಗಾಲ ಸನ್ನಿಹಿತವಾಯಿತೆಂದು ಸಂತೋಷಪಟ್ಟನು.

ರಾಮರಾವಣರ ಭಯಂಕರ ದ್ವಂದ್ವಯುದ್ಧವನ್ನು ನೋಡುವುದರಲ್ಲಿ ಎರಡು ಸೈನ್ಯದವರೂ ತಮ್ಮ ರಣಕರ್ಮವನ್ನು ಮರೆತು ಬಿಟ್ಟರು. ರಣಭೂಮಿಯೆಲ್ಲವೂ ಬರೆದಿಟ್ಟ ಚಿತ್ರದಂತೆ ಸ್ತಬ್ಧರಾಗಿ ನಿಂತು ನೋಡುತ್ತಿರುವ ಯೋಧರಿಂದ ತುಂಬಿ ಹೋಯಿತು. ರಾವಣನು ಬಿಡುತ್ತಿದ್ದ ಬಾಣಗಳು ವ್ಯರ್ಥವಾಗಲಾರಂಭಿಸಿದುವು. ಶ್ರೀರಾಮನ ಬಾಣಗಳು ತಪ್ಪದೆ ಗುರಿಯನ್ನು ಭೇದಿಸುತ್ತಿದ್ದುವು. ಆತನ ಬಾಣಗಳಿಂದ ಎದುರಾಳಿಯ ರಥಧ್ವಜ ಭಗ್ನವಾಗಿ ಕೆಳಗೆ ಬಿತ್ತು. ರಾವಣನು ಅದೇ ಪ್ರಯತ್ನದಿಂದ ಪ್ರಯೋಗಿಸಿದ ಬಾಣ ವ್ಯರ್ಥವಾಯಿತು. ತನ್ನ ಕಾರ್ಯ ವಿಫಲವಾದಂತೆಲ್ಲಾ ಆತನ ರೋಷ ಹೆಚ್ಚುತ್ತಿತ್ತು. ಜ್ವಲಿಸುವ ಬಾಣಗಳನ್ನು ಆತನು ಎದುರಾಳಿಯ ರಥಾಶ್ವಗಳ ಮೇಲೆ ಬಿಟ್ಟನು. ಅವು ಕುದುರೆಗಳಿಗೆ ತಾಕಿದರೂ ಅದರಿಂದೇನೂ ಪ್ರಯೋಜನವಾಗ ಲಿಲ್ಲ. ಆದರೂ ಆತನು ನಿರರ್ಗಳವಾಗಿ ಬಾಣಗಳನ್ನು ಕರೆಯುತ್ತಾ ಹೋದನು. ಆದರೇನು? ರಾಮಬಾಣಗಳಿಂದ ಅವುಗಳೆಲ್ಲವೂ ಮಧ್ಯಮಾರ್ಗದಲ್ಲಿಯೇ ಮುರಿದು ನೆಲಕ್ಕುರುಳಿದುವು.

---

## ೨೪

# ರಾಮಾಸ್ತ್ರಕ್ಕೆ ರಾವಣ ಬಲಿ!

ರಾಮರಾವಣರು ತಮ್ಮಿಬ್ಬರಲ್ಲಿ ಒಬ್ಬರು ಉಳಿಯಬೇಕು ಮತ್ತೊಬ್ಬರು ಅಳಿಯಲೇಬೇಕೆಂಬ ನಿಶ್ಚಯದಿಂದ ಕೂಡಿದವರಾಗಿ ಭಯಂಕರವಾದ ರಣಕರ್ಮದಲ್ಲಿ ತೊಡಗಿದರು. ನೀರು ತುಂಬಿದ ಮೋಡಗಳಂತೆ ಯುದ್ಧರಂಗದಲ್ಲಿ ಸುಳಿದಾಡುತ್ತಿದ್ದ ಅವರಿಬ್ಬರ ರಥಗಳಿಂದ ಬಾಣಗಳ ಮಳೆ ಒಂದೇ ಸಮನಾಗಿ ಸುರಿಯುತ್ತಿತ್ತು. ಆ ಇಬ್ಬರು ರಣವೀರರ ಬಾಣಚಾತುರ್ಯವನ್ನು ಕಂಡು ಎರಡು ಸೈನ್ಯದವರೂ ರೋಮಾಂಚಗೊಂಡರು. ಮೇಲೆ ನಿಂತು ವೀಕ್ಷಿಸುತ್ತಿದ್ದ ದೇವತೆಗಳೆಲ್ಲರೂ "ಸಾಧು ಸಜ್ಜನರಿಗೆ ಶುಭವಾಗಲಿ! ಸಮಸ್ತ ಲೋಕಗಳಿಗೂ ಮಂಗಳವುಂಟಾಗಲಿ! ಶ್ರೀರಾಮ ಚಂದ್ರನು ರಣದಲ್ಲಿ ವಿಜಯಶಾಲಿಯಾಗಲಿ!" ಎಂದು ಹರಕೆ ಹೊತ್ತರು. ಗಗನಕ್ಕೆಣೆ ಗಗನವೆ, ಕಡಲಿಗೆ ಹೋಲಿಕೆ ಕಡಲೆ; ಹಾಗೆಯೆ ರಾಮರಾವಣರಲ್ಲಿ ಯುದ್ಧಕ್ಕೆ ರಾಮರಾವಣರ ಯುದ್ಧವೆ ಹೋಲಿಕೆ!" ಎಂದು ಯುದ್ಧವನ್ನು ನೋಡುತ್ತಿದ್ದವ ರೆಲ್ಲರೂ ಹೇಳಿಕೊಂಡರು.

ಶ್ರೀರಾಮಮೂರ್ತಿ ಸಮಯಸಾಧಿಸಿ "ಕ್ಷುರ"ವೆಂಬ ತೀಕ್ಷ್ಣವಾದ ಬಾಣವನ್ನು ರಾವಣನ ಕಂಠಕ್ಕೆ ಗುರಿಯಿಟ್ಟು ಹೊಡೆದನು. ರತ್ನಕುಂಡಲಗಳಿಂದ ಬೆಳಗುತ್ತಿದ್ದ ಅವನ ತಲೆ ತತ್‌ಕ್ಷಣವೇ ದೇಹದಿಂದ ಬೇರೆಯಾಗಿ ಭೂಮಿಯ ಮೇಲೆ ಬಿತ್ತು. ಆದರೆ, ಇದೇನು? ಕತ್ತರಿಸಿದ ತಲೆಯಿದ್ದ ಕಡೆ ಹೊಸ ತಲೆಯೊಂದು ಚಿಗುರಿತು. ಶ್ರೀರಾಮ ಚಂದ್ರನು ಮತ್ತೊಂದು ದಿವ್ಯಾಸ್ತ್ರವನ್ನು ಬಿಟ್ಟು ಆ ರಾಕ್ಷಸೇಶ್ವರನ ಎರಡನೆಯ ತಲೆ ಯನ್ನೂ ಕತ್ತರಿಸಿದನು. ಯಥಾ ಪ್ರಕಾರ ಅದರ ಸ್ಥಳದಲ್ಲಿ ಹೊಸ ತಲೆಯೊಂದು ಹುಟ್ಟಿಕೊಂಡಿತು. ಶ್ರೀರಾಮನು ಆ ತಲೆಯನ್ನೂ ಕತ್ತರಿಸುವುದು, ಮತ್ತೆ ಅದರ ಸ್ಥಳದಲ್ಲಿ ಹೊಸ ತಲೆ ಹುಟ್ಟುವುದು—ಹೀಗೆ ನಡೆಯಿತು. ನೂರು ಬಾರಿ ಆ ತಲೆ ಗಳನ್ನು ಕತ್ತರಿಸಿಹಾಕಿದರೂ ರಾವಣನು ಬೇರೆ ಸಾಯಲಿಲ್ಲ. ಶ್ರೀರಾಮನ ಶ್ರಮ ವೆಲ್ಲವೂ ವ್ಯರ್ಥವಾಯಿತು. ಆತನಿಗೆ ದೊಡ್ಡ ಯೋಚನೆ ಹತ್ತಿತು. ಮಾರೀಚ, ಖರ, ದೂಷಣ, ವಿರಾಧ, ಕಬಂಧ—ಮೊದಲಾದ ಸಹಸ್ರಸಹಸ್ರ ರಾಕ್ಷಸರನ್ನು ಸಂಹರಿಸಿದ ಬಾಣಗಳೆಲ್ಲಾ ವ್ಯರ್ಥವಾದುವು.

ಒಂದು ದಿನ ಒಂದು ರಾತ್ರಿ ಕ್ಷಣವೂ ವಿರಾಮವಿಲ್ಲದೆ ರಾಮ–ರಾವಣರ ಯುದ್ಧ ನಡೆಯಿತು. ಆದರೂ ಜಯವನ್ನು ಕಾಣದೆ ವ್ಯಾಕುಲನಾಗಿದ್ದ ಶ್ರೀರಾಮಚಂದ್ರನನ್ನು ಕಂಡು ಮಾತಲಿಗೆ ಥಟ್ಟನೆ ಒಂದು ವಿಷಯ ಜ್ಞಾಪಕಕ್ಕೆ ಬಂತು. ಆ ದೇವಸಾರಥಿ ಆತನನ್ನು ಕುರಿತು "ಪ್ರಭು ಶ್ರೀರಾಮಚಂದ್ರ, ಏನೂ ಅರಿಯದವನಂತೆ ನೀನೇಕೆ



ಶ್ರೀರಾಮ ಬ್ರಹ್ಮಾಸ್ತ್ರವನ್ನು ಕೈಗೆ ತೆಗೆದುಕೊಂಡು ವೇದವಿಧಿಯಿಂದ ಅದನ್ನು ಅಭಿಮಂತ್ರಿಸಿ ಹೂಡಿದನು.

ಹೀಗೆ ಚಿಂತಿಸುತ್ತಿರುವೆ? ನಿನಗೆ ತಿಳಿಯದುದು ಯಾವುದು? ಬ್ರಹ್ಮಾಸ್ತ್ರವನ್ನು ವನ್ನು ಪ್ರಯೋಗಿಸಿ ಇವನನ್ನು ಸಂಹರಿಸಬಾರದೆ?" ಎಂದನು. ಒಡನೆಯೆ ರಾಘವನು ಬ್ರಹ್ಮಾಸ್ತ್ರವನ್ನು ಜ್ಞಾಪಿಸಿಕೊಂಡನು. ಬ್ರಹ್ಮನು ತನಗೆ ಕೊಟ್ಟಿದ್ದ ಆ ಅಸ್ತ್ರವನ್ನು ಅಗಸ್ತ್ಯಋಷಿ ಶ್ರೀರಾಮನಿಗೆ ಅನುಗ್ರಹಿಸಿ ಕೊಟ್ಟಿದ್ದನು. ಈಗ ರಾಘವನು ನೆನೆದೊಡನೆಯೆ ಅದು ಪ್ರತ್ಯಕ್ಷವಾಗಿ ಇದಿರಿಗೆ ನಿಂತಿತು. ಶ್ರೀರಾಮನು ಅದನ್ನು ಕೈಗೆ ತೆಗೆದುಕೊಂಡು ವೇದವಿಧಿಯಿಂದ ಅದನ್ನು ಅಭಿಮಂತ್ರಿಸಿ ಧನುಸ್ಸಿನಲ್ಲಿ ಹೂಡಿದನು. ಅನಂತರ ಜಗತ್ತೆಲ್ಲವೂ ಅವರ ಕಾವಿನಿಂದ ತಲ್ಲಣಗೊಳ್ಳುತ್ತಿರಲು ಕಿವಿಯುವರೆಗೆ ಎಳೆದು ಎದುರಾಳಿಯ ಎದೆಗೆ ಗುರಿಯಿಟ್ಟು ಹೊಡೆದನು. ಗುರಿತಪ್ಪದೆ ವಕ್ಷಸ್ಥಳವನ್ನು ತಾಕಿದ

ಆ ಮಹಾಸ್ತ್ರ ರಾವಣೇಶ್ವರನ ಎದೆಯನ್ನು ಭೇದಿಸಿಕೊಂಡು, ಆತನ ಪ್ರಾಣಗಳೊಡನೆ ಭೂಮಿಯನ್ನು ಪ್ರವೇಶಿಸಿ ಮತ್ತೆ ಮೇಲಕ್ಕೆದ್ದು ಶ್ರೀರಾಮನ ಬತ್ತಳಿಕೆಯನ್ನು ಸೇರಿ ಕೊಂಡಿತು. ಗತಪ್ರಾಣನಾದ ಲಂಕೇಶ್ವರನು ವಜ್ರದಿಂದ ಹತನಾದ ವೃತ್ರಾಸುರನಂತೆ ರಥದಿಂದ ಕೆಳಕ್ಕೆ ಬಿದ್ದನು.

ತಮ್ಮ ಒಡೆಯನ ಸಾವನ್ನು ಕಂಡು ರಾಕ್ಷಸರೆಲ್ಲರೂ ಪ್ರಾಣದಾಸೆಯನ್ನು ತೊರೆದು ದಾರಿ ಸಿಕ್ಕತ್ತ ಓಡಿಹೋದರು. ಅವರನ್ನು ವಾನರರು ಹಿಂದಟ್ಟಿಹೋಗಿ ಕೈಗೆ ಸಿಕ್ಕವರನ್ನೆಲ್ಲ ಬಡಿದು ಕೊಂದು ಹಾಕಿದರು. ಅಳಿದುಳಿದ ರಾಕ್ಷಸರು ಕಣ್ಣೀರಿಡುತ್ತಾ ಲಂಕೆಯನ್ನು ಪ್ರವೇಶಿಸಿದರು. ವಾನರೆಲ್ಲರೂ ಸಂತೋಷ ಸಂಭ್ರಮಗಳಿಂದ ಕೋಲಾಹಲ ಧ್ವನಿಮಾಡಿದರು. ಅಂತರಿಕ್ಷದಲ್ಲಿ ದೇವದುಂದುಭಿ ಮೊಳಗಿದುವು. ಸುಖಸ್ಪರ್ಶವಾದ ಗಾಳಿ ಮೆಲ್ಲಮೆಲ್ಲನೆ ಬೀಸಿತು. ಪುಷ್ಪವೃಷ್ಟಿಯಾಯಿತು. ದೇವತೆಗಳೆಲ್ಲರೂ ಶ್ರೀರಾಮ ನನ್ನು 'ಫೇ ಉಘೇ!' ಎಂದು ಶ್ಲಾಘಿಸಿದರು. ಸುಗ್ರೀವ ವಿಭೀಷಣಾದಿಗಳು ಲಕ್ಷ್ಮಣ ಸ್ವಾಮಿಯೊಡಗೂಡಿ ವಿಜಯಿಯಾದ ಶ್ರೀರಾಮಚಂದ್ರನನ್ನು ಸಂತೋಷ ಸಂಭ್ರಮ ಗಳಿಂದ ಶಾಸ್ತ್ರೋಕ್ತವಾಗಿ ಪೂಜೆ ಮಾಡಿದರು. ಆತನು ಆ ವಾನರವೀರರ ಮಧ್ಯದಲ್ಲಿ ಸುರಗಣದ ಮಧ್ಯದಲ್ಲಿರುವ ಮಹೇಂದ್ರನಂತೆ ವಿರಾಜಿಸುತ್ತಿದ್ದನು.

ಶ್ರೀರಾಮ ಪೂಜಾನಂತರ ವಿಭೀಷಣನು ರಣರಂಗಕ್ಕೆ ಬಂದು ಅಲ್ಲಿ ಸತ್ತು ಬಿದ್ದಿದ್ದ ಅಣ್ಣನನ್ನು ಕಾಣುತ್ತಲೇ ಕಣ್ಣೀರು ತುಂಬಿದವನಾಗಿ "ಅಯ್ಯೋ ಅಣ್ಣ! ನಿನ್ನಂತಹ ಶೂರನಾದವನಿಗೆ ಎಂತಹ ದುರವಸ್ಥೆ ಪ್ರಾಪ್ತವಾಯ್ತು! ನಾನು ಹಿಂದೆಯೆ ನಿನಗೆ ಈ ದುರವಸ್ಥೆ ಪ್ರಾಪ್ತವಾಗುವುದೆಂದು ಭವಿಷ್ಯ ಹೇಳಿದುದು ನಿಜವಾಯಿತಲ್ಲವೆ? ಅಯ್ಯೋ! ಕಾಮದಿಂದ ಕುರುಡನಾಗಿದ್ದ ನಿನಗೆ ನಾನು ಹೇಳಿದ ಧರ್ಮ ಗೋಚರಿಸದೆ ಹೋಯಿತು. ಸೀತಾಪಹರಣದ ಪಾಪ ಎಂತಹ ಫಲ ಕೊಡುವುದೆಂಬುದನ್ನು ಅರಿಯದೆ ಹೋದೆ. ಮಹಾಶಸ್ತ್ರಾಸ್ತ್ರ ಕೋವಿದನಾದ ನೀನು ಹೀಗೆ ಮಡಿದು ಧೂಳಿನಲ್ಲಿ ಹೊರಳು ತ್ತಿರುವಾಗ ಭೂಮಿಯೆಲ್ಲವೂ ಶೂರಶೂನ್ಯವಾಗಿರುವಂತೆ ತೋರುತ್ತಿದೆ. ಧೈರ್ಯದ ಚಿಗುರುಗಳಿಂದಲೂ ಸಾಮರ್ಥ್ಯದ ಹೂಗಳಿಂದಲೂ ತಪಸ್ಸಿನ ರಸದಿಂದಲೂ ಶೌರ್ಯ ಸಾಹಸಗಳೆಂಬ ಬೇರುಗಳಿಂದಲೂ ತುಂಬಿದ್ದ ರಾವಣೇಶ್ವರನೆಂಬ ವೃಕ್ಷ ಶ್ರೀರಾಮನೆಂಬ ಪ್ರಳಯಮಾರುತದಿಂದ ನಾಶವಾಗಿ ಹೋಯಿತಲ್ಲವೆ? ಅಕಟಕಟಾ! ಇದ್ದಕ್ಕಿದ್ದ ಹಾಗೆ ಎಷ್ಟು ಬೇಗ ಈ ದುರಂತ ನಡೆದುಹೋಯಿತು!" ಎಂದು ಹಲುಬಿದನು.

ಅಣ್ಣನಿಗಾಗಿ ಮರುಗುತ್ತಿರುವ ವಿಭೀಷಣನನ್ನು ಕುರಿತು ರಘುರಾಮನು "ಅಯ್ಯಾ! ರಾಕ್ಷಸೋತ್ತಮನೆ! ವೀರೋಚಿತವಾಗಿ ಯುದ್ಧಮಾಡಿ ಸತ್ತವರಿಗಾಗಿ ಕಣ್ಣೀರುಗರೆಯುವುದು ಉಚಿತವಲ್ಲ. ಮೃತ್ಯುವೆಂಬುದು ಕಾಲಧರ್ಮದಿಂದ ಎಲ್ಲರಿಗೂ ಪ್ರಾಪ್ತವಾಗತಕ್ಕುದೆ. ಆದ್ದರಿಂದ ದುಃಖವನ್ನು ಶಮನಮಾಡಿಕೊಂಡು ಮುಂದೆ ಮಾಡಬೇಕಾದ ಕಾರ್ಯಗಳನ್ನು ಆಲೋಚಿಸು" ಎಂದನು. ಆಗ ವಿಭೀಷಣನು ಶ್ರೀರಾಮನನ್ನು ಕುರಿತು "ರಾಘವ, ಈ ರಾವಣೇಶ್ವರ ಇದುವರೆಗೆ ಎಂದೂ ಎಲ್ಲಿಯೂ

ಸೋಲನ್ನು ಕಂಡವನಲ್ಲ. ಯಥೇಷ್ಟವಾಗಿ ದಾನಧರ್ಮಗಳನ್ನು ಮಾಡಿದ್ದಾನೆ; ದೇವತಾ ಪೂಜೆಯನ್ನು ಮನಮುಟ್ಟಿ ಸಲ್ಲಿಸಿದ್ದಾನೆ; ತನ್ನ ಭೃತ್ಯರನ್ನು ಮಕ್ಕಳಂತೆ ಕಾಪಾಡಿದ್ದಾನೆ; ನಿಷ್ಠನಾದ ಈತನು ಅಗ್ನಿಹೋತ್ರಿಯಾಗಿ, ವೇದಾಧ್ಯಯನ ಸಂಪನ್ನನಾಗಿದ್ದನು. ಇಂತಹ ಈತನು ಈಗ ಮೃತಹೊಂದಿರುವುದರಿಂದ ವೇದೋಕ್ತವಿಧಿಯಿಂದಲೆ ಈತನ ದಹನ ಕರ್ಮಗಳನ್ನು ನಡೆಸಬೇಕೆಂದಿರುತ್ತೇನೆ. ದಯೆಯಿಟ್ಟು ಅನುಜ್ಞೆ ಕೊಡು" ಎಂದನು. ಧರ್ಮಾತ್ಮನಾದ ಶ್ರೀರಾಮನು ಒಡನೆಯೆ ಅದಕ್ಕೆ ಸಮ್ಮತಿಸಿದನು. ಹಗೆತನವೆಂಬುದೇನಿದ್ದರೂ ಶತ್ರುಮಡಿಯುವವರೆಗೆ. ಈಗ ಆತನಿಗೆ ರಾವಣನಲ್ಲಿ ಲವಲೇಶವಾದರೂ ಶತ್ರುತ್ವವಿರಲಿಲ್ಲ.

---

## ೨೫

# ದಾನವೇಂದ್ರನಿಗೆ ದಹನ ಸಂಸ್ಕಾರ

ಶ್ರೀರಾಮನು ದೂತರ ಮೂಲಕ ರಾವಣ ನಿಧನದ ವೃತ್ತಾಂತವನ್ನು ಲಂಕೆಯಲ್ಲಿದ್ದ ರಾವಣನ ಅಂತಃಪುರದವರಿಗೆ ಹೇಳಿಕಳುಹಿಸಿದನು. ಅದನ್ನು ಕೇಳುತ್ತಲೆ ಅವರೆಲ್ಲರೂ "ಹಾ ನಾಥ ! ಹಾ ರಾಜಪುತ್ರ !" ಎಂದು ಒರಲುತ್ತಾ ರಣಭೂಮಿಗೆ ಹೊರಟು ಬಂದರು. ರಕ್ತದಿಂದ ನೆನೆದ ರಣಭೂಮಿಯಲ್ಲಿ ಕಾಲು ಜಾರುವುದನ್ನೂ ಕೆಸರಿನಲ್ಲಿ ನಾಟಿದ್ದ ಅಲಗುಗಳು ಕಾಲಿಗೆ ನಾಟುವುದನ್ನೂ ಲಕ್ಷಿಸದೆ ಅವರು ರಾವಣನ ಶವದ ಬಳಿಗೆ ಓಡಿಬಂದರು. ಆತನನ್ನು ಕಾಣುತ್ತಲೆ ಅವರು ಮುರಿದ ಬಳ್ಳಿಗಳಂತೆ ಆತನ ದೇಹದ ಮೇಲೆ ಬಿದ್ದು ಕಣ್ಣೀರಿನಿಂದ ಆತನ ಮೃತಕಳೇಬರವನ್ನು ತೋಯಿಸಿದರು. ಯಾರು ದೇವೇಂದ್ರನನ್ನೇ ನಡುಗಿಸಿದ್ದನೊ, ಯಾವನಿಗೆ ಯಮನೂ ಸಹ ಬೆದರಿ ಬೆವರಿ ಹೋಗುತ್ತಿದ್ದನೊ, ಯಾರು ರಾಜರಾಜನಾದ ಕುಬೇರನಿಂದ ಪುಷ್ಪಕ ವಿಮಾನವನ್ನು ಕಸಿದುಕೊಂಡಿದ್ದನೊ, ಯಾರ ಹೆಸರನ್ನು ಕೇಳಿದರೆ ಮೂರು ಲೋಕವೂ ಭಯದಿಂದ ನಡುಗುತ್ತಿದ್ದಿತೊ ಅಂತಹ ಶೂರನು ದಿಕ್ಕಿಲ್ಲದೆ ಅನಾಥನಂತೆ ರಣರಂಗದಲ್ಲಿ ಮಡಿದು ಮಲಗಿದ್ದನು. ಆತನ ಹಿಂದಿನ ಶೌರ್ಯ ವೈಭವಗಳನ್ನೆಲ್ಲಾ ಅವನ ರಾಣಿಯರು ಹಾಡಿಕೊಂಡು ಅಳುತ್ತಾ ತಮ್ಮ ಪಾಡನ್ನು ನೆನೆದು ಮರುಗಿದರು.

ರಾಣಿಯರೆಲ್ಲರೂ ರಾವಣೇಶ್ವರನ ಶವದ ಸುತ್ತಲೂ ಮುತ್ತಿಕೊಂಡು ಬಿಕ್ಕಿಬಿಕ್ಕಿ ಅಳುತ್ತಿರುವಾಗ ಪಟ್ಟದ ರಾಣಿಯಾದ ಮಂಡೋದರಿ ದೀನವದನಳಾಗಿ ಅಲ್ಲಿಗೆ ಬಂದಳು. ಗಂಡನ ಶವವನ್ನು ಕಾಣುತ್ತಲೆ ಆಕೆ ಕುಸಿದು ಕುಪ್ಪೆಯಾಗಿ ಕುಳಿತು ಕಣ್ಣೀರುಗರೆಯುತ್ತಾ "ಅಯ್ಯೋ ಮಹಾನುಭಾವ, ಕುಬೇರನ ತಮ್ಮನಾದ ನೀನು ಕನಲಿ ನಿಂತರೆ ದೇವೇಂದ್ರನೆ ನಿನ್ನೆದುರು ಸುಳಿಯಲು ಹೆದರುತ್ತಿದ್ದನಲ್ಲವೆ ? ಅಂಥ ವೀರಾಧಿವೀರನಾದ ನೀನು ಕೇವಲ ಮನುಷ್ಯಮಾತ್ರನಾದ ಶ್ರೀರಾಮನಿಗೆ ಸೋತು ಸತ್ತೆಯಾ ? ಇದೇನು ನಾಚಿಕೆಗೇಡು ? ಮೂರುಲೋಕಗಳನ್ನೂ ಗೆದ್ದ ವೀರನಾದ ನೀನು ಅರಣ್ಯವಾಸಿಯಾದ ಒಬ್ಬ ಮಾನವನಿಗೆ ಸೋತುದಾದರೂ ಹೇಗೆ ? ಇದುವರೆಗೆ ಸೋಲನ್ನೆ ಕಾಣದಿದ್ದ ನಿನಗೆ ಸೋಲಾಯಿತೆಂದರೆ ನಂಬಿಕೆಯೆ ಹುಟ್ಟಲೊಲ್ಲದು. ಈ ರಾಮಚಂದ್ರನು ನಿಜವಾಗಿ ಮಾನವನಲ್ಲ. ಖರಾಸುರನನ್ನು ಕೊಂದಾಗಲೆ ಇದು ನಿಶ್ಚಯವಾದಂತಾಯಿತು. ವಾನರನೊಬ್ಬನು ಲಂಕೆಯನ್ನು ಪ್ರವೇಶಿಸಿದುದೂ ವಾನರರು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದುದೂ ಶ್ರೀರಾಮನು ಮಾನವನಲ್ಲವೆಂಬುದಕ್ಕೆ ಪ್ರತ್ಯಕ್ಷ ಪ್ರಮಾಣಗಳು. ಶ್ರೀರಾಮನು ಮಹಾವಿಷ್ಣುವೇ ನಿಶ್ಚಯ. ಆತನೊಡನೆ ದ್ವೇಷ ಬೇಡವೆಂದು ನಾನು ಹೇಳಿದ ಮಾತು ನಿನಗೆ ರುಚಿಸದೆ ಹೋಯಿತು. ಪತಿವ್ರತೆಯಾದ ಆ ಸೀತೆಯನ್ನು

ಕಾಮಿಸಿ, ಆಕೆಯನ್ನು ಕದ್ದು ತಂದು ನಿನ್ನ ಮೃತ್ಯುವನ್ನು ನೀನೇ ತಂದುಕೊಂಡೆ. ಹೋಗಲಿ. ನಿನ್ನ ಇಷ್ಟವಾದರೂ ಈಡೇರಿತೆ ? ಅದೂ ಇಲ್ಲ. ನಿನ್ನನ್ನು ನಿಜವಾಗಿಯೂ ಕೊಂದವನು ಶ್ರೀರಾಮನಲ್ಲ, ಆ ಸೀತೆಯೇ! ಅವಳಿಗಿಂತಲೂ ರೂಪವತಿಯರಾದ ರಾಣಿಯರು ನಿನಗೆ ಎಷ್ಟು ಜನರಿರಲಿಲ್ಲ ? ಕಾಮದಿಂದ ಕುರುಡನಾಗಿದ್ದ ನಿನಗೆ ಅವರು ಕಣ್ಣಿಗೆ ಬೀಳಲೆ ಇಲ್ಲ. ವಂಶದಿಂದಾಗಲಿ ದಾಕ್ಷಿಣ್ಯದಿಂದಾಗಲಿ ಆ ಮೈಥಿಲಿ ನಿನಗೆ ಹೇಗೆ ಹೆಚ್ಚಿನವಳಾಗಿ ಕಂಡುಬಂದಳು ? ಈ ಸೀತಾರೂಪದ ಮೃತ್ಯುವನ್ನು ಕರೆತಂದು ಮನೆಯಲ್ಲಿಟ್ಟುಕೊಂಡೆ. ಈಗ ಅವಳು ತನ್ನ ಗಂಡನೊಡನೆ ವಿಹರಿಸುವಳು. ಮಂದಭಾಗ್ಯಳಾದ ನಾನಾದರೊ ಭಯಂಕರವಾದ ದುಃಖಸಾಗರದಲ್ಲಿ ಮುಳುಗಿಹೋದೆ. ಮಹೇಂದ್ರನ ನಂದನೋದ್ಯಾನದಲ್ಲಿ ನಿನ್ನೊಡನೆ ವಿಮಾನದಲ್ಲಿ ಕುಳಿತು ವಿಹರಿಸುತ್ತಿದ್ದ ನಾನು ಈಗ ನಿನ್ನ ವಧೆಯಿಂದ ಕಾಮಭೋಗಗಳಿಗೆ ಎರವಲಾದೆನು. ಪಾನಭೂಮಿಗಳಲ್ಲಿ ನಗುನಗುತ್ತಾ ಮಾತನಾಡುತ್ತಿದ್ದ ನಿನ್ನ ಶ್ರೀಮುಖ ಇಂದು ಕಾಂತಿಹೀನವಾಯಿತಲ್ಲಾ ! ಅಯ್ಯೊ ಪ್ರಭು ನನ್ನನ್ನು ವಿಧವೆಯನ್ನಾಗಿ ಮಾಡಿ ನೀನು ಹೊರಟುಹೋದೆಯಲ್ಲವೆ ? 'ತಂದೆ ಮಯಾಸುರ,ಕೈಹಿಡಿದನು ಲಂಕೇಶ್ವರ'ಎಂದು ಹೆಮ್ಮೆಯಿಂದಿದ್ದ ನಾನು ಈಗ ಶತ್ರುಗಳ ಹಾಸ್ಯಕ್ಕೆ ಗುರಿಯಾದೆನಲ್ಲವೆ ? ಮಿಂಚಿನೊಡಗೂಡಿದ ಮುಗಿಲಿನಂತೆ ಚಲಿಸುತ್ತಿದ್ದ ದೇಹ ಈಗ ನಿಶ್ಚಲವಾಗಿ ನೆಲದ ಮೇಲೆ ಬಿದ್ದಿರುವುದನ್ನು ನೋಡಿ ಹೇಗೆ ಸಹಿಸಲಿ ? ಅಕಟಕಟಾ! ಈ ನಿನ್ನ ಸಾವೆಂಬುದು ನಿಜವಿರಬಹುದೆ ? ಅಥವಾ ನಾನು ಸ್ವಪ್ನವನ್ನು ಕಾಣುತ್ತಿರುವೆನೆ ? ಯಮನಿಗೂ ಯಮನಂತಿದ್ದ ನೀನು ಮೃತಿ ಹೊಂದುವುದೆಂದರೇನು ? ಇಲ್ಲ. ನೀನು ಮೃತಿ ಹೊಂದಿರಲಾರೆ. ಆದರೆ ಸತ್ತು ಬಿದ್ದಿರುವ ನಿನ್ನನ್ನು ಕಣ್ಣಾರೆ ಕಾಣುತ್ತಿರುವೆನಲ್ಲವೆ ? ಇದನ್ನು ಕಂಡೂ ನಾನು ಹೇಗೆ ಪ್ರಾಣಗಳನ್ನು ಧರಿಸಿರಲಿ ? ಇಂದ್ರಜಿತ್ತುವನ್ನು ಲಕ್ಷ್ಮಣನು ಸಂಹರಿಸಿದಾಗಲೆ ನನ್ನ ಜೀವಕ್ಕೆ ದೊಡ್ಡ ಪೆಟ್ಟುಬಿದ್ದಂತಾಯಿತು. ಈಗ ನೀನು ಸತ್ತುದರಿಂದ ನನ್ನ ಬಾಳಿನ ಸಮಾಪ್ತಿಯಾದಂತಾಯಿತು. ಉಳಿದವರು ಸತ್ತುದಕ್ಕಾಗಿ ಆದ ಸಂತಾಪವನ್ನೆಲ್ಲಾ ನಿನ್ನನ್ನು ಕಂಡು ಮರೆತಿದ್ದೆ. ನೀನೊಬ್ಬ ನಿದ್ದರೆ ನನಗೆ ಎಲ್ಲವೂ ಇದ್ದಂತೆಯೆ. ನೀನಿಲ್ಲದೆ ಕ್ಷಣಕಾಲವೂ ನಾನು ಜೀವಿಸಿರಲಾರೆ. ಓ ನನ್ನ ದೊರೆ, ನನ್ನನ್ನೂ ನಿನ್ನೊಡನೆ ಕರೆದೊಯ್ಯಿ. ಸ್ವಾಮಿ, ಅದೇಕೆ ನನ್ನೊಡನೆ ಮಾತನಾಡದಿರುವೆ ? ಮೊಗದ ತೆರೆಯನ್ನು ತೆಗೆದುಹಾಕಿ ಈ ರಣಭೂಮಿಗೆ ನಡೆದು ಬಂದುದರಿಂದ ನಿನಗೆ ಕೋಪವೆ ? ಇತ್ತನೋಡು. ನಿನ್ನ ರಾಣಿಯರೆಲ್ಲರೂ ನನ್ನ ಹಾಗೆಯೆ ಮಾಡಿದ್ದಾರೆ. ಗೋಳಿಡುತ್ತಿರುವ ನಮ್ಮೆಲ್ಲರನ್ನೂ ಸಂತೈಸಬೇಡವೆ ! ಅಯ್ಯೊ ಮಹಾರಾಜ ! ಈ ಸೀತೆಯ ದೆಸೆಯಿಂದ ಎಂತಹ ಅನರ್ಥ ಪ್ರಾಪ್ತವಾಯಿತು ! ರಾಕ್ಷಸ ಕುಲವೆ ದಿಕ್ಕಿಲ್ಲದಂತೆ ಹಾಳಾಗಿ ಹೋಯಿತು. ಆಯಿತು; ಇನ್ನು ನಿನಗಾಗಿ ನಾನು ಅತ್ತು ಏನು ಪ್ರಯೋಜನ ? ನಿನ್ನ ಪುಣ್ಯವನ್ನೊ ಪಾಪವನ್ನೊ ಕೊಂಡು ನಿನ್ನ ದಾರಿಯನ್ನು ನೀನು ಹಿಡಿದೆ. ನಿನಗಾಗಿ ನಾನೇಕೆ ದುಃಖಿಸಬೇಕು ? ಆದರೆ, ನಿನ್ನ ವಿಯೋಗದಿಂದ ನನಗಾಗಿ ನಾನು ಅಳಬೇಕಾಗಿದೆ. ಕಾರ್ಮುಗಿಲಂತಿರುವ ದೇಹವುಳ್ಳ ಹೇ ರಾವಣೇಶ್ವರಾ ?

ಪೀತಾಂಬರದಿಂದ ಅಲಂಕೃತನಾದ ಹೇ ದಿವ್ಯದೇಹ! ನಿನ್ನ ದೇಹವೆಲ್ಲವೂ ರಕ್ತದಿಂದ ನೆನೆದು ಮಣ್ಣುಮೆತ್ತಿ ನೆಲದಲ್ಲಿ ಹೊರಳಾಡುತ್ತಿದೆಯಲ್ಲಾ! ನಾನಿದನ್ನು ಈ ಪಾಪಿ ಕಣ್ಣುಗಳಿಂದ ನೋಡಲಾರೆ!" ಎಂದು ಹಲುಬಿ ಹಾಗೆಯೆ ಮೂರ್ಛೆಯಿಂದ ನೆಲಕ್ಕೆ ಬಿದ್ದಳು.

ಮೂರ್ಛೆಗೊಂಡ ರಾಣಿಯನ್ನು ಕಂಡು ಆಕೆಯ ಸವತಿಯರೆಲ್ಲರೂ ಗಟ್ಟಿಯಾಗಿ ಅಳುತ್ತಾ ಆಕೆಯ ಬಳಿಗೆ ಬಂದು "ದೇವಿ, ಅತ್ತರೇನಾದಂತಾಯಿತು? ಸಂತೈಸಿಕೊ ಸಂತೈಸಿಕೊ!" ಎಂದು ಸಮಾಧಾನ ಮಾಡಿದರು. ಸಮಾಧಾನದ ನುಡಿಗಳಿಂದ ಆಕೆಯ ದುಃಖ ಮತ್ತಷ್ಟು ಹೆಚ್ಚಿತು. ಆಕೆ ಗಟ್ಟಿಯಾಗಿ ಅಳತೊಡಗಿದಳು. ಆ ಸಮಯಕ್ಕೆ ಸರಿಯಾಗಿ ಶ್ರೀರಾಮಚಂದ್ರನು ಅಲ್ಲಿಗೆ ಬಂದು ವಿಭೀಷಣನೊಡನೆ "ರಾಕ್ಷಸೇಶ್ವರಾ, ನಿಮ್ಮಣ್ಣನಿಗೆ ಅಂತ್ಯಕ್ರಿಯೆಗಳನ್ನು ನಡಸು; ಈ ಸ್ತ್ರೀಯರನ್ನೆಲ್ಲಾ ಸಮಾಧಾನಮಾಡಿ ಕಳುಹಿಸು" ಎಂದನು. ವಿಭೀಷಣನು ಅದರಂತೆ ಸ್ತ್ರೀಯರನ್ನು ದೂರವಾಗುವಂತೆ ತಿಳುಹಿಸಿ, ಗಂಧದ ಮರಗಳಿಂದಲೂ ಪರಿಮಳದ್ರವ್ಯಗಳಿಂದಲೂ ಕೂಡಿದ ಚಿತೆಯನ್ನು ಮಂತ್ರೋಚ್ಚಾರಪೂರ್ವಕವಾಗಿ ನಿರ್ಮಿಸಿದನು. ಅನಂತರ ಮಂತ್ರಾಗ್ನಿಯನ್ನು ರಚಿಸಿ ಶಾಸ್ತ್ರೋಕ್ತವಾಗಿ ಆತನು ಭ್ರಾತೃವಿನ ದಹನ ಸಂಸ್ಕಾರಗಳನ್ನು ನಡಸಿದನು. ತರುವಾಯ ಸ್ನಾನಮಾಡಿ ಮೃತನ ಆತ್ಮಕ್ಕೆ ತೃಪ್ತಿಯಾಗುವಂತೆ ತಿಲೋದಕವನ್ನು ಕೊಟ್ಟು, ಆಮೇಲೆ ರಾಣಿವಾಸದವರನ್ನು ಮೃದು ವಚನಗಳಿಂದ ಸಂತೈಸಿ, ಮನೆಗೆ ಹಿಂದಿರುಗುವಂತೆ ಮಾಡಿದನು.

ಶತ್ರುಸಂಹರಣದ ಮಹಾಕಾರ್ಯವನ್ನು ಸಾಧಿಸಿ ಸಂತುಷ್ಟನಾದ ಶ್ರೀರಾಮಚಂದ್ರನು ದಹನಕ್ರಿಯೆಯನ್ನು ನಡೆಸಿಬಂದು ತನಗೆ ನಮಸ್ಕರಿಸಿದ ವಿಭೀಷಣನನ್ನು ಆಶೀರ್ವದಿಸಿದನು.

---

೨೬

# ಅಗ್ನಿಪರೀಕ್ಷೆ

ಮಹಾಕಾರ್ಯವನ್ನು ಸಾಧಿಸಿ ಸಂತುಷ್ಟಾಂತರಂಗನಾಗಿದ್ದ ಶ್ರೀರಾಮನು ತನ್ನ ಬಳಿಯಲ್ಲಿ ಕುಳಿತಿದ್ದ ಲಕ್ಷ್ಮಣನನ್ನು ಕುರಿತು "ಸೌಮಿತ್ರಿ, ನನ್ನಲ್ಲಿ ಭಕ್ತನೂ ಅನುರಕ್ತನೂ ಆಗಿರುವ ಈ ವಿಭೀಷಣನನ್ನು ಲಂಕಾರಾಜ್ಯದಲ್ಲಿ ಅಭಿಷೇಕಿಸು. ಅದನ್ನು ಕಣ್ಣಾರೆ ಕಂಡು ಆನಂದಿಸುತ್ತೇನೆ" ಎಂದನು. ಲಕ್ಷ್ಮಣನು ಮಹಾಪ್ರಸಾದವೆಂದು ಹೇಳಿ, ಒಡನೆಯೇ ಸಪ್ತಸಾಗರಗಳಿಂದಲೂ ಪುಣ್ಯನದಿಗಳಿಂದಲೂ ತೀರ್ಥವನ್ನು ತರುವಂತೆ ವಾನರರಿಗೆ ಆಜ್ಞಾಪಿಸಿದನು. ಕ್ಷಣಮಾತ್ರದಲ್ಲಿ ಅವರು ಆ ಕೆಲಸವನ್ನು ಸಾಧಿಸಿದರು. ಅನಂತರ ಲಕ್ಷ್ಮಣಸ್ವಾಮಿ ವಿಭೀಷಣನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಮಂಗಳೋದಕದಿಂದ ಶಾಸ್ತ್ರೋಕ್ತವಾಗಿ ಮಿತ್ರರೆಲ್ಲರ ಸಮಕ್ಷ ಆತನಿಗೆ ಲಂಕಾ ರಾಜ್ಯಾಭಿಷೇಕವನ್ನು ಮಾಡಿದನು. ಹೀಗೆ ಅಭಿಷಿಕ್ತನಾದ ಆ ರಾಕ್ಷಸೇಶ್ವರನನ್ನು ಕಂಡು, ಆತನ ಮಂತ್ರಿಗಳೂ ಆಶ್ರಿತರೂ ಆನಂದಿಸಿದರು. ಅವರು ತಂದೊಪ್ಪಿಸಿದ ಪುಷ್ಪಗಳನ್ನೂ ಕಾಣಿಕೆಗಳನ್ನೂ ತೆಗೆದುಕೊಂಡು ವಿಭೀಷಣನು ಅವುಗಳಿಂದ ಶ್ರೀರಾಮನನ್ನು ಪೂಜಿಸಿದನು. ಶ್ರೀರಾಮನಾದರೊ ಆ ರಾಕ್ಷಸರಾಜನಿಗೆ ಶ್ರೇಯಸ್ಸನ್ನು ಕೋರುವುದಕ್ಕಾಗಿಯೆ ಅವೆಲ್ಲವನ್ನೂ ಸ್ವೀಕರಿಸಿದನು.

ವಿಭೀಷಣನ ರಾಜ್ಯಾಭಿಷೇಕವಾದ ಮೇಲೆ ಶ್ರೀರಾಮನು ತನ್ನ ಬಳಿಯಲ್ಲಿಯೆ ಬದ್ಧಾಂಜಲಿಯಾಗಿ ನಿಂತಿದ್ದ ಹನುಮಂತನನ್ನು ಕುರಿತು "ಮಾರುತಿ, ಈ ರಾಕ್ಷಸೇಶ್ವರನಾದ ವಿಭೀಷಣನ ಅನುಮತಿಯಿಂದ ಲಂಕಾನಗರಕ್ಕೆ ಹೋಗಿ, ಅಲ್ಲಿ ಅರಮನೆಯಲ್ಲಿರುವ ಸೀತಾದೇವಿಗೆ ನಮ್ಮ ವಿಜಯದ ಸಮಾಚಾರವನ್ನೂ ರಾವಣನ ಮರಣವೃತ್ತಾಂತವನ್ನೂ ತಿಳಿಸಿ, ಆಕೆಯ ಸಂದೇಶವನ್ನು ತೆಗೆದುಕೊಂಡು ಬಾ" ಎಂದು ಹೇಳಿದನು. "ಮಹಾಪ್ರಸಾದ"ವೆಂದು ಹೇಳಿ ಮಾರುತಿ ಒಡನೆಯೆ ರಾಕ್ಷಸರಾಜನ ಅನುಮತಿ ಪಡೆದು ಲಂಕಾನಗರಾಭಿಮುಖನಾದನು. ಆತನು ನಗರವನ್ನು ಪ್ರವೇಶಿಸುತ್ತಿದ್ದಂತೆಯೆ ಜನರು ಆತನನ್ನು ಆದರದಿಂದ ಇದಿರುಗೊಂಡು ಅರಮನೆಗೆ ಕರೆದೊಯ್ದರು. ಆತನು ಅರಮನೆಯನ್ನು ಪ್ರವೇಶಿಸಿ, ರಾಕ್ಷಸಿಯರಿಂದ ಪರಿವೇಷ್ಟಿತಳಾಗಿದ್ದ ಸೀತಾಮಾತೆಯನ್ನು ಕಂಡು ಆಕೆಗೆ ದೀರ್ಘದಂಡ ನಮಸ್ಕಾರ ಮಾಡಿದನು. ಆತನನ್ನು ಕಾಣುತ್ತಲೆ ಸೀತಾದೇವಿಯೂ ಪರಮಾನಂದಭರಿತೆಯಾಗಿ ಆತನನ್ನು ಆಶೀರ್ವದಿಸಿದಳು.

ಹನುಮಂತನು ಸೀತಾದೇವಿಗೆ ಶ್ರೀರಾಮನ ಸಂದೇಶವನ್ನು ತಿಳಿಸುತ್ತಾ "ದೇವಿ, ಶತ್ರುವಾದ ರಾವಣನನ್ನು ಸಂಹರಿಸಿ ಪ್ರವರ್ಧಿಸುತ್ತಿರುವ ಶ್ರೀರಾಮಚಂದ್ರನು ತಮ್ಮ

ನೊಡನೆಯೂ ಕಪಿನಾಯಕರೊಡನೆಯೂ ಸುಕ್ಷೇಮವಾಗಿರುವನು. ಆತನು ನಿನ್ನನ್ನು ಸಮಾಧಾನಚಿತ್ತಳಾಗಿರುವಂತೆ ತಿಳಿಸಿದ್ದಾನೆ. ನೀನಿನ್ನು ರಾವಣನ ಮನೆಯಲ್ಲಿರುವೆನೆಂದು ಖೇದಗೊಳ್ಳಬೇಕಾದುದಿಲ್ಲ. ಲಂಕಾರಾಜ್ಯವೆಲ್ಲವೂ ನಮ್ಮ ಮಿತ್ರನಾದ ವಿಭೀಷಣನ ಅಧೀನದಲ್ಲಿರುವುದು. ಆದ್ದರಿಂದ ನೀನು ಸ್ವಂತ ಮನೆಯಲ್ಲಿದ್ದಂತೆಯೆ ಸುಖವಾಗಿರ ಬಹುದೆಂದು ಆತನು ನಿಮಗೆ ತಿಳಿಸಹೇಳಿರುವನು" ಎಂದನು. ಮಾರುತಿಯ ಮಾತು ಗಳನ್ನು ಕೇಳಿ ಸೀತಾದೇವಿಗೆ ಸಂತೋಷದಿಂದ ಮಾತೇ ಹೊರಡಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಸಂವರಿಸಿಕೊಂಡು ಗದ್ಗದಸ್ವರದಿಂದ ಆಕೆ "ಮಾರುತಿ, ಸ್ವಾಮಿಯ ವಿಜಯ ವಾರ್ತೆಯನ್ನು ತಂದ ನಿನ್ನನ್ನು ಹೇಗೆ ಪುರಸ್ಕರಿಸಬೇಕೆಂಬುದೆ ನನಗೆ ತೋಚುತ್ತಿಲ್ಲ. ಅದಕ್ಕೆ ತಕ್ಕ ಪುರಸ್ಕಾರವೆಂಬುದು ಜಗತ್ತಿನಲ್ಲೆ ಇಲ್ಲ!" ಎಂದಳು.

ಸೀತಾಮಾತೆಯ ಮಧುರವಾದ ಮಾತುಗಳಿಂದ ಅತ್ಯಂತ ಆನಂದಿತನಾದ ಆಂಜನೇಯನು ಆಕೆಗೆ "ಅಮ್ಮಾ, ನೀನಾಡಿದ ಮಾತುಗಳೆ ಅನರ್ಘ್ಯವಾದುವು. ನಾನು ದೇವ ರಾಜ್ಯವನ್ನು ಪಡೆದವನಿಗಿಂತಲೂ ಹೆಚ್ಚಾಗಿ ಸಂತುಷ್ಟನಾಗಿದ್ದೇನೆ" ಎಂದನು. ಆತನ ನುಡಿಗಳಿಂದ ಸುಪ್ರೀತೆಯಾದ ಸೀತಾದೇವಿ ಆತನನ್ನೂ ಆತನ ಸದ್ಗುಣಗಳನ್ನೂ ಪ್ರಶಂಸಿಸಿದಳು. ಆಗ ಹನುಮಂತನು ಆಕೆಯನ್ನು ಕುರಿತು "ಓ ಮಾತೆ, ನೀನು ಅಪ್ಪಣೆ ಕೊಟ್ಟರೆ, ನಿನ್ನನ್ನು ಹಿಂಸಿಸಿದ ಈ ರಾಕ್ಷಸಿಯರನ್ನೆಲ್ಲ ಈಗಲೇ ಹೊಸಗಿಹಾಕಿ ಬಿಡುತ್ತೇನೆ. ಪತಿಗತಪ್ರಾಣಳಾದ ನಿನಗೆ ಈ ರಕ್ಕಸಿಯರು ಕೊಟ್ಟ ಸಂಕಟ ಅಷ್ಟಿಷ್ಟಲ್ಲ. ಕ್ರೂರೆಯರಾದ ಇವರನ್ನೆಲ್ಲ ಕೊಂದುಬಿಡಬೇಕೆಂಬ ಬಯಕೆ ನನ್ನ ಮನಸ್ಸಿನಲ್ಲಿ ಉದಿಸಿದೆ. ನೀನು ಆ ಕಾರ್ಯಕ್ಕೆ ಸಮ್ಮತಿಸುವ ವರವನ್ನು ನನಗೆ ದಯಪಾಲಿಸು" ಎಂದನು. ಆದರೆ ದಯಾಮಯಳಾದ ಸೀತಾಮಾತೆ ಅದಕ್ಕೆ ಸಮ್ಮತಿಸಲಿಲ್ಲ. "ಅಯ್ಯಾ ಮಾರುತಿ, ಇವರೆಲ್ಲರೂ ತಮ್ಮ ರಾಜನ ಅಪ್ಪಣೆಯನ್ನು ನೆರವೇರಿಸುವವರು, ದಾಸಿಯರು. ಆದ್ದರಿಂದ ಇವರಲ್ಲಿ ಕೋಪಗೊಳ್ಳುವುದು ಯೋಗ್ಯವಲ್ಲ. ನನ್ನ ಪಾಪ ಕರ್ಮ ನನ್ನನ್ನು ಕಾಡಿಸಿತು. ಆದ್ದರಿಂದ ಇವರನ್ನೆಲ್ಲಾ ಕ್ಷಮಿಸಿಬಿಡು" ಎಂದಳು. ದೇವಿಯ ಈ ಮಂಗಳ ನುಡಿಗಳನ್ನು ಕೇಳಿ ಹನುಮಂತನು ಆಕೆಗೆ ಭಕ್ತಿಯಿಂದ ನಮಿಸಿ "ಅಮ್ಮಾ, ಶ್ರೀರಾಮ ಪತ್ನಿಯಾದ ನೀನು ನಿನ್ನ ಯೋಗ್ಯತೆಗೆ ತಕ್ಕಂತೆ ನುಡಿದೆ. ಈಗ ಶ್ರೀರಾಮನಿಗೆ ನಿನ್ನಿಂದ ಯಾವ ಸಂದೇಶವನ್ನು ಒಯ್ಯಲಿ?" ಎಂದು ಕೇಳಿದನು. ಪತಿವ್ರತಾಶಿರೋಮಣಿಯಾದ ಆಕೆ "ಹೇ ವಾನರಪುಂಗವ, ನಾನು ನನ್ನ ಪತಿಯನ್ನು ನೋಡಲಪೇಕ್ಷಿಸುತ್ತೇನೆ" ಎಂದು ಮಾತ್ರ ಹೇಳಿದಳು. ಹನುಮಂತನು ಆಕೆಯನ್ನು ಕುರಿತು "ಮಾತೆ ಶಚೀದೇವಿ ದೇವೇಂದ್ರನನ್ನು ಕಾಣುವಂತೆ, ನೀನು ಕ್ಷಿಪ್ರದಲ್ಲಿಯೆ ಸೋದರನೊಡನಿರುವ ರಾಮಚಂದ್ರಮೂರ್ತಿಯನ್ನು ಕಾಣುವೆ" ಎಂದು ಹೇಳಿ, ಆಕೆಗೆ ನಮಸ್ಕರಿಸಿ, ಶ್ರೀರಾಮನ ಬಳಿಗೆ ಹಿಂದಿರುಗಿದನು.

ಹನುಮಂತನಿಂದ ಸೀತಾದೇವಿ ತನ್ನನ್ನು ಕಾಣಲು ಎಷ್ಟು ಆತುರಳಾಗಿರುವ ಳೆಂಬುದನ್ನು ಕೇಳಿ ಶ್ರೀರಾಮನು ಕಣ್ಣುಗಳಿಂದ ನೀರು ಸುರಿಸುತ್ತಾ ಕ್ಷಣಕಾಲ

ಧ್ಯಾನಾಸಕ್ತನಾದನು. ತರುವಾಯ ನಿಟ್ಟುಸಿರೊಂದನ್ನು ಬಿಟ್ಟು ಪಕ್ಕದಲ್ಲಿದ್ದ ವಿಭೀಷಣ ನಿಗೆ ಒಡನೆಯೆ ಸೀತಾದೇವಿಗೆ ಮಂಗಳಸ್ನಾನ ಮಾಡಿಸಿ ಅಲ್ಲಿಗೆ ಕರೆತರುವಂತೆ ಆಜ್ಞಾಪಿಸಿದನು. ಆತನ ಅಪ್ಪಣೆಯಂತೆ ಆ ರಾಕ್ಷಸ ರಾಜನು ಸೀತಾದೇವಿಯ ಬಳಿಗೆ ಹೋಗಿ ಶ್ರೀರಾಮನ ಅಪ್ಪಣೆಯನ್ನು ಆಕೆಗೆ ತಿಳಿಸಿದನು. ಅದನ್ನು ಕೇಳಿ ದೇವಿ "ಅಯ್ಯಾ ಮಹನೀಯನೆ, ನನಗೆ ಸ್ನಾನವೂ ಬೇಡ, ಭೂಷಣಗಳೂ ಬೇಡ. ಅವುಗಳಿಲ್ಲ ದೆಯೇ ನನ್ನ ಪತಿಯನ್ನು ಕಾಣಬಯಸುವೆನು" ಎಂದಳು. ಆದರೆ ವಿಭೀಷಣನು ಅದಕ್ಕೆ ಒಪ್ಪಲಿಲ್ಲ: ಶ್ರೀರಾಮನ ಅಪ್ಪಣೆಯನ್ನು ಪಾಲಿಸುವುದೇ ಕರ್ತವ್ಯವೆಂದನು. ಪತಿಪರಾಯಣಳಾದ ಸೀತಾದೇವಿ ಹಾಗೆಯೆ ಆಗಲೆಂದು ಮಂಗಳಸ್ನಾನಮಾಡಿ, ದಿವ್ಯದುಕೂಲಗಳನ್ನೂ ಆಭರಣಗಳನ್ನೂ ಧರಿಸಿ ಪಲ್ಲಕ್ಕಿಯಲ್ಲಿ ಕುಳಿತು ಶ್ರೀರಾಮನ ಬಳಿಗೆ ಬಂದಳು.

ಪತ್ನಿಯನ್ನು ಕಾಣುತ್ತಲೆ ಶ್ರೀರಾಮನ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳು ಉದಯಿಸಿದುವು. ಬಹುದಿನಕ್ಕೆ ತನ್ನ ನಲ್ಲೆಯನ್ನು ಕಂಡುದಕ್ಕೆ ಸಂತೋಷ, ತಾನು ಬದುಕಿದ್ದೂ ಇದುವರೆಗೂ ಆಕೆ ಕಷ್ಟಕ್ಕೊಳಗಾದುದಕ್ಕಾಗಿ ಕರುಣೆ, ಇವಳು ಇಷ್ಟು ದಿನಗಳೂ ವಿಷಯಲಂಪಟನಾದ ರಾವಣನ ಮನೆಯಲ್ಲಿ ಇದ್ದವಳಲ್ಲವೆ ಎಂಬುದಾಗಿ ರೋಷ ಏಕಕಾಲದಲ್ಲಿ ಕಾಣಿಸಿಕೊಂಡುವು. ಆತನ ಅಪ್ಪಣೆಯಂತೆ ಸೀತಾದೇವಿ ಪಲ್ಲಕ್ಕಿಯನ್ನಿಳಿದು ಆತನ ಬಳಿಗೆ ನಡೆದುಕೊಂಡು ಹೋದಳು. ಆಕೆ ಬರುತ್ತಿದ್ದ ಮಾರ್ಗದಲ್ಲಿದ್ದ ವಾನರರನ್ನೂ ರಾಕ್ಷಸರನ್ನೂ ರಾಜದೂತರು ದೂರ ಸರಿಸುತ್ತಿರಲು ಶ್ರೀರಾಮನು ಅವರನ್ನು ಗದರಿಸಿ "ಆ ಕಾರ್ಯವನ್ನು ನಿಲ್ಲಿಸಿ. ಇಲ್ಲಿ ನಿಂತಿರುವವರೆಲ್ಲಾ ನನ್ನ ಆಪ್ತ ವರ್ಗಕ್ಕೆ ಸೇರಿದವರು. ಇವರ ಇದಿರಿಗೆ ಸೀತೆ ಬರುವುದರಲ್ಲಿ ಏನೂ ತಪ್ಪಿಲ್ಲ. ಅಲ್ಲದೆ ಸ್ತ್ರೀಯರಿಗೆ ನಡತೆಯೆಂಬುದೆ ಆಭರಣವೇ ಹೊರತು ಬೇರೆಯ ಹೊದಿಕೆಗಳೂ ಆಭರಣಗಳೂ ಅರ್ಥವಿಲ್ಲದವು. ದುಃಸ್ಥಿತಿಯಲ್ಲಿರುವಾಗ ಸ್ತ್ರೀಯರನ್ನು ಪರರು ನೋಡು ವುದರಿಂದ ದೋಷವೇನೂ ಇಲ್ಲ. ಆ ಸ್ಥಿತಿಯಲ್ಲಿರುವ ಸೀತೆ ಈಗ ಎಲ್ಲರ ಇದಿರಿಗೂ ಬರಲಿ" ಎಂದನು. ದುಃಸ್ಥಿತಿಯಲ್ಲಿರುವ ಸೀತೆ ಎಂಬ ಶ್ರೀರಾಮನ ಮಾತುಗಳನ್ನು ಕೇಳಿ ಲಕ್ಷ್ಮಣ ಸುಗ್ರೀವ ಹನುಮಂತ ಮೊದಲಾದವರೆಲ್ಲರೂ ಭಯಭೀತರಾಗಿ ವಿಕಂಪಿಸಿದರು.

ಸೀತಾದೇವಿ ತನಗೆ ಸ್ವಭಾವಸಹಜವಾದ ಲಜ್ಜೆಯಿಂದ ಅಂಗಾಂಗಗಳನ್ನೆಲ್ಲಾ ಒಳಗೆಳೆದುಕೊಳ್ಳುವಂತೆ ಅಡಗಿಸಿಕೊಂಡು ಶ್ರೀರಾಮನ ಬಳಿಗೆ ಬಂದು "ಆರ್ಯಪುತ್ರ!" ಎಂದಷ್ಟು ಮಾತ್ರ ನುಡಿದಳು. ದುಃಖ ಕುತ್ತಿಗೆಯನ್ನು ಒತ್ತಲು ಆಕೆಯಿಂದ ಮುಂದೆ ಮಾತನಾಡುವುದಾಗಲಿಲ್ಲ. ಕಣ್ಣುಗಳಿಂದ ನೀರು ಸುರಿಸುತ್ತಾ ನೀರವವಾಗಿ ಅತ್ತಳು. ಹಾಗೆಯೆ ಒಮ್ಮೆ ತನ್ನ ತಲೆಯನ್ನೆತ್ತಿ ಗಂಡನ ಮುಖವನ್ನು ನೋಡಿದಳು. ಪೂರ್ಣ ಚಂದ್ರನ ಸಮಾನವಾದ ಆ ಮುಖವನ್ನು ಕಾಣುತ್ತಲೆ ಆಕೆಯ ಹೃದಯ ಸಂತೋಷ ದಿಂದ ನಲಿದು ನರ್ತಿಸಿತು. ಅಷ್ಟರಲ್ಲಿ ಶ್ರೀರಾಮನು ಆಕೆಯನ್ನು ಕುರಿತು "ಎಲೈ ಭದ್ರೆ,

ನನ್ನ ಪೌರುಷದಿಂದ ಸಾಧಿಸಬೇಕಾದ ಕಾರ್ಯವನ್ನು ನಾನು ಸಾಧಿಸಿದುದಾಯಿತು. ಶತ್ರುವಾದ ರಾವಣನು ಸತ್ತು ನನ್ನ ರೋಷ ಶಾಂತವಾದಂತಾಯಿತು. ನಾನು ಪಟ್ಟ ಶ್ರಮವೆಲ್ಲವೂ ಅದರಿಂದ ಸಾರ್ಥಕವಾದಂತಾಯಿತು. ನನ್ನ ಪ್ರತಿಜ್ಞೆ ನೆರವೇರಿತು. ಸುಗ್ರೀವ ಹನುಮಂತರು ನನಗಾಗಿ ಪಟ್ಟ ಕಷ್ಟವೂ ಸಾರ್ಥಕವಾಯಿತು. ನನಗೆ ಬರಬಹುದಾಗಿದ್ದ ಅಪಕೀರ್ತಿ ನಿವಾರಣೆಯಾಗಿ ನನ್ನ ಪರಾಕ್ರಮ ಜಗತ್ತಿಗೆ ಅರಿವಾದಂತಾಯಿತು. ನಾನು ಧನ್ಯನಾದೆ!" ಎಂದನು.

ಶ್ರೀರಾಮನ ಮಾತುಗಳನ್ನು ಕೇಳಿ ಸೀತಾದೇವಿ ಬೆದರಿದ ಹೆಣ್ಣು ಜಿಂಕೆಯಂತೆ ನಡುಗುತ್ತಾ ಕಣ್ಣೀರು ಸುರಿಸಿದಳು. ಅದನ್ನು ಕಂಡು ಶ್ರೀರಾಮನ ಕೋಪಾಗ್ನಿ ಆಜ್ಯಾಹುತಿಗೊಂಡಂತೆ ಪ್ರಜ್ವಲಿಸಿತು. ಹುಬ್ಬು ಗಂಟುಹಾಕಿಕೊಂಡು ನಿಷ್ಠುರವಾದ ಧ್ವನಿಯಲ್ಲಿ ಆತನು "ಎಲೆ ಸೀತೆ, ನಾನು ರಾವಣನೊಡನೆ ಯುದ್ಧ ಹೂಡಿದುದು ನಿನಗಾಗಿ ಅಲ್ಲ; ನನ್ನ ಚರಿತ್ರೆಯನ್ನು ಕಾಪಾಡಿಕೊಂಡು ಅಪವಾದವನ್ನು ನಿವಾರಿಸಿಕೊಳ್ಳುವುದಕ್ಕಾಗಿ. ನಿನ್ನ ಚಾರಿತ್ರ ಶುದ್ಧಿಯ ವಿಚಾರದಲ್ಲಿ ನನಗೆ ಸಂದೇಹ ಮೂಡಿರುವುದರಿಂದ ನನ್ನ ಇದಿರಿಗೆ ನಿಂತಿರುವ ನೀನು ಕಣ್ಣುನೋವು ಬಂದವನಿಗೆ ಕಣ್ಣುಕುಕ್ಕುವ ದೀಪದಂತೆ ಅಸಹ್ಯಳಾಗಿರುವೆ. ಆದ್ದರಿಂದ ಎಲೌ ವೈಥಿಲಿ, ನಾನು ನಿನಗೆ ಈಗ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿರುತ್ತೇನೆ. ನೀನು ನಿನ್ನ ಮನಬಂದೆಡೆಗೆ ಹೊರಟು ಹೋಗು. ಶತ್ರುವಿನ ಮನೆಯಲ್ಲಿ ಇಷ್ಟು ದೀರ್ಘಕಾಲ ನೆಲಸಿದ್ದ ಸ್ತ್ರೀಯನ್ನು ಸದ್ವಂಶದಲ್ಲಿ ಹುಟ್ಟಿದ ಯಾವ ಪುರುಷನು ತಾನೆ ಪರಿಗ್ರಹಿಸಿಯಾನು? ನನ್ನ ವಂಶಗೌರವ ನಿನ್ನ ಮೇಲಿನ ಮೋಹಕ್ಕಿಂತಲೂ ದೊಡ್ಡದು. ಆದುದರಿಂದ ಇಗೋ, ಇನ್ನು ಮೇಲೆ ನಿನ್ನ ದಾರಿ ನಿನಗೆ. ನನಗೆ ನಿನ್ನಲ್ಲಿ ವಿಶ್ವಾಸವಾಗಲಿ ಗೌರವವಾಗಲಿ ಸ್ವಲ್ಪವೂ ಉಳಿದಿರುವುದಿಲ್ಲ. ನೀನು ಯಥೇಷ್ಟವಾಗಿ ಹೊರಟುಹೋಗಬಹುದು. ಇಗೋ, ಈ ಲಕ್ಷ್ಮಣನಲ್ಲಿಯೊ, ಭರತನಲ್ಲಿಯೊ, ವಾನರೇಶ್ವರನಾದ ಸುಗ್ರೀವನಲ್ಲಿಯೊ, ರಾಕ್ಷಸೇಶ್ವರನಾದ ವಿಭೀಷಣನಲ್ಲಿಯೊ ಸೇರಿ ಸುಖವಾಗಿರು. ಎಲೆ ಸೀತೆ, ದಿವ್ಯರೂಪಿಣಿಯೂ ಮನೋಹಾರಿಯೂ ಆದ ನೀನು ತನ್ನ ಮನೆಯಲ್ಲಿ ಇಷ್ಟು ಕಾಲವೂ ಇದ್ದರೂ ಆ ಕಾಮಿಯಾದ ರಾವಣನು ಮನೋನಿಗ್ರಹ ತಾಳಿರುವುದು ಎಂದಿಗೂ ಸಾಧ್ಯವಿಲ್ಲ!" ಎಂದನು.

ಶ್ರೀರಾಮನ ಕಠೋರವಚನಗಳನ್ನು ಕೇಳಿ ಸೀತಾದೇವಿ ಆನೆಯ ಸೊಂಡಿಲಿಗೆ ಸಿಕ್ಕ ಸಲ್ಲಕೀವೃಕ್ಷದಂತೆ ನಡುಗಿಹೋದಳು. ಅಷ್ಟು ಜನ ವಾನರರ ಮತ್ತು ರಾಕ್ಷಸರ ಇದಿರಿನಲ್ಲಿ ಆತನಾಡಿದ ಮಾತುಗಳನ್ನು ಕೇಳಿ ಆಕೆಗೆ ನಾಚಿಕೆಯಿಂದ ಸಾವು ಸಮನಿಸಿದಷ್ಟು ಸಂಕಟವಾಯಿತು. ಆಕೆ ಕುಗ್ಗಿ ಕರಗಿ, ಕಣ್ಣೀರುಗರೆಯುತ್ತಾ ಭೂಮಿಗಿಳಿದು ಹೋದಳು. ಸ್ವಲ್ಪ ಕಾಲವಾದ ಮೇಲೆ ಆಕೆ ಸ್ವಲ್ಪ ಚೇತರಿಸಿಕೊಂಡು ಕಣ್ಣೀರನ್ನು ಒರಸಿಕೊಳ್ಳುತ್ತಾ ಗದ್ಗದ ಸ್ವರದಿಂದ ಗಂಡನಿಗೆ ಪ್ರತ್ಯುತ್ತರ ಕೊಟ್ಟಳು. "ಎಲೈ ಮಹಾವೀರ, ಅನಾಗರಿಕ ಮನುಷ್ಯನೊಬ್ಬನು ಅನಾಗರಿಕ ಹೆಣ್ಣೊಬ್ಬಳಿಗೆ ಹೇಳುವಂತೆ ಕರ್ಣಕಠೋರವಾದ ಈ ಅಯೋಗ್ಯವಾಕ್ಕುಗಳನ್ನು ನನಗೆ ಹೇಳುತ್ತಿರುವೆಯಲ್ಲಾ! ಎಲೈ ಮಹಾಬಾಹು, ನನ್ನ

ಮಾತನ್ನು ನಂಬಿ ನಿನ್ನ ಸಂದೇಹ ಅರ್ಥವಿಲ್ಲದುದು. ನಾನು ಕಳಂಕಿತೆಯಲ್ಲ. ನನ್ನ ನಡತೆಯಿಂದಲೆ ನಾನು ಪ್ರತಿಜ್ಞೆ ಮಾಡಿ ಹೇಳುತ್ತೇನೆ. ನಾನು ಕೇವಲ ಪರಿಶುದ್ಧಳು ; ಪರಾಧೀನಳಾದ ನನ್ನನ್ನು ಮುಟ್ಟಿ ರಾವಣನು ಹೊತ್ತುಕೊಂಡುಬಂದಿರಬಹುದು. ಆದರೆ ಆ ಸಂಸ್ಪರ್ಶ ನನ್ನ ಮನಃಪೂರ್ತಿಯಾದುದಲ್ಲ. ಅದು ನನ್ನ ಅಪರಾಧವೂ ಅಲ್ಲ. ಅದೇನಿದ್ದರೂ ದೈವಚೇಷ್ಟಿತ. ನನ್ನ ಅಧೀನದಲ್ಲಿರುವುದು ನನ್ನ ಮನಸ್ಸು ; ಅದು ನಿನ್ನಲ್ಲಿ ಸೇರಿಹೋಗಿದೆ. ಶರೀರ ಪರಾಧೀನವಾದಾಗ ಅನಾಥೆಯಾದ ನಾನು ಏನು ಮಾಡಲು ಸಾಧ್ಯ? ನಿನ್ನೊಡನೆ ಹಲವು ವರ್ಷಗಳು ಆಡಿ ಬೆಳೆದ ನನ್ನ ಹೃದಯವನ್ನು ನೀನು ಅರಿತುಕೊಳ್ಳಲಾರೆಯಾದರೆ ನಾನು ಎಂದೆಂದಿಗೂ ಹತಭಾಗ್ಯಳಾಗಿ ಹೋದೆ. ಎಲೈ ಪುರುಷೋತ್ತಮನೆ, ಕೇವಲ ಪಾಮರನಂತೆ ಕೋಪವನ್ನು ನಂಬಿ ನನ್ನಲ್ಲಿ ಸಂದೇಹಗೊಳ್ಳುವುದೆ? ನಾನು ಜನಕರಾಜನ ಮಗಳು, ಭೂಜಾತೆ ಎಂಬುದು ನಿನಗೆ ಮರೆತೇಹೋಯಿತೆ? ನಿನ್ನಲ್ಲಿ ನನಗಿರುವ ಅಚಲವಾದ ಭಕ್ತಿ, ನನ್ನ ಶೀಲ—ಇವುಗಳೂ ಗಣನೆಗೆ ಬಾರದೆ ಹೋದುವೆ?”

ಸೀತೆಯ ಹಲುಬು ಶ್ರೀರಾಮನ ಸ್ಥಿರತೆಯನ್ನು ಕದಲಿಸಲಿಲ್ಲ. ಆತನು ನಿಷ್ಠುರನಾಗಿ ಸೆಟೆದು ನಿಂತಿದ್ದನು. ಅದನ್ನು ಕಂಡು ಆಕೆಗೆ ಅಸಹ್ಯವೇದನೆಯಾಯಿತು. ಬಳಿಯಲ್ಲಿಯೆ ಚಿಂತಾಪರನಾಗಿ ಬಾಡಿದ ಮುಖದಿಂದ ನಿಂತಿದ್ದ ಲಕ್ಷ್ಮಣನನ್ನು ಕುರಿತು “ಸೌಮಿತ್ರಿ, ಈ ಮಿಥ್ಯಾಪವಾದವನ್ನು ನಾನು ಸಹಿಸಲಾರೆ. ಈ ದುಃಖಕ್ಕೆ ಮದ್ದೆಂದರೆ ಚಿತಾರೋಹಣ. ಒಡನೆಯೆ ಚಿತೆಯನ್ನು ಸಿದ್ಧಪಡಿಸು” ಎಂದಳು. ಲಕ್ಷ್ಮಣನು ಕ್ರೋಧಾವಿಷ್ಟನಾಗಿ ಅಣ್ಣನ ಮುಖವನ್ನು ನೋಡಿದನು. ಆತನ ಮುಖದಲ್ಲಿ ಯಾವುದೊಂದು ವಿಕಾರವೂ ಕಾಣಬರಲಿಲ್ಲ. ಬೇಡವೆಂದು ಹೇಳುವ ಮುಖಚರ್ಯೆಯಲ್ಲ, ಅದು. ಲಕ್ಷ್ಮಣನು ಒಡನೆಯೆ ಅಗರು ಚಂದನಾದಿ ಕಾಷ್ಠಗಳನ್ನು ವಾನರರಿಂದ ತರಿಸಿ ಚಿತೆಯನ್ನು ಸಿದ್ಧಪಡಿಸಿದನು. ಸೀತಾದೇವಿ ತಲೆತಗ್ಗಿಸಿ ಕುಳಿತಿದ್ದ ಶ್ರೀರಾಮಚಂದ್ರನಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ ಧಗಧಗನುರಿಯುತ್ತಿರುವ ಚಿತೆಯ ಬಳಿಗೆ ಬಂದಳು. ಅನಂತರ ಕೈಮುಗಿದುಕೊಂಡು “ಹೇ ಯಜ್ಞೇಶ್ವರ, ನನ್ನ ಪತಿಯಾದ ಶ್ರೀರಾಮನಿಂದ ನನ್ನ ಮನಸ್ಸು ಅತ್ತಿತ್ತ ಕದಲದೆ ಸ್ಥಿರವಾಗಿದ್ದುದು ನಿಜವಾದರೆ ಲೋಕಸಾಕ್ಷಿಯಾದ ನೀನು ನನ್ನನ್ನು ಕಾಪಾಡು. ಈತನು ಭಾವಿಸಿರುವಂತೆ ಪತಿತಳಾಗಿರದೆ ನಾನು ಶುದ್ಧ ಚಾರಿತ್ರೆಯಾಗಿರುವುದೆ ನಿಜವಾದರೆ ಲೋಕಸಾಕ್ಷಿಯಾದ ನೀನು ನನ್ನನ್ನು ಕಾಪಾಡು. ಹಗಲಿರುಳೂ ಸೂರ್ಯಚಂದ್ರರೂ ವಾಯುದೇವನೂ ನನ್ನನ್ನು ಪತಿವ್ರತೆಯಾಗಿ ಕಂಡಿರುವುದು ನಿಜವಾದರೆ ನನ್ನನ್ನು ಅಕ್ಷತೆಯನ್ನಾಗಿ ಕಾಪಾಡು!” ಎಂದು ಹೇಳಿ ಯಜ್ಞೇಶ್ವರನಿಗೆ ಪ್ರದಕ್ಷಿಣೆಮಾಡಿ ಚಿತೆಯನ್ನು ಹೊಕ್ಕಳು.

ಸೀತಾದೇವಿ ಅಗ್ನಿಪ್ರವೇಶಮಾಡುತ್ತಲೆ ಅಲ್ಲಿ ನಿಂತಿದ್ದವರೆಲ್ಲರೂ ಒಮ್ಮೆಗೆ ಹಾಹಾಕಾರಮಾಡಿದರು. ಅವರ ಹಾಹಾಕಾರವನ್ನು ಕಂಡು ಶ್ರೀರಾಮಚಂದ್ರನ ಮನಸ್ಸೂ ಕ್ಷಣಕಾಲ ಕದಡಿತು ; ಕಣ್ಣುಗಳಲ್ಲಿ ಕಂಬನಿಯುಕ್ಕಿತು.



ಸೀತಾದೇವಿ ಪ್ರದಕ್ಷಿಣೆ ಮಾಡಿ ಚಿತೆಯನ್ನು ಹೊಕ್ಕಳು

ತನ್ನ ನಿಷ್ಠುರ ವರ್ತನೆಯನ್ನು ಕುರಿತು ತಮ್ಮಲ್ಲಿಯೆ ಮಾತನಾಡಿಕೊಳ್ಳುತ್ತಿದ್ದ ವಾನರರನ್ನು ಕಂಡು ಧರ್ಮಾತ್ಮನಾದ ಶ್ರೀರಾಮಚಂದ್ರನು ಬಾಷ್ಪವ್ಯಾಕುಲಲೋಚನ ನಾಗಿ ನಿಂತಿದ್ದನು. ಆ ಸಮಯದಲ್ಲಿ ಕುಬೇರ, ಯಮ, ದೇವೇಂದ್ರ, ವರುಣರೂ, ಪರಮೇಶ್ವರನೂ ಸಕಲಲೋಕ ಕರ್ತಾರನಾದ ಪರಬ್ರಹ್ಮನೂ ಸೂರ್ಯಸನ್ನಿಭವಾದ ತಮ್ಮ ವಿಮಾನಗಳಲ್ಲಿ ಕುಳಿತು ಅಲ್ಲಿಗೆ ಬಂದರು. ಅಂಜಲಿಬದ್ಧನಾಗಿ ನಿಂತು ತಮ್ಮನ್ನು ಗೌರವಿಸಿದ ಶ್ರೀರಾಮನನ್ನು ಕಂಡು ದೇವತೆಗಳು ತಾವೂ ಹೊನ್ನೊಡವೆ ಸಿಂಗರಿಸಿದ್ದ ತಮ್ಮ ಬಹುಭುಜಗಳನ್ನೆತ್ತಿ ನಮಸ್ಕರಿಸುತ್ತಾ ಹೇಳಿದರು—"ಸರ್ವಲೋಕ ಕರ್ತಾರನೂ ಸರ್ವಶ್ರೇಷ್ಠನೂ ಜ್ಞಾನಿಗಳಲ್ಲಿ ಜ್ಞಾನಿಯೂ ಆದ ನೀನು ಅಗ್ನಿಪ್ರವೇಶ ಮಾಡುತ್ತಿರುವ ಸೀತಾದೇವಿಯನ್ನು ತಡೆಯದೆ ಏಕೆ ಉಪೇಕ್ಷಿಸುತ್ತಿರುವೆ? ದೇವರುಗಳಲ್ಲಿ ನೀನು ಪರಮ ಶ್ರೇಷ್ಠನೆಂಬುದು ನಿನಗೇಕೆ ಬೋಧೆಯಾಗುತ್ತಿಲ್ಲ? ನೀನು ಋತಧಾಮನೆಂಬ ಅನಾದಿ ವಸ್ತುವಲ್ಲವೆ? ಮೂರು ಲೋಕಗಳನ್ನು ಸೃಷ್ಟಿಸಿದ ನೀನು ಸ್ವಯಂಪ್ರಭು. ರುದ್ರನಲ್ಲಿ

ಎಂಟನೆಯವನಾದ ಮಹಾದೇವನು ನೀನು. ದ್ವಾದಶ ಸಾಧ್ಯರಲ್ಲಿ ಐದನೆಯವನಾದ ವೀರ್ಯವಂತ. ಹೇ ಪರಂತಪ, ಅಶ್ವಿನಿದೇವತೆಗಳೆ ನಿನ್ನೆರಡು ಕಿವಿ. ಚಂದ್ರಸೂರ್ಯರು ನಿನ್ನೆರಡು ಕಣ್ಣು. ಸೃಷ್ಟಿಯ ಆದಿ ಅಂತ್ಯಗಳಲ್ಲಿ ಪ್ರತ್ಯಕ್ಷವಾಗುವ ಮಹನೀಯನು ನೀನೆ. ಇಂತಹ ನೀನು ಪ್ರಾಕೃತಮಾನವನಂತೆ ವೈದೇಹಿಯನ್ನು ಉಪೇಕ್ಷಿಸಬಹುದೆ"?

ಲೋಕರಕ್ಷಕರಾದ ದೇವತೆಗಳ ಮಾತುಗಳನ್ನು ಕೇಳಿ ಧರ್ಮಸಂರಕ್ಷಕನಾದ ಶ್ರೀರಾಮಚಂದ್ರನು ಇಂತೆಂದನು—"ನನಗೆ ತಿಳಿದಮಟ್ಟಿಗೆ ನಾನು ರಾಮ, ದಶರಥನ ಮಗ, ಮನುಷ್ಯ. ನಾನು ಯಾರು? ಯಾರವನು? ಎಲ್ಲಿಂದ ಬಂದವನು? ಎಂಬುದನ್ನು ಪೂಜ್ಯನಾದ ಬ್ರಹ್ಮದೇವನು ಅಪ್ಪಣೆ ಕೊಡಿಸಲಿ." ಇದಕ್ಕೆ ಉತ್ತರವಾಗಿ ಬ್ರಹ್ಮವಿದರಲ್ಲಿ ವರಿಷ್ಠನಾದ ಬ್ರಹ್ಮದೇವನು ಹೇಳಲು ಮೊದಲುಮಾಡಿದನು.

"ಸತ್ಯಪರಾಕ್ರಮನಾದ ರಾಮನೆ, ಈ ಸತ್ಯವನ್ನಾಲಿಸು. ಚಕ್ರಾಯುಧನಾದ ಸರ್ವವಿಭು ಶ್ರೀಮನ್ನಾರಾಯಣನೆ ನೀನು. ಭೂತ ಭವ್ಯಸಪತ್ನಜಿತ್ತಾದ ಏಕಶೃಂಗ ವರಾಹನೂ ನೀನೆ. ಆದಿಮಧ್ಯಾಂತಗಳಲ್ಲಿ ಚರಿಸುವ ಅಕ್ಷರಬ್ರಹ್ಮನೂ ನೀನೆ. ಲೋಕಗಳಿಗೆಲ್ಲ ಧರ್ಮಸ್ವರೂಪಿಯಾಗಿರುವ ನೀನು ಚತುರ್ಭುಜಯುಕ್ತನಾದ ವಿಷ್ವಕ್ಸೇನನು. ಶಾರ್ಙ್ಗಧನುರ್ಧಾರಿಯಾದ ಹೃಷೀಕೇಶನೂ ನೀನೆ. ಪುರುಷೋತ್ತಮನಾದ ಪುರುಷನೂ ನೀನೆ. ನೀನೆ ಖಡ್ಗಧರನಾದ ಅಜಿತವಿಷ್ಣು. ಬೃಹದ್ಬಲನಾದ ಕೃಷ್ಣನೂ ನೀನೆ. ಬುದ್ಧಿ ಸತ್ಯಕ್ಷಮಾ ದಮಗಳೂ ನೀನೆ. ಪ್ರಭವ ಪ್ರಳಯ ಶಕ್ತಿಗಳು ನೀನೆ. ಇಂದ್ರಕರ್ಮನಾದ ಮಹೇಂದ್ರನೂ ನೀನೆ. ರಣಾಂತಕೃತ್ತಾದ ಪದ್ಮನಾಭನೂ ನೀನೆ. ಶರಣ್ಯನೂ ಶರಣನೂ ನೀನೆ. ಹೀಗೆಂಬುದು ದಿವ್ಯಮಹರ್ಷಿಗಳ ವಾಣಿ. ಸಹಸ್ರಶೃಂಗನೂ ಶತಜಿಹ್ವನೂ ಆದ ವೇದಾತ್ಮ ಋಷಭನೂ ನೀನೆ. ಲೋಕತ್ರಯಗಳಿಗೂ ನೀನೆ ಆದಿಕರ್ತ. ಸಿದ್ಧರಿಗೆಲ್ಲಾ ಪೂರ್ವನೂ ಆಶ್ರಯರೂಪಿಯೂ ನೀನೆ. ನೀನೆ ಯಜ್ಞ; ವಷಟ್ಕಾರ ಓಂಕಾರಗಳೂ ನೀನೆ. ನಿನ್ನ ಪ್ರಭವನಿಧನಗಳನ್ನು ಯಾರುತಾನೆ ಬಲ್ಲರು? ನೀನು ಸರ್ವಭೂತಗಳಲ್ಲಿಯೂ ಕಂಡುಬರುತ್ತೀಯೆ. ಸಮಸ್ತ ದಿಕ್ಕುಗಳಲ್ಲಿಯೂ ಗಗನದಲ್ಲಿಯೂ ಪರ್ವತ ವನಗಳಲ್ಲಿಯೂ ಕಂಡುಬರುವ ಸರ್ವಾಂತರ್ಯಾಮಿ ನೀನು. ಸಹಸ್ರ ಚರಣನೂ ಸಹಸ್ರ ಶೀರ್ಷನೂ ಸಹಸ್ರ ಚಕ್ಷುವೂ ಆದ ನೀನು ಸಮಸ್ತ ಜೀವರಾಶಿಗಳನ್ನೂ ಪರ್ವತ ನದೀಕಾನನ ಸಹಿತವಾದ ಭೂಮಂಡಲವನ್ನೂ ಧರಿಸಿರುವೆ. ಹೇ ರಾಮಚಂದ್ರ, ಸೃಷ್ಟಿಯೆಲ್ಲವೂ ಲಯವಾದಾಗ ನೀನು ಚಿತ್ ಸಮುದ್ರದಲ್ಲಿ ಮಹೋರಗಸುಪ್ತನಾಗಿರುವೆ. ಆಗ ದೇವದಾನವ ಗಂಧರ್ವರ ಮೂರು ಲೋಕವನ್ನೂ ನೀನೆ ಒಳಕೊಂಡಿರುವೆ.

"ಅಹಂ ತೇ ಹೃದಯಂ ರಾಮ; ಜಿಹ್ವಾ ದೇವೀ ಸರಸ್ವತೀ;
ದೇವಾ ಗಾತ್ರೇಷು ರೋಮಾಣಿ; ನಿರ್ಮಿತಾ ಬ್ರಹ್ಮಣಾ ಪ್ರಭೋ.
ನಿಮೇಷಸ್ತೇ ಭವೇದ್ರಾತ್ರಿಃ; ಉನ್ಮೇಷಸ್ತೇ ಭವೇದ್ದಿವಾ;
ಸಂಸ್ಕಾರಾಸ್ತೇಽಭವನ್ ವೇದಾ; ನ ತದಸ್ತಿ ತ್ವಯಾ ವಿನಾ.
ಜಗತ್ ಸರ್ವಂ ಶರೀರಂ ತೇ; ಸ್ಥೈರ್ಯಂ ತೇ ವಸುಧಾತಲಂ;
ಅಗ್ನಿಃ ಕೋಪಃ; ಪ್ರಸಾದಸ್ತೇ ಸೋಮಃ, ಶ್ರೀವತ್ಸಲಕ್ಷ್ಮಣ!"

ನಾನು ನಿನ್ನ ಹೃದಯ; ಸರಸ್ವತಿ ನಿನ್ನ ಜಿಹ್ವೆ; ದೇವತೆಗಳೇ ನಿನ್ನ ರೋಮಾಳಿ, ನೀನು ಎವೆ ಮುಚ್ಚಿದರೆ ರಾತ್ರಿ; ತೆರೆದರೆ ಹಗಲು. ನಿನ್ನ ಸಂಸ್ಕಾರಗಳೆ ವೇದರಾಶಿ. ನೀನಿಲ್ಲದೆ ಏನಿಲ್ಲ. ಈ ಜಗತ್ತೆಲ್ಲವೂ ನಿನ್ನ ಶರೀರ. ನಿನ್ನ ಸ್ಥೈರ್ಯವೇ ಈ ವಸುಧಾತಲ. ನಿನ್ನ ಕೋಪವೆ ಅಗ್ನಿ; ನಿನ್ನ ಪ್ರಸಾದವೆ ಸೋಮ, ಹೇ ಶ್ರೀವತ್ಸಲಾಂಛನ! ಪೂರ್ವದಲ್ಲಿ ತ್ರಿವಿಕ್ರಮನಾಗಿ ಮೂರು ಲೋಕಗಳನ್ನೂ ಆಕ್ರಮಿಸಿ, ಮಹಾ ಅಸುರನಾದ ಬಲಿಯನ್ನು ಬಂಧಿಸಿ, ಇಂದ್ರನನ್ನು ರಾಜನಾಗಿ ಮಾಡಿದೆ. ಸೀತೆಯೇ ಮಹಾಲಕ್ಷ್ಮಿ. ದೇವನೂ ಕೃಷ್ಣನೂ ಪ್ರಜಾಪತಿಯೂ ಆದ ವಿಷ್ಣು ನೀನು. ರಾವಣ ವಧಾರ್ಥವಾಗಿ ಮಾನುಷ ದೇಹವನ್ನು ಪ್ರವೇಶಿಸಿರುವೆ. ಆದ್ದರಿಂದ, ಹೇ ಧರ್ಮಭೃತರಲ್ಲಿ ವರಿಷ್ಠನಾದ ರಾಮಚಂದ್ರ, ರಾವಣನು ಹತನಾದನು. ಪ್ರಹೃಷ್ಟನಾಗಿ ಸ್ವಲೋಕಪ್ರತಿಷ್ಠಿತನಾಗು.

"ಅಮೋಘಂ ಬಲವೀರ್ಯಂ ತೇ; ಅಮೋಘಸ್ತೇ ಪರಾಕ್ರಮಃ;
ಅಮೋಘಂ ದರ್ಶನಂ, ರಾಮ; ನ ಚ ಮೋಘಃ ಸ್ತವಸ್ತವ.
ಅಮೋಘಾಸ್ತೇ ಭವಿಷ್ಯಂತಿ ಭಕ್ತಿಮಂತಶ್ಚ ಯೇ ನರಾಃ!"

ನಿನ್ನ ಬಲವೀರ್ಯವು ಅಮೋಘವಾದುದು. ಅಮೋಘವಾದುದು ನಿನ್ನ ಪರಾಕ್ರಮ. ಹೇ ರಾಮಚಂದ್ರ, ನಿನ್ನ ಸಂದರ್ಶನವೂ ಅಮೋಘವೆ. ಮೋಘವಾಗುವುದೆ ಈ ನಿನ್ನ ಸ್ತೋತ್ರ? ನಿನ್ನ ಭಕ್ತರೂ ಅಮೋಘರೆ. ಪುರಾಣನೂ ಪುರುಷೋತ್ತಮನೂ ಆಗಿರುವ ನಿನ್ನಲ್ಲಿ ಭಕ್ತಿಯುಕ್ತರಾದವರು ಇಹಪರಗಳೆರಡರಲ್ಲಿಯೂ ತಮ್ಮ ಇಷ್ಟಾರ್ಥವನ್ನು ಪಡೆಯುತ್ತಾರೆ. ಪುರಾತನನಾದರೂ ನಿತ್ಯೇತಿಹಾಸರಾದ ಈ ಆರ್ಷಸ್ತವವನ್ನು ಯಾರು ಸಂಕೀರ್ತಿಸುವರೋ ಅವರಿಗೆ ಎಂದೂ ಪರಾಭವವಿಲ್ಲ!"

ಇದೇನು ಪವಾಡ! ಸಾಕಾರನಾದ ಯಜ್ಞೇಶ್ವರನು ಸೀತಾದೇವಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅಗ್ನಿಮಧ್ಯದಿಂದ ಮೇಲಕ್ಕೆದ್ದು ಬರುತ್ತಿದ್ದಾನೆ! ಸೀತಾಮಾತೆಯಾದರೊ ಆಗತಾನೆ ಉದಿಸುತ್ತಿರುವ ಸೂರ್ಯನಂತೆ ಬೆಳಗುತ್ತಾ, ಅಕ್ಷತ ಶರೀರಳಾಗಿದ್ದಾಳೆ. ತಲೆಯಲ್ಲಿ ಮುಡಿದ ಹೂಗಳು ಕೂಡ ಬಾಡಿಲ್ಲ! ಯಜ್ಞೇಶ್ವರನು ಸೀತಾದೇವಿಯನ್ನು ಎತ್ತಿಕೊಂಡು ಬಂದು ಶ್ರೀರಾಮನಿಗೆ ಒಪ್ಪಿಸುತ್ತಾ "ರಾಮಚಂದ್ರ, ಈ ಜಾನಕಿ ನಿನ್ನವಳು. ಈಕೆ ಪಾಪವನ್ನು ಅರಿಯಳು. ಸದಾಚಾರಸಂಪನ್ನೆಯಾದ ಈಕೆ ಮಾತಿನಲ್ಲಾಗಲಿ ಮನಸ್ಸಿನಲ್ಲಾಗಲಿ ಬುದ್ಧಿಯಲ್ಲಾಗಲಿ ನಿನ್ನನಲ್ಲದೆ ಬೇರೊಬ್ಬರನ್ನು ನೆನೆದವಳಲ್ಲ. ಕೇವಲ ಮಂಗಳಕರೆಯಾದವಳು, ಈಕೆ. ಗರ್ವಾಂಧನಾದ ರಾವಣ ನೀನಿಲ್ಲದಾಗ ದೀನಳೂ ವಿವಶಳೂ ಆದ ಈಕೆಯನ್ನು ಹೊತ್ತುಕೊಂಡು ಹೋದನು. ಅಂದಿನಿಂದ ಇಂದಿನವರೆಗೆ ಆಕೆ ಎಂತಹ ರಾಕ್ಷಸಬಾಧೆಯನ್ನು ಸಹಿಸಿಕೊಂಡಿರುತ್ತಾಳೆ! ಪಾಪರಹಿತೆಯಾದ ಈ ಪರಿಶುದ್ಧೆಯನ್ನು ಸ್ವೀಕರಿಸು. ಇದು ನನ್ನ ಅಪ್ಪಣೆ. ಇದಕ್ಕೆ ಪ್ರತಿ ಹೇಳಬೇಡ!" ಎಂದು ಹೇಳಿದನು.

ಯಜ್ಞೇಶ್ವರನ ಮಾತುಗಳಿಂದ ಸಂತುಷ್ಟಾಂತರಂಗನಾದ ಶ್ರೀರಾಮಚಂದ್ರನು ಆನಂದಾಶ್ರುಗಳನ್ನು ಸುರಿಸುತ್ತಾ "ಸ್ವಾಮಿ, ಸೀತೆ ಪಾಪರಹಿತೆ ಎಂಬುದನ್ನು ನಾನೂ

ಬಲ್ಲೆ. ಆಕೆ ರಾವಣನ ಅಂತಃಪುರದಲ್ಲಿ ಬಹುಕಾಲ ಇದ್ದುದರಿಂದಲೆ ಆಕೆಯ ನಡತೆ ಎಂದಿಗೂ ಕೊಂಕದೆಂಬುದೂ ನನಗೆ ಗೊತ್ತು. ಆದರೆ ಆಕೆಯನ್ನು ಪರೀಕ್ಷಿಸದೆಯೆ ಸ್ವೀಕರಿಸಿದ್ದರೆ ಲೋಕದ ಜನ ನನ್ನನ್ನು ವಿಷಯಲೋಲುಪನೆಂದೂ ರೂಪಮೋಹಿತ ನೆಂದೂ ಖಂಡಿಸುತ್ತಿದ್ದರಲ್ಲ? ಸ್ವತೇಜಸ್ಸಿನಿಂದಲೆ ತನ್ನನ್ನು ರಕ್ಷಿಸಿಕೊಳ್ಳಬಲ್ಲ ಈಕೆ ಯನ್ನು ರಾವಣನು ವಶಪಡಿಸಿಕೊಳ್ಳಬಲ್ಲನೆ? ಪ್ರಜ್ವಲಿಸುವ ಅಗ್ನಿಯಂತಿರುವ ಈಕೆಯ ಪಾತಿವ್ರತ್ಯವನ್ನು ಜಗತ್ತಿಗೆ ತೋರುವುದಕ್ಕಾಗಿಯೆ ನಾನು ಈಕೆಯನ್ನು ಪರೀಕ್ಷೆಗೆ ಒಳಪಡಿಸಿದುದು. ಈಕೆ ನನ್ನಿಂದ ಅನನ್ಯೆಯಾದವಳು; ಆದ್ದರಿಂದ ಈಕೆ ಯನ್ನು ತ್ಯಜಿಸುವುದೆಲ್ಲಿ ಬಂತು? ಪರಾಕ್ರಮಿ ತನ್ನ ಕೀರ್ತಿಯನ್ನೆಂತೊ ಅಂತು ನಾನು ಈಕೆಯನ್ನು ತ್ಯಜಿಸುವುದೆಂಬುದು ಅಸಾಧ್ಯ. ಸೂರ್ಯನಿಗೆ ಪ್ರಭಾದೇವಿಯಂತೆ ಸದಾ ಈಕೆ ನನ್ನನ್ನು ಅಗಲದಿರುವವಳೆ ಸರಿ!" ಎಂದು ಹೇಳಿ ಸೀತಾದೇವಿಯನ್ನು ಕೈಹಿಡಿದು ತನ್ನ ಬಳಿಗೆ ಕರೆದುಕೊಂಡನು.

ಶ್ರೀರಾಮನು ಸೀತಾದೇವಿಯನ್ನು ಸ್ವೀಕರಿಸಿದ ಶುಭ ಮುಹೂರ್ತದಲ್ಲಿಯೆ ದಶರಥಮಹಾರಾಜನು ವಿಮಾನರೂಢನಾಗಿ ಸ್ವರ್ಗದಿಂದ ಅಲ್ಲಿಗೆ ಇಳಿತಂದನು. ರಾಮ ಚಂದ್ರನು ತಮ್ಮನೊಡನೆ ತಂದೆಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ದಶರಥ ಮಹಾರಾಜನು ವಿಮಾನದಲ್ಲಿ ಕುಳಿತೆ ಮಗನನ್ನು ಬಾಚಿ ತಬ್ಬಿಕೊಂಡನು. ಅನಂತರ ಆತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತಾ "ಮಗು ರಾಮಚಂದ್ರ, ನಿನ್ನನ್ನಗಲಿದ ನನಗೆ ಸ್ವರ್ಗವೂ ಸುಖವಲ್ಲ. ವನವಾಸವನ್ನು ಮುಗಿಸಿ, ಶತ್ರುಜಯದಿಂದ ವರ್ಧಿಸುತ್ತಿರುವ ನಿನ್ನನ್ನು ಕಂಡು ನನಗೆ ಅತ್ಯಂತ ಸಂತೋಷವಾಗಿದೆ. ಆ ಕೈಕೆಯಾಡಿದ ಕ್ರೂರವಾಕ್ಯಗಳು ಈವರೆಗೂ ನನ್ನ ಮನಸ್ಸನ್ನು ಕೊರೆಯುತ್ತಿದ್ದುವು. ಸೀತಾಲಕ್ಷ್ಮಣಸಹಿತನಾಗಿ ಕುಶಲಿಯಾಗಿರುವ ನಿನ್ನನ್ನು ಕಂಡು ನನಗೆಷ್ಟೊ ಸಮಾಧಾನವಾಯಿತು. ರಾಮಾ, ನಿನ್ನಂತಹ ಮಗನನ್ನು ಪಡೆದು ನಾನು ಧನ್ಯನಾದೆ. ನೀನಿನ್ನು ಅಯೋಧ್ಯೆಗೆ ಹಿಂತಿರುಗಿ ಭರತನನ್ನೂ ನಿನ್ನ ಮಾತೆಯಾದ ಕೌಸಲ್ಯೆಯನ್ನೂ ಪ್ರಜಾಕೋಟಿಯನ್ನೂ ಆನಂದಪಡಿಸು. ದೀರ್ಘಾಯುವಾಗಿ ಬಾಳು" ಎಂದು ಹೇಳಿ ಲಕ್ಷ್ಮಣನನ್ನು ಕುರಿತು "ಮಗು ಸೌಮಿತ್ರಿ, ನಿನ್ನ ಅಣ್ಣನ ಶುಶ್ರೂಷೆ ಮಾಡಿ ಮಹತ್ತಾದ ಧರ್ಮಫಲವನ್ನು ಪಡೆದಿರುವೆ. ಅತುಲವಾದ ಪುಣ್ಯಕ್ಕೆ ಅಲ್ಲದೆ ಅಖಂಡವಾದ ಕೀರ್ತಿಗೂ ನೀನು ಭಾಗಿಯಾಗಿರುವೆ" ಎಂದು ಹರಸಿದನು.

ರಾಮಲಕ್ಷ್ಮಣರನ್ನು ಮಾತನಾಡಿಸಿ ಮುಗಿದುದಾದ ಮೇಲೆ ದಶರಥ ಮಹಾ ರಾಜನು ತಲೆಬಾಗಿ ನಿಂತಿದ್ದ ಸೀತೆಯ ಕಡೆಗೆ ತಿರುಗಿ ಅಮೃತದಂತಿರುವ ನುಡಿಗಳಿಂದ "ವೈದೇಹಿ, ಶ್ರೀರಾಮನು ನಿನ್ನನ್ನು ಪರೀಕ್ಷೆಗೆ ಒಳಗು ಮಾಡಿದನೆಂದು ಆತನ ಮೇಲೆ ಕೋಪಿಸಬೇಡ. ನಿನ್ನ ಹಿತೈಷಿಯಾದ ಆತನು ನಿನ್ನ ಪಾತಿವ್ರತ್ಯವನ್ನು ಜಗತ್ತಿಗೆ ಪ್ರದರ್ಶಿಸುವುದಕ್ಕಾಗಿಯೆ ಆ ರೀತಿ ಮಾಡಿದನು. ಮಗಳೆ, ನೀನು ಅಗ್ನಿಪ್ರವೇಶಮಾಡಿ ಹೊರಬಂದು, ನಿನ್ನ ಕೀರ್ತಿಯನ್ನು ದಿಗಂತ ವಿಶ್ರಾಂತವಾಗಿ ಮಾಡಿದೆ. ಪತಿವ್ರತೆಯಾದ

ನಿನಗೆ ಹೇಳಿಕೊಡಬೇಕಾದುದೇನೂ ಇಲ್ಲವಾದರೂ ಇಷ್ಟನ್ನು ಹೇಳಲೇಬೇಕು. ನಿನ್ನ ಪತಿಯಾದ ಈತನು ನಿನಗೆ ದೇವತಾಸ್ವರೂಪನು. ಆದ್ದರಿಂದ ಆತನ ಮೇಲೆ ಕೋಪಿಸ ಬೇಡ" ಎಂದು ಹೇಳಿ ಆಕೆಯ ತಲೆಯನ್ನು ನೇವರಿಸಿದನು. ಅನಂತರ ಆತನು ಆಕೆಯಿಂದಲೂ ತನ್ನ ಮಕ್ಕಳಿಂದಲೂ ಬೀಳ್ಕೊಂಡು ಸ್ವರ್ಗಕ್ಕೆ ಹಿಂದಿರುಗಿದನು. ಆಕಾಶದಲ್ಲಿ ನಿಂತು ನೋಡುತ್ತಿದ್ದ ದೇವತೆಗಳೆಲ್ಲ ಸೀತಾ ರಾಮಲಕ್ಷ್ಮಣರನ್ನು ಬಾಯ್ತುಂಬ ಆಶೀರ್ವದಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿದರು.

ಅಗ್ನಿಪ್ರವೇಶದಿಂದ ತನ್ನ ಪಾತಿವ್ರತ್ಯವನ್ನು ಸ್ಥಾಪಿಸಿದ ಜಾನಕಿಯನ್ನು ಕಣ್ತುಂಬ ನೋಡಿ ಹಿಗ್ಗುತ್ತಾ ಶ್ರೀರಾಮಚಂದ್ರನು ಲಕ್ಷ್ಮಣನನ್ನು ಕುರಿತು "ಮಗು ಸೌಮಿತ್ರಿ, ನಮ್ಮ ವಾಸಕ್ಕೆ ಉಚಿತವಾದ ಒಂದು ಪ್ರದೇಶವನ್ನು ನಿರ್ಮಿಸು. ಸೀತಾಪಹರಣಕ್ಕೆ ಮುನ್ನ ಇದ್ದ ನಮ್ಮ ಜೀವನ ಮತ್ತೆ ಆರಂಭವಾಗಲಿ" ಎಂದನು. ಸಮೀಪದಲ್ಲಿದ್ದ ವಾನರ ಸೈನ್ಯವು ನಡೆದ ಪವಾಡದಿಂದ ಆಶ್ಚರ್ಯಗೊಂಡು ಆನಂದದಲ್ಲಿ ನಲಿದಾಡುತ್ತಿತ್ತು.

---

## ೨೭

# ಪುಷ್ಪಕವಿಮಾನದಲ್ಲಿ ಅಯೋಧ್ಯೆಯ ಕಡೆಗೆ

ಸೀತಾಲಕ್ಷ್ಮಣ ಸಹಿತನಾಗಿ ಶ್ರೀರಾಮಚಂದ್ರನು ತನಗಾಗಿ ನಿರ್ಮಿಸಿದ್ದ ಪ್ರದೇಶದಲ್ಲಿ ಸುಖವಾಗಿ ನಿದ್ರಿಸಿದನು. ಮರು ದಿನ ಬೆಳಗ್ಗೆ ಆತನು ಮೇಲಕ್ಕೇಳುವ ಹೊತ್ತಿಗೆ, ರಾಕ್ಷಸಪ್ರಭುವಾದ ವಿಭೀಷಣನು ಆತನಿಗಾಗಿ ಕಾದಿದ್ದು ಆತನನ್ನು ಮಂಗಳಸ್ನಾನಮಾಡಿ ವಸ್ತ್ರಭೂಷಣಗಳಿಂದ ಅಲಂಕೃತನಾಗುವಂತೆ ಬೇಡಿದನು. ಆದರೆ ರಾಮಚಂದ್ರನು ಆತನನ್ನು ಕುರಿತು "ಅಯ್ಯಾ ಮಿತ್ರನೆ, ಸುಗ್ರೀವನೆ ಮೊದಲಾದ ವಾನರವೀರರಿಗೆಲ್ಲಾ ಆ ವೈಭವ ನಡೆಯಲಿ. ನಾನು ಭರತಕುಮಾರನನ್ನು ನೋಡಿದ ಹೊರತು ಯಾವ ಸುಖಸಂತೋಷಗಳನ್ನೂ ಅನುಭವಿಸಲಾರೆ. ನನ್ನ ಮೇಲಿನ ಭಕ್ತಿ ಪ್ರೇಮಗಳಿಂದ ತನ್ನ ಸೌಖ್ಯಗಳನ್ನೆಲ್ಲಾ ತೊರೆದಿರುವ ಆ ಸುಕುಮಾರನನ್ನು ಕಾಣುವುದಕ್ಕಾಗಿ ನನಗೀಗಲೆ ಅಯೋಧ್ಯೆಗೆ ಹಿಂದಿರುಗಲು ಅಪೇಕ್ಷೆ. ಆದರೂ ಮಾರ್ಗವು ಮಾತ್ರ ಬಹಳ ದುರ್ಗಮವಾಗಿದೆ!" ಎಂದನು.

ಶ್ರೀರಾಮನ ಮಾತುಗಳಿಗೆ ಪ್ರತ್ಯುತ್ತರವಾಗಿ ವಿಭೀಷಣನು "ಪ್ರಭು, ನಾನು ನಿನ್ನನ್ನು ಒಂದು ದಿನದೊಳಗಾಗಿ ಅಯೋಧ್ಯೆಗೆ ಕೊಂಡೊಯ್ಯುತ್ತೇನೆ. ನನ್ನ ಅಣ್ಣನಿಗೆ ಸೇರಿದ ಪುಷ್ಪಕವಿಮಾನ ನಿನ್ನ ಪ್ರಯಾಣಕ್ಕೆ ಸಿದ್ಧವಾಗಿದೆ. ಮೇಘೋಪಮವಾದ ಆ ವಿಮಾನವು ನಿನ್ನನ್ನು ಬಯಸಿದಲ್ಲಿಗೆ ಕೊಂಡೊಯ್ಯಬಲ್ಲುದು. ನೀನು ಇಂದು ನನ್ನ ಆತಿಥ್ಯವನ್ನು ಸ್ವೀಕರಿಸಿ, ಅನಂತರ ಪ್ರಯಾಣ ಬೆಳಸಬೇಕು". ಎಂದು ಕೇಳಿಕೊಂಡನು. ಆಗ ಶ್ರೀರಾಮನು "ಮಿತ್ರಾ, ನಿನ್ನ ಮಾತುಗಳಿಂದಲೆ ಪರಮ ಸಂತುಷ್ಟನಾಗಿರುತ್ತೇನೆ. ಆದ್ದರಿಂದ ನಿನ್ನ ಮಾತಿನಂತೆ ನಡೆಯಲಿಲ್ಲವೆಂಬ ದುಗುಡವೇನೂ ಬೇಡ. ಭರತನನ್ನೂ ಮಾತೆಯರನ್ನೂ ಕಾಣಲು ನನ್ನ ಮನಸ್ಸು ಆತುರಪಡುತ್ತಿದೆ. ಸಮಸ್ತ ಕಾರ್ಯಗಳೂ ನೆರವೇರಿರುವುದರಿಂದ ನನಗೆ ಇಲ್ಲಿ ಇರುವ ಇಷ್ಟವಿಲ್ಲ. ಶೀಘ್ರವಾಗಿ ನನ್ನನ್ನು ಕಳುಹಿಸುವುದಕ್ಕೆ ಏರ್ಪಡಿಸು" ಎಂದನು.

ಶ್ರೀರಾಮಚಂದ್ರನ ಅಪೇಕ್ಷೆಯಂತೆ ಒಡನೆಯೆ ಪ್ರಯಾಣ ಮಾಡಲು ಪುಷ್ಪಕ ವಿಮಾನ ಸಿದ್ಧವಾಗಿ ನಿಂತಿತು. ಆತನು ವಿಭೀಷಣನಿಂದ ವಾನರರೆಲ್ಲರಿಗೂ ರತ್ನಭೂಷಣಾದಿ ಬಹುಮಾನಗಳನ್ನು ಕೊಡಿಸಿ, ಅವರೆಲ್ಲರಿಂದಲೂ ಬೀಳ್ಕೊಂಡು ಸೀತಾ ಲಕ್ಷ್ಮಣರೊಡನೆ ವಿಮಾನವನ್ನೇರಿದನು. ಸೀತಾದೇವಿ ನಾಚಿಕೆಯಿಂದ ನಸು ತಲೆಬಾಗಿಸಿಕೊಂಡು ಗಂಡನ ತೊಡೆಯ ಮೇಲೆ ಕುಳಿತಳು. ವಾನರ ವೀರನಾದ ಸುಗ್ರೀವನಿಗೂ ರಾಕ್ಷಸವೀರನಾದ ವಿಭೀಷಣನಿಗೂ ಹೋಗಿಬರುವೆನೆಂದು ಹೇಳಿ, ಇನ್ನೇನು ಹೊರಡಬೇಕು, ಅಷ್ಟರಲ್ಲಿ ಆತನನ್ನು ಅಗಲಿರಲಾರದೆ, ಆತನ ಪಟ್ಟಾಭಿಷೇಕವನ್ನು ನೋಡಬೇಕೆಂಬ ಆಕಾಂಕ್ಷೆ

ಯಿಂದ ತಮ್ಮ ಪರಿವಾರದೊಡನೆ ತಾವೂ ಜೊತೆಯಲ್ಲಿ ಬರುವುದಾಗಿ ಅವರು ಅಪೇಕ್ಷಿಸಿದರು. ಶ್ರೀರಾಮನು ಸಂತೋಷದಿಂದ ಅದಕ್ಕೆ ಸಮ್ಮತಿಸಲು ಅವರೆಲ್ಲರೂ ವಿಮಾನವನ್ನು ಹತ್ತಿದರು. ಅಷ್ಟು ಜನರೂ ಏರಿ ಕುಳಿತರೂ ವಿಮಾನದಲ್ಲಿ ಜನಸಮ್ಮರ್ದವೇನೂ ಆಗಲಿಲ್ಲ. ಆ ವಿಮಾನವು ದೊಡ್ಡ ಮೋಡದಂತೆ ಆಕಾಶದಲ್ಲಿ ಹಾರುತ್ತಾ ಪ್ರಯಾಣ ಹೊರಟಿತು.

ಪ್ರಯಾಣ ಹೋಗುತ್ತಾ ಹೋಗುತ್ತಾ ಶ್ರೀರಾಮನು ತನ್ನ ಮಡದಿಗೆ ತಾವು ಹಿಂದೆ ಕಂಡಿದ್ದ ಸ್ಥಳಗಳನ್ನೆಲ್ಲಾ ಒಂದೊಂದನ್ನಾಗಿ ಬೆರಳಿಂದ ತೋರಿಸುತ್ತಾ ಹೊರಟನು. "ವೈದೇಹಿ, ಅಗೋ ಆ ಹಿಂದೆ ಕಾಣಿಸುತ್ತಿರುವುದು ಲಂಕಾನಗರ. ಅದರ ಈಚೆ ರಕ್ತ ಮಾಂಸಗಳಿಂದ ಕೆಸರಾಗಿ ನಿಂತಿರುವ ಆ ಸ್ಥಳವೆ ಯುದ್ಧರಂಗ. ಬ್ರಹ್ಮನಿಂದ ವರಪಡೆದು ಅಜೇಯನಾಗಿದ್ದ ರಾವಣಾಸುರನೂ ಆತನ ಪರಿವಾರದವರೂ ಹೇಳಹೆಸರಿಲ್ಲದಂತಾದುದು ಆ ಯುದ್ಧಭೂಮಿಯಲ್ಲಿಯೆ. ಸುಂದರಿ, ಇತ್ತ ನೋಡು, ಈ ಸಾಗರ ತೀರ್ಥದ ಬಳಿಯಲ್ಲಿಯೆ ನಾವು ಸಮುದ್ರವನ್ನು ದಾಟಿದ ದಿನ ಬೀಡುಬಿಟ್ಟುಕೊಂಡಿದ್ದುದು. ಅದರ ಸಮೀಪದಲ್ಲಿಯೆ ವಿಸ್ತಾರವಾದ ಸಮುದ್ರದ ಮೇಲೆ ಉದ್ದಕ್ಕೂ ಕಾಣಬರುತ್ತಿರುವುದೆ ನಳನಿರ್ಮಿತವಾದ ಸೇತುವೆ. ಹನುಮಂತನು ಸಮುದ್ರವನ್ನು ದಾಟಿದಾಗ ಮೇಲಕ್ಕೆ ತಲೆಯೆತ್ತಿನಿಂತ ಕಾಂಚನ ಪರ್ವತ, ಅಗೋ ನೋಡು, ಅಲ್ಲಿ ಕಾಣುತ್ತಿದೆ. ನನಗೆ ವರುಣನು ಪ್ರತ್ಯಕ್ಷನಾದ ಸೇತುಬಂಧನೆಂಬ ತೀರ್ಥಕ್ಷೇತ್ರವಿದು. ಈ ಪ್ರದೇಶದಲ್ಲಿಯೆ ವಿಭೀಷಣನು ನನ್ನನ್ನು ಕಾಣಲು ಬಂದುದು. ಸೀತಾ, ಅಗೋ ನೋಡು, ಅಲ್ಲಿ ಕಾಣುತ್ತಿರುವುದು ಕಿಷ್ಕಿಂಧಾನಗರ, ಅಲ್ಲಿಯೆ ನಾನು ವಾಲಿಯನ್ನು ಕೊಂದುದು."

ಕಿಷ್ಕಿಂಧೆಯ ಸುದ್ದಿಯನ್ನೆಲ್ಲ ಹಿಂದೆಯೆ ಕೇಳಿದ್ದ ಸೀತಾದೇವಿಗೆ ತಾರಾದೇವಿಯೆ ಮೊದಲಾದ ವಾನರಸ್ತ್ರೀಯರನ್ನೂ ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆನ್ನಿಸಿತು. ಗಂಡನಲ್ಲಿ ತನ್ನ ಅಭೀಷ್ಟವನ್ನು ಹೇಳಿಕೊಂಡಳು. ಒಡನೆಯೆ ಶ್ರೀರಾಮನು ವಾನರರನ್ನೆಲ್ಲಾ ಪುಷ್ಪಕದಿಂದಿಳಿಸಿ, ತಮ್ಮ ತಮ್ಮ ಭಾರ್ಯೆಯರೊಡನೆ ಬರುವಂತೆ ಅಪ್ಪಣೆ ಮಾಡಿದನು. ಆತನ ಅಪ್ಪಣೆಯಂತೆ ಅವರೆಲ್ಲರೂ ಕಿಷ್ಕಿಂಧೆಗೆ ಹೋಗಿ, ತಮ್ಮ ಭಾರ್ಯೆಯರೊಡನೆ ಹಿಂದಿರುಗಿ ವಿಮಾನವನ್ನೇರಿದರು. ಮತ್ತೊಮ್ಮೆ ವಿಮಾನ ಮುಂದುವರಿಯಿತು. ಋಷ್ಯಮೂಕಪರ್ವತವು ಸಮೀಪಿಸಿದೊಡನೆಯೆ ಶ್ರೀರಾಮನು ತನ್ನ ಮಡದಿಯನ್ನು ಕುರಿತು "ಜಾನಕಿ, ಮಿಂಚಿನ ಬಳ್ಳಿಯೊಡಗೂಡಿರುವ ಮುಗಿಲಿನಂತೆ ಕಾಣುತ್ತಿದೆಯಲ್ಲಾ, ಅದೇ ಋಷ್ಯಮೂಕ ಪರ್ವತ. ಅದರ ಬಳಿಯಲ್ಲಿಯೆ ನಾನು ಸುಗ್ರೀವನೊಡನೆ ಸಖ್ಯವನ್ನು ಮಾಡಿಕೊಂಡುದು. ಅಗೋ ಅಲ್ಲಿ ಕಾಣುತ್ತಿರುವ ಜಲರಾಶಿಯೆ ಪಂಪಾಸರೋವರ. ಅದರ ತೀರದಲ್ಲಿಯೆ ಶಬರಿಯನ್ನು ಸಂದರ್ಶಿಸಿದ್ದು. ಅಗೋ ಆ ಪ್ರದೇಶದಲ್ಲಿಯೆ ಕಬಂಧನನ್ನು ಕೊಂದುಹಾಕಿದ್ದು. ಅದನ್ನು ದಾಟಿದೊಡನೆಯೆ ಕಾಣಿಸುತ್ತಿರುವ ಪ್ರದೇಶವೆ ಜನಸ್ಥಾನ. ಅಗೊ ನೋಡು, ಆ ಮಹಾವೃಕ್ಷದ ಬಳಿಯಲ್ಲಿಯೆ



ಆ ವಿಮಾನವು ದೊಡ್ಡ ಮೋಡದಂತೆ ಆಕಾಶದಲ್ಲಿ ಹಾರುತ್ತಾ ಪ್ರಯಾಣ ಹೊರಟಿತು

ಜಟಾಯು ರಾವಣನೊಡನೆ ಯುದ್ಧಮಾಡಿದ್ದು. ಆ ವೃಕ್ಷದ ಆ ಕಡೆಯೆ ನಾನು ಖರದೂಷಣರನ್ನೂ ತ್ರಿಶಿರಸ್ಕನನ್ನೂ ಬಲಿಹಾಕಿದ್ದು. ಆಗೊ ನಾವು ವಾಸಮಾಡುತ್ತಿದ್ದ ಪರ್ಣಶಾಲೆ! ಅಲ್ಲಿಂದಲೆ ಪಾಪಿಯಾದ ರಾವಣನು ನಿನ್ನನ್ನು ಕರೆದೊಯ್ದುದು. ಸಮೀಪದಲ್ಲಿಯೆ ಗೋದಾವರಿ ಎಷ್ಟು ಮನೋಹರವಾಗಿ ಹರಿಯುತ್ತಿದೆ! ಅದರ ತಡಿಯಲ್ಲಿಯೆ ಅತ್ತ ಕಾಣುತ್ತಿರುವ ಬಾಳೆಯ ಮರಗಳುಳ್ಳುದೆ ಅಗಸ್ತ್ಯರ ಆಶ್ರಮ. ಅತ್ತ ನೋಡು, ಅಲ್ಲಿ ಕಾಣುತ್ತಿರುವುದು ಶರಭಂಗಾಶ್ರಮ; ಅಲ್ಲಲ್ಲಿ ಓಡಾಡುತ್ತಿರುವ

ಋಷಿಗಳು ಕೂಡ ಕಾಣುತ್ತಿದ್ದಾರೆ. ಜಾನಕಿ, ಈಗ ಕಾಣಬರುತ್ತಿರುವುದು ಕುಲಪತಿಯಾದ ಅತ್ರಿಮುನಿಯ ಆಶ್ರಮ ; ಅಲ್ಲಿಯೆ ಪತಿವ್ರತಾಶಿರೋಮಣಿಯಾದ ಅನಸೂಯಾದೇವಿಯನ್ನು ಕಂಡದ್ದು. ದೇವಿ, ಅಗೋ, ಚಿತ್ರಕೂಟ ಪರ್ವತ! ಇಲ್ಲಿಗೇ ಭರತಕುಮಾರ ನಮ್ಮನ್ನು ಹುಡುಕಿಕೊಂಡು ಬಂದಿದ್ದುದು. ದಟ್ಟವಾದ ವನದ ಮಧ್ಯೆ ಹರಿಯುತ್ತಿರುವುದೆ ಯಮುನಾ ನದಿ. ವೈಥಿಲಿ, ಅಗೋ, ಆಗಲೆ ಭರದ್ವಾಜಾಶ್ರಮ ಕಾಣಬರುತ್ತಿದೆ! ಉಪವನಗಳಿಂದ ವಿರಾಜಿಸುತ್ತಿರುವ ದಡಗಳುಳ್ಳ ಆ ನದಿಯೆ ಗಂಗಾನದಿ! ಇಗೊ ಇದು ಶೃಂಗಿಬೇರಪುರ. ಇಲ್ಲಿಯೆ ನನ್ನ ಮಿತ್ರನಾದ ಗುಹನು ವಾಸವಾಗಿರುವುದು. ಸೀತಾ, ಆಗೊ ಅಗೊ ನಮ್ಮ ಸರಯೂ ನದಿ! ಅಯೋಧ್ಯಾ ಪಟ್ಟಣ! ಜಾನಕಿ, ಅಯೋಧ್ಯೆಗೆ ನಮಸ್ಕರಿಸು!" ಎಂದನು. ಅಯೋಧ್ಯೆಯೆಂಬ ಮಾತನ್ನು ಕೇಳುತ್ತಲೆ ವಿಮಾನದಲ್ಲಿ ಕುಳಿತಿದ್ದವರೆಲ್ಲರೂ ಒಮ್ಮೆಯೆ ಆನಂದದಿಂದ ಬಾಗಿ ಬಾಗಿ ಆ ಊರನ್ನು ನೋಡಿದರು. ಉಪ್ಪರಿಗೆಯ ಮನೆಗಳಿಂದಲೂ ಪ್ರಾಕಾಶಗಳಿಂದಲೂ ಕಂಗೊಳಿಸುತ್ತಿದ್ದ ಆ ನಗರವನ್ನು ಕಂಡು ದೇವೇಂದ್ರನ ಅಮರಾವತಿಯನ್ನು ಕಂಡವರಂತೆ ಆನಂದಭರಿತರಾದರು.

---

೨೮

## ಸಹೋದರ ಸಮಾಗಮ

ಸೀತಾರಾಮಲಕ್ಷ್ಮಣರು ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸಿ, ಚೈತ್ರಶುದ್ಧ ಪಂಚಮಿ ದಿನ ಅಯೋಧ್ಯೆಗೆ ಹಿಂದಿರುಗಿದ್ದಾಯಿತು. ಆದರೆ ಅವರು ಅಯೋಧ್ಯೆಯಲ್ಲಿ ಕಾಲಿಕ್ಕಲಿಲ್ಲ, ಭರದ್ವಾಜಾಶ್ರಮದಲ್ಲಿ ಇಳಿದರು. ಶ್ರೀರಾಮನು ಹೆಂಡತಿಯೊಡನೆಯೂ ತಮ್ಮನೊಡನೆಯೂ ಆಶ್ರಮವನ್ನು ಪ್ರವೇಶಿಸಿ, ಮಹರ್ಷಿಗೆ ನಮಸ್ಕರಿಸಿ, ಭರತಕುಮಾರನ ಮತ್ತು ಅಯೋಧ್ಯೆಯಲ್ಲಿರುವ ಇತರರ ಆರೋಗ್ಯ ಭಾಗ್ಯವನ್ನು ಕುರಿತು ಪ್ರಶ್ನಿಸಿದನು. ಭರದ್ವಾಜ ಮಹರ್ಷಿ ಮಹದಾನಂದದಿಂದ ಮುಗುಳ್ನಗೆ ನಗುತ್ತಾ "ರಾಮಚಂದ್ರ, ಜಟಾವಲ್ಕಲಧಾರಿಯಾದ ಭರತಕುಮಾರನು ನಿನ್ನ ಪಾದುಕೆಗಳ ಹೆಸರಿನಲ್ಲಿ ರಾಜ್ಯಭಾರಮಾಡುತ್ತಾ, ನಿನ್ನ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದಾನೆ. ಅಯೋಧ್ಯೆಯಲ್ಲಿ ಎಲ್ಲರೂ ಕುಶಲರಾಗಿರುವರು. ಅದು ಹಾಗಿರಲಿ. ನೀನು ತಂದೆಯ ಮಾತನ್ನು ನಡೆಸುವುದಕ್ಕಾಗಿ ಸಮಸ್ತ ಭೋಗಗಳನ್ನೂ ತೊರೆದು, ಸ್ವರ್ಗದಿಂದ ಜಾರಿದ ದೇವತೆಯಂತೆ ಅರಣ್ಯ ವಾಸಕ್ಕೆ ಹೊರಟುದನ್ನು ಕಂಡದ್ದು ನನಗೆ ಬಹು ಸಂಕಟವಾಗಿತ್ತು. ಇಂದು ಶತ್ರುಗಳನ್ನೆಲ್ಲಾ ಜಯಿಸಿ ಮಿತ್ರವೃಂದಪರಿವೃತನಾಗಿ ಹಿಂದಿರುಗಿದ ನಿನ್ನನ್ನು ಕಂಡು ಬಹು ಸಂತೋಷವಾಗಿದೆ. ಧರ್ಮವತ್ಸಲನಾದ ರಾಮಚಂದ್ರ, ನೀನು ಅರಣ್ಯವಾಸದಲ್ಲಿ ಇದ್ದಾಗ ಶತ್ರುಗಳೊಡನೆ ಹೋರಾಡಿದುದೂ, ಸೀತಾಪಹರಣ, ಸುಗ್ರೀವ ಸಖ್ಯ, ರಾವಣ ಸಂಹಾರ ಇತ್ಯಾದಿ ಸಮಸ್ತವೂ ನನಗೆ ಜ್ಞಾನ ದೃಷ್ಟಿಯಿಂದ ವೇದ್ಯವಾಗಿಯೆ ಇದೆ. ನೀನು ಇಂದು ಇಲ್ಲಿಯೆ ಇದ್ದು, ನಾನು ಮಾಡುವ ಅತಿಥಿ ಸತ್ಕಾರವನ್ನು ಕೈಕೊಂಡು ನಾಳೆ ಅಯೋಧ್ಯೆಗೆ ಪ್ರಯಾಣಮಾಡು" ಎಂದನು.

ಮಹರ್ಷಿಯ ಮಾತುಗಳಿಗೆ ಮಹಾಪ್ರಸಾದವೆಂದು ಹೇಳಿ, ಶ್ರೀರಾಮ ಆತನನ್ನು ಕುರಿತು "ಋಷಿಶ್ರೇಷ್ಠನೆ, ಇಲ್ಲಿಂದ ಅಯೋಧ್ಯೆಗೆ ಹೋಗುವ ದಾರಿಯಲ್ಲಿ ಮರಗಳೆಲ್ಲವೂ ಫಲಪುಷ್ಪಗಳಿಂದ ಸಮೃದ್ಧವಾಗುವಂತೆ ಅನುಗ್ರಹಿಸು" ಎಂದು ಬೇಡಿಕೊಂಡನು. ಮಹರ್ಷಿ 'ಅಸ್ತು' ಎಂದೊಡನೆಯೆ ಆ ಋಷ್ಯಾಶ್ರಮದಿಂದ ಅಯೋಧ್ಯೆಯವರೆಗೆ ಮೂರು ಯೋಜನ ದೂರ ವೃಕ್ಷಗಳೆಲ್ಲವೂ ಫಲಸಮೃದ್ಧವಾದುವು. ಒಣಮರಗಳೂ ಕೂಡ ಚಿಗುರಿ ಹೂ ಹಣ್ಣುಗಳಿಂದ ತುಂಬಿದುವು. ವಾನರರೆಲ್ಲರೂ ಪರಮಾನಂದದಿಂದ ಆ ವೃಕ್ಷಗಳಲ್ಲಿದ್ದ ಫಲಗಳನ್ನು ಭುಜಿಸಿ ಸ್ವರ್ಗವನ್ನೇ ಪಡೆದವರಂತೆ ನಲಿದು ನರ್ತಿಸಿದರು.

ಅನಂತರ ಶ್ರೀರಾಮಚಂದ್ರನು ಹನುಮಂತನನ್ನು ಕರೆದು "ಮಾರುತಿ, ನೀನೀಗಲೆ ಇಲ್ಲಿಂದ ಹೊರಟು ಶೃಂಗಿಬೇರಪುರದಲ್ಲಿರುವ ಗುಹರಾಜನಿಗೂ ಅಯೋಧ್ಯೆಯಲ್ಲಿರುವ ವರಿಗೂ ತಿಳಿಸು. ಭರತನಿಗೆ ಇದುವರೆಗೆ ನನ್ನ ಅರಣ್ಯ ವಾಸದಲ್ಲಿ ನಡೆದಿರುವುದೆಲ್ಲವನ್ನೂ ತಿಳಿಸಿ, ಈಗ ಸುಗ್ರೀವರಾಜನೊಡನೆಯೂ ವಿಭೀಷಣನೊಡನೆಯೂ ಬಂದು ಈ ಆಶ್ರಮ ದಲ್ಲಿರುವ ವಿಚಾರವನ್ನು ತಿಳಿಸು. ಅದನ್ನು ಕೇಳಿ ಆತನ ಮುಖದಲ್ಲಿ ಮೂಡುವ ಬದಲಾವಣೆಗಳನ್ನು ಮನಸ್ಸಿನಲ್ಲಿ ಏಳಬಹುದಾದ ಭಾವಗಳನ್ನೂ ಅರಿತುಕೊಂಡು ಬರುವವನಾಗು. ಆತನಿಗೆ ರಾಜ್ಯಾಭಿಷೇಕದ ಮೇಲೆ ಆಸೆಯಿದ್ದರೆ ಅಗತ್ಯವಾಗಿಯೂ ಆತನೆ ರಾಜ್ಯಭಾರ ಮಾಡಿಕೊಂಡಿರಲಿ. ಅದು ನನಗೆ ಅತ್ಯಂತ ಆನಂದವೇ ಸರಿ. ನಾನು ಇಲ್ಲಿಂದ ಹೊರಟು ಅಯೋಧ್ಯೆಯನ್ನು ಸೇರುವುದರೊಳಗಾಗಿ ನೀನು ಆ ಸುದ್ದಿಯನ್ನು ತರಬೇಕು" ಎಂದು ಹೇಳಿದನು.

ಶ್ರೀರಾಮನ ಆಜ್ಞೆಯಾದೊಡನೆಯೆ ಮಾರುತಿ ಮಾನವರೂಪವನ್ನು ಧರಿಸಿ, ಗರುತ್ಮಂತನಂತೆ ಆಕಾಶಮಾರ್ಗವಾಗಿ ಅಯೋಧ್ಯೆಯ ಹಾದಿಯನ್ನು ಹಿಡಿದನು. ಗಂಗಾಯಮುನಾ ನದಿಗಳ ಸಂಗಮ ಸ್ಥಾನದಲ್ಲಿ ಕೆಳಕ್ಕಿಳಿದು ಶೃಂಗಿಬೇರಪುರವನ್ನು ಸೇರಿ ಗುಹನೊಡನೆ ಶ್ರೀರಾಮಚಂದ್ರನ ವೃತ್ತಾಂತವನ್ನೆಲ್ಲಾ ತಿಳಿಸಿದನು. ಅನಂತರ ಮತ್ತೊಮ್ಮೆ ಆಕಾಶಕ್ಕೆ ಹಾರಿ, ಅನೇಕ ನದಿ ವನಗಳನ್ನು ದಾಟಿ ನಂದಿಗ್ರಾಮವನ್ನು ಸೇರಿದನು. ಅಲ್ಲಿ ನಾರುಡೆಯುಟ್ಟು, ಕೃಷ್ಣಾಜಿನವನ್ನು ಹೊದೆದು, ಆಶ್ರಮಸ್ಥ ನಾಗಿರುವ ಭರತಕುಮಾರನನ್ನು ಆತ ನೋಡಿದನು. ಆತನ ಮಂತ್ರಿ ಪುರೋಹಿತರೂ ಕಾಷಾಯವಸ್ತ್ರಧಾರಿಗಳಾಗಿದ್ದರು. ನಂದಿಗ್ರಾಮದ ಪ್ರಜೆಗಳೂ ಕೂಡ ಋಷಿಜೀವನ ವನ್ನು ನಡಸುತ್ತಿದ್ದರು. ಇದನ್ನು ಕಂಡು ಆಶ್ಚರ್ಯಪಡುತ್ತಾ, ವ್ಯಸನದಿಂದ ಕೃಶನಾಗಿದ್ದ ಭರತನ ಬಳಿ ಸಾರಿ, ಕೈಗಳನ್ನು ಜೋಡಿಸಿಕೊಂಡು "ಎಲೈ ರಘು ಕುಲೋತ್ತಮನೆ, ಯಾವ ಮಹನೀಯನಿಗಾಗಿ ನೀನು ಹೀಗೆ ಸಂತಪ್ತನಾಗಿರುವೆಯೊ ಆ ಶ್ರೀರಾಮನು ತನ್ನ ಕುಶಲವಾರ್ತೆಯನ್ನು ನಿನಗೆ ತಿಳಿಸಿರುವಂತೆ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ. ಆತನು ರಾವಣನನ್ನು ಸಂಹರಿಸಿ, ಸೀತಾಮಾತೆಯೊಡನೆಯೂ ಲಕ್ಷ್ಮಣಸ್ವಾಮಿಯೊಡನೆಯೂ ಅರಣ್ಯದಿಂದ ಹಿಂದಿರುಗಿ ನಿನ್ನ ಬಳಿಗೆ ಬರುತ್ತಿದ್ದಾನೆ" ಎಂದು ಹೇಳಿದನು.

ಹನುಮಂತನು ಹೇಳಿದ ಸಂತೋಷವಾರ್ತೆ ಕಿವಿಗೆ ಬೀಳುತ್ತಿದ್ದಂತೆಯೆ ಭರತನು ಆನಂದಾಧಿಕ್ಯದಿಂದ ಮೈಮರೆತು ಮೂರ್ಛಿತನಾದನು. ಕ್ಷಣಕಾಲದ ಮೇಲೆ ಆತನು ಎಚ್ಚತ್ತು ಹನುಮಂತನನ್ನು ಗಾಢವಾಗಿ ಆಲಿಂಗಿಸಿಕೊಂಡನು. ಕಣ್ಣುಗಳಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತಾ ಆತನು, "ಎಲೈ ಪುರುಷೋತ್ತಮನೆ, ನೀನು ಮಾನವನೊ ದೇವನೊ; ಯಾರಾದರೂ ಸರಿ, ಈ ವಾರ್ತೆಯನ್ನು ಹೇಳಿದ ನಿನಗೆ ಒಂದು ಲಕ್ಷ ಗೋಗಳನ್ನೂ ದಿವ್ಯಾಂಬರಧಾರಿಣಿಯರಾದ ಹದಿನಾರುಮಂದಿ ಚಂದ್ರಮುಖಿಯರನ್ನೂ ಬಹುಮಾನವಾಗಿ ಕೊಟ್ಟಿರುತ್ತೇನೆ. ಆಹಾ! ನಾನೆಂತಹ ಭಾಗ್ಯಶಾಲಿ! ಅಯ್ಯಾ

ಮಹನೀಯನೆ! 'ಜೀವಂ ಭದ್ರಾಣಿ ಪಶ್ಯತಿ' ಎಂಬ ಮಾತು ಸುಳ್ಳಲ್ಲ. ಶ್ರೀರಾಮನ ವೃತ್ತಾಂತವನ್ನೆಲ್ಲಾ ನನಗೆ ಸಮಗ್ರವಾಗಿ ತಿಳಿಸು" ಎಂದು ಕೇಳಿಕೊಂಡನು.

ಭರತನ ಪ್ರಾರ್ಥನೆಯಂತೆ ಹನುಮಂತನು ಭದ್ರಾಸನದಲ್ಲಿ ಕುಳಿತು ಶ್ರೀರಾಮನ ವನವಾಸ ವೃತ್ತಾಂತವನ್ನೆಲ್ಲಾ ಸಮಗ್ರವಾಗಿ ತಿಳಿಸಿದನು. "ಎಲೈ ಭರತಕುಮಾರ, ಶ್ರೀರಾಮನ ಪಾದುಕೆಗಳನ್ನು ತೆಗೆದುಕೊಂಡು ಚಿತ್ರಕೂಟಪರ್ವತದಿಂದ ಹಿಂದಿರುಗಿದ ಮೇಲೆ, ಆತನು ಸೀತಾಲಕ್ಷ್ಮಣರೊಡನೆ ದಂಡಕಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ವಿರಾಧನೆಂಬ ರಾಕ್ಷಸನನ್ನು ಸಂಹರಿಸಿ, ಶರಭಂಗಋಷಿಗಳ ಆಶ್ರಮಕ್ಕೆ ಹೋದನು. ಆ ದಿನವೆ ಮಹರ್ಷಿಯು ಶ್ರೀರಾಮನಿಂದ ಅನುಜ್ಞೆಯನ್ನು ಪಡೆದು ಸ್ವರ್ಗಲೋಕಕ್ಕೆ ಹೊರಟುಹೋದನು. ತರುವಾಯ ಶ್ರೀರಾಮನು ಜನಸ್ಥಾನವನ್ನು ಪ್ರವೇಶಿಸಿದನು. ಅಲ್ಲಿ ಶೂರ್ಪಣಖಿಯೆಂಬ ರಾಕ್ಷಸಿಯ ಕಿವಿಮೂಗುಗಳನ್ನು ಕತ್ತರಿಸಿ ಆಕೆಯ ಸಹಾಯಕ್ಕಾಗಿ ಬಂದ ಹದಿನಾಲ್ಕು ಸಹಸ್ರ ರಾಕ್ಷಸರನ್ನು ರಾಮಲಕ್ಷ್ಮಣರು ಸಂಹರಿಸಿದರು. ಹೀಗೆ ಭಂಗಿತಳಾದ ಆ ರಾಕ್ಷಸಿ ತನ್ನ ಅಣ್ಣನಾದ ರಾವಣನ ಬಳಿಗೆ ಹೋಗಿ ತನ್ನ ದುರವಸ್ಥೆಯನ್ನೂ ರಾಕ್ಷಸರಿಗಾದ ದುರವಸ್ಥೆಯನ್ನೂ ಹೇಳಿಕೊಂಡಳು. ಆಗ ಆ ರಾಕ್ಷಸರಾಜನಾದ ರಾವಣನು ಮೋಸದಿಂದ ಸೀತಾದೇವಿಯನ್ನು ಅಪಹರಿಸಿ ಲಂಕೆಗೊಯ್ದನು. ಆಕಾಶಮಾರ್ಗದಿಂದ ಆಕೆಯನ್ನು ಅವನು ಒಯ್ಯುತ್ತಿದ್ದುದನ್ನು ಋಷ್ಯಮೂಕಪರ್ವತದ ಬಳಿಯಲ್ಲಿದ್ದ ವಾನರರು ಕಂಡು, ಸೀತೆಯನ್ನು ಅರಸುತ್ತಾ ಅಲ್ಲಿಗೆ ಬಂದ ಶ್ರೀರಾಮನಿಗೆ ತಿಳಿಸಿದರು. ಅಲ್ಲಿ ಆತನಿಗೂ ಸುಗ್ರೀವನೆಂಬ ವಾನರ ರಾಜನಿಗೂ ಸ್ನೇಹವಾಯಿತು. ಶ್ರೀರಾಮನು ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹರಿಸಿ, ಸುಗ್ರೀವನಿಗೆ ಪಟ್ಟಕಟ್ಟಿದನು. ಆ ಮಹಾರಾಜನ ಅಪ್ಪಣೆಯಂತೆ ನಾನೂ ಇತರ ಕೆಲವು ವಾನರ ವೀರರೂ ಸೀತಾಮಾತೆಯನ್ನು ಹುಡುಕುವುದಕ್ಕಾಗಿ ದಕ್ಷಿಣದಿಕ್ಕಿಗೆ ಹೊರಟೆವು. ವಿಂಧ್ಯಪರ್ವತದ ಬಳಿಯಲ್ಲಿ ನಾವಿದ್ದಾಗ ಸಂಪಾತಿಯೆಂಬ ಗೃಧ್ರರಾಜನಿಂದ ಸೀತಾದೇವಿ ಲಂಕಾಪಟ್ಟಣದಲ್ಲಿರುವಳೆಂದು ಕೇಳಿ, ನಾನು ಸಾಗರವನ್ನು ದಾಟಿ ಲಂಕೆಗೆ ಹೋದೆ. ಅಲ್ಲಿ ರಾವಣನ ಬಂದಿಯಾಗಿ ಅತ್ಯಂತ ದುಃಖಕ್ಕೆ ಒಳಗಾಗಿದ್ದ ಸೀತಾಮಾತೆಯನ್ನು ಅಶೋಕವನದಲ್ಲಿ ಕಂಡು ಶ್ರೀರಾಮನ ಮುದ್ರೆಯುಂಗುರವನ್ನು ಆಕೆಗೊಪ್ಪಿಸಿದೆ. ಆಕೆ ತನ್ನ ಗುರುತಿಗಾಗಿ ಶ್ರೀರಾಮನಿಗೆ ಚೂಡಾಮಣಿಯನ್ನು ಕೊಡಲು, ಅದನ್ನು ತೆಗೆದುಕೊಂಡು ಶ್ರೀರಾಮನ ಬಳಿಗೆ ಬಂದು ಆಕೆಯ ವೃತ್ತಾಂತವನ್ನೆಲ್ಲಾ ತಿಳಿಸಿದೆ. ಶ್ರೀರಾಮನು ಕ್ರುದ್ಧನಾಗಿ ವಾನರ ಸೇನೆಯೊಡನೆ ರಾವಣನ ಮೇಲೆ ಯುದ್ಧಕ್ಕೆ ಹೊರಟನು. ವಾನರ ವೀರನಾದ ನಳನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು, ಅದರ ಮೇಲೆ ವಾನರ ಸೇನೆ ಸಮುದ್ರವನ್ನು ದಾಟಿ ಲಂಕೆಯನ್ನು ಸೇರಿತು. ವಾನರರಿಗೂ ರಾಕ್ಷಸರಿಗೂ ಘೋರವಾದ ಯುದ್ಧವಾಯಿತು. ಶ್ರೀರಾಮನ ಬಾಣಗಳಿಂದ ರಾಕ್ಷಸ ವಂಶವೆಲ್ಲವೂ ನಾಶವಾಗಿ ಹೋಯಿತು. ಆಗ ದೇವತೆಗಳೆಲ್ಲರೂ ಪ್ರತ್ಯಕ್ಷರಾಗಿ ಶ್ರೀರಾಮನನ್ನು ಆಶೀರ್ವದಿಸಿದರು. ದಶರಥ ಮಹಾರಾಜನೂ ಸ್ವರ್ಗದಿಂದ ಇಳಿದು ಬಂದು ಸೀತಾರಾಮಲಕ್ಷ್ಮಣರನ್ನು

ಆಶೀರ್ವದಿಸಿದನು. ಅನಂತರ ಅವರು ಮೂವರೂ ವಾನರ ಪರಿವಾರದೊಡನೆ ಗಂಗಾ ತೀರದಲ್ಲಿರುವ ಭರದ್ವಾಜರ ಆಶ್ರಮಕ್ಕೆ ಬಂದು ಇಳಿದುಕೊಂಡಿದ್ದಾರೆ. ನಾಳೆ ಅವರೆಲ್ಲರೂ ಇಲ್ಲಿಗೆ ಹೊರಟುಬರುತ್ತಾರೆ. ನೀನು ನಿಮ್ಮ ಅಣ್ಣನಾದ ರಾಮಚಂದ್ರ ನನ್ನು ನಾಳೆ ನೋಡುವೆ."

ಶ್ರೀರಾಮ ವೃತ್ತಾಂತವನ್ನು ಭಕ್ತಿಯಿಂದ ಕೇಳುತ್ತಿದ್ದ ಭರತನು ಹನುಮಂತನು ಮಾತನ್ನು ಮುಗಿಸುತ್ತಲೆ ಆತನನ್ನು ಕುರಿತು "ಮಹಾನುಭಾವ, ನನ್ನ ಮನೋರಥ ಇಂದು ಪೂರ್ಣವಾಯಿತು!" ಎಂದನು. ಅನಂತರ ಸಮೀಪದಲ್ಲಿಯೇ ನಿಂತಿದ್ದ ಶತ್ರುಘ್ನ ನನ್ನು ಕುರಿತು ಆತನು "ತಮ್ಮ, ಅಯೋಧ್ಯಾನಗರದ ದೇವಾಲಯಗಳಲ್ಲೆಲ್ಲ ವಿಜೃಂಭಣೆ ಯಿಂದ ಪೂಜಾದಿಗಳು ನಡೆಯಲಿ. ಅಂತಃಪುರದವರೂ ನಮ್ಮ ಮಾತೆಯರೂ ಊರಿನ ಸಮಸ್ತ ಜನರೂ ಶ್ರೀರಾಮನನ್ನು ಇದಿರುಗೊಳ್ಳಲು ಈಗಲೆ ತೆರಳಲಿ" ಎಂದನು. ಆತನ ಅಪ್ಪಣೆಯಂತೆ ಕೆಲಸಗಾರರು ನಂದಿಗ್ರಾಮದಿಂದ ಅಯೋಧ್ಯೆಯವರೆಗೆ ದಾರಿಯೆಲ್ಲ ವನ್ನೂ ನೇರ್ಪುಗೊಳಿಸಿ, ಪನ್ನೀರನ್ನು ಸಿಂಚಿಸಿದರು. ಎಲ್ಲೆಲ್ಲಿಯೂ ತಳಿರುತೋರಣ ಗಳು ರಾರಾಜಿಸಿದುವು. ಅಯೋಧ್ಯೆಯನ್ನೆಲ್ಲಾ ಧ್ವಜಪತಾಕೆಗಳಿಂದ ಸುಂದರವಾಗಿ ಅಲಂಕರಿಸಿದರು. ಮನೆಮನೆಯನ್ನೂ ಪುಷ್ಪಹಾರಗಳಿಂದ ಅಲಂಕರಿಸಿದರು. ಜನರೆಲ್ಲರೂ ನೂತನ ವಸ್ತ್ರಾಭರಣಗಳಿಂದ ಅಲಂಕೃತರಾದರು. ಎಲ್ಲರೂ ಶ್ರೀರಾಮನನ್ನು ಇದಿರು ಗೊಳ್ಳುವುದಕ್ಕಾಗಿ ಅಯೋಧ್ಯೆಗೆ ಒಂದು ಕ್ರೋಶ ದೂರದಲ್ಲಿದ್ದ ನಂದಿಗ್ರಾಮಕ್ಕೆ ಹೊರಟುಬಂದರು.

ಸಮಸ್ತ ಪರಿವಾರದೊಡನೆಯೂ ಪರಿಜನರೊಡನೆಯೂ ಭರತನು ಶ್ರೀರಾಮ ಚಂದ್ರನ ಆಗಮನವನ್ನೆ ಇದಿರುನೋಡುತ್ತಾ ನಿಂತನು. ಒಂದೊಂದು ಕ್ಷಣವೂ ಆತನಿಗೆ ಒಂದು ಯುಗದಂತೆ ತೋರುತ್ತಿತ್ತು. ಅಷ್ಟರಲ್ಲಿ ದೂರದಿಂದ ವಾನರರ ಹರ್ಷಧ್ವನಿ ಕೇಳಬಂದಿತು. ಹನುಮಂತನು ಭರತನನ್ನು ಕುರಿತು "ರಾಘವಾನುಜ! ಅಗೊ ನೋಡು; ವಾನರರ ಗುಂಪು ನಡೆದುಬರುತ್ತಿರುವುದರಿಂದ ಎದ್ದ ಧೂಳು ಗೋಮತೀ ತೀರದಲ್ಲಿ ಕಾಣಬರುತ್ತಿದೆ. ಅಗೊ! ಅಗೊ! ಚಂದ್ರಕಾಂತಿ ವಿರಾಜಿತವಾದ ಪುಷ್ಪಕ ವಿಮಾನ! ಅದರಲ್ಲಿ ಸೀತಾರಾಮಲಕ್ಷ್ಮಣರೂ ವಾನರ ರಾಜನಾದ ಸುಗ್ರೀವನೂ ರಾಕ್ಷಸರಾಜ ನಾದ ವಿಭೀಷಣನೂ ಕುಳಿತಿದ್ದಾರೆ" ಎಂದನು. ಆ ಮಾತನ್ನು ಕೇಳುತ್ತಲೆ ಆಬಾಲವೃದ್ಧ ರೆಲ್ಲರೂ ಜಯಜಯಕಾರ ಮಾಡಿದರು. ಆ ಜಯ ಶಬ್ದ ಆಕಾಶವನ್ನೆಲ್ಲಾ ವ್ಯಾಪಿಸಿತು.

ಭರತನು ಆಕಾಶದಲ್ಲಿ ಬರುತ್ತಿರುವ ಪುಷ್ಪಕವಿಮಾನದ ಕಡೆ ಕೈ ಮುಗಿದುಕೊಂಡೆ ನಿಂತಿದ್ದನು. ಮೇರುಪರ್ವತದ ಶಿಖರದ ಮೇಲೆ ಉದಯಿಸುವ ಸೂರ್ಯನಂತೆ ಕಂಗೊಳಿ ಸುತ್ತಿದ್ದ ಶ್ರೀರಾಮನನ್ನು ಕಾಣುತ್ತಲೆ ಆತನು ಭಕ್ತಿಯಿಂದ ನಮಸ್ಕರಿಸಿದನು. ಕ್ಷಣಮಾತ್ರದಲ್ಲಿ ವಿಮಾನ ಕೆಳಕ್ಕಿಳಿಯಿತು. ಭರತನು ಓಡಿಹೋಗಿ ಅದರಲ್ಲಿ ಕುಳಿತಿದ್ದ ಅಣ್ಣನ ಕಾಲುಗಳನ್ನು ಹಿಡಿದು ನಮಸ್ಕರಿಸಿದನು. ಅನಂತರ ಅತ್ತಿಗೆಗೂ ಲಕ್ಷ್ಮಣ ಸ್ವಾಮಿಗೂ ಅಭಿವಾದನ ಮಾಡಿ, ಅಲ್ಲಿದ್ದ ವಾನರವೀರರನ್ನೆಲ್ಲಾ ಉಪಚಾರೋಕ್ತಿ

ಗಳಿಂದ ಮನ್ನಣೆ ಮಾಡಿದನು. ಸುಗ್ರೀವನನ್ನಂತೂ ಆತನು "ಇದುವರೆಗೆ ನಾವು ನಾಲ್ವರು ಸೋದರರಾಗಿದ್ದೆವು; ನೀನು ಈಗ ಐದನೆಯವನಾದೆ!" ಎಂದು ಆಲಿಂಗಿಸಿದನು. ಅಷ್ಟರಲ್ಲಿ ಶ್ರೀರಾಮನು ವಿಮಾನದೊಳಗೆ ಪ್ರವೇಶಿಸಿದ ಮಾತೆಯರಿಗೂ ಗುರುಹಿರಿಯರಿಗೂ ನಮಸ್ಕಾರ ಮಾಡಿ ಅಲ್ಲಿದ್ದ ಪ್ರಜೆಗಳೆಲ್ಲರ ಕ್ಷೇಮವನ್ನೂ ವಿಚಾರಿಸಿದನು. ಆತನನ್ನು ಕಂಡು ಜನರೆಲ್ಲರೂ ಆನಂದಬಾಷ್ಪಗಳನ್ನು ಸುರಿಸುತ್ತಾ "ಆಹಾ, ರಾಮಚಂದ್ರನು ಹಿಂದಿರುಗಿದನಲ್ಲವೆ!" ಎಂದುಕೊಂಡರು.

ಧರ್ಮಜ್ಞನಾದ ಭರತಕುಮಾರನು ಸಿಂಹಾಸನದಲ್ಲಿ ತಾನು ಪ್ರತಿಷ್ಠಿಸಿದ್ದ ಪಾದುಕೆಗಳನ್ನು ಹೊತ್ತುತಂದು ಶ್ರೀರಾಮನ ಪಾದಗಳಿಗೆ ತೊಡಿಸುತ್ತಾ "ಅಣ್ಣಾ, ನೀನು ನ್ಯಾಸವಾಗಿರಿಸಿದ್ದ ಈ ರಾಜ್ಯವನ್ನು ನಿನ್ನ ಅಪ್ಪಣೆಯಂತೆ ಇದುವರೆಗೆ ಸಂರಕ್ಷಿಸುತ್ತಿದ್ದೆನು. ಇಗೊ, ಆ ಭಾರವನ್ನು ನೀನೀಗ ವಹಿಸಿಕೊ. ಇಂದು ನನ್ನ ಮನೋರಥ ಸಫಲವಾಯಿತು; ನನ್ನ ಜನ್ಮ ಸಾರ್ಥಕವಾಯಿತು!" ಎಂದನು. ತಮ್ಮನ ನುಡಿಗಳಿಂದ ಆರ್ದ್ರಹೃದಯನಾದ ರಾಮಚಂದ್ರನು ಆತನನ್ನು ತಬ್ಬಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ವಿಮಾನದಲ್ಲಿಯೆ ಭರತನ ಆಶ್ರಮಕ್ಕೆ ಹೊರಟುಬಂದನು. ಅನಂತರ ತನ್ನ ಪರಿವಾರದೊಡನೆ ಕೆಳಕ್ಕಿಳಿದು ವಿಮಾನವನ್ನು ಅದರ ಪೂರ್ವದ ಯಜಮಾನನಾದ ಕುಬೇರನ ಬಳಿಗೆ ಹಿಂದಿರುಗುವಂತೆ ಅಪ್ಪಣೆ ಮಾಡಿದನು. ಅದು ಆಕಾಶಕ್ಕೆ ಹಾರಿ ಹೊರಟುಹೋಯಿತು.

---

# ೨೯

# ಶ್ರೀರಾಮ ಪಟ್ಟಾಭಿಷೇಕ

ಗುರುಹಿರಿಯರೆಲ್ಲರಿಗೂ ನಮಿಸಿ ಅವರ ಮಧ್ಯದಲ್ಲಿ ಮಂಗಳಾಸನದಲ್ಲಿ ಕುಳಿತ ಶ್ರೀರಾಮಚಂದ್ರನನ್ನು ಕುರಿತು ಭರತಕುಮಾರನು ನಮಸ್ಕಾರ ಪೂರ್ವಕವಾಗಿ ವಿಜ್ಞಾಪಿಸಿಕೊಂಡನು—"ಅಣ್ಣಾ, ರಾಮಚಂದ್ರ, ನನ್ನ ತಾಯಿಯ ಅಭಿಪ್ರಾಯವನ್ನು ಗೌರವಿಸಿ ಅಯೋಧ್ಯಾ ರಾಜ್ಯವನ್ನು ನನಗಿತ್ತೆ. ನೀನು ನನ್ನ ಮೇಲೆ ಹೊರಿಸಿದ ರಾಜ್ಯಭಾರವನ್ನು ಈ ಹದಿನಾಲ್ಕು ವರ್ಷಗಳೂ ಬಹಳ ಕಷ್ಟದಿಂದ ನಿರ್ವಹಿಸಿದೆ. ಈಗ ನಿನ್ನ ರಾಜ್ಯವನ್ನು ನೀನು ಹಿಂದಕ್ಕೆ ವಹಿಸಿಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ. ವೃಷಭ ಹೊರುವ ಭಾರವನ್ನು ಎಳಗರು ಹೇಗೆ ಹೊರಬಲ್ಲುದು? ಆದ್ದರಿಂದ ನಾನು ಹೊರಲಾರದ ಈ ರಾಜ್ಯಭಾರವನ್ನು ನೀನು ಈಗಲೆ ವಹಿಸುವವನಾಗು. ಸಾಕೇತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ನಿನ್ನನ್ನು ಕಣ್ತುಂಬ ಕಂಡು ಪ್ರಜೆಗಳೆಲ್ಲರೂ ಆನಂದಪಡಲಿ."

ತಮ್ಮನ ಪ್ರಾರ್ಥನೆಗೆ ಶ್ರೀರಾಮನು 'ತಥಾಸ್ತು' ಎಂದು ಹೇಳಿ, ತಮ್ಮನೊಡನೆ ಜಟಾವಿಸರ್ಜನೆ ಮಾಡಿ, ಮಂಗಳಸ್ನಾನ ಮಾಡಿದನು. ಶತ್ರುಘ್ನನೇ ನಿಂತು ಆತನಿಗೆ ದಿವ್ಯವಾದ ವಸ್ತ್ರಾಭರಣಗಳನ್ನು ತೊಡಿಸಿದನು. ಕೌಸಲ್ಯೆಯೆ ಮೊದಲಾದ ರಾಜಮಾತೆಯರು ಸೀತಾದೇವಿಗೆ ಮಂಗಳಸ್ನಾನ ಮಾಡಿಸಿ ಮನೋಹರವಾದ ಉಡುಗೆತೊಡುಗೆಗಳಿಂದ ಆಕೆಯನ್ನು ಅಲಂಕರಿಸಿದರು. ಅನಂತರ, ಸುಮಂತ್ರನು ತಂದುನಿಲ್ಲಿಸಿದ ದಿವ್ಯರಥವನ್ನೇರಿ ಸಕಲ ಪರಿವಾರದೊಡನೆ ಅಯೋಧ್ಯೆಗೆ ಹೊರಟನು. ಸುಂದರವಾಗಿ ಅಲಂಕೃತರಾದ ವಾನರರೂ ವಾನರಸ್ತ್ರೀಯರೂ ಪುರಜನರೊಡನೆ ಆತನ ಸುತ್ತಲೂ ವಿವಿಧ ವಾಹನಗಳಲ್ಲಿ ಕುಳಿತು ಮೆರವಣಿಗೆ ಹೊರಟರು. ಶ್ರೀರಾಮಚಂದ್ರನ ರಥದ ಸಾರಥ್ಯವನ್ನು ಸ್ವತಃ ಭರತನೆ ವಹಿಸಿದನು. ಶತ್ರುಘ್ನನು ಶ್ವೇತಚ್ಛತ್ರವನ್ನು ಎತ್ತಿ ಹಿಡಿದನು. ಲಕ್ಷ್ಮಣಸ್ವಾಮಿಯೂ ವಿಭೀಷಣನೂ ಚಾಮರ ಬೀಸಿದರು. ಸುಗ್ರೀವ ಮಹಾರಾಜನು ಶತ್ರುಂಜಯವೆಂಬ ಆನೆಯನ್ನೇರಿ ಮುಂದೆ ಹೊರಟನು. ವಾನರವೀರರೆಲ್ಲರೂ ಮಾನವ ರೂಪವನ್ನು ಧರಿಸಿ, ಭದ್ರಗಜಗಳ ಮೇಲೆ ಕುಳಿತು ಆತನನ್ನು ಹಿಂಬಾಲಿಸಿದರು. ಶಂಖ ಭೇರಿ ಕಹಳೆ ಮೊದಲಾದ ವಾದ್ಯಗಳು ಭೋರ್ಗರೆಯುತ್ತಾ ತಮ್ಮ ಧ್ವನಿಯಿಂದ ದಿಕ್ತಟಗಳನ್ನು ತುಂಬಿದುವು. ದೇವತೆಗಳೂ ಸಿದ್ಧವಿದ್ಯಾಧರರೂ ಆಕಾಶದಲ್ಲಿ ನಿಂತು ಶ್ರೀರಾಮನಿಗೆ ಜಯಜಯಕಾರ ಮಾಡಿದರು.

ನಕ್ಷತ್ರಗಳೊಡಗೂಡಿದ ಪೂರ್ಣಚಂದ್ರನಂತೆ ಪರಿವಾರಮಧ್ಯದಲ್ಲಿ ಬೆಳಗುತ್ತಿದ್ದ ಶ್ರೀರಾಮಚಂದ್ರನು ಮಹಾ ವೈಭವದಿಂದ ಅಯೋಧ್ಯೆಯನ್ನು ಪ್ರವೇಶಿಸಿದನು.

ಗುರುಗಳೂ ಪುರೋಹಿತರೂ ಆಶೀರ್ವದಿಸಿ ಆತನಿಗೆ ಶೇಷಾಕ್ಷತೆ ತಳಿದರು. ಮುತ್ತೈದೆಯರು ಸಾಲುಸಾಲಾಗಿ ಬಂದು ಲಾಜಾರತಿ ಎತ್ತಿದರು. ಪ್ರಜೆಗಳ ಸಂಭ್ರಮವನ್ನೇ ಹೇಳತೀರದು. ನಭೋಭಾಗವನ್ನು ತುಂಬುತ್ತಿರುವ ಜಯಜಯಕಾರಗಳ ಮಧ್ಯೆ ಸಾಗಿ ಬಂದು ಶ್ರೀರಾಮನು ಅರಮನೆಯನ್ನು ಪ್ರವೇಶಿಸಿದನು. ಸುಗ್ರೀವ ಮಹಾರಾಜನೂ ವಿಭೀಷಣನೂ ಉಚಿತ ಗೌರವಗಳೊಡನೆ ಅರಮನೆಯಲ್ಲಿಯೆ ಇಳಿದುಕೊಂಡರು. ತಮ್ಮ ರಾಜನ ಅಪ್ಪಣೆಯಂತೆ ಕಪಿವೀರರು ನಾಲ್ಕು ಸಮುದ್ರಗಳಿಂದಲೂ ಅನೇಕ ಪುಣ್ಯನದಿಗಳಿಂದಲೂ ಪುಣ್ಯೋದಕಗಳನ್ನು ಕೊಂಡುಬಂದರು. ಆ ಪೂರ್ಣ ಜಲಕುಂಭಗಳನ್ನು ವಸಿಷ್ಠಮಹರ್ಷಿಗಳು ಅರಮನೆಯ ದೇವಾಗಾರದಲ್ಲಿ ಇರಿಸಿದರು.

ಶ್ರೀರಾಮಚಂದ್ರನ ಪಟ್ಟಾಭಿಷೇಕಕ್ಕಾಗಿ ಸಮಸ್ತ ಸಂಭಾರಗಳೂ ಸಿದ್ಧವಾದುವು. ಅನಂತರ ವಸಿಷ್ಠಮಹರ್ಷಿ ಇತರ ಪುರೋಹಿತರೊಡಗೂಡಿ ಮಂತ್ರವನ್ನು ಜಪಿಸುತ್ತಾ ಸೀತಾಸಮೇತನಾದ ಶ್ರೀರಾಮಚಂದ್ರನನ್ನು ರತ್ನಸಿಂಹಾಸನದ ಮೇಲೆ ಕುಳ್ಳಿರಿಸಿದನು. ವಾಮದೇವ ಜಾಬಾಲಿ ಗೌತಮ ಕಾಶ್ಯಪ ಮೊದಲಾದ ಮಹರ್ಷಿಗಳು ಆತನೊಡನೆ ಸೇರಿ ಶ್ರೀರಾಮಚಂದ್ರನಿಗೆ ತೀರ್ಥೋದಕದಿಂದ ಅಭಿಷೇಕ ಮಾಡಿದರು. ಪುರೋಹಿತರೂ ಋತ್ವಿಕ್ಕುಗಳೂ ಅಭಿಷೇಕಕಾರ್ಯವನ್ನು ನೆರವೇರಿಸಿದ ಮೇಲೆ ಮಂತ್ರಿಗಳೂ ಪ್ರಮುಖ ವರ್ತಕರೂ ಪ್ರಜಾಪ್ರಮುಖರೂ ಆತನಿಗೆ ಅಭಿಷೇಕ ಮಾಡಿದರು. ಪೂರ್ವದಲ್ಲಿ ಮನು ಮಹಾರಾಜನು ಧರಿಸಿ ವಂಶಾನುಕ್ರಮವಾಗಿ ಬಂದ ರತ್ನಖಚಿತವಾದ ಕಿರೀಟವನ್ನು ವಸಿಷ್ಠರು ತಮ್ಮ ಸ್ವಹಸ್ತದಿಂದ ಶ್ರೀರಾಮನ ತಲೆಯ ಮೇಲೆ ಇರಿಸಿದರು. ಅದಾದ ಮೇಲೆ ಉಳಿದ ಋತ್ವಿಜರು ವಿವಿಧ ಭೂಷಣಗಳಿಂದ ಆತನನ್ನು ಅಲಂಕರಿಸಿದರು. ಆಗ ಶತ್ರುಘ್ನನು ಆತನ ತಲೆಯ ಮೇಲೆ ಶ್ವೇತಚ್ಛತ್ರವನ್ನು ಎತ್ತಿ ಹಿಡಿದನು. ಸುಗ್ರೀವನೂ ವಿಭೀಷಣನೂ ಚಾಮರಗಳನ್ನು ಹಿಡಿದು ಸೇವೆ ಸಲ್ಲಿಸಿದರು. ವಾಯುದೇವನು ಮಹೇಂದ್ರನಿಂದ ಪ್ರೇರಿತನಾಗಿ ಆತನಿಗೆ ರತ್ನಹಾರವನ್ನು ಅರ್ಪಿಸಿದನು. ದೇವ-ಗಂಧರ್ವರು ಮಧುರವಾಗಿ ಗಾನ ಮಾಡಿದರು. ಅಪ್ಸರೆಯರು ನಾಟ್ಯಮಾಡಿದರು. ಭೂಮಿಯೆಲ್ಲವೂ ಸಸ್ಯಸಮೃದ್ಧವಾಯಿತು. ವೃಕ್ಷಗಳೆಲ್ಲವೂ ಫಲಪುಷ್ಪಭರಿತವಾದುವು.

ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ ಶ್ರೀರಾಮಚಂದ್ರನು ಒಂದು ಲಕ್ಷ ಕುದುರೆಗಳನ್ನು ಒಂದು ಲಕ್ಷ ಗೋಗಳನ್ನು ಬುಧರಿಗೆ ದಾನ ಮಾಡಿದನು. ಆಭರಣಗಳನ್ನೂ ವಿವಿಧ ವಸ್ತ್ರಗಳನ್ನೂ ಸ್ವರ್ಣನಾಣ್ಯಗಳನ್ನೂ ಅಸಂಖ್ಯಾತವಾಗಿ ದಾನ ಮಾಡಿದನು. ಸುಗ್ರೀವರಾಜನಿಗೆ ರತ್ನಮಯವಾದ ಸ್ವರ್ಣಹಾರವನ್ನೂ, ರತ್ನವಿರಾಜಿತವಾದ ಅಂಗದಗಳನ್ನು ವಾಲಿಪುತ್ರನಾದ ಅಂಗದನಿಗೂ ಬಹುಮಾನವಾಗಿ ಕೊಟ್ಟನು. ಚಂದ್ರಕಿರಣಗಳಿಗೆ ಸಮಾನವಾದ ಕಾಂತಿಯುಳ್ಳ ಮುಕ್ತಾಹಾರವನ್ನೂ ಅಮೂಲ್ಯವಾದ ವಸ್ತ್ರಾಭರಣಗಳನ್ನೂ ಆತನು ಸೀತಾದೇವಿಗೆ ಕೊಡಲು ಆಕೆ ಪಾದದ ಬಳಿ ಕೈಮುಗಿದು ಕುಳಿತಿದ್ದ ಮಾರುತಿಗೆ ಅದೆಲ್ಲವನ್ನೂ ಕೊಟ್ಟು ಬಹುಮಾನಿಸಿದಳು. ಇಷ್ಟೇ ಅಲ್ಲ, ತನ್ನ ಕೊರಳಲ್ಲಿದ್ದ ಅಮೂಲ್ಯವಾದ ರತ್ನಹಾರವನ್ನು ಕೈಗೆ ತೆಗೆದು



ಶ್ರೀರಾಮ ಪಟ್ಟಾಭಿಷೇಕ

ಕೊಂಡು ಅದನ್ನು ಮಾರುತಿಗೆ ಕೊಡಬೇಕೆಂಬ ಅಭಿಪ್ರಾಯದಿಂದ ಶ್ರೀರಾಮನ ಮುಖವನ್ನು ನೋಡಿದಳು. ಇಂಗಿತಜ್ಞನಾದ ಆತನು ಆಕೆಯನ್ನು ಕುರಿತು "ಪ್ರಿಯೆ, ನಿನಗೆ ಅತ್ಯಂತ ಪ್ರಿಯಕರವಾದ ರೀತಿಯಲ್ಲಿ ನಡೆದುಕೊಂಡಿರುವ ಈ ಮಾರುತಿಗೆ ಈ ಹಾರವನ್ನು ಕೊಡು!" ಎಂದನು. ಆಕೆ ಕೊಟ್ಟ ಹಾರವನ್ನು ಹನುಮಂತನು ಭಕ್ತಿಯಿಂದ ಧರಿಸಿ, ಬಿಳಿ ಮುಗಿಲುಗಳ ಮಣಿಯನ್ನು ಧರಿಸಿ ನಿಂತಿರುವ ಪರ್ವತದಂತೆ ಕಂಗೊಳಿಸಿದನು. ಶ್ರೀರಾಮನ ಅಪ್ಪಣೆಯಿಂದ ಉಳಿದ ವಾನರವೀರರಿಗೂ ವಿಭೀಷಣನು ಮತ್ತು ಅವನ ಪರಿವಾರದವರಿಗೂ ಅನರ್ಘ್ಯವಾದ ವಸ್ತ್ರಭೂಷಣಗಳನ್ನು ಬಹುಮಾನವಾಗಿ ಹಂಚಲಾಯಿತು.

ಶ್ರೀರಾಮಚಂದ್ರನ ಪಟ್ಟಾಭಿಷೇಕ ಸಮಯದಲ್ಲಿ ಯಥೇಷ್ಟವಾಗಿ ಪುರಸ್ಕಾರ ವನ್ನು ಹೊಂದಿ ತೃಪ್ತರಾದ ವಾನರರೂ ರಾಕ್ಷಸವೀರರೂ ತಮ್ಮ ತಮ್ಮ ರಾಜಧಾನಿ ಗಳಿಗೆ ಹಿಂದಿರುಗಿದರು. ಶ್ರೀರಾಮಚಂದ್ರನು ಮಹಾ ವೈಭವದಿಂದ ರಾಜ್ಯವಾಳುತ್ತಾ ಲಕ್ಷ್ಮಣಸ್ವಾಮಿಯನ್ನು ಕುರಿತು "ಸೌಮಿತ್ರಿ, ಈ ಭೂಮಂಡಲವನ್ನು ನನ್ನೊಡನೆ ನೀನೂ ಪರಿಪಾಲಿಸುತ್ತಾ ನನ್ನೊಡನೆ ಸಮಸಮವಾಗಿ ಸುಖವನ್ನು ಅನುಭವಿಸುವವ ನಾಗು" ಎಂದು ಹೇಳಿದನು. ಆದರೆ ಸೌಮಿತ್ರಿ ಯುವರಾಜ ಪದವಿಯನ್ನು ವಹಿಸಲು ಒಪ್ಪಲಿಲ್ಲ. ಆದ್ದರಿಂದ ಭರತನು ಯುವರಾಜನಾದನು. ಶ್ರೀರಾಮನು ಅನೇಕ ಯಜ್ಞ ಯಾಗಾದಿಗಳನ್ನು ನೆರವೇರಿಸುತ್ತಾ ಹತ್ತು ಸಹಸ್ರವರ್ಷಕಾಲ ಸುಖವಾಗಿ ರಾಜ್ಯಭಾರ ಮಾಡುತ್ತಿದ್ದನು. ಆತನ ಆಳ್ವಿಕೆಯಲ್ಲಿ ಕ್ಷಾಮಡಾಮರಗಳಾಗಲಿ ಅಕಾಲಮರಣವಾಗಲಿ ಕಂಡುಕೇಳಿದುದಿಲ್ಲ. ಲೋಕವೇ ಆನಂದದಿಂದಿದ್ದಿತು. ಜನರೆಲ್ಲರೂ ಧರ್ಮಪರರಾಗಿದ್ದರು. ಎಲ್ಲೆಲ್ಲಿಯೂ ಶ್ರೀರಾಮ ಕಥಾಲಾಪವೆ ಕೇಳಿಬರುತ್ತಿತ್ತು. ಜಗತ್ತೇ ರಾಮಮಯ ವಾಯಿತು. ವೃಕ್ಷಗಳೆಲ್ಲವೂ ನಿತ್ಯ ಫಲಪುಷ್ಪಭರಿತಗಳಾಗಿದ್ದುವು. ಕಾಲಕಾಲಕ್ಕೆ ಮಳೆ ಬರುತ್ತಿತ್ತು. ಎಲ್ಲರೂ ನಿತ್ಯತೃಪ್ತರಾಗಿದ್ದರು.

ಧನ್ಯವಾದ ಈ ವಾಲ್ಮೀಕಿ ರಾಮಾಯಣವನ್ನು ಪಠಿಸಿದವನು ಪಾಪ ರಹಿತನಾಗು ತ್ತಾನೆ. ಪುತ್ರರನ್ನು ಬೇಡುವವರು ಪುತ್ರವಂತರಾಗುತ್ತಾರೆ. ಧನಕಾಮುಕರು ಧನಾಢ್ಯ ರಾಗುತ್ತಾರೆ; ಇದನ್ನು ಕೇಳಿದವರು ಹಿಡಿದ ಸಮಸ್ತ ಕಾರ್ಯಗಳಲ್ಲಿಯೂ ವಿಜಯಶಾಲಿ ಗಳಾಗುತ್ತಾರೆ. ದೀರ್ಘಾಯುಷ್ಯವನ್ನೂ ಹೊಂದುತ್ತಾರೆ. ಇದನ್ನು ಕೇಳಿದ ಸ್ತ್ರೀಯರು ರಾಮನನ್ನು ಪಡೆದ ಕೌಸಲ್ಯೆಯಂತೆ ನಿತ್ಯ ಸಂತೋಷಭರಿತರಾಗಿ ಪುತ್ರಪೌತ್ರಾದಿ ಗಳನ್ನು ಪಡೆದು ಚಿರಸಂತೋಷವನ್ನು ಹೊಂದುತ್ತಾರೆ. ಒಂದೇ ಮಾತಿನಲ್ಲಿ ಹೇಳುವು ದಾದರೆ ಆರಾರಿಗೆ ಆವಾವುದರಲ್ಲಿ ಆಶೆಯೊ ಅದನ್ನು ಪಡೆಯುತ್ತಾರೆ. ಸಮಸ್ತ ಕಷ್ಟ ಗಳಿಂದಲೂ ಮುಕ್ತರಾಗಿ ಸುಖವನ್ನು ಹೊಂದುತ್ತಾರೆ. ಅಲ್ಲದೆ ಅವರು ದೇವತೆಗಳ ಕೃಪೆಗೂ ಪಾತ್ರರಾಗುತ್ತಾರೆ. ಇದನ್ನು ಪೂಜಿಸುವವರೂ ಪಠಿಸುವವರೂ ಸಕಲ ಪಾಪರಹಿತರಾಗಿ ದೀರ್ಘಾಯುಷ್ಯ ಹೊಂದಿ ಶ್ರೀಮನ್ನಾರಾಯಣನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಆದ್ದರಿಂದ, ಎಲೈ ಮಾನವರಿರಾ, ಪುರಾತನವಾದ ಈ ರಾಮಾಯಣ ವನ್ನು ಭಕ್ತಿಯಿಂದ ಪಠನಮಾಡಿ ಧನ್ಯರಾಗಿ! ನಿಮಗೆ ಮಂಗಳವಾಗಲಿ!

ಸಮಸ್ತ ಸನ್ಮಂಗಲಾನಿ ಭವಂತು

ಎಲ್ಲರ್ಗಮೆಲ್ಲ ಮಂಗಳಮಕ್ಕೆ।

ಓಂ ತತ್ಸತ್

# ಕುವೆಂಪು ಅವರ ಕೃತಿಗಳು

| | | ಉತ್ತಮ | ಸಾದಾ |
|---|---|---|---|
| ೧. | ಶ್ರೀರಾಮಾಯಣ ದರ್ಶನಂ | | ಪ್ರಸಾರಂಗದಲ್ಲಿ |
| ೨. | ವಿಭೂತಿ ಪೂಜೆ (ವಿಮರ್ಶೆ) | — | ೧೫-೦೦ |
| ೩. | ರಕ್ತಾಕ್ಷಿ (ನಾಟಕ) | — | ೩೦-೦೦ |
| ೪. | ಬೆರಳ್‌ಗೆ ಕೊರಳ್ (ನಾಟಕ) | — | ೧೫-೦೦ |
| ೫. | ಕಾವ್ಯವಿಹಾರ (ವಿಮರ್ಶೆ) | — | ೨೦-೦೦ |
| ೬. | ಚಂದ್ರಮಂಚಕೆ ಬಾ, ಚಕೋರಿ (ಪ್ರೇಮಗೀತೆಗಳು) | — | ೧೫-೦೦ |
| ೭. | ಪ್ರೇಮಕಾಶ್ಮೀರ (ಪ್ರೇಮಗೀತೆಗಳು) | — | ೨೫-೦೦ |
| ೮. | ಸಂನ್ಯಾಸಿ ಮತ್ತು ಇತರ ಕಥೆಗಳು | — | ೧೫-೦೦ |
| ೯. | ಕಾನೂರು ಹೆಗ್ಗಡತಿ (ಮಹಾ ಕಾದಂಬರಿ) | — | ೧೫೦-೦೦ |
| ೧೦. | ಕೋಗಿಲೆ ಮತ್ತು ಸೋವಿಯಟ್ ರಷ್ಯಾ (ಕ್ರಾಂತಿ ಕವನಗಳು) | | ೧೫-೦೦ |
| ೧೧. | ಪಕ್ಷಿಕಾಶಿ (ಪ್ರಕೃತಿ ಕವನಗಳು) | — | ೧೫-೦೦ |
| ೧೨. | ಅಗ್ನಿಹಂಸ (ದರ್ಶನ ಕವನ) | — | ೧೦-೦೦ |
| ೧೩. | ಬಿರುಗಾಳಿ (ನಾಟಕ) | — | ೧೫-೦೦ |
| ೧೪. | ಚಿತ್ರಾಂಗದಾ (ಕಾವ್ಯ) | — | ೧೦-೦೦ |
| ೧೫. | ಇಕ್ಷುಗಂಗೋತ್ರಿ (ಸ್ವಾತಂತ್ರ್ಯೋದಯ ಕವನಗಳು) | — | ೧೨-೦೦ |
| ೧೬. | ಸಾಹಿತ್ಯ ಪ್ರಚಾರ (ವಿಮರ್ಶೆಯ ಭಾಷಣಗಳು) | — | ೧೨-೦೦ |
| ೧೭. | ನವಿಲು (ಪ್ರಕೃತಿ ಕವನಗಳು) | — | ೩೦-೦೦ |
| ೧೮. | ಕಥನ ಕವನಗಳು | — | ೧೦-೦೦ |
| ೧೯. | ಕೊಳಲು (ಕವನಗಳು) | — | ೪೫-೦೦ |
| ೨೦. | ಯಮನ ಸೋಲು (ನಾಟಕ) | — | ೬-೦೦ |
| ೨೧. | ನನ್ನ ಗೋಪಾಲ (ಮಕ್ಕಳ ನಾಟಕ) | — | ೧೦-೦೦ |
| ೨೨. | ತಪೋನಂದನ (ವಿಮರ್ಶೆ) | — | ೫೦ ೦೦ |
| ೨೩. | ದ್ರೌಪದಿಯ ಶ್ರೀಮುಡಿ (ವಿಮರ್ಶೆ) | — | ೩೦-೦೦ |
| ೨೪. | ಮಲೆನಾಡಿನ ಚಿತ್ರಗಳು | — | ೪೨-೦೦ |
| ೨೫. | ವಾಲ್ಮೀಕಿಯ ಭಾಗ್ಯ (ನಾಟಕ) | — | ೧೫-೦೦ |
| ೨೬. | ಬೊಮ್ಮನಹಳ್ಳಿಯ ಕಿಂದರಿಜೋಗಿ (ಸಚಿತ್ರ) | — | ೬-೦೦ |
| ೨೭. | ಶ್ಮಶಾನ ಕುರುಕ್ಷೇತ್ರಂ (ನಾಟಕ) | — | ೧೫-೦೦ |
| ೨೮. | ಮಹಾರಾತ್ರಿ (ನಾಟಕ) | — | ೫-೦೦ |
| ೨೯. | ಜಲಗಾರ (ನಾಟಕ) | — | ೬-೦೦ |
| ೩೦. | ಹಾಳೂರು (ಕವಿತೆ) | — | ೧೦-೦೦ |
| ೩೧. | ಶೂದ್ರ ತಪಸ್ವಿ (ನಾಟಕ) | — | ೫-೦೦ |
| ೩೨. | ಕಲಾಸುಂದರಿ (ಕವನಗಳು) | — | ೮-೦೦ |
| ೩೩. | ರಸೋ ವೈ ಸಃ (ಸಾಹಿತ್ಯ ವಿಮರ್ಶೆ ಮತ್ತು ಕಾವ್ಯಮೀಮಾಂಸೆ) | — | ೧೫-೦೦ |
| ೩೪. | ಪಾಂಚಜನ್ಯ | — | ೩೦-೦೦ |
| ೩೫. | ನಿರಂಕುಶಮತಿಗಳಾಗಿ | — | ೨೫-೦೦ |
| ೩೬. | ಕೃತ್ತಿಕೆ (ಸಾನೆಟ್ಟುಗಳು) | — | ೧೦-೦೦ |
| ೩೭. | ನನ್ನ ದೇವರು ಮತ್ತು ಇತರ ಕಥೆಗಳು | — | ೨೫-೦೦ |

| | | ಉತ್ತಮ | ಸಾದಾ |
|---|---|---|---|
| ೩೮. | ಚಂದ್ರಹಾಸ (ನಾಟಕ) | — | ೧೦-೦೦ |
| ೩೯. | ಅನಿಕೇತನ (ಅನುಭಾವ ಕವನಗಳು) | — | ೨೫-೦೦ |
| ೪೦. | ಜೇನಾಗುವಾ (ಪ್ರೇಮ ಕವನಗಳು) | — | ೧೫-೦೦ |
| ೪೧. | ಕಿಂಕಿಣಿ (ವಚನ ಕವನಗಳು) | — | ೩೦-೦೦ |
| ೪೨. | ಷಷ್ಠಿ ನಮನ (ಭಾಷಣ, ಲೇಖನ, ಮುನ್ನುಡಿ) | — | ೨೫-೦೦ |
| ೪೩. | ಷೋಡಶಿ (ಪ್ರೇಮ ಕವನಗಳು) | — | ೧೨-೦೦ |
| ೪೪. | ಅನುತ್ತರಾ (ಪ್ರೇಮ ಕವನಗಳು) | — | ೨೦-೦೦ |
| ೪೫. | ಬಲಿದಾನ (ನಾಟಕ) | — | ೧೫-೦೦ |
| ೪೬. | ಮೋಡಣ್ಣನ ತಮ್ಮ (ಮಕ್ಕಳ ನಾಟಕ) | — | ೪-೦೦ |
| ೪೭. | ಮಂತ್ರಾಕ್ಷತೆ (ಪುಡಿ ಕವನಗಳು) | — | ೭-೫೦ |
| ೪೮. | ನನ್ನ ಮನೆ (ಶಿಶು ಗೀತೆಗಳು) | — | ೫-೦೦ |
| ೪೯. | ಮರಿವಿಜ್ಞಾನಿ (ಶಿಶು ಗೀತೆಗಳು) | — | ೫-೦೦ |
| ೫೦. | ಮೇಘಪುರ (ಶಿಶು ಗೀತೆಗಳು) | — | ೫-೦೦ |
| ೫೧. | ಮಲೆಗಳಲ್ಲಿ ಮದುಮಗಳು (ಮಹಾ ಕಾದಂಬರಿ) | — | ೧೫೦-೦೦ |
| ೫೨. | ಕುಟೀಚಕ (ಕವನಗಳು) | — | ೧೦-೦೦ |
| ೫೩. | ಪ್ರೇತ-ಕ್ಯೂ (ಕವನಗಳು) | — | ೮-೦೦ |
| ೫೪. | ಕದರಡಕೆ (ಕವನಗಳು) | — | ೮-೦೦ |
| ೫೫. | ಅಮಲನ ಕಥೆ | — | ೧೫-೦೦ |
| ೫೬. | ಸ್ವಾಮಿ ವಿವೇಕಾನಂದ | — | ೨೫-೦೦ |
| ೫೭. | ಇತ್ಯಾದಿ (ಸಾಹಿತ್ಯ ವಿಮರ್ಶೆ-ಕಾವ್ಯ ಮೀಮಾಂಸೆ) | — | ೧೫-೦೦ |
| ೫೮. | ಮನುಜಮತ-ವಿಶ್ವಪಥ (ಭಾಷಣ-ಲೇಖನ) | — | ೫೦-೦೦ |
| ೫೯. | ಪ್ರಾರ್ಥನಾ ಗೀತಾಂಜಲಿ | — | ೧೦-೦೦ |
| ೬೦. | ಕಾನೀನ | — | ೧೦-೦೦ |
| ೬೧. | ಕಬ್ಬಿಗನ ಕೈಬುಟ್ಟಿ | — | ೫೦-೦೦ |
| ೬೨. | ನರಿಗಳಿಗೇಕೆ ಕೋಡಿಲ್ಲ? | — | ೪-೦೦ |
| ೬೩. | ವಿಚಾರ ಕ್ರಾಂತಿಗೆ ಆಹ್ವಾನ | — | ೫೦-೦೦ |
| ೬೪. | ಹೊನ್ನ ಹೊತ್ತಾರೆ | — | ೩೦.೦೦ |
| ೬೫. | ಕೊನೆಯ ತೆನೆ ಮತ್ತು ವಿಶ್ವಮಾನವ ಸಂದೇಶ | — | ೫-೦೦ |
| ೬೬. | ನೆನಪಿನ ದೋಣಿಯಲ್ಲಿ ಭಾಗ ೧-೨ | — | ೫೦೦-೦೦ |
| ೬೭. | ಶಿಶು ಗೀತಾಂಜಲಿ (ನನ್ನ ಮನೆ, ಮರಿ ವಿಜ್ಞಾನಿ ಮತ್ತು ಮೇಘಪುರ ಶಿಶು ಗೀತೆಗಳ ಸಂಕಲನ) | — | ೨೦-೦೦ |
| ೬೮. | ವೇದಾಂತ (ಭಾಷಾಂತರ) | | |
| ೬೯. | ಕನ್ನಡ ಡಿಂಡಿಮ | | |
| ೭೦. | ಗುರುವಿನೊಡನೆ ದೇವರಡಿಗೆ ಭಾಗ ೧-೨ (ಶ್ರೀರಾಮಕೃಷ್ಣಾಶ್ರಮದಲ್ಲಿ) | | |
| ೭೧. | ಜನಪ್ರಿಯ ವಾಲ್ಮೀಕಿ ರಾಮಾಯಣ (ವಯಸ್ಕರ ಶಿಕ್ಷಣ ಸಮಿತಿಯಲ್ಲಿ) | | |
| ೭೨. | ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗ್ರತಿ (ಕುವೆಂಪು ವಿದ್ಯಾವರ್ಧಕ ಟ್ರಸ್ಟ್‌ನಲ್ಲಿ) | | |
| ೭೩. | ವಿಶ್ವವಿದ್ಯಾನಿಲಯದ ಪ್ರಸಾರಾಂಗ (ಪ್ರಸಾರಾಂಗದಲ್ಲಿ) | | |
| ೭೪. | ಶ್ರೀ ರಾಮಕೃಷ್ಣ ಪರಮಹಂಸ ( ,, ) | | |
| ೭೫. | ಕತೆಗಳೊಡನೆ ಆರಂಭದಲ್ಲಿ (ಕುವೆಂಪು ವಿದ್ಯಾವರ್ಧಕ ಟ್ರಸ್ಟ್) | — | ೧೫-೦೦ |
| ೭೬. | ಮಹಾದರ್ಶನ ( [illegible] ) | — | ೮-೦೦ |

